# ಸಹೃದಯ ಪಥ





## ಜಿ.ಪಿ.ನಾ. ಅಭಿನಂದನ ಗ್ರಂಥ

1982

# ಸರ್ವೋದಯ ಪಥ

(ಶ್ರೀ ಜಿ. ವಿ. ನಾ. ಅಭಿನಂದನ ಗ್ರಂಥ)


ಪ್ರಧಾನ ಸಂಪಾದಕರು

**ಡಾ. ದೇ. ಜವರೇಗೌಡ**

ಸಂಪಾದಕ

**ಕೆ. ಸಚ್ಚಿದಾನಂದಯ್ಯ**

ಸಹ ಸಂಪಾದಕ

**ಕೆ. ಆರ್. ಕಮಲೇಶ್**



ಪ್ರಕಾಶನ

**ಜಿ. ವಿ. ನಾ. ಅಭಿನಂದನ ಸಮಿತಿ**

**ಚಿಕ್ಕನಾಯಕನಹಳ್ಳಿ**

**ಸಂಪಾದಕ ಮಂಡಳಿ**

ಜಿ. ಎಸ್. ಪರಶಿವ ಮೂರ್ತಿ
ಸಿ. ಕೆ. ಪರಶುರಾಮಯ್ಯ
ಡಾ॥ ಎನ್. ಶ್ರೀನಿವಾಸ್
ಎಂ. ವಿ. ನಾಗರಾಜರಾವ್



ಬೆಲೆ—ರೂ 60-00

*"SARVODAYA PATHA"*—A collection of essays written by various authors about Sri G. V. Narayana Murthy, his life and works, and also about Chikkanayakanahalli and Sarvodaya, edited by Dr. D. Javare Gowda (Editor in chief) K. Sachidanandaiah (Editor) K. R. Kamalesh (Co-Editor) and the Editorial committee, Published by G. V. Na. Abhinandana Samithi, Chikkanayakanahalli, May 1982. pp. xx+600 Printed at Sri Rajendra Printers, Shivarampet, Mysore-1

# ಮುನ್ನುಡಿ

'ರಾಷ್ಟ್ರದ ಇಂದಿನ ಪರಿಸ್ಥಿತಿಯಲ್ಲಿ ಕಂಡು ಬರುವುದೇನು ? ನಿರಂಕುಶ ಪ್ರಭುತ್ವದ ಲಕ್ಷಣಗಳು. ಸಿ. ಆರ್. ದಾಸರು ಒಮ್ಮೆ ನುಡಿದಿದ್ದ ಮಾತು : ಬಿಳಿಯರ ಅಧಿಕಾರಷಾಹಿ ಹೋಗಿ ಕಂದು ಬಣ್ಣದವರ ಅಧಿಕಾರಷಾಹಿ ಬಂದರೆ ಅದು ಸ್ವರಾಜ್ಯವಲ್ಲ, ಸ್ವಾತಂತ್ರ್ಯವಲ್ಲ. ಇಂದು ನಿಜವಾಗುವಂತಿದೆ. ನಮ್ಮವರೇ ನಮ್ಮ ಪ್ರತಿನಿಧಿಗಳೇ ರೂಕ್ಷಪ್ರವೃತ್ತಿಯಿಂದ ವರ್ತಿಸಿ, ವ್ಯಕ್ತಿ ಸ್ವಾತಂತ್ರ್ಯವನ್ನು ಮಾನವೀಯ ಹಕ್ಕು ಬಾಧ್ಯತೆಗಳನ್ನು ಮೊಟಕು ಮಾಡುತ್ತಿದ್ದಾರೆಂದರೆ ಎಂಥ ಅವನತಿಯ ಸ್ಥಿತಿ ! ನೀತಿ ನಿಷ್ಠೆಗಳು ಗಾಳಿಗೆ ತೂರಿ ಹೋಗಿವೆ. ಅವುಗಳನ್ನು ಹೇಳಿಕೊಂಡೇ ಅತ್ಯಾಚಾರ, ಅನಾಚಾರ ನಡೆಯುತ್ತಿವೆ. ಸಜ್ಜನರು ಅದನ್ನು ಕುರಿತು ಹೇಳಿದರೆ ಅದಕ್ಕೆ ತಾತ್ಸಾರವೇ ಫಲ. ಯಾರೂ ಏನೂ ಹೇಳುವಂತಿಲ್ಲ. ಉಸಿರು ಕಟ್ಟಿದ ಸ್ಥಿತಿ ಎಲ್ಲೆಡೆ ಗೋಚರಿಸುತ್ತದೆ ' (ಸ, ಪ ೧೩೫)

'ಮೂರಿಪ್ಪತ್ತು ಮೇಲೆ ದಶಕದಗೆರೆಯಲ್ಲಿ ಪಯಣ ಮಾಡುತ್ತಿರುವ ನನ್ನಂಥವರಿಗೆ ಸಹಜವಾಗಿಯೇ ಒಂದು ಪ್ರಶ್ನೆ ಮನಸ್ಸಿನಲ್ಲಿ ಮೂಡುತ್ತದೆ: ಅದು ಇಂದಿನ ಸ್ಥಿತಿಯನ್ನು ನೆನೆದಾಗಲಂತೂ ಪೆಡಂಭೂತದ ಆಕಾರವನ್ನು ಹೊಂದುತ್ತದೆ. ಪ್ರಶ್ನೆ ಸುತ್ತಿ ಸುತ್ತಿ ಉತ್ತರ ದೊರೆಯದೆ ಹಾಗೆಯೇ ನಿಲ್ಲುತ್ತದೆ. ಆ ಪ್ರಶ್ನೆ ಯಾವುದು ? ರಾಷ್ಟ್ರೀಯವಾಗಿ, ವೈಯಕ್ತಿಕವಾಗಿ ನಾವಿಂದು ಸ್ವಾತಂತ್ರ್ಯ, ಸ್ವರಾಜ್ಯಗಳನ್ನು ಅನುಭವಿಸುತ್ತಿದ್ದೇವೆಯೆ ?' (ಸ. ಪ ೧೩೪)

—ಇದು ಬೀದಿ ಹೋಕರ ಅನುಭವವಲ್ಲ ; ರಾಜಕೀಯ ವಿರೋಧಿಗಳ ಪ್ರಶ್ನೆಯಲ್ಲ. ಗಾಂಧೀಜಿಯ ಮಾನಸ ಶಿಶುವಾಗಿ ಬೆಳೆದು, ಗಾಂಧೀ ಯುಗದಲ್ಲಿ ಬದುಕಿ. ಆ ಮಹಾ ವ್ಯಕ್ತಿಯ ಕಹಳೆಕೂಗಿಗೆ ಓಗೊಟ್ಟು, ತನು ಮನ ಧನ ಗೃಹಭವಿಷ್ಯವನ್ನೆಲ್ಲ ಮರೆತು, ಸ್ವಾತಂತ್ರ್ಯ ಸಂಗ್ರಾಮದಲ್ಲಿ ದುಮುಕಿ, ಆತ್ಮ ಸಮರ್ಪಣ ಮನೋಭಾವದಿಂದ ಹೋರಾಟ ನಡೆಸಿ, ಸ್ವಾತಂತ್ರ್ಯ ಗಳಿಸಿದನಂತರ ಗಾಂಧಿಯನ್ನರಿಯದವರಿಗೆ, ಗಾಂಧಿಯವರನ್ನು ಮರೆತವರಿಗೆ, ಗಾಂಧಿ ಬೇಡವಾದವರಿಗೆ ಸೊಗವಾಗಲೆಂದು ಹಾರೈಸಿ. ಸ್ವಾತಂತ್ರ್ಯದ ಫಲಾನುಭೋಗವನ್ನು ನಿರ್ಲಕ್ಷಿಸಿ, ತೆರೆಯ ಹಿಂದಕ್ಕೆ ಸರಿದು, ಗಾಂಧಿ ಸಂದೇಶ ಸರ್ವೋದಯ ವಿಚಾರಧಾರೆಗಳನ್ನು ಜನತೆಗೆ ಮನಗಾಣಿಸುತ್ತ, ಕೇವಲ ಉಪದೇಶಿಗಳಾಗದೆ ಅನುಷ್ಠಾನಶೀಲರಾಗಿ, ಸ್ವಾತಂತ್ರ್ಯಾನಂತರ ಗಾಂಧಿಯ ಮರಣಾನಂತರ ದೇಶ ಹಿಡಿದ ದಾರಿಯನ್ನು ಕಂಡು ಮಮ್ಮಲ ಮರುಗುತ್ತ, ಕೊರಗುತ್ತ, ಆ ಕೊರಗಿನಲ್ಲಿಯೇ ರೋಗ ಗ್ರಸ್ತರಾಗಿರುವ ನಿಷ್ಠಾವಂತ ಗಾಂಧಿ ತತ್ವಾನುಯಾಯಿಗಳೂ ದೇಶ

ವತ್ಸಲರೂ ಸ್ಫಟಿಕಶುದ್ಧಶೀಲರೂ ಶ್ರೇಷ್ಠಸಾಧಕರೂ ಆದ ಸಾತ್ವಿಕ ಚೇತನವೊಂದರ ಪ್ರಶ್ನೆಯಿದು, ಎದೆಯ ತುಡಿತವಿದು. ಪ್ರಚಾರವೇ ಪ್ರಧಾನವಾಗಿರುವ ಈ ಯುಗ ದಲ್ಲಿ ಪ್ರಶಾಂತ ವಾತಾವರಣದ ಗ್ರಾಮೀಣ ಪ್ರದೇಶದಲ್ಲಿ ನೆಲಸಿ, ದೇಶದ ಭವ್ಯಭವಿಷ್ಯ ಕ್ಕಾಗಿ, ಮುಂದಿನ ಪೀಳಿಗೆಯ ಕ್ಷೇಮಕ್ಕಾಗಿ ತಪೋನಿರತರಾದ ಆಶಾವಾದಿಯ ಭಾವು ಕತೆಯ ನೆನಕೆಯಿದು.

ಅವರೇ ಗೂಳೂರಿನ ವೆಂಕಣ್ಣಾಚಾರ್ ಮತ್ತು ಶೇಷೀಬಾಯಿಯವರ ಪುಣ್ಯದ ಫಲದಂತಿರುವ, ಗಾಂಧಿ ತತ್ವವೇ ಮೂರ್ತಿವೆತ್ತಂತಿರುವ ಎಪ್ಪತ್ತು ವರ್ಷದ ಚಿಕ್ಕನಾಯ ಕನಹಳ್ಳಿ ನಾರಾಯಣ ಮೂರ್ತಿಗಳು, 'ಜಿ.ವಿ–ನಾ' ಎಂದು ಬಲ್ಲವರಿಗೆ ಪ್ರಿಯರಾದ ವರು, ಎಲ್. ಎಸ್. ಶೇಷಗಿರಿರಾಯರಿಂದ 'ಗಾಂಧಿಯುಗದ ಶ್ರೇಷ್ಠ ಪ್ರತಿನಿಧಿಯೆಂದು, 'ಬುದ್ಧಿವಂತಿಕೆಯ ಮಾತುಗಳಿಂದ ಮಾಡಿದುದನ್ನೆಲ್ಲ ಸಮರ್ಥಿಸಿಕೊಳ್ಳುವ ನುಡಿಜಾಣರ ಕಾಲದಲ್ಲಿ ನಿಜವಾದ ಮೌಲ್ಯಗಳ ಸಾರ್ಥಕ ಪ್ರತಿನಿಧಿಯೆಂದು' ಪ್ರತಿಫಲಾಪೇಕ್ಷೆಯಿಲ್ಲದೆ ಹೊಗಳಿಸಿಕೊಂಡವರು. ವಿಶಾಲಫಣೆಯ, ಹೊಳಹುಗಣ್ಣುಗಳ, ಹಸಿತವದನದ, ಕೊಬ್ಬುತುಬ್ಬುಗಳಿಲ್ಲದ ಮಟ್ಟಸ ದೇಹದ, ಶುಭ್ರಶ್ವೇತ ಖಾದಿಧಾರಿಯ, ವಕ್ರತೆ ವಿಲಾಸಗಳಿಂದ ದೂರವಾದ ಆ ವ್ಯಕ್ತಿಯನ್ನು ಕಂಡಕೂಡಲೇ ಅವರು ಶಿಸ್ತಿನ, ಸರಳತೆಯ, ಸೌಜನ್ಯದ, ಸಜ್ಜನಿಕೆಯ, ಶುದ್ಧ ಚಿತ್ತದ ವ್ಯಕ್ತಿಯೆಂದು ಮನವರಿಕೆ ಯಾಗಿ, ಕೆಲವು ಕ್ಷಣಗಳಲ್ಲಿಯೇ ಅಪರಿಚಿತರಿಗೂ ಆಪ್ತರಾಗಿ ಅವರ ಗೌರವಕ್ಕೆ ಪಾತ್ರರಾಗುತ್ತಾರೆ. ಈ ಯುಗದಲ್ಲಿ ಹಲವರಿಗೆ ಗರ್ವದ, ಸುಲಿಗೆಯ, ನಿರಂಕುಶತ್ವದ ಸಂಕೇತವಾಗಿರುವ ಖಾದಿ ಅವರಿಗೆ ತ್ಯಾಗದ, ಶೀಲದ ಹಾಗೂ ಸಾತ್ವಿಕತೆಯ ಕುರು ಹಾಗಿಯೇ ಉಳಿದಿದೆ. ಸ್ವಾತಂತ್ರ್ಯ ಸಮರದ ಯೋಧರಾಗಿದ್ದೂ ಅಧಿಕಾರಕ್ಕೆ ಕೈ ಚಾಚದೆ, ಜೈಲುವಾಸ ಅನುಭವಿಸಿದರೂ ಪಿಂಚಣಿ ತಾಮ್ರಪಟಗಳಿಗೆ ನಾಲಗೆ ಕುಣಿಸದೆ, ಸಾಹಿತಿ–ವಿದ್ವಾಂಸರಾದರೂ ಪತ್ರಿಕಾ ಪ್ರಚಾರಕ್ಕೆ ಅಂಗಲಾಚದೆ, ರಚನಾತ್ಮಕ ಕಾರ್ಯ ಸಾಧನೆಯಲ್ಲಿ ಜಯಡಿಂಡಿಮ ಬಾರಿಸಿದರೂ ಜಗದ ಕೋಲಾಹಲಕ್ಕೆ ಹಾತೊರೆಯದೆ, ಗೀತೋಪದೇಶಕ್ಕೆ ಭಾಷ್ಯದಂತಿರುವ ವರ್ತನೆಯುಳ್ಳ ಅಪರೂಪದ ವ್ಯಕ್ತಿಯವರು. ಸಂಪ್ರದಾಯದ ಮನೆತನದಲ್ಲಿ ಹುಟ್ಟಿ ಬೆಳೆದರೂ, ಗೀತಾಧ್ಯಯನ ಹಾಗೂ ಗಾಂಧಿ ಉಪದೇಶಗಳ ಫಲವಾಗಿ ಗೊಡ್ಡು ಆಚಾರಗಳಿಂದ ಮುಕ್ತರಾಗಿ, ವಿಶ್ವವಿಶಾಲ ಮನೋ ಭಾವನೆಯನ್ನು ಬೆಳೆಸಿಕೊಂಡು ಆತ್ಮ ಸಂಪನ್ನರಾದ ಹೃದಯವಂತಿಕೆಯ ಸತ್ಪುರುಷ ರವರು. ಜಾತೀಯತೆ, ಜಾತಿ ಗರ್ವಾಂಧತೆ ತಾಂಡವವಾಡುತ್ತಿರುವ ಸದ್ಯಸ್ಥಿತಿಯಲ್ಲಿ ಅವುಗಳಿಂದ ಪಾರಾಗಿರುವ ವಿರಳ ವ್ಯಕ್ತಿಗಳಲ್ಲಿ ಅವರೊಬ್ಬರು 'ದ್ವಿಜನುಯೆಂದು ಪುಟ್ಟಿನೀನು। ದ್ವಿಜದ ತೆರದಿ ಹಾರಿ ಹಾರಿ। ನಿಜದ ನೆಲೆಯನರಿಯದೆ।' (227) ಎಂಬ ಮಾತು ಅವರ ಆತ್ಮ ದರ್ಶನಕ್ಕೂ, ಜೀವನ ದರ್ಶನಕ್ಕೂ ಸಾಕ್ಷಿಯಾಗಿವೆ.

ನಾರಾಯಣಮೂರ್ತಿಯವರು ಹುಟ್ಟಿದ್ದು ಬಡತನದ ಮನೆಯಲ್ಲಾದರೂ, ಬೆಳೆ ದದ್ದು ಹಳ್ಳಿಯಲ್ಲಾದರೂ, ಅವರಿಗೆ ಉತ್ತಮ ಕುಲದ ಸಂಸ್ಕಾರದ ಹಿನ್ನೆಲೆಯಿತ್ತೆಂಬು

ದನ್ನು ಮರೆಯಲಾಗದು. ಅವರ ನೆಂಟರಿಷ್ಟರು ವಿದ್ಯಾವಂತರಾಗಿ, ನಗರ ವಾಸಿಗಳಾಗಿ, ಅವರ ಬೆಳವಣಿಗೆಗೆ ಪರಿಸರವೇ ಪೋಷಕ ಶಕ್ತಿಯಾಗಿತ್ತೆಂಬುದೂ ನಿಜ. ಹಳ್ಳಿಯ ಬೇರೆ ಮಕ್ಕಳಿಗೆ ಪಟ್ಟಣಗಳಲ್ಲಿ ವಾರಾನ್ನವೂ ಸಿಗದಿದ್ದ ಕಾಲದಲ್ಲಿ ಅವರಿಗೆ ಅದಾದರೂ ಸಿಗುತ್ತಿತ್ತೆಂಬುದು ಗಮನಾರ್ಹವಾದ ಸಂಗತಿ. ಆದರೆ ಅವರ ವ್ಯಕ್ತಿತ್ವವನ್ನು ವಿಶಿಷ್ಟಗೊಳಿಸುವ ಗುಣವೆಂದರೆ ಅವರ ಬುದ್ಧಿ ಸೂಕ್ಷ್ಮತೆ, ಅವರ ವೀಕ್ಷಣಾ ಸಾಮರ್ಥ್ಯ, ಅವಕಾಶಾಲಿಂಗನ ಕೌಶಲ ಹಾಗೂ ಕ್ರಿಯಾಶೀಲತೆ. ಮಾಧ್ಯಮಿಕ ಶಾಲೆಯ ವಿದ್ಯಾರ್ಥಿಯ ಓದು ಗಿಳಿಯೋದಾಗದೆ ಜ್ಞಾನ ಸಂವರ್ಧನೆಯ ಮತ್ತು ಜೀವನಾನುಭವದ ಸಾಧನವಾದದ್ದು ಆಶ್ಚರ್ಯಕರ ಸಂಗತಿ. ಭಾರತೀಯ ಇತಿಹಾಸದ ಹಾಗೂ ಆಂಗ್ಲರ ಆಕ್ರಮಣದ ಕತೆ ಅವರಲ್ಲಿ ಉಜ್ವಲ ರಾಷ್ಟ್ರಾಭಿಮಾನವನ್ನು ಕೆರಳಿಸಿದ್ದು ಸಾಮಾನ್ಯ ವಿಷಯವೇನಲ್ಲ. ಸೇವಾದಳದ ತರಬೇತಿ ಹೊಂದಿದ ಆ ಪಿಳ್ಳೆ ಲೋಕಮಾನ್ಯರ ಪುಣ್ಯತಿಥಿಯಲ್ಲಿ ಪಾಲ್ಗೊಂಡು, ಬಂಧನಕ್ಕೊಳಗಾದದ್ದು ಆಗಿನ ಕಾಲಕ್ಕೆ ಅವರಂತಹವರ ಜೀವನದಲ್ಲಿ ಮಹಾಘಟನೆಯೇ ಸರಿ. ಗಾಂಧಿ, ನೆಹರು ಮೊದಲಾದ ರಾಷ್ಟ್ರನಾಯಕರ ಲೇಖನ ಭಾಷಣಗಳಿಂದ ಸ್ಫೂರ್ತಿ ಪಡೆದದ್ದಂತೂ ಅವರ ಪುಣ್ಯವೇ ಸೈ. ಎಳವೆಯಲ್ಲಿಯೆ ನಾಟಕಗಳಲ್ಲಿ ವೇಷ ಹಾಕುವ, ಅದರಲ್ಲಿಯೂ ಸ್ತ್ರೀ ಪಾತ್ರವನ್ನಭಿನಯಿಸುವ ಅವಕಾಶ ಎಷ್ಟು ಮಕ್ಕಳಿಗೆ ದೊರೆತೀತು ? ದೊರೆತರೂ ಉಪಯೋಗಿಸಿಕೊಳ್ಳುವವರು ಎಷ್ಟು ಮಂದಿ ? ಪ್ರಾಯಶಃ ಅವರು ಸ್ವಾತಂತ್ರ್ಯ ಸಂಗ್ರಾಮದ ಕಡೆಗೆ ಗಮನ ಹರಿಸದೆ ನಾಟಕ ಕ್ಷೇತ್ರದಲ್ಲಿಯೇ ಮುಂದುವರಿದಿದ್ದರೆ ಶ್ರೇಷ್ಠ ನಟರೆಂಬ ಖ್ಯಾತಿಗೂ ಪಾತ್ರರಾಗಬಹುದಿತ್ತು. ಆದರೆ ಅವರು ಬಹುಬೇಗನೆ ತಮ್ಮ ಬಾಳಿನ ಗುರಿಯೇನೆಂಬುದನ್ನು ಕಂಡುಕೊಂಡು, ಏಕಾಗ್ರಚಿತ್ತತೆಯಿಂದ ಮುಂದುವರಿಯುತ್ತಾರೆ.

ಎಸ್. ಎಸ್. ಎಲ್. ಸಿ ಮತ್ತು ಇಂಟರ್ ಮೀಡಿಯಟ್ ತರಗತಿಗಳಲ್ಲಿ ಉಚ್ಚ ಶ್ರೇಣಿಯಲ್ಲಿ ತೇರ್ಗಡೆ ಹೊಂದಿದ ಅವರ ವ್ಯಾಸಂಗ ಡಿಗ್ರಿ ತರಗತಿಯಲ್ಲಿ ಕುಂಠಿತಗೊಳ್ಳುತ್ತದೆ. ಅದಕ್ಕೆ ಕಾರಣ ಪ್ರಾಪಂಚಿಕ ವ್ಯಾಮೋಹಗಳ ಆಕರ್ಷಣೆಗಳಾಗಲೀ ದುಷ್ಟಚಾಳಿಗಳಾಗಲೀ ಅಲ್ಲ, ಆರ್ಥಿಕ ಅನಾನುಕೂಲ. ಅವರು ಮಾಧ್ವರಾದ್ದರಿಂದ ಶ್ರೀ ವೈಷ್ಣವ ವಿದ್ಯಾರ್ಥಿ ನಿಲಯದಲ್ಲಿ ಪ್ರವೇಶಾವಕಾಶವಿಲ್ಲ. ಜಾತೀಯತೆಯ ವಿಷಜ್ವಾಲೆಯಿಂದಾಗಿ ಅವರ ವಿದ್ಯಾರ್ಥಿ ಜೀವನ ಸೀದು ಹೋಗಬೇಕಾದ ಸಂಭವವೊದಗುತ್ತದೆ. ವಾರಾನ್ನ ಸಿಕ್ಕಿದರೆ ಪರೀಕ್ಷೆ ಕಟ್ಟಲು ಹಣವಿಲ್ಲ. ಎಷ್ಟೋ ದಿನ ರಾಜಧಾನಿಯಲ್ಲಿ ಅವರು ಉಪವಾಸ ಮಾಡಿದ್ದೂ ಉಂಟು. ರಾಜಧಾನಿ ಅರಸರಿಗಷ್ಟೇ ಹೊರತು ಬಡವರಿಗಲ್ಲವಲ್ಲ !

ಬುದ್ಧಿ ಬಲ ದೈವ ಬಲವುಳ್ಳವರು ನಿರಾಶಾವಾದಿಗಳಾಗಬೇಕಾಗಿಲ್ಲ, ನಿರುದ್ಯೋಗಿಗಳಾಗಬೇಕಾಗಿಲ್ಲ. 'ನವಜೀವನ' ಮತ್ತು 'ಮಕ್ಕಳ ಪುಸ್ತಕ'ಗಳ ಕಚೇರಿಗಳಲ್ಲಿ ಅವರಿಗೆ ಕೆಲಸ ದೊರೆಯುತ್ತದೆ. ಭ್ರೂಣ ಸ್ಥಿತಿಯಲ್ಲಿದ್ದ ಅವರ ಸಾಹಿತ್ಯ ಶಕ್ತಿಯ ವಿಕಾಸಕ್ಕೆ

ಅದು ಒರೆಗಲ್ಲಾಗುತ್ತದೆ, ಮಾಧ್ಯಮವಾಗುತ್ತದೆ. 'ಚಲನಚಿತ್ರ' ವೆಂಬ ಮಾಸಪತ್ರಿಕೆಯಲ್ಲಿ ಅವರ ಮೊದಲ ಕತೆ 'ಎರಡು ಕಂಕಣ' ಪ್ರಕಟಗೊಂಡಾಗ ಅವರಿಗೆ ಸ್ವಶಕ್ತಿಯ ಅರಿವಾಗಿ, ಅವರ ಗುರಿಯು ಮನವರಿಕೆಯಾಗುತ್ತದೆ. ಮನುಷ್ಯನ ಜೀವನದಲ್ಲಿ ಯಾವಾಗ ಭವಿಷ್ಯ ಸೂಚಿಯಾದ ತಿರುವು ಪ್ರಾಪ್ತವಾಗುತ್ತದೆಯೋ ಊಹಿಸಲಾಗದು. ಕನಕಪುರ ತಾಲ್ಲೂಕಿನ ಮರಳವಾಡಿಯ ಕೆರೆಯ ನಿರ್ಮಾಣಕ್ಕೂ ಅವರಿಗೂ ಯಾವ ಭವದ ಸಂಬಂಧ ? ಅವರಲ್ಲಿಗೆ ಗುಮಾಸ್ತರಾಗಿ ಹೋದದ್ದರಿಂದ ಎಸ್. ಕರಿಯಪ್ಪನವರ ಸಹವಾಸ ಲಭ್ಯವಾಗುತ್ತದೆ. ಇಬ್ಬರೂ ಕನಕಪುರದ ದಯಾನಂದ ವಿದ್ಯಾರ್ಥಿ ನಿಲಯದ ವಿಕಾಸಕ್ಕೆ ಕಾರಣರಾಗುತ್ತಾರೆ. ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮಗಳನ್ನು ಕೈಗೆತ್ತಿಕೊಳ್ಳುತ್ತಾರೆ ; ಅವರ ಶಿಕ್ಷಣ ಸೂತ್ರಗಳನ್ನು ಪ್ರಾಯೋಗಿಕವಾಗಿ ಜಾರಿಗೆ ತರುತ್ತಾರೆ ; ರಾಷ್ಟ್ರಪ್ರಜ್ಞೆ, ಸೇವಾಮನೋಭಾವ, ಸ್ವಾವಲಂಬನೆ ಮೊದಲಾದ ಗುಣಗಳನ್ನು ಪೋಷಿಸುವ ವಿದ್ಯೆಯೊಂದೇ ಭಾರತದ ಮುನ್ನಡೆಗೆ, ವ್ಯಕ್ತಿಯ ವ್ಯಕ್ತಿತ್ವ ವಿಕಾಸಕ್ಕೆ ಮುಖವಾಗುತ್ತದೆಂಬುದನ್ನು ಪ್ರಯೋಗದ ಮೂಲಕ ತೋರಿಸಿಕೊಡುತ್ತಾರೆ. ರಾಷ್ಟ್ರ ಪ್ರಗತಿಗೆ ಮುಖ್ಯವಾಗಿ ಬೇಕಾದ್ದು ಅಧಿಕಾರವಲ್ಲ, ರಾಜಕಾರಣವಲ್ಲ, ರಚನಾತ್ಮಕ ಕಾರ್ಯಕ್ರಮ. ಹೆಸರು ಬಯಸದ ವ್ಯಕ್ತಿಯೇ ನಿಜವಾದ ದೇಶ ಸೇವಕ ಎಂಬ ಸಂಗತಿಯನ್ನವರು ಲೋಕಕ್ಕೆ ಮನಗಾಣಿಸುತ್ತಾರೆ. ಮುಂದಿನ ಎರಡು ಮೂರು ವರ್ಷಗಳಲ್ಲಿಯೇ ಅವರು ಕುಟುಂಬದ ಕರೆಗೆ ಓಗೊಟ್ಟು ಮಡದಿಯ ಮನೆ ಸೇರಬೇಕಾಗುತ್ತದೆ.

ವಿದ್ಯಾವಂತರು ಹಳ್ಳಿಗಳಲ್ಲಿ ನೆಲಸಿದರೆ ಅಲ್ಲಿಯ ವಾತಾವರಣ ಉತ್ತಮವಾಗುತ್ತದೆಂಬ ಗಾಂಧೀಜಿಯ ವಾಣಿಯನ್ನು ಕಾರ್ಯಗತಗೊಳಿಸಲು ತಮಗೆ ದೊರಕಿದ ಸುವರ್ಣಾವಕಾಶವೆಂಬ ಸಂತೋಷದಿಂದ ಅವರು ಹಳ್ಳಿ ಸೇರಿದರೇ ವಿನಾ, ನಿರಾಶೆಯ ಕಹಿ ಮನೋಭಾವದಿಂದಲ್ಲ. ಅವರು ಮನಸ್ಸು ಮಾಡಿದ್ದರೆ ಪ್ಲೀಡರಾಗಬಹುದಿತ್ತು. ಸಂಸಾರವನ್ನು ಪಟ್ಟಣಕ್ಕೆ ಸಾಗಿಸಿ, ನಾಗರಿಕ ವಾತಾವರಣದಲ್ಲಿ ಬದುಕು ನಡೆಸಬಹುದಿತ್ತು. ಅದರಿಂದ ತಾವು ಧ್ಯೇಯಚ್ಯುತರಾಗಬಹುದೆಂಬ ಶಂಕೆಯೂ ಇತ್ತು. ಹಳ್ಳಿಗೆ ಹಿಂದಿರುಗಿ ಏನು ಮಾಡುವುದೆಂದು ದುಃಖಿಸುವ ವಿದ್ಯಾವಂತ ತರುಣರಿಗೆ ಅವರು ಸವಾಲಾಗುತ್ತಾರೆ, ಮಾರ್ಗದರ್ಶಕರಾಗುತ್ತಾರೆ, ಆದರ್ಶವಾಗುತ್ತಾರೆ. ಕರ್ನಾಟಕ ಸಂಘ ಸ್ಥಾಪನೆಯ ಮತ್ತು ವಯಸ್ಕ ಶಿಕ್ಷಣ ವ್ಯವಸ್ಥೆಯ ಮೂಲಕ ಅವರು ಕಾರ್ಯನಿರತರಾಗುತ್ತಾರೆ. 1943ರಲ್ಲಿ ಗೆಳೆಯರೊಡನೆ ಜೋಳಿಗೆ ಹಾಕಿಕೊಂಡು, ಸಂತೆಪೇಟೆ ತಿರುಗಿ ಹಣ ಎತ್ತಿ, ಸರ್ಕಾರದ ಸಹಾಯ ದ್ರವ್ಯವಿಲ್ಲದೆಯೇ ದೇಶೀಯ ವಿದ್ಯಾಪೀಠವನ್ನು ಸ್ಥಾಪಿಸಿ, ಗುಲಾಮ ದೇಶದಲ್ಲಿ ಎದುರಿಸಬೇಕಾದ ಸಮಸ್ಯೆಗಳನ್ನು ಮೈ ಮೇಲೆ ಹಾಕಿಕೊಂಡು, ಪ್ರೌಢಶಾಲೆಯನ್ನು ಪ್ರಾರಂಭಿಸುತ್ತಾರೆ. ಜವಿನಾ ಅವರ ವಿದ್ವತ್ತನ್ನು ಯಾವ ವಿಶ್ವವಿದ್ಯಾನಿಲಯದ ಉನ್ನತ ಪದವಿಗಳಿಂದಲೂ ಅಳೆಯಲಾಗದು. ಆದರೂ ಸರ್ಕಾರಿ ನಿಯಮಗಳ ಪಾಲನೆಯ ದೃಷ್ಟಿಯಿಂದ ಖಾಸಗಿಯಾಗಿ ಕಲ್ಕತ್ತಾ ವಿಶ್ವ

ವಿದ್ಯಾ ನಿಲಯದ ಪರೀಕ್ಷೆಗೆ ಕುಳಿತು, ಬಿ. ಎ. ಪದವಿ ಪಡೆಯುತ್ತಾರೆ. ವೇತನವಿಲ್ಲದೆಯೇ ದುಡಿದು, ಆದರ್ಶ ಬೋಧಕರೆಂಬ ಗೌರವಕ್ಕೆ ಭಾಜನರಾಗುತ್ತಾರೆ. ಧನ ಸಂಗ್ರಹಕ್ಕಾಗಿ ಆಡಳಿತ ಮಂಡಳಿ ಲಾಟರಿ ಯೋಜನೆಯನ್ನು ರೂಪಿಸಿದಾಗ, ಅದು ಹಿಡಿಸದೆ ಅವರು ಸಂಸ್ಥೆಯಿಂದ ದೂರ ನಿಲ್ಲುತ್ತಾರೆ. ಮಾಯಸಂದ್ರದ ಸರ್ವೋದಯ ಶಿಕ್ಷಣ ಸಂಸ್ಥೆಯ ಸ್ಥಾಪನೆ (1952)ಗೆ ಕಾರಣಭೂತರಾಗಿ, ಅಲ್ಲಿಯೂ ಕೆಲವು ದಿವ ದುಡಿದು, ಸಂಸ್ಥೆಯ ಅಧ್ಯಕ್ಷರು ರಾಜಕೀಯ ಚುನಾವಣೆಗೆ ಸ್ಪರ್ಧಿಸಬೇಕೆಂದು ಇಚ್ಛಿಸಿದಾಗ, ಅಲ್ಲಿಂದಲೂ ಅವರು ಹೊರಬಂದು ತಮ್ಮ ಅಸಿಧಾರಾವ್ರತ ಸ್ವರೂಪದ ತತ್ವ ನಿಷ್ಠೆಯನ್ನು ಮೆರೆಯುತ್ತಾರೆ, ಸಾಮಾನ್ಯರು ಹಿಂಜರಿಯುವಲ್ಲಿ ದೊಡ್ಡವರು ಮುನ್ನುಗ್ಗುತ್ತಾರೆಂಬುದಕ್ಕೆ ಅವರು ಅಪ್ಪಟ ಗಾಂಧಿವಾದಿಯೆಂಬುದಕ್ಕೆ ಈ ಎರಡು ಪ್ರಕರಣಗಳು ಸಾಕ್ಷಿಯಾಗಿವೆ. ಬೋಧನೆ, ಶೋಧನೆ ಸಾಧನೆಗಳ ನಡುವೆಯೂ ಅವರು ಸತ್ಯಾಗ್ರಹಿಗಳಾಗಿ ಜೈಲಿಗೆ ಹೋಗಿ ಬರುತ್ತಿದ್ದರೆಂಬುದನ್ನು ಮರೆಯುವಂತಿಲ್ಲ.

ಸರ್ವೋದಯ, ಗಾಂಧಿತತ್ವ, ಸತ್ಯಾಗ್ರಹ, ಸ್ವಾತಂತ್ರ್ಯೇತಿಹಾಸ, ಭಾರತೀಯ ಚರಿತ್ರೆ ಇವು ನಾರಾಯಣ ಮೂರ್ತಿಗಳ ಪ್ರಿಯ ವಿಷಯಗಳು. ಅವುಗಳಲ್ಲವರು ಸೃಜನಾತ್ಮಕವೂ, ವಿಮರ್ಶಾತ್ಮಕವೂ ಹಾಗೂ ಕ್ರಿಯಾತ್ಮಕವೂ ಆದ ನಿರ್ದುಷ್ಟ ಪಾಂಡಿತ್ಯ ಸಂಪಾದಿಸಿದ್ದಾರೆ. ಅವನ್ನು ಕುರಿತು ಅಧಿಕಾರಯುತವಾಗಿ ಮಾತಾಡಬಲ್ಲರು. ಅವರ ಈ ವಿದ್ವತ್ತಿಗೆ ಅವರ ಅಪಾರ ಗ್ರಂಥಸಂಪತ್ತು ಸಾಕ್ಷಿಯಾಗಿದೆ. ಗಾಂಧಿ ಗ್ರಂಥ ಮಾಲೆಯ ಸಂಪಾದಕರಾಗಿ, ಭಾಷಾಂತರಕಾರರಾಗಿ ಅವರು ಸಾಧಿಸಿರುವ ಸಿದ್ಧಿಯೇ ನಿದರ್ಶನವಾಗಿದೆ, ಅವರ ಈ ಭಾಷಾಂತರದಲ್ಲಿ ತಜ್ಞರು ನ್ಯೂನತೆ ಕಾಣಬಹುದು. ಆದರೆ ಅವರ ಶ್ರದ್ಧೆ ಪ್ರಾಮಾಣಿಕತೆಗಳ ಬಗ್ಗೆ ಯಾರೂ ಬೆರಳೆತ್ತುವಂತಿಲ್ಲ. ಅವರ ಲೇಖನ ಕೃಷಿಯೆಲ್ಲ ಮುಖ್ಯವಾಗಿ ಮಾನವಿಕ ಮೌಲ್ಯಗಳಿಗೆ ಸಂಬಂಧಿಸಿದ್ದು ; ತಾತ್ವಿಕ ವಿಚಾರಗಳಿಗೆ ಸೇರಿದ್ದು. ಕವಿತಾ ರಚನೆಯಲ್ಲಿಯೂ ಕೈಯಾಡಿಸಿದ್ದಾರೆ. ಉತ್ತಮ ಸಂಸ್ಕಾರದಿಂದ ಲಭಿಸಬಹುದಾದ ವಿನಯ ಶ್ರೀ, ದೊಡ್ಡವರ ದೌರ್ಬಲ್ಯವನ್ನು ನಿರ್ಲಕ್ಷಿಸುವ ಹಿರಿಮೆ ಜವಿನಾ ಅವರದು. ಗಾಂಧೀಜಿ ಅಥವಾ ವಿನೋಬಾ ಅವರಲ್ಲಿ ನಿಷ್ಕಳಂಕ ಭಕ್ತಿ. ಗಾಂಧೀಜಿ ಬಜಾಜ್ ಬಿರ್ಲಾರವರ ಏಜೆಂಟರಾಗಿದ್ದರೆಂಬ ಹಲವರ ಟೀಕೆಯನ್ನು ಅಲ್ಲಗಳೆಯುತ್ತ, ಸಮಕಾಲೀನ ಪರಿಸ್ಥಿತಿಗೆ ಯಾವುದು ಉಚಿತ ಅಥವಾ ಅನುಚಿತ ಎಂಬುದನ್ನು ವ್ಯಾವಹಾರಿಕ ಬುದ್ಧಿಯಿಂದ ನಿರ್ಣಯಿಸಬೇಕಾಗುತ್ತದೆಂದು ಹೇಳುವ ಅವರ ಮಾತಿನಲ್ಲಿ ನಿಜವಿಲ್ಲದಿಲ್ಲ. ಆದರೆ ಜಾತಿಪದ್ಧತಿ ಅನಿಷ್ಟಕಾರಕ, ಅಸ್ಪೃಶ್ಯತೆಯೊಂದು ಶಾಪ ಎನ್ನುವ ಗಾಂಧೀಜಿಯ ವರ್ಣಾಶ್ರಮ ಸಮರ್ಥನೆಯಾಗಲೀ, ಭಿನ್ನ ಭಿನ್ನ ಮತಧರ್ಮಗಳವರ ನಡುವೆ ಆಗುವ ವಿವಾಹ ಒಂದು ಅಪಾಯಕರ ಪ್ರಯೋಗ ಎನ್ನುವ ಮಾತಾಗಲೀ, ಗೋವಧೆಯ ಬಗೆಗಿನ ಅವರ ಅಭಿಪ್ರಾಯವಾಗಲಿ, ಭಾರಿ ಕೈಗಾರಿಕೆಗಳ ಬಗೆಗಿನ ಅವರ ವಿಚಾರಧಾರೆಯಾಗಲೀ, ಮದ್ಯಪಾನ ಕಳ್ಳತನ ಮತ್ತು ವ್ಯಭಿಚಾರಗಳಿಗಿಂತಲೂ ಹೇಯ ಎಂಬ ಮಾತಾಗಲೀ ವಿಚಾರಣೀಯವೇ

ಹೊರತು, ಅವೇ ಅಂತಿಮ ತೀರ್ಮಾನವೆನ್ನುವಂತಿಲ್ಲ. ಇಂಥ ಕೆಲವು ಹೇಳಿಕೆಗಳಿಂದಾಗಿ ಅವರನ್ನು 'ವಿರೋಧಿಗಳ ಕೂಡಲಿ' ಎಂದು ಕರೆಯುವವರುಂಟು. 'ಆದರೆ ನಾನೇನೂ ಮಹಿಮಾ ಪುರುಷನಲ್ಲ, ಮಾನವ ಸಹಜವಾದ ಗುಣದೋಷಗಳಿಗೆ ಹೊರತಾಗಿಲ್ಲ, ನಾನೊಬ್ಬ ನಿರಂತರ ಸತ್ಯಾನ್ವೇಷಕ' ಎಂಬ ಅವರ ಘೋಷಣೆಯನ್ನು ಗಮನಿಸಿದಾಗ ಅವರ ಬಗ್ಗೆ ಗೌರವ ಹೆಚ್ಚುತ್ತದೆಯೇ ಹೊರತು, ಕುಂದುವುದಿಲ್ಲ. ಆದ್ದರಿಂದ ಮೂರ್ತಿಯವರು ಆ ದೌರ್ಬಲ್ಯಗಳನ್ನೆಲ್ಲಿಯೂ ಎತ್ತಿ ಆಡುವುದಿಲ್ಲ. ವಿನೋಬಾ ಜೀವನದಲ್ಲಿಯೂ ಅವರಿಗೆ ಏನೊಂದೂ ಕುಂದು ಕಾಣಿಸದು. ಅವರ ದೃಷ್ಟಿಯಲ್ಲಿ ವಿನೋಬಾ ಅವರ ಸರ್ಕಾರಿ ಮನೋಭಾವ ಅಸಂಗತವೆಂಬಂತೆ ತೋರದು. ಈ ದೃಷ್ಟಿ ಅವರ ಸಾತ್ವಿಕ ಸ್ವಭಾವಕ್ಕನುಗುಣವಾಗಿದೆ. ಈ ಬಗ್ಗೆ ನೀಲತ್ತಹಳ್ಳಿ ಕಸ್ತೂರಿಯವರು ಮಾಡಿರುವ ಟೀಕೆಗಳು (ಸ. ಪ ೧೮೫–೧೮೬) ಸಹ ನಿರಾಧಾರವಾದುವೇನಲ್ಲ. ಏನೇ ಆಗಲಿ, ಗಾಂಧಿ ವಿನೋಬಾ ಸಾಹಿತ್ಯಕ್ಕೆ ಜಿವಿನಾ ಅವರ ಕಾಣಿಕೆ ಅನುಪಮವಾದು ದೆಂದೇ ಹೇಳಬೇಕು.

ದೈವಭಕ್ತರಾಗಿ, ಸ್ವಾತಂತ್ರ್ಯಯೋಧರಾಗಿ, ಗಾಂಧಿ ಅನುಯಾಯಿಯಾಗಿ, ನಿಷ್ಕಾಮಕರ್ಮಿಯಾಗಿ, ಸರ್ವೋದಯ ಸಾಧಕರಾಗಿ, ಉತ್ತಮ ಬೋಧಕರಾಗಿ, ಅಜಾತ ಶತ್ರುವಾಗಿ, ಸಂಘ ಸಂಸ್ಥೆಗಳ ಸಂಸ್ಥಾಪಕರಾಗಿ, ಸಾಹಿತಿಗಳಾಗಿ, ಪೂರ್ಣವೂ ಸಾರ್ಥ ಕವೂ ಆದ ಜೀವನವನ್ನು ನಡೆಸಿರುವ ಜಿವಿನಾ ಅವರು ನಾಡಿನ ಕೃತಜ್ಞತೆಗೆ ಪಾತ್ರರಾಗಿ ದ್ದಾರೆ. ಆ ಕೃತಜ್ಞತೆಯ ಸಂಕೇತವಾಗಿ 'ಸರ್ವೋದಯ ಪಥ'ವೆಂಬ ಅಭಿನಂದನ ಗ್ರಂಥವನ್ನು ಸಮರ್ಪಿಸುತ್ತಿರುವ ಚಿಕ್ಕನಾಯಕನ ಹಳ್ಳಿಯ ಮಿತ್ರರ ಸಾಹಸ ಮೆಚ್ಚು ವಂಥದು. ಅಭಿನಂದನ ಗ್ರಂಥದ ಮೂಲಕ ಕೃತಜ್ಞತೆಯನ್ನು ಸೂಚಿಸುವ ವಿಧಾನ ಕರ್ನಾಟಕಕ್ಕೇ ಮೊಸಲು. ಜಗತ್ತಿನ ಯಾವ ರಾಷ್ಟ್ರದಲ್ಲಿಯೂ ಅಂತಹ ಪರಿಪಾಠ ವ್ಯಾಪಕವಾಗಿ ನಡೆದಿದ್ದಿಲ್ಲ. ಇದಕ್ಕಿಂತ ಉತ್ತಮವಾದ ವಿಧಾನ ಮತ್ತೊಂದಿಲ್ಲವೆಂದೇ ನನ್ನ ನಂಬಿಕೆ. ಜಿವಿನಾ ಅವರಂತು ಇಂಥ ಅಭಿನಂದನೆಗೆ ಸರ್ವಾರ್ಹರು. 70 ತುಂಬುತ್ತಿ ರುವ ಸಮಯದಲ್ಲಿ ಇದನ್ನರ್ಪಿಸಿಕೊಳ್ಳಲು ಅವರು ಒಪ್ಪಿದ್ದೇ ನಮ್ಮ ಪುಣ್ಯ. ಅವರಿಗೆ ಭಗವಂತ ಆಯುರಾರೋಗ್ಯವನ್ನು ಕರುಣಿಸಲೆಂದು ಕನ್ನಡ ಬಂಧುಗಳ ಪರವಾಗಿ ಪ್ರಾರ್ಥಿಸುತ್ತೇನೆ.

ಈ ಪವಿತ್ರ ಕಾರ್ಯದಲ್ಲಿ ತ್ರಿಕರಣ ಶುದ್ಧಿಯಾಗಿ ನೆರವಾದವರು ಸರ್ವಶ್ರೀ ಬಸವಯ್ಯ, ಕೃಷ್ಣರಾವ್, ಈಶ್ವರನ್, ನಾಗರಾಜರಾವ್, ಪರಶಿವಮೂರ್ತಿ, ಸಚ್ಚಿ ದಾನಂದಯ್ಯ, ಕಮಲೇಶ್, ಪರಶುರಾಮಯ್ಯ, ಚಂದ್ರಪ್ಪ, ಲೋಕಪ್ಪ ಮೊದಲಾದ ಮಿತ್ರರು. ಪ್ರತಿಯೊಬ್ಬರೂ ಶ್ರದ್ಧೆಯಿಂದ ದುಡಿದು ಈ ಕೃತಿ ಹೊರಗೆ ಬರುವಂತೆ ಉಪಕರಿಸಿದ್ದಾರೆ. ಮಾಜಿ ಸಚಿವರೂ, ಶಾಸಕರೂ, ಯುವಕರೂ, ಉತ್ಸಾಹ ಶಾಲಿ ಗಳೂ, ಅಭಿನಂದನ ಸಮಿತಿಯ ಅಧ್ಯಕ್ಷರೂ ಆದ ಶ್ರೀ ಬಸವಯ್ಯನವರ ಅನನ್ಯ ಗುರು

ಭಕ್ತಿ ಈ ಗ್ರಂಥ ಪ್ರಕಟನೆಯ ಯಶಸ್ಸಿಗೆ ಕಾರಣವಾಗಿದೆ. ಈ ಸಾರಸ್ವತ ಪೂಜೆಯಲ್ಲಿ ಅನೇಕ ಲೇಖಕರು ಪಾಲ್ಗೊಂಡಿದ್ದಾರೆ. ಸಚ್ಚಿದಾನಂದಯ್ಯ, ಕಮಲೇಶ್, ನಾಗರಾಜ ರಾಯರಂತು ಸಂಪಾದನ ಕಾರ್ಯದಲ್ಲಿ ಶಕ್ತಿ ಮೀರಿ ಶ್ರಮಿಸಿದ್ದಾರೆ. ಪಾದರಸದಷ್ಟೇ ಚುರುಕಾಗಿರುವ ಕಮಲೇಶ್ ಅವರ ಕರ್ತವ್ಯನಿಷ್ಠೆ ಕ್ರಿಯಾಶೀಲಗಳನ್ನು ನಾನೆಂದೂ ಮರೆಯಲಾರೆ. ಅವರೆಲ್ಲರಿಗೂ ಹೃತ್ಪೂರ್ವಕ ಧನ್ಯವಾದಗಳು. ಈ ಸಂದರ್ಭದಲ್ಲಿ ಘನ ವಿದ್ವಾಂಸರೂ. ಉತ್ತಮ ಸಾಹಿತಿಗಳೂ, ಸುಸಂಸ್ಕೃತರೂ ಆದ ಸಚ್ಚಿದಾನಂದಯ್ಯನವರ ಸಂಪಾದನ ಕೌಶಲವನ್ನು ಶ್ರದ್ಧೋತ್ಸಾಹವನ್ನು ಪ್ರತ್ಯೇಕವಾಗಿ ನೆನೆಯದಿರಲಾರೆ. ನನ್ನನ್ನು ಈ ಕಾರ್ಯಕ್ಕೆ ನಿಯೋಜಿಸಿ, ಜೀವಿನಾ ಅವರಿಗೆ ನನ್ನ ನಮನಗಳನ್ನು ಸಲ್ಲಿಸುವ ಪುಣ್ಯಕ್ಕೆ ಭಾಜನನಾಗುವ ಅವಕಾಶವನ್ನು ಮಾಡಿಕೊಟ್ಟ ಎಲ್ಲ ಮಿತ್ರರಿಗೂ ನನ್ನ ವಂದನೆಗಳನ್ನರ್ಪಿಸುತ್ತೇನೆ.

ಇಂಡಿಯನ್ ವೆಲ್ಸ್<br>ಕ್ಯಾಲಿಫೋರ್ನಿಯಾ 92260<br>1–4–1982

**ದೇ ಜ ಗೌ**<br>ಪ್ರಧಾನ ಸಂಪಾದಕ

ದೇವ ಬೊಂಬೆ

ಪೂಜೆಯಾಟ

ಭಕ್ತಿ ಸೋಜಿಗ

—ಪು ತಿ ನ

# ಸಂಪಾದಕೀಯ

ಭಾರತಕ್ಕೆ ಸ್ವಾತಂತ್ರ್ಯವನ್ನು ತಂದುಕೊಟ್ಟವರು ಗಾಂಧೀಜಿ ಮಾತ್ರವಲ್ಲ–ಅವರು ನಡೆದ ನಡೆಯನ್ನನುಸರಿಸಿ ಮುನ್ನಡೆದ ಸಾವಿರಾರು ನಿಷ್ಠಾವಂತ ಅನುಯಾಯಿಗಳು. ಅವರಲ್ಲಿ ಹಲವರು ಸ್ವಾತಂತ್ರ್ಯಾನಂತರದಲ್ಲಿ ಅಧಿಕಾರದ ಗದ್ದುಗೆಯನ್ನೇರಿ ತಮ್ಮ ಸೇವೆಗೆ ತಕ್ಕಷ್ಟು ಪ್ರತಿಫಲವನ್ನನುಭವಿಸಿದರು. ಆದರೆ ಮತ್ತೆ ಹಲವರು ತಮ್ಮ ವರ್ತುಲದಲ್ಲೇ ಸುತ್ತುತ್ತ ಬಾಳನ್ನು ಸವೆದರು. ಸರ್ವೋದಯದ ಸಿದ್ಧಿಗಾಗಿ ತಪಸ್ಸುಗೆಯ್ಯುತ್ತ ವ್ಯಕ್ತಿಗತ ಅಭ್ಯುದಯವನ್ನು ಮರೆತರು. ಪೂಜ್ಯ ಶ್ರೀ ಜಿ. ವಿ. ನಾರಾಯಣ ಮೂರ್ತಿಯವರು ಎರಡನೆಯ ಗುಂಪಿಗೆ ಸೇರಿದವರು.

ಗಾಂಧೀಜಿಗೆ ಜನನಾಯಕ ಪಟ್ಟ ದೊರೆತುದು ಅವರ ಅಪೂರ್ವ ಪ್ರತಿಭೆಯಿಂದೇನೂ ಅಲ್ಲ—ಕೇವಲ ಅವರ ನಿಷ್ಠೆಯಿಂದ, ನಡೆದಂತೆ ಮಾತ್ರ ನುಡಿದುದರಿಂದ ; ಅಖಂಡವಾದ ಆತ್ಮ ಸ್ಥೈರ್ಯದಿಂದ. ಆ ಗುಣಗಳನ್ನು ಒಟ್ಟುಗೂಡಿಸಿಕೊಂಡು ಗಾಂಧೀಜಿಯನ್ನು ಅನುಸರಿಸಲು ಹೊರಟವರು ಸಾವಿರಾರು, ಆದರೂ ಸಫಲರಾದವರು ಕೆಲವೇ ಕೆಲವು ಮಂದಿ. ಅಂಥವರಲ್ಲೂ ಸ್ವಾತಂತ್ರ್ಯ ನಂತರ ಜನ ನಾಯಕರಾದವರು ಬೆರಳೆಣಿಕೆಯಷ್ಟು. ಉಳಿದವರೆಲ್ಲ ಜನ ಸೇವಕರಾಗಿಯೇ ಉಳಿದವರು. ಜಿವಿನಾ ಅವರು ಅಪ್ಪಟ ಗಾಂಧಿವಾದಿಯಾಗಿಯೇ ಉಳಿದ ಜನ ಸೇವಕ. ಆದುದರಿಂದ ಅವರ ಎಪ್ಪತ್ತು ವರ್ಷದ ಜೀವನವೆಂದರೆ ಸವೆದಷ್ಟು ಸುಗಂಧವನ್ನು ಬೀರುವ ಗಂಧದ ಕೊರಡು.

ವ್ಯಕ್ತಿಯಾಗಲಿ, ವ್ಯಕ್ತಿಯ ಕೃತಿಯಾಗಲಿ, ಕಾರ್ಯವಾಗಲಿ ಅಜರಾಮರವೆನ್ನುವುದು ಉತ್ಪ್ರೇಕ್ಷೆಯ ಮಾತು. ನಿಜ. ಆದರೆ ವ್ಯಕ್ತಿಯ ಕಾರ್ಯ ಮುಂದಿನ ಪೀಳಿಗೆಗೆ ದಾರಿ ದೀಪ. ಆದುದರಿಂದಲೇ ಜಿ. ವಿ. ನಾ ರಂತಹ ವ್ಯಕ್ತಿಗಳ ನಡೆಯನ್ನು ನುಡಿಯನ್ನು ಕೆಲಸವನ್ನು ಮುಂದಿನವರೂ ತಿಳಿಯುವುದಕ್ಕೆ ಅನುಕೂಲ ಮಾಡಿಕೊಡುವುದು ಅಂಥವರ ಸಮಕಾಲೀನರಾಗಿ ಉಳಿದವರ ಕರ್ತವ್ಯವೆಂಬುದು ಸ್ಪಷ್ಟ. ಆ ದೃಷ್ಟಿಯಿಂದಲೇ ಈ 'ಸರ್ವೋದಯ ಪಥ' ಗ್ರಂಥದ ಪ್ರಕಟಣೆ. ಅಧ್ಯಾತ್ಮ ಜೀವಿಯಾದ ಜಿ. ವಿ. ನಾ ರವರಿಗೆ ಇದರ ಅರ್ಪಣೆಯಿಂದ ಎಷ್ಟು ಆನಂದವಾದೀತೋ ಹೇಳಲಾಗದಿದ್ದರೂ, ಅವರ ಅಭಿಮಾನಿಗಳಿಗೆ ಇದೊಂದು ಸಂತೃಪ್ತಿಯ ಕಾರ್ಯ. ಹೋಪೋ—ಹೂವಿನ ಎಸಳೋ ಆರಾಧಕನ ಶಕ್ತಿ–ಭಕ್ತಿ ಅಷ್ಟೆ.

ಜಿ. ವಿ. ನಾ ವ್ಯಕ್ತಿತ್ವವನ್ನು ಪ್ರತಿಬಿಂಬಿಸುವ ಗ್ರಂಥವಾಗಿದೆಯೇ ಇದು ? ಎಂಬ ಪ್ರಶ್ನೆಗೆ 'ಇಲ್ಲ' ಎಂಬುದೇ ನಮ್ಮ ಉತ್ತರ. ಇದನ್ನು ಇನ್ನಷ್ಟು ಸುಂದರಗೊಳಿಸಬಹುದಿತ್ತು–ಪರಿಪೂರ್ಣಗೊಳಿಸಬಹುದಿತ್ತು, ಮಾನವಸಹಜವಾದ ಕೆಲವು ದೌರ್ಬಲ್ಯ

ಗಳು ಅದಕ್ಕೆ ಅಡ್ಡಿಯಾಗಿವೆ. ಆದರೂ ಗ್ರಂಥವನ್ನು ತಾತ್ವಿಕವಾಗಿಯಾದರೂ ಸುಂದರಗೊಳಿಸಲು ಯತ್ನಿಸಲಾಗಿದೆ. ಇದರ ಅಚ್ಚುಕಟ್ಟಿಗೆ—ಅಂದಕ್ಕೆ ಯೋಜನೆ ಹಾಕಿ ಕೊಟ್ಟವರು–ಮಾರ್ಗದರ್ಶನ ನೀಡಿದವರು ಪ್ರಧಾನ ಸಂಪಾದಕರೂ, ಹಿರಿಯರೂ ಶ್ರೇಷ್ಠ ಸಾಹಿತಿಗಳೂ ಆದ ಪೂಜ್ಯ ದೇಜಗೌ ಅವರು. ಈ ಗ್ರಂಥದಲ್ಲಿರುವ ಉತ್ತಮಾಂಶಗಳು ಅವರ ಸಲಹೆಯ ಶ್ರಮದ ಫಲ. ದಾರಿ ತೋರಿದರೂ, ನಡೆವಲ್ಲಿ ಎಡಹುವುದು ಮಾನವೀಯ ದೌರ್ಬಲ್ಯ. ಹಾಗಾಗಿ ಇದರಲ್ಲಿ ದೋಷಗಳು ನುಸುಳಿದ್ದರೆ ಅಪ್ರಬುದ್ಧತೆ ಇಣಿಕಿದ್ದರೆ ಆಶ್ಚರ್ಯವಿಲ್ಲ. ಅದಕ್ಕೆ ಓದುಗರ ಹಿರಿಯರ ಕ್ಷಮೆಯಿರಲಿ.

ಈ ಗ್ರಂಥವನ್ನು ಸಿದ್ಧಪಡಿಸುವಲ್ಲಿ ನೆರವಾದವರು ಹಲವರು. ಮುಖ್ಯವಾಗಿ ಸಹ ಸಂಪಾದಕರಾದ ಶ್ರೀ ಕೆ. ಆರ್. ಕಮಲೇಶ್ ಅವರನ್ನು ನೆನೆಯಲೇಬೇಕು. ತರುಣರೂ, ಕಾರ್ಯೋತ್ಸಾಹವುಳ್ಳವರೂ ಆದ ಅವರ ನಿರಂತರ ಶ್ರಮ ಈ ಗ್ರಂಥವನ್ನು ಇಷ್ಟು ಬೃಹದಾಕಾರಕ್ಕೇರಿಸಿದೆ. ಸಂಪಾದಕ ಮಂಡಳಿಯ ಸದಸ್ಯರ ಸಹಕಾರವೂ ಸ್ಮರಣೀಯ, ಹಾಗೆಯೇ ಅಭಿನಂದನ ಸಮಿತಿ ಇದರ ಯಶಸ್ಸಿಗೆ ಕಾರಣ, ಅಭಿನಂದನೆಗೆ ಅರ್ಹ.

ಜಿವಿನಾ ಅವರ ವ್ಯಕ್ತಿತ್ವದ ಬಗ್ಗೆ, ಕೃತಿಗಳ ಬಗ್ಗೆ, ಚಿಕ್ಕನಾಯಕನ ಹಳ್ಳಿಯ ಬಗೆಗೆ ಹಾಗೂ ಸರ್ವೋದಯದ ವಿಚಾರದಲ್ಲಿ ಅಮೂಲ್ಯವಾದ ಲೇಖನವನ್ನು ಒದಗಿಸಿದ ಲೇಖಕರನ್ನು ನಾವೆಂದೂ ಮರೆಯುವಂತಿಲ್ಲ. ಅವರಲ್ಲಿ ಹಲವರು ಸಾಹಿತಿಗಳಲ್ಲದಿರಬಹುದು. ಚರಿತ್ರಕಾರರು, ಸರ್ವೋದಯ ಕಾರ್ಯಕರ್ತರೂ ಆಗಿರಬಹುದು. ಅಂಥವರ ಬರೆಹಗಳಲ್ಲಿ ವಿಷಯ ಹಾಗೂ ಆತ್ಮೀಯತೆಯೇ ಜೀವಾಳ. ಹಲವು ಕೇವಲ ಹೃದಯ ಸಂವಾದ. ಆದರೂ ಇಲ್ಲಿರುವ ಎಲ್ಲ ವಿಚಾರಗಳೂ ವೈಯಕ್ತಿಕ. ಈ ಎಲ್ಲ ಲೇಖಕರಿಗೆ ಸಂಪಾದಕ ವರ್ಗ ಋಣಿಯಾಗಿರುತ್ತದೆ.

ಇದನ್ನು ಅಂದವಾಗಿ ಮುದ್ರಿಸಿಕೊಟ್ಟವರು 'ರಾಜೇಂದ್ರ ಪ್ರಿಂಟರ್ಸ್' ಅವರು. ಮುಖಪುಟದ ಚಿತ್ರ ಬರೆದುಕೊಟ್ಟವರು ಶ್ರೀ ವೆಂಕಟೇಶ್ ಅವರು. ಇವರಿಗೂ ನಮ್ಮ ನಮನಗಳು ಸಲ್ಲುತ್ತವೆ.

ಈ ಗ್ರಂಥದ ಮಾರಾಟದಿಂದ ಬರುವ ಹಣವನ್ನು ದತ್ತಿಯಾಗಿರಿಸಿ ಜಿವಿನಾ ಹೆಸರಲ್ಲಿ ಸರ್ವೋದಯದ ಬಗ್ಗೆ ಸಾಹಿತ್ಯಿಕ ಕಾರ್ಯಕ್ರಮವೊಂದು ವರ್ಷ ವರ್ಷ ನಡೆಯುವಂತೆ ಮಾಡುವುದು ಸಮಿತಿಯ ಉದ್ದೇಶ. ಅದನ್ನು ಪೂರ್ಣಗೊಳಿಸುವಲ್ಲಿ ಓದುಗರ, ಅಭಿಮಾನಿಗಳ ಸಹಕಾರ ಅಗತ್ಯ. ಕನ್ನಡನಾಡು ಎಂದೂ 'ಕೃತಜ್ಞತೆ'ಯ ಸದ್ಗುಣವನ್ನು ಮರೆತು ನಿಲ್ಲುವುದಿಲ್ಲ ಎಂಬ ದೃಢ ವಿಶ್ವಾಸ ನಮ್ಮದು.

ಇಂತು

**ಕೆ. ಸಚ್ಚಿದಾನಂದಯ್ಯ**

ಸಂಪಾದಕ.

# ಗುರುವಂದನೆ

ಶ್ರೀ ಜಿ. ವಿ. ನಾರಾಯಣ ಮೂರ್ತಿ ಅವರು ನನ್ನ ಗುರುಗಳು, ಪ್ರೌಢಶಾಲಾ ಹಂತದಲ್ಲಿ ನನ್ನ ಮನಸ್ಸಿನ ಮೇಲೆ ಸದಾನಿಲ್ಲುವಂತಹ ಪರಿಣಾಮ ಬೀರಿದ ಒಬ್ಬ ಮಹಾ ವ್ಯಕ್ತಿ. ನನ್ನ ತಪ್ಪುಗಳನ್ನು ಮನ್ನಿಸಿ ಮನಸ್ಸನ್ನು ತಿದ್ದಿ, ಒಳ್ಳೆಯದನ್ನು ನೆಲೆ ನಿಲ್ಲಿಸಿ ದಂತಹ ಶಿಲ್ಪಿ. ಈಗವರು ಏಳು ದಶಕಗಳ ಸಾರ್ಥಕ ಜೀವನವನ್ನು ಸಾಗಿಸಿ ಮುನ್ನಡೆ ಯುತ್ತಿದ್ದಾರೆ. ಜ್ಞಾನವೃದ್ಧರಾಗಿ ವಯೋವೃದ್ಧರಾಗಿ ಸರ್ವೋದಯ ಪಥದಲ್ಲಿ ಸಾಗಿದ —ಸಾಗುತ್ತಿರುವ ಹಿರಿಯ ಚೇತನವಾಗಿದ್ದಾರೆ. ಅವರ ಆದರ್ಶಗಳನ್ನು ಮೇಲ್ಪಂಕು ಹಾಕುವುದು, ಅವರು ನಡೆದ ದಾರಿಯಲ್ಲಿ ನಡೆಯಲು ಮನಸಾಯತ್ನಿಸುವುದು ಕಿರಿಯರ ಕರ್ತವ್ಯವೆಂದು ಭಾವಿಸಿ ಅವರನ್ನು ಬರೆಹದ ಪುಷ್ಪಹಾರದಿಂದ ಅರ್ಚಿಸಲು ಯತ್ನಿಸಿ ಈ ಗ್ರಂಥವನ್ನು ಪ್ರಕಟಿಸಲು ಮುಂದಾಗಿದ್ದೇವೆ. ಇದು ಅವರು ಸಮಾಜಕ್ಕೆ ನೀಡಿದು ದಕ್ಕೆ ಪ್ರತಿಯಾಗದಾದರೂ ಕಿರುಗಾಣಿಕೆಯೆಂದು ಭಾವಿಸಿದ್ದೇವೆ. ಇದಕ್ಕಾಗಿ ರಚಿತವಾದ ಸಮಿತಿಯ ಅಧ್ಯಕ್ಷನಾಗಿ ನಾನೂ ನನ್ನ ನುಡಿಗಾಣಿಕೆಯನ್ನು ಅರ್ಪಿಸುವುದು ಅಗತ್ಯ ವೆನಿಸಿದೆ. ಇಂತಹವರ ಬಗ್ಗೆ ಬರೆಯುವುದೆಂದರೆ ತುಂಬ ಸಾಹಸದ ಮಾತು. ಆದರೂ ಹಾಗೆ ಬರೆಯಬೇಕೆಂಬ ಅವಕಾಶ ದೊರೆತಿರುವಾಗ ಅದಕ್ಕಿಂತ ಹೆಚ್ಚಿನ ಪುಣ್ಯ ಬೇರೆ ಇಲ್ಲವೆಂದು ನನ್ನ ಭಾವನೆ. ಇದು ನನ್ನ ನಮ್ರ ಪ್ರಯತ್ನ.

ಜಿ. ವಿ. ನಾರಾಯಣ ಮೂರ್ತಿ ಅವರು ನಮ್ಮೂರಿಗೆ ಬಂದು ನೆಲೆಸಿದ್ದು ಒಂದು ಪುಣ್ಯ ವಿಶೇಷ. ಆ ಪುಣ್ಯ ನಮ್ಮ ದೇಶೀಯ ವಿದ್ಯಾಪೀಠದಂತಹ ಸಂಸ್ಥೆಯ ರೂಪದಲ್ಲಿ ಫಲನೀಡಿದೆ. ಶ್ರೀ ಜಿ. ವಿ. ನಾ ಮತ್ತು ಅವರೊಡನೆ ನಿಂತು ಒಂದು ಸಂಘ ಶಕ್ತಿ ಯಾಗಿ ಕೆಲಸ ಮಾಡಿದ ಗುರುಗಳಾದ ಸರ್ವ ಶ್ರೀ ಸಿ. ಟಿ. ಈಶ್ವರನ್. ಸಿ.ಎನ್. ಕೃಷ್ಣ ರಾವ್, ಸಿ. ಕೆ. ಸದಾಶಿವಶರ್ಮ, ಕೆ. ಆರ್. ಕೃಷ್ಣಮೂರ್ತಿ, ಹಾಗೂ ಎಸ್. ವಿ. ಚಂದ್ರಶೇಖರ್ ಅವರ ಶ್ರಮ ನಮ್ಮ ಸುತ್ತಿನ ಗ್ರಾಮಾಂತರ ಪ್ರದೇಶದ ಸಾವಿರಾರು ಮಕ್ಕಳಿಗೆ ಪ್ರೌಢ ವಿದ್ಯಾಭ್ಯಾಸದ ಅವಕಾಶ ಮಾಡಿಕೊಟ್ಟಿತು. ಇಂದಿನ ಮುಂದುವರಿದ ದಿನಗಳಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ಸಾಕಷ್ಟು ಮುನ್ನಡೆಯಾಗಿ ಹಳ್ಳಿ ಹಳ್ಳಿಗಳಲ್ಲೂ ಪ್ರೌಢ ವಿದ್ಯಾಭ್ಯಾಸಕ್ಕೆ ಅನುಕೂಲವಿದೆ. ಆದರೆ ಆಗಿನ ಸಂದರ್ಭದಲ್ಲಿ ವಿಚಾರ ಮಾಡಿದಾಗ ಜಿಲ್ಲೆಗೆ ಒಂದೋ ಎರಡೋ ಪ್ರೌಢಶಾಲೆಗಳಿದ್ದ ಮೂರೂವರೆದಶಕದಹಿಂದೆ ನಮ್ಮ ಈ ಮಹಾನುಭಾವರು ಮಾಡಿದ ಕಾರ್ಯ ನಮ್ಮೂರಿಗೆ ಕಲಶಪ್ರಾಯವಾಯಿತು. ಪ್ರೌಢ ವಿದ್ಯಾಭ್ಯಾಸಕ್ಕಾಗಿ ದೂರ ಹೋಗಬೇಕಾಗಿದ್ದ ಕಷ್ಟವನ್ನು ತಪ್ಪಿಸಿ ಬಹು ಪಾಲು ಬಡವರ ಮಕ್ಕಳಿಗೆ ಶಿಕ್ಷಣ ಕ್ಷೇತ್ರದ ಕಾಮಧೇನುವಾಯಿತು ನಮ್ಮ ಈ ವಿದ್ಯಾ ಸಂಸ್ಥೆ.

ಜಿ. ವಿ. ನಾರಾಯಣ ಮೂರ್ತಿಗಳು ಕೇವಲ ದೇಶೀಯ ವಿದ್ಯಾಪೀಠವೊಂದನ್ನು ಸ್ಥಾಪಿಸಿ ತನ್ನ ಕೆಲಸ ಮುಗಿಯಿತೆಂದು ಕೈಕಟ್ಟಿ ಕುಳಿತವರಲ್ಲ. ಅವರದು ಸದಾ ಚಿಂತನ ಶೀಲವಾದ ದುಡಿಮೆಯ ಪ್ರವೃತ್ತಿ. ನಾಲ್ಕು ಕಾಲ ಉಳಿಯುವಂತಹ ಶಾಶ್ವತ ಕೆಲಸ ಮಾಡುವ ಕಡೆಗೇ ಸದಾ ಅವರ ಗಮನ. ಪರಿಣಾಮವಾಗಿ ಕಳೆದ ನಾಲ್ಕು ದಶಕಗಳಿಂದಲೂ ಅವರು ತಮ್ಮ ಬರವಣಿಗೆ, ಭಾಷಣ, ಬೋಧನೆ ಹಾಗೂ ಶಿಕ್ಷಣ ಸಂಸ್ಥೆಗಳನ್ನು ಕಟ್ಟುವುದರ ಮೂಲಕ ಕನ್ನಡ ನಾಡಿಗೆ ಪರಿಚಿತರಾಗಿದ್ದಾರೆ.

ಜಿ.ವಿ.ನಾ ಅವರ ಜೀವನದಲ್ಲಿ ಹಾಸುಹೊಕ್ಕಾಗಿ ಹೆಣೆದುಕೊಂಡಿರುವ ಸರ್ವೋದಯ, ಸೇವಾದಳ, ಗಾಂಧೀತತ್ವ ಅವರನ್ನು ಒಬ್ಬ ವಿಶಿಷ್ಟ ವ್ಯಕ್ತಿಯನ್ನಾಗಿ ರೂಪಿಸಿದೆ.

ಈ ಮೂರು ವಿಷಯಗಳ ಮೇಲೆ ಅಧಿಕಾರಯುತವಾಗಿ ಮಾತನಾಡಬಲ್ಲ ಸಮರ್ಥವಾಗಿ ಬರೆಯಬಲ್ಲ ಲೇಖಕರಲ್ಲಿ ಅಗ್ರಗಣ್ಯರಾಗಿ ಶೋಭಿಸಿರುವ ಶ್ರೀಯುತರು ಈ ವಿಷಯಗಳ ಮೇಲೆ ಹೊಂದಿರುವ ಪ್ರಭುತ್ವ ಅವರ ನಿರಂತರಶ್ರದ್ಧೆಯ ಫಲವಾಗಿದೆ. 1927 ರಷ್ಟು ಹಿಂದೆಯೇ ಹಿಂದೂಸ್ಥಾನೀ ಸೇವಾದಳವನ್ನು ಸೇರಿ, ಸ್ವಯಂಸೇವಕರಾಗಿ ಕಾರ್ಯಾರಂಭ ಮಾಡಿ, ಹತ್ತಾರು ಸ್ವಯಂಸೇವಾ ಶಿಬಿರಗಳನ್ನು ಸಂಘಟಿಸಿದ ಅವರು ಇಂತಹ ಕಾರ್ಯಗಳನ್ನು ಮಾಡುವವರಿಗೆ ಒಂದು ಮಾದರಿಯಾಗಿದ್ದಾರೆ. ಇದು ಸ್ವಯಂ ಸೇವಾ ಕಾರ್ಯದ ಬಗ್ಗೆ ಜಿ. ವಿ. ನಾ ಅವರಿಗೆ ಇರುವ ಆಸಕ್ತಿಯ ದ್ಯೋತಕವಾಗಿದೆ.

ಶಿಕ್ಷಣ ಕ್ಷೇತ್ರದಲ್ಲಿ ಜಿ. ವಿ. ನಾ ಅವರಿಗೆ ಇರುವ ಆಸಕ್ತಿ ಅಂತರಾಳದಿಂದ ಮೂಡಿ ಬಂದಿರುವ ನೈಜ ಒಲವಿನಿಂದ ಬಲಗೊಂಡದ್ದು. ಗ್ರಾಮಾಂತರ ಪ್ರದೇಶಗಳಲ್ಲಿ ಶಿಕ್ಷಣದ ಅಗತ್ಯವನ್ನು ಕುರಿತ ಅವರ ಚಿಂತನೆ ಮತ್ತು ದೂರದೃಷ್ಟಿಯ ಫಲವಾಗಿ ಕನಕಪುರದಲ್ಲಿ ದಿ: ಎಸ್. ಕರಿಯಪ್ಪನವರೊಡನೆ ಮೂಲಶಿಕ್ಷಣದ ಪ್ರಥಮ ಪ್ರಯತ್ನವಾಗಿ ಗ್ರಾಮಾಂತರ ಶಿಕ್ಷಣ ಸಮಿತಿ, ಚಿಕ್ಕನಾಯಕನಹಳ್ಳಿಯಲ್ಲಿ ಸ್ಥಳೀಯ ಮುಖಂಡ ದಿ। ಸಿ. ಹೆಚ್. ಲಿಂಗದೇವರು ಅವರೊಂದಿಗೆ ದೇಶೀಯ ವಿದ್ಯಾಪೀಠ ಹಾಗೂ ಮಾಯಸಂದ್ರದಲ್ಲಿ ಮಾ. ಕೃ. ನರಸಿಂಹಯ್ಯನವರೊಂದಿಗೆ ಸರ್ವೋದಯ ಶಿಕ್ಷಣ ಸಮಿತಿಗಳು ರೂಪುಗೊಂಡವು. ಈ ಮೂರೂ ಸಂಸ್ಥೆಗಳೂ ಗ್ರಾಮಾಂತರ ಪ್ರದೇಶದ ಜ್ಞಾನ ದಾಹ ನೀಗುವಲ್ಲಿ ಆದರ್ಶ ಸಂಸ್ಥೆಗಳಾಗಿ ಕೆಲಸ ಮಾಡುತ್ತಿವೆ.

ಜಿ. ವಿ. ನಾ ಅವರು ಒಬ್ಬ ಶ್ರೇಷ್ಠ ಶಿಕ್ಷಕ. ಶಿಕ್ಷಕ ವೃತ್ತಿಯಲ್ಲಿ ಶ್ರೀಯುತರು ತೋರಿದ ಶ್ರದ್ಧೆ ಈ ವೃತ್ತಿಯಲ್ಲಿರುವ ಯಾರೂ ಅನುಸರಿಸಬೇಕಾದ ಆದರ್ಶದಿಂದ ಕೂಡಿದೆ. ಶಿಕ್ಷಕರಾಗಿ ಪಾಠಹೇಳುವಾಗ ಪಠ್ಯ ವಿಷಯಗಳ ಹಿನ್ನೆಲೆಯಲ್ಲಿ ವಿದ್ಯಾರ್ಥಿಗಳ ಮನಸ್ಸನ್ನು ವಿಕಾಸಗೊಳಿಸುವ ಹಲವಾರು ವಿಷಯಗಳನ್ನು ಸ್ಪಷ್ಟವಾಗಿ ಸರಳವಾಗಿ, ಹೃದಯಂಗಮವಾಗಿ ನಿದರ್ಶನಗಳೊಂದಿಗೆ ಹೇಳುವ ಕಲೆ ಅವರಿಗೆ ಸಿದ್ಧಿಸಿದೆ. ಅವರ ಬೋಧನೆಯ ಮತ್ತೊಂದು ವೈಶಿಷ್ಟ್ಯವೆಂದರೆ, ವಿದ್ಯಾರ್ಥಿಗಳ ಶೀಲ, ಶಿಸ್ತು ಮತ್ತು

ಸಂಯಮಗಳ ಕಡೆಗೆ ಅವರು ಕೊಡುತ್ತಿದ್ದ ವಿಶೇಷ ಗಮನ. ಅವರ ವಿದ್ಯಾರ್ಥಿಗಳಾಗಿದ್ದವರೆಲ್ಲರೂ ಇಂದಿಗೂ ಆ ರಸಘಳಿಗೆಗಳನ್ನು ಮೆಲುಕು ಹಾಕುತ್ತಾರೆ. ಜಿ. ವಿ. ನಾ ಅವರು ಬರವಣಿಗೆಯಲ್ಲಿ ಸಿದ್ಧಹಸ್ತರು. ಒಪ್ಪವಾದ ಬರವಣಿಗೆಗೆ ಅಪಾರ ಸಿದ್ಧತೆ, ಶ್ರದ್ಧೆ ಅಗತ್ಯ. ಆಳವಾದ ಅಧ್ಯಯನ, ವಿಚಾರ ವಿನಿಮಯ ಮಾಡದೆ ಅವರು ಯಾವ ಬರವಣಿಗೆಯನ್ನೂ ಮಾಡುವುದಿಲ್ಲ. ಅವರು ಬರೆದಿರುವ ಮಹಾತ್ಮಾ ಗಾಂಧಿ, ಗೀತಾ ಪತ್ರಗಳು, ಗಾಂಧೀ ಸೂತ್ರಗಳು, ನಾರಾಯಣ ಗುರು, ಶರಣರ ಸಂಗ, ರಮಣ ಮಹರ್ಷಿ, ಸಾಧನಪಥ, ಧರ್ಮ ಮತ್ತು ನೀತಿ, ಸತ್ಯಾಗ್ರಹ, ಗಾಂಧೀಜಿಯವರ ಪತ್ರಗಳು—ಮುಂತಾದ ಪುಸ್ತಕಗಳು ಯಾವ ತೊಡಕೂ ಇಲ್ಲದೆ ಓದುಗರಿಗೆ ವಿಷಯವನ್ನು ತಿಳಿಸುವ ಉತ್ತಮ ಪುಸ್ತಕಗಳಾಗಿವೆ.

ಜಿ.ವಿ.ನಾ ಅವರು ಕನ್ನಡ ಭಾಷೆಯಲ್ಲಿ ಮಾತ್ರ ಪರಿಣತರಲ್ಲ. ಅವರ ಇಂಗ್ಲಿಷ್ ಜ್ಞಾನ ಕನ್ನಡದಷ್ಟೇ ವಿಶಾಲವಾದುದು. ಇದರ ಜೊತೆಗೆ ಸಂಸ್ಕೃತ ಭಾಷೆಯ ಕೃತಿಗಳನ್ನು ಸರಿಯಾಗಿ ಓದಿ ತಿಳಿದು ಕೊಂಡಿದ್ದಾರೆ, ಹೀಗಾಗಿ ಈ ಮೂರು ಭಾಷೆಗಳ ಮೇಲೆ ಅವರಿಗೆ ಒಳ್ಳೆಯ ಪ್ರಭುತ್ವವಿದೆ. ಅವರು ಮಾಡಿರುವ ಹಲವಾರು ಅನುವಾದ ಕೃತಿಗಳಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಹಾಗೂ ಕರ್ನಾಟಕ ವಿಶ್ವವಿದ್ಯಾನಿಲಯಗಳಿಗೆ ಅನುವಾದ ಮಾಡಿಕೊಟ್ಟಿರುವ ಡಾ॥ ಅಪ್ಪಾದೊರೈ, ಡಾ॥ ಕೆ.ಎಂ. ಫಣಿಕ್ಕರ್ ಹಾಗೂ ಡಾ॥ ಜಸ್ವಾಲ ಅವರ ಕೃತಿಗಳು ಶ್ರೇಷ್ಠ ಅನುವಾದ ಗ್ರಂಥಗಳಾಗಿವೆ.

ಮೈಸೂರಿನಲ್ಲಿ ದಿ : ಪ್ರೊ ಎಂ. ಯಾಮುನಾಚಾರ್ಯರ ಜೊತೆ ಗಾಂಧೀ ಸ್ಮಾರಕ ನಿಧಿಯ ಆಶ್ರಯದಲ್ಲಿ ಅವರು ಮಾಡಿದ ಗಾಂಧೀತತ್ವ–ಸಾಹಿತ್ಯಗಳ ಸಮಗ್ರ ಸಂಪಾದನೆ ಗಾಂಧೀ ಸಾಹಿತ್ಯ ಕ್ಷೇತ್ರಕ್ಕೆ ಕನ್ನಡದ ಅಮೂಲ್ಯ ಕೊಡುಗೆಯಾಗಿದೆ. ಜಿ.ವಿ.ನಾ. ಅವರ ಬರವಣಿಗೆ ಸಮತೂಕದಿಂದ ಕೂಡಿದ, ಆಕರ್ಷಕ ಬರವಣಿಗೆ. ಬಳಸುವ ಒಂದೊಂದು ಪದವೂ ಸಂದರ್ಭದ ಅಗತ್ಯ ಮತ್ತು ಆಶಯವನ್ನು ತುಂಬ ಅರ್ಥವತ್ತಾಗಿ ವಿವರಿಸಿದೆ. ಓದುಗರು ವಿಷಯವನ್ನು ಸುಲಭವಾಗಿ ಗ್ರಹಿಸಲು ಸಾಧ್ಯ ಮಾಡುತ್ತದೆ. ಯಾವ ತೊಡಕೂ ಇಲ್ಲದ ಸಹಜ ಅಭಿವ್ಯಕ್ತಿ ಅವರ ಶೈಲಿಯ ವಿಶೇಷ. ಇದನ್ನು ಅವರ ಉದ್ಗ್ರಂಥದಿಂದ ಹಿಡಿದು, ಚಿಕ್ಕ ಲೇಖನದವರೆಗೆ ಪ್ರತಿ ಪಂಕ್ತಿಯಲ್ಲೂ ಗುರುತಿಸಬಹುದು. ಹಾಗೆಯೇ ಅವರ ಮಾತುಗಾರಿಕೆ ; ಎಂತಹ ಸಾಮಾನ್ಯ ವ್ಯಕ್ತಿಗೂ ಅರ್ಥವಾಗುವಂತಹದು. ಇನ್ನೂ ನಾಲ್ಕು ಘಳಿಗೆ ಕೇಳಬೇಕೆಂಬ ಆಸೆ ಹುಟ್ಟಿಸುವಂಥದು. ವಿಷಯ ಯಾವುದೇ ಇರಲಿ ಗಂಟೆಗಟ್ಟಲೆ ಬೋಧಪ್ರದವಾಗಿ ಮಾತನಾಡಬಲ್ಲ ಸಾಮರ್ಥ್ಯ ಜಿ.ವಿ. ನಾ ಅವರಿಗೆ ಸಿದ್ಧಿಸಿರುವ ವಿಶೇಷ ವರವಾಗಿದೆ.

ಜಿ. ವಿ. ನಾ ಅವರ ಸ್ನೇಹ ಸಾನ್ನಿಧ್ಯ ಅಪರೂಪವಾದುದು. ಮಿತ್ರರೊಡನೆ ಅವರ ವಿನಿಮಯ, ಚಿಂತನ ಶೀಲ ಮಾತುಕತೆ ಅವರ ಸ್ನೇಹ ಬೆಳೆಸಿದ ಯಾರಿಗಾದರೂ ಅಪಾರ ಲಾಭ ತರುತ್ತವೆ ಎಂದು ಧಾರಾಳವಾಗಿ ಹೇಳಬಹುದು.

ಜಿ.ವಿ. ನಾ ಅವರ ವ್ಯಕ್ತಿತ್ವದಲ್ಲಿ ನಾವು ಗುರುತಿಸುವ ಒಂದು ಅತ್ಯಂತ ಮಹತ್ವದ ಅಂಶವೆಂದರೆ ಅತಿ ಯಾವುದನ್ನು ಬಯಸದೆ, ಪ್ರತಿ ವಹಿವಾಟಿನಲ್ಲೂ ರುಚಿ ಶುದ್ಧತೆಯನ್ನು ಕಾಪಾಡಿಕೊಂಡು ಬಂದಿರುವ ಸರಳ ಜೀವನ, ಯಾವುದೇ ಸಂದರ್ಭದಲ್ಲೂ ಮನಸ್ಸಿನ ನೆಮ್ಮದಿಯನ್ನು ಕಳೆದುಕೊಳ್ಳದೆ ತಮ್ಮ ಪಾಲಿಗೆ ಬಂದ ಕೆಲಸವನ್ನು ಅತ್ಯಂತ ನಿಷ್ಠೆಯಿಂದ, ಹತ್ತು ಜನ ಒಪ್ಪುವಂತೆ ಒಪ್ಪವಾಗಿ ಮಾಡಿಕೊಂಡು ಬರುತ್ತಿರುವ ಪ್ರಾಮಾಣಿಕತೆ. ಇವೆಲ್ಲದರ ಪರಿಣಾಮವಾಗಿ ಶ್ರೀ ಜಿ.ವಿ. ನಾರಾಯಣಮೂರ್ತಿ ಅವರು ನಮ್ಮೆಲ್ಲರ ಪಾಲಿಗೆ ಒಬ್ಬ ಆದರ್ಶ ವ್ಯಕ್ತಿಯಾಗಿದ್ದಾರೆ. ಅವರ ಬಗ್ಗೆ ನಾನು ಭಗವಂತನಲ್ಲಿ ಪ್ರಾರ್ಥಿಸುವುದಿಷ್ಟೇ-ಎಪ್ಪತ್ತು ವರುಷಗಳನ್ನು ಕಂಡ ಈ ಆದರ್ಶಜೀವಿ ನೂರು ವರುಷಗಳನ್ನು ಕಾಣುವಂತಾಗಿ ನಮ್ಮಂತಹ ಸಾವಿರಾರು ಯುವಕರಿಗೆ ಮಾರ್ಗದರ್ಶನ ನೀಡಲಿ ಎಂದು.

ಈ ಗ್ರಂಥದ ಬಗ್ಗೆಯೂ ಒಂದು ಮಾತು ಹೇಳುವುದು ಅಗತ್ಯ. ಈ ಸುಂದರವಾದ—ವಿಷಯ ಪರಿಪೂರ್ಣವಾದ ಗ್ರಂಥವನ್ನು ಸಂಪಾದಿಸಿ ಕನ್ನಡ ಸಾಹಿತ್ಯಕ್ಕೊಂದು ಉಡುಗೊರೆಯಾಗಿತ್ತ ಹೊಣೆಗಾರರು ಸನ್ಮಾನ್ಯ ಡಾ॥ ದೇ.ಜವರೇಗೌಡ ಮತ್ತು ಅವರ ನೇತೃತ್ವದ ಸಂಪಾದಕ ಮಂಡಲಿ. ಸಮಿತಿಯ ಅಧ್ಯಕ್ಷನಾಗಿ ನಾನವರನ್ನು ಕೃತಜ್ಞತೆಯಿಂದ ನೆನೆಯುತ್ತೇನೆ. ಹಾಗೆಯೇ ಇದರ ಪ್ರಕಟಣೆಗೆ ಆರ್ಥಿಕ ನೆರವಿತ್ತವರು ಜಿ.ವಿ. ನಾ ಅಭಿಮಾನಿಗಳು ಮತ್ತು ಊರ ಹಿರಿಯರು. ಅದರ ಸಂಗ್ರಹ ಕಾರ್ಯದಲ್ಲಿ ಶ್ರದ್ಧೆ ವಹಿಸಿದವರು ಸಮಿತಿಯ ಸದಸ್ಯರು. ಇವರೆಲ್ಲರ ಸಹಕಾರಕ್ಕೆ ನಾನು ಋಣಿಯಾಗಿದ್ದೇನೆ.

**ಎನ್. ಬಸವಯ್ಯ**
ಅಧ್ಯಕ್ಷ
ಜಿವಿನಾ ಅಭಿನಂದನ ಸಮಿತಿ

# ಪರಿವಿಡಿ



## ಒಂದು-ಪಥಿಕ

## ಎರಡು-ಪದಚಿಹ್ನೆ



## ಮೂರು–ಪರಿಸರ

### ಚಿಕ್ಕನಾಯಕನಹಳ್ಳಿ

## ನಾಲ್ಕು-ಪಥದರ್ಶನ

### ಕರ್ನಾಟಕದಲ್ಲಿ

—0—

ಸಂಗಚ್ಛಧ್ವಂ ಸಂವದಧ್ವಂ ಸಂವೋಮನಾಂಸಿ ಜಾನತಾಂ ।
ದೇವಾಭಾಗಂ ಯಥಾಪೂರ್ವೇ ಸಂಜಾನಾನಾ ಉಪಾಸತೇ ॥

ಸಮಾನೋ ಮಂತ್ರಃ ಸಮಿತಿಃ ಸಮಾನೀ ಸಮಾನಂ ಮನಃ ಸಹ ಚಿತ್ತಮೇಷಾಮ್ ।
ಸಮಾನಂ ಮಂತ್ರಮಭಿಮಂತ್ರಯೇವಃ ಸಮಾನೇನವೋ ಹವಿಷಾ ಜುಹೋಮಿ ॥

ಸಮಾನೀವ ಆಕೂತಿಃ ಸಮಾನಾ ಹೃದಯಾನಿವಃ ।
ಸಮಾನಮಸ್ತುವೋ ಮನೋಯಥಾವಃ ಸುಸಹಾಸತಿ ॥

ಋಗ್ವೇದ X 191—2, 3, 4

ಸದಾ ಐಕಮತ್ಯದಿಂದ ಜತೆಯಾಗಿ ಹೋಗಿರಿ. ವಿರೋಧವಿಲ್ಲದ ಸಮಾನಾಭಿಪ್ರಾಯವನ್ನು ವ್ಯಕ್ತಪಡಿಸುವ ಮಾತನಾಡಿರಿ. ನಿಮ್ಮ ಮನಸ್ಸು ಭಿನ್ನಾಭಿಪ್ರಾಯವಿಲ್ಲದಂತೆ ಒಂದಾಗಿರಲಿ. ಪುರಾತನರಾದ ದೇವತೆಗಳಂತೆ ನೀವೂ ಐಕಮತ್ಯದಿಂದ ವ್ಯವಹರಿಸಿರಿ.

ನಿಮ್ಮ ಆಲೋಚನೆಯು ಒಂದೇ ವಿಧವಾಗಿರಲಿ. ಅದರ ಫಲವು ಎಲ್ಲರಿಗೂ ಸಮಾನವಾಗಿ ದೊರೆಯಲಿ. ಮನಃಪ್ರವೃತ್ತಿಯು ವಿವೇಕಜ್ಞಾನವೂ ಒಂದೇ ವಿಧವಾಗಿರಲಿ. ನಿಮಗಾಗಿ ಒಂದೇ ವಿಧವಾದ ಆಲೋಚನೆಯನ್ನು ನಾನು ಮಾಡುತ್ತಿರುತ್ತೇನೆ. ಅದೇ ನಾನು ಅರ್ಪಿಸುವ ಹವಿಸ್ಸು.

ನಿಮ್ಮಲ್ಲಿ ಪರಸ್ಪರ ಐಕಮತ್ಯವಿರುವುದರಿಂದ ನಿಮ್ಮ ಉದ್ದೇಶವೂ ಅಪೇಕ್ಷೆಗಳೂ ಅಂತರಂಗದಭಿಪ್ರಾಯವೂ ಪರಸ್ಪರ ವಿರೋಧಕ್ಕವಕಾಶವಿಲ್ಲದಂತೆ ಒಂದೆ ವಿಧವಾಗಿರಲಿ.

ಜ್ಯೋತಿಷ್ಮತಃ ಪಥೋರಕ್ಷ ಧಿಯಾಕೃತಾನ್ **2**

ಋಗ್ವೇದ ೧೦–೫೩–೬.

ಬುದ್ಧಿಪೂರ್ವಕವಾಗಿ ನಿರ್ಮಿತವಾದ ಜ್ಞಾನಪ್ರಭೆಯಿಂದ ಪ್ರಕಾಶಿತವಾದ ಮಾರ್ಗಗಳನ್ನು ರಕ್ಷಿಸುತ್ತಾ ಹೋಗು॥

## ಪಥಿಕ

ವಿಶಾಲವಾದ ಮೈದಾನವಿರಲಿ, ದಟ್ಟವಾದ ಕಾಡುಮೇಡುಗಳಿರಲಿ, ಕಡಿದು ನಿಡಿದಾದ ಬೆಟ್ಟ ಗುಡ್ಡಗಳಿರಲಿ ತನ್ನ ಗಂತವ್ಯದತ್ತ ದೃಷ್ಟಿಯಿಟ್ಟ ಸ್ಥಿರಚಿತ್ತದ ದೃಢಸಂಕಲ್ಪದ ಧೀರ ತನ್ನ ಅಸ್ಖಲಿತ ಪದಗಳನ್ನಿಡುತ್ತ ನೇರವಾಗಿ ಸಾಗುತ್ತಾ ಸ್ಪಷ್ಟ ಪಥವೊಂದನ್ನು ಗುರುತಿಸುತ್ತಾನೆ. ಆನೆ ನಡೆದದ್ದೆ ದಾರಿಯೆಂಬಂತೆ ಅದೇ ಬಹುಜನಗಮನೀಯವಾದ ಮಾರ್ಗವಾಗುತ್ತದೆ. ಅದರಲ್ಲಿ ಹೆಜ್ಜೆಯ ಜತೆಗೆ ಹೆಜ್ಜೆಯಿಟ್ಟು, ಮುನ್ನಡೆದ ಧೀರನನ್ನು ಅನುಸರಿಸಿದ ನಿಷ್ಠಾವಂತರಿಂದ ಆ ಪಥವೇ ವಿಶಾಲ ವಾಗಿ ರಾಜಮಾರ್ಗವಾಗುತ್ತದೆ. ಲಕ್ಷ ಲಕ್ಷ ಜನ ತಮ್ಮ ಬಾಳಪಯಣವನ್ನು ಸಾಗಿಸುವುದಕ್ಕೆ ಅನು ಕೂಲವಾಗುತ್ತದೆ. ಆ ಗಂತವ್ಯವು ಸರ್ವ ಜನಾದರಣೀಯವಾಗುವುದು. ಸುಲಭಸಾಧ್ಯವಾಗುವುದು. ಆ ಮೊದಲ ಹೆಜ್ಜೆಯಿರಿಸಿ ಆ ಚಿಹ್ನೆಯನ್ನು ಉಳಿಸಿದ ವ್ಯಕ್ತಿ ಮಹಾತ್ಮನಾಗುತ್ತಾನೆ : ಮಾರ್ಗದರ್ಶಕ ನಾಗುತ್ತಾನೆ ; ಚಿರಸ್ಮರಣೀಯನಾಗುತ್ತಾನೆ. ಆ ಹೆಜ್ಜೆಯಲ್ಲಿ ಹೆಜ್ಜೆಯಿಟ್ಟು ಆ ವಿಕ್ರಮವನ್ನೆ ತ್ರಿವಿಕ್ರಮವನ್ನಾಗಿಸಿದ ಅನುಗಾಮಿಗಳು ಮೊದಲ ಹಂತದ ಪಥಿಕರಾಗುತ್ತಾರೆ. ಪಥಿಕರಲ್ಲಿ ಪಥಿಕ ಶಿರೋಮಣಿಗಳಾಗುತ್ತಾರೆ, ಪಾವನಚರಿತರಾಗುತ್ತಾರೆ.

ಆ ಮೊದಲ ಹಂತದ ಪಥಿಕರು ಪ್ರಥಮ ವ್ಯಕ್ತಿಯ ಹೆಜ್ಜೆಯ ಜಾಡನ್ನು ಹಿಡಿದು ಅಧ್ವರ್ಯು ಆ ವೇಗವನ್ನುಳವಡಿಸಿಕೊಂಡು ಕಲ್ಲು ಮುಳ್ಳುಗಳ ಹಳ್ಳಕೊಳ್ಳಗಳ ಸಂಕಟವನ್ನನುಭವಿಸಬೇಕಾಗುವುದು. ಆಗ ಅವರು ಜತೆಯಾಗಿ ಹೋಗೋಣವೆಂಬ (ಸಂಗಚ್ಛಧ್ವಂ) ಮಂತ್ರವನ್ನು ಉದ್ಘೋಷಿಸುತ್ತಾರೆ. ಒಂದು ಹೆಜ್ಜೆಯ ಚಿಹ್ನೆಯನ್ನು ಹತ್ತಾರು ಹೆಜ್ಜೆಗಳಿಗೆ ವಿಸ್ತರಿಸಿ ಒಂದೆಂಬಂತೆ ಸಾಗುತ್ತಾರೆ. ಅವರ ನಿಷ್ಠೆ, ಐಕಮತ್ಯ, ದೃಢಸಂಕಲ್ಪ, ದೂರದೃಷ್ಟಿ ಇವುಗಳೇ ಅವರನ್ನು ಮುಂಚೂಣಿಯ ಪಥಿಕರನ್ನಾಗಿ ಸರ್ವೋದಯ ಕಾರ್ಯಕರ್ತರನ್ನಾಗಿ ಮಾಡುತ್ತವೆ. ರಾಷ್ಟ್ರಾಭ್ಯುದಯಕ್ಕೆ, ಲೋಕ ಕಲ್ಯಾಣಕ್ಕೆ ಪ್ರೇರಕಶಕ್ತಿಯಾಗಿ ನಿಲ್ಲುತ್ತವೆ. ವ್ಯಕ್ತಿಗಳು ಮರೆಯಾದರೂ, ಮುಂದೆ ಮುಂದೆ ಸಾಗಿದರೂ ವ್ಯಕ್ತಿತ್ವದ ಬೆಳಕನ್ನು ನಿರಂತರವಾಗಿ ಉಳಿಸುತ್ತವೆ. ಪಥವನ್ನು ಜ್ಯೋತಿಷ್ಮತಿಯನ್ನಾಗಿಸುತ್ತವೆ. ಮುಂದಿನ ಪೀಳಿಗೆಯ ನಿರಾತಂಕ ಪ್ರಗತಿಗೆ ಸಹಾಯಕವಾಗುತ್ತವೆ.

ಅಂತಹ ಪಥಿಕರನ್ನು ಕಾಣುವ, ಸಂಪರ್ಕಿಸುವ ಮತ್ತಿನ ಪಯಣಿಗರು—ಪ್ರಯಾಣಿಕ ಪರಂಪರೆ—ಧನ್ಯರು. ನೆನಪಿನ ಸ್ಫೂರ್ತಿ ಅವರನ್ನು ಅಭಿನಂದಿಸುವುದು—ಅಭಿವಂದಿಸುವುದು.

—ಚಿರಂತನ

ತಮ್ಮ ಸರ್ವಸ್ವವನ್ನು ತಮ್ಮ ಮುಂದಿರುವ ಧ್ಯೇಯಕ್ಕಾಗಿ ಪಣ ಒಡ್ಡಿರುವ ಪುರುಷನಿಗೆ ಅಥವಾ ಮಹಿಳೆಗೆ ಯಾವ ಹೊರೆ ತಾನೆ ಅತಿಯಾಗಬಲ್ಲುದು ? ನಾನು ಎಂದಿಗೂ ಉತ್ಸಾಹಭಂಗದಿಂದ ಪರಿತಪಿಸಿಲ್ಲ. ನಿರುತ್ಸಾಹ ಎಂಬುದು ನಮ್ಮ ದೌರ್ಬಲ್ಯದಿಂದ ಹಾಗೂ ನಮ್ಮ ನಂಬುಗೆಯ ಅಭಾವದಿಂದ ಹುಟ್ಟುವಂಥಾದ್ದು.

**ಗಾಂಧೀಜಿ.**

ಅರ್ಥಮಾಡಿಕೊಳ್ಳುವ ನಿಷ್ಠೆ ಬುದ್ಧಿಶಕ್ತಿಯನ್ನು ಚುರುಕುಗೊಳಿಸುತ್ತದೆ. ನಾವು ಅಹಿಂಸೆಯ ಶಕ್ತಿಸಾಮರ್ಥ್ಯಗಳನ್ನು ಅರಿತುಕೊಳ್ಳಲು ಶಕ್ತರಾದರೆ ಮತ್ತು ಅದರಲ್ಲಿ ಆಳವಾದ ಹಾಗೂ ಅಚಲವಾದ ನಿಷ್ಠೆಯನ್ನು ಬೆಳೆಸಿಕೊಂಡರೆ ಅದು ಅತ್ಯುನ್ನತ ಜೀವಂತ ಶಕ್ತಿಯೆಂಬುದನ್ನು ಪ್ರಪಂಚಕ್ಕೆ ತೋರಿಸಿಕೊಡಬಹುದು. ಬೆಳಕಿರುವಾಗ ಕತ್ತಲೆಯು ಆವರಿಸುವುದಕ್ಕೆ ಹೇಗೆ ಸಾಧ್ಯವಿಲ್ಲವೋ ಹಾಗೆ ಅದರ ಪ್ರಭಾವದಲ್ಲಿ ಯಾರೊಬ್ಬರೂ ಸೋಮಾರಿಯಾಗಿ ಅಥವಾ ಮಂಕಾಗಿ ಇರಲು ಸಾಧ್ಯವಿಲ್ಲ.

**ಗಾಂಧೀಜಿ**

ಒಂಟಿಯಾಗಿ ನಡೆ
ನಿನ್ನ ಕರೆಗೆ ಅವರು ಓಗೊಡದಿರೆ ಒಂಟಿಯಾಗಿ ನಡೆ
ಅವರು ಹೆದರಿ ಸೊಲ್ಲುವಾಗ ಮೌನದಿಂ ಗೋಡೆಗೆ ಮುಖ ತಿರುಗಿಸಿರೆ
ನಿನ್ನ ಮನದೆರೆದು ಒಂಟಿಯಾಗಿ ನುಡಿ.

**ಟಾಗೋರ್.**

ಪಥಿಕ

# ಕರ್ಮಯೋಗಿ ಜಿ.ವಿ.ನಾ.

**ಸುಶೀಲಾ ಕೃಷ್ಣರಾವ್**

ಶ್ಯಾಮಲವರ್ಣ, ದಿಟ್ಟ ನಿಲುವು. ನೇರ ನಡಿಗೆ. ಶುಭ್ರ ಖಾದಿ ಉಡುಗೆ, ನಡೆ ನುಡಿಗಳಲ್ಲಿ ಎದ್ದು ಕಾಣುವ ಸರಳತೆ. ನೋಡಿದೊಡನೆ ಗೌರವ ಭಾವನೆ ಮೂಡಿಸುವ ಗಂಭೀರ ವ್ಯಕ್ತಿತ್ವ. ಆತ್ಮೀಯರಲ್ಲಿ ತೋರುವ ಕಳಕಳಿ. ಅಪಾರವಾದ ಪಾಂಡಿತ್ಯ, ಸರಳ ಸಜ್ಜನಿಕೆಗಳ ಸಾಕಾರಮೂರ್ತಿ ಶ್ರೀ ಜಿ. ವಿ. ನಾ.

ಪ್ರಚಾರವೇ ಪ್ರಧಾನವಾಗಿರುವ ಈ ದಿನಗಳಲ್ಲಿ ಎಲೆ ಮರೆಯ ಕಾಯಿಯಂತೆ ಸದಾ ಕರ್ಮದಲ್ಲಿ ನಿರತರಾಗಿರುವವರು ತುಂಬ ವಿರಳ. ಬಾಪೂಜಿಯವರ ತತ್ವಗಳನ್ನು ಹೇಳುತ್ತಲೇ ತಮ್ಮ ಸ್ವಾರ್ಥ ಸಾಧಿಸಿಕೊಳ್ಳುವವರೇ ಹೆಚ್ಚಾಗಿ ಕಾಣುತ್ತಾರೆ. ಅವರ ತತ್ವಗಳನ್ನು ಪ್ರಾಮಾಣಿಕವಾಗಿ ಅನುಷ್ಠಾನಕ್ಕೆ ತಂದು ಅದರಂತೆ ನಡೆಯುವ ಬೆರಳೆಣಿಕೆಯಷ್ಟು ಮಂದಿಯಲ್ಲಿ ಗೂಳೂರು ವೆಂಕಣ್ಣಾಚಾರ್ ನಾರಾಯಣಮೂರ್ತಿಗಳೂ ಒಬ್ಬರು. ಜನಕ್ಕೆಲ್ಲಾ ಜಿ. ವಿ. ನಾರಾಯಣಮೂರ್ತಿ — ಜಿ. ವಿ. ನಾ. ಎಂದು ಪರಿಚಿತರು.

**ಬಾಲ್ಯ**

ತುಮಕೂರಿಗೆ ನಾಲ್ಕು ಮೈಲಿ ದೂರದಲ್ಲಿರುವ ಪ್ರಕೃತಿ ತಾಣವಾದ ಸಣ್ಣ ಗ್ರಾಮ ಗೂಳೂರು. ಇಲ್ಲಿ ನಡೆಯುವ ಗಣಪತಿ ಉತ್ಸವ ಜಿಲ್ಲೆಯಲ್ಲೆಲ್ಲಾ ತುಂಬಾ ಪ್ರಸಿದ್ಧ. ಇದೇ ಹಳ್ಳಿಯಲ್ಲಿ ಸಾಮಾನ್ಯವಾದರೂ ಸದಾಚಾರ ಸಂಪನ್ನವಾದ ವೈಷ್ಣವ ದೇಶಸ್ಥ ಬ್ರಾಹ್ಮಣ ಮನೆತನದಲ್ಲಿ ಶ್ರೀ ವೆಂಕಣ್ಣಾಚಾರ್–ಶೇಷೀಬಾಯಿಯರ ಏಕೈಕ ಪುತ್ರನಾಗಿ ಜಿ.ವಿ.ನಾ. ಅವರ ಜನನ ೧೯೧೨ ಮೇ ೨ರಂದು.

ಜಿ.ವಿ.ನಾ.ರವರ ತಾತ ಭೀಮಾಚಾರ್ಯರು. ಪೌರೋಹಿತ್ಯವನ್ನೇ ವೃತ್ತಿಯಾಗಿಸಿಕೊಂಡ ನಿಷ್ಠಾವಂತ ವ್ಯಕ್ತಿ. ಅವರ ದೇವತಾರ್ಚನೆ ವೈಶಿಷ್ಟ್ಯಪೂರ್ಣ. ಇದನ್ನು ನೋಡುವುದೆಂದರೆ ಬಾಲಕ ಜಿ.ವಿ.ನಾ.ಗೆ ತುಂಬಾ ಶ್ರದ್ಧೆ. ಸೂಕ್ತಗಳನ್ನೂ, ಸ್ತೋತ್ರಗಳನ್ನೂ ತಾತನಿಂದ ಬಾಯಿಪಾಠವಾಗಿ ಕಲಿತರು. ಎಪ್ಪತ್ತರ ಹರಯದಲ್ಲೂ ಸಾರ್ವಜನಿಕ ಕೆಲಸ ಮಾಡುವುದರಲ್ಲಿದ್ದ ಅವರ ಆಸಕ್ತಿ, ಎಲ್ಲರ ಸಹಕಾರವನ್ನೂ ಗಳಿಸಿಕೊಳ್ಳುವ ಹಿತಮಿತ ನಡತೆಗಳು ಬಾಲಕನ ಮೇಲೆ ಅಗೋಚರ ಪರಿಣಾಮ ಬೀರಿದವು.

ಜಿ.ವಿ.ನಾ.ರವರ ಜೀವನದ ಮೇಲೆ ತಾಯಿ ಶೇಷಿಬಾಯಿಯವರ ಪ್ರಭಾವ ಅತ್ಯಂತ ಮಹತ್ತರ. ಆಕೆ ವ್ರತೋಪವಾಸಗಳನ್ನು ಕಟ್ಟುನಿಟ್ಟಾಗಿ ಆಚರಿಸುತ್ತಿದ್ದರು. ಸಂಪ್ರದಾಯದ ಹಾಡುಗಳನ್ನು ರಾತ್ರಿಯಿಡೀ ಉಚ್ಚ ಕಂಠದಲ್ಲಿ ನಿರಾಯಾಸವಾಗಿ ಹಾಡುತ್ತಿದ್ದರು. ಇದರಿಂದ ಬಾಲಕನಿಗೆ ಲಾಸ್ಯ, ಲಯಗಳ ಪರಿಚಯವಾಯಿತು. ಬಾಲ್ಯದಿಂದ ಅವರ ಗುಣಾವಗುಣಗಳನ್ನು ರೂಪಿಸಿದುದೂ ತಾಯಿಯ ವ್ಯಕ್ತಿತ್ವವೇ. ಸುಂದರ ಹಸ್ತಾಕ್ಷರ ಬರೆಯುವ ಕಲೆ ಜಿ.ವಿ.ನಾ.ರವರಿಗೆ ಕರಗತವಾದುದು ತಂದೆಯವರ ಪ್ರಭಾವದಿಂದಾಗಿ. ಸ್ವಲ್ಪ ಮೋಡಿ ಬರೆದರೂ ತಂದೆ ಬೆರಳ ಮೇಲೆ ಚೆನ್ನಾಗಿ ಹೊಡೆಯುತ್ತಿದ್ದರು.

ಜಿ.ವಿ.ನಾ.ರವರ ಬಾಲ್ಯದಲ್ಲಿ ಅವರ ಮೇಲೆ ಪ್ರಭಾವ ಬೀರಿದ ಮತ್ತೊಬ್ಬ ವ್ಯಕ್ತಿಯೆಂದರೆ ಶ್ರೀಮತಿ ಅಂಡಾಳಮ್ಮ. ಅವರ ಪತಿ ಶ್ರೀ ಮೊದಲಿಯಾರ್ ಓವರ್‌ಸಿಯರ್ ಆಗಿದ್ದರು. ಜಿ.ವಿ.ನಾ. ತಂದೆ ಅವರೊಂದಿಗೆ ನಾಲಾಮಣೆಗಾರರಾಗಿ ಕೆಲಸಮಾಡುತ್ತಿದ್ದರು. ಇಬ್ಬರ ಮನೆಗಳೂ ಸಮೀಪವೇ. ಮಕ್ಕಳಿಲ್ಲದ ಮೊದಲಿಯಾರ್ ದಂಪತಿಗಳಿಗೆ ಬಾಲಕ ಜಿ.ವಿ.ನಾ.ರವರನ್ನು ಕಂಡರೆ ತುಂಬ ಪ್ರೀತಿ. ಊಟ, ತಿಂಡಿ ಎಲ್ಲ ಅವರ ಮನೆಯಲ್ಲೇ. ಊಟ ಮಾಡಿಸುವುದು, ಜೋಗುಳ ಹಾಡಿ ಮಲಗಿಸುವುದು ಎಲ್ಲವನ್ನೂ ತುಂಬ ಅಕ್ಕರೆಯಿಂದ ಮಾಡುತ್ತಿದ್ದರು. 'ಆ ಮಹಾ ತಾಯಿ ನನಗೆ ಎರಡನೆಯ ತಾಯಿಯೇ ಆಗಿದ್ದರು' ಎಂದು ಇಂದೂ ಪ್ರೀತಿಯಿಂದ ಸ್ಮರಿಸಿಕೊಳ್ಳುವ ಜಿ.ವಿ.ನಾ. ಜಾತಿ ಮತಗಳ ಭೇದವೆಣಿಸದಿರುವ ಬುದ್ಧಿಯನ್ನು ಪ್ರೇರೇಪಿಸಿದವರೂ ಅವರೇ ಎನ್ನುತ್ತಾರೆ.

**ವಿದ್ಯಾಭ್ಯಾಸ :**

ತಂದೆಯವರ ಸರ್ಕಾರಿ ವೃತ್ತಿಯಿಂದಾಗಿ, ಪ್ರಾಥಮಿಕ ವಿದ್ಯಾಭ್ಯಾಸ ಹಲವಾರು ಕಡೆ. ಗೂಳೂರು, ಮಾಯಸಂದ್ರ, ಹುಲಿಯೂರು ದುರ್ಗ, ಕುಣಿಗಲ್‌ಗಳಲ್ಲಿ. ಚಿಕ್ಕಂದಿನಿಂದಲೂ ಜಿ.ವಿ.ನಾ. ಗೆ ಇಂಗ್ಲಿಷ್ ಭಾಷೆಯೆಡೆ ಒಲವು. ಇಂಗ್ಲಿಷ್‌ನಲ್ಲಿ ಪ್ರಥಮ ಸ್ಥಾನ ಸದಾ ಇವರಿಗೇ. ದಾಸನದೊಡ್ಡಿ ತಿರುನಾರಾಯಣ ಐಯ್ಯಂಗಾರ್ ಇವರ ಇಂಗ್ಲಿಷ್ ಉಪಾಧ್ಯಾಯರು. ಮಕ್ಕಳಿಗೆ ಇಂಗ್ಲಿಷ್ ಪದಗಳ 'ಸ್ಪೆಲಿಂಗ್' ಹೇಳಿಕೊಡುವುದು ಇವರ ವೈಶಿಷ್ಟ್ಯ. 42 ವಿದ್ಯಾರ್ಥಿಗಳಿದ್ದ ತರಗತಿಯಲ್ಲಿ **Extraordinary Immediately** ಎಂಬ ಪದಗಳಿಗೆ ಸರಿಯಾಗಿ ಕಾಗುಣಿತ ಹೇಳಿದವರು ಇವರೊಬ್ಬರೇ. ಅಧ್ಯಾಪಕರಿಗೆ ತುಂಬ ಸಂತೋಷ. 'ಕಾಗುಣಿತ ತಪ್ಪು ಹೇಳಿದ ಎಲ್ಲ ಹುಡುಗರ ಕೆನ್ನೆಗೂ ಎರಡು ಏಟು ಹೊಡಿ' ಎಂದು ಆಜ್ಞಾಪಿಸಿದರು. ಸಹಪಾಠಿಗಳ ಕೆನ್ನೆಗೆ ಹೊಡೆಯಲು ಜಿ.ವಿ.ನಾ. ಮನಸ್ಸು ಒಪ್ಪಲಿಲ್ಲ. ನಿರಾಕರಿಸಿದರು. ಆಜ್ಞೆ ಪಾಲಿಸದ ವಿದ್ಯಾರ್ಥಿಯ ಮೇಲೆ ಅಧ್ಯಾಪಕರಿಗೆ ಸಿಟ್ಟು. ಅದರ ಪರಿಣಾಮ ಜಿ.ವಿ.ನಾ.ಗೆ

ಎರಡು ಏಟು, ಉಳಿದವರಿಗೆ ಆರಾರು ಏಟು. ಗುರುಗಳ ಆಜ್ಞೆಯನ್ನು ಜಾರಿಗೊಳಿಸ ದಿದ್ದ ಅವಿಧೇಯತೆಗಾಗಿ ಈ ಶಿಕ್ಷೆ!

ಇಂಗ್ಲಿಷ್ ಭಾಷೆಯಲ್ಲಿ ಜಿ.ವಿ.ನಾ.ಗೆ ಇರುವ ಪ್ರಭುತ್ವಕ್ಕೆ ಕಾರಣರಾದ ಮತ್ತೊಬ್ಬ ವ್ಯಕ್ತಿ ಅವರ ಮನೆಯ ಬಳಿಯೇ ಇದ್ದ ತಾತಾಚಾರ್. ಅವರು ಬಾಲಕ ನಿಂದ ಹಿಂದೂ ಪತ್ರಿಕೆ ಓದಿಸುತ್ತಿದ್ದರು. ಅವರಲ್ಲಿ ಪ್ರತಿ ತಿಂಗಳೂ ಪ್ರಕಟವಾಗುತ್ತಿದ್ದ ಚಕ್ರಬಂಧ ಸ್ಪರ್ಧೆಗೆ ಇವರಿಂದಲೇ ಶಬ್ದಗಳನ್ನು ಕೋಶದಲ್ಲಿ ಹುಡುಕಿಸಿ ತೆಗೆಸುತ್ತಿದ್ದರು.

ಮಾಧ್ಯಮಿಕ ಶಾಲೆಯಲ್ಲಿ ಓದುತ್ತಿದ್ದಾಗಲೇ ಜಿ.ವಿ.ನಾ.ಗೆ ಅನೇಕ ಆಪ್ತಮಿತ್ರ ರಾದರು. ತುಮಕೂರಿನವರೇ ಆದ ಬಿ. ಆರ್. ಕೋಟೇಶ್ವರ, ಟಿ. ವಿ. ತಿಮ್ಮೇಗೌಡ, ಟಿ. ತಿಮ್ಮಯ್ಯ, ಟಿ. ರಾಮಯ್ಯ, ಎನ್. ಮಲ್ಲಪ್ಪ ಮುಂತಾದವರು. ಶ್ರೀ ಕೋಟೇ ಶ್ವರ ಜಿ.ವಿ.ನಾ.ರವರ ಕಷ್ಟಕಾಲದಲ್ಲಿ, ಸಂಕಟ ಸಮಯದಲ್ಲಿ ಬಹುವಾಗಿ ನೆರವಾದ ಆತ್ಮೀಯ ವ್ಯಕ್ತಿ. ಶ್ರೀಗಳಾದ ಟಿ. ವಿ. ತಿಮ್ಮೇಗೌಡ, ತಿಮ್ಮಯ್ಯ, ಎನ್. ಮಲ್ಲಪ್ಪ ಮುಂತಾದವರೆಲ್ಲ ಜೊತೆಯಲ್ಲೇ ಓದಿ, ಪದವೀಧರರಾಗಿ ಉನ್ನತ ಸರ್ಕಾರಿ ಹುದ್ದೆ ಗೇರಿದವರು.

ಜಿ.ವಿ.ನಾ.ರವರ ಪ್ರತಿಭೆ ಬಡತನದ ಕಷ್ಟಕಾರ್ಪಣ್ಯದ ಮೂಸೆಯಲ್ಲಿ ಬೆಂದೇ ಅರಳಿತೆಂಬುದು ಗಮನಿಸಬೇಕಾದ ಅಂಶ. ಅವರ ತಂದೆಯವರಿಗೆ ಬರುತ್ತಿದ್ದ ಮಾಸಿಕ ವೇತನ ಹದಿನೈದು ರೂಪಾಯಿ. ಪದಾರ್ಥಗಳು ಅಗ್ಗವಿದ್ದ ಆ ಕಾಲದಲ್ಲಿ ಜೀವನ ಕ್ಕೇನೂ ಕೊರತೆ ಇರಲಿಲ್ಲವಾದರೂ ತಂದೆಯ ದುಂದುವೆಚ್ಚದಿಂದಾಗಿ ಲೋಯರ್ ಸೆಕೆಂಡರಿ ಪರೀಕ್ಷೆಗೆ ಕಟ್ಟುವ ಶುಲ್ಕ ಐದು ರೂಪಾಯಿಯೂ ಇರಲಿಲ್ಲ. ಅವರ ಉಪನಯನ ಕಾಲದಲ್ಲಿ ಉಡುಗೊರೆಯಾಗಿ ಬಂದಿದ್ದ ಮಗುಟವೊಂದನ್ನು ಅಂಗಡಿಯಲ್ಲಿ ಒತ್ತೆಯಿಟ್ಟು 5 ರೂ. ಪಡೆಯಬೇಕಾಯಿತು. ಅಂಚಿನಲ್ಲಿ 'ಸ್ವರಾಜ್ಯ,' 'ಸ್ವರಾಜ್ಯ' ಎಂದು ಬರೆದಿದ್ದ ಆ ಮಗುಟ ಜಿ.ವಿ.ನಾ.ಗೆ ತುಂಬ ಇಷ್ಟ. ಅದನ್ನು ಒತ್ತೆಯಿಡುವಾಗ ಅಳುವೇ ಬಂದುಬಿಟ್ಟಿತು. ಮುಂದಿನ ತಿಂಗಳು ವೇತನ ಬಂದೊಡನೆ ಅದನ್ನು ವಾಪಸು ತರಿಸಿಕೊಟ್ಟಾಗ ಅವರಿಗಾದ ಆನಂದ ಅಷ್ಟಿಷ್ಟಲ್ಲ. ಆ ಮಗುಟ ಅವರುಟ್ಟು, ಅನಂತರ ಅವರ ಮಗ ದಯಾ ಉಟ್ಟು ಜೀರ್ಣಗೊಂಡಿತು.

ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿಯಲ್ಲಿ ತೇರ್ಗಡೆಯಾದ ಆನಂದ ಅನುಭವಿಸುವ ಕಾಲದಲ್ಲೇ ಅವರ ಮನಸ್ಸಿನ ಮೇಲೆ ದೊಡ್ಡದೊಂದು ಆಘಾತ. ಅವರ ತಂದೆ ಅವರನ್ನೂ, ಅವರ ತಾಯಿಯನ್ನೂ ಅಗಲಿ ಎಲ್ಲೋ ಹೊರಟು ಹೋದರು. ತಂದೆ, ಮಗನ ಭೇಟಿ ಬಹಳ ಕಾಲ ಆಗಲೇ ಇಲ್ಲ. ಆದುದು ಒಮ್ಮೆ ಅವರ ಮದುವೆಯಲ್ಲಿ, ಮತ್ತೊಮ್ಮೆ ತಂದೆ ಅಂತಿಮಾವಸ್ಥೆಯಲ್ಲಿದ್ದಾಗ.

**ಪ್ರೌಢಶಾಲೆಯಲ್ಲಿ**

ಜಿ.ವಿ.ಸಾ.ರವರ ವ್ಯಕ್ತಿತ್ವದ ವಿಕಾಸಕ್ಕೆ ಬಹಳ ಮಟ್ಟಿಗೆ ಕಾರಣವಾದುದು ತುಮಕೂರು ಸರ್ಕಾರಿ ಪ್ರೌಢಶಾಲೆಯಲ್ಲಿ ವ್ಯಾಸಂಗ ಮಾಡಿದ ಕಾಲ. ಹಲವಾರು ಬಾಲಕರು ಕೂಡಿ ಬಾಲರಾಮಮಂದಿರವನ್ನು ಆರಂಭಿಸಿದರು. ಜಿ.ವಿ.ಸಾ. ಅದರ ನೇತಾರ. ಕೇವಲ ರಾಮೋತ್ಸವ ಆಚರಿಸುವುದು ಅದರ ಕಾರ್ಯವಲ್ಲ. ಸಾಹಿತ್ಯ ಚಟುವಟಿಕೆಗಳೇ ಅದರ ಪ್ರಧಾನ ಅಂಗ. ಪ್ರತಿವಾರ ಚರ್ಚಾಕೂಟ, ಪುಸ್ತಕ ವಿಮರ್ಶೆ, ಸ್ವಂತ ಲೇಖನಗಳ ಪಠಣ, ಅವುಗಳ ವಿಮರ್ಶೆ ನಡೆಯುತ್ತಿದ್ದುವು. ಶ್ರೀ ಸುಬೋಧ ರಾಮರಾಯರ ಭಕ್ತಿಕುಸುಮಾಂಜಲಿಯಲ್ಲಿ ಪ್ರಕಟವಾದ ಎಲ್ಲ ಪುಸ್ತಕಗಳನ್ನೂ ಸಂಗ್ರಹಿಸಿ ಓದಿ ಮನನ ಮಾಡಿ ಚರ್ಚಿಸುತ್ತಿದ್ದರು.

ಪ್ರೌಢಶಾಲಾ ವ್ಯಾಸಂಗದ ಕಾಲದಲ್ಲಿ ಶ್ರೀ ಎಂ. ಯಾಮುನಾಚಾರ್ಯರು ಇಂಗ್ಲಿಷ್ ಅಧ್ಯಾಪಕರು. ಅವರ ಪ್ರಭಾವದಿಂದ ಇಂದೂ ಜಿ.ವಿ.ಸಾ ಸಮರ್ಥ ಇಂಗ್ಲಿಷ್ ಭಾಷಾ ಬೋಧಕ. ಇದೇ ಕಾಲದಲ್ಲಿ ಜಿ.ವಿ.ಸಾ. ಮನಸ್ಸಿನಲ್ಲಿ ಸ್ವಾತಂತ್ರ್ಯ ಪ್ರೇಮ, ದಾಸ್ಯಪ್ರವೃತ್ತಿಯ ಬಗ್ಗೆ ಬೇಸರ ಬೇರೂರಲು ಕಾರಣರಾದವರು ಎಸ್. ಕೃಷ್ಣಮೂರ್ತಿ. ಅವರು ತರಗತಿಯಲ್ಲಿ ಪಾಠ ಮಾಡುತ್ತಿದ್ದುದು ಅರ್ಧಗಂಟೆ ಮಾತ್ರ. ಅವರ ಬಳಿ ಸರ್ಕಾರ ಮುಟ್ಟುಗೋಲು ಹಾಕಿದ್ದ ಮೇಜರ್ ಬಸುರವರು ಬರೆದ 'The rise of Christian power in India' ಎಂಬ ಪುಸ್ತಕ ಇತ್ತು. ತರಗತಿಯಲ್ಲಿ ಬೋಧಿಸುವಾಗ ಕೃಷ್ಣಮೂರ್ತಿಗಳು ಆ ಪುಸ್ತಕದಿಂದ ಆಯ್ದ ಕೆಲವು ಭಾಗಗಳನ್ನು ಓದಿ ಹೇಳುತ್ತಿದ್ದರು. 'ಕತ್ತಲೆ ಕೋಣೆ ಕೊಲೆ.' ವ್ಯಾಪಾರಕ್ಕಾಗಿ ಬಂದ ಇಂಗ್ಲಿಷರು ಮೋಸದಿಂದ ಭಾರತದಲ್ಲಿ ಸಾಮ್ರಾಜ್ಯವನ್ನು ಕಟ್ಟಿದ ಕಥೆ, ಇಟಲಿಯ ಸ್ವಾತಂತ್ರ್ಯ ಹೋರಾಟ, ಫ್ರೆಂಚ್ ಮತ್ತು ಅಮೆರಿಕಾ ಕ್ರಾಂತಿಗಳು ಇವೆಲ್ಲವುಗಳ ಬಗ್ಗೆ ಸಾಭಿನಯವಾಗಿ ವಿವರಿಸುತ್ತಿದ್ದರು. ಈ ಜೀವಂತ ಶಿಕ್ಷಣ ಜಿ.ವಿ.ಸಾ.ರವರಲ್ಲಿ ಸ್ವರಾಜ್ಯ ಚಳುವಳಿಯಲ್ಲಿ ಭಾಗವಹಿಸಬೇಕೆಂಬ ಬಯಕೆ, ದಾಸ್ಯಮುಕ್ತರಾಗಬೇಕೆಂಬ ಹೆಬ್ಬಯಕೆ ಯನ್ನು ಮೂಡಿಸಿತು.

ಜಿ.ವಿ.ಸಾ.ಗೆ ಚಿಕ್ಕಂದಿನಿಂದಲೂ ಪಠ್ಯಪುಸ್ತಕಗಳ ಜೊತೆಗೆ ಪಠ್ಯೇತರ ಪುಸ್ತಕ ಗಳನ್ನೂ ಓದುವ ಹವ್ಯಾಸ. ತುಮಕೂರು ಪ್ರೌಢಶಾಲೆಯ ಸುಸಜ್ಜಿತ ಪುಸ್ತಕ ಭಂಡಾರ ಅವರ ಈ ಪ್ರವೃತ್ತಿಗೆ ಇಂಬು ಕೊಟ್ಟಿತು. ಸ್ಕಾಟ್‌ನ ಇಂಗ್ಲಿಷ್ ಕಾದಂಬರಿಗಳನ್ನು, ಕನ್ನಡದಲ್ಲಿ ಗಳಗನಾಥರ ಹಾಗೂ ವೆಂಕಟಾಚಾರ್ಯರ ಕಾದಂಬರಿಗಳನ್ನು ಓದಿ ಮುಗಿಸಿದರು. ಅನೇಕ ನಿಯತಕಾಲಿಕ ಹಾಗೂ ವಾರಪತ್ರಿಕೆಗಳನ್ನು ತಪ್ಪದೆ ಓದುತ್ತಿದ್ದರು. ಅದರಲ್ಲೂ ಮಹಾತ್ಮಾ ಗಾಂಧಿಯವರ 'ಯಂಗ್ ಇಂಡಿಯಾ' ಅವರ ಮನಸ್ಸನ್ನು ಸೂರೆಗೊಂಡಿತು. ತುಮಕೂರಿನ ಪ್ರಸಿದ್ಧ ನ್ಯಾಯವಾದಿ, ಕಾಂಗ್ರೆಸ್

ನಾಯಕ ಕೆ. ರಂಗೈಯಂಗಾರ್ ಭಗವದ್ಗೀತೆಯ ಮೇಲೆ ಮಾಡಿದ ಭಾಷಣವನ್ನು ಶಾಲೆಯ ಪತ್ರಿಕೆ School Folkನಲ್ಲಿ 'The message of the Gita on the modern youth' ಎಂಬ ಲೇಖನ ಬರೆದು ಅಧ್ಯಾಪಕರೆಲ್ಲರ ಮೆಚ್ಚುಗೆ ಪಡೆದರು.

ಹೀಗೆ ಜಿ.ವಿ.ನಾ.ರವರ ಪ್ರೌಢಶಾಲಾ ಶಿಕ್ಷಣ ಅವರಿಗೆ ನಾನಾ ವಿಧದಲ್ಲಿ ಬೋಧಪ್ರದವಾಯಿತು. ವ್ಯಾಸಂಗ, ಬರಹಗಳಿಗೆ ಭದ್ರಬುನಾದಿಯಾಯಿತು. ಸೌಜನ್ಯ, ಸೌಶೀಲ್ಯ, ದೇಶಪ್ರೇಮ ಇವುಗಳನ್ನು ಮೂಡಿಸುವ ಪ್ರೇರಕಶಕ್ತಿಯಾಯಿತು. 'ಹೊರಗಡೆ ದೇಶಪ್ರೇಮದ ವಾತಾವರಣ, ಒಳಗಡೆ ವ್ಯಾಸಂಗಕ್ಕೆ ತುಂಬು ಅವಕಾಶ ದೊರೆತು ಅವರ ವ್ಯಕ್ತಿತ್ವದ ಸರ್ವತೋಮುಖವಾದ ಪ್ರಗತಿಗೆ ಇಂಬುಗೊಟ್ಟಂತಾಯಿತು.'

**ರಾಷ್ಟ್ರಾಭಿಮಾನದ ಅಂಕುರಾರ್ಪಣ**

ಜಿ.ವಿ.ನಾ. ಉಜ್ವಲ ರಾಷ್ಟ್ರಪ್ರೇಮಿ. ಈ ಭಾವನೆಯ ಅಂಕುರಾರ್ಪಣವಾದುದು ಪ್ರೌಢಶಾಲಾ ವ್ಯಾಸಂಗದ ಕಾಲದಲ್ಲಿಯೇ. ಒಮ್ಮೆ ಬಾಪೂಜೀ, ಕಸ್ತೂರಿಬಾ ಮತ್ತು ಮಹದೇವ್‌ದೇಸಾಯ್‌ರವರ ಜೊತೆ ತುಮಕೂರಿಗೆ ಭೇಟಿ ಕೊಟ್ಟ ಸಂದರ್ಭ. ಅಸಾಧ್ಯ ಜನಸಂದಣಿ. ಜಿ.ವಿ.ನಾ. ಮತ್ತು ಅವರ ಮಿತ್ರರು ಗಾಂಧೀಜಿ ಹೋದಲ್ಲೆಲ್ಲಾ ದುಡುಗುಟ್ಟಿ ಹಿಂಬಾಲಿಸಿದರು. ಅವರ ಭಾಷಣ ಜಿ.ವಿ.ನಾ. ಮನಸ್ಸನ್ನು ಸೆರೆಹಿಡಿಯಿತು. ಗಾಂಧೀ ಮತ್ತು ಗಾಂಧೀ ಸಾಹಿತ್ಯದ ಅವರ ಒಲವು ಅಂದಿನಿಂದಲೇ ಮೂಡಿಬಂದಿತು. ಅದೇ ಕಾಲದಲ್ಲಿ ರಾಜಾಜಿಯವರು ರಾಷ್ಟ್ರೀಯ ಚಳುವಳಿ, ಗಾಂಧೀಜಿಯವರ ನಾಯಕತ್ವ ಇವುಗಳ ಬಗ್ಗೆ ಮಾಡಿದ ಭಾಷಣ ಜಿ.ವಿ.ನಾ. ಮೇಲೆ ಪ್ರಭಾವ ಬೀರಿತು.

ಇದೇ ಕಾಲದಲ್ಲಿ ತುಮಕೂರಿನಲ್ಲಿ ಡಾ. ನಾರಾಯಣ ಸುಬ್ಬರಾವ್ ಹರ್ಡೀಕರ್ ಅವರ ನೇತೃತ್ವದಲ್ಲಿ ಅಖಿಲ ಭಾರತ ಸೇವಾದಳ ತರಪೇತಿ ಶಿಕ್ಷಣ ಏರ್ಪಾಟಾಯಿತು. ಜಿ.ವಿ.ನಾ. ಈ ಶಿಬಿರದಲ್ಲಿ ಸ್ವಯಂ ಸೇವಕ. ಯುವಕರಲ್ಲಿ ರಾಷ್ಟ್ರೀಯ ಜಾಗೃತಿಯನ್ನು ಮೂಡಿಸಿ, ಅವರನ್ನು ಸ್ವಾತಂತ್ರ್ಯ ಹೋರಾಟಕ್ಕೆ ಅಣಿಗೊಳಿಸುವುದು ಶಿಬಿರದ ಗುರಿ, ಕಟ್ಟುನಿಟ್ಟಿನ ವ್ಯಾಯಾಮದ ಜೊತೆಗೆ ಬೌದ್ಧಿಕ ತರಗತಿಗಳು, ಚಾರಿತ್ರ್ಯ ನಿರ್ಮಾಣ, ಶಿಸ್ತು ಮೊದಲಾದವುಗಳ ಅಭ್ಯಾಸ. ಶಿಬಿರದಲ್ಲಿ ಖ್ಯಾತ ರಾಷ್ಟ್ರನಾಯಕರ ಭಾಷಣಗಳು ಆಗುತ್ತಿದ್ದವು. ಇದು ಒಂದು ಬಗೆಯ ವಿಶಾಲ ಶಿಕ್ಷಣ. ಇದರ ಪರಿಣಾಮವಾಗಿ ಜಿ.ವಿ.ನಾ ಮನಸ್ಸಿನಲ್ಲಿ ರಾಷ್ಟ್ರೀಯ ಭಾವನೆ, ರಾಷ್ಟ್ರಸೇವೆಗಳ ಸೃಷ್ಟಿ ಕಲ್ಪನೆ ಮೂಡಿತು. ಅವರ ರಾಷ್ಟ್ರೀಯ ಚಟುವಟಿಕೆಗಳಿಗೆ ಬುನಾದಿಯಾಯಿತು. ರಾಷ್ಟ್ರೀಯ ಪ್ರವೃತ್ತಿಯ ಕುಡಿಯೊಡೆಯಿತು.

ಆಗಸ್ಟ್ ಒಂದನೆಯ ತಾರೀಕು ಲೋಕಮಾನ್ಯ ತಿಲಕರ ಪುಣ್ಯ ತಿಥಿ. ಆ ದಿನ ಹರತಾಳ ಆಚರಿಸಿ, ಶಾಲೆಗಳನ್ನು ಮುಚ್ಚಿಸಿ, ಎಲ್ಲ ವಿದ್ಯಾರ್ಥಿಗಳನ್ನು ಸೇರಿಸಬೇಕೆಂಬ

ಸಂಕಲ್ಪ. ರಾಷ್ಟ್ರೀಯ ಘೋಷಣೆಗಳೊಂದಿಗೆ ಜಿ.ವಿ.ನಾ. ಮತ್ತು ನಾಲ್ಕಾರು ಮಿತ್ರರಿಂದ ಮೆರವಣಿಗೆ ಆರಂಭ. ಹುಡುಗರೆಲ್ಲ ಶಾಲೆಗಳಿಂದ ಹೊರಬಂದು ನಾಲ್ಕು ಜನರ ಗುಂಪು ನಾಲ್ಕುನೂರಾಯಿತು. ಪೋಲಿಸರು ಜಾಗೃತರಾದರು. ಹಳೇ ಮಾಧ್ಯಮಿಕ ಶಾಲೆಯ ಬಳಿ ಬಂದಾಗ ಜಿ.ವಿ.ನಾ ಮತ್ತು ಅವರ ಇಬ್ಬರು ಮಿತ್ರರನ್ನು ಬಂಧಿಸಲಾಯಿತು. ಹೆದರಿದ ವಿದ್ಯಾರ್ಥಿ ತಂಡ ಚದುರಿತು. ಸಂಜೆಯವರೆಗೂ ಮೂವರನ್ನು ಬಂಧನದಲ್ಲಿಟ್ಟು ಎಚ್ಚರಿಕೆ ನೀಡಿ ಬಿಡುಗಡೆ ಮಾಡಿದರು. ಈ ಪ್ರಸಂಗ ರಾಷ್ಟ್ರೀಯ ಚಳುವಳಿಯಲ್ಲಿ ನೇರವಾಗಿ ಪಾಲ್ಗೊಳ್ಳಬೇಕೆಂಬ ಅವರ ಹುರುಪು ಇಮ್ಮಡಿಯಾಗಲು ಪ್ರೇರಕವಾಯಿತು.

ರಾಷ್ಟ್ರಪ್ರೇಮದ ಜ್ಯೋತಿಯನ್ನು ಬೆಳಗಿಸಿದ ಇನ್ನೊಂದು ಪ್ರಸಂಗ ಉಲ್ಲೇಖನಾರ್ಹ. ಪಂಡಿತ ಜವಹರಲಾಲ್ ಬೆಂಗಳೂರಿಗೆ ಭೇಟಿ ನೀಡಿದರು. ಪತ್ನಿ ಕಮಲಾ ನೆಹರೂ ಮತ್ತು ಮಗಳು ಇಂದಿರಾ ಜೊತೆಯಲ್ಲಿ 'ಕಾಂಗ್ರೆಸ್ ಕಾರ್ಯಕರ್ತರನ್ನು ಉದ್ದೇಶಿಸಿ ಭಾಷಣ ಮಾಡುವ ಕಾರ್ಯಕ್ರಮ. ಈಗಾಗಲೇ ಸೇವಾದಳ ತರಪೇತಿ ಪಡೆದಿದ್ದ ಜಿ.ವಿ.ನಾ.ಗೆ ಶಾಂತಿ. ಶಿಸ್ತನ್ನು ಕಾಪಾಡುವ ಸ್ವಯಂಸೇವಕರಾಗಿ ಕೆಲಸ ಮಾಡುವ ಸುಯೋಗ. ಕಾರ್ಯಕರ್ತರ ಗುಂಪೇ ಪಂಡಿತಜೀ ಸುತ್ತಲೂ. ಸ್ವಲ್ಪವೂ ಸ್ಥಳವಿಲ್ಲ. ಜಿ.ವಿ ನಾ.ಗೆ ನೆಹರೂ ಹಸ್ತಾಕ್ಷರ ಪಡೆಯುವ ಆಸೆ. ಜನರ ಸಂದಿಯಲ್ಲಿ ಕೈ ತೂರಿಸಿ. ಸಣ್ಣ ಪುಸ್ತಕ ಚಾಚಿದರು. ಕೈ ಮುಂದೆ ಬಂತೇ ವಿನಃ. ತಲೆ ಗುಂಪಿನಲ್ಲಿ ಬೆರೆತುಹೋಗಿತ್ತು. ಒಡನೆಯೇ ಕೈಗಳನ್ನು ಬಿಗಿಯಾಗಿ ಹಿಡಿದು ನೆಹರೂ 'ಯಾರವಿವು ? ತಲೆ ಇಲ್ಲದ ಕೈಗಳು' ಎಂದರು. ರಾಷ್ಟ್ರಪ್ರಭೃತಿಯ ಸ್ಪರ್ಶದಿಂದ ಪುಳಕಿತರಾದರು ಜಿ.ವಿ.ನಾ. ದೊಡ್ಡ ನಿಧಿಯಂತೆ ಆ ಹಸ್ತಾಕ್ಷರವನ್ನು ಬಹುಕಾಲ ಇಟ್ಟುಕೊಂಡಿದ್ದರು.

**ಕಾಲೇಜ್ ಶಿಕ್ಷಣ :**

ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಪ್ರಥಮ ದರ್ಜೆಯಲ್ಲಿ ತೇರ್ಗಡೆಯಾಗಿ ತುಮಕೂರಿನಲ್ಲೇ ಇಂಟರ್‌ಮೀಡಿಯಟ್ ಕಾಲೇಜಿನಲ್ಲಿ ವ್ಯಾಸಂಗ ಮುಂದುವರಿಯಿತು. ಆಗ ಅವರ ಮನಸ್ಸಿನ ಮೇಲೆ ಅಗಾಧ ಪರಿಣಾಮ ಬೀರಿದವರು ಇಬ್ಬರು ಅಧ್ಯಾಪಕರು. ಒಬ್ಬರು ಇಂಗ್ಲಿಷ್ ಪ್ರೊಫೆಸರ್ ಎಸ್. ವಿ. ರಂಗಣ್ಣನವರು. ಒಳ್ಳೆಯ ವಾಗ್ಮಿಗಳು. ಇಂಗ್ಲಿಷ್ ಮತ್ತು ಕನ್ನಡ ಭಾಷೆಯಲ್ಲಿ ಬಹು ರಮ್ಯವಾದ ಶೈಲಿ ಅವರದು. ಇಂಗ್ಲಿಷ್ ನುಡಿಗಟ್ಟುಗಳ ಮನೋಹರ ಬಳಕೆ. ವಿನಯಶೀಲ. ಮೃದುಭಾಷಿ. ಇನ್ನೊಬ್ಬರು ಗಣಿತದ ಶ್ರೀ ಚಂದ್ರಶೇಖರಯ್ಯನವರು. ಅಭಿನಯ ಕುಶಲರು. ಶೇಕ್ಸ್‌ಪಿಯರ್‌ನ ಮ್ಯಾಕ್‌ಬೆತ್. ಒಥೆಲೋ ಪಾತ್ರಗಳ ಅವರ ಅಭಿನಯ ಅಮೋಘ. ಜಿ.ವಿ.ನಾ.ರಲ್ಲಿ ಸುಪ್ತವಾಗಿದ್ದ ಅಭಿನಯ ಕಲೆ ಪ್ರಕಾಶವಾಗಲು ಇವರು ನೆರವಾದರು. ಇದರ ಫಲ 'ಯೂನಿವರ್ಸಿಟಿ ಅಮೆಚೂರ್ಸ್' ನಾಟಕತಂಡದ ಉದಯ. ತಂಡದವರು ಪ್ರದರ್ಶಿಸಿದ ಕುವೆಂಪು ಅವರ 'ಯಮನ ಸೋಲು', ಎ. ಎನ್ ಮೂರ್ತಿರಾಯರ 'ಆಷಾಢಭೂತಿ'

ಕೈಲಾಸಂರವರ 'ಹೋಂ ರೂಲ್'. ರನ್ನನ 'ಗದಾಯುದ್ಧ'ಗಳಲ್ಲಿ ಜಿ. ವಿ. ನಾ. ಅಭಿನಯಿಸಿದರು. ಈ ನಾಟಕಗಳಲ್ಲಿ ಸ್ತ್ರೀ ಪಾತ್ರಗಳೆಲ್ಲಾ ಜಿ.ವಿ.ನಾ. ಪಾಲಿಗೆ.

1931ರಲ್ಲಿ ಇಂಟರ್ ಮೀಡಿಯಟ್ ಪರೀಕ್ಷೆ ಮುಗಿದ ಮೇಲೆ ರಜೆಯಲ್ಲಿ ಬೆಂಗಳೂರಿಗೆ ಹೋಗಿದ್ದರು. ಶ್ರೀ ಟಿ. ಎಸ್. ವೆಂಕಣ್ಣಯ್ಯನವರು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಮಾಡಿದ 'ಮಹಾಭಾರತದಲ್ಲಿ ಕೃಷ್ಣ' ಉಪನ್ಯಾಸ ಕೇಳುವ ಅವಕಾಶ ದೊರೆಯಿತು. ಅವರ ಭಾಷಣದ ವೈಖರಿಗೆ ಮಾರುಹೋಗಿ ಭಾಷಣದ ನಂತರ ಅವರನ್ನು ಭೇಟಿ ಮಾಡಿದರು. ತಾವು ಬರೆದ ಭಾವಗೀತೆಗಳ ಹಸ್ತಪ್ರತಿಯೊಂದನ್ನು ಅವರ ಕೈಗೆ ನೀಡಿದರು. ಅವರು ಅದನ್ನು ಅಲ್ಲೇ ತಿರುವಿಹಾಕಿ, 'ಯಾರು ?' 'ಏನು?' ಎಂದೆಲ್ಲ ವಿಚಾರಿಸಿದರು. 'ಚೆನ್ನಾಗಿ ಬರೆದಿದ್ದೀಯೆ ; ಮುಂದುವರಿಸು' ಎಂದು ಪ್ರೋತ್ಸಾಹಿಸಿದರು. ಮುಂದೆ ಎರಡನೆಯ ಬಿ.ಎ. ಓದುತ್ತಿದ್ದಾಗ ತೀವ್ರ ಹಣದ ಮುಗ್ಗಟ್ಟಿನಲ್ಲಿ ಸಿಲುಕಿದ ಜಿ.ವಿ.ನಾ. ಮೈಸೂರಿನಲ್ಲಿ ಟಿ. ಎಸ್. ವೆಂಕಣ್ಣಯ್ಯನವರನ್ನು ಹೋಗಿ ಕಂಡರು. ನೋಡಿ ಬಹುದಿನಗಳಾಗಿದ್ದರೂ ಅವರು ತಕ್ಷಣ ಗುರುತು ಹಿಡಿದು ಆತ್ಮೀಯತೆಯಿಂದ ವಿಚಾರಿಸಿದರು. 'ವ್ಯಾಸಂಗಕ್ಕೆ ಆದ್ಯ ಗಮನ ಕೊಡು. ನಿನಗೆ ಒಳ್ಳೆಯದಾಗಲಿ, ಅವಶ್ಯವಿದ್ದಾಗ ನನ್ನಲ್ಲಿ ಬಾ' ಎಂದು ಹೇಳುತ್ತಾ ಹಣವನ್ನು ತೆಗೆದು ಕೊಟ್ಟರು. ಟಿ. ಎಸ್. ವೆಂಕಣ್ಣಯ್ಯನವರ ಔದಾರ್ಯ ಕಂಡು ಜಿ.ವಿ.ನಾ. ಕಣ್ಣು ಮಂಜಾದವು.

ಅದೇ ವರ್ಷ ಇಂಟರ್‌ಮೀಡಿಯೆಟ್‌ನಲ್ಲಿ ತೇರ್ಗಡೆಯಾಗಿ, ಬಿ.ಎ. ತರಗತಿಗೆ ಸೇರಲು ಮೈಸೂರಿಗೆ ಹೊರಟು ನಿಂತರು ಜಿ.ವಿ.ನಾ. ಈ ವೇಳೆಗೆ ತಂದೆಯವರು ಇವರನ್ನು ತೊರೆದು ಬಹಳ ಕಾಲವಾಗಿತ್ತು. ತಾತನವರಿಗೂ ಬಹಳ ವಯಸ್ಸಾಗಿತ್ತು. ಸೋದರಮಾವನವರ ಆರ್ಥಿಕ ಪರಿಸ್ಥಿತಿ ಇವರನ್ನು ಪರಸ್ಥಳದಲ್ಲಿ ಓದಿಸುವಷ್ಟು ಉತ್ತಮವಾಗಿರಲಿಲ್ಲ. ಆದರೂ ವ್ಯಾಸಂಗವನ್ನು ಮುಂದುವರಿಸಲೇಬೇಕೆನ್ನುವ ಮೇಧಾವಿ ಜಿ.ವಿ.ನಾ.ಗೆ ಇದಾವುದೂ ಅಡ್ಡಿ ಬರಲಿಲ್ಲ. ತಾಯಿಯವರು ನೀಡಿದ ನಾಲ್ಕಾರು ಪುಡಿ ಗಾಸುಗಳಲ್ಲಿ ಅವಶ್ಯಕವಾದ ಬಟ್ಟೆ ಹೊಲಿಸಿಕೊಂಡರು. ಸೋದರಮಾವ ಕೊಟ್ಟ ಸ್ವಲ್ಪ ಹಣ ಸಹಿತ ಕೇವಲ ಒಂದೆರಡು ಸಾಮಾನುಗಳೊಂದಿಗೆ ಮೈಸೂರಿಗೆ ಹೊರಟರು. ತಾಯಿ ಹನಿಗೂಡಿದ ಕಣ್ಣುಗಳಿಂದ ಮಗನನ್ನು ಹರಸಿ ಬೀಳ್ಕೊಟ್ಟರು.

### ಮಹಾರಾಜಾ ಕಾಲೇಜಿನಲ್ಲಿ

ಮೈಸೂರು ಸೇರಿದ ಜಿ.ವಿ.ನಾ. ದೊಡ್ಡಪ್ಪನ ಮಗಳ ಮನೆಯಲ್ಲಿ ನಾಲ್ಕಾರು ದಿನ ತಂಗಿದರು. ಮಹಾರಾಜಾ ಕಾಲೇಜು ಸೇರಿಯೂ ಆಯಿತು. ಸಾಹಿತ್ಯದ ವಿಷಯಗಳನ್ನು ಆರಿಸಿಕೊಳ್ಳುವ ಬದಲು ಗಣಿತ, ಅಂಕಶಾಸ್ತ್ರ, ಅರ್ಥಶಾಸ್ತ್ರಗಳನ್ನು ಆಯ್ದುಕೊಂಡುದು ಅಚ್ಚರಿಯ ವಿಷಯ. ನೆಂಟರ ಮನೆಯಲ್ಲಿ ಎಷ್ಟು ದಿನ ತಾನೇ

ಇರಲಿಕ್ಕಾದೀತು ? ಎರಡು ಹೊತ್ತಿನ ಊಟಕ್ಕೆ ವಾರದ ಮನೆಗಳು ದೊರೆತವು. ಆದರೆ ಇರುವುದೆಲ್ಲಿ ? ಇವರ ಸಹಪಾಠಿ ಶ್ರೀ ಕಡಂಬದ ದೊರೆಸ್ವಾಮಿ ಅಯ್ಯಂಗಾರ್ ಅವರಿಗೆ ಶ್ರೀ ವೈಷ್ಣವ ವಿದ್ಯಾರ್ಥಿ ನಿಲಯದಲ್ಲಿ ನೆಲೆ ದೊರೆತಿತ್ತು. ಒಂಟಿಕೊಪ್ಪಲಿನ ಲಾಯರ್ ಶ್ರೀ ರಂಗಾಚಾರ್ ಆ ವಿದ್ಯಾರ್ಥಿನಿಲಯವನ್ನು ನಡೆಸುತ್ತಿದ್ದರು. ಮಿತ್ರನ ಸಲಹೆಯಂತೆ ಆ ನಿಲಯದಲ್ಲಿ ಆಶ್ರಯ ದೊರಕಿಸಿಕೊಳ್ಳಲು ರಂಗಾಚಾರ್ ಅವರನ್ನು ದಿನವೆಲ್ಲ ಕಾದು ಬಹಳ ಪ್ರಯಾಸಪಟ್ಟು ಭೇಟಿಯಾದರು. ಆದರೆ ಅವರ ಉತ್ತರ ನಿರಾಶೆಯನ್ನೇ ತಂದಿತು. 'ಶ್ರೀವೈಷ್ಣವ'ರಿಗಾಗಿಯೇ ಮೀಸಲಾದ ಆ ವಿದ್ಯಾರ್ಥಿ ನಿಲಯದಲ್ಲಿ 'ಮಾಧ್ವ' ಪಂಗಡದ ಹುಡುಗನನ್ನು ಸೇರಿಸಿಕೊಂಡರೆ ಅಪಚಾರವಾಗುವು ದಿಲ್ಲವೇ ? ಸಮಾಜದ ಕಡು ಸಂಪ್ರದಾಯ ರಂಗಾಚಾರ್ಯರ ಕೈ ಕಟ್ಟಿಹಾಕಿತ್ತು. ಆ ಸಮಯದಲ್ಲಿ ಆತ್ಮೀಯ ಗೆಳೆಯ ಕೋಟೇಶ್ವರ ರಕ್ಷಣೆಗೆ ಬಂದ. ಸ್ವಲ್ಪ ಅನುಕೂಲಸ್ಥ ನಾದ ಆತ ಮಹಾರಾಜಾ ಕಾಲೇಜಿನ ಹಾಸ್ಟೆಲ್‌ನಲ್ಲಿದ್ದ. ಆತನ ನೆರವಿನಿಂದ ಕೊಠಡಿಯಲ್ಲಿ ವಾಸಮಾಡಿಕೊಂಡು ಅವನ ಅತಿಥಿಯಾಗಿ ಹಾಸ್ಟೆಲ್‌ನಲ್ಲೇ ಊಟಮಾಡತೊಡಗಿದರು. ಇದರಿಂದ ವಾರಾನ್ನಕ್ಕಾಗಿ ದಿನವೂ ಅಲೆಯುವುದು ತಪ್ಪಿತು.

ಕಾಲೇಜು ವಿದ್ಯಾಭ್ಯಾಸ ಮೊದಲ ವರ್ಷದಲ್ಲಿ ಜಿ.ವಿ.ನಾ. ಮನೋಭಾವನೆಯಲ್ಲಿ ಪರಿವರ್ತನೆಯಾಗತೊಡಗಿತು. ಇಚ್ಛೆಪಟ್ಟು ಆರಿಸಿಕೊಂಡಿದ್ದ ಗಣಿತದಲ್ಲಿ ಆಸಕ್ತಿ ಕಡಿಮೆಯಾಗತೊಡಗಿತು. ಮನಸ್ಸು ಪಠ್ಯೇತರ ಪುಸ್ತಕಗಳನ್ನು ಓದುವುದರೆಡೆ ಓಡ ತೊಡಗಿತು. ಡಾ. ವಿಲ್ ಡ್ಯೂರೆಂಟ್, ಜಿ. ಡಿ. ಎಲ್.ಕೋಲ್. ಸಿ. ಇ. ಎಂ. ಜೋಡ್ ಮುಂತಾದವರ ಪ್ರಖ್ಯಾತ ಗ್ರಂಥಗಳನ್ನು ಓದಿದರು. ಇದರಿಂದ ಅವರಲ್ಲಿ ಮೊದಲೇ ಮನೆಮಾಡಿದ್ದ ಉತ್ತಮ ಇಂಗ್ಲಿಷ್ ಭಾಷಾಜ್ಞಾನಕ್ಕೆ ಸಾಣೆ ಹಿಡಿದಂತಾಯಿತು. ಇದರ ಜೊತೆಗೆ ಡಾ. ರಾಧಾಕೃಷ್ಣನ್‌ರ ತತ್ವಶಾಸ್ತ್ರ ಗ್ರಂಥಗಳನ್ನೂ, ರವೀಂದ್ರರ ಕೃತಿಗಳನ್ನೂ ಓದಿದರು. ರೊಮೇರೋಲಾರವರ **'Prophets of New India'** [ಆಧುನಿಕ ಭಾರತದ ಪ್ರವಾದಿಗಳು] ಎಂಬ ಗ್ರಂಥ, ವಿವೇಕಾನಂದರ ಭಾಷಣ ಬರಹಗಳು ಪ್ರಭಾವ ಬೀರಿದವು. ಇದೆಲ್ಲಕ್ಕಿಂತ ಹೆಚ್ಚಾಗಿ ಗಾಂಧೀ ಹಾಗೂ ಜವಹರಲಾಲ್‌ರ ಬರಹಗಳು ತುಂಬ ಪ್ರಿಯವೆನಿಸಿದವು.

ಕಾಲೇಜ್‌ಗೆ ದಸರಾ ರಜ. ಬಾಗಿಲು ಮುಚ್ಚಿತು. ಮತ್ತೆ ಊಟದ ಪ್ರಶ್ನೆ ತಲೆ ಎತ್ತಿತು. ಊರಿನಿಂದ ಬರಬೇಕಾದ ಹಣ ಬಂದಿರಲಿಲ್ಲ. ಒಂದೆರಡು ದಿನ ಹೋಟೆಲಿನ ಖಾಲಿದೋಸೆಯಿಂದಲೇ ತೃಪ್ತಿ ಪಡೆಯಬೇಕಾಯಿತು. ಒಂದು ದಿನವಂತೂ ಪೂರ್ಣ ಉಪವಾಸ. ಅಂದೇ ಗೆಳೆಯ ಹನುಮೇಶಿ ಆಪದ್ಬಾಂಧವನಾಗಿ ನೆರವಿಗೆ ಬಂದ. ಜಿ. ವಿ.ನಾ. ಸ್ಥಿತಿ ಅರಿತು ವಿದ್ಯಾರ್ಥಿ ಭವನದಲ್ಲಿ ದೋಸೆ ಕಾಫಿ ಕೊಡಿಸಿ ಯಾರದೋ ಮನೆಗೆ ಕರೆದುಕೊಂಡು ಹೋದ. ಜಿ. ವಿ. ನಾ. ಯಾಂತ್ರಿಕವಾಗಿ ಹಿಂಬಾಲಿಸಿದರು. ವಿದ್ಯುಚ್ಛಕ್ತಿ ಇಲಾಖೆಯಲ್ಲಿ ಕೆಲಸದಲ್ಲಿದ್ದ ವೆಂಕಟಸುಬ್ಬಯ್ಯನವರ ಮನೆ ಅದು.

ವೆಂಕಟಸುಬ್ಬಯ್ಯನವರಿಗೆ ಗಂಡುಮಕ್ಕಳಿರಲಿಲ್ಲ. ಇಬ್ಬರು ಹುಡುಗಿಯರು ಮಾತ್ರ. ಅವರಿಬ್ಬರೂ ಮಹಾರಾಣಿ ಕಾಲೇಜಿನಲ್ಲಿ ಓದುತ್ತಿದ್ದರು. ಅವರನ್ನು ಬೆಳಗ್ಗೆ ಕಾಲೇಜಿಗೆ ಕರೆದುಕೊಂಡು ಹೋಗಿ ಸಾಯಂಕಾಲ ಮನೆಗೆ ವಾಪಸು ಕರೆತರಲು ಹುಡುಗನೊಬ್ಬನ ಅವಶ್ಯಕತೆ ಇತ್ತು. ಪರಿಸ್ಥಿತಿ ಜಿ. ವಿ. ನಾ ರವರನ್ನು ಆ ಕೆಲಸಕ್ಕೆ ಒಪ್ಪಿಕೊಳ್ಳುವಂತೆ ಮಾಡಿತು. ವಾಸ, ಊಟ, ತಿಂಡಿ ಎಲ್ಲವೂ ಅವರ ಮನೆಯಲ್ಲೇ. ಮನೆಯೊಡತಿ ಶಾರದಮ್ಮ ಅವರನ್ನು ಮಗನಿಗಿಂತ ಮಿಗಿಲಾಗಿ ವಾತ್ಸಲ್ಯದಿಂದ ನೋಡಿಕೊಳ್ಳುತ್ತಿದ್ದರು. ಸಂಕೋಚದ ಸ್ವಭಾವದ ಜಿ.ವಿ.ನಾ.ಗೆ ಮೊದಮೊದಲು ಸ್ವಲ್ಪ ಕಷ್ಟವೆನಿಸಿದರೂ ದಿನ ಕಳೆದಂತೆ ಆ ಮನೆಯಲ್ಲಿ ಒಬ್ಬರಾಗಿಬಿಟ್ಟರು. ಮೊದಲನೆಯ ವರ್ಷದ ಬಿ.ಎ , ಹೇಗೋ ಪೂರೈಸಿತು. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಬೇಸಿಗೆಯಲ್ಲಿ ಊರಿಗೆ ಮರಳಿದರು.

ವಿರಾಮವನ್ನು ವ್ಯರ್ಥವಾಗಿ ಕಳೆಯುವುದು ಎಂದೂ ಅವರ ಜಾಯಮಾನಕ್ಕೆ ಬಂದದ್ದಲ್ಲ. ಆಗ ಗಾಂಧೀಪ್ರಣೀತ ರಚನಾತ್ಮಕ ಕಾರ್ಯಕ್ರಮಗಳು ದೇಶದಲ್ಲೆಲ್ಲಾ ಭರಾಟೆಯಿಂದ ನಡೆಯುತ್ತಿತ್ತು. ಜಿ.ವಿ.ನಾ. ಸಹ ಅಸ್ಪೃಶ್ಯತಾ ನಿವಾರಣೆ, ಪಾನಪ್ರತಿಬಂಧ ಚಳುವಳಿ, ವಿದೇಶಿ ವಸ್ತುತ್ಯಾಗ, ಸ್ವದೇಶಿ ವಸ್ತುಗಳ ಬಳಕೆ ಮುಂತಾದ ಚಟುವಟಿಕೆಗಳಲ್ಲಿ ಪಾಲ್ಗೊಂಡರು. ಇದರ ಅಂಗವಾಗಿ ರಾಷ್ಟ್ರಭಾಷಾ ಹಿಂದೀ ಪ್ರಚಾರಕಾರ್ಯ ತುಮಕೂರಿನಲ್ಲಿ ಆರಂಭವಾಯಿತು. ಜಿ.ವಿ.ನಾ. ಮಧ್ಯಮ ಪರೀಕ್ಷೆಯಲ್ಲಿ ತೇರ್ಗಡೆಯಾದರು. ಪರೀಕ್ಷೆಯಲ್ಲಿ ಉತ್ತೀರ್ಣರಾಗುವುದೊಂದೇ ಅವರ ಗುರಿಯಾಗಿರಲಿಲ್ಲ. ಭಾಷೆಯನ್ನು ಚೆನ್ನಾಗಿ ಕಲಿಯಬೇಕು. ಸಾಹಿತ್ಯವನ್ನು ಆನಂದಿಸಬೇಕು. ಭಾಷೆಯನ್ನು ಕಲಿಯಲು ಆ ಭಾಷೆಯಲ್ಲೇ ಸಂಭಾಷಿಸುವುದು ಅಗತ್ಯ. ಅದಕ್ಕಾಗಿ ಹಿಂದಿ ನಾಟಕಗಳನ್ನು ಕಲಿತು ಪ್ರದರ್ಶಿಸಲು ಪ್ರಯತ್ನಗಳು ನಡೆದವು. ಜಿಲ್ಲೆಯ ಹಿರಿಯ ನಾಯಕ ತಾಳಕೆರೆ ಸುಬ್ರಹ್ಮಣ್ಯ, ಖಾದಿ ಭಂಡಾರದ ನೀಲಕಂಠರಾಯರು ಮುಂತಾದವರೊಡನೆ 'ವೀರ ಅಭಿಮನ್ಯು' ಮತ್ತು 'ಮೇವಾಡ ಪತನ' ನಾಟಕಗಳನ್ನು ಕಲಿತು ಪ್ರದರ್ಶನ ನೀಡಿದರು. ಈ ಎರಡು ನಾಟಕಗಳಲ್ಲಿ ಜಿ.ವಿ,ನಾ.ದ್ದು ಸ್ತ್ರೀ ಪಾತ್ರಗಳೇ.

ಎರಡನೇ ವರ್ಷದ ಬಿ.ಎ. ಓದುತ್ತಿದ್ದಾಗ ಹಣದ ಅಭಾವ ಅಸಹನೀಯವಾಯಿತು: ಪರೀಕ್ಷೆಗೆ ಕಟ್ಟಲು ಹಣ ಇಲ್ಲ. ಹಣದ ವ್ಯವಸ್ಥೆಗಾಗಿ ಲೈಫ್ ಇನ್‌ಷ್ಯೂರೆನ್ಸ್ ಕಂಪನಿಯವರು ನಡೆಸುತ್ತಿದ್ದ ಗಡಿಯಾರದ ಠೇವಣಿ ಯೋಜನೆಯ ಪ್ರಚಾರ ಕೈಗೊಂಡರು. ಇದರಿಂದ ಅಲ್ಪಸ್ವಲ್ಪ ಕಮಿಷನ್ ದೊರೆಯುತ್ತಿತ್ತು. ಓಡಾಟ ಹೆಚ್ಚಾಯಿತು. ಪ್ರತಿಫಲ ನಿರೀಕ್ಷಿಸಿದಂತೆ ದೊರೆಯಲಿಲ್ಲ. ಇದರ ಪರಿಣಾಮವಾಗಿ, ಹಾಜರಾತಿ ಕಡಿಮೆಯೆಂಬ ಕಾರಣದಿಂದ ಪರೀಕ್ಷೆಗೆ ಕೂಡಲು ವಿಶ್ವವಿದ್ಯಾನಿಲಯದ ಅನುಮತಿ ದೊರೆಯಲಿಲ್ಲ. ಪದವೀಧರನಾಗಬೇಕೆಂಬ ಆಶಾಗೋಪುರ ಕುಸಿಯಿತು. ಕಾಲೇಜಿಗೆ ಶರಣುಹೊಡೆದು ಊರಿಗೆ ಮರಳಿದರು. ವ್ಯಾಸಂಗ ಪೂರ್ಣವಾಗದಿದ್ದರೂ,

ಲೋಕಾನುಭವದ ಪರಿಚಯ ಸಾಕಷ್ಟಾಯಿತು. "ಜೀವನದ ಪಥ ನೇರವಲ್ಲ" ಎಂಬುದೂ ಅರಿವಾಯಿತು.

**ಉದ್ಯೋಗದ ಬೇಟೆ**

ವಿದ್ಯಾಭ್ಯಾಸ ಅರ್ಧಾಂತಕವಾಯಿತು. ಮನಸ್ಸಿನ ತುಂಬ ಕಳವಳ, ಮುಂದಿನ ವರ್ಷ ಪರೀಕ್ಷೆಗೆ ಕೂಡುವಂತೆ ಸೋದರಮಾವ ಸಾಂತ್ವನ ನೀಡಿದರು. ಏನೂ ಮಾಡದೆ ಕಾಲವನ್ನು ವ್ಯರ್ಥವಾಗಿ ನೂಕುವ ಸ್ವಭಾವವಲ್ಲ ಇವರದು. **'Foot prints on the sands of time'** ಮತ್ತು **'Struggle of modern man'** ಎಂಬ ಎರಡು ಇಂಗ್ಲಿಷ್ ಪುಸ್ತಕಗಳು ಇವರ ಗಮನ ಸೆಳೆದವು. ವಿಷಯ ಮತ್ತು ಬರಹ ಎರಡೂ ಅವರ ಮನಮುಟ್ಟಿತು. ಕನ್ನಡಕ್ಕೆ ಅನುವಾದ ಮಾಡಬಾರದೇಕೆ ಎನ್ನುವ ಆಲೋಚನೆ. ಆಲೋಚನೆ ತಕ್ಷಣ ಕಾರ್ಯರೂಪಕ್ಕಿಳಿಯಿತು. ಅನುಮತಿಗಾಗಿ 'Oxford University Press'ಗೆ ಬರೆದರು. ಅನುಮತಿ ದೊರೆಯುತ್ತದೆಂಬ ಹುಚ್ಚು ನಂಬಿಕೆ ಅವರದಾಗಿತ್ತು. ಉತ್ತರ ಬಂತು. ಕಾರ್ಯ ಅಲ್ಲಿಗೇ ಕೊನೆಗೊಂಡಿತು.

ಮುಂದಿನ ವರ್ಷವೂ ಕಾಲೇಜು ವ್ಯಾಸಂಗ ಮುಂದುವರಿಯಲಿಲ್ಲ. ಉದ್ಯೋಗಕ್ಕಾಗಿ ಪ್ರಯತ್ನಿಸುವಂತೆ ಸೋದರಮಾವ ಸಲಹೆಮಾಡಿದರು. ಉದ್ಯೋಗ ನೀಡುವ 'Central Recruitment Board'ಗೆ ಅರ್ಜಿ ರವಾನಿಸಿದರು. ಆಗ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಮೈಸೂರು ಶ್ರೀಮನ್‌ಮಹಾರಾಜ ಸರ್ಕಾರದ ಹಣಕಾಸು ಇಲಾಖೆಯ ನಿಯಂತ್ರಕರೂ, CRBಯ ಸದಸ್ಯರೂ ಆಗಿದ್ದರು. ಅವರ ಬೀಗರು ತುಮಕೂರಿನಲ್ಲಿ ಪ್ರಸಿದ್ಧ ಲಾಯರು. ಅವರ ಶಿಫಾರಸು ಪತ್ರ ಪಡೆದು ಮಾಸ್ತಿಯವರಲ್ಲಿ ಕೆಲಸ ಕೇಳುವ ಯೋಚನೆ. ಒಂದು ದಿನ ಬೆಂಗಳೂರು ಗವೀಪುರ ವಿಸ್ತರಣದ ಮಾಸ್ತಿಯವರ ನಿವಾಸಕ್ಕೆ ಹೋದರು. ಮನೆಯ ಪಡಸಾಲೆಯಲ್ಲಿ ಯಾರೋ ಒಬ್ಬರು ಕುಳಿತಿದ್ದರು.

'ಮಾಸ್ತಿಯವರು ಇದ್ದಾರೆಯೇ ?' ಇವರ ಪ್ರಶ್ನೆ.

'ಇದ್ದಾರೆ ಬನ್ನಿ ; ಕುಳಿತುಕೊಳ್ಳಿ' ವ್ಯಕ್ತಿಯ ಉತ್ತರ. ಒಳಕ್ಕೆ ಹೋದ ವ್ಯಕ್ತಿ ಮಜ್ಜಿಗೆಯ ಲೋಟದೊಂದಿಗೆ ಹಿಂದಿರುಗಿದರು. ಮಜ್ಜಿಗೆ ಕುಡಿದಾಯಿತು ಮಾಸ್ತಿಯವರ ಸುಳಿವಿಲ್ಲ.

"ಮಾಸ್ತಿಯವರು ಬರಲಿಲ್ಲವೇ ?"

"ಯಾಕೆ ? ನಾನೇ......ನನ್ನಿಂದ ಏನಾಗಬೇಕು ?"

ಮಾಸ್ತಿಯವರ ಸರಳತೆ ಕಂಡು ಒಂದು ಕ್ಷಣ ದಿಗ್ಭ್ರಾಂತರಾದರು. ಬಿಡುವಿನ ವೇಳೆಯಲ್ಲಿ ಆಗಾಗ್ಗೆ ಬರೆಯುತ್ತಿದ್ದ ಕವನಗಳ ಹಸ್ತಪ್ರತಿ ಜೇಬಿನಲ್ಲಿತ್ತು. ಅದನ್ನು

ಮಾಸ್ತಿಯವರ ಮುಂದಿಟ್ಟರು. ಅದರ ಮೇಲೆ ಅಲ್ಲಲ್ಲೇ ಕಣ್ಣಾಡಿಸಿ, "ಪರವಾಗಿಲ್ಲ ಚೆನ್ನಾಗಿದೆ, ಬರೆಯುವ ಕಲೆ ನಿನ್ನಲ್ಲಿ ಅಡಗಿರುವಂತಿದೆ. ಮುಂದುವರಿಸು" ಎಂದರು ಮಾಸ್ತಿ. ಶಿಫಾರಸು ಪತ್ರವನ್ನು ಜೇಬಿನಿಂದ ಹೊರತೆಗೆಯಲೂ ಇಲ್ಲ, ಕೆಲಸ ಕೇಳಲೂ ಇಲ್ಲ, ಹಾಗೆಯೇ ಹಿಂತಿರುಗಿದರು. ಇವರ ಕವನಗಳನ್ನು ಓದಿದ ಮಾಸ್ತಿ ತಾವಾಗಿಯೇ ಇವರನ್ನು ನೆನಪಿನಲ್ಲಿಟ್ಟುಕೊಂಡು ಕೆಲಸಕ್ಕಾಗಿ ಶಿಫಾರಸು ಮಾಡುತ್ತಾರೆಂಬ ಮುಗ್ಧ ನಂಬಿಕೆ ಜಿ.ವಿ.ನಾ.ದಾಗಿತ್ತು. ಒಂದೆರಡು ದಿನಗಳಲ್ಲೇ ಕೆಲಸ ದೊರೆತವರ ಪಟ್ಟಿ ಪ್ರಕಟವಾಯಿತು. ಅದರಲ್ಲಿ ಜಿ.ವಿ.ನಾ. ಹೆಸರಿಲ್ಲ ! ಪುನಃ ಕಛೇರಿಗೆ ಹೋಗಿ ಮಾಸ್ತಿಯವರನ್ನು ಕಂಡರು. ಇವರ ಮೌಢ್ಯ ಕಂಡು ಮಾಸ್ತಿಯವರಿಗೆ ನಗು ಹಾಗೂ ಕನಿಕರ. "ಅಯ್ಯೋ ಮಂಕೇ ! ಅಂದು ಬಂದಾಗಲೇ ವಿಷಯ ತಿಳಿಸಬಾರದಾಗಿತ್ತೇ ! ಈಗ ಕಾಲ ಮೀರಿ ಹೋಗಿದೆ. ಮುಂದಿನ ಸಲ ನನ್ನನ್ನು ಬಂದು ನೋಡು' ಎಂದರು.

**ಪತ್ರಿಕಾಕರ್ತ :**

'ನವಜೀವನ' ಮತ್ತು 'ಮಕ್ಕಳ ಪುಸ್ತಕ' ಅಂದಿನ ಹೆಸರಾಂತ ಮಾಸ ಪತ್ರಿಕೆಗಳು. ಶ್ರೀ ಸಿ. ಅಶ್ವತ್ಥನಾರಾಯಣರಾಯರು ಪತ್ರಿಕೆಗಳ ಒಡೆಯರು. ಶ್ರೀ ದೇವುಡು ನರಸಿಂಹಶಾಸ್ತ್ರಿ 'ಮಕ್ಕಳ ಪುಸ್ತಕ'ದ ಸಂಪಾದಕರು. ಉಪ ಸಂಪಾದಕನ ಕೆಲಸ ಜಿ.ವಿ.ನಾ.ಗೆ ದೊರೆಯಿತು. ಸಂಬಳ ರೂ 10/– ಅಮೆರಿಕಾದ 'Life' ಪತ್ರಿಕೆಯಲ್ಲಿ ಪ್ರಕಟವಾಗಿದ್ದ 'Children of the Desert' ಎಂಬ ಲೇಖನವನ್ನು ಕನ್ನಡಕ್ಕೆ ಭಾಷಾಂತರಿಸಲು ಹೇಳಿದರು. 2–3 ದಿನಗಳ ಕಾಲಾವಕಾಶ ನೀಡಿದರು. ಅಂದಿನ ಕೆಲಸವನ್ನು ಅಂದೇ ಮಾಡುವ ಸ್ವಭಾವ ಜಿ.ವಿ.ನಾ.ದ್ದು. ರಾತ್ರಿಯೇ ಕುಳಿತು ಲೇಖನ ಓದಿದರು. ಹೊತ್ತು ಮೂಡುವ ಮೊದಲೇ ಲೇಖನ ಸಿದ್ಧ, 'ಮರಳುಗಾಡಿನ ಮಕ್ಕಳು'. ಬೆಳಗ್ಗೆ ಎದ್ದವರೇ ನೇರವಾಗಿ ದೇವುಡು ಮನೆಗೇ ತೆರಳಿದರು. ಅನುವಾದಿತ ಲೇಖನ ದೇವುಡು ಕೈಸೇರಿತು. ದೇವುಡುಗೆ ಅಚ್ಚರಿ. ಒಂದೇ ರಾತ್ರಿಯಲ್ಲಿ ಅಷ್ಟು ಅಚ್ಚುಕಟ್ಟಾಗಿ ಮಾಡಿದ ಇವರ ಕಾರ್ಯೋತ್ಸಾಹ ಕಂಡು ಅವರು ಸಂತಸಪಟ್ಟರು. 'ಕಾಲೇಜಿನಲ್ಲಿ ನಿನ್ನ ಐಚ್ಛಿಕ ವಿಷಯ ಕನ್ನಡವೇ ?' ಎಂದರು. ಇಲ್ಲವೆಂದಾಗ ಅವರಿಗೆ ಮತ್ತೂ ಅಚ್ಚರಿ.

ಶ್ರೀ ಎಚ್. ಆರ್. ಕೃಷ್ಣಮೂರ್ತಿಗಳು 'ಚಲನಚಿತ್ರ' ಮಾಸ ಪತ್ರಿಕೆ ಆರಂಭಿಸಲು ಎಲ್ಲ ಸಿದ್ಧತೆ ನಡೆಸಿದ್ದರು. ಇದು ಕನ್ನಡದಲ್ಲಿ ಪ್ರಥಮ ಮಾಸಪತ್ರಿಕೆ. ಪತ್ರಿಕೆಗೆ ಕಥೆಯೊಂದನ್ನು ಬರೆದುಕೊಡುವಂತೆ ಜಿ.ವಿ.ನಾ. ಅವರನ್ನು ಕೋರಿದರು. 'ಎರಡು ಕಂಕಣ' ಕಥೆಯ ಸೃಷ್ಟಿಯಾಯಿತು. ಇದು 'ಚಲನಚಿತ್ರ'ದ ಪ್ರಥಮ ಸಂಚಿಕೆಯಲ್ಲಿ ಮೊದಲನೆಯ ಕಥೆಯಾಗಿ ಪ್ರಕಟವಾಯಿತು.

ಆ ಕಾಲದಲ್ಲಿ ಚಿಂತಾಮಣಿ ಮಹಾಲಕ್ಷ್ಮಮ್ಮ ಅಪಹರಣದ ಮೊಕದ್ದಮೆ ಮೈಸೂರು ಸಂಸ್ಥಾನದಲ್ಲೆಲ್ಲಾ ಬಹಳ ಕೋಲಾಹಲ ಎಬ್ಬಿಸಿತ್ತು. ಪತ್ರಿಕಾ ವರದಿ

ಗಾರನಾಗಿ ಮೊಕದ್ದಮೆಯ ವಾದ–ವಿವಾದದ ವರದಿ ನೀಡಲು ಶ್ರೇಷ್ಠ ನ್ಯಾಯಾಲಯಕ್ಕೆ ಹೋಗುತ್ತಿದ್ದರು. ಒಂದು ದಿನ ಇವರ ತಂದೆಯ ಪರಿಚಿತರೊಬ್ಬರು ಭೇಟಿಯಾದರು. ಜಿ.ವಿ.ನಾ.ರ ವೃತ್ತಿಯನ್ನು ಕುರಿತು ವಿಚಾರಿಸಿದರು. ಅವರು ಲೋಕೋಪಯೋಗಿ ಇಲಾಖೆಯ Chief Engineer ರವರ ಆಪ್ತ ಕಾರ್ಯದರ್ಶಿ. ಜಿ.ವಿ.ನಾ.ಗೆ ಏನಾದರೊಂದು ಒಳ್ಳೆಯ ಕೆಲಸ ಕೊಡಿಸಬೇಕೆಂದು ಅವರಿಗೆ ಮನಸ್ಸಾಯಿತು. ಬೆಂಗಳೂರು ಜಿಲ್ಲೆಯ ಕಾನ್‌ಕಾನಹಳ್ಳಿ–ಈಗಿನ ಕನಕಪುರ–ಬಳಿ ಮರಳುವಾಡಿಯಲ್ಲಿ ಹೊಸಕೆರೆ ಕಾಲುವೆ ನಿರ್ಮಾಣವಾಗುತ್ತಿತ್ತು. ಅಲ್ಲಿ ಕಾರಕೂನರ ಹುದ್ದೆಯನ್ನು ತಾತ್ಕಾಲಿಕವಾಗಿ ಜಿ.ವಿ.ನಾ.ಗೆ ದೊರಕಿಸಿಕೊಟ್ಟರು. ವೇತನ ತಿಂಗಳಿಗೆ 35ರೂ.

ಶ್ರೀ ಎಸ್. ಕರಿಯಪ್ಪನವರು ಅಲ್ಲಿ ಕೆರೆ ಕಾಲುವೆ ಕಂಟ್ರಾಕ್ಟರ್ ಆಗಿದ್ದರು. ಆಕಸ್ಮಿಕವಾಗಿ ಅವರ ಪರಿಚಯವಾಯಿತು. ಸರಳ ಸ್ವಭಾವದ ಅವರ ಪರಿಚಯ ಆತ್ಮೀಯವಾಯಿತು. ಪದವೀಧರರಾಗಿದ್ದ ಶ್ರೀ ಕರಿಯಪ್ಪನವರು ವಿದ್ಯಾರ್ಥಿನಿಲಯವೊಂದನ್ನು ನಡೆಸುತ್ತಿದ್ದರು. ಸರ್ಕಾರಿ ಮಾಧ್ಯಮಿಕ ಶಾಲೆಯ ಸುಮಾರು 30 ವಿದ್ಯಾರ್ಥಿಗಳು ಅಲ್ಲಿ ಆಶ್ರಯ ಪಡೆದಿದ್ದರು. ಹೆಸರು 'ದಯಾನಂದ ವಿದ್ಯಾರ್ಥಿನಿಲಯ' ದಯಾನಂದ ಹೆಸರು ಜಿ.ವಿ.ನಾ.ರವರನ್ನು ಬಹುವಾಗಿ ಆಕರ್ಷಿಸಿತು. ಈ ಆಕರ್ಷಣೆಯೇ ತಮ್ಮ ಮಗನಿಗೆ 'ದಯಾನಂದ' ಹೆಸರನ್ನು ಇಡಲು ಪ್ರೇರೇಪಿಸಿತು. ಜಿ.ವಿ.ನಾ. ಮತ್ತು ಎಸ್. ಕೆ. ಇವರಿಬ್ಬರಲ್ಲೂ ಇದ್ದ ಸಮಾನ ಮನೋಭಾವ, ಸಮಾನ ಚಿಂತನೆ ಇಬ್ಬರನ್ನೂ ಹತ್ತಿರ ಹತ್ತಿರಕ್ಕೆ ತಂದಿತು. ಆಗಾಗ್ಗೆ ಮರಳುವಾಡಿಯಿಂದ ಕಾನಕಾನ ಹಳ್ಳಿಗೆ ತೆರಳಿ ಎಸ್. ಕೆ.ಯವರೊಂದಿಗೆ ಎಷ್ಟೋ ವಿಷಯಗಳನ್ನು ಚರ್ಚಿಸುತ್ತಿದ್ದರು.

ಕೆರೆ ಕಟ್ಟುವ ಕೆಲಸ ಸಾಗಿದುದು ಎರಡು ವರ್ಷ, ಕೆಲಸ ಮುಗಿದಾಗ ಹೆಚ್ಚಿನ ಸಿಬ್ಬಂದಿಯನ್ನು ಸರ್ಕಾರ ತೆಗೆಯಿತು. ಜಿ.ವಿ.ನಾ. ಕಾರಕೂನರ ಹುದ್ದೆಯೂ ಅದರಲ್ಲಿ ಸೇರಿತ್ತು. ಒಂದು ದಿನ ವಿವಾಹ ಮಹೋತ್ಸವದ ಆಹ್ವಾನ ಪತ್ರಿಕೆಗಳ ಕಟ್ಟೊಂದು ಇವರ ಕೈಸೇರಿತು. "ಯಾರದಿರಬಹುದು ಇದು ?" ಎಂದು ಯೋಚಿಸುತ್ತಲೇ ಅದನ್ನು ತೆರೆದರು. ಮತ್ತೊಮ್ಮೆ ಕಣ್ಣುಜ್ಜಿ ನೋಡಿದರು. ಹೌದು ತಮ್ಮದೇ, ಮದುವೆಯ ಆಹ್ವಾನ ಪತ್ರಿಕೆ! ಚಿಕ್ಕಂದಿನಿಂದಲೂ ಚಿಕ್ಕನಾಯಕನ ಹಳ್ಳಿಯಲ್ಲಿದ್ದ ಹತ್ತಿರದ ಬಂಧುಗಳೊಬ್ಬರ ಮಗಳನ್ನು ಕೊಡಬೇಕೆಂಬ ಸಂಕಲ್ಪವಿತ್ತು. ಈಗ ಅವರ ಅರಿವಿಗೆ ಬಾರದೆಯೇ ವಿವಾಹ ನಿಶ್ಚಯವಾಗಿ ಹೋಗಿತ್ತು. ಜಿ.ವಿ.ನಾ. ಸಂತೋಷದಿಂದಲೇ ಸ್ವೀಕರಿಸಿದರು. ಲಕ್ಷಣವಾಗಿದ್ದ ಪದ್ಮ ಅವರಿಗೆ ಅರಿವಿಲ್ಲದಂತೆಯೇ ಮನಸ್ಸನ್ನು ಆಕರ್ಷಿಸಿದ್ದಳು. ಮಾವ ಶ್ರೀ ಶೇಷಾಚಾರ್ಯರದು ಚಿಕ್ಕನಾಯಕನ ಹಳ್ಳಿಯಲ್ಲಿ ಅನುಕೂಲಸ್ಥ ಮನೆತನ. ಪದ್ಮಾದೇವಿ ಅವರಕ್ಕರೆಯ ಒಬ್ಬಳೇ ಮಗಳು. ವಿವಾಹ ನೆರವೇರಿತು.

ಜವಾಬ್ದಾರಿ ಹೆಚ್ಚಾಗಿ ಮತ್ತೆ ಉದ್ಯೋಗದ ಸಮಸ್ಯೆ ಎದುರಾಯಿತು. ಸಫಿದಾರಾಷಾ ಹೆಸರಾಂತ ಕ್ರೀಡಾಪಟು. ಬೆಂಗಳೂರು ಜಿಲ್ಲೆಯ ಪೋಲೀಸ್ ಸೂಪರಿಂಟೆಂಡೆಂಟ್. ಅವರ ಭೇಟಿಯ ಫಲವೇ ಐ.ಜಿ.ಪಿ. ಆಫೀಸಿನಲ್ಲಿ ವಾಹನ ನೋಂದಾಣಿಕೆಯ ಕಾರಕೂನ ಕೆಲಸ. ಯಾವುದೇ ಕೆಲಸವಾಗಲಿ, ಅಚ್ಚುಕಟ್ಟಾಗಿ ಮಾಡುವ ಇವರ ಈ ಕಾರ್ಯಕ್ಷಮತೆ ಎಲ್ಲರ ಮೆಚ್ಚುಗೆ ಗಳಿಸಿತು. ಆದರೆ ಸ್ವತಂತ್ರ ಪ್ರವೃತ್ತಿಯ ಜಿ.ವಿ.ನಾ.ಗೆ ಕಾರಕೂನ ಕೆಲಸ ಎಂದೂ ಒಗ್ಗದ ವೃತ್ತಿ. ಈ ಕೆಲಸದಲ್ಲಿ ತಿರಸ್ಕಾರ ಮೂಡುವಂತಹ ಒಂದು ಪ್ರಸಂಗ.

ಇಂಗ್ಲಿಷ್ ಚಕ್ರಬಂಧ ಸ್ಪರ್ಧೆಗೆ ಪ್ರವೇಶಗಳನ್ನು ಕಳುಹಿಸಲು ಶ್ರೀ ಆರ್. ವಿ. ಅಯ್ಯರ್ ಎಂಬ ಮಿತ್ರರು ಜಿ.ವಿ.ನಾ. ಸಲಹೆಯನ್ನು ಪಡೆಯುತ್ತಿದ್ದರು. ಶಬ್ದ ಗಳನ್ನು ಪಡೆಯುತ್ತಿದ್ದರು. ಶಬ್ದಗಳನ್ನು ಹುಡುಕಲು ಶಬ್ದಕೋಶ ಬೇಕಾಗಿತ್ತು. ಡಿ.ಎಸ್.ಪಿ. ಕಛೇರಿಯಲ್ಲಿ Twentieth Century Dictionary ಇತ್ತು. ಮ್ಯಾನೇಜರ್ ಅನುಮತಿ ಪಡೆದು ಅದನ್ನು ಶನಿವಾರ ಸಂಜೆ ಮನೆಗೆ ಕೊಂಡೊಯ್ದರು. ಸೋಮವಾರ ಬೆಳಗ್ಗೆ ಶಬ್ದಕೋಶದೊಂದಿಗೆ ಆಫೀಸಿಗೆ ಬಂದಾಗ ಊಹೆಗೂ ನಿಲುಕದ ಪರಿಸ್ಥಿತಿ ಕಾದಿತ್ತು. ಇವರು ಬರುವ ಸ್ವಲ್ಪ ಮುಂಚೆಯೇ ಡಿ.ಎಸ್.ಪಿ. ಆಫೀಸಿಗೆ ಬಂದರು. ಯಾವುದೋ ಶಬ್ದದ ಅರ್ಥ ಹುಡುಕಲು ಶಬ್ದಕೋಶಕ್ಕಾಗಿ ಹುಡುಕಾಡಿದರು. ಅದು ಕಾಣದಾದಾಗ ಮ್ಯಾನೇಜರ್ ಮೇಲೆ ಕಿಡಿಗಾರಿದರು. ಅದೇ ಸಮಯಕ್ಕೆ ಪುಸ್ತಕದೊಂದಿಗೆ ಒಳಬಂದ ಜಿ.ವಿ.ನಾ. ತಾವು ಮ್ಯಾನೇಜರ್ ಅನುಮತಿಯಿಂದಲೇ ಪುಸ್ತಕ ಕೊಂಡೊಯ್ದುದಾಗಿ ಹೇಳಿದರು. ಆದರೆ ಅಧಿಕಾರಿಯ ಕೋಪಕ್ಕೆ ಹೆದರಿದ ಮ್ಯಾನೇಜರ್ ರಕ್ಷಣೆಗೆ ಬರಲಿಲ್ಲ. ಜಿ.ವಿ.ನಾ. ಮನಸ್ಸಿಗೆ ಬಹಳ ಬೇಸರವಾಯಿತು. ಸತ್ಯದ ಅಪಚಾರ ಸಹಿಸದಾಯಿತು. ಈ ಗುಲಾಮಗಿರಿ ಬೇಡವೆನಿಸಿ ನೌಕರಿಗೆ ತಿಲಾಂಜಲಿಯಿತ್ತು ಹೊರನಡೆದರು.

ಮುಂದೇನು ಮಾಡಬೇಕು ? ನ್ಯಾಯವಾದಿಯಾಗಬೇಕೆಂಬ ಬಯಕೆ. ಕೇವಲ ಎರಡೇ ತಿಂಗಳು ವ್ಯಾಸಂಗ ಮಾಡಿ ಸಿವಿಲ್ ಅಕೌಂಟ್ ಪರೀಕ್ಷೆಗಳಲ್ಲಿ ತೇರ್ಗಡೆಯಾದರು. ತುಮಕೂರಿನ ಪ್ರಸಿದ್ಧ ನ್ಯಾಯವಾದಿ ಶ್ರೀ ರಂಗೈಯಂಗಾರ್ಯರಲ್ಲಿ ಸಹಾಯಕರಾಗಿ ಕೆಲಸ ಪ್ರಾರಂಭಿಸಿದರು. ಶ್ರೀ ರಂಗೈಯಂಗಾರ್ಯರು ಅಗ್ರಗಣ್ಯ ದೇಶಭಕ್ತರು. ಒಂದು ದಿನ ಅವರ ಪುಸ್ತಕ ಭಂಡಾರದಲ್ಲಿ ಗಾಂಧೀಜಿಯವರ 'ಹಿಂದ್ ಸ್ವರಾಜ್' ಎಂಬ ಹೊತ್ತಗೆ ಓದುತ್ತಿದ್ದರು. ಅದರಲ್ಲಿನ ಒಂದು ವಾಕ್ಯ 'Lawyers are Liers' ಇವರ ಮನಸ್ಸನ್ನು ಚುಚ್ಚಿತು. ಇಂತಹ ವೃತ್ತಿಯನ್ನು ಹಿಡಿಯಬೇಕೆ ಎಂದು ಮನಸ್ಸು ವಿವಂಚನೆಗೊಳಗಾಯಿತು. ನ್ಯಾಯವಾದಿಯಾಗಬೇಕೆಂಬ ಹಂಬಲ ಮಾಯವಾಯಿತು.

**ರಚನಾತ್ಮಕ ಕಾರ್ಯಗಳ ಪ್ರಯೋಗಶಾಲೆ–ಕನಕಪುರ :**

೧೯೩೭ನೇ ಆಗಸ್ಟ್ ೩೧ರ ಹರಿಜನ ಪತ್ರಿಕೆಯಲ್ಲಿ ಪ್ರಕಟವಾದ, ಮಹಾತ್ಮಾ ಗಾಂಧಿಯವರ 'ನಯೀತಾಲಿಂ' (ನೂತನ ಶಿಕ್ಷಣ) ಬಗೆಗಿನ ಲೇಖನ ಜಿ.ವಿ.ನಾ. ಮನ ಸೆಳೆಯಿತು. ನೂತನ ಶಿಕ್ಷಣದಿಂದ ಭಾರತದಲ್ಲಿ ಶಿಕ್ಷಣ ಕ್ರಾಂತಿಯಾಗಬೇಕು. ಸ್ವಾತಂತ್ರ್ಯ, ಸ್ವರಾಜ್ಯ ದೊರೆಯುವಂತೆ ಆಗಬೇಕು. ರಾಜಕೀಯ, ಆರ್ಥಿಕ, ನೈತಿಕ ಮೋಕ್ಷ ದೊರೆಯಬೇಕು. ಅಹಿಂಸಕ ಕ್ರಾಂತಿಯಾಗಬೇಕು" ಎಂದು ಗಾಂಧೀ ಪ್ರತಿಪಾದಿಸಿದ್ದರು. ಇದನ್ನು ಓದಿದ ಕೂಡಲೇ ಕನಕಪುರ. ಅಲ್ಲಿಯ ಪರಿಸರ. ದಯಾನಂದ ವಿದ್ಯಾರ್ಥಿ ನಿಲಯ, ಶ್ರೀ ಎಸ್. ಕೆ. ಅವರೊಡನೆ ವಿಚಾರ ವಿನಿಮಯ ನೆನಪಾಯಿತು. ಸದ್ಯಕ್ಕೆ ತಮ್ಮ ಕಾರ್ಯಕ್ಷೇತ್ರ ಅದೇ ಅನ್ನಿಸಿತು. ದಯಾನಂದ ವಿದ್ಯಾರ್ಥಿ ನಿಲಯವನ್ನು ರಾಷ್ಟ್ರೀಯ ಶಿಕ್ಷಣ ಕೇಂದ್ರವನ್ನಾಗಿ ಪರಿವರ್ತಿಸಬೇಕು. ಗಾಂಧೀರಚನಾತ್ಮಕ ಕಾರ್ಯಗಳಲ್ಲಿ ಒಂದಾದ ನಯೀತಾಲೀನ ಪ್ರಯೋಗಶಾಲೆಯಾಗಬೇಕು ಎನ್ನುವ ತಮ್ಮ ಕನಸುಗಳನ್ನು ಎಸ್. ಕೆ. ಮುಂದಿಟ್ಟರು. ಆಗಲೇ ಸಾರ್ವಜನಿಕ ಜೀವನದಲ್ಲಿ ಪ್ರತಿಷ್ಠಿತ ಸ್ಥಾನ ಗಳಿಸಿದ್ದ, ರಾಷ್ಟ್ರೀಯ ಭಾವನೆಯಿಂದ ಪ್ರೇರಿತರಾಗಿದ್ದ, ಮಕ್ಕಳ ಏಳಿಗೆಗಾಗಿ ತನು. ಮನ. ಧನಗಳನ್ನು ಸಮರ್ಪಿಸಿಕೊಂಡಿದ್ದ ನೈತಿಕ ಬ್ರಹ್ಮಚಾರಿ ಎಸ್. ಕರಿಯಪ್ಪನವರು ರಾಷ್ಟ್ರಸೇವಾಕಾಂಕ್ಷೆಯಿಂದ ಮಿಡಿಯುವ ಹೃದಯ ಹೊತ್ತ ಜಿ.ವಿ.ನಾ. ಇಬ್ಬರೂ ಬಹು ಉತ್ಸಾಹದಿಂದ ಕಾರ್ಯೋನ್ಮುಖರಾದರು. ಸ್ವಲ್ಪ ಕಾಲದಲ್ಲೇ 'ದಯಾನಂದ ವಸತಿ ವಿದ್ಯಾಲಯ' ಶಿಕ್ಷಣ–ವಸತಿ ಎರಡನ್ನೂ ನೀಡುವ ಸಂಸ್ಥೆಯಾಗಿ ಮೈದಳೆಯಿತು. ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳು ಪ್ರಾರಂಭವಾದವು. ಸರ್ಕಾರಿ ಶಿಕ್ಷಣದ ವ್ಯವಸ್ಥೆಯ ಜೊತೆಯಲ್ಲೇ ನಯೀತಾಲಿಂ ಕಾರ್ಯರೂಪಕ್ಕೆ ಬಂದಿತು. ತೋಟಗಾರಿಕೆ. ನೂಲುವುದು. ಕೈ ಕಾಗದ ತಯಾರಿಕೆ, ಕೋಳಿ ಸಾಕಣೆ. ಜೇನು ಸಾಕಣೆ. ಸಾಮೂಹಿಕ ಜೀವನ ರೀತಿ. ನೀತಿ. ಸ್ವಾವಲಂಬನೆ, ಪ್ರಾರ್ಥನೆ–ಭಜನೆಗಳು ಬಹಳ ಪ್ರಾಮುಖ್ಯತೆ ಪಡೆದವು. ಶಿಕ್ಷಣದಲ್ಲಿ ಇಂತಹ ಪ್ರಯೋಗ ಮೈಸೂರು ಸಂಸ್ಥಾನದಲ್ಲೇ ಮೊದಲು. ಅಂದು ಕುಟೀರದಲ್ಲಿ ಆರಂಭವಾದ ಸಂಸ್ಥೆ ಇಂದು ಬೃಹದ್ರೂಪ ತಾಳಿ ನಿಂತಿದೆ. ಸುಮಾರು 2,500 ವಿದ್ಯಾರ್ಥಿಗಳಿಗೆ ಜ್ಞಾನದಾನ ನೀಡುವ ಕೇಂದ್ರವಾಗಿದೆ. ಅದೇ ಗ್ರಾಮ ವಿದ್ಯಾ ಪ್ರಚಾರಕ ಸಂಘ.

**ಮರಳಿ ಊರಿಗೆ :**

[illegible] ತಂದೆ ಕಾಯಿಲೆಯೆಂದು ಊರಿನಿಂದ ವರ್ತಮಾನ ಬಂತು. ಚನ್ನನಾಯಕನಹಳ್ಳಿಗೆ ಬಂದರು. ತಂದೆಯವರಿಗೆ ಕ್ಷಯರೋಗವೆಂದು ತಿಳಿಯಿತು. ಚಿಕಿತ್ಸೆಗಾಗಿ ಮೈಸೂರಿಗೆ ಕರೆದೊಯ್ಯಬೇಕೆಂದು ವೈದ್ಯರು ಸಲಹೆ ಮಾಡಿದರು. ಮೈಸೂರು ಮತ್ತು ಬೆಂಗಳೂರಿನ ಆಸ್ಪತ್ರೆಗಳಲ್ಲಿ ಒಂದೆರಡು ತಿಂಗಳ ಚಿಕಿತ್ಸೆಯಿಂದಾಗಿ ಆರೋಗ್ಯ ಸ್ವಲ್ಪ ಸುಧಾರಿಸಿದಂತೆ ತೋರಿ ಬಂದು ವಿಶ್ರಾಂತಿಗಾಗಿ ತುಮಕೂರಿಗೆ ಕರೆದು

ಕೊಂಡು ಹೋದರು. ಆರೋಗ್ಯ ಉತ್ತಮಗೊಂಡಿತೆಂಬ ಸಮಾಧಾನದಿಂದ ಪುನಃ ಬರುವುದಾಗಿ ಹೇಳಿ ಕನಕಪುರಕ್ಕೆ ಮರಳಿದರು. ಆದರೆ ಮನಸ್ಸಿನ ನೆಮ್ಮದಿ ಹೆಚ್ಚು ದಿನ ಉಳಿಯಲಿಲ್ಲ. ಎರಡು ಮೂರು ದಿನಗಳಲ್ಲೇ ತಂತಿ ವರ್ತಮಾನ ಬಂತು ಮಾವನವರು ನಿಧನರಾಗಿದ್ದಾರೆಂದು. ಊರಿಗೆ ಧಾವಿಸಿ ಬಂದರು. ಮಾವನವರಿಗೆ ಗಂಡು ಮಕ್ಕಳಿಲ್ಲದ ಕಾರಣ ಇವರೇ ಆ ಸ್ಥಾನದಲ್ಲಿ ನಿಂತು ಉತ್ತರಕ್ರಿಯಾದಿಗಳನ್ನು ನೆರವೇರಿಸಿದರು. ಹಿರಿಯರೆಲ್ಲರ ಸಲಹೆ, ಒತ್ತಾಯಗಳಿಗೆ ಮಣಿದು, ಮನೆಯ ಜವಾಬ್ದಾರಿಗೆ ಹೆಗಲನ್ನು ಕೊಡಬೇಕಾಯಿತು. ಕನಕಪುರಕ್ಕೆ ಮತ್ತೆ ಹೋಗಲಾಗಲಿಲ್ಲ. ಅಲ್ಲಿಂದ ಮುಂದೆ ಜಿ.ವಿ.ನಾ. ಚಿಕ್ಕನಾಯಕನಹಳ್ಳಿಯನ್ನೇ ಕಾರ್ಯಕ್ಷೇತ್ರವನ್ನಾಗಿಸಿಕೊಂಡರು.

**ಚಟುವಟಿಕೆಗಳ ಕೇಂದ್ರ**

ಊರಿಗೆ ಮರಳಿದ ಜಿ.ವಿ.ನಾ.ಗೆ ಕೆಲಸವೇನೂ ಇರಲಿಲ್ಲ. ಪಾಠಶಾಲೆಯ ಶಿಕ್ಷಣ ದಿಂದ ವಂಚಿತರಾದ ವಯಸ್ಕರಿಗೆ ಅವರ ಬಿಡುವಿನ ವೇಳೆ ರಾತ್ರಿಯಲ್ಲಿ ಅಕ್ಷರ ಅಭ್ಯಾಸ ಮಾಡಿಸಿ ಸಂಘಟಿಸಬಾರದೇಕೆ ಎನ್ನಿಸಿತು. ಆಲೋಚನೆ ಕಾರ್ಯರೂಪಕ್ಕೆ ತಿರುಗಿ ರಾತ್ರಿ ಪಾಠಶಾಲೆ ಪ್ರಾರಂಭವಾಯಿತು. ಆಗಿನ್ನೂ ಮೈಸೂರು ರಾಜ್ಯ ವಯಸ್ಕರ ಶಿಕ್ಷಣ ಸಮಿತಿ ಆರಂಭವಾಗಿರಲಿಲ್ಲ. ಅಕ್ಷರಾಭ್ಯಾಸದ ಜೊತೆ ಜೊತೆಗೇ ರಾಷ್ಟ್ರದ ಬಗ್ಗೆ ತಿಳುವಳಿಕೆ ನೀಡುವುದು, ನಾಟಕಗಳನ್ನಾಡಿಸುವುದು, ಪ್ರಚಲಿತ ವಿಷಯಗಳ ಬಗ್ಗೆ ಚರ್ಚಾಸ್ಪರ್ಧೆ ಏರ್ಪಡಿಸುವುದು ಮುಂತಾದ ಕಾರ್ಯಕ್ರಮಗಳು ಬಿರುಸಿನಿಂದ ನಡೆಯುತ್ತಿದ್ದವು. ನಲವತ್ತು ವರ್ಷಕ್ಕೂ ಮೇಲ್ಪಟ್ಟ ವಯಸ್ಕರು ಉತ್ಸಾಹದಿಂದ ಪಾಲ್ಗೊಳ್ಳುತ್ತಿದ್ದರು. ಇದೊಂದು ಮಾದರಿಯ ಕಾರ್ಯ.

ಶ್ರೀ ಎನ್. ಎಸ್. ಅನಂತರಂಗಾಚಾರ್ಯರು ಸ್ಥಳೀಯ ಮಾಧ್ಯಮಿಕ ಶಾಲೆ ಯಲ್ಲಿ ಸಂಸ್ಕೃತ ಅಧ್ಯಾಪಕರು. ಆಳವಾದ ಪಾಂಡಿತ್ಯ ಅವರದು. ಅವರ ಜೊತೆ ಸೇರಿ, ಕರ್ನಾಟಕ ಸಂಘವನ್ನು ಆರಂಭಿಸಿ ಕನ್ನಡದ ಹಲವಾರು ಕಾರ್ಯಗಳ ಕಡೆ ಗಮನ ಕೊಟ್ಟರು, ಜಿ.ವಿ.ನಾ.

ಸ್ವಾತಂತ್ರ್ಯ ಪ್ರಾಪ್ತಿಗಾಗಿ ಅಖಿಲ ಭಾರತ ಕಾಂಗ್ರೆಸ್ ನೇತೃತ್ವದಲ್ಲಿ ಮೈಸೂರು ಕಾಂಗ್ರೆಸ್ ಸಮಿತಿ ಹೋರಾಟ ನಡೆಸುತ್ತಿತ್ತು. ಆ ಹೋರಾಟದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳಬೇಕೆಂದು ಜಿ.ವಿ.ನಾ. ಮನಸ್ಸು ತುಡಿಯುತ್ತಿತ್ತು. ಶ್ರೀ ಎಂ. ಎಸ್. ಹನುಮಂತರಾಯರು ಉತ್ಸಾಹೀ ಕಾಂಗ್ರೆಸ್ ಕಾರ್ಯಕರ್ತ. ಈ ಮೊದಲೇ ಅರಣ್ಯ ಸತ್ಯಾಗ್ರಹದಲ್ಲಿ ಭಾಗವಹಿಸಿ ಸೆರೆಮನೆವಾಸ ಅನುಭವಿಸಿದ್ದ ಅವರೊಂದಿಗೆ ಸೇರಿ ಕಾಂಗ್ರೆಸ್‌ನ ಚಟುವಟಿಕೆಗಳನ್ನು ಆರಂಭಿಸಿದರು.

1942, ಭಾರತದ ಸ್ವಾತಂತ್ರ್ಯ ಹೋರಾಟದ ಉಚ್ಛ್ರಾಯ ಕಾಲ. 'ಮಾಡು ಇಲ್ಲವೆ ಮಡಿ' ಎಂದು ಅಂತಿಮ ಹೋರಾಟದ ಕಹಳೆಯನ್ನೂದಿ ಗಾಂಧೀಜಿ ಸತ್ಯಾಗ್ರಹ

ಆರಂಭಿಸಿದ್ದರು. ದೇಶದ ಮೂಲೆ ಮೂಲೆಗಳಲ್ಲೂ ಸತ್ಯಾಗ್ರಹ, ಲಾಠಿಛಾರ್ಜ್, ಗೋಳಿಬಾರ್, ಕೈಸೆರೆಗಳು ನಡೆಯುತ್ತಿದ್ದವು. ಚಿಕ್ಕನಾಯಕನಹಳ್ಳಿಯೇನೂ ಈ ವಿಷಯ ದಲ್ಲಿ ಹಿಂದುಳಿಯಲಿಲ್ಲ. 1942ರಲ್ಲಿ ಗಾಂಧೀ ಜಯಂತಿ ಆಚರಿಸಲು ನಿರ್ಧರಿಸಿ ಸ್ವಯಂ ಸೇವಕ ಪಡೆಯೊಂದಕ್ಕೆ ಶಿಸ್ತಿನ ತರಪೇತನ್ನು ನೀಡಿ ಸಿದ್ಧಗೊಳಿಸಿದರು. ಇವರ ಮಾರ್ಗದರ್ಶನದಲ್ಲಿ ಚಳುವಳಿ ಅಹಿಂಸಾಯುತವಾಗಿ, ಪರಿಣಾಮಕಾರಿಯಾಗಿ ನಡೆಯುತ್ತಿತ್ತು. ಇದರ ಫಲ ಜೆ.ವಿ.ನಾ. ಮೇಲೆ ಸರ್ಕಾರದ ಕೆಂಗಣ್ಣು. ಇವರ ಬಂಧನವೂ ಆಗಬಹುದೆಂಬ ವದಂತಿ ಪ್ರಬಲವಾಗಿ ಹರಡಿತ್ತು. ಅದೇಕೋ ಬಂಧನ ವಾಗಲಿಲ್ಲ.

ಹೀಗೆ ಜೆ.ವಿ.ನಾ. ಮನೆ ಎಲ್ಲ ಕಾರ್ಯಚಟುವಟಿಕೆಗಳ ಕೇಂದ್ರವಾಗಿತ್ತು.

**ರಾಷ್ಟ್ರೀಯ ಶಿಕ್ಷಣ–ದೇಶೀಯ ವಿದ್ಯಾಪೀಠ**

ಶ್ರೀ ಸಿ. ಎಚ್. ಲಿಂಗದೇವರು ತಾಲ್ಲೂಕಿನ ಜನಪ್ರಿಯ ನಾಯಕರು. ಅಂದಿನ ಪ್ರಜಾ ಪ್ರತಿನಿಧಿ ಸಭೆಯ ಅತ್ಯಂತ ಕಿರಿಯ ವಯಸ್ಸಿನ ಚುನಾಯಿತ ಸದಸ್ಯರು. ಸಾರ್ವ ಜನಿಕ ಸೇವಾಕಾಂಕ್ಷಿಗಳು. ಕಾಂಗ್ರೆಸ್ ಚಟುವಟಿಕೆಗಳಲ್ಲಿ ಬಹಳ ಆಸಕ್ತಿ. ಅವರೂ ಖಾದಿ ಧರಿಸುತ್ತಿದ್ದರು. ಈ ಸಮಾನ ಮನೋಭಾವವೇ ಜೆ.ವಿ.ನಾ.ರವರನ್ನು ಅವರತ್ತ ಎಳೆಯಿತು. ಪರಿಚಯ ಗಾಢ ಮೈತ್ರಿಯಾಯಿತು.

ಆಗ ಚಿ.ನಾ.ಹಳ್ಳಿ ತಾಲ್ಲೂಕಿನಲ್ಲಿ ಪ್ರೌಢಶಾಲೆ ಇರಲಿಲ್ಲ. ಅದಕ್ಕಾಗಿ ತುಮಕೂರಿಗೋ, ತಿಪಟೂರಿಗೋ, ಹೋಗಬೇಕಾಗಿತ್ತು. ಬಹುತೇಕ ಬಡತನದಿಂದ ಕೂಡಿದ ಜನತೆಗೆ ತಮ್ಮ ಮಕ್ಕಳನ್ನು ಪರ ಊರಿಗೆ ಕಳುಹಿಸಿ, ಓದಿಸುವ ಚೈತನ್ಯವಿರ ಲಿಲ್ಲ. ಕೆಲಸವೂ ಇಲ್ಲದೆ, ಶಿಕ್ಷಣವೂ ಇಲ್ಲದೆ ಯುವಕರ ಶಕ್ತಿ ಅಪವ್ಯಯವಾಗುತ್ತಿತ್ತು. ಶಿಕ್ಷಣ ಕ್ಷೇತ್ರದಲ್ಲಿ ಅನೇಕ ಪ್ರಯೋಗ ಮಾಡಿದ ಅನುಭವ ಜೆ.ವಿ.ನಾ.ಗೆ ಈಗಾಗಲೇ ಆಗಿತ್ತು. ಇಲ್ಲಿಯೇ ಪ್ರೌಢಶಾಲೆಯನ್ನು ಆರಂಭಿಸಬೇಕೆಂಬ ಕಲ್ಪನೆ ಮೂಡಿಬಂತು. ಈ ಭಾವನೆಗೆ ಲಿಂಗದೇವರು ಇಂಬುಗೊಟ್ಟರು. ರಾಷ್ಟ್ರದಲ್ಲೆಲ್ಲ ಸ್ವಾತಂತ್ರ್ಯ ಕಹಳೆ ಮೊಳಗುತ್ತಿದ್ದ ಕಾಲ. ಭಾರತೀಯರು [illegible] ಗುಲಾಮಗಿರಿಯ ದಟ್ಟವಾದ ಮೋಹವಲಯದಲ್ಲಿ ಸಿಲುಕಿ ಹೊರಬರಲಾರದೆ ಚಡಪಡಿಸುತ್ತಿತ್ತು. ಇಂತಹ ರಾಷ್ಟ್ರೀಯ ಪ್ರಕ್ಷೋಭೆಯ ಕಾಲದಲ್ಲಿ 1943ರಲ್ಲಿ ದೇಶೀಯ ವಿದ್ಯಾಪೀಠ ಶಿಕ್ಷಣ ಸಂಸ್ಥೆ ಮೈದಾಳಿತು. ಇದು ತುಮಕೂರು ಜಿಲ್ಲೆಯಲ್ಲೇ ಪ್ರಥಮ ಖಾಸಗಿ ಪ್ರೌಢಶಾಲೆ. ರಾಷ್ಟ್ರೀಯ ಶಿಕ್ಷಣವೇ ಪ್ರಧಾನ ಗುರಿಯಾಗಿ 1944 ಜೂನ್ 2ರಂದು ದೇಶೀಯ ವಿದ್ಯಾಪೀಠ ಪ್ರೌಢಶಾಲೆ ಪ್ರಾರಂಭವಾಯಿತು. ವಿದ್ಯಾರ್ಥಿಗಳಲ್ಲಿ ದಾಸ್ಯ ಶೃಂಖಲೆಯನ್ನು ಹರಿದೊಗೆಯುವ ಕೆಚ್ಚನ್ನು ತುಂಬಬೇಕು. ರಾಷ್ಟ್ರಾಭಿಮಾನ ಮಹಾಪೂರವಾಗಿ ಹರಿಯ ಬೇಕು. ಆತ್ಮಗೌರವ. ಶೀಲವ್ಯಕ್ತಿತ್ವ. ಶಿಸ್ತು. ಸಂಯಮಗಳನ್ನು ಯುವ ಪೀಳಿಗೆಯಲ್ಲಿ

ತುಂಬಿ ಸಾತ್ವಿಕ ವೀರ ತೇಜಸ್ಸಿನ ಯುವಕ ಯುವತಿಯರನ್ನು ರಾಷ್ಟ್ರೀಯ ಹೋರಾಟಕ್ಕೆ ಸಜ್ಜುಗೊಳಿಸಬೇಕು, ಇದೇ ವಿದ್ಯಾಪೀಠದ ಗುರಿ.

ಶಿಕ್ಷಣ ಸೇವೆಗಾಗಿಯೇ ತಮ್ಮ ಬಾಳನ್ನು ನಿಸ್ವಾರ್ಥ ಭಾವದಿಂದ ಅರ್ಪಿಸಿಕೊಂಡ ಇಬ್ಬರು ಕಾರ್ಯಕರ್ತರು ಶ್ರೀ ಜಿ. ತ. ಈಶ್ವರನ್ ಮತ್ತು ಶ್ರೀ ಜಿ. ನ. ಕೃಷ್ಣರಾವ್– ಜಿ.ವಿ.ನಾ.ರ ಹೆಗಲಿಗೆ ಹೆಗಲಾಗಿ ಜೊತೆಗೂಡಿದರು.

ಪ್ರೌಢಶಾಲೆ ಆರಂಭವಾಯಿತು. ಏಳು ವರ್ಷದಿಂದ ಸತತವಾಗಿ ಮಳೆಯಿಲ್ಲದ ಕ್ಷಾಮದ ದುಷ್ಕಾಲ. ಶಾಲೆಗೆ ಪ್ರಾರಂಭದಲ್ಲಿ ಸರ್ಕಾರದ ಅನುಮತಿಯೂ ದೊರೆತಿರಲಿಲ್ಲ. ಮಹಾರಾಜರ ಸರ್ಕಾರ ಶಾಲೆಯನ್ನೂ, ಕಾರ್ಯಕರ್ತರನ್ನೂ ಸಂಶಯದ ದೃಷ್ಟಿಯಿಂದಲೇ ನೋಡುತ್ತಿತ್ತು. ಅಗತ್ಯವಾದರೆ ಶಾಂತಿನಿಕೇತನದ ಅಂಗಸಂಸ್ಥೆಯನ್ನಾಗಿ ಮಾಡುವ ಯೋಜನೆ ಸ್ಥಾಪಕರದಾಗಿತ್ತು. ಇನ್ನು ಸರ್ಕಾರದಿಂದ ಅನುದಾನ ಪಡೆಯುವುದೆಲ್ಲಿ ? ಹಣ ಸಂಗ್ರಹ ಕಾರ್ಯ ಪ್ರಾರಂಭವಾಯಿತು. ಶಾಲೆಯ ವಿದ್ಯಾರ್ಥಿಗಳು, ಅಧ್ಯಾಪಕರು ಕೈಯಲ್ಲಿ ಹುಂಡಿಗಳನ್ನು ಹಿಡಿದು ರಾಷ್ಟ್ರಭಕ್ತಿಗೀತೆಗಳನ್ನು ಹಾಡುತ್ತಾ ಸಂತೆಯಲ್ಲಿ ಸುತ್ತುತ್ತಿದ್ದರು. ಇವರ ಮುಂಚೂಣಿಯಲ್ಲಿ ಜಿ.ವಿ.ನಾ.

ಶಾಲೆಯಲ್ಲಿ ಅಧ್ಯಾಪಕ ಕಾರ್ಯವನ್ನು ಮಾಡುವ ಆಸೆ ಜಿ.ವಿ.ನಾ.ದ್ದು. ಆದರೆ ಪದವೀಧರರಾಗಿಲ್ಲವೆಂಬ ಕೊರತೆ ಇದ್ದೇ ಇತ್ತು. ಇವರ ಮಿತ್ರರೊಬ್ಬರು ಕಲ್ಕತ್ತಾ ವಿಶ್ವವಿದ್ಯಾನಿಲಯದ ಬಿ.ಎ. ಪರೀಕ್ಷೆಗೆ ಖಾಸಗಿಯಾಗಿ ಕುಳಿತು ವ್ಯಾಸಂಗಮಾಡುತ್ತಿದ್ದರು. ಆಗ 1944. ಪ್ರಪಂಚದ ಮಹಾಯುದ್ಧ ಭಾರತದ ಅಂಚಿನವರೆಗೂ ಬಂದಿದ್ದ ಕಾಲ. ಮಿತ್ರರಿಗೆ ಕಲ್ಕತ್ತಾದಷ್ಟು ದೂರದ ಊರಿಗೆ ಒಬ್ಬರೇ ಹೋಗಲು ಆತಂಕ. ತಮ್ಮ ಆತಂಕವನ್ನು ಜಿ.ವಿ.ನಾ.ರಲ್ಲಿ ತೋಡಿಕೊಂಡರು. ತಾವೂ ಏಕೆ ಮಿತ್ರರ ಜೊತೆಯಲ್ಲಿ ಪರೀಕ್ಷೆಗೆ ಕೂಡಬಾರದು ? ಅರ್ಜಿ ಕಳಿಸಲು ಅವಕಾಶವಾಗಲೇ ಮೀರಿತ್ತು. ನೋಡೋಣವೆಂದು ತಮ್ಮ ಆಶಯವನ್ನು ಪತ್ರ ಮುಖೇನ ವಿಶ್ವವಿದ್ಯಾನಿಲಯಕ್ಕೆ ಬರೆದುಕೊಂಡರು. ಯೋಗಾಯೋಗದಿಂದ ಇವರ ಪತ್ರ ತಲುಪಿದ ದಿನವೇ ವಿಶ್ವವಿದ್ಯಾನಿಲಯದ ಸೆನೆಟ್ ಸಭೆ ಸೇರಿತ್ತು. ಇವರ ಕೋರಿಕೆ ಪರಿಶೀಲನೆಗೆ ಬಂದು ಪರೀಕ್ಷೆಗೆ ಕೂಡಲು ಅನುಮತಿ ದೊರಕೇ ಬಿಟ್ಟಿತು. ಈ ವೇಳೆಗಾಗಲೇ ಕಾಲೇಜು ಬಿಟ್ಟು 12 ವರ್ಷವಾಗಿತ್ತು. ಆದರೂ ಇವರಿಗೆ ಕಷ್ಟವೆನಿಸಲಿಲ್ಲ. ಕೇವಲ ಎರಡೇ ತಿಂಗಳು ಅಧ್ಯಯನಕ್ಕೆ. ಇಂಗ್ಲಿಷ್, ಕನ್ನಡ, ಅರ್ಥಶಾಸ್ತ್ರಗಳನ್ನು ತೆಗೆದುಕೊಂಡು ಪರೀಕ್ಷೆಗಾಗಿ ಪ್ರಯಾಣ ಸನ್ನದ್ಧರಾದರು.

ಜಿ.ವಿ.ನಾ.ಗೆ ಸರಸ್ವತಿಯ ಅನುಗ್ರಹ ಚೆನ್ನಾಗಿದ್ದರೂ ಲಕ್ಷ್ಮೀ ಕಟಾಕ್ಷ ಮಾತ್ರ ಎಂದೂ ಬೀಳಲಿಲ್ಲ. ಈಗಲೂ ಪ್ರಯಾಣಕ್ಕೆ ಹಣವೇ ಇಲ್ಲ. ಆ ಸಮಯದಲ್ಲಿ ನೆರವಿಗೆ ಬಂದವರು ಗೆಳೆಯ ಲಿಂಗದೇವರು. ಪ್ರಯಾಣಕ್ಕೋ, ಇತರ ವೆಚ್ಚಕ್ಕೋ

ಬೇಕಾದ ಹಣ ಒದಗಿಸಿದರು. ಮಿತ್ರರೊಂದಿಗೆ ಕಲ್ಕತ್ತೆಗೆ ಪಯಣ. ಸತತ ಐದು ದಿನಗಳ ಪ್ರಯಾಣದಿಂದಲೋ, ಆಹಾರದ ವ್ಯತ್ಯಾಸದಿಂದಲೋ ಮೊದಲೇ ಇದ್ದ ಮೂಲವ್ಯಾಧಿ ಬಹಳ ತ್ರಾಸ ಕೊಡಲಾರಂಭಿಸಿತು. ಪರೀಕ್ಷೆಯ ಹಿಂದಿನ ದಿನ ಪೂರ್ತಿ ಹೋಟಲಿನ ಕೋಣೆಯಲ್ಲಿ ಯಾತನೆ ಅನುಭವಿಸಿದರು. ವಿಶ್ವವಿದ್ಯಾನಿಲಯದ ಕಛೇರಿಗೆ ಹೋಗಿ ಪರೀಕ್ಷೆಯ ಪ್ರವೇಶ ಪತ್ರವನ್ನು ಖುದ್ದಾಗಿ ಪಡೆಯಲಾಗಲಿಲ್ಲ.

ಪರೀಕ್ಷೆಯ ದಿನ ಹೋಮಿಯೋಪತಿ ವೈದ್ಯರಿಂದ ಔಷಧಿ ಪಡೆದು ಹೇಗೋ 15 ನಿಮಿಷ ಮುಂಚೆ ಪರೀಕ್ಷಾ ಕೇಂದ್ರದ ಬಳಿ ಹೋದರು. ವಿಶ್ವವಿದ್ಯಾನಿಲಯದ ಕಛೇರಿ ಮುಚ್ಚಿದ್ದರಿಂದ ಪ್ರವೇಶ ಪತ್ರ ದೊರೆಯಲಿಲ್ಲ. ನಿರಾಶರಾಗಿ ಪರೀಕ್ಷಾ ಕೊಠಡಿಯ ಹೊರಗಿನ ವರಾಂಡದಲ್ಲಿ ಕುಳಿತಿದ್ದಾಗ ಇವರ ಅದೃಷ್ಟವೋ ಎಂಬಂತೆ ಅಧಿಕಾರಿಯೊಬ್ಬರು ಆ ಕಡೆ ಬಂದರು. ಜಿ.ವಿ.ನಾ. ಅವರಲ್ಲಿ ತಮ್ಮ ಪರಿಸ್ಥಿತಿ ಹೇಳಿಕೊಂಡರು. ಇವರು ಇಂಗ್ಲಿಷ್‌ನಲ್ಲಿ ಮಾತನಾಡುವ ವೈಖರಿ ಅವರ ಮನ ಸೆಳೆದಿರಬೇಕು. ಕೂಡಲೇ ಇವರಿಗೆ ಪರೀಕ್ಷೆಯಲ್ಲಿ ಪ್ರತ್ಯೇಕ ಆಸನ ವ್ಯವಸ್ಥೆ ಮಾಡಿಕೊಟ್ಟು ಅರ್ಧ ಘಂಟೆಯಲ್ಲೇ ಪ್ರವೇಶಪತ್ರವನ್ನು ತರಿಸಿಕೊಟ್ಟರು. ಪರೀಕ್ಷೆಯಲ್ಲಿ ಚೆನ್ನಾಗಿಯೇ ಬರೆದರು. ಬಿ.ಎ. ಪದವೀಧರರೂ ಆದರು. ಪದವಿ ಕೇವಲ ಅರ್ಹತಾ ಪತ್ರಕ್ಕಾಗಿ ಮಾತ್ರ. ಹತ್ತು ಪದವಿಗಳೂ ಗಳಿಸಿಕೊಡಲಾರದ ಜ್ಞಾನವನ್ನು ಈ ಮೊದಲೇ ಅವರು ಸ್ವಪ್ರಯತ್ನ, ಸ್ವಾಧ್ಯಯನದಿಂದ ಗಳಿಸಿಕೊಂಡಿದ್ದರು.

**ಸತ್ಯಾಗ್ರಹಿಗಳ ಶಾಲೆ**

೧೯೪೭ ಆಗಸ್ಟ್ ೧೫ರಂದು ಭಾರತದಲ್ಲಿ ಸ್ವಾತಂತ್ರ್ಯ ಉದಯ. ಮೈಸೂರು ರಾಜ್ಯದಲ್ಲಿ ಅರಸರ ಪ್ರಭುತ್ವ ಅಂತ್ಯವಾಗಿರಲಿಲ್ಲ. ಜವಾಬ್ದಾರಿ ಸರ್ಕಾರದ ಸ್ಥಾಪನೆಗಾಗಿ ಚಳುವಳಿ ಆರಂಭವಾಯಿತು. ಆಗ ದೇಶೀಯ ವಿದ್ಯಾಪೀಠ ಹೋರಾಟದ ಕೇಂದ್ರ. ಶಾಲೆ ಸತ್ಯಾಗ್ರಹಿಗಳ ಶಾಲೆಯಾಗಿ ಪರಿಣಮಿಸಿತ್ತು. ಅದು ವಿದ್ಯಾರ್ಥಿಗಳನ್ನು ಸತ್ಯಾಗ್ರಹಕ್ಕೆ ಸಜ್ಜುಗೊಳಿಸಿದ ರೀತಿ ಅಪೂರ್ವವಾಗಿತ್ತು. ಹೆಚ್ಚು ಕಡಿಮೆ ಎಲ್ಲ ವಿದ್ಯಾರ್ಥಿಗಳೂ ಸ್ವಯಂಪ್ರೇರಣೆಯಿಂದ ಹೋರಾಟದ ಕಣಕ್ಕಿಳಿದರು. ಇಡೀ ಚಿಕ್ಕನಾಯಕನಹಳ್ಳಿ ತಾಲ್ಲೂಕಿನಲ್ಲಿ ಹೋರಾಟದ ಸಂಘಟನೆಯ ಹೊಣೆ ಹೊತ್ತವರು ಜಿ.ವಿ.ನಾ. ಅವರ ನೇತೃತ್ವದಲ್ಲಿ ಯಾವ ಹಿಂಸಾಕೃತ್ಯಗಳಿಗೂ ಅವಕಾಶವಾಗದಂತೆ ಸಭೆ, ಮೆರವಣಿಗೆ, ಸರ್ಕಾರಿ ಕಛೇರಿಗಳ ಸರ್ಪಗಾವಲು. ಮದ್ಯ ಮಾರುವ ಅಂಗಡಿಗಳ ಮುಂದೆ ಪಿಕೆಟಿಂಗ್ ವ್ಯವಸ್ಥಿತವಾಗಿ ನಡೆಯುತ್ತಿತ್ತು. ಪ್ರತಿದಿನವೂ ಆರಿಸಲ್ಪಟ್ಟ ಸತ್ಯಾಗ್ರಹಿಗಳು ಕಾನೂನು ಭಂಗ ಮಾಡಿ ಬಂಧನಕ್ಕೊಳಗಾಗುತ್ತಿದ್ದರು. ಮೊದಲ ದಿನವೇ ಕಾಯಿದೆ ಭಂಗ ಮಾಡಿ ಬಂಧನಕ್ಕೊಳಗಾದವರು ಶ್ರೀ ಜಿ.ವಿ.ನಾ. ಅನಂತರ ಸಂಘದ ಅಧ್ಯಕ್ಷರಾದ ಲಿಂಗದೇವರು. ಹನುಮಂತರಾವ್. ಮುರುಡಯ್ಯ ಮುಂತಾದ 35–40 ಮಂದಿ. ಬಂಧನದ

ಸರಪಳಿಯ ಕೊನೆಯಲ್ಲಿ ಅಧ್ಯಾಪಕರುಗಳಾದ ಜಿ. ತ. ಈಶ್ವರನ್ ಮತ್ತು ಜಿ. ಸ. ಕೃಷ್ಣ ರಾವ್ ಇಬ್ಬರನ್ನೂ ವಿದ್ಯಾರ್ಥಿಗಳನ್ನು ಅಪ್ರತ್ಯಕ್ಷವಾಗಿ ಪ್ರಚೋದಿಸುತ್ತಿದ್ದಾರೆಂಬ ಆರೋಪದ ಮೇಲೆ ಬಂಧಿಸಿದರು. ಕೊನೆಗೂ ಪ್ರಜಾಭಿಪ್ರಾಯಕ್ಕೆ ಮಣಿದು, ರಾಜ್ಯದಲ್ಲಿ ಆಳರಸರ ಪ್ರಭುತ್ವ ಕೊನೆಗೊಂಡು, ಸತ್ಯಾಗ್ರಹಿಗಳ ಬಿಡುಗಡೆಯಾದಾಗ ಅವರಿಗೆ ದೊರೆತ ಸ್ವಾಗತ ಅಭೂತಪೂರ್ವ. ಆಗ ವಿದ್ಯಾಪೀಠದ ವಿದ್ಯಾರ್ಥಿಯಾಗಿ ಸ್ವಲ್ಪ ಮಟ್ಟಿಗೆ ಚಳುವಳಿಯಲ್ಲಿ ಭಾಗವಹಿಸಿದ್ದ ನನ್ನ ಕಣ್ಣ ಮುಂದೆ ಈಗಲೂ ಆ ದೃಶ್ಯಗಳು ಸುಳಿದು ಮರೆಯಾಗುತ್ತವೆ.

**ಸಮರ್ಥ ಅಧ್ಯಾಪಕ**

ವಿದ್ಯಾಪೀಠದ ಸರ್ವತೋಮುಖ ಅಭಿವೃದ್ಧಿಗಾಗಿ ಅವಿರತ ನಿಸ್ವಾರ್ಥ ಭಾವದಿಂದ ದುಡಿದವರು ಜಿ.ವಿ.ನಾ. ಅಧ್ಯಾಪಕರಾಗಿ, ಕಾರ್ಯದರ್ಶಿಯಾಗಿ, ಎಲ್ಲಕ್ಕಿಂತ ಮಿಗಿಲಾಗಿ ಎಲ್ಲರ ಹಿರಿಯಣ್ಣನಂತೆ ಮಾರ್ಗದರ್ಶನ ಮಾಡುತ್ತಿದ್ದರು. ಇವರ ಕನ್ನಡ ಹಾಗೂ ಇಂಗ್ಲಿಷ್ ತರಗತಿಗಳು ಬಲು ಸೊಗಸು. ಎಂತಹ ಗಹನ ವಿಷಯವೇ ಆಗಲಿ, ಸರಳವಾಗಿ, ಮನಮುಟ್ಟುವಂತೆ ಬೋಧಿಸುತ್ತಿದ್ದರು. ಇವರ ಬೋಧನಕ್ರಮ ವೈಶಿಷ್ಟ್ಯಪೂರ್ಣ. ಎಂದೂ ವಿದ್ಯಾರ್ಥಿಗಳಿಗೆ ನೋಟ್ಸ್ ಬರೆಸುತ್ತಿರಲಿಲ್ಲ. ತರಗತಿಯಲ್ಲಿ ವಿಷಯಗಳನ್ನು ವಿವರಿಸುವಾಗ, ನಾವು ವಿದ್ಯಾರ್ಥಿಗಳು ಬರೆದುಕೊಳ್ಳುತ್ತಿದ್ದೆವು. ಅದನ್ನೆಲ್ಲಾ ಸೇರಿಸಿ ಬರೆದಾಗ ಸೊಗಸಾದ ನೋಟ್ಸ್ ಸಿದ್ಧವಾಗುತ್ತಿತ್ತು.

ತತ್ವಗಳು ಬರೀ ಬಾಯಿಯಲ್ಲಿ ಹೇಳಲಿಕ್ಕಷ್ಟೇ ಅಲ್ಲ. ಎಲ್ಲ ಕ್ಷೇತ್ರದಲ್ಲೂ ಅವುಗಳನ್ನು ಅನುಷ್ಠಾನಕ್ಕೆ ತರಬೇಕೆನ್ನುವ ಹಂಬಲವುಳ್ಳವರು ಜಿ.ವಿ.ನಾ. ೧೯೫೧ನೇ ಇಸವಿ. ವಿದ್ಯಾಪೀಠ ತನ್ನ ಉದ್ದೇಶ ಸಾಧನೆಯಲ್ಲಿ ತಕ್ಕಮಟ್ಟಿಗೆ ಪ್ರಗತಿ ಸಾಧಿಸಿತ್ತು. ಆದರೆ ಬೆಳೆಯುತ್ತಿರುವ ವಿದ್ಯಾರ್ಥಿಸಂಖ್ಯೆಗನುಗುಣವಾಗಿ ಸ್ವಂತ ಕಟ್ಟಡವಿರಲಿಲ್ಲ. ಅದಕ್ಕಾಗಿ ಹಣ ಸಂಗ್ರಹಿಸಲು ಲಾಟರಿ ಯೋಜನೆಯನ್ನು ಕೈಗೊಳ್ಳಬೇಕೆಂದು ಸಂಸ್ಥೆಯ ಬಹುಮಂದಿ ಸದಸ್ಯರ ಅಭಿಪ್ರಾಯ. ಜಿ.ವಿ.ನಾ.ರವರಿಂದ ಇದಕ್ಕೆ ಪ್ರಬಲವಾದ ವಿರೋಧ : ಸಾವಿರಾರು ಮಂದಿಗೆ ಆಮಿಷ ತೋರಿ ಕೆಲವೇ ಮಂದಿ ಪ್ರಯೋಜನ ಪಡೆಯುವ ಲಾಟರಿ ಯೋಜನೆಯನ್ನು ಶಿಕ್ಷಣ ಸಂಸ್ಥೆಯಲ್ಲಿ ಜಾರಿಗೊಳಿಸುವುದು ಜಿ.ವಿ.ನಾ. ಮನಸ್ಸಿಗೆ ಒಪ್ಪದ ವಿಷಯ. ಇದರಿಂದ ಮಕ್ಕಳಿಗೆ ಹಿರಿಯರೇ ಅಸಾಧುವಾದ ಮೇಲ್ಪಂಕ್ತಿ ಹಾಕಿಕೊಟ್ಟಂತೆ ಆಗುವುದು ಎನ್ನುವುದು ಅವರ ಅಭಿಮತ. ಆದರೆ ಇವರಷ್ಟು ವಿಚಾರದ ಔನ್ನತ್ಯಕ್ಕೆ ಏರುವ ಸದಸ್ಯರಿಲ್ಲದುದು ದುರ್ದೈವ. ಈ ಭಿನ್ನಾಭಿಪ್ರಾಯದಿಂದಾಗಿ ಬಹುಮತಕ್ಕೆ ಮನ್ನಣೆ ಕೊಟ್ಟು ಜಿ.ವಿ.ನಾ. ಸಂಸ್ಥೆಯಿಂದ ಹೊರಬಂದರು.

**ಸರ್ವೋದಯ ಕಾರ್ಯಕರ್ತ**

೧೯೫೧–೫೨ರಲ್ಲಿ ಸರ್ವೋದಯ, ಭೂದಾನ, ಅಹಿಂಸಾ ಕ್ರಾಂತಿಯ ಮೂಲಕ ರಾಷ್ಟ್ರದ ನಿರ್ಮಾಣ. ಈ ವಿಚಾರಗಳ ಪ್ರತಿಪಾದನೆ ಮಾಡುತ್ತಾ ವಿನೋಬಾ ರಾಷ್ಟ್ರದಾದ್ಯಂತ

ಪಾದಯಾತ್ರೆ ಕೈಗೊಂಡಿದ್ದರು. ಜಿ.ವಿ.ನಾ. ರವರ ಮನಸ್ಸು ಸರ್ವೋದಯದತ್ತ ವಾಲಿತು. ಶ್ರೀ ಅರ್ಕೈಯರ್, ಶ್ರೀ ಬಾದ್ರಿಶಾಮಣ್ಣ, ಶ್ರೀ ಬಾಸುಕೃಷ್ಣಮೂರ್ತಿ ಶ್ರೀ ಬೆಳಗುಂಬದ ನಾರಣಪ್ಪ, ಸ್ವಾಮಿ ವಿಶ್ವಾನಂದ ಇವರುಗಳ ಜೊತೆಯಲ್ಲಿ ಚಿಕ್ಕನಾಯಕನಹಳ್ಳಿ ತಾಲ್ಲೂಕಿನಲ್ಲಿ ಪಾದಯಾತ್ರೆ ಪ್ರಾರಂಭಿಸಿದರು. ಮೊದಲಿನಿಂದಲೂ ಬರೆಯುವ ಕಲೆಯನ್ನು ರೂಢಿಸಿಕೊಂಡಿದ್ದ ಜಿ.ವಿ.ನಾ. ಪತ್ರಿಕೆಗಳಲ್ಲಿ ಪುಂಖಾನುಪುಂಖ ವಾಗಿ ಲೇಖನಗಳನ್ನು ಬರೆದರು.

ಶ್ರೀ ಮಾ.ಕೃ. ನರಸಿಂಹಯ್ಯನವರು ತುರುವೇಕೆರೆ ತಾಲ್ಲೂಕು ಮಾಯಸಂದ್ರದ ಗಣ್ಯವ್ಯಕ್ತಿ. ಮುಂಬಯಿ ಸರ್ಕಾರದಲ್ಲಿ ಅಸಿಸ್ಟೆಂಟ್ ಎಂಜಿನಿಯರ್ ಆಗಿದ್ದರು. ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮುಕಿ ಸರ್ಕಾರಿ ಕೆಲಸಕ್ಕೆ ರಾಜೀನಾಮೆಯಿತ್ತು ಹಿಂದಿರುಗಿದ್ದರು. ತಾಲ್ಲೂಕಿನ ರಾಜಕೀಯ ಚಟುವಟಿಕೆಗಳಲ್ಲಿ ಅವರ ಪಾತ್ರ ಗಣನೀಯ ವಾಗಿತ್ತು. ಉಪಯುಕ್ತವಾದ ಶಾಶ್ವತವಾದ ಸಾರ್ವಜನಿಕ ಕಾರ್ಯವನ್ನು ಮಾಡ ಬೇಕೆಂದು ಅವರ ಅಪೇಕ್ಷೆ. ಜಿ.ವಿ.ನಾ. ರವರ ವ್ಯಕ್ತಿತ್ವ ಅವರನ್ನು ಆಕರ್ಷಿಸಿತು. ಸರ್ವೋದಯ ತತ್ವಗಳ ಆಧಾರದ ಮೇಲೆ ವಿದ್ಯಾಕೇಂದ್ರವೊಂದನ್ನು ಮಾಯಸಂದ್ರ ದಲ್ಲಿ ಆರಂಭಿಸಬೇಕೆಂದು ಇಬ್ಬರೂ ನಿರ್ಧರಿಸಿದರು. ಇದರ ಫಲವೇ 'ಸರ್ವೋದಯ ಶಿಕ್ಷಣ ಸಂಸ್ಥೆ.' ಈ ಸಂಸ್ಥೆಯ ಆಶ್ರಯದಲ್ಲಿ ನಡೆಯಬೇಕಾದ ಪ್ರೌಢಶಾಲೆಯ ರೂಪುರೇಷೆಗಳೆಲ್ಲ ಸಿದ್ಧವಾದವು, ೧೯೫೨ ರಲ್ಲಿ.

ಈ ಹೊತ್ತಿಗೆ ಗಾಂಧೀ ಸ್ಮಾರಕ ನಿಧಿಯ ಕಾರ್ಯದರ್ಶಿಗಳಾದ ಶ್ರೀ ಶ್ರೀಧರ ಧೋತ್ರೆ ಬೆಂಗಳೂರಿಗೆ ಭೇಟಿ ಇತ್ತರು. ಶ್ರೀ ಧೋತ್ರೆ ವಿನೋಬಾಜಿಯವರ ನಿಕಟವರ್ತಿಗಳು, ಗಾಂಧೀ ವಿಚಾರ ಪ್ರಣಾಲಿಕೆಯಲ್ಲಿ ಶ್ರದ್ಧೆಯಿರುವ ಕಾರ್ಯಕರ್ತರನ್ನು ಭೇಟಿ ಮಾಡಿದರು. ಭೇಟಿ ಮಾಡಿದವರಲ್ಲಿ ಒಬ್ಬನಾದ ಜಿ.ವಿ.ನಾ. ಬಗ್ಗೆ ಅವರು ಬಹುವಾದ ಆಸಕ್ತಿ ತೋರಿದರು. ಸರ್ವೋದಯ ಕಾರ್ಯದ ಬಗ್ಗೆ ಸಂಶೋಧನಾ ಕಾರ್ಯ ಮಾಡಲು ಸಮರ್ಥರಾದ ಕಾರ್ಯಕರ್ತರನ್ನು ಅವರು ಹುಡುಕುತ್ತಿದ್ದರು. ಸ್ವಾಭಾವಿಕವಾಗಿಯೇ ಜಿ.ವಿ.ನಾ. ಅವರನ್ನು ಧೋತ್ರೆ ಆಹ್ವಾನಿಸಿದರು. ಸಂಶೋಧನಾ ಕೇಂದ್ರ ವರ್ಧಾದಲ್ಲಿತ್ತು. ಜಿ.ವಿ.ನಾ.ಗೂ ಈ ಕಾರ್ಯ ಪ್ರಿಯವಾದದ್ದೇ. ಸುಮಾರು ಎಂಟು ತಿಂಗಳು ವರ್ಧಾದಲ್ಲಿದ್ದು 'ಸರ್ವೋದಯ ಮತ್ತು ರಾಜ್ಯಶಾಸ್ತ್ರ' ಎಂಬ ವಿಷಯದ ಬಗ್ಗೆ ಪ್ರೌಢ ಪ್ರಬಂಧ ಸಿದ್ಧಗೊಳಿಸಿದರು. ಜನತಾ ಸರ್ಕಾರದಲ್ಲಿ ಕೇಂದ್ರ ಮಂತ್ರಿಗಳಾಗಿದ್ದ ಶ್ರೀ ರವೀಂದ್ರವರ್ಮ, ಶಾಂತಿದೂತರಾಗಿ ಕಾಲುನಡಿಗೆಯಲ್ಲಿ ಪ್ರಪಂಚ ಪರ್ಯಟನೆ ಕೈಗೊಂಡಿದ್ದ ಇ.ಪಿ. ಮೆನನ್, ಪ್ರೊಫೆಸರ್ ಎಸ್.ಕೆ. ಜಾರ್ಜ್ ಮುಂತಾದವರು ಇವರ ಸಹಕಾರ್ಯಕರ್ತರು. ಈ ಸಂಶೋಧನಾ ಕೇಂದ್ರ ವರ್ಧಾದಿಂದ ದೆಹಲಿಗೆ ವರ್ಗಾವಣೆ ಹೊಂದಿತು. ಮನೆಯಲ್ಲಿನ ಪರಿಸ್ಥಿತಿಯಿಂದಾಗಿ ದೆಹಲಿಗೆ ಹೋಗಿ ಸಂಶೋಧನಾ ಕಾರ್ಯವನ್ನು ಮುಂದುವರಿಸಲು ಜಿ.ವಿ.ನಾ.ಗೆ ಸಾಧ್ಯವಾಗಲಿಲ್ಲ.

**ಸರ್ವೋದಯ ಶಾಲೆ**

ವರ್ಧಾದಿಂದ ಹಿಂದಿರುಗುವ ವೇಳೆಗೆ ಮಾಯಸಂದ್ರದಲ್ಲಿ ಪ್ರೌಢಶಾಲೆ ಆರಂಭಿಸಲು ಸಕಲ ಸಿದ್ಧತೆಗಳೂ ನಡೆದಿದ್ದವು. ವರ್ಧಾದಿಂದಲೇ ಆಗಾಗ್ಗೆ ಸೂಕ್ತ ನಿರ್ದೇಶನಗಳನ್ನು ನೀಡುತ್ತಿದ್ದರು. ಈ ಶಿಕ್ಷಣ ಸಂಸ್ಥೆಯನ್ನು ಆರಂಭಿಸುವ ಮುನ್ನ ಜಿ.ವಿ.ನಾ. ಸಮಿತಿಯ ಸದಸ್ಯರಿಗೆ ಕಾರ್ಯಕರ್ತರಿಗೆ ಒಂದು ನೀತಿ ಸಂಹಿತೆಯನ್ನು ನಿರೂಪಿಸಿದರು.

i) ಸಮಿತಿಯ ಸದಸ್ಯರೆಲ್ಲ ಖಾದಿಧಾರಿಗಳಾಗಬೇಕು.

ii) ಸಭೆ ಸೇರುವ ಮುನ್ನ ಪ್ರತಿಯೊಬ್ಬರೂ ಅರ್ಧಗಂಟೆ ಚರಕಾದಿಂದಾಗಲೀ, ತಕಲಿಯಿಂದಾಗಲೀ ನೂಲಬೇಕು.

iii) ಮನೆಯಲ್ಲಿ ನೂತ ನೂಲಿನಲ್ಲಿ ಒಂದೊಂದು ಲಡಿದಾರವನ್ನು ತಂದು ಸಂಘಕ್ಕೆ ಅರ್ಪಿಸಬೇಕು.

iv) ಸದಸ್ಯರಾರೂ ಪ್ರತ್ಯಕ್ಷ ರಾಜಕಾರಣದಲ್ಲಿ ಭಾಗವಹಿಸಕೂಡದು.

ಇವು ಕೆಲವು ನಿಯಮಗಳು. ಸಂಹಿತೆಗೆ ಒಪ್ಪಿಗೆ ಕೊಟ್ಟವರನ್ನೇ ಸಂಘದ ಕಾರ್ಯಕಾರಿ ಸಮಿತಿಗೆ ನೇಮಕ ಮಾಡಿಕೊಳ್ಳಲಾಗಿತ್ತು. ಮಾ.ಕೃ. ನರಸಿಂಹಯ್ಯನವರು ಸಂಸ್ಥೆಯ ಅಧ್ಯಕ್ಷರಾಗಿದ್ದರು.

ಸಂಘದ ಅಂಗಸಂಸ್ಥೆ 'ನೆಹರೂ ಪ್ರೌಢಶಾಲೆ' ಸುಮಾರು ಎರಡು ಮೈಲಿ ದೂರದ ಊರ ಹೊರಗಿನ ಪ್ರಶಾಂತ ವಾತಾವರಣದಲ್ಲಿ ಸ್ಥಾಪಿತವಾಯಿತು. ಅದು ಭೂತದ ಬಂಗಲೆಯೆಂದು ಪ್ರಸಿದ್ಧವಾದ ಪ್ರವಾಸಿ ಮಂದಿರ. ಮಂದಿರದ ಸುತ್ತಲೂ ವಿಶಾಲವಾದ ಬಯಲು. ಅಲ್ಲಲ್ಲಿ ನೆರಳು ನೀಡುವ ಮರಗಳು. ತರಗತಿಗಳಿಗಾಗಿ ಕುಟೀರಗಳು ನಿರ್ಮಾಣವಾದವು. ವಿದ್ಯಾರ್ಥಿಗಳ ಅಶನ–ವಸತಿಗಳಿಗಾಗಿ ವಿದ್ಯಾರ್ಥಿ ನಿಲಯ ಆರಂಭವಾಯಿತು. ಅಧ್ಯಾಪಕರಿಗೂ ವಿದ್ಯಾರ್ಥಿಗಳ ಜೊತೆಯಲ್ಲೇ ವಾಸ. ನಿಲಯವಾಸಿಗಳು ಸರದಿಯ ಮೇಲೆ ಅಡಿಗೆ ಮತ್ತು ನೈರ್ಮಲ್ಯ ಕಾರ್ಯವನ್ನು ಮಾಡುತ್ತಿದ್ದರು. ಸಾಮೂಹಿಕ ಪ್ರಾರ್ಥನೆ, ಸಾಮೂಹಿಕ ಸೂತ್ರಯಜ್ಞ, ನೀತಿಪಾಠಗಳು ಇಲ್ಲಿನ ವಿಶೇಷ ಚಟುವಟಿಕೆಗಳು. ಶಾಂತಿನಿಕೇತನದ ಪ್ರತಿರೂಪವೆನಿಸುತ್ತಿತ್ತು ಸರ್ವೋದಯ ಶಾಲೆ.

ಈ ವಿದ್ಯಾಸಂಸ್ಥೆ ರಾಜ್ಯದ ರಚನಾತ್ಮಕ ಕಾಯಕರ್ತರ, ರಾಜಕಾರಿಣಿಗಳ, ವಿದ್ಯಾಪರಿಣಿತರ ಮನವನ್ನು ಸೆಳೆಯಿತು. ಭಾರತಸೇವಾದಳ, ಭಾರತ ಸೇವಕ ಸಮಾಜ, ಸರ್ವೋದಯ ಸಂಸ್ಥೆ, ಕಾಂಗ್ರೆಸ್ ಸಂಸ್ಥೆಯ ಕಾರ್ಯಕರ್ತರ ಹಲವಾರು ತರಪೇತಿ ಶಿಬಿರಗಳು; ಸೇವಾ ಶಿಬಿರಗಳು ಇಲ್ಲಿಯೇ ಏರ್ಪಾಟಾದವು. ವಿನೋಬಾಜಿ ಕರ್ನಾಟಕದಲ್ಲಿ ಪಾದಯಾತ್ರೆ ಕೈಗೊಂಡಿದ್ದ ಸಮಯದಲ್ಲಿ ಈ ಸಂಸ್ಥೆಯ ಪರಿಸರದಲ್ಲಿ ಒಂದು ದಿನ ತಂಗಿದ್ದರೆಂಬುದು ಹೆಮ್ಮೆಯ ಸಂಗತಿ.

ನಡೆ-ನುಡಿಗಳಲ್ಲಿ ಸಾಮರಸ್ಯ ಇರಬೇಕೆಂಬುದು ಜಿ.ವಿ.ನಾ. ಖಚಿತ ಅಭಿಪ್ರಾಯ. ಆ ಮೂಲ ತತ್ವಕ್ಕೆ ಅಪ್ರೋಪವಾದರೆ ? ಸಂಘದ ಅಧ್ಯಕ್ಷರಾದ ಮಾ.ಕೈ. ನರಸಿಂಹಯ್ಯ ನವರು ರಾಜ್ಯದ ವಿಧಾನಸಭೆ ಚುನಾವಣೆಯಲ್ಲಿ ಉಮೇದುವಾರರಾಗಲು ನಿರ್ಧರಿಸಿದರು. ಅವರ ಕೆಲವು ಮಿತ್ರ ಸದಸ್ಯರು ಅನುಮೋದಿಸಿದರು. ಸಂಘದ ಅಧ್ಯಕ್ಷರ ಈ ನಿಲುವು ಜಿ.ವಿ.ನಾ.ಗೆ ಬೇಸರ ತಂದಿತು. ತಾವೇ ಸಂಘದಿಂದ ದೂರವಾದರು. ಆದರೆ ತಾವು ಹೊರಬರುವ ಮುನ್ನ ಸಹ ಅಧ್ಯಾಪಕರಾಗಿದ್ದ ಶ್ರೀ ಎನ್. ಗೋವಿಂದ ರಾವ್ ಅವರನ್ನು ಬಿ.ಎಡ್. ತರಪೇತಿಗೆ ಕಳಿಸಿ, ತಮ್ಮ ಹೊಣೆಯನ್ನು ಅವರ ಹೆಗಲಿಗೇರಿಸಿ ಚಿಕ್ಕನಾಯಕನಹಳ್ಳಿಗೆ ಹಿಂದಿರುಗಿದರು. ಇಂದು ಆ ಸಂಸ್ಥೆಯ ಆಶ್ರಯದಲ್ಲಿ ಎರಡು ಪ್ರೌಢಶಾಲೆಗಳು, ಒಂದು ಕಿರಿಯ ಕಾಲೇಜು ನಡೆಯುತ್ತಿವೆ.

**ಗಾಂಧೀ ತತ್ವ ಪ್ರಚಾರಕರಾಗಿ**

ಗಾಂಧೀಜಿಯವರ ಜೀವನ ಮತ್ತು ವಿಚಾರಧಾರೆಯನ್ನು ಸಾಮಾನ್ಯ ಜನತೆಗೆ ತಿಳಿಸುವ ಕಾರ್ಯವನ್ನು ಗಾಂಧೀ ಸ್ಮಾರಕ ನಿಧಿ ಕೈಗೊಂಡಿತ್ತು. ಇದರ ಅಂಗವಾಗಿ ಜಿ.ವಿ.ನಾ. ವ್ಯವಸ್ಥಿತ ಕಾರ್ಯಕ್ರಮವನ್ನು ಹಾಕಿಕೊಂಡರು. ಸಮಾನ ಅಭಿರುಚಿಯ ಮಿತ್ರರನ್ನು ಅಲ್ಲಲ್ಲೇ ಕಲೆ ಹಾಕಿ ಹಲವಾರು ಸರ್ವೋದಯ ವ್ಯಾಸಂಗಗೋಷ್ಠಿಗಳನ್ನು ಆರಂಭಿಸಿದರು. ವ್ಯಾಸಂಗಕ್ಕೆ ನೆರವಾಗುವಂತೆ ಗೋಷ್ಠಿಗಳಿಗೆ ಗಾಂಧೀ ಸ್ಮಾರಕ ನಿಧಿಯಿಂದ ಪುಸ್ತಕಭಂಡಾರಗಳನ್ನು ಒದಗಿಸಿಕೊಟ್ಟರು. ಈ ಗೋಷ್ಠಿಯಲ್ಲಿ ಪ್ರತಿವಾರ ಸದಸ್ಯರು ಯಾವುದಾದರೂ ಗ್ರಂಥದ ವಾಚನ, ಚರ್ಚೆ ಮೊದಲಾದ ಬೌದ್ಧಿಕ ಕಾರ್ಯಗಳಲ್ಲಿ ನಿರತರಾಗುತ್ತಿದ್ದರು. ಚಿಕ್ಕನಾಯಕನಹಳ್ಳಿ ವ್ಯಾಸಂಗ ಗೋಷ್ಠಿಯು ಗಾಂಧೀ ಶತಮಾನೋತ್ಸವ ವರ್ಷದಲ್ಲಿ [೧೯೬೯] ಇವರ ನೇತೃತ್ವದಲ್ಲಿ ವೈಶಿಷ್ಟ್ಯಪೂರ್ಣ ಕಾರ್ಯಕ್ರಮವನ್ನು ನಿಯೋಜಿಸಿತು. ಇಡೀ ವರ್ಷದಲ್ಲಿ ಪ್ರತಿವಾರ ಹಳ್ಳಿಗಳಿಗೆ ಗೋಷ್ಠಿಯ ಸದಸ್ಯರು ಕಾಲುನಡಿಗೆಯಲ್ಲಿ ಹೋಗಿ; ಹಳ್ಳಿಯವರೊಡಗೂಡಿ ಗ್ರಾಮನೈರ್ಮಲ್ಯ, ಸಾಮೂಹಿಕ ಪ್ರಾರ್ಥನೆ ಸರ್ವೋದಯ ತತ್ವವಿಚಾರ, ಗ್ರಾಮಗಳಿಗೆ ಅಗತ್ಯವಾದ ಸೌಕರ್ಯದ ಬಗ್ಗೆ ವಿವೇಚಿಸಿ ಸಂಬಂಧಪಟ್ಟ ಸರ್ಕಾರದ ಅಧಿಕಾರಿಗಳ ಗಮನಕ್ಕೆ ತರುವುದು, ಈ ಕಾರ್ಯಕ್ರಮಗಳನ್ನು ನಡೆಸುತ್ತಿದ್ದರು.

ಈ ವೇಳೆಗಾಗಲೇ ಮೈಸೂರಿನಲ್ಲಿ ಕನ್ನಡದಲ್ಲಿ ಗಾಂಧೀ ಗ್ರಂಥಮಾಲೆಯ ಕಾರ್ಯ ಆರಂಭವಾಗಿತ್ತು. ಶ್ರೀ ಎಂ. ಯಾಮುನಾಚಾರ್ಯರು ಪ್ರಧಾನ ಸಂಪಾದಕರು. ಗ್ರಂಥಮಾಲೆಗಾಗಿ ಜಿ.ವಿ.ನಾ. ಚಿಕ್ಕನಾಯಕನಹಳ್ಳಿಯಲ್ಲೇ ಇದ್ದುಕೊಂಡು 'ನೀತಿ ಮತ್ತು ಧರ್ಮ' ಗ್ರಂಥವನ್ನು ಅನುವಾದಿಸಿಕೊಟ್ಟರು. ಇವರ ಕೆಲಸದ ಅಚ್ಚುಕಟ್ಟು ವ್ಯವಸ್ಥಾಪಕರ ಮೆಚ್ಚುಗೆ ಗಳಿಸಿತು. ಸಹಾಯಕ ಸಂಪಾದಕರಾಗಿ ಇವರ ಪೂರ್ಣಾವಧಿ ಸೇವೆಯನ್ನು ಗ್ರಂಥಮಾಲೆ ಬಯಸಿತು. ಕೆಲವು ವರ್ಷ ಮೈಸೂರಿನಲ್ಲಿ ನೆಲಸಿ ಇಪ್ಪತ್ತೆರಡು ಸಂಪುಟಗಳು ಕನ್ನಡದಲ್ಲಿ ಪ್ರಕಾಶಗೊಳ್ಳಲು ಕಾರಣರಾದರು.

ಈ ಕಾಲದಲ್ಲಿ ಮೈಸೂರು ಮತ್ತು ಜಿಲ್ಲೆಯ ಬಹುತೇಕ ಸಂಘಸಂಸ್ಥೆಗಳು, ಶಾಲಾ ಕಾಲೇಜುಗಳು ಇವರನ್ನು ಆಹ್ವಾನಿಸಿ ಉಪನ್ಯಾಸದ ಲಾಭ ಪಡೆದವು. ವಿಶ್ವವಿದ್ಯಾನಿಲಯದ ಅನೇಕ ಸೆಮಿನಾರುಗಳಲ್ಲಿ ಭಾಗವಹಿಸಿದರು. ಮೈಸೂರಿನಲ್ಲಿ ಇದ್ದ ಕಾಲ ಜಿ.ವಿ.ನಾ.ಗೆ ತುಂಬ ನೆಮ್ಮದಿ ತಂದಿತು.

೧೯೭೧ರಲ್ಲಿ ದೇಶೀಯ ವಿದ್ಯಾಪೀಠದ ಅಧ್ಯಕ್ಷರಾಗಿದ್ದ ಶ್ರೀ ಲಿಂಗದೇವರು ಆಕಸ್ಮಿಕವಾಗಿ ನಿಧನರಾದರು. ಸಂಸ್ಥೆಯ ಕಾರ್ಯಕರ್ತರು, ಅಭಿಮಾನಿಗಳು ಚಿಂತೆಗೊಳಗಾದರು. ರಾಜಕೀಯದಿಂದ ದೂರವಾಗಿ, ಎಲ್ಲರ ಆದರ ಅಭಿಮಾನಗಳಿಗೆ ಪಾತ್ರರಾದ, ನಿಸ್ವಾರ್ಥದಿಂದ ಸಂಸ್ಥೆಗಾಗಿ ದುಡಿಯಬಲ್ಲ ಅಧ್ಯಕ್ಷರು ಬೇಕಾಗಿತ್ತು. ಜಿ.ವಿ.ನಾ. ಅವರೇ ಈ ಸ್ಥಾನಕ್ಕೆ ಅರ್ಹವ್ಯಕ್ತಿಯೆಂದು ಎಲ್ಲರೂ ಸರ್ವಾನುಮತದ ತೀರ್ಮಾನಕ್ಕೆ ಬಂದರು. ಕಾರ್ಯಕರ್ತ ಮಿತ್ರರ, ಅಭಿಮಾನಿಗಳ ಒತ್ತಾಯಕ್ಕೆ ಮಣಿದು ಜಿ.ವಿ.ನಾ. ಅಧ್ಯಕ್ಷರಾಗಿ ಸಂಸ್ಥೆಗೆ ನವಚೈತನ್ಯ ತಂದರು. ವಿದ್ಯಾಪೀಠ ೧೯೭೩ರಲ್ಲಿ ವೈಭವದಿಂದ ರಜತಮಹೋತ್ಸವವನ್ನು ಆಚರಿಸಿಕೊಂಡಿತು.

೧೯೭೮ರ ನವಂಬರ್‌ನಲ್ಲಿ ಜಿ.ವಿ.ನಾ. ಪಾರ್ಶ್ವವಾಯು ಪೀಡಿತರಾಗಿ ಹಾಸಿಗೆ ಹಿಡಿದರು. ಹಲವಾರು ತಿಂಗಳ ಚಿಕಿತ್ಸೆಯನಂತರ, ಅದಕ್ಕಿಂತ ಹೆಚ್ಚಾಗಿ ಅವರ ಪ್ರಬಲ ಇಚ್ಛಾಶಕ್ತಿಯ ಪರಿಣಾಮದಿಂದ ಬಹುಮಟ್ಟಿಗೆ ಈಗ ಚೇತರಿಸಿಕೊಂಡಿದ್ದಾರೆ. ಇಂದೂ ಅವರ ಅಧ್ಯಯನ, ಚಿಂತನ ಎಂದಿನಂತೆ ಸಾಗುತ್ತಲೇ ಇದೆ. ಬರೆಯಲು ಚೈತನ್ಯ ಪುಟಿದಾಗ, ಅದನ್ನು ತಕ್ಷಣ ಕಾಗದದ ಮೇಲೆ ಮೂಡಿಸಲು ಕೈ ಓಡಲಾರದು. ಅಂತಹ ಸಮಯದಲ್ಲಿ ಯಾರಿಂದಲಾದರೂ ಬರೆಸುತ್ತಾರೆ. ಹೀಗೆ ಅವರ ಲೇಖನ ವ್ಯವಸಾಯ ನಿರಂತರವಾಗಿ ಸಾಗಿದೆ.

**ಸಾಹಿತಿಯಾಗಿ ಜಿ.ವಿ.ನಾ.**

ಚಿಕ್ಕಂದಿನಿಂದಲೇ ಮೈಗೂಡಿದ್ದ ವ್ಯಾಸಂಗ, ಚಿಂತನ, ಬರಹ, ಚಿಕ್ಕನಾಯಕನಹಳ್ಳಿಯಲ್ಲಿ ನೆಲೆಸಿದ ಮೇಲೆ ವಿಸ್ತಾರವಾಗುತ್ತಾ ಹೋಯಿತು. ೧೯೪೪ರಲ್ಲಿ ಮಹಾಶಿವರಾತ್ರಿಯ ಪುಣ್ಯದಿನದಂದು ಕಸ್ತೂರಿಬಾ ಬಾಪೂವಿನ ತೊಡೆಯ ಮೇಲೆ ಆಗಾಖಾನ್ ಸೆರೆಮನೆಯಲ್ಲಿ ಕೊನೆಯುಸಿರೆಳೆದರು. ಆ ದಾರುಣ ವಾರ್ತೆಯಿಂದ ಜಿ.ವಿ.ನಾ. ಮನಸ್ಸಿನ ಮೇಲೆ ಆದ ಪರಿಣಾಮವೇ 'ಸತಿ ಕಸ್ತೂರಿಬಾ'. ಇದು ಅವರ ಮೊಟ್ಟಮೊದಲನೆಯ ಸ್ವತಂತ್ರ ಕೃತಿ. 'ಹಿಂದೂಧರ್ಮ' 'ಸಾಧನ ಪಥ,' 'ಗಾಂಧೀ ಸಾಹಿತ್ಯ' ಮತ್ತು 'ವಿನೋಬಾ ಜೀವನ ದರ್ಶನ' ಮುಂದೆ ಬೆಳಕು ಕಂಡ ಕೃತಿಗಳು. 'ವಿನೋಬಾ ಜೀವನ ದರ್ಶನ' ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಗಳಿಸಿದ ಕೃತಿ. ರಾಜ್ಯ ವಯಸ್ಕರ ಶಿಕ್ಷಣ ಸಮಿತಿಗಾಗಿ 'ಶರಣ ಸಂಗ,' 'ಗೀತಾ ಪತ್ರಗಳು,' 'ಸಂತ ವಿನೋಬಾ' ಪುಸ್ತಕಗಳನ್ನು ಸುಲಲಿತವಾದ ಭಾಷೆಯಲ್ಲಿ ಬರೆದಿದ್ದಾರೆ.

ಮಕ್ಕಳಿಗಾಗಿ ಬಹು ಸುಲಭವಾದ ಶೈಲಿಯಲ್ಲಿ ರಾಷ್ಟ್ರೋತ್ಥಾನ ಪರಿಷತ್ತಿನ 'ಭಾರತ ಭಾರತಿ ಪುಸ್ತಕ ಸಂಪದ' ಯೋಜನೆಯಡಿಯಲ್ಲಿ ಇವರ ಈ ಪುಸ್ತಕಗಳು ಬೆಳಕು ಕಂಡಿವೆ :—'ನಾರಾಯಣ ಗುರು.' 'ಮಹಾತ್ಮಾಗಾಂಧಿ.' 'ಗೋಪಾಲ ಕೃಷ್ಣ ಗೋಖಲೆ,' 'ರಮಣ ಮಹರ್ಷಿ.' 'ಠಕ್ಕರ್ ಭಾಪಾ.' 'ನಾ.ಸು. ಹರ್ಡಿಕರ್' ಮತ್ತು 'ಜಯಪ್ರಕಾಶ್ ನಾರಾಯಣ್.'

ಭಾಷಾಂತರ ಕಾರ್ಯ ಇವರಿಗೆ ಉಸಿರಾಟದಷ್ಟೇ ಸಹಜ. ಗಾಂಧೀ ಗ್ರಂಥ ಮಾಲೆಯ ಸಹ ಸಂಪಾದಕರಾಗಿ ೨೨ ಗ್ರಂಥಗಳ ಪ್ರಕಟಣೆಗೆ ಕಾರಣಕರ್ತರಾದ ಜಿ.ವಿ.ನಾ. 'ಧರ್ಮ–ನೀತಿ.' 'ಸಮಾಜಧರ್ಮ.' 'ಸತ್ಯಾಗ್ರಹ.' 'ಮಹಿಳೆಯರು.' 'ಗಾಂಧೀಪತ್ರಗಳು' ಸಂಪುಟ (ii) ಮತ್ತು (iii) ಇವುಗಳನ್ನು ಪೂರ್ಣವಾಗಿ ಅನುವಾದಿಸಿದರು. ಪ್ರೊ. ಡಿ. ಎಸ್. ಶರ್ಮರವರ 'ಗಾಂಧೀ ಸೂತ್ರಗಳು' ಮತ್ತು ಶ್ರೀಮನ್ನಾರಾಯಣರ 'ಸ್ವತಂತ್ರ ಭಾರತದ ರಾಜ್ಯ ಘಟನೆ'ಗಳನ್ನು ಕನ್ನಡಕ್ಕೆ ತಂದಿದ್ದಾರೆ. ಇವು ಧಾರವಾಡದ 'ಮಿಂಚಿನ ಬಳ್ಳಿ' ಪ್ರಕಾಶನದ ಮೂಲಕ ಹೊರಬಂದಿವೆ. ಇವರ ಇನ್ನೊಂದು ಬೃಹತ್ ಅನುವಾದಿತ ಗ್ರಂಥ 'ಮಹಾತ್ಮಾಗಾಂಧಿ' ಮೈಸೂರು ಉಷಾ ಸಾಹಿತ್ಯಮಾಲೆಯಿಂದ ಪ್ರಕಟವಾಗಿದೆ.

ಮೈಸೂರು ವಿಶ್ವವಿದ್ಯಾನಿಲಯಕ್ಕೆ ರಾಜಕೀಯ ಮತ್ತು ಇತಿಹಾಸ ಶಾಸ್ತ್ರಗಳ ಮೂಲಗ್ರಂಥಗಳಾದ ಡಾ. ಅಪ್ಪಾದೊರೈರವರ 'Substance of Politics' ಮತ್ತು ಡಾ. ಕೆ. ಎಂ. ಫಣೀಕರ್‌ರವರ 'Survey of Indian History' ಗ್ರಂಥಗಳನ್ನು ಅನುವಾದಿಸಿದ್ದಾರೆ. ಇದೇ ವಿಶ್ವವಿದ್ಯಾನಿಲಯಕ್ಕಾಗಿ ಟೆಂಡೂಲ್ಕರ್ ರವರ 'ಗಾಂಧೀಜಿಯವರ ಜೀವನ ಚರಿತ್ರೆ'ಯ ಎಂಟು ಸಂಪುಟಗಳ ಯೋಜನೆಯಲ್ಲಿ ಒಂದು ಮತ್ತು ಮೂರನೆಯ ಸಂಪುಟಗಳ ಭಾಷಾಂತರ ಇವರದು. ಗುಬ್ಬಿಯ ಶ್ರೀ ಚಿದಂಬರ ಸ್ವಾಮಿಗಳ 'ಶ್ರದ್ಧಾ ಭಕ್ತಿ ಕುಸುಮಾಂಜಲಿ' ಎಂಬ ಕನ್ನಡ ಕೃತಿಯನ್ನು 'Floral offerings' ಎಂಬ ಹೆಸರಿನಲ್ಲಿ ಇಂಗ್ಲಿಷ್‌ಗೆ ತಂದಿದ್ದಾರೆ.

ಡಾ॥ ರಾಧಾಕೃಷ್ಣನ್‌ರವರ 'ಭಗವದ್ಗೀತೆ'ಯ ಭಾಷಾಂತರವನ್ನು ಪ್ರಕಾಶಕರಿಗೆ ಕಳಿಸಿಯೂ ಆಗಿದೆ. ಆದರೆ ಅದೇನು ಕಾರಣವೋ ಅದಿನ್ನೂ ಪ್ರಕಟವಾಗದೆ ಉಳಿದಿದೆ. ಡಾ. ಜಯಸ್ವಾಲರ 'Hindu polity' ಮತ್ತು ನಿಕೋಲಾಸ್ ರೆಡನ್‌ರವರ 'Tolstoy and his Wife' ಈ ಎರಡು ಕೃತಿಗಳ ಅನುವಾದ ಕಾರ್ಯ ಅವರ ಅನಾರೋಗ್ಯ ನಿಮಿತ್ತ ಅರ್ಧದಲ್ಲಿ ನಿಂತಿವೆ. ಅವುಗಳನ್ನು ಪೂರ್ಣಗೊಳಿಸುವ ಚೈತನ್ಯ ವನ್ನು ಭಗವಂತನು ಅವರಿಗೆ ನೀಡಬೇಕಾಗಿದೆ.

**ನಿಸ್ವಾರ್ಥ ಬದುಕು**

'ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ' ಇದು ಗೀತಾಚಾರ್ಯರ

ನುಡಿ. ಈ ನುಡಿಯನ್ನು ತಮ್ಮ ಜೀವನದಲ್ಲಿ ಅಳವಡಿಸಿ ಕೊಂಡಿರುವವರು ಜಿ.ವಿ.ನಾ. ಅವರು ತಮ್ಮ ಸ್ವಂತಕ್ಕಾಗಿ ಏನೊಂದನ್ನೂ ಬಯಸಿದವರಲ್ಲ. ವಿದ್ಯಾಪೀಠದಲ್ಲಿ ಅಧ್ಯಾಪಕ ರಾಗಿದ್ದಾಗಲೂ ವೇತನ ಸಹ ತೆಗೆದುಕೊಳ್ಳದೆ ದುಡಿದವರು. ಅವರು ಮನಸ್ಸು ಮಾಡಿ ದ್ದರೆ ಸರ್ಕಾರಿ ಕೆಲಸಕ್ಕೆ ಸೇರಿ ಉನ್ನತ ಹುದ್ದೆಗೇರಬಹುದಿತ್ತು. ರಾಜಕೀಯಕ್ಕೆ ಇಳಿದಿ ದ್ದರೆ ಪ್ರಸಿದ್ಧ ವ್ಯಕ್ತಿ ಎನಿಸಿಕೊಳ್ಳಬಹುದಿತ್ತು. ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ ಕೆಲವೇ ದಿನ ಸೆರೆಮನೆ ಮೆಟ್ಟಲು ಹತ್ತಿದವರೂ ಅಧಿಕಾರದ ಬೆನ್ನು ಹತ್ತುವುದು ಸಾಮಾನ್ಯ. ಆದರೆ ಜಿ.ವಿ.ನಾ. ಎಂದೂ ಅಧಿಕಾರಕ್ಕಾಗಿ ಆಸೆಪಟ್ಟವರಲ್ಲ. 'ಸ್ವಾತಂತ್ರ್ಯ ಸಂಗ್ರಾಮ ಎಂದೋ ಒಮ್ಮೆ. ಸಾವಿರ ವರ್ಷಕೊಮ್ಮೆ ಬರುವಂತಹದು. ಅದರಲ್ಲಿ ಭಾಗವಹಿಸುವುದೇ ಒಂದು ಮಹಾಸೌಭಾಗ್ಯ. ಅಂತಹ ಭಾಗ್ಯ ಎಲ್ಲರಿಗೂ ಸಿಗುವಂತಹ ದಲ್ಲ' ಎನ್ನುವ ಭಾವನೆ ಅವರದು.

ನಿಮ್ಮ ಜೀವನ ಸಾಧನೆಯ ಸಾಫಲ್ಯ ವೈಫಲ್ಯಗಳೇನು ಎಂದು ಜಿ.ವಿ.ನಾ. ಅವರನ್ನೇ ಪ್ರಶ್ನಿಸಿದಾಗ ಅವರು ಕೊಟ್ಟ ಉತ್ತರ ಮನೋಜ್ಞವಾದುದು. "ಶಿಕ್ಷಣ ಕ್ಷೇತ್ರದಲ್ಲಿ ಹಲವಾರು ವರ್ಷ ಕೆಲಸಮಾಡಿದೆ, ಗಾಂಧೀ ಕಂಡ ರಾಮರಾಜ್ಯದ ಸರ್ವೋದಯ ಸಮಾಜ ರಚನೆಯ ಕನಸು ನನ್ನದಾಗಿತ್ತು. ಒಂದು ವಿಧದಲ್ಲಿ ನನ್ನದು ಹಗಲುಗನಸಾಯಿತು. ಆದರೆ ಅವಕ್ಕಾಗಿ ನಾನು ಎಂದೂ ವ್ಯಸನ ಪಡುವುದಿಲ್ಲ ಪ್ರತಿಯೊಬ್ಬರಿಗೂ ತಮ್ಮದೇ ಆದ ಸ್ವಂತ ವ್ಯಕ್ತಿತ್ವವಿದೆ, ಅಭಿಪ್ರಾಯವಿದೆ. ಎಲ್ಲರನ್ನೂ ನನ್ನ ಮಟ್ಟಕ್ಕೇರುವಂತೆ ಬಯಸುವುದು ತಪ್ಪಾದೀತು. ಮಾನವ ಪರಿಸರದ ಶಿಶು. ಪರಿಸರವನ್ನು ಮೆಟ್ಟಿ ನಿಲ್ಲುವವರು ಎಲ್ಲೋ ಕೆಲವು ಮಂದಿ. ಅದಕ್ಕೆ ತುತ್ತಾಗುವವರೇ ಬಹಳ. ಆದ್ದರಿಂದ ನನ್ನ ಅಭಿಪ್ರಾಯವನ್ನು ಇನ್ನೊಬ್ಬರ ಮೇಲೆ ಹೇರಲು ಎಂದೂ ಬಯಸುವುದಿಲ್ಲ. ಭಿನ್ನಾಭಿಪ್ರಾಯ ಉಂಟಾದಾಗ ನಾನೇ ಅಲ್ಲಿಂದ ದೂರ ಸರಿದಿದ್ದೇನೆ. ಅವರವರ ದಾರಿಯಲ್ಲೇ ಅವರಿಗೆ ಶ್ರೇಯಸ್ಸನ್ನು ಕೋರಿದ್ದೇನೆ. ಆದರೆ ಅದನ್ನು ವಿಫಲತೆ ಎನ್ನಲಾಗದು, ಕೇವಲ ಗುರಿಸಾಧಿಸುವುದರಲ್ಲೇ ಜೀವನದ ಸಾಫಲ್ಯ ಇದೆ ಎಂದು ನನಗನ್ನಿಸುವುದಿಲ್ಲ. ಗುರಿ ಸಾಧಿಸುವುದು ಎಷ್ಟು ಮುಖ್ಯವೋ ಗುರಿ ಸಾಧ ನೆಯ ಮಾರ್ಗವೂ ಅಷ್ಟೇ ಪವಿತ್ರವಾಗಿರಬೇಕಾದುದು ಮುಖ್ಯ ಎನ್ನುವುದು ನನ್ನ ಭಾವನೆ; ಉಚ್ಚ ಆದರ್ಶಗಳು ಜೀವನದ ಗುರಿಯಾಗಬೇಕು ಹಾಗೆ ಆದಾಗ ಮಾತ್ರ ಜೀವನದಲ್ಲಿ ಸ್ವಲ್ಪವಾದರೂ ಸಾಧಿಸಲು ಸಾಧ್ಯವಾಗುತ್ತದೆ. ಅಲ್ಪ ತೃಪ್ತಿ ಎಂದೂ ಮುಂದಿನ ಪ್ರಯತ್ನಕ್ಕೆ, ಪ್ರಗತಿಗೆ ಅಡ್ಡಿ. ಆದರ್ಶದ ಸಾಧನೆಗೆ ಪ್ರಾಮಾಣಿಕ ಪ್ರಯತ್ನ ಅಗತ್ಯ, ಆ ಪ್ರಯತ್ನದಲ್ಲೇ ಆನಂದವಿದೆ."

"ಬದುಕಿನಲ್ಲಿ ಏರಿಳಿತಗಳು ಸಹಜ. ಈ ಏರಿಳಿತಗಳ ಜೀವನದಲ್ಲಿ ಮಾನವನನ್ನು ನಡೆಸುವುದು ಒಂದು ಅಪ್ರತಿಹತ ಚೇತನ. ಬದುಕಿನ ಶುಭಾಶುಭ, ಜಯಾಪಜಯಗಳ

ನಡುವೆ ಮಾನಸಿಕ ಸಮತೋಲನ ಭಗವಂತನ ಕೃಪೆಯಿಂದ ಮಾತ್ರ ಸಾಧ್ಯ'' ಎನ್ನುವ ಜಿ.ವಿ.ನಾ.ಗೆ ಸ್ವಸಾಮರ್ಥ್ಯಕ್ಕಿಂತ ಹೆಚ್ಚಾಗಿ ದೈವಕೃಪೆಯಲ್ಲಿ ಅಪಾರ ನಂಬುಗೆ.

ಜೀವನದಲ್ಲಿ ಅತಿ ಯಾವುದನ್ನೂ ಅಪೇಕ್ಷಿಸದೆ, ತಮ್ಮ ಆತ್ಮಸಾಕ್ಷಿಗನುಗುಣವಾಗಿ ಸದಾ ಕರ್ಮದಲ್ಲಿ ನಿರತರಾಗಿರುವ ಜಿ.ವಿ.ನಾ. ಒಬ್ಬ ಕರ್ಮಯೋಗಿ.

[ಬಾಲ್ಯ ಮತ್ತು ವಿದ್ಯಾಭ್ಯಾಸದ ಪ್ರಸಂಗಗಳನ್ನು ಜಿ.ವಿ.ನಾ. ರವರ 'ಜೀವನಸ್ಮೃತಿ' -ಹಸ್ತಪ್ರತಿಯಿಂದ ಆಯ್ದುಕೊಳ್ಳಲಾಗಿದೆ.]

ಪಥಿಕ

# ನಮ್ಮ ವೃತ್ತಾಂತ

**ಪದ್ಮಾವತಿಬಾಯಿ, ನಾರಾಯಣಮೂರ್ತಿ.**

೧

ನಮ್ಮ ವಿವಾಹ ನಲವತ್ತಾರು ವರುಷಗಳ ಹಿಂದೆ ನಡೆಯಿತು. ನನ್ನ ತಂದೆ ತಾಯಿಗಳಿಗೆ ನಾನು ಒಬ್ಬಳೇ ಮಗಳು. ನನ್ನ ಪತಿ ಅವರ ತಂದೆ-ತಾಯಿಗಳಿಗೆ ಒಬ್ಬರೇ ಜನಿಸಿದವರು. ನಮಗೆ ಮೂರು ಮಕ್ಕಳು ಜನಿಸಿ ಒಬ್ಬ ಮಗ ಮಾತ್ರ ಉಳಿದಿದ್ದಾನೆ.

ನನ್ನ ಪತಿ ನನಗೆ ದೂರದವರಲ್ಲ. ಅವರು ನನ್ನ ತಾಯಿಯ ಚಿಕ್ಕಮ್ಮನವರ ಪುತ್ರ; ನನಗೆ ಮದುವೆಗಿಂತಲೂ ಮುಂಚೆಯಿಂದಲೇ ಚೆನ್ನಾಗಿ ಪರಿಚಿತರು. ಅವರು ತಮ್ಮ ತಾಯಿಯ ಜೊತೆಯಲ್ಲಿ ರಜೆ ಬಂದಾಗ ಚಿಕ್ಕನಾಯಕನಹಳ್ಳಿಗೆ ಬಂದು ನಾಲ್ಕು ದಿನ ಇದ್ದು ಹೋಗುತ್ತಿದ್ದರು. ವಿವಾಹವಾದಮೇಲಂತೂ ನನ್ನವರೇ ಅವರು.

ನನ್ನ ತಂದೆಯವರು 1940ರಲ್ಲಿ ಅಕಾಲಮರಣಕ್ಕೆ ತುತ್ತಾದರು. ಆಗ ನಮ್ಮ ಸಂಸಾರದಲ್ಲಿ ನನ್ನ ತಾಯಿ ಮತ್ತು ನಾನು ಇಬ್ಬರೇ ಆದೆವು. ಆ ವೇಳೆಗೆ ಆಗಲೇ ಕನಕಪುರದಲ್ಲಿ ರಾಷ್ಟ್ರೀಯ ಶಿಕ್ಷಣ ಕಾರ್ಯದಲ್ಲಿ ನಿರತರಾಗಿದ್ದ ನನ್ನ ಯಜಮಾನರು ನನ್ನ ತಾಯಿಯ ಸೋದರಮಾವನವರ ಮಾತಿನಂತೆ ಚಿಕ್ಕನಾಯಕನಹಳ್ಳಿಗೇ ಬಂದು ನೆಲಸಿದರು. ಅವರ ಜೊತೆಯಲ್ಲಿ ಅವರ ತಾಯಿಯೂ ಬಂದರು. ನಮ್ಮ ಸಂಸಾರ ಸ್ವಲ್ಪ ನೆಲೆಕಂಡಿತು.

ನನ್ನ ಮಾವನವರು ಎಲ್ಲೋ ಅಜ್ಞಾತರಾಗಿ ಹೋಗಿದ್ದುದರಿಂದ, ಅವರು ಹೆಂಡತಿಯ ಜತೆ ಹೆಚ್ಚುಕಾಲ ಸಂಸಾರ ಮಾಡಲೇ ಇಲ್ಲ. ಆದ್ದರಿಂದ ನನಗೆ 'ಅತ್ತೆ' ಎಂಬ ಭಾವನೆಯೇ ಬಾರದಂತಾಯಿತು. ಅವರು ನನಗೆ 'ಅಬಚಿ' (ದೊಡ್ಡಮ್ಮ) ಆದರು. ಅವರ ಹೆಸರೂ, ನನ್ನ ತಾಯಿಯ ಹೆಸರೂ ಎರಡೂ ಒಂದೇ, ಶೇಷೀಬಾಯಿ, ನನ್ನ ತಾಯಿಯನ್ನು ಲಕ್ಷ್ಮೀಬಾಯಿ ಎಂದೂ ಕರೆಯುವ ವಾಡಿಕೆ.

೨

ನಮ್ಮ ಊರಿನಲ್ಲಿ ನೆಲೆನಿಂತ ನನ್ನ ಯಜಮಾನರಿಗೆ ಆರಂಭದಿಂದಲೇ ಬಿಡುವಿಲ್ಲದ ಸಾರ್ವಜನಿಕ ಕೆಲಸ. ನನಗೆ ನೆನಪಿರುವಂತೆ ಕನ್ನಡ ಸಂಘದ ಕೆಲಸವನ್ನೇ ಮೊದಲು ಮಾಡಿದರು. ನಮ್ಮ ಮನೆಯ ಬಲಪಾರ್ಶ್ವದ ಕೊಠಡಿಯನ್ನು ಕಾರ್ಯಾಲಯವನ್ನಾಗಿ

ಮಾರ್ಪಡಿಸಿದ್ದರು. ಇವರ ಸಲುವಾಗಿ ಅನೇಕರು ನಮ್ಮ ಮನೆಗೆ ಬರುತ್ತಿದ್ದರು. ಅವರಲ್ಲಿ ತಿರುಮಲೆ ತಾತಾಚಾರ್ಯ ಶರ್ಮರು, ಸಿದ್ದವನಹಳ್ಳಿ ಮೊತ್ತಿತರರು ಬಂದುದು ಜ್ಞಾಪಕವಿದೆ.

ಆ ಕಾಲದಲ್ಲಿ ಹೆಚ್ಚು ಜನಜಾಗೃತಿ ಇರಲಿಲ್ಲ. ಆದ್ದರಿಂದ ಕನ್ನಡ ಸಂಘದ ಆಶ್ರಯದಲ್ಲಿ ದಿವಂಗತ ದೇವುಡು ಪದ್ಧತಿಯ ಪ್ರಕಾರ ವಯಸ್ಕರ ಶಿಕ್ಷಣ ತರಗತಿಗಳನ್ನು ತೆರೆದರು. ಅವರ ಜತೆಗೆ ಡಾ॥ ಎಸ್. ಎಸ್. ಅನಂತರಂಗಾಚಾರ್ಯ ಎನ್ನುವವರೂ ಸೇರಿದರು. ಡಾ॥ ಅನಂತರಂಗಾಚಾರ್ಯರು ದೊಡ್ಡ ಸಂಸ್ಕೃತ ವಿದ್ವಾಂಸರು. ನಮ್ಮೂರಿನ ಮಾಧ್ಯಮಿಕ ಶಾಲೆಯ ಪ್ರಧಾನ ಅಧ್ಯಾಪಕರಾಗಿದ್ದರು. ಇಬ್ಬರಿಗೂ ತುಂಬ ಗೆಳೆತನ. ಇಬ್ಬರೂ ಸೇರಿ ಹಲವಾರು ತರಗತಿಗಳನ್ನು ಹಲವಾರು ಕನ್ನಡದ ಕಾರ್ಯಕ್ರಮಗಳನ್ನು ನಡೆಸುತ್ತಿದ್ದರು.

ಇನ್ನಿತರ ಸಾರ್ವಜನಿಕ ಕಾರ್ಯಗಳಲ್ಲಿ ಕಾಂಗ್ರೆಸ್ಸಿನ ಮೂಲಕ ಸ್ವಾತಂತ್ರ್ಯ ಹೋರಾಟ ಮುಖ್ಯವಾಯಿತು. 'ಬ್ರಿಟಿಷರೇ ಹೊರಡಿ' ಚಳವಳಿಯ ಕಾಲದಲ್ಲಿ ಅದೇ ಹವ್ಯಾಸವಾಯಿತು. ಕೆಲವರು ಮಿತ್ರರು ದಸ್ತಗಿರಿಯಾಗುವರೆಂದು ಪಟ್ಟ ವದಂತಿ ಇದ್ದುದರಿಂದ ಒಂದು ದಿನ ರಾತ್ರಿಯೆಲ್ಲಾ ನಮ್ಮ ಮನೆಯಲ್ಲೇ ಮಾತನಾಡುತ್ತಾ ಕಾಲಕಳೆದುದು ನನ್ನ ಸ್ಮೃತಿಯಲ್ಲಿ ಇನ್ನೂ ಇದೆ. ಗಳಿಗೆಗಳಿಗೆಗೂ ದಸ್ತಗಿರಿ ಆಗುವ ರೆಂದು ನಿರೀಕ್ಷೆ. ಅದು ತಪ್ಪಿದರೂ ಚಳವಳಿ ಹಬ್ಬಿಸಲು ಊರೂರು ಅಲೆದರು. ಈ ಕಾರ್ಯದಲ್ಲಿ ಅವರ ಗೆಳೆಯರಾದ ಎಂ. ಎಸ್. ಹನುಮಂತರಾಯರು ಮುಖ್ಯರು.

ನಮ್ಮವರಿಗೆ ಶಿಕ್ಷಣದಲ್ಲಿ ತುಂಬ ಆಸಕ್ತಿಯಿತ್ತು. ಅವರಿಗೆ ಕನಕಪುರದಲ್ಲಿ ದಿವಂಗತ ಶ್ರೀ ಎಸ್. ಕರಿಯಪ್ಪನವರೊಡಗೂಡಿ 1938ರಲ್ಲಿ ಗಾಂಧೀಜಿಯವರ ಮೂಲಶಿಕ್ಷಣ ಕಾರ್ಯಮಾಡಿದ್ದ ಅನುಭವವಿತ್ತು. ನಮ್ಮ ಊರಿಗೆ ಬಂದ ಮೇಲೆ, ತಮ್ಮ ಪರಮಮಿತ್ರರಾದ ದಿವಂಗತ ಶ್ರೀ ಲಿಂಗದೇವರೊಡಗೂಡಿ 'ದೇಶೀಯ ವಿದ್ಯಾಪೀಠ'ವೆಂಬ ಶಿಕ್ಷಣ ಸಂಸ್ಥೆಯನ್ನು 1943ರಲ್ಲಿ ಸ್ಥಾಪಿಸಿದರು ಈ ಸಂಸ್ಥೆ ತಾಲ್ಲೂಕಿನಲ್ಲಿ ರಾಷ್ಟ್ರೀಯ ಚಳವಳಿಗೆ ಅಗಾಧ ಕೆಲಸಮಾಡಿತು. 1947ರಲ್ಲಿ ಮೈಸೂರು ಸಂಸ್ಥಾನದಲ್ಲಿ ಜವಾಬುದಾರಿ ಸರಕಾರಕ್ಕಾಗಿ ಚಳವಳಿ ನಡೆದಾಗ, ಶಿಕ್ಷಕರೂ, ವಿದ್ಯಾರ್ಥಿಗಳೂ, ಅನೇಕ ಸಾರ್ವಜನಿಕರೂ ಸೆರೆಮನೆವಾಸ ಅನುಭವಿಸಿದರು. ಈಗ ವಿದ್ಯಾಪೀಠ ಒಂದು ದೊಡ್ಡ ಶಿಕ್ಷಣಸಂಸ್ಥೆಯಾಗಿದೆ. ಆದರೆ ನಮ್ಮವರು ಯಾವ ಉದ್ದೇಶಗಳಿಂದ ಅದನ್ನು ಕಟ್ಟಿದರೋ ಅದು ಕನಸಾಗಿಯೇ ಉಳಿದಿವೆ. ಆದರೆ ಅವರ ಗೆಳೆಯರ ಬಳಗ ಹೆಮ್ಮೆತರುವಂತಿದೆ. ಶ್ರೀ ಲಿಂಗದೇವರು 58ರ ಹರಯದಲ್ಲಿ ಕೈಲಾಸವಾಸಿಯಾದರು. ಅವರಿಬ್ಬರ ಸ್ನೇಹಕ್ಕೆ ನನ್ನವರುಬರೆದ 'ಗಾಂಧೀಸೂತ್ರ'ವೇ ಸಾಕ್ಷಿಯಾಗಿ ನಿಂತಿದೆ.

ನಮ್ಮವರು 1953ರಲ್ಲಿ ಕೆಲವುಕಾಲ ವಾರ್ಧಾಕ್ಕೆ ಹೋಗಿಬಂದರು. ಅಲ್ಲಿ 'ಗಾಂಧೀ ವಿಚಾರ ಪರಿಷತ್' ಎಂಬ ಸಂಸ್ಥೆಯಲ್ಲಿ ಅಧ್ಯಯನ ಕಾರ್ಯ ಮಾಡಿದರು. ಗಾಂಧೀ ವಿಚಾರದಲ್ಲಿ ಮಾಹಿತಿ ಪಡೆದುಕೊಂಡರು. ಅಲ್ಲಿ ಅವರಿಗೆ ಅನೇಕ ಮಹನೀಯರ ಪರಿಚಯ ಭಾಗ್ಯ ಸಿಕ್ಕಿತು. ಜೆ. ಪಿ., ಕೃಪಲಾನಿ ಮತ್ತಿತರ ರಾಷ್ಟ್ರನಾಯಕರ ಸಾನ್ನಿಧ್ಯ ದೊರಕಿತು.

ವಾರ್ಧಾದಿಂದ 1954ರಲ್ಲಿ ಬಂದ ಮೇಲೆ ಮಾಯಸಂದ್ರದಲ್ಲಿ ದಿವಂಗತ ಶ್ರೀ ಎಂ. ಕೆ. ನರಸಿಂಹಯ್ಯನವರೊಡಗೂಡಿ 'ಸರ್ವೋದಯ ಶಿಕ್ಷಣ ಸಮಿತಿ' ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಅದರ ಅಂಗಸಂಸ್ಥೆಗಳಾಗಿ ಪ್ರೌಢಶಾಲೆ ಮತ್ತು ವಿದ್ಯಾರ್ಥಿನಿಲಯವನ್ನು ನಡೆಸಿದರು. ಅಲ್ಲಿದ್ದ ಎರಡೂವರೆ ವರ್ಷಗಳ ಕಾಲದಲ್ಲಿ ಸುತ್ತಲಿನ ಗ್ರಾಮಗಳ ಪ್ರಾಥಮಿಕಶಾಲೆ ಮತ್ತು ಮಾಧ್ಯಮಿಕಶಾಲೆ ಬಾಲಕ-ಬಾಲಕಿಯರ ಅಭಿವೃದ್ಧಿಗೆ ಶ್ರಮಿಸಿದರು. ಆ ಸಂಸ್ಥೆ ದೊಡ್ಡದಾಗಿ ಬೆಳೆದು ಈಗಲೂ ಕೆಲವು ಸಂಪ್ರದಾಯಗಳನ್ನು ನಡೆಸಿಕೊಂಡು ಬರುತ್ತಿದೆ. ನಾಡಿನ ಅಭಿವೃದ್ಧಿಗೆ ಕಾರಣ ವಾಗಿದೆ.

ಮಾಯಸಂದ್ರ ಬಿಟ್ಟಮೇಲೆ ಸ್ವಲ್ಪಕಾಲ ಭೂದಾನ–ಗ್ರಾಮದಾನ ಕಾರ್ಯ ದಲ್ಲಿ ಗ್ರಾಮಗಳಲ್ಲಿ ಸಂಚರಿಸಿ ಗಾಂಧೀಜಿ–ವಿನೋಬಾ ಅವರ ಸರ್ವೋದಯ ಸಂದೇಶವಾಹಕರಾದರು.

1959ರ ಕೊನೆಯಲ್ಲಿ ಮೈಸೂರಿಗೆ ಹೋಗಿ ಅಲ್ಲಿ 'ಗಾಂಧೀ ಸ್ಮಾರಕ ನಿಧಿ' ಆಶ್ರಯದಲ್ಲಿ ಪ್ರೊ. ಯಾಮುನಾಚಾರ್ಯರ ಪ್ರಧಾನ ಸಂಪಾದಕತ್ವದಲ್ಲಿ ನಡೆಯುತ್ತಿದ್ದ ಕನ್ನಡ ಗಾಂಧೀ ಗ್ರಂಥಮಾಲೆಯ ಸಹಸಂಪಾದಕರಾಗಿ ನಾಲ್ಕೂವರೆ ವರ್ಷ ದುಡಿದರು. ಈ ಕಾಲದಲ್ಲಿ ಅನೇಕ ಮಿತ್ರರ ಪರಿಚಯ ಲಾಭ ದೊರಕಿತು. ಇದೇ ಅವರ ಭಾಗ್ಯ, ಸಂಪತ್ತು.

ಗಾಂಧೀ ಗ್ರಂಥಮಾಲೆಯ ಕೆಲಸ ಮುಗಿದ ಮೇಲೆ ಊರೂರು ಸುತ್ತಿ ಗಾಂಧೀ ಮತ್ತು ವಿನೋಬಾ ಸಂದೇಶವನ್ನು ಕುರಿತು ಉಪನ್ಯಾಸ ಮಾಡಿದರು. ಶಾಲಾ ಕಾಲೇಜುಗಳಲ್ಲಿ ವಿಚಾರ ಸಂಕಿರಣಗಳನ್ನು ನಡೆಸಿದರು.

1977 ನವೆಂಬರ್‌ನಲ್ಲಿ ಅವರಿಗೆ ಪಾರ್ಶ್ವವಾಯು ಬಡಿಯಿತು. ದೇವರ ದಯೆ ಯಿಂದ ಬದುಕಿಕೊಂಡರು. ಈ ಕಾಲದಲ್ಲಿ ನಮ್ಮ ಮಗ, ಸೊಸೆ ಮತ್ತು ಮಿತ್ರರ ಕಾಳಜಿ ಹೇಳತೀರದು. ಈಗಲೂ ಅವರುಗಳ ಸೌಜನ್ಯವೇ ನಮ್ಮ ಬಾಳಿಗೆ ಶಾಂತಿ–ಸುಖ ನೀಡುವ ಅಂಶ.

೩

ಎಲ್ಲರ ಬಾಳಿನಂತೆಯೇ ನಮ್ಮ ಬದುಕು ಸುಖ–ದುಃಖ ಮಿಶ್ರವಾಗಿದೆ. ದುಃಖವನ್ನೂ ಅತಿಯಾಗಿ ಹಚ್ಚಿಕೊಳ್ಳದೆ. ದೇವರನ್ನು ನಂಬಿ ನಮ್ಮ ಜೀವನ ಪಥವನ್ನು ನೂಕಿದ್ದೇವೆ. ಇಬ್ಬರ ಮಕ್ಕಳ ಅಕಾಲ ಮೃತ್ಯುವಿನ ಕಹಿ ಉಂಡಿದ್ದೇವೆ. ಪ್ರೀತಿಯ 'ಅಜಿತ'ನ ಮರಣ ಅವರಿಗೂ. ನನಗೂ ತಡೆಯಲಾಗದ ಅಳಲಾಗಿತ್ತು. ಅವರೇನೋ 'ಸಾಧನ ಪಥ' ಎಂಬ ಹೊತ್ತಗೆ ಬರೆದು ಶಾಂತಿ ತಂದುಕೊಂಡರು. ನನ್ನನ್ನು ಚಿಕ್ಕಂದಿನಿಂದ ಎತ್ತಿ ಆಡಿಸಿದ 'ಅಜಿತ'ನ ಸಾವು ನನಗಂತೂ ಮರೆಯದಾಗಿದೆ. ನನ್ನ ಅಮ್ಮನೇ ಇಬ್ಬರಿಗೂ ಅಮ್ಮನಾಗಿದ್ದಾರೆ. ಅವರ ಮನೆಯೇ ನಮಗೂ ಮನೆ. ಕನ್ನಡ ಸಾಹಿತ್ಯ ಪರಿಷತ್ತಿನವರು ಪ್ರಕಟಿಸಿದ 'ಗಾಂಧೀ ಸಾಹಿತ್ಯ' ಎಂಬ ಕೃತಿಯಲ್ಲಿ ಹೇಳಿದಂತೆ

"ನಿಮ್ಮ ಮನೆ ನನ್ನಮನೆ,
ನಿಮ್ಮ ಅನ್ನ ನನ್ನ ಅನ್ನ,
ನಿಮ್ಮ ಮಗಳು ನನ್ನ ಮಡದಿ
ಇಂತು ಸಾಗಿದೆ, ಬದುಕು ಸಾಗಿದೆ".

ನಮ್ಮವರಿಗೆ ಪುಟ್ಟ ಮಕ್ಕಳೆಂದರೆ ಬಹಳ ಪ್ರೀತಿ. ನಮ್ಮ ಬೀದಿಯ ನಾಲ್ಕಾರು ಮಕ್ಕಳು ತಾವಾಗಿಯೇ ಬಂದು ಹಾಡಿ. ಕುಣಿದು. ನರ್ತನ ಮಾಡುತ್ತಾರೆ. ಅವರು ಬೀದಿಯಲ್ಲಿ ಹೋದಾಗ ಸುತ್ತುವರಿದು 'ತಾತ' 'ತಾತ' ಎನ್ನುತ್ತಾರೆ. ಇದರಿಂದ ನಮಗೆ ಅಪಾರ ನಲಿವು, ಆನಂದ.

ರಜೆ ಬಂದಾಗ ನಮ್ಮ ಮಗ, ಸೊಸೆ. ಮೊಮ್ಮಕ್ಕಳು ಬೆಂಗಳೂರಿಂದ ಊರಿಗೆ ಬರುತ್ತಾರೆ. ಹತ್ತು ದಿನ ಇದ್ದು ಹೋಗುತ್ತಾರೆ. ಇದರಿಂದ ನಮಗೆ ಮನೆ ತುಂಬಿದಂತೆ ಆಗುತ್ತದೆ. ಉಳಿದ ಬಹಳ ಕಾಲ ನಮ್ಮ ಮನೆ ನಿಶ್ಯಬ್ದ. ವಯಸ್ಸಾದ ನನ್ನ ತಾಯಿ [illegible] ಮಲಗಿರುತ್ತಾರೆ. ನಾನು ಕೆಲಸದಲ್ಲಿ ಮಗ್ನ. ಇವರು [illegible] ಇರುತ್ತಾರೆ. ಈಗೀಗ ಸ್ವಲ್ಪ ಹೊತ್ತು ಓದುವರು. ಬರೆಯಲು ಅವರ ಕೈ ಸ್ವಾಧೀನವಿಲ್ಲ. ಜೀವನವೆಲ್ಲಾ ಓದು–ಬರಹದಲ್ಲಿ ಕಳೆದವರಿಗೆ ಇದರಿಂದ ಎಷ್ಟು ಕಸಿವಿಸಿಯೋ ದೇವರೇ ಬಲ್ಲ. ಆಗಾಗ [illegible] ಕೆಲವರು [illegible] ಮಿತ್ರರು ಬಂದು ಮಾತನಾಡಿಸಿಕೊಂಡು ಹೋಗುತ್ತಾರೆ.

೪

ಕೆಲವು ಪ್ರಸಂಗಗಳನ್ನು ನೆನಪು ಮಾಡಿಕೊಂಡು ಈ ಪುಟ್ಟ ಲೇಖನವನ್ನು ಮುಗಿಸುತ್ತೇನೆ.

ವಿದ್ಯಾಪೀಠ ಆರಂಭಿಸಿದ ಕೆಲವು ವರ್ಷಗಳು ಬಡಹುಡುಗರಿಗೆ ಫೀಜು, ಪುಸ್ತಕ, ಸಮವಸ್ತ್ರ ಇವುಗಳಿಂದಾಗಿ ಸಹಾಯ ಮಾಡಲು ಸಾರ್ವಜನಿಕ ಮನವಿ ಪತ್ರ ಕೊಡು ತ್ತಿದ್ದರು ನನ್ನ ಯಜಮಾನರು.

ಒಬ್ಬ ಹುಡುಗ ತುಂಬ ಚೂಟಿ. ಚೆನ್ನಾಗಿ ಓದುತ್ತಿದ್ದ. ಬಡವ. ಅವನಿಗೂ ವಾಡಿಕೆಯಂತೆ ಪತ್ರ ಕೊಟ್ಟರು. ಪತ್ರ ತೆಗೆದುಕೊಂಡು ಹೋದ ಹುಡುಗ ನಾಪತ್ತೆ; ಕೆಲವು ತಿಂಗಳು ಅವನ ಮುಖವೇ ಇಲ್ಲ.

ಒಂದು ದಿನ ಅವನ ತಾಯಿ ಅವನನ್ನು ಕರೆದುಕೊಂಡು ನಮ್ಮ ಮನೆಗೆ ಬಂದರು ಹುಡುಗ ತಲೆತಗ್ಗಿಸಿಕೊಂಡು ನಿಂತಿದ್ದ. ಹೊಸಕೋಟು ಬಟ್ಟೆ ಧರಿಸಿದ್ದ.

"ಏನು! ಒಳ್ಳೆ ಮದುಮಗನಂತಿದ್ದೀಯಲ್ಲಾ?" ಎಂದರು, "ಹೌದು ಮದುವೆಯಾಯ್ತು" ಎಂದರು ಹುಡುಗನ ತಾಯಿ. "ಹ್ಞಾ! ಮದುವೆಯಾಯಿತೇ" ಎಂದರು ನಮ್ಮವರು.

"ಮದುವೆಯಷ್ಟೇ ಅಲ್ಲ, ಮೇಷ್ಟ್ರು ಕೆಲಸವೂ ಸಿಕ್ಕಿದೆ."

"ನಿಮ್ಮ ದಯೆ"

'ಓಹೋ?' ಎಂದು ಆಶ್ಚರ್ಯದಿಂದ ಕೇಳಿದರು.

"ನೀವು ಕೊಟ್ಟಿದ್ದ ಪತ್ರದಿಂದ ಹಣ ಬಂದಿತು. ಹೆಣ್ಣು ಕೊಡುವವರೂ ಬಂದರು. ಆಯಿತು"

ಹುಡುಗ ಮನವಿ ಪತ್ರವನ್ನು ಉಪಯೋಗಿಸಿಕೊಂಡು ಹಣ ವಸೂಲಿ ಮಾಡಿದ್ದ.

ಇದಕ್ಕೆ ಕೊನೆಯಾಯಿತು ನಮ್ಮವರು ಮನವಿ ಪತ್ರಕೊಡಲು.

ಇನ್ನೊಂದು ಪ್ರಸಂಗ ನನ್ನ 'ಅಬಚಿ' ಬದುಕಿದ್ದಾಗ ನಡೆಯಿತು. ಅವರು ಬಹಳ ಉಗ್ರ ಸಂಪ್ರದಾಯದವರು. ಬಹಳ ನಿಯಮ, ಉಪವಾಸ, ವ್ರತ ನಡೆಸು ತ್ತಿದ್ದರು. ನಮ್ಮವರು ಮನೆ ಬಿಟ್ಟು ಎಲ್ಲಿಯೂ ಊಟ ಮಾಡಲು ಒಪ್ಪುತ್ತಿರಲಿಲ್ಲ.

ನಮ್ಮ ಊರಿಗೆ ಹೊಂದಿದಂತೆ ಇರುವ ಕುರುಬರಹಳ್ಳಿಗೆ ರಸ್ತೆ ಮಾಡಲು ಒಂದು ಶಿಬರ ನಡೆಯಿತು. ನಮ್ಮವರೇ ಶಿಬಿರದ ಮೇಲ್ವಿಚಾರಣೆಯಲ್ಲಿದ್ದರು.

ಸರಿ 'ಅಬಚಿ'ಯವರು ಹಠ ಹಿಡಿದರು. ನಮ್ಮವರೂ ಅಷ್ಟೇ ಹಠ. ಇಬ್ಬರೂ ಮೂರು ದಿನ ಉಪವಾಸ ಮಾಡಿದರು, 'ಅಬಚಿ' ಮನೆಯಲ್ಲಿ; ನಮ್ಮವರು ಶಿಬರದಲ್ಲಿ. ಅದು ಯಾರಿಗೂ ಗೊತ್ತಾಗದ ರೀತಿಯಲ್ಲಿ, ಕೊನೆಗೆ ಅಬಚಿಯೇ ಬಗ್ಗಿದರು, ಮಾತೃ ಹೃದಯ ಕರಗಿತು. ನಮ್ಮ ಮಗನ ಸಂಧಾನದಿಂದ ಈ ಉಪವಾಸ ಮುಗಿ ಯಿತು, ಅಬಚಿ ಬದುಕಿರುವವರೆಗೂ ಈ ಬಗೆಯ ಕಠಿಣತೆ ತೋರಿಸಲಿಲ್ಲ.

ಮತ್ತೊಂದು ಪ್ರಸಂಗ ನನ್ನ ನೆನಪಿನಲ್ಲಿರುವುದು ನಾನು ಮೈಸೂರಿನಲ್ಲಿದ್ದಾಗ ನಡೆದುದು.

ಗಾಂಧೀ ಗ್ರಂಥಮಾಲೆಯ ಸದಸ್ಯರೆಲ್ಲ ನಮ್ಮ ಮನೆಗೆ ಬರುತ್ತಿದ್ದರು. ಒಂದುಸಲ ಡಾ॥ ಗೊರೂರು ರಾಮಸ್ವಾಮಿ ಅಯ್ಯಂಗಾರ್, ಸಿದ್ಧವನಹಳ್ಳಿ ಕೃಷ್ಣಶರ್ಮ, ರಾಮಚಂದ್ರ ವಡವಿ ಎಲ್ಲ ಬಂದಿದ್ದರು. ಸ್ನಾನ ಮಾಡಿದ ಮೇಲೆ ತಿಂಡಿಯಾಯಿತು, ಕಾಫಿ ಬಂತು.

ಶ್ರೀ ಗೊರೂರರು ಮಾತಿನಲ್ಲಿ ತಮಾಷೆಯಲ್ಲವೇ ? ಅವರು ಕಾಫಿ ಲೋಟ ನೋಡಿ, 'ರಾವಣನ ಹೊಟ್ಟೆಗೆ ಅರೆಕಾಸಿನ ಶುಂಠಿ' ಎಂದರು. ಎಲ್ಲರೂ ನಕ್ಕರು.

ನಮ್ಮ ಅಬಚಿ ಇದನ್ನು ಜ್ಞಾಪಕವಿಟ್ಟುಕೊಂಡಿದ್ದರು. ಮುಂದಿನ ಸಲ ಶ್ರೀ ಗೊರೂರರು ಬಂದಾಗ ದೊಡ್ಡ ಲೋಟದಲ್ಲಿ ಕಾಫಿ ತಂದಿಟ್ಟರು. ಶ್ರೀ ಗೊರೂರರು ಇದನ್ನು ನೋಡಿ 'ಈಗ ಸರಿಯಾಗಿದೆ ಗಾತ್ರ. ನೀವು ಮರೆತಿಲ್ಲವಲ್ಲ', ಎಂದು ಎಲ್ಲರನ್ನು ನಗೆಗಡಲಲ್ಲಿ ತೇಲಿಸಿದರು.

ಹೀಗೆ ಸಾಗಿದೆ ನಮ್ಮ ಜೀವನ. ನಾನು ಹೆಚ್ಚಿಗೆ ಓದಿದವಳಲ್ಲ. ಅಂತೂ ನಾವು ಈಶನ ಅನುಗ್ರಹದಿಂದ ಸಂಸಾರದಲ್ಲಿ ತೇಲುತ್ತಾ ಬಂದಿದ್ದೇವೆ. ಎಷ್ಟೋ ಭಿನ್ನಾಭಿಪ್ರಾಯ ಬಂದರೂ ಕ್ಷಣಕಾಲವಿದ್ದು ಮಾಯವಾಗಿದೆ. ನಮ್ಮದು ಅನುನಯದ ಬಾಳು ; ಸಮರಸದ ಬದುಕು. ಕವಿ ಬೇಂದ್ರೆ ಹೇಳಿದಂತೆ, 'ಸರಸ ಜನನ, ವಿರಸ ಮರಣ. ಸಮರಸವೆ ಜೀವನ'.

ಪ
ಥಿ
ಕ

# ಜಿ.ವಿ.ನಾ. ನಮ್ಮ ತಂದೆ

**ನಾ. ದಯಾನಂದ**

"ಪ್ರತಿ ಮಾನವನಿಗೂ ಪ್ರಾಣಕ್ಕಿಂತ ಮಿಗಿಲಾದುದು ಏನಾದರೊಂದಿರಬೇಕು ಯಾವ ಮನುಷ್ಯ ಬಾಳಿನ ಗುರಿಗೆ ಸಾಯಲು ಸಿದ್ಧನಿಲ್ಲವೋ, ಆತ ಜೀವಿಸಲೂ ಅನರ್ಹ"

**—ಮಾರ್ಟಿನ್ ಲ್ಯೂಥರ್‌ಕಿಂಗ್**

ಈ ಮಾತುಗಳು ಅಮೆರಿಕಾದೇಶದ ಕರಿಯರ ನಾಯಕ 'ಕಿಂಗ್' ಅವರಿಂದ ಬಂದುವು. ಕಿಂಗ್ ತನ್ನ ಜೀವನದ ಪರಮೋಚ್ಚ ಗುರಿಯೆನಿಸಿದ ಕರಿಯರ ಸ್ವಾತಂತ್ರ್ಯಕ್ಕೆ ಹೋರಾಡಿದ ಧೀಮಂತ ಚೇತನ.

ಕಿಂಗ್‌ನ ಮಾತುಗಳ ಸತ್ಯ ನಮ್ಮ ತಂದೆ ಜಿ.ವಿ.ನಾ. ಅವರಿಗೂ ಅನ್ವಯಿಸುತ್ತವೆ. ನನಗೆ ತಿಳಿದಂತೆ ನಮ್ಮ ತಂದೆಯ ಜೀವನದರ್ಶನ–ಸರಳತೆ, ವೈಚಾರಿಕ ದೃಷ್ಟಿ ಮತ್ತು ಗಾಂಧೀತತ್ವದಲ್ಲಿ ಅಚಲ ವಿಶ್ವಾಸ. ಇವೆಲ್ಲಾ ಮೇಳೈಸಿ ರೂಪಿತವಾಗಿರುವ ಅವರ ವ್ಯಕ್ತಿತ್ವ ಪ್ರತಿಭಾಪೂರ್ಣ. ಜೀವನದ ಕಹಿ–ಸಿಹಿಗಳ ಅನುಭವದಿಂದ ಮೂಡಿರುವ ಅವರ ಆದರ್ಶ ನನಗೆ ಹಲವು ಬಗೆಯಲ್ಲಿ ಅನುಕರಣೀಯ. ಅರವತ್ತೊಂಬತ್ತು ವಸಂತಗಳನ್ನು ಕಳೆದು ಎಪ್ಪತ್ತರ ಹೊಸಿಲಿಗೆ ಕಾಲಿಡುವ ನಮ್ಮ ತಂದೆಯ ಬಾಳಿನ ಸಂಗತಿಗಳು ನನಗೆ ಸದಾ ಅವಿಸ್ಮರಣೀಯ.

ನಮ್ಮ ತಂದೆಯ ಬಾಲ್ಯ ಕಷ್ಟಕರವಾಗಿತ್ತು. ಅವರ ಚೇತನ ಆ ಹೊತ್ತಿಗೆ ಅಸಾಧಾರಣ ಶಕ್ತಿಯ ನೆಲೆ. ಅವರ ದೃಢನಿರ್ಧಾರ ಸ್ವತಂತ್ರ ಮನೋಭಾವನೆಯ ಅಡಿಗಲ್ಲು. ಆ ಕಾಲದ ಅನೇಕರಂತೆ ರಾಷ್ಟ್ರೀಯ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗ ವಹಿಸಿದ ನಮ್ಮ ತಂದೆ ಉತ್ಕಟ ರಾಷ್ಟ್ರೀಯತೆಯ ನಿದರ್ಶನವಾಗಿದ್ದರು. ಸ್ಥಳೀಯರು ಅವರಿಂದ ಕ್ರಿಯಾಶೀಲ ನಾಯಕತ್ವದ ಕೊಡುಗೆಯನ್ನು ನಿರೀಕ್ಷಿಸಿದ್ದರು. ಮಿತ್ರರ ನಿರೀಕ್ಷೆಯನ್ನು ಅವರು ಸುಳ್ಳಾಗಿಸಲಿಲ್ಲ. ಅವರ ಆರೋಗ್ಯ ಯಾವಾಗಲೂ ಉತ್ತಮ ವಾಗಿತ್ತು. ಸ್ವಾತಂತ್ರ್ಯ ಪೂರ್ವದಲ್ಲಿ ರಾಷ್ಟ್ರೀಯ ಚಳುವಳಿಯ ಅಂಗವಾಗಿ ಚಿಕ್ಕನಾಯ ಕನ ಹಳ್ಳಿಯಲ್ಲಿ ನಡೆಸಿದ ಸತ್ಯಾಗ್ರಹ ಸರ್ಕಾರ ದ್ರೋಹ ಅಪಾದನೆಯೆನಿಸಿ ನಮ್ಮ ತಂದೆ ಯನ್ನು ಸೆರೆಮನೆಗೆ ಕಳಿಸಿತು,

ಸ್ವಾತಂತ್ರ್ಯ ಲಭಿಸಿದ ತರುಣದಲ್ಲೇ ನಮ್ಮ ತಂದೆಯ ಕಾರ್ಯವ್ಯಾಪ್ತಿ ನಿರ್ದಿಷ್ಟವಾದ ಒಂದು ನೆಲೆಕಂಡಿತು. ಅವರು ಸಾಹಿತ್ಯ ಹಾಗೂ ತತ್ವಶಾಸ್ತ್ರ ಅಧ್ಯಯನದಲ್ಲಿ ತಲ್ಲೀನರಾದರು ; ಜೊತೆಯಲ್ಲೇ ಗಾಂಧೀ ಸಾಹಿತ್ಯ ದರ್ಶನವನ್ನೂ ಪಡೆದರು. "ಗಾಂಧೀ ಸಮಾಜ ಧರ್ಮ" ನಮ್ಮ ತಂದೆಯವರನ್ನು ಪುಳಕಿತಗೊಳ್ಳುವಂತೆ ಮಾಡಿತ್ತು. ದೇಶ ನಿರ್ಮಾಣ ಕಾರ್ಯಸಾಧನೆ ಗಾಂಧೀ ವಿಚಾರದ ಮೂಲಕವೇ ಸಾಧ್ಯ—ಎಂದು ನಂಬಿದವರಲ್ಲಿ ಒಬ್ಬರು. ಅವರ ಮಾತಿನ ವೈಖರಿ ಜನಾನುರಾಗದ ಒಂದು ವಿಶಿಷ್ಟ ಬಗೆ. ಈ ಸಮಯದಲ್ಲೇ ನಮ್ಮ ಭಾರತದ ಶಿಕ್ಷಣ ವ್ಯವಸ್ಥೆಯ ಪ್ರಾಮುಖ್ಯ ಹಾಗೂ ಅದರ ಕಾರ್ಯ ವಿಧಾನ ಅವರ ಮನಸ್ಸಿನಲ್ಲಿ ಸ್ಫುಟವಾಗಿ ರೂಪುಗೊಂಡಿತ್ತು. ಸ್ವಾತಂತ್ರ್ಯ ಪೂರ್ವದಲ್ಲೇ ಅವರು ಚಿಕ್ಕನಾಯಕನ ಹಳ್ಳಿಯಲ್ಲಿ ಒಂದು ಪ್ರೌಢಶಾಲೆಯನ್ನುಕಟ್ಟಿದ್ದರು. ಜೀವನ ಶಿಕ್ಷಣ ಮತ್ತು ಸ್ವಾವಲಂಬನೆಯನ್ನು ವಿದ್ಯಾರ್ಥಿಯ ವ್ಯಕ್ತಿತ್ವದಲ್ಲಿ ಹಾಸು-ಹೊಕ್ಕಾಗಿ ಜೊತೆಗೂಡಿಸುವ ಮಹತ್ಕಾರ್ಯ ಶಿಕ್ಷಣದ ಗುರಿಯಾಗಬೇಕೆಂದು ಅದಕ್ಕಾಗಿ ಜಿ.ವಿ.ನಾ. ಶ್ರಮಿಸಿದರು. ತಾವು ಕಟ್ಟಿದ ಸಂಸ್ಥೆಗಳಲ್ಲಿ ವಿದ್ಯಾರ್ಥಿಗಳನ್ನು ಧೀಮಂತ ಹಾಗೂ ಹೃದಯವಂತಿಕೆಯ ಪ್ರತಿರೂಪವಾಗಿ ಮಾಡಿದರು. ಈ ಕಾರ್ಯ ನಮ್ಮ ತಂದೆಯ ಉನ್ನತ ಬೌದ್ಧಿಕ ಮಟ್ಟಕ್ಕೆ ನಿದರ್ಶನ.

ನಮ್ಮ ತಂದೆಯ ಬಗೆಗೆ ನನ್ನ ಚಿಕ್ಕಂದಿನ ನೆನಪಿನ ನೈಜ ಚಿತ್ರಣವನ್ನು ಕೊಡಲು ಅಸಮರ್ಥಳಿದ್ದೇನೆ. ಆದರೆ ಕೆಲವು ಸಂಗತಿಗಳು ನನ್ನ ಮನಸ್ಸಿನಲ್ಲಿ ಸದಾ ಹಸಿರಾಗಿವೆ. ಎಂದಾದರೊಮ್ಮೆ ನಮ್ಮ ತಂದೆ ನನಗೆ ಸ್ನಾನ ಮಾಡಿಸುತ್ತಿದ್ದರು. ಸ್ನಾನದ ರೀತಿ ಧಾರ್ಮಿಕ ವಿಧಿಯಂತೆ ಅಚ್ಚುಕಟ್ಟು; ನಿರ್ಮಲತೆಯ ಪ್ರಥಮ ಮೆಟ್ಟಲು. ಈ ಸಂದರ್ಭದಲ್ಲಿ ಕನ್ನಡದ ಒಬ್ಬ ಕವಿಯ ಕವನದ ಪ್ರಸಿದ್ಧವಾದ ಎರಡು ಸಾಲುಗಳನ್ನು ಹೇಳುತ್ತಿದ್ದರು. ಅವು 'ದೇಹವಿದು ನೀನಿರುವ ಗುಡಿಯೆಂದು ತಿಳಿದು ಗುಡಿಸುವೆನು ಅನುದಿನವು ದೇವ ದೇವಾ.' ಈ ಸಾಲುಗಳ ಅರ್ಥ ಇಂದಿಗೂ ನನ್ನ ಮನಸ್ಸನ್ನು ಸೂರೆಗೊಂಡಿದೆ. ಆಗಾಗ ಈ ಕವನವನ್ನು ನನ್ನಲ್ಲೇ ಉಸುರಿಕೊಳ್ಳುತ್ತೇನೆ.

ನನ್ನ ಹಾಗೂ ನನ್ನ ತಂದೆಯವರ ಬಾಂಧವ್ಯ ಚಿಕ್ಕಂದಿನಲ್ಲಿ ಉತ್ಕಟ ಪ್ರೀತಿಯ ನಿದರ್ಶನವಾಗಿರಲಿಲ್ಲ. ನನ್ನ ದೃಷ್ಟಿಯಲ್ಲಿ ಅವರು ಕಟ್ಟು ನಿಟ್ಟಿನ ವ್ಯಕ್ತಿ : ಶಿಸ್ತು, ಶೀಲ, ಸಂಯಮಗಳು ಮುಪ್ಪುರಿಗೊಂಡು ಅವರ ಜೀವನ ಒಂದು ಹದವಲ್ಲಿ ರೂಪುಗೊಂಡಿತ್ತು. ಸಾರ್ವಜನಿಕ ಜೀವನದ ಒತ್ತಡ ಅವರನ್ನು ಕುಟುಂಬ ಜೀವನದಲ್ಲಿ ಸ್ವಲ್ಪ ಭಿನ್ನ ವ್ಯಕ್ತಿಯಾಗಿಸಿತ್ತು. ನನ್ನ ಬಗೆಗೆ ಗಮನ ಹರಿಸುವಷ್ಟು ವ್ಯವಧಾನ ಅನೇಕ ವೇಳೆ ಅವರಿಗೆ ಆಗುತ್ತಿರಲಿಲ್ಲ. ಆದ್ದರಿಂದ ನಾನು ತಾಯಿ ಮತ್ತು ಅಜ್ಜಿಯರ ಪ್ರೀತಿಯಲ್ಲೇ ಬೆಳೆದೆ. ತಂದೆಯ ಪ್ರೀತಿ ಕೆಲವು ಕ್ಷಣಕ್ಕೆ ಮಾತ್ರ ಸೀಮಿತ. ಇದಕ್ಕೆ ಪೋಷಕವೋ ಎಂಬಂತೆ ನಮ್ಮ ಮನೆಯ ವ್ಯವಸ್ಥೆ. ಮಹಡಿಯ ಮೇಲೆ ನಮ್ಮ ತಂದೆಯ ಕಾಲಯಾಪನ. 'ಮಹಡಿ' ಒಂದು ಗೋಪುರದಂತೆ ಒಂಬತ್ತು ಅಡಿಗಳ ಎತ್ತರದಲ್ಲಿದೆ. ಅಲ್ಲಿಯೇ ನಮ್ಮ ತಂದೆಯ

ಪತ್ರಿಕೋದ್ಯಮ ಕಾರ್ಯ ನಿರಂತರವಾಗಿ ಸಾಗುತ್ತಿತ್ತು. ಸ್ನಾನ ಮತ್ತು ಊಟಕ್ಕೆ ಮಾತ್ರ ಎಲ್ಲರೊಡನೆ ಸೇರುತ್ತಿದ್ದರು. ಈ ಕಾರಣದಿಂದ 'ಮಹಡಿ' ನಮ್ಮ ಕುಟುಂಬದಲ್ಲಿ ಪ್ರಧಾನ ಪಾತ್ರ ವಹಿಸಿದೆ. ನನಗೆ ಮಹಡಿಯ ಬಗೆಗೆ ಮತ್ಸರ, ಕಾರಣ, ಅದು ನನ್ನ ಮತ್ತು ನನ್ನ ತಂದೆಯವರ ನಡುವೆ ಅಂತರವನ್ನು ಹೆಚ್ಚಿಸಿತ್ತು.

ಪ್ರಾಪ್ತ ವಯಸ್ಕನಾದಂತೆ ನಾನು ತಂದೆಯವರೊಡನೆ ಹೆಚ್ಚು ನಿಕಟವರ್ತಿಯಾಗಿದ್ದೇನೆ; ಅವರಲ್ಲಿ ಪ್ರೀತಿ ಹಾಗೂ ಪೂಜ್ಯ ಭಾವನೆ ಮೂಡಿದೆ. ಅವರ ವೈವಿಧ್ಯಮಯ ವ್ಯಕ್ತಿತ್ವ ನನ್ನನ್ನು ಮೂಕ ಪ್ರೇಕ್ಷಕನನ್ನಾಗಿಸಿದೆ. ಇದರಿಂದಾಗಿ ನನಗೆ ಅವರ ಮಗ ಎನಿಸಿರುವುದು ಹೆಮ್ಮೆಯ ವಿಷಯ. ಆಗಾಗ ಅವರು ಒತ್ತಿ ಹೇಳುವ ಅಂಶವೆಂದರೆ, "ಪ್ರಭಾವಯುತ ಕೇಂದ್ರ ಬಿಂದುವಾಗಿ ತಾನು ಬೆರೆಯುವ ಎಲ್ಲರೊಡನೆ ಪರಿಣಮಿಸಬೇಕು" ವ್ಯಕ್ತಿ ಎಂಬುದು. ಇದು ನನಗೇ ಏಕೆ ಎಲ್ಲರಿಗೂ ಅನ್ವಯಿಸುತ್ತದೆ.

ಜೀವನದ ಹಲವಾರು ಸಮಸ್ಯೆಗಳ ಬಗೆಗೆ ಅಧಿಕಾರಯುತವಾಗಿ ಪರಿಹಾರ ನೀಡುವ ಸಾಮರ್ಥ್ಯ, ಅವರನ್ನು ಭೇಟಿಯಾಗುವ ಎಲ್ಲರಲ್ಲೂ ಅವರ ಬಗೆಗೆ ಗೌರವ ಭಾವನೆ ಮೂಡಿಸಿದೆ. ನನಗೆ ತಿಳಿದಂತೆ ನಮ್ಮ ತಂದೆ ಅನೇಕ ಕುಟುಂಬಗಳಲ್ಲಿ ಸಂಭವಿಸಿದ್ದ ತೊಡಕನ್ನು ಪರಿಹರಿಸಿ, ಆ ವ್ಯಕ್ತಿಗಳಲ್ಲಿ ಪರಸ್ಪರ ಸೌಹಾರ್ದ ಮೂಡಲು ಕಾರಣರಾಗಿದ್ದಾರೆ. ಅಂತಹ ಕುಟುಂಬಗಳು ಶಕ್ತಿಯುತವಾಗಿ ಕಾರ್ಯ ನಿರ್ವಹಿಸಲು ಅನುಕೂಲವಾಗಿದೆ.

ಈ ಸಂದರ್ಭದಲ್ಲಿ ಒಂದು ನಿದರ್ಶನ ನನ್ನ ನೆನಪಿಗೆ ಬರುತ್ತದೆ. ನಮ್ಮ ತಂದೆಗೆ ಆಪ್ತರೆನಿಸಿದ ಒಬ್ಬರ ಕುಟುಂಬ ಪತಿಯ–ಪತ್ನಿಯ ವೈಮನಸ್ಯದಿಂದ ಮುರಿದು ಬೀಳುವುದಿತ್ತು. ಪತ್ನಿ ಪಟ್ಟಣದವರು, ಓದಿದವರು, ಆರ್ಥಿಕ ಸ್ವಾತಂತ್ರ್ಯ ಬಯಸಿದವರು. ಪತಿ ರಾಷ್ಟ್ರೀಯ ಮನೋಭಾವನೆಯ ಆದರ್ಶ ಜೀವಿ. ಇವರ ಸಂಸಾರ ಒಂದು ಗ್ರಾಮದಲ್ಲಿ ಆರಂಭ. ಕಾಲಕ್ರಮದಲ್ಲಿ ಇಬ್ಬರ ವೈಯಕ್ತಿಕ ಆಸಕ್ತಿಗಳು ಕವಲೊಡೆದು, ಹಿರಿದಾಗಿ ಬೆಳೆದು 'ಏಕತಾನದ' ಸಂಸಾರ ಸೂತ್ರವನ್ನು ಕಡಿದುಹಾಕುವ ಮಟ್ಟಕ್ಕೂ ಹೋಯಿತು. ಇಂತಹ ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ ಆ ಕುಟುಂಬದ ಬಗೆಗೆ ಆಸಕ್ತಿವಹಿಸಿ ಪತಿ–ಪತ್ನಿಯನ್ನು ಸಮರಸದೆಡೆಗೆ ಒಯ್ದುದು ನಮ್ಮ ತಂದೆಯ ಸ್ತುತ್ಯಕಾರ್ಯ. ಪತಿ–ಪತ್ನಿಯು ಅವರಲ್ಲಿ ಇಟ್ಟಿದ್ದ ನಂಬಿಕೆ ಅಚ್ಚರಿಪಡುವಂಥದು. ಅಂದಿನಿಂದ ಅನೇಕ ವರ್ಷಗಳು ಸಂದಿವೆ. ಆ ಮಿತ್ರರು ಸಂಸಾರವನ್ನು ಸುಗಮವಾಗಿ ನಡೆಸಿ ತಮ್ಮ ಜೀವನದ ರಸಘಳಿಗೆಯ ಸ್ವಾದವನ್ನು ಶ್ರೀಮತಿಯೊಂದಿಗೆ ಅನುಭವಿಸಿದ್ದಾರೆ. ನನ್ನ ದೃಷ್ಟಿಯಲ್ಲಿ ಈ ಕಾರ್ಯ ನಮ್ಮ ತಂದೆಯ ಮಾನವ ಸೇವೆಯ ಅತ್ಯಮೂಲ್ಯ ಅಂಶ.

ನಮ್ಮ ತಂದೆ ಸಂಪ್ರದಾಯ ಶರಣರಲ್ಲ, ಅವರ ಸಂಪ್ರದಾಯ ವಿರೋಧ ದೃಷ್ಟಿ ಆಚಾರ ಪ್ರಿಯರನ್ನು ಕೆರಳಿಸಿದೆ. ನಮ್ಮ ಮನೆಯವರು ತಂದೆಯವರ ಜೀವನ ದೃಷ್ಟಿಯನ್ನು ಒಪ್ಪಿದುದಿಲ್ಲ. ಅವರ ಉದಾರ ಭಾವನೆ ಹೃದಯ ವೈಶಾಲ್ಯದ ಕುರುಹು. ಕೆಲವು ವೇಳೆ ಕುಟುಂಬದವರಲ್ಲಿ ಭಿನ್ನಾಭಿಪ್ರಾಯ ಉಂಟಾದರೂ. ನಮ್ಮ ತಂದೆ ಶಾಂತ ಚಿತ್ತರಾಗಿರುತ್ತಿದ್ದರು. ಆದರೆ ಮನೆಯವರು ಅವರ ನಿರೀಕ್ಷೆಯ ಮಟ್ಟಕ್ಕೆ ಏರದಿದ್ದಾಗ ಸ್ವಲ್ಪ ಮಟ್ಟಿಗಾದರೂ ನಮ್ಮ ತಂದೆ ವ್ಯಗ್ರಗೊಳ್ಳುತ್ತಿದ್ದರು ; ಹಲವು ನಿಮಿಷಗಳ ನಂತರ ತಮ್ಮಲ್ಲಿಯೇ ನೊಂದುಕೊಳ್ಳುತ್ತಿದ್ದರು. ಯಾವ ಸಮಯದಲ್ಲೂ ಕುಟುಂಬ ಸ್ವಾಸ್ಥ್ಯಕ್ಕೆ ಧಕ್ಕೆಯಾಗದಂತೆ ನಡೆದುಕೊಂಡಿದ್ದಾರೆ. ಇದಕ್ಕೆ ಪೋಷಕ ದ್ರವ್ಯ 'ವ್ಯಕ್ತಿ ಸ್ವಾತಂತ್ರ್ಯ'ದಲ್ಲಿ ಅವರ ಅಚಲ ವಿಶ್ವಾಸ. ಪತಿ, ಪುತ್ರ ಅಥವಾ ಮತ್ತಾರೇ ಆಗಲಿ ನಮ್ಮ ತಂದೆಯ ಅಭಿಪ್ರಾಯದ ಒತ್ತಾಯಕ್ಕೆ ಸಿಕ್ಕಿಲ್ಲ. ಕಾರಣ ಅವರೆಂದೂ ತಮ್ಮ ನಿಲುವನ್ನು ಅಧಿಕಾರ ಮನೋಭಾವದಿಂದ ಯಾರ ಮೇಲೂ ಹೇರಿಲ್ಲ. ಅವರು ನಿಜವಾದ ಪ್ರಜಾಪ್ರಭುತ್ವವಾದಿ. ಅವರು ಹೃದಯ ಪರಿವರ್ತನೆಗೆ ಹೆಚ್ಚು ಮಹತ್ವ ಕೊಡುತ್ತಾರೆ. ಇದಕ್ಕೆ ಪೂರಕ ಎರಡು ಸಂಗತಿಗಳನ್ನು ತಿಳಿಸಲು ಬಯಸುತ್ತೇನೆ.

ನಮ್ಮ ಮನೆಯಲ್ಲಿ ನನ್ನ ತಾಯಿ ಮತ್ತು ಅಜ್ಜಿಯರು ಪರಂಪರಾನುಗತ ಜೀವನ ನಿಷ್ಠರು. ಆದ್ದರಿಂದ ನಮ್ಮ ತಂದೆಯ ರೀತಿ ಅವರಿಗೆ ಹೆಚ್ಚು ಹಿಡಿಸುತ್ತಿರಲಿಲ್ಲ. ಒಮ್ಮೆ ತಂದೆಯ ಆಂಗ್ಲ ಮಿತ್ರರು ಊರಿಗೆ ಬರುವ ಕಾರ್ಯಕ್ರಮವಿತ್ತು. ಅವರ ಆತಿಥ್ಯ ನಮ್ಮ ತಂದೆಯ ಹೊಣೆ : ಆದ್ದರಿಂದ ತಂದೆ ಮನೆಯವರೊಂದಿಗೆ ಈ ವಿಷಯ ಸಮಾಲೋಚಿಸಿದರು. ಕುಟುಂಬದ ಪ್ರತಿಕ್ರಿಯೆ ಸ್ಪಷ್ಟ ವಿರೋಧ, ಕಾರಣ–ಒಬ್ಬ ಆಂಗ್ಲ ವ್ಯಕ್ತಿ ಸಾಂಪ್ರದಾಯಿಕ ಹಿಂದೂವಿನ ಮನೆಗೆ ಬರುವುದು ಶಾಸ್ತ್ರ ನಿಷಿದ್ಧ. ಈ ಸನ್ನಿವೇಶ ನಮ್ಮ ತಂದೆಗೆ ತೀವ್ರ ವ್ಯಥೆ ಉಂಟುಮಾಡಿತು: ಪರಿಸ್ಥಿತಿ ಮನೆಯ ಎಲ್ಲರಿಗೂ ಅಸಹನೀಯ. ಮನೆಯವರ ಅಸಹಕಾರದಿಂದ ನಮ್ಮ ತಂದೆ ಮಿತ್ರರ ಆತಿಥ್ಯಕ್ಕೆ ಪರ್ಯಾಯ ಏರ್ಪಾಡು ಯೋಚಿಸಿದ್ದರು. ಆದರೆ ಮಿತ್ರರ ಆಗಮನದ ಹಿಂದಿನ ದಿನ ಪವಾಡ ಜರುಗಿತು. ಮನೆಯವರು ತಂದೆಯ ಮಿತ್ರರ ಆತಿಥ್ಯಕ್ಕೆ ಸಿದ್ಧತೆ ಮಾಡಿದರು. ಇದರಿಂದ ಮನೆಯ ವಾತಾವರಣ ತಿಳಿಯಾಯಿತು. ಈ ಪರಿವರ್ತನೆ ಬಲಾತ್ಕಾರವಲ್ಲ. ಮನೆಯವರ ಸಕಾಲಿಕ ಅರಿವಿನಿಂದ ಉಂಟಾದುದು. ಆಮೇಲೆ ನಮ್ಮ ಕುಟುಂಬದಲ್ಲಿ ಎಂದೂ ಇಂಥ ಬಿಕ್ಕಟ್ಟಿನ ಪರಿಸ್ಥಿತಿ ತೋರಿಬಂದಿಲ್ಲ.

ನಮ್ಮ ತಂದೆಗೆ ಖಾದಿ ಬಲು ಪ್ರಿಯ. ಅದು ಸ್ವದೇಶಿ ; ಗಾಂಧೀ ತತ್ವದ ಬುನಾದಿ ; ಆದ್ದರಿಂದ ಅದನ್ನು ತೊಡುವುದು ಪವಿತ್ರ. ನನಗೂ ಖಾದಿ ಉಡುಪನ್ನೇ ಹೊಲಿಸುತ್ತಿದ್ದರು. ನನ್ನ ಗೆಳೆಯರ ವರ್ಣಮಯ ಮಿಲ್ ಬಟ್ಟೆಯ ಆಕರ್ಷಣೆ ನನ್ನಲ್ಲಿ ಯಾವಾಗಲೂ ಇದ್ದಿತು. ನಾನೆಂದೂ ನಮ್ಮ ತಂದೆಯವರಲ್ಲಿ ಇದನ್ನು ಹೇಳಲು ಆಗಲಿಲ್ಲ ; ಇದಕ್ಕೆ ಕಾರಣ ಮನೋಸ್ಥೈರ್ಯದ ಅಭಾವ. ನಾನು ಎಂ.ಎ.

ತರಗತಿಗೆ ಸೇರಿದಾಗ ಈ ಸುಪ್ತಕಾಮನೆ ಪ್ರಬಲವಾಗಿ, ಉಲ್ಲನ್ ಹಾಗೂ ಮಿಲ್ ಬಟ್ಟೆಯ ಒಂದೆರಡು ಪೋಷಾಕು ಹೊಂದಲು ಪ್ರೇರೇಪಿಸಿತು; ಪ್ಯಾಂಟ್ಸ್ ಮತ್ತು ಶರ್ಟ್ ನನಗೆ ತುಂಬ ಮೆಚ್ಚುಗೆಯಾಯಿತು. ಯಾವಾಗಲೂ ಅವುಗಳನ್ನೇ ಧರಿಸುತ್ತಿದ್ದೆ. ರಜಾದಿನಗಳಲ್ಲಿ ಮನೆಯವರೊಂದಿಗೆ ಇರುವಾಗ ಪುನಃ ಖಾದಿ ತೊಡುತ್ತಿದ್ದೆ. ಮಿಲ್ ಉಡುಪನ್ನು ನಮ್ಮ ತಂದೆಗೆ ಕಾಣದಂತೆ ಪೆಟ್ಟಿಗೆಯ ತಳದಲ್ಲಿ ಇಡುತ್ತಿದ್ದೆ. ಈ ನಡತೆ ಸರಿಯಲ್ಲವೆಂದು ನನಗಂತೂ ಹೊಳೆಯಲಿಲ್ಲ. ನಮ್ಮ ತಂದೆಗೆ ಒಡಿಸುವುದಿಲ್ಲ ಎಂಬ ಕಾರಣದಿಂದ ಮಾತ್ರ ನಾನು ಅವರೆದುರಿಗೆ ಮಿಲ್ ಉಡುಪು ತೊಡುತ್ತಿರಲಿಲ್ಲ. ಅನಂತರ ವೃತ್ತಿನಿರತನಾದ ಮೇಲೆ ಉಡುಪಿನ ಬಗೆಗಿನ ದ್ವಂದ್ವ ಉತ್ಕಟವಾಗಿ ನಮ್ಮ ತಂದೆಯೊಂದಿಗೆ ವಿಚಾರಮಾಡಿ ಮಿಲ್ ಬಟ್ಟೆಯ ನನ್ನ ವ್ಯಾಮೋಹವನ್ನು ಈಡೇರಿಸಿಕೊಂಡೆ. ಆಗ ಒಂದು ವಿಧದಲ್ಲಿ ನನಗೆ ತೃಪ್ತಿ. ಖಾದಿಯ ಬಗೆಗೆ ನನ್ನ ದೃಷ್ಟಿ ತಂದೆಯವರಿಗೆ ಅರಿವಾದ ಮೇಲೆ ಇನ್ನೆಂದೂ ಆ ವಿಷಯ ಅವರು ಪ್ರಸ್ತಾಪಿಸಲಿಲ್ಲ. ನನ್ನ ಅಭಿಪ್ರಾಯಕ್ಕೆ ಅವರೆಂದೂ ಅಡ್ಡಿ ಬರಲಿಲ್ಲ. ಆದ್ದರಿಂದ ಹಿಂದೆ ನಾನು ಮಾಡಿಕೊಳ್ಳುತ್ತಿದ್ದ 'ಆತ್ಮ ವಂಚನೆ' ಅತಿ ಹೇಯವೆಂಬ ಪ್ರಜ್ಞೆ ಮೂಡಿತ್ತು. ನಮ್ಮ ತಂದೆಯ ಸಮಾಧಾನಕರ ನಡವಳಿಕೆ ಈ ಸನ್ನಿವೇಶದಲ್ಲಿ ಪ್ರಕಟವಾದಾಗ ನನಗೆ ಮೇಲಿನ ಗೌರವ ಇಮ್ಮಡಿಸಿತು.

ನಮ್ಮ ತಂದೆ ಹೆಣ್ಣುಮಕ್ಕಳ ಪಕ್ಷಪಾತಿ: ಅವರಿಗೆ ಹೆಣ್ಣುಮಕ್ಕಳ ಸೌಮ್ಯ ಹಾಗೂ ಮಧುರ ಸ್ವಭಾವ ಅಚ್ಚುಮೆಚ್ಚು. ನಮ್ಮ ಮನೆಯಲ್ಲಿ ಹೆಣ್ಣು ಸಂತಾನ ವಿರಳ. ಅನೇಕ ವರ್ಷಗಳ ನಂತರ ನನ್ನ ಹಿಂದೆ ಒಬ್ಬ ತಂಗಿಯ ಜನನ. ಈ ಸಮಯದಲ್ಲಿ ನಮ್ಮ ತಂದೆ ಮತ್ತು ನಾನು ಮಾಯಸಂದ್ರದಲ್ಲಿದ್ದೆವು. ನನ್ನ ತಾಯಿ ಚಿಕ್ಕನಾಯಕನಹಳ್ಳಿಯಲ್ಲಿದ್ದರು. ಮಗುವನ್ನು ನೋಡಲು ನಮ್ಮ ತಂದೆ ಆಗಾಗ ಊರಿಗೆ ಹೋಗುತ್ತಿದ್ದರು. ಅದರ ಭವಿಷ್ಯದ ಕಲ್ಪನೆ ಅವರಲ್ಲಿ ಅಮಿತ ಉತ್ಸಾಹದ ಬುಗ್ಗೆ. ಮಗುವನ್ನು 'ವಾಣಿ' ಎಂದು ಮುದ್ದಿನಿಂದ ಕರೆದರು. ಕಾರಣಾಂತರದಿಂದ ಮಗು ಜ್ವರ ಭಾದೆಯಿಂದ ಮರಣಿಸಿತು. ಅಂದು ನಮ್ಮ ತಂದೆಗೆ ಏನು ಪ್ರೇರಣೆಯೋ (ಊರಿಗೆ ಹೋಗುವ ಕಾರ್ಯಕ್ರಮವಿಲ್ಲದಿದ್ದರೂ) ಚಿಕ್ಕನಾಯಕನಹಳ್ಳಿಗೆ ಪ್ರಾತಃಕಾಲದಲ್ಲೇ ತಲಪಿದರು. ಮಗುವನ್ನು ಮುದ್ದಿಸಿದರು. ಕೆಲವು ಕಾಲ ಮಗು ತನ್ನ ಪ್ರೇಮದಲ್ಲೇ ವಿಹಾಯಿಸಿತು; ಸ್ವಲ್ಪ ಹೊತ್ತಿನಲ್ಲೇ ಇಹ ಬಿಟ್ಟಿತು. ಈ ಘಟನೆ ನನ್ನ ತಂದೆ–ತಾಯಿಗೆ ದೊಡ್ಡ ಆಘಾತ. ನಮ್ಮ ತಂದೆಗೆ ಹಲವು ವರ್ಷಗಳ ನಂತರವೂ ಆ ಪೋರಿಯ ಅನನ್ಯ ನೆನಪು. ಆದ್ದರಿಂದ ಹೆಣ್ಣು ಮಕ್ಕಳ ಬಗೆಗೆ ಅವರಿಗೆ ತುಂಬಾ ಮಮತೆ. ಅವರು ನನ್ನ ಶ್ರೀಮತಿಯನ್ನು ಮಗಳಂತೆ ಕಂಡಿದ್ದಾರೆ; ಪ್ರಿಯದರ್ಶಿನಿ ಎಂಬ ಒಲವಿನ ಅಂಕಿತ ಆಕೆಗೆ ತನ್ನ ಮಾವನವರಿಂದ ದೊರಕಿದೆ. ಹೆಣ್ಣುಮಕ್ಕಳ ಬಗೆಗಿನ ನಮ್ಮ ತಂದೆಯ ಮೃದು ಭಾವನೆ ನೊಂದ ಮಹಿಳೆಯರನೇಕರಿಗೆ ಜೀವನಾಧಾರ ವೃತ್ತಿಯನ್ನು ಕಲ್ಪಿಸಲು ಅನೇಕ ರೀತಿಯಲ್ಲಿ ನೆರವಾಗಿದೆ.

"ಜೀವನ ಆದರ್ಶ" ನಮ್ಮ ತಂದೆಯ ರಕ್ತಗುಣ. ಗಾಂಧೀಜಿಯ "ಸನಾತನ ಧರ್ಮ" ಅವರ ಬಾಳಿನ ಪರಿಗೋಲು. ಅವರಿಗೆ 'ಅತಿ ಭೌತಿಕ ಶಕ್ತಿ'ಯಲ್ಲಿ (Supernatural Being) ನಂಬಿಕೆ. ಈ ದೃಷ್ಟಿ ಧರ್ಮಶ್ರದ್ಧೆಯು ಒಬ್ಬ ಹಿಂದೂವಿನ ಮನೋಭಾವನೆಯಂತೆಯೇ ಇದೆ. ಆದರೆ ಮನುಷ್ಯ ಪ್ರಯತ್ನವೂ ದೈವಿಕವಾಗಬಲ್ಲದೆಂದು ಅವರು ನಂಬಿದವರು. "ಅಜ್ಞಾನ ನಿರ್ಮೂಲನ" ಪ್ರಾಮಾಣಿಕ ಕ್ರಿಯೆಗಾಗಿ ಜನಸಮೂಹವನ್ನು ಎಚ್ಚರಿಸಿದರೆ ಅದು ದೈವಿಕ ಕಾರ್ಯವೇ ಎಂಬುದು ನಮ್ಮ ತಂದೆಯ ಅಭಿಮತ. ಅವರು ಈ ಕಾರ್ಯವನ್ನು ತಮ್ಮ ಜೀವನ ಸಾಧನೆ ಎಂದು ಪರಿಗಣಿಸಿ ಸತತವಾಗಿ ಮೂರು ದಶಕಗಳು ಸ್ವತಂತ್ರ ಬರವಣಿಗೆಯಿಂದ ಜನಸಮುದಾಯವನ್ನು ಜಾಗೃತಗೊಳಿಸಿದ್ದಾರೆ. ಮಹಾತ್ಮ ಗಾಂಧೀಜಿಯ ಬರವಣಿಗೆಯ ಕನ್ನಡ ಭಾಷಾಂತರ ನಮ್ಮ ತಂದೆಗೆ ತಮ್ಮ ಕೃತಿಗಳಿಗೆಲ್ಲಾ ತೃಪ್ತಿದಾಯಕ. ಕನ್ನಡ ಸಾರಸ್ವತ ಲೋಕಕ್ಕೆ ಇದೊಂದು ಜಿ.ವಿ.ನಾ. ಅವರ ಸಾರ್ವಕಾಲಿಕ ಕೊಡುಗೆ. ಕರ್ನಾಟಕದಲ್ಲಿ ಗಾಂಧೀ ವಿಚಾರ 'ಸರ್ವೋದಯ' ಪ್ರಣಾಲಿಯನ್ನು ಸಮರ್ಥವಾಗಿ ಜನಮನಕ್ಕೆ ಮುಟ್ಟಿಸಿರುವ ಕೆಲವೇ ವ್ಯಕ್ತಿಗಳಲ್ಲಿ ನಮ್ಮ ತಂದೆಯೂ ಒಬ್ಬರು.

೨೨ ನವೆಂಬರ್ ೧೯೭೭ ರಂದು ನಮ್ಮ ತಂದೆಯ ಜೀವನದಲ್ಲಿ ಮರೆಯಲಾಗದ ದುರಂತ. ಊಟವಾದ ನಂತರ ವಿಶ್ರಮಿಸಿಕೊಳ್ಳುವಾಗ ಪಾರ್ಶ್ವವಾಯು ಪೀಡಿತರಾದರು. ಆದರೆ ಅವರು ಕೆಲಗಂಟೆಗಳಲ್ಲಿಯೇ ಪೂರ್ಣ ಚೇತರಿಸಿಕೊಂಡರು. ಮಾರನೆಯ ದಿನ ಪುನಃ ಅದೇ ವೇಳೆಯಲ್ಲಿ ತೀವ್ರ ಪಾರ್ಶ್ವರೋಗಕ್ಕೆ ತುತ್ತಾದರು. ಈ ಬಾರಿ ಮಾತು ಹಾಗೂ ಬಲಭಾಗದ ಶಕ್ತಿ ಕುಂದಿತು. ಸಕಾಲದ ವೈದ್ಯಕೀಯ ನೆರವು ಆರೋಗ್ಯ ಉತ್ತಮಗೊಳ್ಳಲು ಸಾಧಕವಾಯಿತು. ಅವರ ಮಾತು ಕ್ರಮೇಣ ಉತ್ತಮವಾಯಿತು ; ಬಲಪಾರ್ಶ್ವ–ಕೈ, ಕಾಲು ಊನವಾಯಿತು : ಇವುಗಳ ಸ್ವಾಸ್ಥ್ಯ ನಮ್ಮ ತಂದೆಗೆ ಬಹು ಪ್ರಮುಖವೆನಿಸಿದ್ದರಿಂದ ಮನೋದಾರ್ಢ್ಯದಿಂದ ಅಂಗ ಸಾಧನೆ ಮಾಡಿ ಅವುಗಳ ಚಲನೆಯ ಮೇಲೆ ಹತೋಟಿ ಗಳಿಸಿದರು. ವಿಶೇಷವಾಗಿ, ಕೈ ಚಲನೆ ಪಡೆದುದು ಅವರ ಮಹತ್ಸಾಧನೆ. ಇದು ನನ್ನ ದೃಷ್ಟಿಯಲ್ಲಿ ಅನಾರೋಗ್ಯಪೀಡಿತ ಜಯಪ್ರಕಾಶರ ಮಹಾಚೇತನ ರಾಷ್ಟ್ರವನ್ನು ಜಾಗೃತಗೊಳಿಸಿ ಸರ್ವಾಧಿಕಾರ ಪ್ರಭುತ್ವವನ್ನು ಮೆಟ್ಟಿ ನಿಲ್ಲುವ ಕೆಚ್ಚನ್ನು ಮೂಡಿಸಿದಷ್ಟೇ ಹಿರಿದಾದುದು. ಕೈ ಸ್ವಾಧೀನ ಬಂದಂತೆ ನಮ್ಮ ತಂದೆ ಬರೆಯಲು ಆರಂಭಿಸಿದರು. ಜೆ.ಪಿ. ಯವರ ಒಂದು ಪುಟ್ಟ ಜೀವನ ಚರಿತ್ರೆಯನ್ನು ಭಾರತ-ಭಾರತಿ ಪುಸ್ತಕ ಮಾಲೆಗೆ ಸಿದ್ಧಗೊಳಿಸಿದರು, ಆರೋಗ್ಯ ನಿಧಾನವಾಗಿ ಉತ್ತಮವಾಗುತ್ತಿದೆ. ನನಗೆ ಪತ್ರ ಬರೆಯುತ್ತಿದ್ದಾರೆ; ಆ ಪತ್ರಗಳು ಆಶೀರ್ವಾದಪೂರ್ವಕವಾಗಿವೆ. ಇಂಥ ಧನ್ಯ ವ್ಯಕ್ತಿಯ ಮಗ ನಾನೆಂಬುದೇ ಹೆಮ್ಮೆಯ ಸಂಗತಿ.

ಈ 'ವೈಯಕ್ತಿಕ ಅನಿಸಿಕೆಗಳ' ಲೇಖನವನ್ನು ಮುಗಿಸುವ ಮೊದಲು, ನನ್ನ ಕರ್ತವ್ಯವಾಗಿ ನಾನು ಜಿ.ವಿ.ನಾ. ಅವರ ವಿದ್ಯಾರ್ಥಿ ಎಂಬ ವಿಷಯ ತಿಳಿಸಬೇಕು,

ಈ ಭಾಗ್ಯ ಅಸಮಾನ್ಯವಾದುದು. ಅವರು ಪ್ರೌಢಶಾಲೆಯಲ್ಲಿ ನನ್ನ ಗುರು. ಅವರು ಪಾಠ ಹೇಳುವ ರೀತಿ ವಿದ್ಯಾರ್ಥಿಗಳಿಗೆ ಆಯಸ್ಕಾಂತ ಸದೃಶ. ನನಗೆ ಅನಿಸುವಂತೆ ಬಹುಶಃ ನಮ್ಮಲ್ಲಿ ಕೆಲವರು ನಮ್ಮ ತಂದೆಯವರ ಪ್ರಭಾವದಿಂದಾಗಿ ತಮಗೇ ಅರಿವಾಗದಂತೆ ಅವರ ಜಾಡನ್ನೇ (ಅಧ್ಯಾಪಕ ವೃತ್ತಿ) ಅನುಕರಿಸಲು ಪ್ರೇರಣೆ ದೊರಕಿತೋ ಏನೊ ! ನನ್ನ ಬಗೆಗಷ್ಟೇ ಹೇಳಿಕೊಂಡರೆ ನಾನು ಉಪನ್ಯಾಸಕನಾಗುವ ಆಸೆ ಶಾಲಾ ದಿನಗಳಲ್ಲಿಯೇ ಗರಿಗೆದರಿತ್ತು.

ಈ ಸಂದರ್ಭದಲ್ಲಿಯೇ ನನ್ನ ವಿದ್ಯಾರ್ಥಿದೆಸೆಯ ಒಂದೆರಡು ಸಂಗತಿಗಳನ್ನು ತಿಳಿಸಿದರೆ ಔಚಿತ್ಯಕ್ಕೆ ಲೋಪವಾಗಲಾರದು. ಮೊದಲನೆಯದು, ನಮ್ಮ ತಂದೆಯ ಇಂಗ್ಲಿಷ್ ಬೋಧನಾ ಕ್ರಮ, ಅವರ ಮಾತಿನ ಶೈಲಿ ಮೋಹಕ ; ಉಚ್ಚಾರ ಸ್ಪಷ್ಟ ಹಾಗೂ ಕಳಂಕ ರಹಿತ ; ಸರಳ ವಿವರಣೆ ಹಾಗೂ ನೇರ ಸಂಭಾಷಣಾ ವಿಧಾನ ನಮಗೆ ಸ್ವತಂತ್ರವಾಗಿ ಇಂಗ್ಲಿಷ್ ಭಾಷೆಯನ್ನು ಬೆಳಸಿಕೊಳ್ಳಲು ಸಹಾಯಮಾಡಿತು. ತರಗತಿಯ ನಂತರ ಹೊರಗೆ ಬಂದರೆ ನಾವು ಕಲಿತ ವಿಷಯಗಳು ಪುನಃ ಪುನಃ ನಮ್ಮ ಮನಸ್ಸಿನಲ್ಲಿ ಸುಳಿದಾಡುತ್ತಿದ್ದವು. ವಾಕ್ಯರಚನೆ, ವಾಕ್ಯವಿಭಾಗ, ಪದ ವಿಶ್ಲೇಷಣೆ ಎಲ್ಲವನ್ನೂ ನಾವು ಕಲಿಯುತ್ತಿದ್ದೆವು. ನನ್ನ ತರಗತಿಯಲ್ಲಿ ಇಬ್ಬರು ವಿದ್ಯಾರ್ಥಿಗಳು ನನಗೆ ಆಪ್ತರು. ಅವರು ಮತ್ತು ನಾನು ಇಂಗ್ಲಿಷ್ ಪಾಠಗಳಲ್ಲಿ ಮುಂದಿರುತ್ತಿದ್ದೆವು. ನಮ್ಮ ತಂದೆ ಪಾಠದ ವಿಷಯವಾಗಿ ಪ್ರಶ್ನೆ ಕೇಳುತ್ತಿದ್ದರು. ಸಾಮಾನ್ಯವಾಗಿ ಉತ್ತರಗಳು ನಮಗೆಲ್ಲಾ ಗೊತ್ತಿರುತ್ತಿದ್ದವು. ಕಾರಣಾಂತರದಿಂದ ನನಗೆ ಉತ್ತರ ಹೊಳೆಯದಿದ್ದಾಗ ನನ್ನ ಸ್ನೇಹಿತನಿಂದ ಕೆನ್ನೆಗೆ ತಪ್ಪದೆ ಏಟು ಬೀಳುತ್ತಿತ್ತು. ಇಂತಹ ಅವಕಾಶ ನನಗೆ ದೊರಕಿ ಸ್ನೇಹಿತನಿಗೆ ಏಟನ್ನು ಹಿಂದಿರುಗಿಸುವ ಹಂಬಲ. ಆದರೆ ನಮ್ಮ ತಂದೆ ನನ್ನಿಂದ ಮಿತ್ರರಿಗೆ ಎಂದೂ ಶಿಕ್ಷೆ ಕೊಡಿಸಲಿಲ್ಲ. ಸ್ನೇಹಿತನ ಏಟಿನಿಂದ ನಾಚಿಕೆಯುಂಟಾಗಿ ನಮ್ಮ ತಂದೆಯ ಬಗೆಗೆ ಸಿಟ್ಟು ಉಂಟಾಗುತ್ತಿತ್ತು. ಮನೆಯಲ್ಲಿ ಇವರ ಬಗೆಗೆ ಪ್ರಶ್ನಿಸಿದಾಗ, ಅವರಿಂದ ಬರುತ್ತಿದ್ದ ಉತ್ತರ "ನಿನ್ನ ಕಲಿಕೆ ನನ್ನ ನಿರೀಕ್ಷೆಗಿಂತ ಒಂದು ಮಜಲು ಕೆಳಗಿನದು ; ಆದ್ದರಿಂದ ಉತ್ತರಿಸಿದ ಮಿತ್ರನಿಂದ ನಿನಗೆ ಶಿಕ್ಷೆ" ಈ ವಿಧಾನ ನನ್ನಲ್ಲಿ ಆತ್ಮಗೌರವದ ಕಿಚ್ಚನ್ನು ಹೊತ್ತಿಸಿತು. ನನ್ನ ಕಲಿಕೆ ಉತ್ತಮಗೊಂಡಿತು. ಅಂದು ಏಟು ಕೊಟ್ಟ ಸಹವಿದ್ಯಾರ್ಥಿಗಳು ಇಂದಿಗೂ ನನ್ನ ಆಪ್ತಗೆಳೆಯರು.

ಎರಡನೆಯ ಸಂಗತಿ ನನ್ನ ಗಣಿತಶಾಸ್ತ್ರ ಕಲಿಕೆಗೆ ಸಂಬಂಧಿಸಿದ್ದು. ಗಣಿತ ನನ್ನ ಮೆಚ್ಚುಗೆಗೆ ಯಾವಾಗಲೂ ಅಪಾತ್ರ ; ಮುಖ್ಯೋಪಾಧ್ಯಾಯರಾದ ನಮ್ಮ ತಂದೆ ಐಚ್ಛಿಕ ವಿಷಯವಾಗಿ ಗಣಿತ ಮತ್ತು ವಿಜ್ಞಾನವನ್ನು ಕೊಡಿಸಿದರು. ನನಗೆ ಬೀಜಗಣಿತ ಸ್ವಲ್ಪ ಸುಲಭವಾಗಿತ್ತು ; ಆದರೆ ಏಕೋ ತಲೆಸಿಡಿತದ ವಿಷಯ. ಇದರ ಅರಿವು ನಮ್ಮ ತಂದೆಗೆ ಆಯಿತು. ತಮ್ಮ ಕೆಲಸದ ಮಧ್ಯದಲ್ಲೇ ಸ್ವಲ್ಪ ವಿರಾಮ ಮಾಡಿಕೊಂಡು ಜ್ಯಾಮಿತಿಯ ಪ್ರಮೇಯಗಳನ್ನು ಕಾಗದದ ಮಾದರಿಯ

ಸಹಾಯದಿಂದ ವಿಶ್ಲೇಷಿಸಿ. ಅವುಗಳ ಸಾಮಾನ್ಯನಿರೂಪಣೆಯನ್ನು ಸಾಧಿಸು ತ್ತಿದ್ದರು. ಜ್ಯಾಮಿತಿಯ ಆಕೃತಿಗಳು ಚೆಂದವೆನಿಸಿ ನನಗೆ ವಿಷಯ ಮನ ದಟ್ಟಾಯಿತೆಂದು ಅನ್ನಿಸುತ್ತಿತ್ತು. ಕೆಲವು ದಿನಗಳನಂತರ ಏನು ಕಾರಣವೋ ಎಲ್ಲವೂ ಮರೆತು ಹೋಗಿರುತ್ತಿತ್ತು. ಐಚ್ಛಿಕ ವಿಷಯ ಕಲಿಯಲು ಆರಂಭಿಸಿ ಒಂದು ವರುಷ ಕಳೆದಿತ್ತು ; ಪರೀಕ್ಷೆಯಾಯಿತು ; ನನ್ನ ಅಂಕಗಳು ಗಣಿತ ಶಾಸ್ತ್ರದಲ್ಲಿ ಪೂರ್ಣ ನಿರಾಶಾದಾಯಕವಾಗಿತ್ತು. ನಮ್ಮ ತಂದೆ ನನ್ನಲ್ಲಿ ಈ ಬಗೆಗೆ ವಿಚಾರ ಮಾಡಿ ನನ್ನ ಇಚ್ಛೆಯಂತೆ ಐಚ್ಛಿಕ ವಿಷಯವನ್ನು ಬದಲಾಯಿಸಿಕೊಟ್ಟರು. ಇತಿಹಾಸ ಅಧ್ಯಯನ ಆರಿಸಿಕೊಂಡೆ. ಈ ಹೊತ್ತಿಗೆ ನಾನು ಹೈಸ್ಕೂಲಿನ ಕೊನೆಯ ತರಗತಿಯಲ್ಲಿದ್ದೆ. ನಾನು ವಿಜ್ಞಾನ ತರಗತಿಯಲ್ಲಿದ್ದಾಗ (ಪಕ್ಕದ ಕೊಠಡಿ) ನಮ್ಮ ತಂದೆ ಬ್ರಿಟಿಷ್ ಇತಿಹಾಸ ಪಾಠ ಹೇಳುವ ರೀತಿ ಕೇಳಿಸುತ್ತಿತ್ತು. ಅದರಲ್ಲಿ ಆಸಕ್ತಿ ಕ್ರಮೇಣ ವೃದ್ಧಿಯಾಯಿತು. ಐಚ್ಛಿಕ ವಿಷಯ ಬದಲಾವಣೆಯಾದನಂತರ ಪುನಃ ನಮ್ಮ ತಂದೆಯಿಂದ ಪಾಠ ಕೇಳುವ ಹಾಗೂ ಕಲಿಯುವ ಅವಕಾಶ ನನ್ನದಾಯಿತು. ಆಗ ಕಲಿತ ಬ್ರಿಟಿಷ್ ಇತಿಹಾಸದ ಅನೇಕ ವಿಷಯಗಳು ನನಗೆ ಸಕಾಲದಲ್ಲಿ (ಪಾಠ ಹೇಳು ವಾಗ) ನೆನಪಿಗೆ ಬರುತ್ತವೆ. ಆಗ ನನ್ನ ಗುರುವಿನ ಬಗೆಗೆ ಹೆಮ್ಮೆ ; ಅದಕ್ಕಾಗಿ ಅವರಿಗೆ ಪ್ರೀತಿಯ ನಮನ. ಕೊನೆಯದಾಗಿ, ವಿನಯಶೀಲತೆ, ಹಾಗೂ ಕರ್ತವ್ಯಪರ ಪ್ರಜ್ಞೆ ಯನ್ನು ಮೂಡಿಸಿ, ಜೊತೆಗೆ ನನ್ನದೇ ಆದ ಜೀವನ ಆದರ್ಶವನ್ನು ರೂಪಿಸಿಕೊಳ್ಳಲು ನೆರವಾದ ನಮ್ಮ ಪೂಜ್ಯತಂದೆಗೆ ಅನಂತ ಪ್ರಣಾಮಗಳು.

ಪ
ಥಿ
ಕ

# ಸಹೃದಯ—'ಜಿ.ವಿ.ನಾ.'

ಪುಷ್ಪಾ ವಿ. ರಾವ್.

ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿ ತೆಂಗಿನ ಬೆಳೆಗೆ ಹೆಸರುವಾಸಿಯಾದ ಊರು. ಶ್ರೀ ಜಿ.ವಿ.ನಾ. ಅವರಿಂದ ಆ ಊರು ಮತ್ತಷ್ಟು ಪ್ರಸಿದ್ಧವಾಗಿದೆ ಎಂದರೆ ಅತಿಶಯೋಕ್ತಿಯೇನಲ್ಲ. ಜಿ.ವಿ.ನಾ. ಊರಿನ ಎಲ್ಲರಿಗೂ ಚಿರಪರಿಚಿತ ವ್ಯಕ್ತಿ. ಕಲ್ಪತರುವಿನ ನೆಲೆವೀಡಿನ ಈ ಹಿರಿಯರು ಊರವರ ಪಾಲಿಗೆ ಬೌದ್ಧಿಕ ಕಾಮಧೇನು.

ಶ್ರೀ ಜಿ.ವಿ.ನಾ. ಅವರ ಮನೆ ಎರಡು ವಿಶಾಲವಾದ ಜಗಲಿಗಳ, ದೊಡ್ಡ ಹಜಾರವುಳ್ಳ ಮಹಡಿ ಕಟ್ಟಡ. 'ಮಹಡಿ' ಎಂದರೆ, ಹಲಗೆಗಳನ್ನು ಜೋಡಿಸಿ ಮಾಡಿದ ಹಳೆಯ ಕಾಲದ ಮಾಡು. ಇದು ಸಂಪೂರ್ಣವಾಗಿ ಇವರಿಗೇ ಮೀಸಲು. ಜಿ.ವಿ.ನಾ. ಅವರ ಬದುಕಿನ ಪ್ರತಿಯೊಂದು ಹೆಜ್ಜೆಯೊಂದಿಗೂ ಸ್ಪಂದಿಸುತ್ತಿರುವ ಈ ಮಹಡಿ ಅವರ ಕಾರ್ಯ ಚಟುವಟಿಕೆಗಳ ಕ್ಷೇತ್ರ. ಪುಸ್ತಕದ ಕಪಾಟುಗಳಿಂದ ತುಂಬಿದ ಶಾಂತ ವಾತಾವರಣವುಳ್ಳ ಹಜಾರದೊಳಗೆ ಕಾಲಿಟ್ಟೊಡನೆಯೇ ಆರಾಮಾಸನದಲ್ಲಿ ಒರಗಿ ಗ್ರಂಥ ಹಸ್ತರಾದ ಜಿ.ವಿ.ನಾ. ಅವರ ನಗೆಮೊಗ ಸ್ವಾಗತಿಸುತ್ತದೆ. ಅವರ ನಗೆಯಷ್ಟೇ ನಿಷ್ಕಳಂಕ ಅವರು ತೊಡುವ ಬಿಳಿಯ ಖಾದಿ ಉಡುಪು.

ಅವರಿಂದ ವಿವಿಧ ವಿಷಯಗಳನ್ನು ತಿಳಿದುಕೊಳ್ಳಲು ಊರಿನ ಅನೇಕ ಜನ ಹಿರಿಯರು, ಕಿರಿಯರು ಅವರಲ್ಲಿಗೆ ಬರುವರು. ಬೇಸರಿಸದೆ ಪ್ರತಿಯೊಬ್ಬನ ಸಮಸ್ಯೆಯನ್ನು ತಮ್ಮದೇ ಎಂಬಷ್ಟು ತಲೆಗೆ ಹಚ್ಚಿಕೊಂಡು ಬಂದವರನ್ನು ಸಮಾಧಾನಗೊಳಿಸಿ ಕಳುಹುವರು. ಬೆಳಗಿನಿಂದ ಬೈಗಿನವರೆಗೆ ಮಾತಾಡಿದ್ದರೂ ಆಯಾಸ ತೋರಿಸಿಕೊಳ್ಳದಂತಹ ಧೀಮಂತ ವ್ಯಕ್ತಿತ್ವ.

ಶ್ರೀಯುತ ಜಿ. ವಿ. ನಾರಾಯಣಮೂರ್ತಿಯವರ ಹಾಗೂ ನಮ್ಮ ಕುಟುಂಬದ ಪರಿಚಯ ಇಂದು–ನಿನ್ನೆಯದಲ್ಲ. ಸುಮಾರು ಇಪ್ಪತ್ತು ಮೂವತ್ತು ವರ್ಷಗಳಿಗೂ ಹಿಂದಿನದು. ಅವರು ನಮ್ಮ ತಾಯಿ ಕಡೆಯ ದೂರದ ಸಂಬಂಧಿಗಳು. ಅವರನ್ನು ನಾನು ಮೊದಲು ಕಂಡಾಗ ಏಳೆಂಟು ವರ್ಷದ ಹುಡುಗಿಯಾಗಿದ್ದೆ. ಒಮ್ಮೆ ನಮ್ಮಲ್ಲಿಗೆ ಬಂದಾಗ ಕಿರಿಯರಾದ ನಮಗೆಲ್ಲ ಅದೊಂದು ರೀತಿಯ ಭಯಮಿಶ್ರಿತ ಕುತೂಹಲ. ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬಂದ ಬಗೆಯನ್ನು ನಮ್ಮ ಪಠ್ಯಪುಸ್ತಕಗಳಲ್ಲಿ ಓದಿದ್ದೆವು. ಆ ಹೋರಾಟದಲ್ಲಿ ಗಾಂಧೀಜಿಯವರೊಂದಿಗೆ ಹೆಗಲೆಣೆಯಾಗಿ ಪಾಲ್ಗೊಂಡ

ಜನರಲ್ಲಿ ಈ ಮಹನೀಯರೂ ಒಬ್ಬರೆಂದು ನಮಗೆ ತಿಳಿದಿತ್ತು. ಅಂತಹ ಚರಿತ್ರಾರ್ಹ ವ್ಯಕ್ತಿಯನ್ನು ಕಣ್ಣಾರೆ ಕಾಣುವ ಸೌಭಾಗ್ಯ ನನಗಂದು ಲಭಿಸಿತು. ಅವರು ಬಳಿ ಕರೆದರೂ ಹತ್ತಿರ ಹೋಗಲು ಸಂಕೋಚ.

ತುಮಕೂರಿಗೆ ಶ್ರೀ ಜಿ.ಪಿ.ನಾ. ಹೋದರೆ ಎಲ್ಲರೂ "ಬಿ.ಎ. ಪಾಸ್ ಮಾಡಿದ ಹುಡುಗ" ಎಂದು ಕೈದೋರುತ್ತಿದ್ದರಂತೆ. ಇಂದು ಕನಿಷ್ಠ ವಿದ್ಯಾರ್ಹತೆಯಾದ ಬಿ.ಎ. ಪದವಿಗೆ ಅಂದು ಅಷ್ಟು ಗೌರವವಿದ್ದಿತು. ನಮ್ಮಮ್ಮನಿಂದ ನಮಗೆ ಈ ರೀತಿಯ ಅನೇಕ ವಿಷಯಗಳು ತಿಳಿದು ಬಂದಿದ್ದವು.

ಇಪ್ಪತ್ತು ವರ್ಷಗಳಿಂದೀಚೆಗೆ ಶ್ರೀಯುತರು ನಮಗೆ ಅತ್ಯಂತ ಆತ್ಮೀಯರಾಗಿದ್ದಾರೆ. ನಮ್ಮಕ್ಕ ಅವರ ಸೊಸೆಯಾಗಿ ಮನೆತುಂಬಿದ ಮೇಲೆ ಎರಡೂ ಕುಟುಂಬಗಳ ಬಾಂಧವ್ಯದ ಬೆಸುಗೆ ಮತ್ತಷ್ಟು ಬಿಗಿಯಾಯಿತು. ಬೆಂಗಳೂರಿಗೆ ಬಂದಾಗಲೆಲ್ಲ ನಮ್ಮಲ್ಲಿಯೇ ತಂಗುತ್ತಿದ್ದರು. ಗಾಂಧಿ ಶತಾಬ್ದಿ ಸಮಿತಿಯ ಸದಸ್ಯರಾಗಿದ್ದುದರಿಂದ ಅವರು ಆಗೆಲ್ಲಾ ಮೇಲಿಂದ ಮೇಲೆ ಇಲ್ಲಿಗೆ ಬರುತ್ತಿದ್ದರು. ಅವರು ಮನೆಗೆ ಬಂದಾಗ ನಮಗೇ ತಿಳಿಯದಂತೆ ಮನೆಯವರೆಲ್ಲ ಶಿಸ್ತಿನಿಂದ ನಡೆದುಕೊಳ್ಳುತ್ತಿದ್ದೆವು. ಆಗ ಆಕಾಶವಾಣಿಯಲ್ಲಿ ರಾತ್ರಿ ಕಾರ್ಯಕ್ರಮಗಳೆಲ್ಲಾ ಮುಗಿದ ಮೇಲೆ ರಾಷ್ಟ್ರಗೀತೆ ಹಾಕುತ್ತಿದ್ದರು. ಜಿ.ಪಿ.ನಾ. ಅವರಿದ್ದಾಗ ಆ ಕಾರ್ಯಕ್ರಮದಿಂದ ನಮ್ಮ ಮನೆಯಲ್ಲಿ ಒಂದು ರೀತಿಯ ಶಾಂತ ಹಾಗೂ ಗಂಭೀರ ಪರಿಸರವುಂಟಾಗುತ್ತಿದ್ದಿತು.

ನಮ್ಮ ಮನೆಯಲ್ಲಿ ಅವರಿದ್ದಷ್ಟು ದಿನವೂ ನನಗೆ ಅವರಿಂದ ಅನೇಕ ವಿಷಯಗಳನ್ನು ತಿಳಿದುಕೊಳ್ಳುವ ಸದವಕಾಶ ಒದಗುತ್ತಿತ್ತು. ನಮ್ಮ ಸಂಭಾಷಣೆ ಚರ್ಚಾರೂಪದಲ್ಲಿ ಪ್ರಾರಂಭವಾಗುತ್ತಿತ್ತು. ಅನಂತರ ಅದು ಗಂಭೀರ ತಿರುವನ್ನು ಪಡೆದು ನಾನು ಬರಿಯ ಕೇಳುಗಳಾಗುತ್ತಿದ್ದೆ. ಯಾವ ಸಮಯದಲ್ಲೂ ಅವರು ಬೇಸರಪಟ್ಟುಕೊಳ್ಳುತ್ತಿರಲಿಲ್ಲ. ಬದಲಿಗೆ ನನ್ನ ಅಭಿಪ್ರಾಯಗಳನ್ನು ತಿಳಿಸಲು ಪ್ರೋತ್ಸಾಹಿಸುತ್ತಿದ್ದರು. ಈ ಪ್ರೋತ್ಸಾಹವೇ ನನ್ನನ್ನು ಸಾಹಿತ್ಯದ ವಿದ್ಯಾರ್ಥಿಯನ್ನಾಗಿ ಮಾಡಿತು ಎಂದು ಹೇಳಿಕೊಳ್ಳಲು ನನಗೆ ಹೆಮ್ಮೆಯೆನಿಸುತ್ತದೆ.

ನಾನಿನ್ನೂ ಪಿ.ಯು.ಸಿ. ಮಟ್ಟದಲ್ಲಿದ್ದಾಗಲೇ ನನ್ನದೊಂದು ಕಿರುಲೇಖನ ಪತ್ರಿಕೆಯೊಂದರಲ್ಲಿ ಪ್ರಕಟಗೊಂಡಿತ್ತು. ಅದನ್ನು ಓದಿದ ಜಿ.ಪಿ.ನಾ. ತಕ್ಷಣ ಪತ್ರಬರೆದು "ಬರಹ ಮತ್ತು ಭಾವ ಚೆನ್ನಾಗಿದೆ ; ಅಭಿವೃದ್ಧಿಪಡಿಸಿಕೊ" ಎಂದು ಬೆನ್ನು ತಟ್ಟಿದರು. ಈ ಉತ್ತೇಜನದಿಂದ ನಾನು ಉತ್ಸಾಹಿತಳಾಗಿ ಎಂ.ಎ. ಪದವಿಯನ್ನು ಗಳಿಸಿಕೊಂಡೆ.

ಜಿ.ಪಿ.ನಾ. ಅವರು ಕನ್ನಡ ಭಾಷೆಯಲ್ಲಿ ಪ್ರೌಢಿಮೆಯನ್ನು ಪಡೆದಿದ್ದಂತೆಯೇ ಇಂಗ್ಲಿಷ್ ಭಾಷೆಯಲ್ಲಿಯೂ ಹತೋಟಿಯನ್ನು ಸಾಧಿಸಿದ್ದರು. ಒಮ್ಮೆ ಬೇಸಿಗೆ ರಜೆಯಲ್ಲಿ ಅವರೊಂದಿಗೆ ಚಿಕ್ಕನಾಯಕನ ಹಳ್ಳಿಯಲ್ಲಿ ಹದಿನೈದು ದಿವಸಗಳನ್ನು ಕಳೆಯುವ

ಸೌಭಾಗ್ಯ ನನಗೊದಗಿತು. ಆ ದಿನಗಳಲ್ಲಿ ನನಗೇ ತಿಳಿಯದಂತೆ ನನ್ನಲ್ಲಿ ಮಹತ್ತರವಾದ ಮಾರ್ಪಾಟಾಗಿತ್ತು. ಅಲ್ಲಿರುವಷ್ಟು ದಿನವೂ ನನಗೆ ಇಂಗ್ಲಿಷ್ ವ್ಯಾಕರಣವನ್ನು ಬಹಳ ಸರಳ ವಿಧಾನದಲ್ಲಿ ಕಲಿಸಿಕೊಟ್ಟರು. ಸ್ವತಹ ಶಿಕ್ಷಕರಾಗಿದ್ದ ಜಿ.ವಿ.ನಾ ಅವರ ಶಿಷ್ಯಕೋಟಿ, ಅವರ ತರಗತಿಗಳನ್ನು ಮರೆಯಲಾರೆವು, ಎಂದು ಹೇಳುತ್ತಿದ್ದುದರ ಔಚಿತ್ಯ ನನಗಾಗ ತಿಳಿಯಿತು.

ಹೆಮ್ಮರವೊಂದು ಕಿರಿಯ ಬೀಜದುತ್ಸಾಹಕ್ಕೆ ತಣ್ಣೀರೆರಚದೆ, ಅದನ್ನು ಸರ್ವತೋಮುಖವಾಗಿ ಬೆಳೆಯಲು ಅನುವುಮಾಡಿಕೊಡುವುದಕ್ಕಿಂತ ಹೆಚ್ಚೇನು ಬೇಕು ? ಬೆಳೆಯುವ ಪೈರನ್ನು ಒಣಗಲು ಬಿಡದೆ, ಅವರ ಬೆಳವಣಿಗೆಗೆ ಒತ್ತಾಸೆಯಾಗಿ ಅದು ಮಣ್ಣಿನ ಗುಣವನ್ನು ಹೀರಿಕೊಂಡು ಸತ್ವಶಾಲಿಯಾಗಿ, ಸ್ವಾವಲಂಬಿಯಾಗಿ ಬೆಳೆಯಲು ಸಾಧ್ಯವಾಗುತ್ತದೆ. ಈ ಹೋಲಿಕೆ ಜಿ.ವಿ.ನಾ. ಅವರ ವಿಷಯದಲ್ಲಿ ಅಕ್ಷರಶಃ ಸತ್ಯ. ಅವರನ್ನು ನಾನು ಸಂದರ್ಶಿಸಿದಾಗೆಲ್ಲಾ ನಿಚ್ಚಳವಾಗಿ ನನ್ನ ಬೌದ್ಧಿಕ ಬೆಳವಣಿಗೆಯಾಗಿದೆ. ದಿ॥ ಡಿ.ವಿ.ಜಿ.ಯವರ ಬಗೆಗೆ ನನ್ನಿಂದ ಲೇಖನವನ್ನು ಬರೆಸಿ, ಅದರ ಓರೆ–ಕೋರೆಗಳನ್ನು ತಿದ್ದಿ ಅಚ್ಚಿಗೆ ಸಿದ್ಧಪಡಿಸಿದರು. ಲೋಪ–ದೋಷಗಳನ್ನು ತಿಳಿಸುವಲ್ಲಿಯೂ, ಅದೇನೂ ಅಂತಹ ಮಹತ್ವದ್ದಲ್ಲ, ಎನ್ನುವ ಧಾಟಿಯೇ ಇರುತ್ತಿತ್ತು. ಅರಳುವ ಪ್ರತಿಭೆಯನ್ನು ಗುರುತಿಸುವುದಕ್ಕಿಂತ ಹೆಚ್ಚಿನ ಸಹೃದಯತೆ ಬೇರಾವುದು ?

ಈ ಪೂಜ್ಯರಿಗೆ, ಯಾವ ಕೆಲಸವೇ ಆಗಲಿ ಅದು ಪರಿಪೂರ್ಣವಾಗಬೇಕು. ಅದಕ್ಕಾಗಿ ಎಷ್ಟೇ ಶ್ರಮವಾದರೂ ಅದನ್ನು ಪೂರ್ಣಗೊಳಿಸದೇ ಬಿಡುತ್ತಿರಲಿಲ್ಲ. ತಮ್ಮ ಉಡುಪನ್ನು ಒಗೆಯುವಾಗ ಒಂದು ಸ್ವಲ್ಪವೂ ಕಲ್ಮಶವಿರಬಾರದು. ಅಕಸ್ಮಾತ್ ಅವರ ಪತ್ನಿಯೇ ಒಗೆದಿದ್ದರೂ, ಸರಿಯಾಗಿರದಿದ್ದರೆ ತಾವೇ ಮತ್ತೊಂದು ಬಾರಿ ಒಗೆದುಕೊಳ್ಳುತ್ತಿದ್ದರು. ಭಗವದ್ಗೀತೆಯಲ್ಲಿ ಬರುವ ಈ ವಾಕ್ಯವನ್ನು ಅವರು ತಮ್ಮ ಬದುಕಿನ ಎಲ್ಲ ರಂಗಗಳಲ್ಲಿಯೂ ಅಳವಡಿಸಿಕೊಂಡಿದ್ದರು. "ಅಭ್ಯಾಸ ಯೋಗೇನತತೋ ಮಾಮಿಚ್ಛಾಪ್ತು ಧನಂಜಯ." "Art is perfection in practice" ಇದನ್ನು ಅವರು ಬೇರೆಯವರಿಂದಲೂ ನಿರೀಕ್ಷಿಸುತ್ತಿದ್ದರು. ಒಮ್ಮೆ ತಾವು ರಚಿಸಿದ ಕವನವೊಂದನ್ನು ಸುಂದರವಾಗಿ ಬರೆದು ಅಚ್ಚಿಗೆ ಕಳುಹಿಸುವ ಕಾರ್ಯವನ್ನು ನನಗೆ ವಹಿಸಿದರು. ನನ್ನ ಅಕ್ಷರವೋ ಹೇಳಿಕೊಳ್ಳುವಷ್ಟು ಚೆನ್ನಾಗಿಲ್ಲ. ಆದರೆ ಆ ಕಾರ್ಯವನ್ನು ನಾನು ಹಟತೊಟ್ಟು ಮಾಡುವವರೆಗೆ ಅವರು ಬಿಡಲಿಲ್ಲ. ಅಂದು ಏನಿಲ್ಲೆಂದರೂ ಹದಿನೈದು ಬಾರಿಯಾದರೂ ನಾನು ಆ ಕವನವನ್ನು ಬರೆದಿರಬಹುದು. ಕಡೆಗೂ ಪೂರ್ತಿ ಅವರ ಮನಸ್ಸಿಗೆ ಒಪ್ಪಿಗೆಯಾದ ಮೇಲೆಯೇ ಅದು ಅಂಚೆ ಪೆಟ್ಟಿಗೆಗೆ ಹೋದದ್ದು. ಅಂದು ನನಗೆ 'ಬರೆಯುವುದು' ಎಂದರೇನು, ಎಂಬುದು ತಿಳಿಯಿತು. ಮಹಾತ್ಮಗಾಂಧಿಯವರ ಮೂಲ ಶಿಕ್ಷಣತತ್ವ "ಮಾಡಿಕಲಿಯುವ ವಿಧಾನ"ವನ್ನು ಎಷ್ಟು ಸರಳವಾಗಿ ನನಗೆ ಬೋಧಿಸಿದರು ! ಎಂದು ನನಗೆ ಈಗ ಎನಿಸುತ್ತದೆ.

ಒಂದು ಬೇಸಿಗೆಯಲ್ಲಿ ಶ್ರೀಯುತರು ನಮ್ಮ ಮನೆಗೆ ಬಂದಿದ್ದರು. ಸಂಜೆ ನಮ್ಮ ತಂದೆಯವರೊಡನೆ ಮಾತಾಡುತ್ತಿರುವಾಗ ಸೊಳ್ಳೆಗಳು ಎಡೆಬಿಡದೆ ಅವರನ್ನು ಕಾಡುತ್ತಿದ್ದರೂ ಸುಮ್ಮನೆ ಕೈಬೀಸಿ ದೂರತಳ್ಳುವ ಪ್ರಯತ್ನ ಮಾಡುತ್ತಿದ್ದರು. ಅವರ ಈ ಉದಾರಗುಣ ಮನೆಗೆ ಹಾವು ಬಂದಾಗಲೂ ಅದನ್ನು ಹೊಡೆಯಲು ಬಿಡುತ್ತಿರಲಿಲ್ಲ. ಅದನ್ನು ನಮ್ಮಿಂದ ದೂರ ಕಳುಹಿಸಿದರೆ ಸಾಕು ಎನ್ನುತ್ತಿದ್ದರು.

ನಮ್ಮಕ್ಕ ಮೊದಲ ಬಾರಿ ಗರ್ಭಿಣಿಯಾದಾಗ ಭಗವದ್ಗೀತೆಯ ಎಲ್ಲಾ ಅಧ್ಯಾಯಗಳನ್ನು ಸರಳಕನ್ನಡದಲ್ಲಿ ವಿವರಿಸಿ ಪತ್ರರೂಪದಲ್ಲಿ ಬರೆಯುತ್ತಿದ್ದರು. ಗರ್ಭಸ್ಥ ಶಿಶುವಿಗೆ ಆಗಿನಿಂದಲೇ ಒಳ್ಳೆಯ ಸಂಸ್ಕಾರ ಒದಗಲಿ ಎಂಬುದು ಅವರ ಆಶಯವಾಗಿತ್ತು. ಆದರೆ ಆ ಪತ್ರಗಳು ನಮ್ಮೆಲ್ಲರನ್ನೂ ಸುಸಂಸ್ಕೃತರನ್ನಾಗಿ ಮಾಡಿದವು ಎಂದರೆ ಅತಿಶಯೋಕ್ತಿಯೇನಲ್ಲ. ಆ ಪತ್ರಗಳೆಲ್ಲ 'ಗೀತಾ ಪತ್ರಗಳು' ಎಂದು ಪುಸ್ತಕ ರೂಪದಲ್ಲಿ ಪ್ರಕಟಗೊಂಡಿವೆ.

ನನ್ನ ಇನ್ನೊಬ್ಬ ಅಕ್ಕನಪತಿ ಆರ್ಯಸಮಾಜದ ಕಟ್ಟಾ ಅನುಯಾಯಿಗಳು. ಒಮ್ಮೆ ಅವರೊಡನೆ ಚಿಕ್ಕನಾಯಕನ ಹಳ್ಳಿಗೆ ನಾನೂ ಹೋಗಿದ್ದೆ. ಸಂಜೆ ಮಾತಾಡುತ್ತಿದ್ದಾಗ ಮಧ್ಯೆ ಈ ಹಿರಿಯರು ಶ್ರೀ ದಯಾನಂದ ಸರಸ್ವತಿಯವರು ಹೇಳಿರುವ ಒಂದು ಮಾತನ್ನು ನೆನೆಸಿಕೊಂಡರು. "ಒಂದು ನಾಮಕ್ಕೇ ಸ್ವರ್ಗದ ಮೆಟ್ಟಲು ಏರಿದರೆ, ವೈಯೆಲ್ಲಾ ನಾಮ ಬಳಿದುಕೊಂಡು ಸ್ವರ್ಗದಲ್ಲೇ ಸ್ಥಿರವಾಗಿರಬಹುದಲ್ಲ." ತಕ್ಷಣ ನಾನು ಹೇಳಿದೆ, 'ಒಂದೇ ನಾಮಕ್ಕೆ ಸ್ವರ್ಗ ಸಿಗುವಾಗ ಮೈಯೆಲ್ಲಾ ಬಳಿದುಕೊಳ್ಳುವ ವ್ಯವಧಾನ ಯಾರಿಗಿದೆ ?'. ಇದು ಬಾಲಿಶ ಅಭಿಪ್ರಾಯವೇ ಆಗಿದ್ದರೂ. ಶ್ರೀ ಜಿ.ಪಿ.ನಾ. ಅವರು ಬೆಲೆಕೊಟ್ಟು. "ನೀನು ಹೇಳುವುದೂ ಒಂದು ವಿಧದಲ್ಲಿ ಸಮಂಜಸವೇ" ಎಂದರು.

ಶ್ರೀಯುತರ ಕೃತಿಗಳು ಅವರ ಸಹೃದಯತೆಗೆ ಜ್ವಲಂತ ನಿದರ್ಶನಗಳು. ಅವರು ಗಾಂಧೀಜಿಯವರ ಕೃತಿಗಳ ಶ್ರೇಷ್ಠ ಅನುವಾದಕರು. ಹಾಗೂ ಅನೇಕ ಸ್ವಂತ ಕೃತಿಗಳನ್ನು, ಲೇಖನಗಳನ್ನು ರಚಿಸಿದ್ದಾರೆ. ಭಾಷೆ ಹಾಗೂ ಶೈಲಿಯ ಮೇಲಿನ ಹಿಡಿತ ಇವರ ಅನುವಾದ ಕೃತಿಗಳೂ ಸ್ವಂತ ರಚನೆಗಳೇ ಎಂಬಷ್ಟು ಸತ್ವಯುತವಾಗಿವೆ. ಸತ್ಯಾಗ್ರಹ, ಮಹಿಳೆಯರು ಮೊದಲಾದ ಕೃತಿಗಳು ಈ ಮಾತಿಗೆ ದೃಷ್ಟಾಂತಗಳು.

ದಿ॥ ತೀ.ನಂ. ಶ್ರೀಕಂಠಯ್ಯ ಅವರು ಜಿ.ಪಿ.ನಾ. ಅವರ ಗುರುಗಳು. ಅವರು ಸತ್ಯಾಗ ಶ್ರೀಯುತರು ರಚಿಸಿರುವ ಕವನವೊಂದು ಶ್ರೇಷ್ಠ ವ್ಯಕ್ತಿಗೆ ಭಕ್ತಿಪೂರ್ವಕ ಶ್ರದ್ಧಾಂಜಲಿಯನ್ನರ್ಪಿಸುತ್ತದೆ.

"ತೀರ್ಥಪುರದಲಿ ಜನಿಸಿ ವಿದ್ಯಾತೀರ್ಥನೆನಿಸಿದೆನೀನು
ಸಾರ್ಥಕವು ಕನ್ನಡದ ನುಡಿನಾಡು ನಿನ್ನಕ್ರಿಯೆಯಿಂ"

ಎಂದು ಆರಂಭವಾಗುವ ಆ ಸಾಲುಗಳು ತೀ.ನಂ.ಶ್ರೀ. ಯವರನ್ನು ಅರಿಯದವರಿಗೂ ವಿಶೇಷವಾದ ಕಾಣ್ಕೆಯನ್ನು ಕೊಡುತ್ತವೆ.

ವಿನೋಬಾಜಿಯವರ ಭೂದಾನ ಚಳವಳಿಗೆ ಉತ್ಸಾಹದ ಪ್ರೋತ್ಸಾಹವಿತ್ತವರು ಈ ಹಿರಿಯರು. ತಮ್ಮಲ್ಲಿದ್ದ ಭೂಮಿಯನ್ನು ದಾನ ಮಾಡಿದ ಹಿರಿಯ ಚೇತನ ಇವರದು. ಈ ವಿಷಯ ನನಗೆ ತಿಳಿದಾಗ, ಇವರ ಎತ್ತರ ನನ್ನ ಅಳವಿಗೆ ಸಿಗದು ಎನಿಸಿ ಮೂಕಳಾಗಿದ್ದೇನೆ.

ದಿ॥ ಜಯಪ್ರಕಾಶನಾರಾಯಣರ ಬಗೆಗೆ ಪೂರ್ಣ ರೂಪದ ಒಂದು ಕೃತಿಯನ್ನು ಶ್ರೀ ಜಿ.ವಿ.ನಾ. ರಚಿಸಿದ್ದಾರೆ. ಅದು ಸಿದ್ಧವಾಗುತ್ತಿದ್ದಾಗಲೇ ಹಸ್ತಪ್ರತಿಯನ್ನು ಓದಲು ನನಗೆ ಕೊಟ್ಟರು. ಜೆ.ಪಿ.ಯವರ ಕ್ರಾಂತಿಕಾರಕ ಜೀವನದ ಬಗೆಗೆ ಅದುವರೆಗೆ ಬಹಳ ಸ್ವಲ್ಪ ತಿಳಿದಿದ್ದೆ. ಆ ಸಮಗ್ರ ಕೃತಿಯನ್ನು ಓದಿ ಆ ಹಿರಿಯರ ಔನ್ನತ್ಯಕ್ಕೆ ತಲೆಬಾಗುವಂತಾಯಿತು. ವ್ಯಕ್ತಿಯ ವ್ಯಕ್ತಿತ್ವ ಜ್ವಲಿಸುವಂತೆ ಮಾಡುವುದೇ ವ್ಯಕ್ತಿ ಚಿತ್ರಣದ ಪ್ರಮುಖ ಕರ್ತವ್ಯ. ಈ ಕರ್ತವ್ಯವನು ಸಮರ್ಪಕವಾಗಿ ಮಾಡಿದ್ದಾರೆ ಈ ಹಿರಿಯರು.

ಶ್ರೀ ಜಿ.ವಿ.ನಾ. ಅವರ ತಾಯಿ ನೋವುಂಡ ಜೀವಿ. ತಾಯಿ ಸತ್ತಾಗ ಅವರ ನಿಸ್ವಾರ್ಥತೆಯನ್ನು ಕುರಿತು ಕವನವೊಂದನ್ನು ರಚಿಸಿದ್ದಾರೆ. ಅದನ್ನು ಹಾಡಿದಾಗ ಕೇಳುಗರ ಕಣ್ಣಲ್ಲಿ ನೀರು ತುಂಬುತ್ತದೆ. ಇಂತಹ ಸಹೃದಯ ಪುತ್ರರತ್ನವನ್ನು ಪಡೆದ ಆ ತಾಯಿ ಜನ್ಮ ನಿಜಕ್ಕೂ ಸಾರ್ಥಕ. ಅಂತೆಯೇ ಈ ಹಿರಿಯರೊಡನೆ ನಾವು ಕಳೆಯುವ ಮೂರು ಗಳಿಗೆಯು ನಮ್ಮ ಬಾಳು ಮಗಮಗಿಸುವಂತೆ ಆದ ನನ್ನಂತಹ ಎಷ್ಟೋ ಕಿರಿಯರ ಜೀವನವೂ ಸಾರ್ಥಕ.



# ಗಾಂಧೀವಾದಿ ಜಿ.ವಿ.ನಾ.

**ಜಿ. ವಿ. ಸೀತಾರಾಮಯ್ಯ**

ದ್ವಿತೀಯ ಜಾಗತಿಕ ಮಹಾ ಯುದ್ಧ ಇನ್ನೂ ನಡೆದೇ ಇತ್ತು. ದೇಶದ ರಾಜಕೀಯ ಜೀವನ ಸ್ಥಗಿತಗೊಂಡಿತ್ತು. ಯುದ್ಧಜನ್ಯ ಪರಿಸ್ಥಿತಿಯ ಪರಿಣಾಮದಿಂದ ಸಮಾಜದ ಆರ್ಥಿಕ ವ್ಯವಸ್ಥೆಯಲ್ಲಿ ಸ್ಥಿತ್ಯಂತರವಾಗತೊಡಗಿತ್ತು. ಜೀವನದ ವಿವಿಧ ರಂಗಗಳಲ್ಲಿ ಅದೃಶ್ಯ ಶಕ್ತಿಯೊಂದು ಕ್ರಾಂತಿಕಾರಕ ಬದಲಾವಣೆಯನ್ನು ರೂಪಿಸತೊಡಗಿತ್ತು. ಭಾರತ ಸ್ವಾತಂತ್ರ್ಯ ಸಮರವು ತನ್ನ ಅಂತಿಮ ಘಟ್ಟವನ್ನು ಮುಟ್ಟುತ್ತಿದ್ದಾಗಿನ ದಿನಗಳವು. ದೇಶಾದ್ಯಂತ ಸ್ವಾತಂತ್ರ್ಯವನ್ನು ಗಳಿಸಲೇಬೇಕೆಂಬ ಆಕಾಂಕ್ಷೆಯಲ್ಲಿ ಒಂದು ಅಂತಿಮ ತಿರುವು ರಾಜಕೀಯದಲ್ಲಿ ಕಂಡುಬಂದಿತ್ತು. ಇದಕ್ಕೆ ಪೂರಕವಾಗುವಂತೆ ವಿಧಾಯಕ ಕಾರ್ಯಕ್ಷೇತ್ರದಲ್ಲಿಯೂ ಚಟುವಟಿಕೆಗಳನ್ನು ಕೈಕೊಳ್ಳಬೇಕೆಂಬ ಹಂಬಲ. ಜಾಗೃತಗೊಂಡಿದ್ದ ರಾಷ್ಟ್ರಪ್ರೇಮದ ಪ್ರಜ್ಞೆಯನ್ನು ಬೆಳೆಸಿ ಸ್ಥಿರವಾಗಿರಿಸಬೇಕೆಂಬ ಪ್ರಯತ್ನಗಳು. ಪಾರತಂತ್ರ್ಯದ ಜ್ವಾಲೆಯಲ್ಲಿ ಬಳಲಿ ಬೆಂಡಾದ ಭಾರತೀಯ ಸಂಸ್ಕೃತಿಯ ಬೇರಿಗೆ ನೀರೆರೆದು ಪೋಷಿಸಬೇಕಾದ ಅಗತ್ಯ. ಹೀನಸ್ಥಿತಿಯಲ್ಲಿದ್ದ ನಾಗರಿಕತೆಯನ್ನು ಹೊಸದೃಷ್ಟಿಯ ಕಡೆಗೆ ಸೆಳೆದು ಬೆಳಕು ಮೂಡಿಸಬೇಕೆಂಬ ಆಶೆ–ಇವೆಲ್ಲವನ್ನು ವಿಧಾಯಕ ಕ್ಷೇತ್ರದ ಅಂತಸ್ಥಲದಲ್ಲಿ ಸ್ಥಾಪಿಸಿ ಚೇತನಕೊಟ್ಟು ಮುನ್ನಡೆಸಬೇಕೆಂಬ ಒಂದು ಮಹತ್ವಾಕಾಂಕ್ಷೆ ಆಗಿನ ರಾಷ್ಟ್ರಪ್ರೇಮಿ ತರುಣರಲ್ಲಿ ಕಂಡುಬಂದಿತು. ಚಿಕ್ಕನಾಯಕನಹಳ್ಳಿಯ ತರುಣರ ತಂಡವೊಂದು ಇದಕ್ಕೆ ಹೊರತಿರಲಿಲ್ಲ, ಇದರ ಸಿದ್ಧಿಗಾಗಿ ರಾಷ್ಟ್ರೀಯ ಶಿಕ್ಷಣ ಕಾರ್ಯಕ್ರಮವೊಂದನ್ನು ರೂಪಿಸಿಕೊಂಡು ಕಾರ್ಯಚಟುವಟಿಕೆಯಲ್ಲಿ ಇವರು ಕಟಿಬದ್ಧರಾದರು. ಈ ತಂಡದಲ್ಲಿದ್ದವರೆಲ್ಲರೂ ಪದವೀಧರರೇ ಆಗಿದ್ದರು. ಇವರ ಅದಮ್ಯ ಕಾರ್ಯೋತ್ಸಾಹ, ವರ್ಚಸ್ಸು ದೇಶಪ್ರೇಮದ ಮುಸುಕಿನಲ್ಲಿ ಪ್ರಸ್ಫುಟಗೊಂಡಿದ್ದವು. ಇವರ ಸತತ ಪ್ರಯತ್ನದ ಫಲವೇ ಚಿಕ್ಕನಾಯಕನಹಳ್ಳಿಯಲ್ಲಿ ಒಂದು ದೇಶೀಯ ವಿದ್ಯಾಶಾಲೆ ತಲೆಯೆತ್ತಲು ಕಾರಣವಾಯಿತು. ಈ ವಿದ್ಯಾವಂತ ತರುಣ ತಂಡದ ಪ್ರಮುಖರೇ ಶ್ರೀಮಾನ್ ಜಿ. ವಿ. ನಾರಾಯಣಮೂರ್ತಿ. ಆ ವಿದ್ಯಾಶಿಕ್ಷಣ ಸಂಸ್ಥೆಯ ಸ್ಥಾಪಕರೂ ಕೂಡ ಇವರೇ ಆಗಿದ್ದರು. ಮುಂದೆ ಅಂದಿನ ಆ ಸಂಸ್ಥೆಯು ಇಂದು ಬೃಹದ್ರೂಪ ತಾಳಿ ಪ್ರೌಢಶಾಲೆ ಹಾಗೂ ವಿಶ್ವವಿದ್ಯಾಲಯದ ಶಿಕ್ಷಣಕ್ಕೂ ಎಡೆಮಾಡಿಕೊಟ್ಟಿತೆನ್ನಬಹುದು.

ಮಹಾತ್ಮಾಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮಗಳಲ್ಲಿ ಪ್ರಮುಖವೆನಿಸಿದ ಖಾದಿಯ ಕಾರ್ಯವು ಅಂದಿನ ಮಹಾರಾಜಾ ಸರ್ಕಾರದ ಒಲವನ್ನು ತನ್ನಕಡೆಗೆ

ನೆಲೆದುಕೊಂಡಿತ್ತು. ತತ್ಪರಿಣಾಮವಾಗಿ 1927–28ರಲ್ಲಿ ಮೈಸೂರು ಸರ್ಕಾರದ ವಾಣಿಜ್ಯ ಮತ್ತು ಕೈಗಾರಿಕಾ ವಿಭಾಗವು ಮೊದಲ ಬಾರಿಗೆ ಸಂಸ್ಥಾನದ ವತಿಯಿಂದ ಬದನವಾಳು ಗ್ರಾಮದಲ್ಲಿ ಖಾದಿ ಕೇಂದ್ರವನ್ನು ತೆರೆಯಿತು. ಕೈರಾಟೆಯಿಂದ ನೂಲು ತೆಗೆಯುವುದು, ಕೈ ಮಗ್ಗದಿಂದ ಬಟ್ಟೆ ಮಾಡುವುದು ಇದು ಕೇಂದ್ರದ ಚಟುವಟಿಕೆಗಳು. ಹೀಗೆ ನೆಲೆಗೊಂಡ ಖಾದಿ ಕಾರ್ಯಕ್ರಮವನ್ನು ವ್ಯಾಪಕರೂಪದಲ್ಲಿ ಸಂಸ್ಥಾನದ ಇತರ ಕಡೆಗೂ ವಿಸ್ತರಿಸಲಾಯಿತು. ಅಂತೆಯೇ 1945–46ರಲ್ಲಿ ಚಿಕ್ಕನಾಯ್ಕನಹಳ್ಳಿಯಲ್ಲಿ ಒಂದು ಖಾದಿ ಕೇಂದ್ರವನ್ನು ತೆರೆಯಲಾಯಿತು. ಅದೇ ಕ್ಷೇತ್ರದಲ್ಲಿ ಕೆಲಸಮಾಡುತ್ತಿದ್ದ ನಾನು ಕೇಂದ್ರದ ವ್ಯವಸ್ಥಾಪಕ ಕಾರ್ಯಕರ್ತನೆಂದು ನೇಮಕಗೊಂಡೆನು. ಕೇಂದ್ರದ ಪ್ರಾರಂಭಾವಸ್ಥೆಯಲ್ಲಿ ಖಾದಿಯಲ್ಲಿ ಆಸಕ್ತಿಯಿದ್ದಂಥ ಖಾದಿಧಾರಿಗಳನ್ನು ಅರಸಿ ಪರಿಚಯ ಮಾಡಿಕೊಳ್ಳುವುದು ಒಂದು ಸರ್ವೇಸಾಮಾನ್ಯದ ವಿಷಯ. ಇದರಿಂದ ಕೆಲಸ ಮಾಡುವವರಿಗೂ ಸ್ಥಳೀಯ ಪ್ರೋತ್ಸಾಹ ಸಿಕ್ಕಿ ಕೆಲಸಕಾರ್ಯಗಳು ಸುಗಮವಾಗಿ ನಡೆಯಲು ಅನುಕೂಲವಾಗುತ್ತಿತ್ತು. ಇಂಥ ಪರಿಚಯದ ಸ್ನೇಹಪ್ರಾಪ್ತಿಯ ಸನ್ನಿವೇಶ ನನಗೆ ದೊರಕಿದ್ದು ಆಲೂರಿನ ವಾರದ ಸಂತೆಯ ಪರಿಸರದಲ್ಲಿ. ಮೇಲೆ ಉಲ್ಲೇಖಿಸಿರುವ ಶ್ರೀಮಾನ್ ನಾರಾಯಣಮೂರ್ತಿ ಮತ್ತು ಅವರ ಸಹೋದ್ಯೋಗಿಗಳು ವಿದ್ಯಾಶಾಲೆಯ ನಿಧಿಗೆಂದು ಜೋಳಿಗೆ ಧರಿಸಿ ಸಂತೆಯಲ್ಲಿ ಸಾರ್ವಜನಿಕರಿಂದ ಮತ್ತು ವ್ಯಾಪಾರಿಗಳಿಂದ ದಾನ ಪಡೆಯುತ್ತಿದ್ದ ದೃಶ್ಯ ನನ್ನ ಮನಸ್ಸೆಳೆಯಿತು. ಜಿ.ವಿ.ನಾ.ರವರು ಭಿಕ್ಷೆ ಬೇಡಿ ಶಾಲೆಯ ಕೆಲಸ ಕಾರ್ಯಗಳನ್ನು ನಡೆಸುತ್ತಿದ್ದರು. ದಿನದ ಕೆಲಸಗಳನಂತರ ಸಂಜೆಯ ಸಮಯದಲ್ಲಿ ನನ್ನ ಅವರ ಭೇಟಿ ಅಂದಿನಿಂದ ಪ್ರಾರಂಭವಾಯಿತು. ಶ್ರೀಯುತರೂ ವಿದ್ಯಾಶಾಲೆಯ ವಿದ್ಯಾರ್ಥಿಗಳಲ್ಲಿ ಶಿಕ್ಷಣದ ಸಂಗಡ ರಾಷ್ಟ್ರೀಯ ಭಾವನೆಗಳನ್ನು ಉದ್ದೀಪನಗೊಳಿಸುತ್ತಿದ್ದರು. ಇದೊಂದು ಸ್ತುತ್ಯ ಕಾರ್ಯ ನಡೆದಿತ್ತು. ಅವರ ಸಹೋದ್ಯೋಗಿಗಳೂ ಅಷ್ಟೇ ಶ್ರದ್ಧಾಳುಗಳಾಗಿದ್ದರು. ಈ ದಿಶೆಯಲ್ಲಿ ಅವರುಗಳೆಲ್ಲಾ ನಮ್ಮ ಖಾದಿ ಕೆಲಸಕಾರ್ಯಗಳಲ್ಲಿ ನೆರವಾಗುತ್ತಿದ್ದರು. ಖಾದಿಪ್ರಚಾರವೂ ತಮ್ಮ ಭಾಗಕ್ಕೆ ಬಂದದ್ದೆಂದು ಭಾವಿಸುತ್ತಿದ್ದರು.

ಶ್ರೀಮಾನ್ ಜಿ.ವಿ.ನಾ.ರವರು ಒಬ್ಬ ನಿಷ್ಠಾವಂತ ಗಾಂಧೀವಾದಿಯೂ ಹೌದು, ಗಾಂಧೀಜಿಯವರ ವಿಚಾರಗಳಲ್ಲಿ ಹಾಗೂ ಅವರು ಹಾಕಿಕೊಟ್ಟಿದ್ದ ವಿಧಾಯಕ ಕಾರ್ಯಕ್ರಮಗಳಲ್ಲಿ ಪೂರ್ಣ ಶ್ರದ್ಧೆ ಇಟ್ಟಿದ್ದವರು. ಗಾಂಧೀವಾದದ ಬಗ್ಗೆ ಲೇಖನಗಳನ್ನೂ ಬರೆದು ಪ್ರಚುರ ಪಡಿಸಿದವರು. ಇಲ್ಲಿ ಗಾಂಧೀವಾದ ಎಂಬುದರ ಬಗ್ಗೆ ಒಂದೆರಡುಮಾತುಗಳನ್ನು ಸೇರಿಸುವುದು ಅಪ್ರಾಸಂಗಿಕವೆನಿಸಲಾರದು. 'ವಾದ' ಎಂಬುದರ ಸಾಮಾನ್ಯ ಅರ್ಥ ಸಿದ್ಧಾಂತ ಅಂತ ಆಗುತ್ತದೆ. ಆದರೆ ಗಾಂಧೀಜಿಯವರಿಗೆ ಅಂಥ ಧೋರಣೆಯಿರಲಿಲ್ಲ. ಅವರು ಅಂಥ ಒಂದು 'ವಾದ' (ism)ದ ಗೋಜಿಗೆ ಹೋಗಲಿಲ್ಲ. ಅವರ ಮಾತಿನಲ್ಲೇ ಹೇಳುವುದಾದರೆ "ಗಾಂಧೀ ಪಂಥ ಎಂಬುದು ಯಾವುದೂ ಇಲ್ಲ. ಅಂಥದೊಂದು ಪಂಥ ಕಟ್ಟುವ ಇಚ್ಛೆಯೂ ಇಲ್ಲ. ನಿತ್ಯಸತ್ಯಗಳನ್ನು ದೈನಂದಿನ ಜೀವನ

ಹಾಗೂ ಸಮಸ್ಯೆಗಳಿಗೆ ಅಳವಡಿಸಲು ಒಬ್ಬ ಸಾಧಾರಣನಂತೆ ನಾನು ನನ್ನದೇ ರೀತಿಯಲ್ಲಿ ಪ್ರಯತ್ನಿಸುತ್ತೇನೆ. ಸಮಸ್ಯೆಗಳು ತಲೆ ಎತ್ತಿದಾಗ ತಡಕುತ್ತ ಹೋಗುವುದು ಅಷ್ಟೇ ನನ್ನ ಕೆಲಸ" ಎಂದಿದ್ದಾರೆ. ಆದರೆ ಅವರ ಅನುಯಾಯಿಗಳು ಅವರ ವಿಚಾರಧಾರೆಗೆ ತಮ್ಮದೇ ಆದ ಒಂದು ಬೇಲಿಯನ್ನು ನಿರ್ಮಿಸಿ ಈ "ಗಾಂಧೀವಾದ"ವನ್ನು ಪ್ರಚಾರ ದಲ್ಲಿ ತಂದಿರುವರು. ಗಾಂಧೀವಾದ ಈ ಪದಕ್ಕೆ ಬದಲಾಗಿ ಗಾಂಧೀ ದೃಷ್ಟಿ ಎಂದು ಹೇಳುವುದಾದರೆ ಸಮಂಜಸ ಅರ್ಥ ಕೊಡಬಲ್ಲುದು. ಗಾಂಧೀಜಿಯವರ ದೃಷ್ಟಿ ಸಾಮಾಜಿಕ ಹಾಗೂ ರಾಜಕೀಯ ಕ್ಷೇತ್ರಗಳಲ್ಲಿ ಮಾರ್ಗದರ್ಶನ ನೀಡುವ ರೀತಿ ನೀತಿ ಮಾತ್ರ. ಈ ವಿಚಾರವನ್ನೇ ಹೊಂದಿರುವ ಶ್ರೀಮಾನ್ ಜಿ.ವಿ.ನಾ.ರವರು ಗಾಂಧೀಜಿ ಯವರು ರೂಪಿಸಿರುವ ಕಾರ್ಯಪ್ರಣಾಲಿಕೆಯಲ್ಲಿ ನಿಷ್ಠೆಯನ್ನು ತೋರಿಸುವರು. ಗಾಂಧೀ ವಿಚಾರಧಾರೆಯಲ್ಲಿ ಜಿ.ವಿ.ನಾ.ರವರಿಗೆ ಅಚಲ ಶ್ರದ್ಧೆ. ವಿಚಾರಗಳ ಪ್ರಚಾರ ಕಾರ್ಯ ದಲ್ಲಿ ಅವರು ತೋರಿಸುತ್ತ ಬಂದಿರುವ ಆಸಕ್ತಿ ಪ್ರಶ್ನಾತೀತ. ಇಂದೂ ಕಲುಷಿತ ಹಾಗೂ ಸುಧಾರಿಸಲಾಗದಂಥ ರಾಜಕೀಯ, ಸಾಮಾಜಿಕ ಮತ್ತು ಧಾರ್ಮಿಕ ವಾತಾವರಣವಿದ್ದರೂ ತಾವು ಕೈಕೊಂಡಿರುವ ಕಾರ್ಯಗಳನ್ನು ಬಿಡದೆ ನಡೆಸಿಕೊಂಡು ಹೋರಟಿರುವರು. ಇದು ಅವರಲ್ಲಿ ಕಾಣಬರುವ ಒಂದು ವಿಶೇಷಗುಣ. ಗಾಂಧೀಜಿ ಯವರ ಕಟ್ಟಾ ಅನುಯಾಯಿಗಳಾದ ಇಂಥವರಿಗೆ ಮಾತ್ರ ಇದು ಸಾಧ್ಯವಾಗಬಲ್ಲುದು.

ಸ್ವಾತಂತ್ರ್ಯಾಂದೋಲನದಲ್ಲಿ ಸಕ್ರಿಯ ಭಾಗಿಗಳಾದರು. ಕಷ್ಟಕಾರ್ಪಣ್ಯಗಳನ್ನು ಅನುಭವಿಸಿದರು ಆದರೆ ಆಂದೋಲನದಲ್ಲಿ ಭಾಗವಹಿಸಿದ ಇತರರನೇಕರಂತೆ ಯಾವ ಪ್ರತಿಫಲವನ್ನಾಗಲಿ ಪರಿಹಾರವನ್ನಾಗಲಿ ಅವರು ಪಡೆಯಬಯಸಲಿಲ್ಲ. ದೇಶಸೇವೆ ಯನ್ನು ಮಾರಾಟದ ವಸ್ತುವನ್ನಾಗಿ ಮಾರ್ಪಡಿಸಲಿಲ್ಲ. ಸ್ವಾಭಿಮಾನ ಮತ್ತು ಸ್ವಾರ್ಥ ತ್ಯಾಗ ಅವರಲ್ಲಿ ಯಾವತ್ತೂ ಜಾಗೃತಗೊಂಡಿರುವುದು ಕಾಣಬರುವುದು.

ಶ್ರೀಮಾನ್ ಜಿ.ವಿ.ನಾ.ರವರು ಒಬ್ಬ ಧೀಮಂತ ವಿದ್ಯಾವಂತರು. ಸಾಹಿತಿಗಳ ಪಂಕ್ತಿಯಲ್ಲಿ ಅವರಿಗೂ ಒಂದು ವಿಶೇಷ ಸ್ಥಾನವಿದೆ. ಅವರ ಭಾಷಾ ಸಾಹಿತ್ಯವು ಸಂಪುಷ್ಟಗೊಂಡಿದ್ದು ವರ್ತಮಾನ ಅರ್ವಾಚೀನ ವಿಚಾರಗಳ ಬಗ್ಗೆ ಅನೇಕ ಲೇಖನ ಗಳನ್ನು ಪ್ರಕಟಿಸಿ ಪ್ರಚುರಪಡಿಸಿದ್ದಾರೆ. ಆಕಾಶವಾಣಿಯಲ್ಲಿ ಸಹ ಆಗಾಗ್ಗೆ ತಮ್ಮ ವಿಚಾರಗಳನ್ನು ದೃಢೀಕರಿಸುತ್ತ ಬಂದಿದ್ದಾರೆ. ಸಭೆ ಸಮಾರಂಭಗಳಲ್ಲಿ ಸಭಿಕರಿಗೆ ಮೆಚ್ಚುಗೆಯಾಗುವಂಥ ಮಾತುಗಳನ್ನಾಡಿ ಒಳ್ಳೆ ವಾಗ್ಮಿಗಳೆಂದೆನಿಸಿಕೊಂಡಿರುವರು. ಪ್ರಚಲಿತ ಸಮಾಜದಲ್ಲಿ ಮತ್ತು ಅನೂಚಾನವಾಗಿ ನಡೆದು ಬಂದ ಧಾರ್ಮಿಕ ಆಚರಣೆ ಗಳಲ್ಲಿ ಕಂಡುಬರುವ ದೋಷಗಳ ನಿವಾರಣೆಗೆ ದಾರಿ ತೋರಿರುವರು. ಮೇಲು ಕೀಳೆಂಬ ಭಾವನೆಯನ್ನು ತೊಡೆದುಹಾಕಬೇಕೆಂಬ ಹಂಬಲವುಳ್ಳವರು.

ಜಿ.ವಿ.ನಾರವರು ಸರ್ವೋದಯ ಕ್ಷೇತ್ರದಲ್ಲಿಯೂ ಸಾಕಷ್ಟು ಕೆಲಸ ಮಾಡಿರುವರು. ವಿಶೇಷವಾಗಿ ಗಾಂಧೀಸ್ಮಾರಕ ನಿಧಿಯವರು ಕೈಕೊಂಡ ಗಾಂಧೀಗ್ರಂಥಮಾಲೆಯ ಯೋಜನೆಯಲ್ಲಿ ಇವರು ವಹಿಸಿರುವ ಪಾತ್ರ ಹೆಚ್ಚಿನದು. ಗಾಂಧೀಸಾಹಿತ್ಯದ ಬಹು

ಭಾಗವನ್ನು ಕನ್ನಡಕ್ಕೆ ಅನುವದಿಸಿ ಪುಸ್ತಕಗಳನ್ನು ಬರೆದಿರುವರು. ಪತ್ರಿಕೆಗಳಲ್ಲಿಯೂ ಬರೆದು ಪ್ರಕಟಿಸಿರುವರು–ಈ ದಿಶೆಯಲ್ಲಿ ಇವರು ಮಾಡಿರುವ ಕೆಲಸ ಅಮೋಘ–ಮಕ್ಕಳಿಗೂ ಅರ್ಥವಾಗುವ ರೀತಿಯಲ್ಲಿ ಸಣ್ಣಸಣ್ಣ ಹೊತ್ತಿಗೆಗಳನ್ನು ಬರೆದುಕೊಟ್ಟಿರುವರು.

ಜಿ. ಐ. ನಾರವರು ಒಬ್ಬ ಶ್ರೇಷ್ಠಮಟ್ಟದ ಅಧ್ಯಾಪಕರು–ಪ್ರಾಧ್ಯಾಪಕರೂ ಹೌದು. ವಿದ್ಯಾಸಂಸ್ಥೆಗಳನ್ನು ಕಟ್ಟುವುದರಲ್ಲಿ ಸಫಲರಾಗಿದ್ದಾರೆ, ವಿದ್ಯಾರ್ಥಿಗಳ ಮನಸ್ಸೆಳೆಯುವಂತೆ ಪಾಠ ಪ್ರವಚನ–ಬಹು ಸರಳ ರೀತಿಯಲ್ಲಿ ಬೋಧಿಸುವ ವಿಶೇಷ ಸಾಮರ್ಥ್ಯ ಕಂಡುಬರುವುದು ಇವರಲ್ಲಿ.

ರೂಪದಲ್ಲಿ ಸರಳ ಹಾಗೂ ಸ್ನೇಹಮಯ ವ್ಯಕ್ತಿತ್ವ ಜಿ.ಐ.ನಾ.ರವರದು, ಸೀದಾಸಾದಾ ಸ್ವಚ್ಛ ಬಿಳೀ ಖಾದೀ ಉಡುಪು ಇವರ ಭೂಷಣ. ಸ್ಪಷ್ಟವಾದ ನಡೆನುಡಿ, ಪಾಂಡಿತ್ಯ ಪ್ರತಿಭೆಯ ಮುಖಿಜರ್ಯಿ ಹೊಂದಿರುವ ಶ್ರೀಮರ್ಾ ಜಿ.ಐ.ನಾ.ರವರು ಚಿಕ್ಕನಾಯಕನಹಳ್ಳಿಗೆ ಅಚ್ಚುಮೆಚ್ಚಿನ ಜನಾನುರಾಗಿಯಾಗಿದ್ದಾರೆ. ''ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು'' ಎಂಬ ನಾಣ್ನುಡಿ ಇವರಿಗೆ ಬಹಳ ಒಪ್ಪುತ್ತದೆ. ಪರಮಾತ್ಮನು ಇವರಿಗೆ ಇನ್ನೂ ಹೆಚ್ಚಿನ ಆರೋಗ್ಯಭಾಗ್ಯ ಕೊಟ್ಟು ಸಾಹಿತ್ಯ ಸೇವೆ ಸಲ್ಲಿಸುತ್ತ ಹೋಗುವಂತೆ ಮಾಡಲಿ ಎಂದು ಹಾರೈಸೋಣ—

# ಹೆಂಗರುಳಿನ ಜಿ.ವಿ.ನಾ.

**ಎಸ್. ಎನ್. ಸರೋಜಮ್ಮ**

"ಮೇಲೆ ಹೋಗಿ ಕೊಡು. ನಾರಾಯಣ ಏನೋ ಓದುತ್ತಿರಬಹುದು."

"ನಾನು ಹೋಗೊಲ್ಲ ಭಯ ಆಗುತ್ತೆ."

"ಹೋಗೇ, ಪಾಸಾಗಿದ್ದೀಯ, ಚೆನ್ನಾಗಿ ಪಾಸ್ ಮಾಡಿದ್ದೀಯ, ಹೋಗು. ಕೊಬ್ಬರಿ ಸಕ್ಕರೆ ಕೊಡು" ಎಂದು ಬಲವಂತದಿಂದ ಅಮ್ಮಾ ನೂಕಿದರು. ಅಂಜುತ್ತಾ ಅಳುಕುತ್ತಾ ಮಹಡಿ ಮೆಟ್ಟಲು ಹತ್ತಿ ಹೋದೆ. ತೆಳ್ಳನೆಯ ಖಾದಿ ಬನೀನು ತೊಟ್ಟು, ದಟ್ಟಿ ಪಂಚೆ ಉಟ್ಟಿದ್ದ ಜಿವಿನಾ ಅವರು ಯಾವುದೋ ವ್ಯಾಸಂಗದಲ್ಲಿ ಮಗ್ನರಾಗಿದ್ದರು. ಚಿಕ್ಕನಾಯಕನಹಳ್ಳಿ ಅವರಿಲ್ಲಾಗಲೂ ದುರ್ಬಲವಾಗಿ ಕಾಣುತ್ತಿರುತ್ತದೆಂದೇ ಹೇಳ ಬೇಕು. ಸಂಜೆ ಹೊತ್ತು ಸ್ವಲ್ಪ ಸಮಯ ವಾಯು ಸಂಚಾರಕ್ಕಾಗಿ ಪ್ರಯಾಣ, ಇನ್ನು ಸ್ವಲ್ಪ ಸಮಯ ದೇಶೀಯ ವಿದ್ಯಾಪೀಠದ ಕಾರ್ಯ, ಇನ್ನುಳಿದ ಸಮಯವೆಲ್ಲಾ ವ್ಯಾಸಂಗ. ಪ್ರಾಯಶಃ ಅವರು ವಿದ್ಯಾರ್ಥಿಗಳಿಗಿಂತ ಹೆಚ್ಚಾಗಿ ಓದುತ್ತಿದ್ದರು ಎನ್ನ ಬಹುದು. ನಾನು ಹೋಗಿ ಒಂದು ಸೆಕೆಂಡು ಆಗಿರಬಹುದು, ತಮ್ಮ ವ್ಯಾಸಂಗದಿಂದ ಗಮನ ವನ್ನು ನನ್ನತ್ತ ಸರಿಸಿದರು. "ಕುಳಿತುಕೊ ಅಮ್ಮ" ಹೇಳಿದರು. ಪಾಸಾಗಿಬಿಟ್ಟೆಯಂತೆ! ತುಂಬಾ ಸಂತೋಷಕಣಮ್ಮ." ನನಗೋ ಒಂದು ತರಹದ ಭಯ, ನಾಚಿಕೆ. ನಾನೇನೂ ಮಹತ್ತರವಾದದ್ದನ್ನು ಸಾಧಿಸಿದ್ದರೂ ಅದು ಎಲ್ಲರ ಅನುಕಂಪ, ಸಹಾಯದಿಂದ. ನಾನು ಮನುಷ್ಯಳಾದೆ. ಹತ್ತು ವರ್ಷಗಳ ಕಾಲ ವ್ಯಾಸಂಗ ಬಿಟ್ಟಿದ್ದರೂ, ಮರಳಿ ಈ ಕ್ಷೇತ್ರಕ್ಕೆ ಬಂದಿದ್ದೆ. ಬದುಕಿನಲ್ಲಿ ಬಹುದೂರ ಸಾಗಿದ್ದರೂ. ಪಥದಿಂದ ಪಥಕ್ಕೆ ಅನಿವಾರ್ಯವಾಗಿ ಬದಲಾದೆ, ದೈವಕೃಪೆ. ಅದರ ಜೊತೆಗೆ ಹಿತೈಷಿಗಳ ಅಪಾರ ಸಹಾನುಭೂತಿ, ಇವು ಗಳಿಂದ ಬೆಟ್ಟದಷ್ಟು ಕಷ್ಟದಲ್ಲೂ ಪರಿಹಾರಮಾರ್ಗ ಕಾಣುತ್ತಿತ್ತು. ನನ್ನ ಹಿಂದಿರುವ ಹೊಟ್ಟೆಯನ್ನು ತುಂಬಿಸುವಷ್ಟು ಚೈತನ್ಯ ಬರುತ್ತಿತ್ತು.'ಮುಂದೇನು ಮಾಡುತ್ತೀಯಾ?' ಎಂದರು. "ನನಗೇನೂ ಗೊತ್ತಾಗುವುದಿಲ್ಲ ಎಲ್ಲಾ ನಿಮ್ಮಂತಹವರು ಹೇಳಬೇಕು" ಎಂದೆ. "ಹೇಗೋ ಟೀಚರ್ ಟ್ರೈನಿಂಗ್ ಮಾಡಿಬಿಡು, ಆಮೇಲೆ ನೋಡೋಣ" ಎಂದರು ಜಿ.ವಿ.ನಾ. "ನನ್ನ ಪರಿಸ್ಥಿತಿ ತಮಗೆ ಗೊತ್ತಿದೆ, ಈಗಾಗಲೇ ನಮ್ಮಿಬ್ಬರ ಹೊಟ್ಟೆಯು ಇತರರ ಕೃಪಾಶೀರ್ವಾದದಿಂದ ತುಂಬಬೇಕು; ಇನ್ನೊಬ್ಬರಿಗೆ ಎಷ್ಟು ಕಷ್ಟ ಕೊಡಲಿ," ಎಂದೆ. "ಏನೂ ಯೋಚನೆ ಮಾಡಬೇಡ, ಯಾವುದಕ್ಕಾದರೂ ಅರ್ಜಿ ಹಾಕು. ಕಷ್ಟದಲ್ಲಿರುವವರಿಗೆ ಶ್ರೀಹರಿ ಒಬ್ಬನೇ ರಕ್ಷಕ" ಎಂದರು. ಆಗ ನಾನು ಅಕ್ಕನ ಮನೆಯಲ್ಲಿ ಓದುತ್ತಿದ್ದೆ. ಅಂದೇ ನಾನು ಜಿವಿನಾ ಹತ್ತಿರ ಅಷ್ಟು ಮಾತಾಡಿದ್ದು.

ನಾಲ್ಕು ವರ್ಷಗಳಿಂದ ಜಿವಿನಾ ಅವರನ್ನು ಕಂಡಿದ್ದರೂ, ಅವರನ್ನು ಮಾತನಾಡಿಸಲು ಭಯ, ಅಲ್ಲ ಭಯಮಿಶ್ರಿತ ಗೌರವ. ಪೂಜ್ಯತೆ. ನನ್ನ ಕುಟುಂಬಕ್ಕೂ ಜಿವಿನಾ ಕುಟುಂಬಕ್ಕೂ ಮೊದಲಿನಿಂದಲೂ ನಂಟಸ್ತಿಕೆ. ನನ್ನ ಇಬ್ಬರು ಅಣ್ಣಂದಿರು ಅವರಲ್ಲಿಯೇ ಓದಿದ್ದರು. ಜಿವಿನಾ ಅವರ ಪೂರ್ವಿಕರು ನಮ್ಮ ಹಳ್ಳಿಗೆ ಹತ್ತಿರದವರು. ನನ್ನ ಅಕ್ಕ-ಭಾವ ಸ್ವಲ್ಪಕಾಲ ಚಿಕ್ಕನಾಯಕನಹಳ್ಳಿಯಲ್ಲಿದ್ದರು. ಅಲ್ಪ ಉದ್ಯೋಗಕ್ಕಾಗಿ ನಾನು ಅವರ ಮನೆಗೆ ಬಂದಿದ್ದೆ. ಆಗ ರಂಗೇಗೌಡ ಎಂಬುವವರಿಂದ ವ್ಯಾಸಂಗಕ್ಕೆ ಇಳಿದೆ. ಅನೇಕರು ಇಂಬುಕೊಟ್ಟು ಬಹಳ ದಿನದಿಂದ ನಿಲ್ಲಿಸಿದ್ದ ಓದು ಮುಂದುವರಿಯುವಂತೆ ಮಾಡಿದರು. ನಮ್ಮ ಅಕ್ಕನಿಗೋ ಮನೆ ತುಂಬಾ ಮಕ್ಕಳು. ನಮ್ಮ ಭಾವ ದೊಡ್ಡ ಹುದ್ದೆಯಲ್ಲೇನೂ ಇರಲಿಲ್ಲ. ಆದರೆ ಹೃದಯವಂತಿಕೆಗೆ ಬರಗಾಲವಿರಲಿಲ್ಲ. ಅಂತಹ ಸಮಯದಲ್ಲಿ ನಮ್ಮ ಎದುರು ಮನೆಯಲ್ಲೇ ಜಿವಿನಾ ವಾಸ. ಅವರು ಬಹುಮಟ್ಟಿಗೆ ಜೀವನದ ಬಹು ಭಾಗವನ್ನು ಮೈಸೂರು ಮುಂತಾದ ಕಡೆ ಕಳೆಯುತ್ತಿದ್ದರು. ಅವರು ಊರಿನಲ್ಲಿದ್ದುದರ ಕುರುಹೆಂದರೆ ಜಗಲಿಯಲ್ಲಿ ಓದಾಡುತ್ತಿದ್ದ ವೃತ್ತಪತ್ರಿಕೆ ಮತ್ತು ಪುಸ್ತಕಗಳು. ಜಿವಿನಾ ಅವರ ಪತ್ನಿ ಪದ್ಮಾವತಮ್ಮ ನನಗೆ ಮಾತ್ರವಲ್ಲ ಇಡೀ ಊರಿಗೆ 'ಅಮ್ಮ' ಆಗಿದ್ದರು. ಯಾರು ಎಷ್ಟು ಹೊತ್ತಿನಲ್ಲಿ ಹೋದರೂ ಬರೀ ಹೊಟ್ಟೆಯಲ್ಲಿ ಕಳುಹಿಸಿದವರಲ್ಲ. ನಾನಂತೂ ಪ್ರತಿ ಸಂಜೆ ಅವರ ಮನೆಯಲ್ಲೇ ಠಿಕಾಣಿ. ಅಮ್ಮನ ಕೈಯಲ್ಲಿ ಅದು ಇದು ಮಾತನಾಡಿ ಸಂಜೆ ಅವರಿಂದ ಒಂದೆರಡು ತುತ್ತು ಹಾಕಿಸಿಕೊಂಡು ಮನೆಗೆ ಓಡುತ್ತಿದ್ದೆ. ಬಡವರ ಬಗ್ಗೆ, ವಿದ್ಯಾರ್ಥಿಗಳ ಬಗ್ಗೆ ಅವರಿಗಿದ್ದ ಅನುಕಂಪ ಎಷ್ಟು ಹೊಗಳಿದರೂ ಅಲ್ಪ. ಸಾಕಷ್ಟು ಉಳ್ಳವರಾಗಿದ್ದರೂ ಕಿಂಚಿತ್ತೂ ಗರ್ವವಿರಲಿಲ್ಲ. ಹಿರಿಯತನದ ಯಜಮಾನಿಕೆಯಂತೂ ಲವಲೇಶವೂ ಕಾಣುತ್ತಿರಲಿಲ್ಲ. ಒಮ್ಮೊಮ್ಮೆ ನಮ್ಮವರಲ್ಲಿ ಅವರು ಒಬ್ಬರಾಗಿಬಿಡುತ್ತಿದ್ದರು. ಹೆಸರಿಗೆ ಅವರಿಗೆ ಒಬ್ಬ ಮಗ. ಆದರೆ ನಾವೆಲ್ಲ ಅವರಿಗೆ ಮಕ್ಕಳಾಗಿಬಿಡುತ್ತಿದ್ದೆವು. ಮನೆಯಲ್ಲಿ ಹೆಚ್ಚಿಗೆ ಏನೇ ಮಾಡಲಿ "ಮಕ್ಕಳಿರುವ ಮನೆ" ಎಂದು ನಮ್ಮ ಮನೆಗೆ ಸಿಂಹಪಾಲು. ಯಾವ ಮಗುವಿಗೇ ಹುಷಾರಿಲ್ಲದಿರಲಿ ಅದಕ್ಕೆ ಅವರ ಸಲಹೆ ಬೇಕು. ಹೀಗಾಗಿ ಅಂತಹ ಸರ್ವೋದಯ ಪಥಿಕನ ಮಡದಿ ಸಹ ಸಾಕಷ್ಟು ಸಂಸ್ಕಾರ ಪಡೆದವರೆಂದೇ ನನ್ನ ಭಾವನೆ.

ಇನ್ನು ಅವರ ಮನೆಯಲ್ಲಿದ್ದವರು ಇಬ್ಬರು ಮುದಿ ಹೆಂಗಸರು. ಜಿ.ವಿ.ನಾ. ಅವರ ತಾಯಿ. ಮತ್ತೊಬ್ಬರು ಅತ್ತೆ. ಜಿ.ವಿ.ನಾ. ತುಂಬ ನಿಷ್ಠುರವಾದಿಗಳು. ಅಂಧಶ್ರದ್ಧೆ ಉಳ್ಳವರಲ್ಲ. ಊರಿಗೆ ಯಾರೇ ಬರಲಿ ಅವರ ಭೋಜನ ಮುಂತಾದವುಗಳು ಅವರ ಮನೆಯಲ್ಲೇ ನಡೆಯಬೇಕು. ಜಾತಿಮತದ ಭೇದವಂತೂ ಕನಸಿನಲ್ಲೂ ಎಣಿಸುವಂತಿಲ್ಲ. ಎಲ್ಲರಿಗೂ ಸಮಾನ ರೀತಿಯ ವ್ಯವಸ್ಥೆಯಾಗಬೇಕು. ಒಂದು ಚೂರು ತಪ್ಪಿದರೂ ಅವರು ಗಾಂಧೀಜಿ ದಾರಿ ಅನುಸರಿಸುತ್ತಿದ್ದರು. ಅಂದರೆ ಉಪವಾಸ ಸತ್ಯಾಗ್ರಹ. ಹೀಗಾಗಿ ಆ ವೃದ್ಧೆಯರಿಬ್ಬರೂ ಇವರನ್ನು ಅನುಸರಿಯೇ ನಡೆಯುತ್ತಿದ್ದರು. ಒಟ್ಟಾರೆ ಜಿ.ವಿ.ನಾ. ಅವರನ್ನು ಕೇಂದ್ರಬಿಂದುವನ್ನಾಗಿಟ್ಟುಕೊಂಡು ಆ ಮನೆಯ

ಕಾರ್ಯಾಚರಣೆ ನಡೆಯುತ್ತಿತ್ತು. ನಾನು ಆಗ ಅಲ್ಲಿದ್ದಾಗ ನಡೆದ ಒಂದು ಘಟನೆ ನೆನಪಿಗೆ ಬರುತ್ತೆ. ಅದನ್ನು ಹೇಳಿದರೆ ಜಿ.ವಿ.ನಾ. ಅವರ ಹೆಂಗರುಳಿನ ಮತ್ತು ಅವರ ತಾಯಿಯು ಮಗನ ಬಗ್ಗೆ ಇಟ್ಟಿದ್ದ ವಾತ್ಸಲ್ಯ ತಿಳಿಯುತ್ತವೆ. ಅವರ ತಾಯಿ ಮರಣಾವಸ್ಥೆಯಲ್ಲಿ ದ್ದರು. ಜಿ.ವಿ.ನಾ. ಅವರು ಎಂಟು ದಿನಗಳಿಂದ ಊರಿನಲ್ಲಿರಲಿಲ್ಲ, ತಂತಿಕೊಟ್ಟು ಕರೆಸಿಕೊಂಡಿದ್ದಾಯ್ತು. ಒಬ್ಬನೇ ಮಗ ಶ್ರೇಯಸ್ಸಿಗೆ, ಮೌನ ತಪಸ್ಸನ್ನು ನಡೆಸುತ್ತಿದ್ದ ಆ ಮಹಾತಾಯಿಯು ಕೊನೆಯ ಆಸೆ ಕಣ್ಣು ಮುಚ್ಚುವ ಮುನ್ನ ಮಗನನ್ನು ಒಮ್ಮೆ ನೋಡಬೇಕೆಂಬುದು. ಜಿ.ವಿ.ನಾ. ಕಾಲಕ್ಕೆ ಸರಿಯಾಗಿ ಬಂದರು. ತಾಯಿಯ ಅವಸ್ಥೆ ಯನ್ನು ಕಂಡು ದಿಗ್ಭ್ರಮೆಗೊಂಡರು. ಮನದಲ್ಲೊ ತಮ್ಮ ಅಭಿಪ್ರಾಯ ಅವರ ಮೇಲೆ ಕೆಲವೊಮ್ಮೆ ಹೇರಿದರೋ ಎಂಬ ಅಳುಕು. ತನ್ನ ನೋಂಪಿ ಕೈಗೂಡಿ ಮಗ ನಾಲ್ಕು ಜನರಿಗೆ ಬೇಕಾದನಲ್ಲ ಎಂಬ ಆತ್ಮತೃಪ್ತಿ. ಆ ತಾಯಿಗೆ ಪರಿಸ್ಥಿತಿಯ ಅರಿವಿನಿಂದಾಗಿ ಜಿ.ವಿ.ನಾ. ತುಂಬು ಕಂಠದಿಂದ 'ಅಮ್ಮ. ನಿನ್ನಿಚ್ಛೆಯಂತೆ ತುಂಬಾ ನಿಷ್ಠೆಯಿಂದಲೇ ಎಲ್ಲವನ್ನೂ ನಡೆಸುತ್ತೇನೆ.' ಎಂದರು. ತನ್ನ ಮಗನ ಯೋಗ್ಯತೆ ತಿಳಿದಿದ್ದ, ಆತನ ಸಾಧನೆ ಅರಿತಿದ್ದ ಆ ಪುಣ್ಯಜೀವಿ ಆಡಿದ್ದ ಮಾತೊಂದು ಅವರ ಸಂಸ್ಕಾರವನ್ನು ಎತ್ತಿ ತೋರಿಸುತ್ತದೆ. "ನೋಡಪ್ಪ ನೀನು ತೊಂದರೆ ಮಾಡಿಕೊಳ್ಳಬೇಡ, ಕಾಫಿ ಕುಡಿದೇ ನನ್ನ ಕರ್ಮ ಮಾಡು. ಯಾವ ಬಾಧಕವೂ ಇಲ್ಲ" ಎಂದರು, ಮೇಲ್ನೋಟಕ್ಕೆ ಈ ಮಾತುಗಳು ಶಿಷ್ಟಾಚಾರದ ಮಾತುಗಳಾಗಬಹುದು. ಅಥವಾ ಕೆಲವೊಮ್ಮೆ ಕೃತಕವೆನಿಸಬಹುದು, ಆದರೆ ಸಾಕಷ್ಟು ದೀರ್ಘಕಾಲದ ಪರಿಪಕ್ವವಾದ ಭವ್ಯಜೀವ ಗಳೆರಡು ಎಂಬ ದೃಷ್ಟಿಯಲ್ಲಿ ಅವರ ಮಾತು ಗಮನಿಸಿದಾಗ ಅಲ್ಲಿ ಕೃತಕತೆಯಾಗಲೀ, ಶಿಷ್ಟಾಚಾರವಾಗಲೀ, ಕಾಣದೆ ಅಂತರಂಗದ ನೇರಸಂಬಂಧ ಕಾಣುತ್ತದೆ, ಅವರ ತಾಯಿ ಸತ್ತಾಗ ಜಿ.ವಿ.ನಾ. ಕೂಗಾಡಲಿಲ್ಲ. ಆದರೆ ಅವರು ಆಡಿದ 'ಇಂದು ನಾನು ಅನಾಥನಾದೆ' ಎಂಬ ಮಾತೊಂದೇ ಅವರ ಇಡೀ ದುಃಖದ ಕಟ್ಟೆಯಾಗಬಲ್ಲದು. ತಾಯಿ ಎನ್ನುವ ವಸ್ತು ಯಾವ ಉಪಯೋಗವಲ್ಲದಿದ್ದರೂ ಮೂಲೆಯಲ್ಲಿ ಬಿದ್ದಿದ್ದರೆ ಸಾಕು, ಅದಕ್ಕೆ ಮಾನ್ಯತೆ, ಮನುಷ್ಯನಿಗೆ ನೂರಾನೆಯ ಬಲ.

ನನ್ನ ವ್ಯಾಸಂಗ ಮುಗಿಯಿತು. ಚಿಕ್ಕನಾಯಕನಹಳ್ಳಿಯಲ್ಲಿ ಕುಳಿತು ಮಾಡುವು ದೇನು ಎಂದುಕೊಂಡು ನನ್ನೂರಿಗೆ ಪ್ರಯಾಣಮಾಡಿದೆ. ಗೂಳೂರು ಹತ್ತಿರವಿರುವ ಸಾಸಲು ನನ್ನ ಹುಟ್ಟೂರು. ಜಿ.ವಿ.ನಾ ಅವರ ಬಳಿಗೆ ಮತ್ತೊಮ್ಮೆ ಹೋಗಿ ಸಾಸಲೆಗೆ ಹೋಗಿ ಬರುವುದಾಗಿ ಹೇಳಿದೆ. ಯಾವುದಾದರೂ ಕೆಲಸಕ್ಕೆ ಅರ್ಜಿಹಾಕಿ ಕಾಗದ ಬರೆಯುವಂತೆ ಹೇಳಿದರು. ಹಳ್ಳಿಗೆ ಬಂದೆ, ಕಟ್ಟುಕಿತ್ತ ಪಂಜಿನಂತಾಗಿದ್ದ ಬದುಕಿನ್ನೂ ವ್ಯವಸ್ಥೆಗೆ ಬಂದಿರಲಿಲ್ಲ. ಸಂಬಂಧಿಕರು, ಪರಿಚಿತರು, ತಿಳಿದವರು ನನ್ನನ್ನೇ ನೋಡುತ್ತಿದ್ದರು. ನಾನು ಇಟ್ಟಿದ್ದ ಹೆಜ್ಜೆಯ ಬಗೆಗೆ ನನಗೇ ಸಂಶಯವಿರುವಾಗ ಬೇರೆಯವರ ಪಾಡೇನು ? ಚಿಕ್ಕನಾಯಕನಹಳ್ಳಿಯಲ್ಲಾದರೂ ನನ್ನನ್ನು ಹುರಿದುಂಬಿಸಿ, ಕಾರ್ಯಕ್ಷೇತ್ರಕ್ಕಿಳಿಸಿದ ಅನೇಕ ಶಕ್ತಿಗಳು ನನಗೆ ಸಾಂತ್ವನದ ಮಾತುಗಳನ್ನಾಡುತ್ತಿದ್ದವು.

ನನ್ನ ಗತಿಯೇನು ನನ್ನ ಮಗನ ಗತಿಯೇನು ? ಮುಂದಾರು ? ಎಂದಾಗ ಅಭಯಹಸ್ತಗಳು ತಾನಾಗಿಯೇ ಕಾಣುತ್ತಿದ್ದವು. ಅವುಗಳಿಂದ ದೂರ ಸರಿದಾಗ ಆಗತಾನೇ ಕಣ್ಣುಬಿಟ್ಟ ಗಿಳಿಮರಿಗಳು ತಾಯಿ ಮಡಿಲಿಂದ ದೂರ ಹೋದಂತಾಗಿತ್ತು ನನ್ನ ಸ್ಥಿತಿ. ನನ್ನ ಅಣ್ಣ, ಅತ್ತಿಗೆಯವರೇನೋ ಸಾಕಷ್ಟು ಉತ್ತೇಜನ ಮಾತುಗಳನ್ನಾಡಿದರು. ನನ್ನಲ್ಲೇ ನನಗೆ ನಂಬಿಕೆ ಇರಲಿಲ್ಲ, ಸುಮ್ಮನೇ ಕುಳಿತು ಯೋಚಿಸಿದರೆ ಮನಸ್ಸು ಪಿಶಾಚಿಗಳ ಬೀಡಾಗುತ್ತದೆಂದು, ಕೆಲಸಕಾರ್ಯಗಳಲ್ಲಿ ಮನಸ್ಸನ್ನು ಹರಿಸಿದೆ ಅದಕ್ಕಿಂತಲೂ ಹೆಚ್ಚಾಗಿ ಜಿ.ವಿ.ನಾ. ಅವರಿಂದ ಪ್ರತಿ ವಾರವೂ ಪತ್ರ ಬರುತ್ತಿತ್ತು, ಯಾವುದಾದರೂ ಕೆಲಸಕ್ಕೆ ಅರ್ಜಿ ಹಾಕಿದೆಯಾ ? ಕಷ್ಟಕ್ಕೆ ಹೆದರವೆ ಎದುರಿಸಬೇಕು, ತಾಳ್ಮೆಗಿಂತ ಮತ್ತಾವ ವ್ರತವೂ ಇಲ್ಲ. ನೀನೆಂದೂ ಒಂಟಿಯಾಗಿಲ್ಲ ನಿನ್ನ ಕಷ್ಟಕ್ಕೆ ನಾವೆಲ್ಲಾ ಇದ್ದೇವೆ ಮುಂತಾಗಿ ಜಿ.ವಿ.ನಾ. ಬರೆಯುತ್ತಿದ್ದರು. ಹೀಗಾಗಿ ಯಾವುದೇ ಕಾರಣದಿಂದ ನನ್ನ ಮನಸ್ಸು ಅತ್ತಿತ್ತ ಹೋಗಲಿಲ್ಲ. ಅವರ ಪತ್ರಗಳು ಅನೇಕ ವಿಷಯಗಳನ್ನು ಹೇಳುತ್ತಿದ್ದವು. ಅನೇಕ ವೀರಪುರುಷರ ಮಹಾತ್ಮರ ಘಟನೆಗಳು ಪತ್ರದಲ್ಲಿ ಉಲ್ಲೇಖವಾಗುತ್ತಿದ್ದವು. ಅವರ ಪತ್ರಗಳನ್ನು ಓದುತ್ತಿದ್ದರೆ ಬದುಕಿನಲ್ಲಿ ಆಸಕ್ತಿ ಆತ್ಮವಿಶ್ವಾಸ ಮೂಡುತ್ತಿತ್ತು. ಯಾರು ಉಪದ್ರವಿ ಜೀವಿಯಲ್ಲ ? ಎಲ್ಲರಿಂದಲೂ ಸಮಾಜಕ್ಕೆ ಅಷ್ಟಿಷ್ಟು ಒಳಿತಾಗುತ್ತದೆ. ಅಂದು ಸಮಾಜ ಖಾತೆ ಕಲ್ಯಾಣ ಸಚಿವರಾಗಿದ್ದ ವಿ. ಯಶೋಧರಮ್ಮ ದಾಸಪ್ಪ ಅವರನ್ನು ಕಾಣಲು ಜಿ.ವಿ.ನಾ. ಹೇಳಿದರು. ಮಂತ್ರಿಗಳೆಂದರೆ ಕಲಿಯುಗದ ದೇವತೆಗಳಾಗಿರುವ, ಜನಸಾಮಾನ್ಯರ ಬದುಕಿನಿಂದ ಸಾಕಷ್ಟು ದೂರ ಸರಿದಿರುವ ಅವರನ್ನು ನೋಡುವುದೆಂದರೆ ಸಾಕಷ್ಟು ಪ್ರಯಾಸದ ಕೆಲಸ ತಾನೇ ! ಆದರೆ ನನಗೇನೂ ಅಂತಹ ತೊಂದರೆಯಾಗಲಿಲ್ಲ. ಯಶೋಧರಮ್ಮದಾಸಪ್ಪ ಅವರು ಸಹಜವಾಗಿಯೇ ಮೃದು ಅಂತಃಕರಣದವರು. ಮೇಲಾಗಿ ಸಹೃದಯರು. ಜಿ.ವಿ.ನಾ. ಅವರು ಪತ್ರ ಬೇರೆ ಬರೆದಿದ್ದರು. ಹೋದ ತಕ್ಷಣ ಸಂದರ್ಶನ ದೊರೆಯಿತು. ನನ್ನ ಬಗ್ಗೆ ಅಪಾರ ಸಹಾನುಭೂತಿ ತೋರಿಸಿ, ಕೈಲಾದ ಸಹಾಯ ಮಾಡುವುದಾಗಿ ಹೇಳಿದರು. ಮತ್ತೊಮ್ಮೆ ಬಂದು ಕಾಣಬೇಕೆಂಬುದಾಗಿ ಹೇಳಿದರು. ನಾನು ಎರಡನೆಯ ಬಾರಿ ಹೋಗುವ ಹೊತ್ತಿಗೆ ಚೀಣಾಯುದ್ಧ ಪ್ರಾರಂಭವಾಗಿತ್ತು, ಹೀಗಾಗಿ ಯಾವುದೇ ಹುದ್ದೆಯನ್ನು ತುಂಬುವಂತಿರಲಿಲ್ಲ. ನಿರಾಶೆಯ ಮೋರೆಯಿಂದ ಹಳ್ಳಿಗೆ ಹಿಂದಿರುಗಿದೆ. ನನ್ನ ನಂಬಿಕೆ ಸಡಿಲವಾಗುತ್ತ ಬಂತು. ಮುಂದೆ ದಟ್ಟವಾದ ಅಂಧಕಾರ. ಇರುವ ಜನರಿಂದ ಅಸಹಕಾರ, ನನ್ನ ಮನೆಯವರಂತೂ ನನಗೆ ಅಪಾರ ಸಹಾನುಭೂತಿ ತೋರಿಸಿದರು. ಹಳ್ಳಿ–ಹೆಸರಿಗೆ ತಕ್ಕಹಾಗೇ ಕುಗ್ರಾಮ. ಪ್ರಪಂಚವೆಲ್ಲಾ ತಿರುಗುಮುರುಗಾದರೂ ಇದರ ನೆಮ್ಮದಿಗೆ ಕಿಂಚಿತ್ತೂ ಭಂಗ ಬರುತ್ತಿರಲಿಲ್ಲ. ವೃತ್ತಪತ್ರಿಕೆಯ ಮುಖವಂತೂ ಕಾಣೆವು. ಅಂತಹ ಸಮಯದಲ್ಲಿ ದೂರದಲ್ಲಿದ್ದ ನನ್ನ ಸೋದರ ಸಂಬಂಧಿ ಆರೋಗ್ಯ ಇಲಾಖೆಯಲ್ಲಿ ಕರೆದಿರುವ ಹುದ್ದೆಯ ಜಾಹೀರಾತು ಕಳುಹಿಸಿಕೊಟ್ಟ. ನಾನು ಅರ್ಜಿಹಾಕಿ ಜಿ.ವಿ.ನಾ. ಅವರಿಗೆ ಪತ್ರ ಬರೆದೆ. ಯೋಚನೆ ಬೇಡ, ಸಂದರ್ಶನಕ್ಕೆ ಹೋಗು. ತ್ರಿಪುರಿ

ಒಳಿತನ್ನೇ ಮಾಡುವನು 'ಎಂದರು. ಅಂಜುತ್ತಾ ಅಳುಕುತ್ತಾ ಸಂದರ್ಶನಕ್ಕೆ ಹೋದೆ. ಅವರು ಕೇಳಿದ ಎಲ್ಲಾ ಅರ್ಹತೆ ಇದ್ದಾಗ್ಯೂ ಯಾವುದೋ ದಾಖಲೆಯಿಲ್ಲವೆಂದು ನನ್ನ ಅರ್ಜಿ ತಿರಸ್ಕರಿಸಲ್ಪಡುತ್ತಿತ್ತು. ಆಗ ನಿರ್ದೇಶಕರಾಗಿದ್ದ ಶಾಮಾಶಾಸ್ತ್ರಿ ಅವರು ಕಠೋರ ನಿರ್ಧಾರ ಕೈಗೊಂಡು ನನಗೆ ದುಡಿಯಲು, ಇಲ್ಲ ಬದುಕಲು ಅವಕಾಶ ಮಾಡಿ ಕೊಟ್ಟರು. ಅಂತೂ ಕೆಲಸ ಸಿಕ್ಕಿತು. ಎರಡೂವರೆ ವರ್ಷ ಟ್ರೈನಿಂಗ್. ನಿರೀಕ್ಷೆಗೆ ಮೀರಿಯೇ ನನ್ನ ಪ್ರಯತ್ನಕ್ಕೆ ಪ್ರತಿಫಲ ಸಿಕ್ಕಿತು. ಜಿ.ವಿ.ನಾ. ಅವರಿಂದ ಪತ್ರ "ನಿನಗೆ ದೊರಕಿರುವ ಅವಕಾಶ ಮಹತ್ತರವಾದದು. ನಿನ್ನಂತೆಯೇ ಅನೇಕರಿಗೆ ಸೇವೆ ಮಾಡುವ ಅವಕಾಶವಿರುವುದಿಲ್ಲ. ಕಷ್ಟಕಾಲದಲ್ಲಿ ನಿನ್ನ ಹತ್ತಿರ ಜನ ಬರುತ್ತಾರೆ. ಅವ ರನ್ನು ಸ್ನೇಹದಿಂದ, ಪ್ರೀತಿಯಿಂದ ಸೇವೆಮಾಡು." ಶ್ರೀಹರಿ ಒಳಿತನ್ನು ಮಾಡುವನು. ಎಂದು. ಜಿ.ವಿ.ನಾ. ನನಗೆ ವಿಧಿಸಿರುವ ಸಂವಿಧಾನ ಮಾತಿಗಿಂತ ಶ್ರೇಷ್ಠವಾದುದು ನಾನದನ್ನು ನಿಷ್ಠೆಯಿಂದ ನೆರವೇರಿಸಿದೆನೋ ಇಲ್ಲವೋ ನನಗರಿಯದು. ಆದರೆ ಪ್ರತಿ ನಿಮಿಷದಲ್ಲೂ ಜಿ.ವಿ.ನಾ. ಅವರ ಸೇವಾ ಮನೋಭಾವ, ಪರೋಪಕಾರ, ಸಹಾನುಭೂತಿ, ನನ್ನ ಮನದಲ್ಲಿ ಮೂಡುತ್ತದೆ. ಅವರಿಗೆ ಪ್ರತಿ ಸಲ್ಲಿಸುವುದೆಂದರೆ ಅವರು ಹೇಳಿದಂತೆ ಕಾರ್ಯಾಚರಣೆ ಮಾಡುವುದೆಂದೇ ಭಾವಿಸಿದ್ದೇನೆ.

ಅನಂತರ ಹತ್ತು–ಹದಿನೈದು ವರ್ಷ ಪತ್ರ ವ್ಯವಹಾರ ನಡೆದಿರಲಿಲ್ಲ. ಉಪಕಾರ ಮಾಡಿದ ಬಗ್ಗೆ ಜಿ.ವಿ.ನಾ. ಅವರಲ್ಲಿ ಹಿರಿಮೆ ಇರಲಿಲ್ಲ. ನಾನಾದರೋ, ಹಿಂಜರಿಕೆಯ ಸ್ವಭಾವದವಳು. ಹೀಗಾಗಿ ಬಾಂಧವ್ಯ ಕೊನೆಗೊಂಡಿತೇನೋ ಎಂಬಂತಾಯಿತು. ಲೌಕಿಕ ಆಸೆ, ಆಮಿಷಗಳ ಮೇಲೆ ಬೇರೂರಿದ ಬಾಂಧವ್ಯ ಕ್ಷಣಿಕವಿರಬಹುದು. ಆದರೆ ಜನ್ಮಾನುಬಂಧವು ಸುಲಭದಲ್ಲಿ ಕಳಚಿಹೋಗುವುದಲ್ಲ. ಈ ಮಧ್ಯೆ ಜಿ.ವಿ.ನಾ. ಅವರ ಆರೋಗ್ಯ ಹದಗೆಟ್ಟಿತು. ನಾಲ್ಕಾರು ಜನರಿಗೆ ಬೇಕಾದ. ಸಾರಸ್ವತ ಸೇವಯಿಂದ ಇಡೀ ನಾಡಿಗೆ ಸ್ಫೂರ್ತಿದಾಯಕರಾಗಿದ್ದ ಜಿ.ವಿ.ನಾ. ದುರ್ದೈವದಿಂದ ಮನೆ ಸೇರಿದರು. ನನ್ನ ಶಾಲೋಪಾಧ್ಯಾಯರಿಗೆ ಸನ್ಮಾನ ಸಮಾರಂಭದ ಸಲುವಾಗಿ ಚಿಕ್ಕನಾಯಕನಹಳ್ಳಿಗೆ ಹೋದಾಗ ನೇರವಾಗಿ ಜಿ.ವಿ.ನಾ ಅವರನ್ನು ಕಾಣಲುಹೋದೆ. ಮನೆಯ ವಿಶಾಲವಾದ ತೊಟ್ಟಿಯ ಮೂಲೆಯೊಂದರ ಮಂಚದ ಮೇಲೆ ಜಿ.ವಿ.ನಾ. ಮಲಗಿದ್ದರು. ಧ್ವನಿ ಕೇಳಿ ಎಚ್ಚರಗೊಂಡರು. ನನ್ನನ್ನು ಕಂಡೊಡನೆ ಕಣ್ಣೀರಿನ ಕಟ್ಟೆಯೊಡೆಯಿತು. ವಿದೇಶ ದಲ್ಲಿರುವ ಮಗಳು ಅನಿರೀಕ್ಷಿತ ರೀತಿಯಲ್ಲಿ ಬಂದಾಗ ಹೆಂಗರುಳಿನ ತಂದೆಗಾಗುವ ಅನು ಭವವಾಯಿತೆನ್ನಬಹುದು. 'ಅಮ್ಮ' ಜಿ.ವಿ.ನಾ. ಅವರ ಅತ್ತೆ ಮೂಕಪ್ರೇಕ್ಷಕರಾದರು. ಎಪ್ಪತ್ತು ವರ್ಷ ವಯಸ್ಸಿನ ಜಿ.ವಿ.ನಾ. ಮುಗ್ಧರಾದರು. ಹೆಂಗರುಳಿನ ತಂದೆಯಾದರು, ಶ್ರೀಹರಿಯ ಕೃಪೆಯನ್ನು ಸಾರಿ ಸಾರಿ ಕೊಂಡಾಡಿದರು. ನನಗೆಷ್ಟು ಉಪಚಾರ ಮಾಡಿ ದರೋ, ನನ್ನ ಬಗ್ಗೆ ಎಷ್ಟು ಕಾಳಜಿ ವಹಿಸಿದರೋ ಹೇಳುವುದು ಅಸಾಧ್ಯವೆನಿಸುತ್ತದೆ. ಬಹಳ ದಿನ ಗೂಡು ತೊರೆದು ನಂತರ ಗೂಡಿಗೆ ಸೇರುವ ಧನ್ಯತೆ ನನ್ನದು. ಬುದ್ಧಿ

ಬಲಿಯುವುದಕ್ಕೆ ಮುಂಚೆ ನನ್ನ ತಾಯಿ ಇಹಲೋಕವಾಸ ಮುಗಿಸಿದಳು. ನನ್ನ ಬಾಳ ದೋಣಿ ಸ್ಪಷ್ಟ ಮಾರ್ಗ ಕಂಡೊಡನೆ ತಂದೆ ಸಹ ನನ್ನ ತಾಯಿಯನ್ನು ಅನುಸರಿಸಿದರು. ಹೀಗಾಗಿ ನಾನು 'ಅನಾಥೆ'ಯಾದೆ. ಆದರೆ ಚಿಕ್ಕನಾಯಕನಹಳ್ಳಿಗೆ ಹೋದ ನಂತರ ಜಿ.ವಿ.ನಾ. ಅವರ ಪ್ರೇಮವರ್ಷದಲ್ಲಿ ಮಿಂದ ನಂತರ ನಾನು ಅನಾಥೆಯಲ್ಲ ಸನಾಥೆ ಎಂಬ ಭಾವನೆ ಬರತೊಡಗಿತು. ಮುಂದಿನ ಜನ್ಮದಲ್ಲಿ ಅವರ ಮಗಳಲ್ಲದಿದ್ದರೆ ಅವರ ಪ್ರೀತಿಯ ವಸ್ತುವನ್ನಾಗಿ ಸೃಷ್ಟಿಸುವಂತಷ್ಟೇ ದೇವನಲ್ಲಿ ನನ್ನ ಮೊರೆ.

ಪಥಿಕ

# ಕುಲ ಪುರೋಹಿತ ಜಿ.ವಿ.ನಾ.

**ಸಾ. ನ. ನರಸಿಂಹಮೂರ್ತಿ**

ಜಿ.ವಿ.ನಾ. ಅವರಿಗೆ ಎಪ್ಪತ್ತು ಎಂದರೆ ನನಗೆ ನಂಬಲಿಕ್ಕಾಗುವುದಿಲ್ಲ. ಪ್ರಾಯಶಃ ನನಗಿಂತ ಐದಾರು ವರ್ಷ ದೊಡ್ಡವರಾಗಿರಬೇಕು. ಈಗ ಅವರಿಗೆ ದೇಹದ ಶಕ್ತಿ ಕುಂದಿರಬಹುದು. ಆದರೆ ಉತ್ಸಾಹ ? ಈಗಲೂ ಜೀವನದಲ್ಲಿ ಅವರು ಯುವಕನ ಉತ್ಸಾಹ ತೋರಿಸಿದ್ದಾರೆ. ಹೊಸ ಕೆಲಸಕಾರ್ಯಗಳಲ್ಲಿ ಅದಮ್ಯ ಆಸಕ್ತಿ ತೋರಿಸಿದ್ದಾರೆ. ಹಿಂದೆ ಉಪಕಾರ ಮಾಡುವಾಗ ಯಾವ ಸಹೃದಯತೆಯನ್ನು ಹೊಂದಿದ್ದರೋ ಅದೇ ಸಹೃದಯತೆಯನ್ನು ಇಂದೂ ಉಳಿಸಿಕೊಂಡಿದ್ದಾರೆ. ನನ್ನ ಅವರ ಪರಿಚಯ ತೀವ್ರತರವಾದುದಲ್ಲ. ಆದರೆ ಚಿಕ್ಕಂದಿನಿಂದಲೂ ಅವರ ಹೆಸರು ಕೇಳಿದ್ದೆ. ಅವರ ಸಾಹಸದ ಬಗ್ಗೆ ಮೆಚ್ಚಿಗೆ ವ್ಯಕ್ತಪಡಿಸಿದ್ದೆ. ಅವರು ನನ್ನ ಹೋಬಳಿಯವರು. ಗೂಳೂರು ಅವರಿಗೆ ಜನ್ಮ ಕೊಟ್ಟ ಸ್ಥಳ. ಅನಂತರ ಚಿಕ್ಕನಾಯಕನಹಳ್ಳಿಗೆ ಅಂದರೆ ಅವರ ಪತ್ನಿಯ ಊರಿಗೆ ಹೋದರು. ಅದು ಅವರ ಕಾರ್ಯಕ್ಷೇತ್ರವಾಯಿತು. ತಾನು ಉಸಿರಾಡುವ ಗಾಳಿಗೆ ತಾನು ಬದುಕುವ ನೆಲಕ್ಕೆ ಆತನ ನಿಷ್ಠೆ ಸಲ್ಲಬೇಕು. ಅಂತಹುದನ್ನು ನಾವು ಜಿ.ವಿ.ನಾ. ಅವರಲ್ಲಿ ಕಾಣಬಹುದು. ಚಿಕ್ಕನಾಯ್ಕನಹಳ್ಳಿ ತಾಲ್ಲೂಕಿಗೆ ವಿದ್ಯಾ ಪ್ರಸರಣಕ್ಕಾಗಿ ಅವರು 'ದೇಶೀಯ ವಿದ್ಯಾಪೀಠ'ವನ್ನು ಕಾಣಿಕೆಯಾಗಿತ್ತರು. ಈ ತಾಲ್ಲೂಕಿನ ಶೈಕ್ಷಣಿಕ ರಂಗದಲ್ಲಿ ಈ ಸಂಸ್ಥೆ ಎಂತಹ ಕಾರ್ಯವನ್ನು ಸಾಧಿಸಿದೆ ಎಂಬ ಅರಿವು ನನಗಿದೆ. ಇದಕ್ಕೆ ಕಾರಣೀಭೂತರಾದವರು ನಮ್ಮ ಹೋಬಳಿಯವರೆಂಬ ಹೆಮ್ಮೆ ನನ್ನದು.

ಜಿ.ವಿ.ನಾ. ಅವರ ಗುಣಗಳಲ್ಲಿ ನಾನು ಮೆಚ್ಚಿಕೊಂಡಿದ್ದುದು ವಿದ್ಯಾಭ್ಯಾಸದಲ್ಲಿ ಅವರಿಗಿರುವ ಆಸಕ್ತಿ, ಜ್ಞಾನ ಪ್ರಸಾರದಿಂದ ಮಾತ್ರ ಎಲ್ಲಾ ಸಮಸ್ಯೆ ಬಗೆಹರಿಯುತ್ತದೆಂಬ ಅಚಲ ನಂಬಿಕೆ ಇರುವ ವ್ಯಕ್ತಿ ಅವರು. ನನ್ನ ಇಬ್ಬರು ತಮ್ಮಂದಿರು ಅವರಲ್ಲಿ ವಿದ್ಯಾಭ್ಯಾಸ ಮಾಡಿದ್ದರು. ನಮ್ಮ ಹಳ್ಳಿಯಂತೂ ಕುಗ್ರಾಮ. ಸುಮಾರು ನಲವತ್ತು ವರ್ಷಗಳ ಕೆಳಗೆ ನಮಗೆ ಬಸ್ಸಿನ ಧೂಳಾಗಲೀ. ರೈಲಿನ ಹೊಗೆಯಾಗಲೀ ಕಾರ್ಖಾನೆಯ ಆರ್ಭಟವಾಗಲೀ ಪರಿಚಯವಿರಲಿಲ್ಲ (ಇಂದೂ ಕೂಡ) ಅದಿರಲಿ, ನಗರಕ್ಕೆ ಬರಬೇಕೆಂದರೆ ಹದಿನೈದು ಮೈಲಿ ಬರಬೇಕು. ನಗರದಲ್ಲಿ ರೂಂ ಮಾಡಿ ಓದಿಸಬೇಕೆಂಬ ಇಚ್ಛೆಯಾಗಲೀ ಅನುಕೂಲವಾಗಲೀ ನಮ್ಮ ತಂದೆಯವರಿಗಿರಲಿಲ್ಲ. ನಾನಂತೂ ಹೇಗೋ ಅಲ್ಪಸ್ವಲ್ಪ ವಿದ್ಯಾವಂತನಾದೆ. ನನ್ನ ಇಬ್ಬರು ತಮ್ಮಂದಿರಿಗೆ ಹಳ್ಳಿಯ ವಾಸ. ಇಂತಹ ಸಂದರ್ಭದಲ್ಲಿ ಜಿ.ವಿ.ನಾ. ನನ್ನ ತಂದೆಗೆ "ಮಕ್ಕಳನ್ನು ನಮ್ಮ ಮನೆಗೆ ಕಳುಹಿಸು, ನಾನು

ನೋಡಿಕೊಳ್ಳುತ್ತೇನೆ'' ಎಂದರು. ಅದರಂತೆ ನನ್ನ ಇಬ್ಬರು ತಮ್ಮಂದಿರ ಪ್ರಯಾಣ ಚಿಕ್ಕನಾಯಕನಹಳ್ಳಿಗೆ. ಜಿ.ವಿ.ನಾ. ಅವರು ಅಂಧಶ್ರದ್ಧೆಯುಳ್ಳ ಸಂಪ್ರದಾಯಸ್ಥರಲ್ಲ. ಆದರೆ ಪರಂಪರೆಯ ಬಗ್ಗೆ ಅಭಿಮಾನ ಉಳ್ಳವರು. ಗಾಂಧೀಜಿ ಅವರ ಪ್ರಭಾವದಿಂದ ಎಲ್ಲರನ್ನು ಸಮಷ್ಟಿ ದೃಷ್ಟಿಯಿಂದ ನೋಡುವ ಮನೋಭಾವ ಬೆಳಸಿಕೊಂಡವರು. ಹಾಗೆಯೇ ಗೀತೆ, ಉಪನಿಷತ್ತು, ದಾಸ ಸಾಹಿತ್ಯದಿಂದ ನಮ್ಮ ಸಂಸ್ಕೃತಿಯನ್ನು ಅರಿತವರು. ಹೀಗಾಗಿ ಅವರ ಆಶ್ರಯದಲ್ಲಿ ಬೆಳೆದ ನನ್ನ ತಮ್ಮಂದಿರಿಗೆ ಇದರ ಅನುಭವವಾಗುತ್ತಿತ್ತು. ಬೆಳಗ್ಗೆ ಎದ್ದು ಸ್ನಾನ ಸಂಧ್ಯಾವಂದನೆ, ಪೂಜೆಗಳನಂತರವೇ ಇತರ ಕಾರ್ಯಕ್ರಮ. ಆದರೆ ಮನೆಗೆ ಬರುತ್ತಿದ್ದ ಎಲ್ಲರನ್ನೂ ಭೇದಭಾವವಿಲ್ಲದೇ ನೋಡಬೇಕು. ಮನೆಯವರೆಲ್ಲಾ ಊಟ ಮಾಡುವ ಸ್ಥಳದಲ್ಲೇ ಅವರಿಗೂ ಊಟವಾಗ ಬೇಕು. ಇದು ಜಿ.ವಿ.ನಾ. ಅವರ ಆಜ್ಞೆ. ಜಿ.ವಿ.ನಾ. ಅವರ ಮನೆಯವರು ಸಹ ಸುಸಂಸ್ಕೃತರು. ನನ್ನ ತಮ್ಮಂದಿರನ್ನು ''ಅನ್ನಕ್ಕಾಗಿ ಬಂದಿದ್ದಾರೆ'' ಎಂದು ನೋಡಿದ ವರಲ್ಲ. ಸ್ವಂತ ಮಕ್ಕಳಿಗಿಂತ ಹೆಚ್ಚಾಗಿ ಕಂಡವರು. ಎಳೆತನದಲ್ಲಿ ರೂಢಿಸಿಕೊಳ್ಳಬೇಕಾದ ಶಿಸ್ತು, ಶ್ರದ್ಧೆ, ನಿಷ್ಠೆಗೆ ಜಿ.ವಿ.ನಾ. ಹೆಚ್ಚು ಗಮನ ಕೊಟ್ಟಿದ್ದರು. ಜಿ.ವಿ.ನಾ. ಅವರ ಕೃಪಾಶೀರ್ವಾದದಿಂದ ನನ್ನ ತಮ್ಮಂದಿರಲ್ಲಿ ಒಬ್ಬ ಶಾಲಾ ಉಪಾಧ್ಯಾಯನಾಗಿದ್ದು ಈಗ ತಾನೆ ನಿವೃತ್ತನಾಗಿದ್ದಾನೆ. ಮತ್ತೊಬ್ಬ ಬೆಂಗಳೂರಿನಲ್ಲಿದ್ದಾನೆ. ಹೀಗಾಗಿ ಜಿ.ವಿ.ನಾ. ಅವರು ನಮ್ಮ ಕುಟುಂಬದಲ್ಲಿ ದೊಡ್ಡ ಅಡಚಣೆಯಾಗಿದ್ದ ವಿದ್ಯೆ ಕಲಿಕೆಗೆ ಅಪಾರ ಸಹಾಯ ಮಾಡಿದರು.

ಮತ್ತೊಂದು ಸನ್ನಿವೇಶವೆಂದರೆ, ನನ್ನ ಸಂಬಂಧಿ ಒಬ್ಬರಿಗೆ ಜಿ.ವಿ.ನಾ. ಅವರಿಂದ ಪತ್ರ ಬರೆಸಿಕೊಂಡು ಸಮಾಜ ಕಲ್ಯಾಣ ಮಂತ್ರಿಯಾಗಿದ್ದ ದಿ. ಯಶೋಧರಾ ದಾಸಪ್ಪ ಅವರನ್ನು ನೋಡಲು ಹೋದೆ. 1962-63ರ ಚೀಣಾ ಯುದ್ಧ. ಆಗ ಅವರು ನಮಗೆ ಯಾವುದೇ ರೀತಿಯ ಸಹಾಯ ಮಾಡುವಂತಿರಲಿಲ್ಲ. ಸ್ವಲ್ಪ ದಿನದನಂತರ ''ಬನ್ನಿ'' ಎಂದರು. ಮೂರು ನಾಲ್ಕು ಸಾರಿ ಮಂತ್ರಿಗಳ ಹತ್ತಿರ ಓಡಾಡಿದೆ. ಪ್ರಾಯಶಃ ಆಗ ಜಿ.ವಿ.ನಾ. ಅವರು ಗಾಂಧಿ ಗ್ರಂಥಮಾಲೆಯ ಕೆಲಸದಲ್ಲಿದ್ದಿರಬಹುದು. ಒಂದು ಬೆಳಿಗ್ಗೆ ಮಂತ್ರಿಗಳ ಮನೆಗೆ ಹೋದೆ. ಕೆಲವೇ ನಿಮಿಷಗಳಲ್ಲಿ ''ನಾರಾಯಣ ಮೂರ್ತಿ ಕಡೆಯುವರನ್ನು ಕರೆಯಿರಿ'' 'ಇತ್ತ ಬನ್ನಿ' ಎಂದು ಹೇಳಿದ ಆಳು. ಹೋದೆ. ಯಶೋಧರ ದಾಸಪ್ಪ ಅವರು ತುಂಬಾ ಉದ್ವೇಗದಲ್ಲಿದ್ದರು. ಒಂದು ಕಾಗದವನ್ನು ನನಗೆ ಕೊಟ್ಟು ' ನೋಡಿ ಮೂರ್ತಿಯವರೇ, ಈಗಲೇ ನಾರಾಯಣಮೂರ್ತಿ ಅವರಿಗೆ ಪತ್ರ ಬರೆಯಿರಿ''. ''ಯಶೋಧರಮ್ಮ'' ಅವರು ಮಂತ್ರಿಯಾದ ಕೂಡಲೇ ದೇವತೆ ಯಾಗಲಿಲ್ಲ, ನೀವು ಬೆಳೆಸಿದ ಸಸಿಯದು, ಎಂದೂ ನಿಮ್ಮ ಮಾತಿಗೆ ಎರಡು ಹೇಳುವ ವಳಲ್ಲ. ಸಮಯ ಬಂದರೆ ಕೂಡಲೇ ಕಾರ್ಯಪ್ರವೃತ್ತಳಾಗುತ್ತೇನೆ'' ಎಂದರು. ನನಗೆ ಆಶ್ಚರ್ಯ ಜಿ.ವಿ.ನಾ. ಅವರು ಅವರಿಗೆ ಎಂತಹ ಪತ್ರ ಬರೆದಿರಬಹುದು. ನಾವಂತೂ ಕಷ್ಟದಲ್ಲಿದ್ದವರು, ಹೀಗಾಗಿ ಪರಿಹಾರದ ಆತುರ ಹೆಚ್ಚು. ಆದರೆ

ಜಿ.ವಿ.ನಾ. ಏಕೆ ಹೀಗೆ ? ಬಹುಶಃ ಜಿ.ವಿ.ನಾ. ಅವರೂ ನಮ್ಮ ಕಷ್ಟದಲ್ಲಿ ಮಿಳಿತಗೊಂಡಿರಬೇಕು. ಅದರ ಫಲ ಪತ್ರದ ಮೇಲೆ ಬಿದ್ದಿರಬೇಕು. ಇನ್ನೊಬ್ಬರ ಕಷ್ಟದ ಬಗ್ಗೆ ಸಹಾನುಭೂತಿ ಸೂಚಿಸಬಹುದು. ಅಥವಾ ಕೈಲಾದ ಸಹಾಯ ಮಾಡಲು ಮುಂದಾಗಬಹುದು. ಆದರೆ ಇನ್ನೊಬ್ಬರ ಕಷ್ಟವೆಲ್ಲಾ ತನ್ನ ಕಷ್ಟವೆಂದು ಭಾವಿಸಿ ಅದಕ್ಕಾಗಿ ಹೋರಾಡುವ ಮಾನವೀಯತೆಯ ಮೂರ್ತಿರೂಪ ಜಿ.ವಿ.ನಾ.

ಒಂದು ವರ್ಷದ ಕೆಳಗೆ ಜಿ.ವಿ.ನಾ. ಅವರ ಪತ್ರ ಬಂತು. ವೈವಾಹಿಕ ವಿಚಾರಕ್ಕೆ ಸಂಬಂಧಪಟ್ಟದ್ದು. ಅವರ ಮಿತ್ರರ ಮಗಳನ್ನು ನನ್ನ ತಂಗಿಯ ಮಗನಿಗೆ ತಂದುಕೊಳ್ಳುವ ವಿಚಾರಕ್ಕೆ ಕುರಿತದ್ದು. ಆಗ ಅವರು ತೋರಿಸುತ್ತಿದ್ದ ಆಸಕ್ತಿ ಸಮಯ ಪರಿಪಾಲನೆ ನನಗೆ ಆಶ್ಚರ್ಯ ತರುವಂತಹುದು. ನಾನು ಬರೆದ ಪತ್ರಕ್ಕೆ ಎರಡು ದಿನದಲ್ಲೇ ಉತ್ತರ ಬರೆಯಲು ಆಗದಿದ್ದರೂ ಮತ್ತೊಬ್ಬರಿಂದಲಾದರೂ ಉತ್ತರ. ಒಂದೊಂದು ಸಾರಿ ಅವರ ಶಿಸ್ತನ್ನು ಸಾಧಿಸುವುದಕ್ಕೆ ನನಗ ತೊಂದರೆಯಾಗುತ್ತಿತ್ತು. ಪತ್ರಗಳಲ್ಲಿ ಅವರು ತೋರುತ್ತಿದ್ದ ಸರಳತೆ, ಸೌಜನ್ಯಗಳನ್ನು ಎಷ್ಟು ಹೇಳಿದರೂ ಅತ್ಯಲ್ಪ. ಅವರ ಪತ್ರ ಓದುತ್ತಿದ್ದರೆ ಸೌಜನ್ಯಮೂರ್ತಿಯೊಂದು ಎದುರಾಗುತ್ತಿತ್ತು.

ಒಂದು ಅಂಶ ಹೇಳಿ ನನ್ನ ಅನುಭವವನ್ನು ನಿಲ್ಲಿಸುತ್ತೇನೆ. ಜಿ.ವಿ.ನಾ. ಅವರ ಪೂರ್ವಿಕರು ನಮ್ಮ ಮನೆತನದ ಪುರೋಹಿತರು. ಇಂದು ಪುರೋಹಿತ ಎಂಬ ಪದ ಅರ್ಥ ಕಳೆದುಕೊಳ್ಳುತ್ತಿದೆ. ಪುರದ ಹಿತವನ್ನು ಬಯಸುವ ಪುರೋಹಿತ ಜಿ.ವಿ.ನಾ. ಅವರ ಕಾರ್ಯಾಚರಣೆ ನೋಡಿದರೆ, ತಮ್ಮ ಪರಿಸರಕ್ಕಾಗುವ ಒಳಿತನ್ನು ಕೈಗೊಂಡಿದ್ದಾರೆ. ಒಟ್ಟಾರೆ ನಮ್ಮ ಕುಟುಂಬಕ್ಕಂತೂ ನಿಜವಾದ ಅರ್ಥದಲ್ಲಿ ಪುರೋಹಿತರಾಗಿದ್ದಾರೆ, ಸನ್ಮಾರ್ಗದಲ್ಲಿ ಬದುಕು ಸಾಗಿಸುವುದಕ್ಕೆ ಮಾರ್ಗದರ್ಶನ ನೀಡಿದ್ದಾರೆ. ಬೌದ್ಧಿಕವಾಗಿ ಬೆಳೆಯಲು ಉತ್ತಮ ಪರಿಸರವನ್ನು ಕಲ್ಪಿಸಿದ್ದಾರೆ. ಹೀಗಾಗಿ ಅವರು ಎಂದೂ ನಮಗೆ ಪೂಜ್ಯರು ಹೌದು—

ಪಥಿಕ

# ಮಾರ್ಗದರ್ಶಕ–ಜಿ.ವಿ.ನಾ.

**ಎಸ್. ಗೋವಿಂದರಾವ್**

ಪೂಜ್ಯ ಜಿ.ವಿ. ನಾರಾಯಣಮೂರ್ತಿಗಳೂ ನಾನೂ ಒಂದೇ ತಾಲ್ಲೂಕಿನವರೇ ಆದರೂ ನಾನು ಅವರನ್ನು ಮೊದಲು ನೋಡುವ ಮತ್ತು ಭೇಟಿ ಮಾಡುವ ಅವಕಾಶ ಉಂಟಾದದ್ದು ಮಾಯಸಂದ್ರದಲ್ಲಿ ; 1954ರ ಏಪ್ರಿಲ್ ಮಾಹೆಯಲ್ಲಿ. ಅಲ್ಲಿ ನಡೆಯುತ್ತಿದ್ದ ಭಾರತ್ ಸೇವಾದಳದ ಶ್ರಮದಾನದ ಶಿಬಿರದಲ್ಲಿ. ದಿವಂಗತ ಮಾ. ಕೃ. ನರಸಿಂಹಯ್ಯನವರ ಜೊತೆಯಲ್ಲಿ ಅವರು ಶಿಬಿರಕ್ಕೆ ಆಗಮಿಸಿದಾಗ ಅವರೊಂದಿಗಿನ ನನ್ನ ಮೊದಲ ಭೇಟಿಯೇ ನನ್ನ ಮೇಲೆ ಅಚ್ಚಳಿಯದ ಪ್ರಭಾವ ಬೀರಿತು.

ಸರಳವಾದ, ಸ್ವಚ್ಛವಾದ, ಬಿಳೀ ಖಾದಿ ಉಡುಪು ಅವರ ಘನವಾದ ವ್ಯಕ್ತಿತ್ವಕ್ಕೆ ಉಚಿತವಾದದ್ದು. ವ್ಯಕ್ತಿಯೊಬ್ಬರು ಸಾಮಾನ್ಯವಾಗಿ ಎಂಥವರು ಎಂಬುದನ್ನು ಅವರು ಧರಿಸುವ ಉಡುಪೇ ಸೂಚಿಸುತ್ತದೆ ಎಂದು ಹೇಳುತ್ತಾರೆ. ಇದು ಪೂಜ್ಯ ಜಿ.ವಿ.ನಾ. ರವರ ಬಗೆಗಂತೂ ನೂರಕ್ಕೆ ನೂರರಷ್ಟು ಸತ್ಯ.

ಸ್ವಲ್ಪ ದಿವಸಗಳನಂತರವೇ ಮಾಯಸಂದ್ರದಲ್ಲಿ ನೆಹರೂ ವಿದ್ಯಾಶಾಲೆಯ ಸ್ಥಾಪಕ ಮುಖ್ಯೋಪಾಧ್ಯಾಯರಾಗಿ ಕಾರ್ಯನಿರತರಾದ ಪೂಜ್ಯರ ಜೊತೆಯಲ್ಲಿ ಸಹಾಯಕ ಉಪಾಧ್ಯಾಯನಾಗಿ ಕೆಲಸ ಮಾಡುವ ಅವಕಾಶ ದೊರಕಿದ್ದು ನನ್ನ ಜೀವನದ ಒಂದು ಸಂಧಿಕಾಲ. ನೆಹರೂ ವಿದ್ಯಾಶಾಲೆಯ ನನ್ನ ಅಧ್ಯಾಪಕತ್ವ ನನ್ನ ಜೀವನದ ಗತಿಯನ್ನೇ ಬದಲಾಯಿಸಿತು. ಅಲ್ಲಿ ನಾನು ಮಕ್ಕಳಿಗೆ ಬೋಧಿಸಿದ್ದಕ್ಕಿಂತ ಅವರೊಂದಿಗಿನ ಮೂರು ವರ್ಷಗಳ ಸಹವಾಸದಲ್ಲಿ ನಾನು ಕಲಿತದ್ದೆ ಹೆಚ್ಚು. ನನ್ನ ವ್ಯಕ್ತಿತ್ವಕ್ಕೆ ಒಂದು ಅಸ್ತಿತ್ವ ಉಂಟಾದದ್ದು ಪೂಜ್ಯರ ಪವಿತ್ರ ಸಹವಾಸದಿಂದ.

ಮುಂಜಾನೆ ಎಂಟೂವರೆ ಒಂಬತ್ತರ ವೇಳೆಗೆ ನನ್ನ ಮನೆ ಬಳಿ ಬಂದು "ಗೋವಿಂದರಾವ್ ಶಾಲೆಗೆ ಹೊರಡೋಣವೇ ?" ಎಂದು ಕೂಗುವ ವೇಳೆಗೆ ನಾನು ಅವರೊಂದಿಗೆ ಹೊರಡಲು ಇನ್ನೂ ಸಿದ್ಧತೆಯ ತಡಬಡಿಕೆಯಲ್ಲಿಯೇ ಇರುತ್ತಿದ್ದೆ. ಮಾಯಸಂದ್ರದ ಊರಿನಿಂದ ನೆಹರೂ ವಿದ್ಯಾಶಾಲೆಗೆ ಸುಮಾರು ಎರಡು ಮೈಲಿಗಳಷ್ಟು ದೂರ. ದಿನವೂ ನಡೆದುಕೊಂಡೇ ಶಾಲೆಗೆ ಹೋಗುತ್ತಿದ್ದೆವು. ಎಂಟೋ, ಎಂಟೂವರೆ ವೇಳೆಗೇ ಪುನಃ ನಡೆದುಕೊಂಡು ಊರು ಸೇರುವುದು. ಅವರೊಂದಿಗೆ ನಡೆಯುವುದು ಬಹಳ ಕಷ್ಟ. ಅವರ ಯೋಚನಾಲಹರಿಯಷ್ಟೇ ವೇಗ ಅವರ ನಡಿಗೆ. "ಏನು ನೀನು ಇನ್ನೂ ಹುಡುಗ, ಹಿಂದೆ ಬಿದ್ದೆಯಲ್ಲಾ", ಎಂದು ನನ್ನ ಕಡೆ ನೋಡಿದಾಗ ನನಗೆ ನಾಚಿಕೆಯಾಗುತ್ತಿತ್ತು. ಒಂದೊಂದು ದಿವಸ ಮಾಯಸಂದ್ರದ ಕೆರೆಯ ಏರಿಯ

ಮೇಲೆ ಹೋಗುತ್ತಿದ್ದೆವು. ದಾರಿಯುದ್ದಕ್ಕೂ ಹೆಚ್ಚು ಮಾತಿಲ್ಲ, ಎಷ್ಟು ಅಗತ್ಯವೋ ಅಷ್ಟೇ ಮಾತು. ಅವರ ನಡೆನುಡಿ ಎಲ್ಲವೂ ಗಂಭೀರ.

ಶಾಲೆಗೆ ಹೋದ ಕೂಡಲೇ ಅಂದಂದಿನ ಟಪಾಲು ನೋಡಿ ತಕ್ಷಣವೇ ಅವುಗಳಿಗೆ ಉತ್ತರ ಬರೆಯುವುದು. ಇದೊಂದು ಅವರಲ್ಲಿ ನಾವು ಮೆಚ್ಚಿಕೊಂಡಿರುವ ಗುಣ. ಯಾರಿಂದಲೇ ಆಗಲಿ ಬಂದ ಪತ್ರಕ್ಕೆ ಸೂಕ್ತವಾದ ಉತ್ತರವನ್ನು ಆ ದಿನವೇ ಬರೆಯುವುದು ಅವರ ಪದ್ಧತಿ. ರಾಜ್ಯದ, ರಾಷ್ಟ್ರದ, ವಿವಿಧ ಭಾಗಗಳಲ್ಲಿನ ಸಮಾಜ ಸೇವಾ ಸಂಸ್ಥೆಗಳು, ರಚನಾತ್ಮಕ ಸಂಸ್ಥೆಗಳು. ಇವುಗಳಿಂದ ದಿನವೂ ಪತ್ರಗಳು, ಅವುಗಳಿಗೆ ದಿನವೂ ಉತ್ತರಗಳು. ಸ್ವಲ್ಪವೂ ಬೇಸರಿಕೆಯಿಲ್ಲ. (ಬಂದ ಪತ್ರಗಳಿಗೆ ತಕ್ಷಣ ಉತ್ತರ ಬರೆಯಬೇಕೆಂಬ ಅವರ ಗುಣವನ್ನು ನಾನು ಮೆಚ್ಚಿಕೊಂಡಿದ್ದರೂ ಆ ಪದ್ಧತಿಯನ್ನು ಇನ್ನೂ ನಾನು ನನ್ನ ಜೀವನದಲ್ಲಿ ಅನುಸರಣೆಗೆ ತರುವ ಪ್ರಯತ್ನದಲ್ಲೇ ಇದ್ದೇನೆ.)

ಶಾಲೆಯಲ್ಲಿ ನಾವು ಇಂದು ಅನುಸರಿಸುತ್ತಿರುವ ಪ್ರಾರ್ಥನಾ ಪದ್ಧತಿಯನ್ನು ಆರಂಭಿಸಿ ಅದನ್ನು ಹೇಗೆ ಮಾಡಬೇಕೆಂದು ನಮಗೆಲ್ಲಾ ತಿಳಿಸಿದವರು ಅವರು. ಇಂದು ನೆಹರೂ ವಿದ್ಯಾ ಶಾಲೆಯಲ್ಲಿನ ಪ್ರಾರ್ಥನಾ ತರಗತಿಗಳು, ಇಲ್ಲಿಗೆ ಭೇಟಿಕೊಟ್ಟಿರುವ ಅಸಂಖ್ಯಾತ ಮಹನೀಯರ, ಅನೇಕ ವಿದ್ಯಾ ಇಲಾಖೆ ಅಧಿಕಾರಿಗಳ, ಮೆಚ್ಚುಗೆಗೆ ಪಾತ್ರವಾಗಿದ್ದರೆ, ವಿದ್ಯಾರ್ಥಿಗಳ ಬಾಳಿನಲ್ಲಿ ತುಂಬಾ ಪ್ರಭಾವ ಬೀರುವಂತಾಗಿದ್ದರೆ, ಅದಕ್ಕೆ ಜಿ.ವಿ.ನಾ.ರವರೇ ಕಾರಣರು. ಈ ಪ್ರಾರ್ಥನಾ ತರಗತಿಗಳನ್ನು ಹೇಗೆ ನಡೆಸಬೇಕೆಂದು ಆಚರಿಸಿ ತೋರಿಸಿಕೊಟ್ಟವರು ಅವರು. ಸಾವಿರಾರು ಮಂದಿ ಹಿರಿಯ ವಿದ್ಯಾರ್ಥಿಗಳು ಇಂದಿಗೂ ಶಾಲೆಯಲ್ಲಿನ ತಮ್ಮ ಸಿಹಿ ಸಂದರ್ಭಗಳನ್ನು ನೆನೆಸಿಕೊಳ್ಳುತ್ತಿರುತ್ತಾರೆ. ಅವರ ಅನಂತರದ ಜೀವನದಲ್ಲೂ ಅವರ ಮೇಲೆ ಈ ಪ್ರಾರ್ಥನಾ ತರಗತಿಗಳ ಪ್ರಭಾವ ಬಹಳವಾಗಿ ಬೀರಿದೆ ಎಂಬುದು ಅವರು ಆಗಾಗ್ಗೆ ಬರೆಯುವ ಪತ್ರಗಳ ಮೂಲಕ ನನಗೆ ತಿಳಿದಿರುತ್ತದೆ.

ಜಿ.ವಿ.ನಾ.ರವರು ನಮ್ಮ ಸನಾತನ ಸಂಪ್ರದಾಯಗಳಲ್ಲಿನ ಕೆಲವು ಶ್ರೇಷ್ಠ ಆಚರಣೆಗಳಿಗೆ ಅಸಾಧಾರಣ ಗೌರವ ಹೊಂದಿದವರು. 'ಏಕಾದಶೀವ್ರತ' ಅವರಿಗೆ ಬಹಳ ಪ್ರಿಯವಾದದ್ದು. ಏಕಾದಶೀ ದಿನಗಳಲ್ಲಿ ಕಟ್ಟುನಿಟ್ಟು ಉಪವಾಸ. ದಿನದ ಮಧ್ಯೆ ಒಂದೆರಡು ಬರೀ ನಿಂಬೆಹಣ್ಣಿನ ಪಾನಕ ಮಾತ್ರ ಆಹಾರ. ಒಂದು ಏಕಾದಶೀ ದಿನ, ಅವರ ಮಧ್ಯಾಹ್ನದ ನಿಂಬೇಹಣ್ಣಿನ ಪಾನಕ ತಯಾರಿ ಮಾಡಲು ಶಾಲೆಯ ಸೇವಕ ಶ್ರೀ ಅಬ್ದುಲ್ ಷುಕೂರ್‌ರವರನ್ನು ಕರೆದಾಗ ನನಗೆ ದಿಗ್ಭ್ರಮೆಯಾಯಿತು. "ಏನಪ್ಪಾ ಇಂದು ಏಕಾದಶೀ ದಿನದ ಪಾನಕವನ್ನು ಮಾಡಿಕೊಂಡು ಬರಲು ಮಹಮ್ಮದೀಯ ಬಂಧುವೊಬ್ಬನನ್ನು ಕರೆಯುತ್ತಾರಲ್ಲಾ" ಎಂದುಕೊಂಡೆ. ಆದರೆ ಆ ದಿನದಿಂದ ಹಿಡಿದು ಅವರು ಮಾಯಸಂದ್ರದಲ್ಲಿ ಇರುವವರೆಗೂ ಏಕಾದಶೀ ದಿನದ ನಿಂಬೆಹಣ್ಣಿನ ಪಾನಕವನ್ನು ಅಬ್ದುಲ್ ಷುಕೂರ್‌ರವರೇ ಮಾಡಿಕೊಡುತ್ತಿದ್ದರು. ಅವರ ಈ ಉದಾತ್ತ ಭಾವನೆ ಕಂಡು ನಾನು ಬೆರಗಾದೆ. ಅವರ ಈ ವರ್ತನೆ ನನ್ನ ಜೀವನದ ಮೇಲೆ ತುಂಬಾ

ಪ್ರಭಾವ ಬೀರಿದೆ. ಧರ್ಮಾಚರಣೆ ಎಂದರೆ ಕೇವಲ ಅಂಧಾಚರಣೆಯಲ್ಲ, ಧರ್ಮಾಚರಣೆ ಧರ್ಮ ದ್ವೇಷವಲ್ಲ ಎಂಬುದು ನಾನು ಅವರ ಸಹಚಾರಿಯಾಗಿ ಕಲಿತಿರುವ ಪಾಠ.

ಶಿಕ್ಷಣ ಎಂದರೇನು ? ಶಿಕ್ಷಕನಾದವನು ಹೇಗಿರಬೇಕು ? ಎಂಬುದರ ಬಗೆಗೆ ಅವರದೇ ಆದ ಒಂದು ಕಲ್ಪನೆ ಇದೆ. ಶಿಕ್ಷಕನಾದವನು ಮೊದಲು ಬೋಧನಾ ವೃತ್ತಿಯನ್ನು ಮತ್ತು ವಿದ್ಯಾರ್ಥಿಗಳನ್ನು ಪ್ರೀತಿಸಬೇಕು. ಈ ಎರಡೂ ಗುಣಗಳು ಶಿಕ್ಷಕನಾದವನಿಗೇ ಅತ್ಯವಶ್ಯಕವಾಗಿರಬೇಕಾದವುಗಳು. ಶಿಕ್ಷಣ ಕೇವಲ ಪುಸ್ತಕದ ಓದೇ ಅಲ್ಲ. ಅದು ಜೀವನ ಶಿಕ್ಷಣ ಆಗಬೇಕು. ಉಪಾಧ್ಯಾಯರ ಮತ್ತು ವಿದ್ಯಾರ್ಥಿಗಳ ನಡುವಿನ ಸಂಬಂಧ ತಂದೆ ಮಕ್ಕಳ ನಡುವಿನ ಸಂಬಂಧದಂತಿರಬೇಕು. ಅಣ್ಣ ತಮ್ಮಂದಿರ ಮಧ್ಯದ ಸಂಬಂಧ ವಿದ್ದಂತಿರಬೇಕು. ಇವು ಶಿಕ್ಷಣದ, ಶಿಕ್ಷಕನ ಮತ್ತು ಶಿಕ್ಷಕ ವಿದ್ಯಾರ್ಥಿವೃಂದದ ಬಾಂಧವ್ಯದ ಬಗೆಗಿನ ಅವರ ಅಭಿಪ್ರಾಯಗಳು.

ನಮ್ಮ ನೆಹರೂ ವಿದ್ಯಾಶಾಲೆ ಎದುರಿನಲ್ಲಿ ಒಂದು ಸರ್ಕಾರಿ ಪ್ರಾಥಮಿಕ ಶಾಲೆ ಇದೆ. ಇಪ್ಪತ್ತೈದು ವರ್ಷಗಳ ಹಿಂದೆ ಅಲ್ಲಿ ಕೇವಲ ಹದಿನೈದು ಇಪ್ಪತ್ತು ವಿದ್ಯಾರ್ಥಿಗಳು ಮಾತ್ರ ವ್ಯಾಸಂಗ ಮಾಡುತ್ತಿದ್ದರು. ಈ ಮಕ್ಕಳೆಲ್ಲಾ ಬಹಳವಾಗಿ ಹಿಂದುಳಿದ ಪಂಗಡಗಳ ಕುಟುಂಬಗಳಿಂದ ಬರುತ್ತಿದ್ದರು. 'ಕೇರು'ವತಿಯಿಂದ ನಮ್ಮ ವಿದ್ಯಾಶಾಲೆಯಲ್ಲಿ ಏರ್ಪಡಿಸುತ್ತಿದ್ದ ಮಧ್ಯಾಹ್ನದ ಉಪಾಹಾರಕ್ಕೆ ಈ ಮಕ್ಕಳಿಗೂ ಆಹ್ವಾನವಿರುತ್ತಿತ್ತು. ಹಾಲು, ಗೋಧಿರೊಟ್ಟಿ ಹಂಚಿಕೆ. ಅದು ಸಿದ್ಧವಾಗುವವರೆಗೂ ಆ ಪುಟ್ಟ ಮಕ್ಕಳನ್ನು ಶಾಲಾ ಆವರಣದ ಆಲದ ಮರದ ಕೆಳಗೆ ಕೂಡಿಸಿಕೊಂಡು ತಾವೇ ತಲೆ ಬಾಚಿ ಜಾಜಿ ಹೂವುಗಳನ್ನು ಮುಡಿಸಿ, ಅವರು ಚೊಕ್ಕಟವಾಗಿ ತರಗತಿಗಳಿಗೆ ಬರುವಂತೆ ತಿಳಿಸಿಕೊಡುತ್ತಿದ್ದ ಸಂದರ್ಭವಂತೂ ನಾನು ಎಂದೆಂದೂ ಮರೆಯಲಾರದಂತಹುದು. ಅದು ಅವರ ಅಸಾಧಾರಣ ಮಾನವೀಯ ಅನುಕಂಪದ ದ್ಯೋತಕವಾಗಿದ್ದಿತು.

ಇಂತಹ ಹತ್ತಾರು ಪ್ರಸಂಗಗಳನ್ನು ಅವರ ಅಪರೂಪದ ವ್ಯಕ್ತಿತ್ವದಲ್ಲಿ ನಾವು ಕಾಣುತ್ತೇವೆ. ಅವರ ಅತ್ಯಂತ ನಿಕಟವರ್ತಿಗಳಲ್ಲೊಬ್ಬನಾದ ನನ್ನ ಮೇಲೆ ಅವರ ಈ ಗುಣಗಳು ಅಚ್ಚಳಿಯದ ಪ್ರಭಾವವನ್ನು ಬೀರಿವೆ. ನನ್ನಂತಹ ಸಹಸ್ರಾರು ಯುವಜನರಿಗೆ ಮಾರ್ಗದರ್ಶನವನ್ನು ನೀಡಿವೆ. ಅವರ ಜೀವನವೊಂದು ನಂದಾದೀಪ. ತಾನು ಉರಿದು ಉಳಿದವರಿಗೆ ದಾರಿ ತೋರಿಸುತ್ತಿರುವ ಒಂದು ಅಮರ ಜ್ಯೋತಿ.

# ಧೀಮಂತ ವ್ಯಕ್ತಿ ಜಿ.ವಿ.ನಾ.

**ಚಿ. ಕೃ. ಸ. ಶರ್ಮ**

'ಧಿಗ್ಬಲಂ ಕ್ಷತ್ರಿಯ ಬಲಂ, ಬ್ರಹ್ಮತೇಜೋ ಬಲಂಬಲಂ' ಎಂದು ವಿಶ್ವಾಮಿತ್ರ ಹೇಳಿದ ಮಾತು ಶ್ರೀ ಜಿ.ವಿ.ನಾ. ಅವರನ್ನು ಕಂಡಾಗಲೆಲ್ಲ ನೆನಪಿಗೆ ಬರುವುದು. ಅವರ ಕಣ್ಣುಗಳ ಕಾಂತಿ, ತೇಜಸ್ಸು, ಸದಾ ಮಂದಹಾಸದಿಂದ ಮಿನುಗುವ ಮುಖ ಅವರಲ್ಲಿ ಎಲ್ಲರಿಗೂ ಪ್ರೀತಿ ವಿಶ್ವಾಸಗಳನ್ನು ಮೂಡಿಸಿವೆ. ಹೇರಳವಾದ ಆಧ್ಯಾತ್ಮಿಕ ಜ್ಞಾನ ಸಂಪತ್ತು ಅವರದಾಗಿದೆ. ಗೀತೆಯ ಬಗ್ಗೆ ಅವರಿಗಿರುವ ಅಪಾರ ಅಭಿಮಾನ ಅವರ ಪುಸ್ತಕಗಳನ್ನು ಅಭ್ಯಸಿಸಿದಾಗ ಗೊತ್ತಾಗುವುದು. ಗುಬ್ಬಿಯ ಚಿದಂಬರಾಶ್ರಮದ ಮಾಸಿಕ 'ಸೇವಾಸದನ'ದಲ್ಲಿನ ಅವರ ಅನೇಕ ಲೇಖನಗಳು ಅವರ ಆಧ್ಯಾತ್ಮಿಕ ಒಲವಿನ ದ್ಯೋತಕವಾಗಿವೆ. ಪಾಂಡಿತ್ಯ. ಆಳವಾದ ಅಧ್ಯಯನ. ವಿಶಾಲವಾದ ಅನುಭವ. ಅಪಾರ ಕರುಣೆ. ಆತ್ಮೀಯತೆಯಂತಹ ಸದ್ಗುಣಗಳ ಆಗರದಂತಿರುವ ಅವರು ಎಲ್ಲರೊಡನೆ ಬೆರೆತು ಸಾಕ್ರೆಟೀಸನಂತೆ ತಮ್ಮ ವಿಚಾರಧಾರೆಯನ್ನು ಹಂಚಿಕೊಳ್ಳುತ್ತಾರೆ. ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳ ಮೇಲಿನ ಅವರ ಪ್ರಭುತ್ವ ಮೆಚ್ಚುವಂತಹುದು.

ಶ್ರೀಯುತರು ಅತ್ಯಂತ ಉತ್ತಮ ಶಿಕ್ಷಕರು ಗಾಂಧೀಜಿಯವರ ಮೂಲ ಶಿಕ್ಷಣದ ಒಲವು ಅವರು ಸ್ಥಾಪಿಸಿದ ಅನೇಕ ವಿದ್ಯಾಸಂಸ್ಥೆಗಳ ಉಸಿರಾಗಿದೆ. ಬೆಂಗಳೂರು ಜಿಲ್ಲೆಯ ಕಾನಕಾನಹಳ್ಳಿಯ ಗ್ರಾಮ ವಿದ್ಯಾಪ್ರಚಾರ ಸಂಸ್ಥೆಯನ್ನು ಪ್ರಾರಂಭಿಸಿ ಅಲ್ಲಿ ನಾಲ್ಕಾರು ವರ್ಷ ಸೇವೆ ಸಲ್ಲಿಸಿದರು. ಚಿಕ್ಕನಾಯಕನಹಳ್ಳಿಯಲ್ಲಿ ಸ್ವಾತಂತ್ರ್ಯ ಸಂಗ್ರಾಮದ ಮುಂದಾಳುಗಳಾಗಿ ಭಾಷಣ, ಬರವಣಿಗೆಗಳ ಮೂಲಕ ಜನಗಳಲ್ಲಿ ರಾಷ್ಟ್ರ ಪ್ರೇಮ. ಸರ್ವೋದಯ. ಸ್ವಾತಂತ್ರ್ಯ ಮತ್ತು ಖಾದಿ ಇವುಗಳ ಬಗ್ಗೆ ಪ್ರಚೋದನೆ ಯನ್ನುಂಟುಮಾಡಿದ ಕೀರ್ತಿ ಅವರದು. 1943ರಲ್ಲಿ ದೇಶೀಯ ವಿದ್ಯಾಪೀಠ ಸಂಸ್ಥೆಯ ಅಂಕುರಾರ್ಪಣ ಮಾಡಿ 1944ರಲ್ಲಿ ರಾಷ್ಟ್ರೀಯ ಭಾವನಾ ಪ್ರಚೋದಕವಾದ ಪ್ರೌಢಶಾಲೆಯನ್ನು ಪ್ರಾರಂಭಿಸಿದರು. ಅಧ್ಯಾಪಕರಾಗಿ, ಕಾರ್ಯದರ್ಶಿಗಳಾಗಿ ಸಂಸ್ಥೆಯ ಶ್ರೇಯೋಭಿವೃದ್ಧಿಗಾಗಿ ಹಗಲಿರುಳೂ ಶ್ರಮಿಸಿದರು.

ಶ್ರೀಯುತರು ಪಾರ್ಶ್ವವಾಯುಪೀಡಿತರಾದರೂ ಸಾಹಿತ್ಯ ಸೇವೆಯ ಬಗ್ಗೆ ಅವರ ಉತ್ಸಾಹ ತಗ್ಗಿಲ್ಲ.

ಅವರ ಭಾಷಣ ವಿದ್ವತ್ಪೂರ್ಣ ಮಾತ್ರವಲ್ಲ ವಿಷಯಬೋಧಕವೂ ಹೌದು. ಭಾಷಣ ವಿಷಯ ನಿರೂಪಣೆ, ಗಾಂಭೀರ್ಯ, ಅಚ್ಚುಕಟ್ಟು, ತಾತ್ವಿಕ ಮೌಲ್ಯಗಳಿಂದಾಗಿ ಅತ್ಯಂತ ಆಕರ್ಷಣೀಯವಾಗಿರುವುದು.

ಜಿ.ವಿ.ನಾ. ಅತ್ಯಂತ ಸ್ನೇಹಮಯಿ. ಅವರ ಜೀವನದ ಧ್ಯೇಯೋದ್ದೇಶಗಳು ಅವರ ಸಂಪರ್ಕ ಪಡೆದವರೆಲ್ಲರಲ್ಲೂ ಮೂಡುವಂತೆ ಮಾಡುವ ಗಾರುಡಿಗನ ಕೌಶಲ್ಯ ಅವರಲ್ಲಿದೆ.

ಶ್ರೀಯುತರು ಆದರಾತಿಥ್ಯದಲ್ಲಿ ತೋರುವ ಹೃದಯ ವೈಶಾಲ್ಯ ಭಾರತೀಯ ಸಂಸ್ಕೃತಿ ಪರಂಪರೆಗಳಿಗೆ ಅನುಗುಣವಾದುದು. ಮನೆಗೆ ಬಂದ ಅತಿಥಿಯ ಆದರೋಪಚಾರಗಳಲ್ಲಿ ಅವರ ಶ್ರೀಮತಿ ಮತ್ತು ಅತ್ತೆಯವರು (ಅಕ್ಕನೂ ಹೌದು) ಎಷ್ಟೋ ಪೇಚಿನ ಪ್ರಸಂಗಗಳಿಗೆ ಗುರಿಯಾಗಿದ್ದಾರೆ. 1962ರಲ್ಲಿ ನಾನು ಮೈಸೂರಿನಲ್ಲಿ ಶಿಕ್ಷಣ ತರಬೇತಿಗೆ ಹೋಗಿದ್ದಾಗ ಆಗಾಗ್ಗೆ ಅವರ ಆತಿಥ್ಯದ ಅನುಭವವನ್ನು ಪಡೆಯುವ ಸುಯೋಗ ಪಡೆದಿದ್ದೆ.

ಪ್ರೌಢಶಾಲೆಗೆ ಅಧ್ಯಾಪಕನಾಗಿ ಬಂದಾಗ ನಾನು ಪಾಶ್ಚಾತ್ಯ ಉಡುಪಿನಲ್ಲಿ ಶಾಲೆಗೆ ಬರುತ್ತಿದ್ದೆ. ನನ್ನ ಉಡುಪು ಜಿ.ವಿ.ನಾ. ಅವರಿಗೆ ಸಹನವಾಗಲಿಲ್ಲ. ಮೊದಲನೆಯ ದಿನವೇ ನನ್ನನ್ನು ಅಡಿಯಿಂದ ಮುಡಿಯುವರೆಗೂ ದುರುಗುಟ್ಟಿಕೊಂಡು ನೋಡಿದುದು ನನಗೆ ಇಂದಿಗೂ ನೆನಪಿದೆ.

ಶ್ರೀಯುತರ ಶಿಕ್ಷಣವೆಂದರೆ ವಿದ್ಯಾರ್ಥಿಗಳೆಲ್ಲರಿಗೂ ಅಚ್ಚುಮೆಚ್ಚು. ಕನ್ನಡವಾಗಲೀ ಆಂಗ್ಲಭಾಷೆಯಾಗಲೀ ಅವರು ಅತ್ಯಂತ ಶ್ರದ್ಧೆ, ಆಸಕ್ತಿ, ಉತ್ಸಾಹಗಳಿಂದ ಬೋಧಿಸುತ್ತಿದ್ದರು. ಈ ಉತ್ಸಾಹದಲ್ಲಿ ಕಾಲಕಳೆದುದು ಅವರಿಗಾಗಲೀ ವಿದ್ಯಾರ್ಥಿಗಳಿಗಾಗಲೀ ಗೊತ್ತೇ ಆಗುತ್ತಿರಲಿಲ್ಲ. ಮುಂದಿನ 'ಪೀರಿಯಡ್' ಇದ್ದ ಅಧ್ಯಾಪಕ ಕಾದುಕಾದು ಸುಮ್ಮನಾಗಬೇಕಾಗುತ್ತಿತ್ತು.

ಪ್ರತಿಭೆ ಮತ್ತು ದಕ್ಷತೆಗಳನ್ನು ಗುರುತಿಸುವುದರಲ್ಲಿ ಅವರು ಅತ್ಯಂತ ಚಾಣಾಕ್ಷರು. ಅವರೊಡನೆ ಸಂಭಾಷಣೆಯೆಂದರೆ ಅಪೂರ್ವ ಅನುಭವ ಹಾಗೂ ಅತ್ಯಂತ ಲಾಭದಾಯಕ.

ಒಂದುಸಾರಿ ಒಂದು ಇಂಗ್ಲಿಷ್ ವಾಕ್ಯದ ಪ್ರಯೋಗದ ಬಗ್ಗೆ ಅವರಿಗೆ ಅನುಮಾನವುಂಟಾಯಿತು. ತಪ್ಪು-ಒಪ್ಪುಗಳ ಬಗೆಗೆ ವಾದ-ವಿವಾದವೂ ಆಯಿತು. ಕೊನೆಗೆ ಆ ವಾಕ್ಯ ವ್ಯಾಕರಣ ಪಠ್ಯಪುಸ್ತಕದ್ದೆಂದು ತೋರಿಸಿದಾಗ ಅವರು ಅತ್ಯಂತ ಆತ್ಮೀಯತೆಯಿಂದ ಬೆನ್ನುತಟ್ಟಿ ಶ್ಲಾಘಿಸಿದರು. ಮತ್ತೊಮ್ಮೆ ನಾವೆಲ್ಲ ಮಿತ್ರರೂ ಸೇರಿದಾಗ ಚರ್ಚೆ ಪ್ರಕೋಪಕ್ಕೆ ಹೋಯಿತು. ಮಾತಿನ ಭರದಲ್ಲಿ ನಾನು ಅವರನ್ನು 'ನೀವು ದ್ವೈತಿಗಳು, ನಿಮಗೇಕೀ ಅದ್ವೈತ' ಎಂದಾಗ ಮೊದಲು ಕೋಪವನ್ನು ಪ್ರಕಟಿಸಿದವರೂ ಅನಂತರ ನಗುತ್ತಾ ಬೆನ್ನು ತಟ್ಟಿದ ಜ್ಞಾಪಕ. ಇದು ಅವರ ಶ್ರೀಮಂತ ಹೃದಯವಂತಿಕೆಯನ್ನು ಪ್ರಕಟಿಸುವುದು.

ಅವರು ಪ್ರಾರ್ಥನೆಯ ಮಾರ್ಗದರ್ಶನ ಮಾಡುವುದು ಪ್ರತಿ ವಿದ್ಯಾರ್ಥಿಗೂ ಸಂತೋಷದಾಯಕ. ಗೀತೆ, ಉಪನಿಷತ್ತುಗಳ ಶ್ಲೋಕಗಳನ್ನು, 'ಭಜೋಮಧುರ

ಪರಿಣಾಮ್' ಮುಂತಾದ ಹಾಡುಗಳನ್ನು ಅವರ ಬಾಯಿಂದಲೇ ಕೇಳಬೇಕು. ಸುಶ್ರಾವ್ಯವಾದ ಮಧುರಕಂಠ. ಪೊರಹೊಮ್ಮುವ ಪ್ರತಿಪದವೂ ಘಂಟಾ ನಿನಾದದಂತೆ ಮೊಳಗುವುದು.

'ವಜ್ರಾದಪಿ ಕಠೋರಾಣಿ, ಮೃದೂನಿಕುಸುಮಾದಪಿ' ಎಂಬ ಮಾತು ಶ್ರೀಯುತರಿಗೆ ಅಕ್ಷರಶಃ ಅನ್ವಯಿಸುವುದು. ಧ್ಯೇಯ, ಆದರ್ಶ, ರಾಷ್ಟ್ರಭಕ್ತಿ, ನೀತಿ, ನಿಯಮ ನಿಷ್ಠೆಗಳ ಬಗೆಗೆ ಅತ್ಯಂತ ಬಿಗಿ ಮನೋಭಾವ. ಯಾವೊಂದು ಕಾರಣಕ್ಕೂ ಅವುಗಳಿಂದ ದೂರ ಸರಿಯಲಾರರು. 1952 ರಲ್ಲಿ ಶಾಲೆಯಲ್ಲಿ ಲಾಟರಿ ಪ್ರಾರಂಭವಾದಾಗ ತಾವು ಸ್ಥಾಪಿಸಿದ ಶಾಲೆಯಿಂದಲೇ ದೂರವಾದರು.

ನಾನು ಮುಖ್ಯೋಪಾಧ್ಯಾಯನಾದಾಗ ಇಬ್ಬರು ಅಧ್ಯಾಪಕರ ವಿಚಾರದಲ್ಲಿ ವಿದ್ಯಾಪೀಠದ ಅಧ್ಯಕ್ಷರಾದ ಅವರಿಗೆ ದೂರು ಸಲ್ಲಿಸಿದ್ದೆ. ಅವರು ಅಧ್ಯಾಪಕರನ್ನು ಕರೆಸಿ ಛೀಮಾರಿ ಮಾಡಿದರು. ನನ್ನಲ್ಲಿ ಆ ಅಧ್ಯಾಪಕರನ್ನು ಕ್ಷಮಿಸುವಂತೆ ಮನವೊಲಿಸಿದರು. ನನಗೆ ಇದು ಸ್ವಲ್ಪ ಅಸಮಾಧಾನವನ್ನುಂಟುಮಾಡಿದರೂ ಕ್ರಮೇಣ ಅವರು ಮಾಡಿದುದೇ ಸರಿಯೆನಿಸಿತು.

ಶ್ರೀಯುತರ ತ್ಯಾಗ ಮನೋಭಾವ. ರಾಷ್ಟ್ರಪ್ರೇಮ. ಕಾರ್ಯಾಸಕ್ತಿ, ಗಾಂಧೀಜಿಯವರ ತತ್ವಗಳ ಒಲವು ಮತ್ತು ಅನುಷ್ಠಾನ, ಸರ್ವೋದಯ ತತ್ವದ ಅನುಸರಣೆ ಇವು ಸದಾ ಅನುಕರಣೀಯ. ಸರ್ವೋದಯ ತತ್ವ ಅವರ ಜೀವನದ ಉಸಿರು.

ಅಹಿಂಸಾ ಸತ್ಯ ಅಸ್ತೇಯ ಬ್ರಹ್ಮಚರ್ಯ ಅಸಂಗ್ರಹ ।
ಶರೀರಶ್ರಮ ಅಸ್ವಾದ ಸರ್ವತ್ರ ಭಯವರ್ಜನ ॥
ಸರ್ವಧರ್ಮೀಸಮಾನತ್ವ ಸ್ವದೇಶೀಸ್ಪರ್ಶಭಾವನಾ
ಹೀ ಏಕಾದಶಸೇವಾಸೀ ನಮ್ರತೇ ವ್ರತನಿಶ್ಚಯೇ ॥

ಈ ತತ್ವವನ್ನು ಅಕ್ಷರಶಃ ಮನೋವಾಕ್ಕಾಯಗಳಿಂದ ಅನುಸರಿಸುವ ಇಂತಹ ಧೀಮಂತ ವ್ಯಕ್ತಿ ಅಲ್ಲ ಶಕ್ತಿಗೆ ನಮ್ಮೆಲ್ಲರ ನಮನ.

# ಪಥಿಕ | ದೇಶೀಯ ವಿದ್ಯಾಪೀಠದ ಜನಕ ಜಿ.ವಿ.ನಾ.

**ಚಿ. ತ. ಈಶ್ವರನ್**

ಭಗವಂತನ ಸಂಕಲ್ಪವನ್ನು ಕಾರ್ಯಗತ ಮಾಡುವ ಉದ್ದೇಶಕ್ಕಾಗಿ ಮಹಾತ್ಮರು ಜನ್ಮತಾಳುತ್ತಾರೆ. ಅವರೊಳಗಿರುವ ಈಶ್ವರಾಂಶವು ವಿಕಾಸವಾಗಿ, ತಮ್ಮ ಪರಿಮಳವನ್ನು ಸುತ್ತ ಬೀರುತ್ತವೆ. ದಿವ್ಯಜ್ಯೋತಿಯು ಪ್ರಜ್ವಲಿಸುತ್ತಾ ಎಲ್ಲ ಕಡೆಗೂ ಪ್ರಕಾಶವನ್ನು ಪ್ರಸರಿಸುತ್ತದೆ. ಜನತೆಯನ್ನು ಅಜ್ಞಾನದಿಂದ ಜ್ಞಾನಕ್ಕೆ, ಕತ್ತಲೆಯಿಂದ ಬೆಳಕಿಗೆ ಸೇರಿಸುವುದೇ ಅವರ ಜೀವನೋದ್ದೇಶ. ಜಗತ್ಕಲ್ಯಾಣಕ್ಕೆ, ಮಾನವರ ಮೇಲ್ಮೆಗೆ ಅವರು ಜೀವನವನ್ನು ಮುಡಿಪಾಗಿಟ್ಟು ಹೋರಾಡುತ್ತಾರೆ. ಅವರು ಇಟ್ಟ ಹೆಜ್ಜೆಗಳು ಕಾಲಪಥದಲ್ಲಿ ದಾರಿತೋರಿಸುವ ಹೆಗ್ಗುರುತುಗಳಾಗಿ ಉಳಿದು ಬೆಳೆದ ಜೀವಿಗಳಿಗೆ ಮಾರ್ಗದರ್ಶಕವಾಗುತ್ತವೆ. ಅಂತಹ ಉನ್ನತ ಪಥದಲ್ಲಿ ಸಾಗಲೆಳಸಿ ಸಾಕಷ್ಟು ದೂರ ಜನ್ಮ ಸಾರ್ಥಕವಾಗುವ ರೀತಿಯಲ್ಲಿ ಜಯಪ್ರದವಾಗಿ ಪ್ರಯಾಣ ಬೆಳೆಸಿ ಸಿಹಿ-ಕಹಿಗಳೆರಡನ್ನು ಉಂಡು ಸಮತಾದೃಷ್ಟಿಯನ್ನು ಮೈಗೂಡಿಸಿಕೊಂಡಿರುವ ಹಿರಿಯ ಚೇತನ ಜಿ.ವಿ.ನಾ.ರವರದು.

ಅವರ ಜೊತೆಯಲ್ಲಿ ಕೆಲಸ ಮಾಡುವವರಿಗೆಲ್ಲ ಅವರು ಹಿರಿಯ ಅಣ್ಣ. ಯಾವ ಜನ್ಮದ ಮೈತ್ರಿಯಿಂದಲೋ, ಪುಣ್ಯವಿಶೇಷದಿಂದಲೋ ಅವರೊಡನಾಡಿಗಳಾಗಿ ಸಹಕಾರ್ಯಕರ್ತರುಗಳಾಗಿ ಜೊತೆಗಾರರಾಗಿ ಕೆಲಸಮಾಡಿದವರಿಗೆ ಅವರು ಬೇರೆ ನಾವು ಬೇರೆ ಎಂಬ ದ್ವೈತಭಾವನೆ ಮಾಯವಾಗಿ ನಾವೆಲ್ಲ ಒಂದೇ ಬಳಗದವರು, ಅವರೇ ನಾವು-ನಾವೇ ಅವರು ಎಂಬ ಅದ್ವೈತ ಭಾವನೆ ತಾನೇ ತಾನಾಗಿ ಮೂಡುತ್ತದೆ. ಅವರು ಅಂಥ ಶುದ್ಧಚಿತ್ತರು, ನಿರ್ಮಲ ನಡತೆಯವರು, ಪ್ರೇಮಮಯಿಗಳು, ಅನುಕಂಪದಿಂದ ಕೂಡಿದವರು. ಪರುಷ ಶಿಲೆಗೆ ತಾಗಿದ ಎಂಥದೇ ಲೋಹವೂ ಸಹ ಚಿನ್ನವಾಗಿ ಮಾರ್ಪಡುವಂತೆ ಅವರ ಸಂಪರ್ಕಕ್ಕೆ ಬಂದ ಎಂಥವರೇ ಆಗಲಿ ಒಂದಲ್ಲ ಒಂದು ರೀತಿಯಲ್ಲಿ ಸಂಸ್ಕಾರಗೊಂಡು ಉತ್ತಮವಾಗಿ ಹೊರ ಬಂದಿದ್ದಾರೆ. ಅವರದು ಜೊತೆಯ ಕೆಲಸಗಾರರನ್ನು ವಿಕಾಸದ ಹಾದಿಯಲ್ಲಿ ಮುನ್ನಡೆಯುವಂತೆ ಪ್ರೇರೇಪಿಸುವ ಶಕ್ತಿ. ಅವರು ಕಾರ್ಯೋನ್ಮುಖರಾದಾಗ ಪರಮಾತ್ಮನ ಇಚ್ಛಾಶಕ್ತಿಯು ಒಂದಂಶ ಘನೀಭವಿಸಿ ಇವರ ರೂಪವನ್ನು ತಾಳಿದೆಯೋ ಎನ್ನುವಷ್ಟರ ಮಟ್ಟಿಗೆ ಸಹ ಕಾರ್ಯಕರ್ತರು ಅಚ್ಚರಿಪಟ್ಟಿರುವುದುಂಟು. ದೈಹಿಕ ಶಕ್ತಿಗಿಂತ ಮಿಗಿಲಾಗಿ ಆತ್ಮಶಕ್ತಿ, ಎಂಥ ಕಠಿಣ ಪ್ರಸಂಗದಲ್ಲೂ ಧೈರ್ಯ, ತಲೆ ತಿನ್ನುವಂತಹ ತೊಡಕಾದ ಸಮಸ್ಯೆಗಳುದ್ಭವಿಸಿದಾಗಲೂ ಮಾನಸಿಕ ಸಮತೋಲನವನ್ನು ಕಳೆದುಕೊಳ್ಳದೆ ಸರಿಯಾದ ತೀರ್ಮಾನಕ್ಕೆ

ಬರುವ ಸಾಮರ್ಥ್ಯ, ಪಟ್ಟು ಹಿಡಿದು ಕೆಲಸ ಮಾಡಬಲ್ಲ ದೃಢಚಿತ್ತ ಮುಂತಾದ ಗುಣಗಳೆಲ್ಲವೂ ಇವರ ಪ್ರತಿಬಿಂಬಗಳು. ಆದಾಗ್ಯೂ ಸರಳ ಜೀವಿಗಳು. ಮಕ್ಕಳೊಂದಿಗೆ ಮಕ್ಕಳಾಗಬಲ್ಲರು. ಪಂಡಿತರೊಂದಿಗೆ ಘನಪಂಡಿತರಾಗಬಲ್ಲರು, ಸಾಮಾನ್ಯರೊಂದಿಗೆ ಸಾಮಾನ್ಯರಂತೆಯೇ ಇದ್ದು ಅವರನ್ನು ಉತ್ತಮ ಮಟ್ಟಕ್ಕೆ ಎತ್ತಬಲ್ಲರು. ಒಟ್ಟಿನಲ್ಲಿ ಅವರದು ವಿಶ್ವಕುಟುಂಬ ಮನೋಭಾವ.

ಇಂತಹ ಒಂದು ದಿವ್ಯಚೇತನ ಚಿಕ್ಕನಾಯಕನಹಳ್ಳಿಗೆ ಬಂದು ನೆಲಸುವಂತಾದುದು ದೈವೇಚ್ಛೆ, ಊರಿನ ಪುಣ್ಯ. ನಮ್ಮೆಲ್ಲರ ಭಾಗ್ಯ. ಆ ವೇಳೆಗಾಗಲೇ ಅವರು ಕನಕಪುರದಲ್ಲಿ ದಿವಂಗತ ಕರಿಯಪ್ಪನವರೊಂದಿಗೆ ವಿದ್ಯಾಕ್ಷೇತ್ರದಲ್ಲಿ ಸಾಕಷ್ಟು ಕೆಲಸಮಾಡಿ ಅಲ್ಲಿನ ವಿದ್ಯಾಪ್ರಗತಿಗೆ ಭದ್ರವಾದ ಬುನಾದಿಯನ್ನು ಹಾಕಿದ್ದರು. ಅವರ ಕುಟುಂಬದ ಜವಾಬ್ದಾರಿಯ ಹೊಣೆ ಅವರನ್ನು ಇಲ್ಲಿಗೆ ಬರಮಾಡಿಕೊಂಡಿತು. ಇದು ಕನಕಪುರಕ್ಕಾದ ನಷ್ಟ; ಚಿಕ್ಕನಾಯಕನಹಳ್ಳಿಗಾದ ಲಾಭ.

ಬಂದವರೊಬ್ಬರೇ ಆದರೆ ಕೆಲವೇ ದಿನಗಳಲ್ಲಿ ತಮ್ಮ ಸೌಜನ್ಯದಿಂದ, ಸರಳ ಜೀವನದಿಂದ, ಜ್ಞಾನಸಂಪತ್ತಿನಿಂದ ಅನೇಕ ಸನ್ಮಿತ್ರರನ್ನಾಕರ್ಷಿಸಿದರು. ಊರಿನ ಮೇಲ್ಮೆಗೇನಾಗಬೇಕೆಂದು ಚಿಂತಿಸಿದರು. ವಿದ್ಯಾಸೌಕರ್ಯಗಳು ಮೊದಲು ಆಗಬೇಕೆಂದು ಮನಗಂಡರು. ಆಗ ನಮ್ಮ ಊರಿನಲ್ಲಿ ಮಾಧ್ಯಮಿಕ ಹಂತದವರೆಗೆ ಮಾತ್ರ ವಿದ್ಯಾಭ್ಯಾಸದ ಅನುಕೂಲತೆಯಿತ್ತು. ಪ್ರೌಢಶಾಲಾಮಟ್ಟದ ವಿದ್ಯಾಸೌಕರ್ಯವಿಲ್ಲದೆ ಎಷ್ಟೋ ಮೇಧಾವಿಗಳಾದ ಬಡ ವಿದ್ಯಾರ್ಥಿಗಳ ವಿದ್ಯಾಭ್ಯಾಸ ಕುಂಠಿತವಾಗುತ್ತಿತ್ತು. ಬೆಳೆಯಬೇಕಾದ ಪೈರು ಭಾದ್ರಪದ ಮಾಸದಲ್ಲೇ ಬತ್ತಿಹೋದಂತೆ ಅವರ ಬುದ್ಧಿಶಕ್ತಿಯೆಲ್ಲ ಕಮರಿಹೋಗುತ್ತಿತ್ತು. ಆಗ ಇಡೀ ತುಮಕೂರು ಜಿಲ್ಲೆಗೆಲ್ಲಾ ತುಮಕೂರು, ತಿಪಟೂರು, ಮಧುಗಿರಿಗಳಲ್ಲಿದ್ದ ಮೂರು ಸರ್ಕಾರಿ ಪ್ರೌಢಶಾಲೆಗಳು ಮಾತ್ರ. ಹಣವಂತರಾದ ಕೆಲವೇ ಮಂದಿ ಹೊರಗೆ ಹೋಗಿ ಪ್ರೌಢಶಾಲಾ ವಿದ್ಯಾಭ್ಯಾಸವನ್ನು ಮುಂದುವರಿಸಬಹುದಾಗಿತ್ತು. ಜೀವಿಸುವುದೇ ದುರ್ಭರವಾಗಿದ್ದ ಬಹುಮಂದಿ ಬಡವರು ಪ್ರೌಢ ವಿದ್ಯಾಭ್ಯಾಸಕ್ಕೆ ಇತಿಶ್ರೀ ಹಾಡುತ್ತಿದ್ದರು. ಆಗ ನಡೆದ ಒಂದು ಘಟನೆ ಆದಷ್ಟು ಬೇಗನೆ ಪ್ರೌಢಶಾಲೆಯನ್ನು ಆರಂಭಿಸಬೇಕೆಂದು ಜಿ.ವಿ.ನಾ ರವರು ನಿರ್ಧಾರಕ್ಕೆ ಬರುವಂತೆ ಮಾಡಿತು.

ಒಬ್ಬ ಬಡ ವಿದ್ಯಾರ್ಥಿ ಮಾಧ್ಯಮಿಕ ಪರೀಕ್ಷೆಯಲ್ಲಿ ತೇರ್ಗಡೆಯಾಗಿ ಪ್ರೌಢ ವಿದ್ಯಾಭ್ಯಾಸವನ್ನು ಮುಂದುವರಿಸಬೇಕೆಂದು ಹಟಹಿಡಿದ. ಅವನನ್ನು ಪರಸ್ಥಳಕ್ಕೆ ಕಳುಹಿಸಿ ವಿದ್ಯಾಭ್ಯಾಸ ಮಾಡಿಸುವಷ್ಟು ಚೈತನ್ಯ ಅವನ ಕುಟುಂಬದವರಿಗಿರಲಿಲ್ಲ. ಆದ್ದರಿಂದ ಕುಟುಂಬದವರು ಕುಲಕಸುಬಾದ ಕಂಬಳಿ ನೇಯುವ ಉದ್ಯೋಗಕ್ಕೆ ಅವನನ್ನುಹಾಕಿದರು. ಅವನಿಗೆ ಅದರಲ್ಲಿ ಆಸಕ್ತಿಯಿಲ್ಲ. ಕುದುರೆಯನ್ನು ನೀರಿನ ಬಳಿಗೆ ಹಿಡಿದುಕೊಂಡು ಹೋಗಲು ಒಬ್ಬನೇ ಸಾಕು. ಆದರೆ ಕುದುರೆಗೆ ನೀರು ಕುಡಿಯಲು ಇಷ್ಟವಿಲ್ಲದಿದ್ದರೆ

ಇಪ್ಪತ್ತು ಜನರು ಅದರ ತಲೆಯನ್ನು ಹಿಡಿದು ನೀರಿಗೆ ಅದ್ದಿದರೂ ಅದು ನೀರು ಕುಡಿಯುವುದಿಲ್ಲ. ಹಾಗಾಯಿತು ಆ ಕುಟುಂಬದ ಸಮಸ್ಯೆ. ಆಗ ಕುಟುಂಬದ ಹಿರಿಯರು ಆ ಹುಡುಗನನ್ನು ಸಮಸ್ಯಾ ಪರಿಹಾರಕ್ಕೋಸ್ಕರ ಜಿ.ವಿ.ನಾ.ರವರ ಬಳಿಗೆ ಕರೆತಂದರು. ವಿಚಾರವನ್ನು ತಿಳಿದ ಅವರ ಕರುಳು ಮಿಡಿಯಿತು. 'ಮುಂದಿನ ವರ್ಷವೇ ಪ್ರೌಢ ಶಾಲೆಯನ್ನು ಪ್ರಾರಂಭಿಸಿ ನಿನ್ನ ವಿದ್ಯಾಭ್ಯಾಸಕ್ಕೆ ಅನುಕೂಲ ಮಾಡುತ್ತೇನೆ'ಂಬ ಭರವಸೆ ಯನ್ನು ಕೊಟ್ಟು 'ಇದೊಂದು ವರ್ಷ ನಿನ್ನ ಹಿರಿಯರು ಹೇಳಿದಂತೆ ಕೇಳೆ'ಂದು ಸಮಾಧಾನ ಮಾಡಿದರು.

ವಾಗ್ದಾನ ಹಿರಿಯರಿಗೆ ಕೊಡಲಿ ಕಿರಿಯರಿಗೆ ಕೊಡಲಿ ಅದು ವಾಗ್ದಾನವೇ. ತಾತ್ಕಾಲಿಕವಾಗಿ ಸಮಸ್ಯೆ ಪರಿಹಾರವಾಯಿತಲ್ಲಾ ಎಂದು ಅವರು ಸುಮ್ಮನೆ ಕೂಡಲಿಲ್ಲ. ಕಾರ್ಯೋನ್ಮುಖರಾದರು. ರಾಷ್ಟ್ರಪ್ರಜ್ಞೆ. ಸೇವಾ ಮನೋಭಾವ, ಸ್ವಾವಲಂಬನೆ. ವಿಚಾರಶಕ್ತಿ ಮತ್ತು ಸಚ್ಚಾರಿತ್ರ್ಯ ಇವುಗಳನ್ನು ವಿದ್ಯಾರ್ಥಿಗಣದಲ್ಲಿ ಸೃಷ್ಟಿಸುವ ಘನೋದ್ದೇಶವನ್ನೊಳಗೊಂಡ ಒಂದು ಸಂಸ್ಥೆಯ ಸ್ಥಾಪನೆಯ ಬಗ್ಗೆ ಮಿತ್ರರ ಸಂಗಡ ಸಮಾಲೋಚಿಸಿದರು. ಎಲ್ಲರಿಗೂ ಇದು ಭಗೀರಥ ಪ್ರಯತ್ನವೆನಿಸಿದರೂ ಸಾಧಿಸ ಬಹುದೆಂದು ಮನವರಿಕೆ ಮಾಡಿಕೊಟ್ಟರು. ಆ ವೇಳೆಗೆ ಸಾರ್ವಜನಿಕ ಸೇವಾಕ್ಷೇತ್ರದಲ್ಲಿ ಸಾಕಷ್ಟು ಹೆಸರುಗಳಿಸಿದ್ದ ದಿವಂಗತ ಲಿಂಗದೇವರು ಅವರಿಗೆ ಇದು ಆಗಬೇಕಾದ ಅತ್ಯ ವಶ್ಯಕವಾದ ಕಾರ್ಯವೆನಿಸಿತು. ಇತರ ಮಿತ್ರರೂ, ಹಿರಿಯರೂ ದನಿಗೂಡಿಸಿದರು. ಎಲ್ಲರೂ ಅಂತಹ ಸಂಸ್ಥೆಯ ಸ್ಥಾಪನೆಗೆ ಕೈಗೊಳ್ಳಬೇಕಾದ ಕಾರ್ಯಕ್ರಮಗಳ ಜವಾಬು ದಾರಿಯನ್ನೆಲ್ಲಾ ಇವರಿಗೆ ವಹಿಸಿದರು. ಪರಿಣಾಮವಾಗಿ 'ದೇಶೀಯ ವಿದ್ಯಾಪೀಠ' ಎಂಬ ಸಂಸ್ಥೆ 1943ರಲ್ಲಿ ಸ್ಥಾಪಿತವಾಯಿತು.

ಪ್ರೌಢಶಾಲೆಯನ್ನೇನೋ ಸ್ಥಾಪಿಸಬೇಕೆಂದಾಯಿತು. ಆದರೆ ಮಿಕ್ಕೆಲ್ಲ ಪ್ರೌಢಶಾಲೆ ಗಳಂತೆ ಇದೂ ಕೂಡ ಹತ್ತರ ಕೂಡ ಹನ್ನೊಂದು ಗೋವಿಂದ ಎನ್ನುವಂತಾಗುವುದು, ಕಾರಕೂನರನ್ನು ತಯಾರಿಸುವ ಮರಿ ಕಾರ್ಖಾನೆಯಾಗುವುದು ಅವರಿಗೆ ಇಷ್ಟವಿರಲಿಲ್ಲ. ಅವರ ದೃಷ್ಟಿಯೇ ಬೇರೆಯಾಗಿತ್ತು. ಪ್ರೌಢಶಾಲೆ ಯುವ ಪೀಳಿಗೆಯಲ್ಲಿ ವ್ಯಷ್ಟಿ–ಸಮಷ್ಟಿಗೋಸ್ಕರವಾಗಿ ಬದುಕಬೇಕು, ರಾಷ್ಟ್ರಸೇವಾ ವ್ರತಧಾರಿ ಗಳಾಗಿ ನಿಷ್ಠಾವಂತ ಜೀವಿಗಳಾಗಬೇಕು, ಭಾರತ ಮಾತೆಯನ್ನು ಬಂಧವಿಮುಕ್ತಳನ್ನಾಗಿ ಮಾಡಲು ಶಿಸ್ತಿನ, ಅಹಿಂಸಾ ಸಿಪಾಯಿಗಳಾಗಬೇಕು, ರಾಷ್ಟ್ರದ ಕರೆಬಂದಾಗ ಪ್ರಾಣಾ ರ್ಪಣವನ್ನಾದರೂ ಮಾಡಿ ಧನ್ಯತೆ ಪಡೆಯಬೇಕೆಂಬ ಸದ್ಭಾವನೆಗಳನ್ನು ಬಿತ್ತುವ ಕೇಂದ್ರ ವಾಗಬೇಕೆಂಬುದು ಅವರ ಇಚ್ಛೆಯಾಗಿದ್ದಿತು. ವಿದ್ಯಾಭ್ಯಾಸ ಪೂರ್ತಿಯಾಗುವುದ ರೊಳಗಾಗಿ ವಿದ್ಯಾರ್ಥಿ ಮನೆಗೆ ಮಾಣಿಕ್ಯವಾಗಿ, ಸಮಾಜಕ್ಕೆ ಕೀರ್ತಿ ಪತಾಕೆಯಾಗಿ, ರಾಷ್ಟ್ರಕ್ಕೆ ನಮ್ರ ಸೇವಕನಾಗಿ ಜಗತ್ತಿಗೆ ಸಭ್ಯ ಮಾನವನಾಗಿ ರೂಪುಗೊಳ್ಳಬೇಕೆಂಬುದು ಅವರ ಭವ್ಯ ಕನಸು.

ಮದುವೆ ಮಾಡಿನೋಡು. ಮನೆ ಕಟ್ಟಿನೋಡು ಎಂಬ ಗಾದೆಯ ಜೊತೆಗೆ ವಿದ್ಯಾ ಸಂಸ್ಥೆಯನ್ನು ಸ್ಥಾಪಿಸಿನೋಡು ಎಂಬುದನ್ನು ಸೇರಿಸಬಹುದು. ಏಕೆಂದರೆ ಶಾಲೆ ರೂಪುಗೊಂಡು ಒಂದು ನೆಲೆಗೆ ನಿಲ್ಲುವಂತೆ ಮಾಡಬೇಕಾದರೆ ಪಡಬೇಕಾದ ಪರಿಪಾಟಲು ಅಷ್ಟಿಷ್ಟಲ್ಲ. ಅನುಭವಿಸಿದವರಿಗೇ ಗೊತ್ತು. ಚಂದಾ ರೂಪದಲ್ಲಿ ಶೇಖರವಾದ ಅಲ್ಪ ಹಣವನ್ನೇ ಮೂಲಧನವಾಗಿಟ್ಟುಕೊಂಡು 1944 ರಲ್ಲಿ ಪ್ರೌಢಶಾಲೆಯನ್ನು ಪ್ರಾರಂಭಿಸಿಯೇ ಬಿಟ್ಟರು. ಹಣಕ್ಕಾಗಿ ಅವರು ಎಂದೂ ಯೋಚಿಸಿದವರಲ್ಲ. ಮಾಡುವ ಕೆಲಸ ಒಳ್ಳೆಯದಾಗಿದ್ದು ಜನರ ಅಭ್ಯುದಯಕ್ಕೋಸ್ಕರವಾದುದಾದರೆ, ಅದನ್ನು ಭಗವಂತನ ಸೇವೆ ಎಂದು ಮಾಡಿದರೆ ಪರಮಾತ್ಮ ಬೇಕ್ಕೆಲ್ಲ ಸಹಾಯಗಳನ್ನು ಯಾರಿಂದಲೋ ಯಾವ ರೂಪದಲ್ಲೋ ಕಾರ್ಯ ಮುಂದುವರಿಯುವಂತೆ ಕರುಣಿಸುತ್ತಾನೆ, ಎಂಬುದರಲ್ಲಿ ಅವರು ಅಚಲ ನಂಬಿಕೆಯುಳ್ಳವರು. ನಾವು ಮಾಡಬೇಕಾದ ಕರ್ತವ್ಯವನ್ನು ಮಾಡಿ ಆಮೇಲೆ ಭಗವಂತನ ಕೃಪೆಗಾಗಿ ಪ್ರಾರ್ಥಿಸಬೇಕೆನ್ನುತ್ತಿದ್ದರು. ಪ್ರಾರ್ಥನೆಗಂತೂ ಅವರು ತುಂಬ ಪ್ರಾಮುಖ್ಯತೆಯನ್ನು ಕೊಡುತ್ತಿದ್ದರು.

ಮೊದಲ ವರ್ಷದ ತರಗತಿಯು ದಿವಂಗತ ಸಿ. ಕೆ. ರಾಜಯ್ಯಶೆಟ್ಟರು ಕೃಪೆಮಾಡಿ ಬಿಟ್ಟುಕೊಟ್ಟ ಊರ ಹೊರಗಿನ ಅವರ ಕಟ್ಟಡದಲ್ಲಿ ನಡೆಯಿತು. ಎರಡನೇ ವರ್ಷ ಎರಡು ತರಗತಿಗಳಿಗೆ ವ್ಯವಸ್ಥೆ ಮಾಡಬೇಕಾದುದರಿಂದ ಮಂತಿಘಟ್ಟ ರಸ್ತೆಯಲ್ಲಿದ್ದ ದಿವಂಗತ ಹಂದನಕೆರೆ ಸಿದ್ದಪ್ಪನವರ ಕಟ್ಟಡಕ್ಕೆ ಪಾಠಶಾಲೆಯನ್ನು ಸ್ಥಳಾಂತರಿಸಬೇಕಾಯಿತು. ಮೂರನೇ ವರ್ಷ ಇನ್ನೊಂದು ತರಗತಿಯು ಜಾಸ್ತಿಯಾದುದರಿಂದ ದೊಡ್ಡ ರಂಗಯ್ಯನವರ ಕೊಪ್ಪಲನ್ನು ತರಗತಿಗನುಕೂಲವಾಗುವಂತೆ ಕಟ್ಟಿಕೊಳ್ಳಬೇಕಾಯಿತು. ಆಗ ಶ್ರೀಯುತರು ಎಷ್ಟು ಶ್ರದ್ಧಾವಂತರಾಗಿ ಕೆಲಸಮಾಡಿದರೆಂದರೆ ದಿನದಲ್ಲಿ ಒಂದು ನಿಮಿಷ ಬಿಡುವೆಂಬುದು ಅದರ ಭಾಗಕ್ಕೆ ಇಲ್ಲದಂತಾಗಿತ್ತು. ಕಟ್ಟಡಗಳು ವಾಸಕ್ಕೆ ಮತ್ತು ಇತರ ಉದ್ದೇಶಗಳಿಗಾಗಿ ಕಟ್ಟಲ್ಪಟ್ಟವು. ಅವುಗಳನ್ನು ತರಗತಿಗನುಕೂಲವಾಗುವಂತೆ ಮಾರ್ಪಡಿಸಿಕೊಳ್ಳಬೇಕಾಗಿತ್ತು. ಅವರು ಇನ್ನೂ ನಸು ಮಬ್ಬಿನಲ್ಲೇ ಎತ್ತು-ಗಾಡಿ ಇರುವವರ ಮನೆಗಳಿಗೆ ಹೋಗಿ ಇಟ್ಟಿಗೆ, ಮಣ್ಣು ತರಲು ಗಾಡಿಯನ್ನು ಕಟ್ಟಿಸುತ್ತಿದ್ದರು. ಮರಮುಟ್ಟುಗಳಿರುವ ಮನೆಗಳಿಂದ ಅವುಗಳನ್ನು ಕೇಳಿ ಪಡೆಯುತ್ತಿದ್ದರು. ಇವೆಲ್ಲ ಉಚಿತವಾಗಿದ್ದವು. ಬೆಲೆಯನ್ನು ಕೊಡಲೇಬೇಕಾದಾಗ ಅತ್ಯಲ್ಪ ಬೆಲೆಗೆ ಅವುಗಳನ್ನು ತರುತ್ತಿದ್ದರು. ಸಾರ್ವಜನಿಕ ಹಣವನ್ನು ಖರ್ಚು ಮಾಡುವುದರಲ್ಲಿ ತುಂಬ ಎಚ್ಚರ ವಹಿಸುತ್ತಿದ್ದರು. ಪ್ರತಿಯೊಂದು ಕಾಸು ಸಹ ಸದ್ವಿನಿಯೋಗವಾಗಬೇಕು. ಕರಾರುವಾಕ್ಕಾದ ಲೆಕ್ಕವಿರಬೇಕು. ಎಷ್ಟೋ ಪೀಠೋಪಕರಣಗಳನ್ನು ದಾನವಾಗಿ ಇಲ್ಲವೆ ಎರವಲಾಗಿ ಪಡೆದಿದ್ದರು.

ಪಾಠಶಾಲೆ ನಡೆಯಲು ಸ್ಥಳಾವಕಾಶ ಮತ್ತು ಪೀಠೋಪಕರಣಗಳ ಹೊಂದಾಣಿಕೆ ಒಂದು ಸಮಸ್ಯೆಯಾದರೆ ಅದಕ್ಕಿಂತಲೂ ಮುಖ್ಯವಾದುದು ಅಧ್ಯಾಪಕರನ್ನು ಹೊಂಚುವಿಕೆ. ಇದು ಎಲ್ಲಕ್ಕಿಂತ ಮುಖ್ಯವಾದುದು. ಪಾಠಶಾಲೆಯ ಜೀವನಾಡಿಗಳೇ

ಅವರು. ಪಾಠಶಾಲೆಯ ಅಭಿವೃದ್ಧಿ ಅಥವಾ ಅವನತಿ ಅವರ ಮನೋಭಾವವನ್ನು, ಅವರ ಕಾರ್ಯರೀತಿಯನ್ನು ಅವಲಂಬಿಸಿರುತ್ತವೆ. ಸರಿಯಾದ ಪಾಠಶಾಲೆಯ ಆಧಾರಸ್ತಂಭ ಅವರು. ಅಧ್ಯಾಪಕರನ್ನು ಆರಿಸುವುದರಲ್ಲಿ ಜಿ.ವಿ.ನಾ. ತುಂಬ ಚತುರರು. ಯಾವ ಆದರ್ಶಗಳನ್ನಿಟ್ಟುಕೊಂಡು ಪಾಠಶಾಲೆಯನ್ನು ಸ್ಥಾಪಿಸಿದರೋ ಅವುಗಳನ್ನು ಕಾರ್ಯಗತ ಮಾಡಲು ಭುಜಕ್ಕೆ ಭುಜಕೊಟ್ಟು ಕೆಲಸ ಮಾಡುವಂತಹವರನ್ನೇ ಹುಡುಕಿ, ಹುಡುಕಿ ಎಲ್ಲೆಲ್ಲೋ ಇದ್ದವರನ್ನು ಆಕರ್ಷಿಸಿ ಕಲೆ ಹಾಕಿದರು. ತಾವು ಇದ್ದ ಸರ್ಕಾರಿ ನೌಕರಿಗಳನ್ನು ಬಿಟ್ಟು, ಉತ್ತಮ ಭವಿಷ್ಯವಿದ್ದ ಹುದ್ದೆಗಳನ್ನು ತ್ಯಜಿಸಿ ಸೇವಾ ಮನೋಭಾವದಿಂದ ಅಲ್ಪ ಸಂಬಳಕ್ಕೆ ಬಂದ ಅಧ್ಯಾಪಕ ವೃಂದ ವಿದ್ಯಾಪೀಠಕ್ಕೆ ಸಿಕ್ಕಿದುದು ನಿಜವಾದ ನಿಧಿಯಾಯಿತು. ಅದರ ಕೀರ್ತಿ ಪತಾಕೆಯನ್ನು ಎತ್ತಿ ಹಿಡಿಯಲು ಕಾಯ, ವಾಚಾ, ಮನಸಾ ಅವರು ದುಡಿದರು. ಸಂಸ್ಥೆಯ ಶ್ರೇಯಸ್ಸಿಗಾಗಿ ಶ್ರಮಿಸುವುದರಲ್ಲೇ ತಮ್ಮ ಜನ್ಮಸಾರ್ಥಕತೆಯನ್ನು ಕಂಡುಕೊಂಡರು. ಆಗ ಇಂಥ ಅಧ್ಯಾಪಕ ವೃಂದವನ್ನು ಕಲೆಹಾಕಿದ ಕೀರ್ತಿ ಜಿ.ವಿ.ನಾ. ಅವರಿಗೆ ಸಲ್ಲಬೇಕು. ಎಂ.ಎ.ಪಿ.ಹೆಚ್.ಡಿ., ಮಾಡಿಕೊಂಡಿದ್ದವರು ಅಧ್ಯಾಪಕ ವೃಂದದಲ್ಲಿದ್ದರು.

ಆರಂಭ ಕಾಲದಲ್ಲಿ ಅಡಚಣೆಗಳೇ ಜಾಸ್ತಿ. ಪಾಠಶಾಲೆ ಪ್ರಾರಂಭವಾಗಿ ಮೂರು ವರ್ಷಗಳಾದರೂ ಸರ್ಕಾರದಿಂದ ಮಾನ್ಯತೆ ಬರಲಿಲ್ಲ. ಆಗಿನ ಸರ್ಕಾರ ಸಂಸ್ಥೆಯನ್ನು ಸಂಶಯ ದೃಷ್ಟಿಯಿಂದಲೇ ನೋಡುತ್ತಿತ್ತು. ಎಸ್.ಎಸ್.ಎಲ್.ಸಿ. ಪರೀಕ್ಷೆಗೆ ಈ ಪಾಠ ಶಾಲೆಯ ವಿದ್ಯಾರ್ಥಿಗಳನ್ನು ಸೇರಿಸಿಕೊಳ್ಳುವುದಿಲ್ಲವಂತೆ ಎಂಬ ಅಪಶ್ರುತಿಯನ್ನು ಕೆಲವರು ಎತ್ತಿದರು. ಜಿ.ವಿ.ನಾ.ರವರು ಇಂತಹದಕ್ಕೆಲ್ಲ ಜಗ್ಗುವವರಲ್ಲ. ಒಂದು ವೇಳೆ ಮೈಸೂರು ವಿದ್ಯಾ ಇಲಾಖೆ ಶಾಲೆಗೆ ಮಾನ್ಯತೆಯನ್ನು ನಿರಾಕರಿಸಿ ಎಸ್.ಎಸ್.ಎಲ್.ಸಿ. ಪರೀಕ್ಷೆಗೆ ಕುಳಿತುಕೊಳ್ಳಲು ವಿದ್ಯಾರ್ಥಿಗಳಿಗೆ ತೊಂದರೆಯುಂಟುಮಾಡಿದರೆ ಶಾಲೆಯನ್ನು ಕಾಶಿ ಹಿಂದೂ ವಿಶ್ವವಿದ್ಯಾನಿಲಯದ ಅಥವಾ ರವೀಂದ್ರನಾಥ ಠಾಕೂರರ ಶಾಂತಿ ನಿಕೇತನದ ಅಂಗಸಂಸ್ಥೆಯನ್ನಾಗಿ ಮಾಡಿ ಅವರ ಮೆಟ್ರಿಕ್ಯುಲೇಷನ್ ಪರೀಕ್ಷೆಗೆ ಶಾಲೆಯ ವಿದ್ಯಾರ್ಥಿಗಳು ಕುಳಿತುಕೊಳ್ಳುವಂತೆ ಮಾಡುವುದೆನ್ನುವಷ್ಟರ ಮಟ್ಟಿಗೆ ಯೋಚಿಸಿದ್ದರು. ಅಷ್ಟರಲ್ಲಿ ಸರ್ಕಾರದ ಮಾನ್ಯತೆ ಬಂದು ಅಪಶ್ರುತಿ ನಿಂತಿತು.

ಆಗಿನ ಕಾಲದಲ್ಲಿ ಪ್ಲೇಗು ನಮ್ಮ ಊರಿಗೆ ವರ್ಷೇವರ್ಷೇ ತಪ್ಪದೆ ಭೇಟಿ ಕೊಡುತ್ತಿತ್ತು. ಅಂಥ ಒಂದು ಸಂದರ್ಭದಲ್ಲಿ ಊರಿಗೆ ಸಮೀಪದಲ್ಲಿದ್ದ ಚೌಕೀ ಮಠದಲ್ಲಿ ಪಾಠ ಶಾಲೆಯನ್ನು ನಡೆಸುವ ವ್ಯವಸ್ಥೆ ಮಾಡಲಾಯಿತು. ಪಾಠಪ್ರವಚನಗಳು ನಾಲ್ಕು ಗೋಡೆಗಳ ಮಧ್ಯೆ ನಡೆಯುವುದಕ್ಕೆ ಬದಲಾಗಿ ವಿಶಾಲವಾದ ತಂಪು ನೆರಳನ್ನು ಕೊಡುತ್ತಿದ್ದ ಮರಗಳ ಕೆಳಗೆ ನಡೆದವು. ಅಧ್ಯಾಪಕರಿಗೂ, ವಿದ್ಯಾರ್ಥಿಗಳಿಗೂ ಪ್ರಕೃತಿ ಸನ್ನಿವೇಶದ ಸದುಪಯೋಗ ತುಂಬ ಹಿಡಿಸಿತು. ಮಧ್ಯಾಹ್ನದ ಉಪಾಹಾರ ವ್ಯವಸ್ಥೆಗೆ ಪೋಷಕರು ಮುಂದಾದರು. ಆಗಿನ ವ್ಯವಸ್ಥೆ ಹಿಂದಿನ ಗುರುಕುಲ ಪದ್ಧತಿಯನ್ನು ಜ್ಞಾಪಕಕ್ಕೆ ತರುತ್ತಿತ್ತು. ವಿದ್ಯಾರ್ಥಿಗಳ ಕಲಿಯುವಿಕೆಯಲ್ಲೂ ಊರೊಳಗಿಗಿಂತ ಉತ್ತಮ ಪ್ರತಿಕ್ರಿಯೆ

ಕಂಡುಬಂದಿತು. ಈ ರೀತಿ ಎಲ್ಲ ವಿಧದಲ್ಲೂ ಸಮರ್ಪಕವಾಗಿ ಪಾಠಪ್ರವಚನಗಳು ನಡೆಯುತ್ತಿದ್ದಾಗ ತುಮಕೂರು ವಿಭಾಗದ ವಿದ್ಯಾ ಇಲಾಖಾಧಿಕಾರಿಯವರು ಭೇಟಿ ನೀಡುವ ಸಂದರ್ಭವೊದಗಿತು. ಅಧಿಕಾರಿಯು ಪಾಠಶಾಲೆ ನಡೆಯುತ್ತಿದ್ದ ಸ್ಥಳಕ್ಕೆ ಭೇಟಿ ನೀಡಿ ಪರಾಂಬರಿಸದೆ ವಿದ್ಯಾ ಇಲಾಖೆಯ ತನಿಖಾಧಿಕಾರಿಯ ಕಚೇರಿಯಲ್ಲಿ ಕುಳಿತು ಆಗದವರ ಮಾತುಗಳನ್ನು ಕೇಳಿ ಪಾಠಶಾಲೆಯ ಕೆಲಸಕಾರ್ಯಗಳು ಅಸಮರ್ಪಕ ಎನ್ನುವ ರೀತಿಯಲ್ಲಿ ವರದಿಯನ್ನು ಮೇಲಧಿಕಾರಿಗಳಿಗೆ ಕಳುಹಿಸಿದರು. ಸಮಜಾಯಿಷಿ ಬಗ್ಗೆ ಪಾಠಶಾಲೆಗೂ ಅವರ ಪ್ರತಿ ಬಂದಿತು. ಇದು ಸ್ವಾಭಾವಿಕವಾಗಿ ಜಿ.ವಿ.ನಾ.ರವರನ್ನು ಕೆರಳಿಸಿತು. ಆಗ ಅವರು ಕೊಟ್ಟ ಉತ್ತರ ಇನ್ನು ಮುಂದೆ ಇಲಾಖಾಧಿಕಾರಿಗಳು ಈ ಶಾಲೆಯ ಬಗ್ಗೆ ತುಂಬ ಎಚ್ಚರಿಕೆಯಿಂದಿದ್ದು ವಾಸ್ತವಾಂಶಗಳನ್ನು ಮಾತ್ರ ನಿರೂಪಿಸುವಂತೆ ಮಾಡಿತು.

ಸಂಸ್ಥೆಯ ಕೆಲಸಕಾರ್ಯಗಳನ್ನು ಮೆಚ್ಚಿಕೊಂಡವರೊಬ್ಬರಿಂದ ಪಾಠಶಾಲೆಯ ಸ್ವಂತ ಕಟ್ಟಡಕ್ಕನುಕೂಲವಾದಂತಹ ಪ್ರದೇಶವನ್ನು ದಾನವಾಗಿ ಪಡೆದರು ಕಟ್ಟಬೇಕಾದ ಶಾಲೆಯ ಕಟ್ಟಡದ ನಕ್ಷೆ, ಅಂದಾಜು ವೆಚ್ಚ ಮೊದಲಾದವುಗಳನ್ನು ಪರಿಣತರಿಂದ ತಯಾರಿಸಿ ಆಗ ವಿದ್ಯಾಭ್ಯಾಸ ಮಂತ್ರಿಗಳಾಗಿದ್ದ ಎ. ಜಿ. ರಾಮಚಂದ್ರರಾಯರಿಂದ ಅಡಿಗಲ್ಲು ಹಾಕಿಸಿ ಪಾಯವನ್ನು ತೆಗೆಸಿ ಇಟ್ಟಿಗೆ ಹೊಡೆಸಿದ್ದರು. ದಾನವಾಗಿ ಬಂದಿದ್ದ ಜಮೀನಿನ ಬಗ್ಗೆ ಮೈಸರ್ ತಕರಾರು ಹುಟ್ಟಿಕೊಂಡಿತು. ಇಂಥ ಪುಣ್ಯಕಾರ್ಯಗಳು ಪೂರ್ಣ ಮನಸ್ಸಿನಿಂದ, ಸಂಪೂರ್ಣ ತ್ಯಾಗ ಮನೋಭಾವದಿಂದ ನಡೆಯಬೇಕೇ ಹೊರತು ಅರ್ಧಂಬರ್ಧ ಮನಸ್ಸಿನಿಂದಲ್ಲವೆಂದು ದಾನವಾಗಿ ಬಂದಿದ್ದ ಜಮೀನನ್ನು ಕೊಟ್ಟವರಿಗೇ ಹಿಂತಿರುಗಿಸಿದರು.

ಜನಸೇವಾ ಗುರಿಯನ್ನಿಟ್ಟುಕೊಂಡು ಸ್ಥಾಪಿಸಲ್ಪಟ್ಟ ಸಂಸ್ಥೆಯು ಜನತೆಯ ಆಧಾರದಿಂದಲೇ ನಡೆಯಬೇಕೆಂದೂ, ಸರ್ಕಾರದ ಸಹಾಯ ಧನಕ್ಕೆ ಕೈಯೊಡ್ಡಬಾರದೆಂಬುದು ಅವರ ಇಚ್ಛೆಯಾಗಿದ್ದಿತು. ಸಂಸ್ಥೆ ತನ್ನದೆಂಬ ಭಾವನೆ ಭಾಗ್ಯವಂತನಷ್ಟೇ ಬಡವನಿಗೂ ಬರಬೇಕೆಂಬುದು ಅವರ ಆಶಯವಾಗಿತ್ತು. ಆದ್ದರಿಂದ ಧನಸಹಾಯಕ್ಕೆ ಶ್ರೀಮಂತ–ಬಡವ ಎನ್ನುವ ಭೇದಭಾವವನ್ನು ಮಾಡದೆ ಪ್ರತಿಯೊಬ್ಬರಿಂದಲೂ ಅವರವರ ಶಕ್ತ್ಯಾನುಸಾರ ನೆರವನ್ನು ಪಡೆಯುತ್ತಿದ್ದರು. ಸಂತೆಯ ದಿನ ವಿದ್ಯಾರ್ಥಿಗಳನ್ನು ಕಳುಹಿಸಿ ಹುಂಡಿಗಳಲ್ಲಿ ಹಣವನ್ನು ಶೇಖರಿಸಿದ್ದೂ ಉಂಟು. ಈ ರೀತಿ ಜನಬೆಂಬಲದಿಂದಲೇ ಸಂಸ್ಥೆ ಕಾರ್ಯ ನಿರ್ವಹಿಸುತ್ತಿರುವಾಗ ಒಮ್ಮೆ ತುಮಕೂರು ಜಿಲ್ಲಾಧಿಕಾರಿಗಳು ಪಾಠಶಾಲೆಗೆ ಭೇಟಿಯಿತ್ತು ಕೆಲವರ ಆರೋಪದಂತೆ ಬುಡಮೇಲುಕೃತ್ಯಗಳಾವುವೂ ಇಲ್ಲಿ ನಡೆಯುತ್ತಿಲ್ಲವೆಂದೂ ಆದರ್ಶ ಪಾಠಶಾಲೆಯಾಗುವಂತೆ ಕೆಲಸಕಾರ್ಯಗಳು ಸಮರ್ಪಕವಾಗಿವೆಯೆಂದೂ ಮನವರಿಕೆ ಮಾಡಿಕೊಂಡು ಸರ್ಕಾರದ ಧನಸಹಾಯಕ್ಕೋಸ್ಕರ ಏಕೆ ಪ್ರಯತ್ನಿಸಬಾರದೆಂದು ಪ್ರಶ್ನಿಸಿದರು. ಜಿ.ವಿ.ನಾ.ರವರು ಅಂತಹ ಕಾಲ ಬಂದಾಗ ನೋಡೋಣವೆಂದು ನಯವಾಗಿ ಉತ್ತರ ನೀಡಿದರು,

ಶಾಲೆಯು ಭಾವಿ ಸತ್ಪ್ರಜೆಗಳನ್ನು ರೂಪುಗೊಳಿಸುವ ಕೇಂದ್ರವಾಗಬೇಕೆನ್ನುವ ಅವರ ಕನಸು ನನಸಾದುದು ಮೈಸೂರು ಪ್ರಜಾ ಸರ್ಕಾರ ಸ್ಥಾಪನೆಯ ಚಳವಳಿಯ ಸಂದರ್ಭದಲ್ಲಿ ಕಂಡುಬಂದಿತು. ವಿದ್ಯಾರ್ಥಿವೃಂದ ತ್ಯಾಗಮೂರ್ತಿಗಳಾಗಿ, ಗಾಂಧೀಜಿಯ ಅಹಿಂಸಾ ಮಾರ್ಗದ ದಿಟ್ಟ ಹೋರಾಟಗಾರರೂ ಶಿಸ್ತಿನ ಸಿಪಾಯಿಗಳೂ ಆಗಿ ಚಳವಳಿ ಯಲ್ಲಿ ಆದರ್ಶ ರೀತಿಯಲ್ಲಿ ಪಾಲ್ಗೊಂಡು ಊರಿಗೆ ಕೀರ್ತಿ ತಂದರು. ಸಂಸ್ಥೆಯ ಅಧ್ಯಕ್ಷ ರಾದ ಲಿಂಗದೇವರು ಸಿ. ಹೆಚ್. ಅವರು, ಕಾರ್ಯದರ್ಶಿಗಳಾದ ಜಿ.ವಿ.ನಾ.ರವರು ದಸ್ತಗಿರಿಯಾದರೂ ಸಂಯಮವನ್ನು ಕಳೆದುಕೊಳ್ಳದೆ ಕಾನೂನು ಮಿತಿಯೊಳಗೆ ಅಥವಾ ಸಾರ್ವಜನಿಕರ ಆಸ್ತಿಪಾಸ್ತಿಗಳಿಗೆ ಯಾವ ರೀತಿಯ ಧಕ್ಕೆಯನ್ನೂ ಉಂಟುಮಾಡದೆ ಅಹಿಂಸಾಯೋಧರಂತೆ ಬಂದ ಕಷ್ಟಗಳನ್ನು ನಗುಮುಖದಿಂದ ಸ್ವಾಗತಿಸುತ್ತಾ ಚಳವಳಿ ಯನ್ನು ಎಲ್ಲರೂ ಮೆಚ್ಚಿಕೊಳ್ಳುವ ರೀತಿಯಲ್ಲಿ ನಡೆಸಿದರು. ಶಾಲೆಯ ಒಬ್ಬ ವಿದ್ಯಾರ್ಥಿನಿ ದಿಟ್ಟತನದಿಂದ ತಾಲ್ಲೂಕು ಕಚೇರಿಯ ಮೇಲೆ ರಾಷ್ಟ್ರ ಧ್ವಜವನ್ನು ಹಾರಿಸಿದುದು ಪ್ರಶಂಸನೀಯವಾಗಿತ್ತು. ಪಾಠಶಾಲೆಯು ಚಳವಳಿಕಾರರಿಗೆ ಸ್ಫೂರ್ತಿ ನೀಡುವ ಸೆಲೆ ಎಂಬ ತಪ್ಪು ತಿಳುವಳಿಕೆಯಿಂದ ಸರ್ಕಾರ ಶಾಲೆಯ ಮುಖ್ಯೋಪಾಧ್ಯಾಯರನ್ನೂ ಮತ್ತು ಸಹ ಅಧ್ಯಾಪಕರೊಬ್ಬರನ್ನೂ, ಇತರ ಕೆಲವು ಗಣ್ಯರನ್ನೂ, ವಿದ್ಯಾರ್ಥಿಗಳನ್ನೂ ಗಾಂಧೀ ಜಯಂತಿ ಹಿಂದಿನ ದಿನ ಜಯಂತಿಯನ್ನು ವಿಜೃಂಭಣೆಯಿಂದ ನಡೆಸಲು ಸಲಹೆ ಕೇಳುವ ನೆಪದಲ್ಲಿ ಪೊಲೀಸ್ ಕಚೇರಿಗೆ ಬರಮಾಡಿಕೊಂಡು ದಸ್ತಗಿರಿ ಮಾಡಿತು. ಇದರಿಂದ ಹೋರಾಟ ಅಹಿಂಸಾ ಮಾರ್ಗದಲ್ಲಿ ಇನ್ನೂ ತೀವ್ರವಾಗಿ ಜಯಪ್ರದವಾಗಿ ಕೊನೆಗೊಳ್ಳು ವವರೆಗೂ ಅವಿಶ್ರಾಂತವಾಗಿ ಮುಂದುವರಿಯಿತೇ ಹೊರತು ಸರ್ಕಾರ ನಿರೀಕ್ಷಿಸಿದ್ದಂತೆ ಕುಂಠಿತವೇನೂ ಆಗಲಿಲ್ಲ.

ನಾಯಕರುಗಳು ಬಿಡುಗಡೆ ಹೊಂದಿ ಮರಳಿದಾಗ ಅವರಿಗೆ ಅಭೂತಪೂರ್ವ ಹೃದಯಸ್ಪರ್ಶಿ ಸ್ವಾಗತವನ್ನು ಜನತೆ ನೀಡಿತು. ಜಿ.ವಿ.ನಾ.ರವರು ಇಮ್ಮಡಿ ಉತ್ಸಾಹ ದಿಂದ ಕಾರ್ಯೋನ್ಮುಖರಾದರು. ದುರ್ದೈವದಿಂದ ಪಾಠಶಾಲೆಯ ಕಟ್ಟಡಕ್ಕೆ ಹಣ ಸಂಗ್ರಹಿಸುವ ವಿಚಾರದಲ್ಲಿ ಅವರಿಗೂ ಮತ್ತು ಉಳಿದ ಕಾರ್ಯಕಾರಿ ಸಮಿತಿಯ ಸದಸ್ಯರಿಗೂ ಭಿನ್ನಾಭಿಪ್ರಾಯ ತಲೆದೋರಿತು. ಕಾರ್ಯಕಾರಿ ಸಮಿತಿಯ ಸದಸ್ಯರು ಹಣ ಶೇಖರಣೆಗೆ ಒಂದು ಲಾಟರಿ ನಡೆಸುವ ಇರಾದೆಯನ್ನು ವ್ಯಕ್ತಪಡಿಸಿದರು. ಜಿ.ವಿ.ನಾ.ರವರು ಇದಕ್ಕೊಪ್ಪಲಿಲ್ಲ. ಕೊಡುವವರು ಶುದ್ಧಮನಸ್ಸಿನಿಂದ ಕಟ್ಟಡದ ಅವಶ್ಯಕತೆಯನ್ನರಿತು ಕೊಡಬೇಕೆಂಬುದು ಅವರ ನಿಲುವು. ಲಾಟರಿಯಲ್ಲಿ ಹಣ ಬರಬಹುದೆಂಬ ಆಮಿಷವನ್ನು ಅವರಿಗೆ ಒಡ್ಡಿದಂತಾಗಿ ಉದ್ದೇಶ ಕಲುಷಿತವಾಗುತ್ತದೆ ಎಂಬುದು ಅವರ ವಿಚಾರವಾಗಿತ್ತು. ಪ್ರಜಾಪ್ರಭುತ್ವತತ್ವಕ್ಕನುಸಾರವಾಗಿ ಬಹುಜನಾಭಿಪ್ರಾಯಕ್ಕೆ ಮನ್ನಣೆ ಕೊಡುವ ಉದ್ದೇಶದಿಂದ ಕಾರ್ಯದರ್ಶಿ ಸ್ಥಾನಕ್ಕೆ ರಾಜೀನಾಮೆ ಕೊಟ್ಟು, ಬೇರೆಯವರು ತಮಗೆ ಸೂಕ್ತವಾದ ರೀತಿಯಲ್ಲಿ ಕಾರ್ಯವನ್ನು

ಮುಂದುವರಿಸಿಕೊಂಡು ಹೋಗಲು ಅನುವುಮಾಡಿಕೊಟ್ಟು ಸಂಸ್ಥೆಯಿಂದ ದೂರ ವಾದರು. ಇದು ಚಿಕ್ಕನಾಯಕನಹಳ್ಳಿಗಾದ ನಷ್ಟ. ಮಾಯಸಂದ್ರಕ್ಕಾದ ಲಾಭ.

ಇಂತಹ ಕಾರ್ಯಶೀಲ ವ್ಯಕ್ತಿಯನ್ನು ಸುಮ್ಮನಿರಲು ದೈವ ಬಿಡುವುದೇ ? ಪ್ರೌಢಶಾಲಾ ವಿದ್ಯಾವ್ಯವಸ್ಥೆಗಾಗಿ ಮಾಯಸಂದ್ರದ ಸನ್ಮಿತ್ರರು ಅವರನ್ನು ಬರಮಾಡಿ ಕೊಂಡು ಅವರ ನೇತೃತ್ವದಲ್ಲಿ ಸಂಘಟಿತರಾಗಿ ಕೆಲಸಮಾಡಿದರು. ಪರಿಣಾಮ 'ನೆಹರೂ ಪಾಠಶಾಲೆ' ಮತ್ತು 'ಸರ್ವೋದಯ ಶಿಕ್ಷಣ ಸಂಸ್ಥೆ' ರೂಪುಗೊಂಡವು. ಪ್ರಾರಂಭದ ದಿನಗಳಲ್ಲಿ ಸಂಸ್ಥೆಯ ಕೇಂದ್ರಬಿಂದುವಾಗಿ, ಪ್ರೌಢಶಾಲೆಯ ಪ್ರಾಧ್ಯಾಪಕ ರಾಗಿ ಅವಿಶ್ರಾಂತವಾಗಿ ದುಡಿದು ಸ್ಥಿರ ಅಡಿಗಲ್ಲು ಹಾಕಿದರು. ಇಂದು ಅದು ಜೂನಿಯರ್ ಕಾಲೇಜು ನಡೆಸುತ್ತ ಜಿಲ್ಲೆಯಲ್ಲಿ ಆದರ್ಶ ವಿದ್ಯಾಸಂಸ್ಥೆಯಾಗಿ ಕೆಲಸ ಮಾಡುತ್ತಿದೆ.

ಕಾಲಚಕ್ರ ಉರುಳಿತು. ಆರಂಭದ ಕಾಲದಿಂದಲೂ ವಿದ್ಯಾಪೀಠದ ಅಧ್ಯಕ್ಷ ರಾಗಿದ್ದ ಸಿ. ಎಚ್. ಲಿಂಗದೇವರು ಜನತೆಯನ್ನು ದುಃಖದಲ್ಲಿ ಮುಳುಗಿಸಿ ಅಕಾಲ ಮರಣಕ್ಕೆ ತುತ್ತಾದರು. ಸಂಸ್ಥೆ ಮತ್ತೆ ಅನಾಥವಾಯಿತು. ಆಗ ಕಾರ್ಯಕಾರಿ ಸಮಿತಿಯ ಸದಸ್ಯರುಗಳು ಅಧ್ಯಕ್ಷ ಸ್ಥಾನವನ್ನು ವಹಿಸಿಕೊಂಡು ಸಂಸ್ಥೆಯನ್ನು ನಡೆಸಿ ಕೊಂಡು ಹೋಗಬೇಕೆಂದು ಏಕಕಂಠದಿಂದ ಕೇಳಿಕೊಂಡರು. ತತ್ವನಿಷ್ಠರಾದ ಜಿ.ವಿ.ನಾ. ಅವರು ಮತ್ತೆ ಬಹುಜನಾಭಿಪ್ರಾಯಕ್ಕೆ ತಲೆಬಾಗಿ ಅಗಲಿದ ತಮ್ಮ ಸನ್ಮಿತ್ರನಿಗೆ ಸಲ್ಲಿಸ ಬಹುದಾದ ಸೇವಾರೂಪದ ಕಾಣಿಕೆ ಎಂಬ ಪವಿತ್ರಭಾವನೆಯಿಂದ ಅಧ್ಯಕ್ಷರಾದರು. ಮತ್ತೆ ಕೆಲಸಗಳು ಸುಗಮವಾಗಿ ನಡೆದುಕೊಂಡು ಹೋಗುವಂತಾಯಿತು. ಬಹಳ ವರ್ಷಗಳ ಹಿಂದೆಯೇ ನಡೆಯಬೇಕಾಗಿದ್ದ ಸಂಸ್ಥೆಯ ಬೆಳ್ಳಿ ಹಬ್ಬವನ್ನು ಆಚರಿಸಿದರು. ಇದರ ಸವಿನೆನಪಿಗಾಗಿ ವಿಶೇಷ ಸಂಚಿಕೆಯ ಬಿಡುಗಡೆಗೂ ವ್ಯವಸ್ಥೆಮಾಡಿದರು.

ಅವರ ಸೇವಾ ಭಾಗ್ಯ ಇನ್ನೂ ಹತ್ತಾರು ವರ್ಷ ದೊರೆಯುವುದೆಂಬ ಆಶಾ ಭಾವನೆಯಿಂದಿದ್ದ ಜನತೆಗೆ ಅವರು ಸಾರ್ವಜನಿಕ ಸೇವಾಕ್ಷೇತ್ರದಲ್ಲಿ ಸಕ್ರಿಯವಾಗಿ ಭಾಗ ವಹಿಸಲಶಕ್ತರಾಗುವಂತೆ ಆರೋಗ್ಯ ಕೆಟ್ಟುದುದು ತಾಳಲಾರದ ವಿಷಯವಾಯಿತು. ಜನರ ಪ್ರಾರ್ಥನೆಯ ಫಲವೆಂಬಂತೆ ದೈವಕೃಪೆಯಿಂದ ಅವರ ಆರೋಗ್ಯ ಸುಧಾರಿಸಿತಾದರೂ ಮೊದಲಿನಂತೆ ಸಕ್ರಿಯ ಕಾರ್ಯಚಟುವಟಿಕೆಗಳಲ್ಲಿ ಭಾಗವಹಿಸಲಾಗಲಿಲ್ಲವೆಂಬ ಕೊರಗು ಎಲ್ಲರಲ್ಲುಳಿಯಿತು. ಶ್ರೀ ಜಿ.ವಿ.ನಾ. ಎಲ್ಲೇ ಇರಲಿ, ಹೇಗೇ ಇರಲಿ ಅವರ ಚೈತನ್ಯ ಮಾತ್ರ ಸದಾ ರಾಷ್ಟ್ರದ ಬಗ್ಗೆ, ಜನತೆಯ ಬಗ್ಗೆ ಚಿಂತನೆ ಮಾಡುತ್ತಿರುತ್ತದೆ ; ಮಿಡಿಯು ತ್ತಿರುತ್ತದೆ. ಇಂಥ ಧೀಮಂತ ವ್ಯಕ್ತಿ ನಮ್ಮೆಲ್ಲರ ಮಧ್ಯೆ ಹಲವಾರು ವರ್ಷಗಳಿದ್ದು ನಮಗೆಲ್ಲಾ ದಾರಿದೀಪವಾಗುವಂತೆ ಪರಮಾತ್ಮ ಕರುಣಿಸಲೆಂದು ಮೊರೆಯಿಡುವುದೊಂದೇ ನಮಗುಳಿದಿರುವುದು,

ಪಥಿಕ

# ಸ್ವಾತಂತ್ರ್ಯಯೋಧ ಜಿ.ವಿ.ನಾ.

**ಸಿ. ಎಸ್. ನಾರಾಯಣರಾವ್**

ಹಿಂದೂ ಮುಸ್ಲಿಂ ಐಕ್ಯತೆ, ಹರಿಜನೋದ್ಧಾರ, ಖಾದಿ, ಸೇವಾದಳ, ಭಾರತ ಸೇವಕ ಸಮಾಜ, ಶಿಕ್ಷಣ, ಸಾಹಿತ್ಯ, ಸರ್ವೋದಯ ಇವೇ ಮುಂತಾದ ಇನ್ನೂ ಅನೇಕ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿರುವ ಶ್ರೀ ಜಿ.ವಿ.ನಾ.ರವರು ಚಿಕ್ಕನಾಯಕನಹಳ್ಳಿಯಲ್ಲಿ 1942ರ ಮಹಾ ಕ್ರಾಂತಿಯಿಂದ 1947ರ ವರೆಗೆ ಜನಶಕ್ತಿ ನಿರ್ಮಿಸಿ ನಡೆಸಿದ ಸ್ವಾತಂತ್ರ್ಯ ಹೋರಾಟಗಳ ಬಗ್ಗೆ (39 ವರ್ಷಗಳ ದೀರ್ಘ ಕಾಲದ ನಂತರ) ಬರೆಯುವುದು ಒಂದು ರೋಮಾಂಚಕಾರಿ ಸ್ಮರಣೆಗೆ ಕಾರಣ.

ದೇಶದ ಪ್ರತಿಯೊಬ್ಬ ಯುವಕನೂ, ಯುವತಿಯೂ ಸತ್ಯ, ಧರ್ಮ, ನ್ಯಾಯ, ನೀತಿ ಉಳ್ಳವರಾಗಿ ಬಾಳಬೇಕು. ಸ್ವಾವಲಂಬಿಗಳಾಗಿ ಸತ್ಪ್ರಜೆಗಳಾಗಿ ಆದರ್ಶ ರೀತಿಯಲ್ಲಿ ದೇಶದ ಉನ್ನತಿಗಾಗಿ ದುಡಿಯಬೇಕು. ರಾಷ್ಟ್ರದ ಸ್ವಾತಂತ್ರ್ಯ ಸ್ಥಿರತೆಗಾಗಿ ಮತ್ತು ರಕ್ಷಣೆಗಾಗಿ ಸರ್ವಸ್ವವನ್ನು ತ್ಯಾಗಮಾಡಿ ಹೋರಾಡುವ ದೇಶಭಕ್ತರು ರೂಪುಗೊಳ್ಳಬೇಕು- ಇವೇ ಮುಂತಾದ ಮಹೋನ್ನತ ಉದ್ದೇಶಗಳನ್ನು ಹೊಂದಿ ಗುರಿಸಾಧನೆಗೆ ಕಾನಕಾನಹಳ್ಳಿ, ಮಾಯಸಂದ್ರ ಮತ್ತು ಚಿಕ್ಕನಾಯ್ಕನಹಳ್ಳಿಗಳಲ್ಲಿ ಅನೇಕ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ ಅತ್ಯಂತ ಆದರ್ಶ ರೀತಿಯಲ್ಲಿ ನಡೆಸಿಕೊಂಡು ಬಂದವರು ಶ್ರೀ ಜಿ.ವಿ.ನಾ. ಅವರು.

ಎಂಥ ಕಠಿಣ ಪ್ರಸಂಗಗಳು ಬಂದರೂ ಅವರು ತತ್ವ, ಸಿದ್ಧಾಂತಗಳನ್ನು ಬಿಡದೆ ಹಗಲಿರುಳು ಶ್ರಮಿಸುತ್ತ ಬಂದಿದ್ದಾರೆ. ಸಮಸ್ಯೆಗಳು ಬಂದು ಅಲುಗಾಡಿಸಿದಾಗಲು ಖಿನ್ನರಾಗದೆ, ಧೃತಿಗೆಡದೆ ಪವಿತ್ರ ಧ್ಯೇಯಗಳನ್ನು ದಿಟ್ಟತನದಿಂದ ಪಾಲಿಸುತ್ತ, ಬಂದ ಸಮಸ್ಯೆಗಳನ್ನೆಲ್ಲ ಎದುರಿಸಿ ನಿಂತ ಧೀಮಂತರಿವರು. ಹೊಗಳಿಕೆ, ತೆಗಳಿಕೆ, ಸುಖ, ದುಃಖಗಳ ಬಗ್ಗೆ ಹಿಗ್ಗದೆ, ಕುಗ್ಗದೆ ಸ್ಥಿತಪ್ರಜ್ಞರಾಗಿ ಕರ್ಮನಿರತರಾದವರು ಜಿ.ವಿ.ನಾ.ರವರು.

ಬ್ರಿಟಿಷ್ ಸಾರ್ವಭೌಮರು ನಮ್ಮನ್ನು ಗುಲಾಮರನ್ನಾಗಿ ಮಾಡಿಕೊಂಡು ಸುಮಾರು ಎರಡು ನೂರು ವರ್ಷಗಳ ಕಾಲ ದಬ್ಬಾಳಿಕೆಯ ಆಡಳಿತವನ್ನು ನಡೆಸಿದರು. ನಮ್ಮ ರಾಷ್ಟ್ರದ ಸಂಪತ್ತನ್ನೆಲ್ಲಾ ಸೂರೆಮಾಡಿದರು. ವಿಶ್ವದ ಬಹುಪಾಲು ಪ್ರದೇಶವನ್ನು ತಮ್ಮದನ್ನಾಗಿ ಮಾಡಿಕೊಂಡಿದ್ದರು. ನಮ್ಮನ್ನು ಅಲುಗಾಡಿಸುವವರು ಜಗತ್ತಿನಲ್ಲಿಯೇ ಯಾರೂ ಇಲ್ಲವೆಂದೂ, ರವಿ ಮುಳುಗದ ಸಾಮ್ರಾಜ್ಯ ನಿರ್ಮಾಪಕರೆಂದೂ ಕೊಚ್ಚಿಕೊಳ್ಳುತ್ತ ಪ್ರಬಲ ಶಕ್ತಿಯಿಂದ ಮೆರೆಯುತ್ತಿದ್ದರು. ಎರಡು ನೂರು

ವರ್ಷಗಳ ದೀರ್ಘಕಾಲದ ದುರಾಡಳಿತಕ್ಕೆ ನಮ್ಮ ಜನ ಸಿಕ್ಕು ಜರ್ಜರಿತರಾಗಿದ್ದರು. ಕಷ್ಟ-ಕಾರ್ಪಣ್ಯಗಳಿಗೆ ಗುರಿಯಾಗಿ ನೊಂದು, ಬೆಂದು, ಕಂಗಾಲಾಗಿ ಹೋಗಿದ್ದರು. ಮಾರ್ಗ ಕಾಣದೆ ಜನ ತತ್ತರಿಸಿಹೋಗಿದ್ದಾಗ ಸತ್ಯ, ಅಹಿಂಸೆ, ಶಾಂತಿ, ಶಿಸ್ತುಗಳ ಪಾಲನೆಯ ಮಹಾಮೂರ್ತಿಯಾಗಿ, ಪಾಶವೀ ಶಕ್ತಿಗಳನ್ನೆಲ್ಲಾ ನಿರ್ನಾಮ ಮಾಡುವ ದಿವ್ಯಾತ್ಮ ಶಕ್ತಿ ಹೊಂದಿದ ಮಹಾತ್ಮ ಗಾಂಧೀಜಿಯವರು ಬ್ರಿಟಿಷರೇ, ಭಾರತ ಬಿಟ್ಟು ತೊಲಗಿ ಎಂಬ ವೀರ ಘೋಷಣೆಯನ್ನು 1942ರಲ್ಲಿ ಮಾಡಿದರು.

ಬ್ರಿಟಿಷರನ್ನು ಓಡಿಸಬೇಕೆಂದು ಮಹಾತ್ಮ ಗಾಂಧೀಜಿಯವರು ಮಂಡಿಸಿದ ನಿರ್ಣಯವನ್ನು ಅಖಿಲ ಭಾರತ ಕಾಂಗ್ರೆಸ್ ಮಹಾಸಂಸ್ಥೆ ಸರ್ವಾನುಮತದಿಂದ ಅಂಗೀಕರಿಸಿತು.

ಪೂಜ್ಯ ಬಾಪೂಜಿಯವರ ನಾಯಕತ್ವದಲ್ಲಿ ಈ ನಿರ್ಣಯ ಅಂಗೀಕಾರವಾದ ಕೂಡಲೆ ರಾಷ್ಟ್ರದ ಅನೇಕ ಕಡೆಗಳಲ್ಲಿ ಚಳುವಳಿಗಳು ಪ್ರಾರಂಭವಾದವು. ಚಳುವಳಿಗಳು ದಾವಾಗ್ನಿಯಂತೆ ರಾಷ್ಟ್ರದ ಎಲ್ಲ ಕಡೆಗಳಲ್ಲೂ ಹರಡಿದವು.

ಶ್ರೀ ಜಿ.ವಿ.ನಾ.ರವರು ಬಂದು ನೆಲಸಿದ್ದ ಚಿಕ್ಕನಾಯ್ಕನಹಳ್ಳಿಯ ಪ್ರಜೆಗಳಿಗೆ ಆಗ ಸ್ವಾತಂತ್ರ್ಯದ ಮಹತ್ವ ತಿಳಿದಿರಲಿಲ್ಲ. ಅಜ್ಞಾನ ಅಂಧಕಾರದಲ್ಲಿಯೆ ಮುಳುಗಿದ್ದರು. ಸ್ವಾತಂತ್ರ್ಯ ಬೇಕೆಂಬ ಹಂಬಲವಾಗಲಿ, ಅದಕ್ಕಾಗಿ ಹೋರಾಡ ಬೇಕೆಂಬ ತಿಳುವಳಿಕೆಯಾಗಲಿ ಇರಲಿಲ್ಲ. ಕೆಚ್ಚು, ಧೈರ್ಯ, ಸಾಹಸಗಳೆಂಬ ವಿಚಾರಗಳೆ ಅರಿಯದಾಗಿದ್ದವು. ಸರ್ಕಾರದ ಇಚ್ಛೆಗನುಗುಣವಾಗಿ ನಡೆಯುವುದೆ ನಮ್ಮ ಕರ್ತವ್ಯ, ಧರ್ಮವೆಂದು ನಂಬಿದ್ದರು. ಸರ್ಕಾರ ಹೇಳಿದಂತೆ ತಲೆಬಾಗಿ ನಡೆದುಕೊಳ್ಳುತ್ತಿದ್ದ ಮುಖಂಡರಿಗೆ ಹೆದರಿ ನಡೆದುಕೊಳ್ಳುತ್ತಿದ್ದ ಕಾಲವದು.

ಬ್ರಿಟಿಷ್ ಸರ್ಕಾರದ ವಿರುದ್ಧ ಯಾರೂ ಮಾತನಾಡುವಂತೆಯೇ ಇರಲಿಲ್ಲ. ವೃತ್ತ ಪತ್ರಿಕೆಯವರು ಸತ್ಯಸಂಗತಿಗಳನ್ನೂ ಪ್ರಕಟಿಸಿ ಪ್ರಚಾರ ಮಾಡುವಂತಿರಲಿಲ್ಲ. ಪ್ರತಿಭಟಿಸಿದರೆ ಸಾಕು ಜೈಲು ಶಿಕ್ಷೆಗೆ, ಲಾಠಿ ಏಟಿಗೆ, ಗುಂಡಿನ ಹೊಡೆತಕ್ಕೆ ಬಲಿಯಾಗ ಬೇಕಾಗಿತ್ತು. ಕಾಂಗ್ರೆಸ್ ಹೆಸರು ಹೇಳಲು ಸಹ ಜನ ಹೆದರುತ್ತಿದ್ದರು. ಎಲ್ಲ ಕಡೆಯೂ ಭಯಭೀತಿ ಆವರಿಸಿ ಜನ ನಡುಗುತ್ತಿದ್ದ ಕಾಲದಲ್ಲಿ ಶ್ರೀ ಜಿ.ವಿ.ನಾ ರವರು ಚಿಕ್ಕನಾಯಕನಹಳ್ಳಿ ಕ್ಷೇತ್ರದಲ್ಲಿ ಸ್ವಾತಂತ್ರ್ಯದ ಕಹಳೆಯನ್ನು ಊದಿದರು. ಝೇಂಕಾರ ಮಾಡುತ್ತ ಚಳುವಳಿಗಳನ್ನು ಪ್ರಾರಂಭಿಸಿದರು.

ಪ್ರತಿದಿನ ಬೆಳಗ್ಗೆ ಮತ್ತು ಸಂಜೆ ಜಿ.ವಿ.ನಾ. ನೇತೃತ್ವದಲ್ಲಿ ಊರಿನಲ್ಲೆಲ್ಲ ತ್ರಿವರ್ಣ ಧ್ವಜಗಳೊಂದಿಗೆ ಮೆರವಣಿಗೆಗಳು ನಡೆಯುತ್ತಿದ್ದವು. ಹುಡುಗರೂ, ದೊಡ್ಡವರೂ, ಮೆರವಣಿಗೆಯಲ್ಲಿ ಪಾಲ್ಗೊಳ್ಳುತ್ತಿದ್ದರು. ಮೆರವಣಿಗೆ ಕಾಲದಲ್ಲಿ ದೇಶಭಕ್ತಿ ಗೀತೆಗಳನ್ನು ಹಾಡಲಾಗುತ್ತಿತ್ತು. ವೀರಾವೇಶದಿಂದ ಜಯಘೋಷಗಳನ್ನು ಕೂಗಲಾಗುತ್ತಿತ್ತು.

ಮಹಾತ್ಮ ಗಾಂಧೀಜಿಯುವರಿಗೆ ಸುಭಾಶ್‌ಚಂದ್ರಭೋಸರಿಗೆ ಕಾಂಗ್ರೆಸ್ಸಿಗೆ— ಕಾಂಗ್ರೆಸ್ ಮುಖಂಡರಿಗೆ, ಹುತಾತ್ಮ ಭಗತ್‌ಸಿಂಗರಿಗೆ—ಒಗ್ಗಟ್ಟಿಗೆ ಶಾಂತಿ, ಶಿಸ್ತುಗಳಿಗೆ ಜಯಕಾರದ ಘೋಷಣೆಗಳನ್ನು ಮಾಡಲಾಗುತ್ತಿತ್ತು. ಸಂಜೆ ಮೆರವಣಿಗೆ ಮುಗಿದ ನಂತರ ವಿವಿಧ ಸ್ಥಳಗಳಲ್ಲಿ ಸಭೆಗಳು ಪ್ರತಿದಿನವೂ ನಡೆಯುತ್ತಿದ್ದವು. ಬ್ರಿಟಿಷರ ದುರಾಡಳಿತವನ್ನು ಕುರಿತು ವಿವರವಾಗಿ ಶ್ರೀ ಜಿ.ವಿ.ನಾ.ರವರು ಸಭೆಗಳಲ್ಲಿ ಭಾಷಣಗಳನ್ನು ಮಾಡುತ್ತಿದ್ದರು. ಮಹಾತ್ಮ ಗಾಂಧೀಜಿಯುವರ ಅದ್ವಿತೀಯ ನಾಯಕತ್ವದಲ್ಲಿ ರಾಷ್ಟ್ರದ ಎಲ್ಲಾ ಕಡೆಗಳಲ್ಲೂ ನಡೆಯುತ್ತಿದ್ದ ಚಳುವಳಿಗಳನ್ನು ವಿವರಿಸಿ ಹೇಳುತ್ತಿದ್ದರು. ಸ್ವಾತಂತ್ರ್ಯ ಪಡೆದ ರಾಷ್ಟ್ರಗಳ ಅಭಿವೃದ್ಧಿ, ಅಲ್ಲಿಯ ಸುಖ ಸಂತೋಷಗಳನ್ನು ಸಾಮಾನ್ಯ ಜನರ ಮನಮುಟ್ಟುವಂತೆ ವಿವರಿಸುತ್ತಿದ್ದರು. ರಾಷ್ಟ್ರದ ಸ್ವಾತಂತ್ರ್ಯಕ್ಕಾಗಿ ಮಹಾತ್ಮ ಗಾಂಧೀಜಿಯುವರು ಮಾಡಿದ್ದ ಉಪ್ಪಿನ ಸತ್ಯಾಗ್ರಹ, ಕರನಿರಾಕರಣೆ ಚಳುವಳಿ ಇವೇ ಮುಂತಾದ ಅನೇಕ ಚಳುವಳಿಗಳ ಘಟನೆಗಳನ್ನೆಲ್ಲಾ ಕಣ್ಣಿಗೆ ಕಟ್ಟುವಂತೆ ತಿಳಿಸಿ ಜನರಲ್ಲಿ ದೇಶಭಕ್ತಿ ಮೂಡಿಸುತ್ತಿದ್ದರು. ರಾಷ್ಟ್ರದ ಸ್ವಾತಂತ್ರ್ಯಕ್ಕಾಗಿ ಹೋರಾಡಬೇಕೆಂಬ ಕೆಚ್ಚು ದಿನೇದಿನೇ ಹೆಚ್ಚುವಂತೆ ಮಾಡುತ್ತಿದ್ದರು.

ಸರ್ದಾರ್ ಪಟೇಲರ ನಾಯಕತ್ವದಲ್ಲಿ ನಡೆದ ಬಾರ್ಡೋಲಿ ಸತ್ಯಾಗ್ರಹ, ನಾಲ್ಕು ಕಡೆಗಳಿಂದ ಗುಂಡಿಕ್ಕಿ ಏಕಕಾಲದಲ್ಲಿ ಹದಿನಾಲ್ಕು ಸಾವಿರಕ್ಕೂ ಹೆಚ್ಚು ಜನಗಳನ್ನು ಆಹುತಿಗೊಂಡ ಜಲಿಯನ್‌ವಾಲಾಬಾಗ್ ಹತ್ಯಾಕಾಂಡ ಈ ಘಟನೆಗಳನ್ನು ಹೃದಯ ಕರಗುವಂತೆ ಶ್ರೀ ಜಿ.ವಿ.ನಾ.ರವರು ಚಿತ್ರಿಸುತ್ತಿದ್ದರು. ಘಟನೆಗಳು ನಡೆದ ಸ್ಥಳಗಳ ಹೆಸರು, ತಾರೀಖು, ಇಸವಿ ಮುಂತಾದವುಗಳನ್ನೆಲ್ಲಾ ವಿಶಿಷ್ಟ ರೂಪದಲ್ಲಿ ವಿವರಿಸಿ ಮಾಡುತ್ತಿದ್ದ ಈ ಸ್ಫೂರ್ತಿಯುತ ಭಾಷಣಗಳು ಎಂತಹ ಹೇಡಿಯನ್ನಾದರೂ ಕೆರಳಿಸುತ್ತಿದ್ದುವು. ದುಷ್ಟ ಬ್ರಿಟಿಷರನ್ನು ನಿರ್ನಾಮ ಮಾಡುತ್ತೇನೆಂದು ಪಣತೊಟ್ಟು ಸ್ವಾತಂತ್ರ್ಯ ಹೋರಾಟಕ್ಕೆ ಧುಮುಕುವಂತೆ ಪ್ರೇರೇಪಿಸುತ್ತಿದ್ದುವು. ಸ್ವಾತಂತ್ರ್ಯದ ಗಂಧವೇ ಅರಿಯದಂತಿದ್ದ ಯುವಕರ ಮನಸ್ಸು ಶ್ರೀ ಜಿ.ವಿ.ನಾ.ರವರ ಅಮೋಘವಾದ ಉಪನ್ಯಾಸಗಳಿಂದ ಸ್ಫೂರ್ತಿಗೊಂಡು ಬ್ರಿಟಿಷರ ವಿರುದ್ಧ ಕೆರಳಿ ಕ್ರಾಂತಿಯುತ ಹೋರಾಟ ಮಾಡಲು ಸನ್ನದ್ಧವಾಯಿತು. ದಿನಗಳು ಕಳೆದಂತೆ ಚಳುವಳಿ ಉಗ್ರರೂಪ ತಾಳುತ್ತಿತ್ತು. ಬೆಂಗಳೂರಿಗೆ ಈ ತಾಲ್ಲೂಕಿನಿಂದ ಹೆಂಡ ಸಾಗಿಸುತ್ತಿದ್ದ ಲಾರಿಗಳನ್ನು ತಡೆದು ಹೆಂಡದ ಪಿಪಾಯಿಗಳ ಬಿರಟೆಗಳನ್ನು ಕಿತ್ತು ಹೆಂಡವೆಲ್ಲಾ ರಸ್ತೆ ಚರಂಡಿಗಳಲ್ಲಿ ಹರಿದುಹೋಗುವಂತೆ ಮಾಡಲು ಪ್ರಾರಂಭವಾಯಿತು.

ವಿದೇಶಿ ವಸ್ತ್ರಕ್ಕೆ ಬಹಿಷ್ಕಾರ ಹಾಕಿ ಸ್ವದೇಶಿ ವಸ್ತ್ರಕ್ಕೆ ಪ್ರೋತ್ಸಾಹ ನೀಡಿಯೆಂದು ಪೂಜ್ಯ ಬಾಪೂಜಿಯವರು 1942ರ ಹೋರಾಟದ ಸಮಯದಲ್ಲಿಯೆ ಕರೆಯನ್ನು ಕೊಟ್ಟಿದ್ದರು. ಈ ಕರೆಗೆ ಅನುಗುಣವಾಗಿ ಕಾರ್ಯ ಕೈಗೊಳ್ಳಬೇಕೆಂದು ಚಳುವಳಿಗಾರರು ತೀರ್ಮಾನಿಸಿದರು. ಸರಿ ಸಾರ್ವಜನಿಕರು ಪ್ರಯಾಣ ಮಾಡುತ್ತಿದ್ದ ಬಸ್ಸು

ಗಳನ್ನೆಲ್ಲಾ ತಡೆದು ನಿಲ್ಲಿಸಲಾಗುತ್ತಿತ್ತು. ಬಸ್ಸಿನಲ್ಲಿದ್ದ ಪ್ರಯಾಣಿಕರು ಧರಿಸಿದ್ದ ಹ್ಯಾಟುಗಳನ್ನು ಮತ್ತು ಟೈಗಳನ್ನು ಕಿತ್ತು ಎಲ್ಲವನ್ನು ಒಟ್ಟಿಗೆ ಸೇರಿಸಿ ರಸ್ತೆಯ ಮಧ್ಯ ಭಾಗದಲ್ಲಿಟ್ಟು ಸೀಮೆಎಣ್ಣೆ ಸುರಿದು ಸುಟ್ಟುಹಾಕಲಾಗುತ್ತಿತ್ತು. ಈ ಬಗೆಯ ಚಳುವಳಿ ಮುಂದುವರಿದಂತೆ ಹ್ಯಾಟು, ಟೈ ಧರಿಸಿ ಪ್ರಯಾಣ ಮಾಡುವುದೇ ತಪ್ಪಿಹೋಯಿತು.

ಪ್ರಯಾಣಿಕರಿಗೂ, ಚಳುವಳಿಗಾರರಿಗೂ ಮಧ್ಯ ಘರ್ಷಣಗಳು ನಡೆಯುತ್ತಿದ್ದವು. ಪೋಲಿಸರೊಂದಿಗೆ ಘರ್ಷಣೆಗಳು ನಡೆಯುತ್ತಿದ್ದವು. ಚಳುವಳಿಗಾರರು ಕೈ ತೋರಿಸಿದಾಗ ಬಸ್ಸಿನವರೂ, ಲಾರಿಗಳವರೂ ಗೌರವಕೊಟ್ಟು ನಿಲ್ಲಿಸಬೇಕಾಗಿತ್ತು. ವಿದೇಶೀಯ ವಸ್ತುಗಳನ್ನು ರಸ್ತೆ ಮಧ್ಯೆ ಸುಡುವಾಗಲೂ ಇತರ ರೀತಿಯ ಚಳುವಳಿಗಳನ್ನು ಮಾಡುವಾಗಲು ಪೋಲೀಸರು ಸಹ ಪ್ರೇಕ್ಷಕರಂತೆ ನೋಡುತ್ತ ನಿಂತಿರುತ್ತಿದ್ದರು. ಎಲ್ಲರೂ ಚಳುವಳಿಗಾರರೊಡನೆ ಸಹಕರಿಸದೆ ಇದ್ದರೆ ಬಸ್ಸುಗಳಿಗೆ ಬೆಂಕಿ ಇಡಬೇಕೆಂಬ ತೀವ್ರ ತರದ ಆಲೋಚನೆಯು ಕೆಲವು ಚಳುವಳಿಗಾರರ ಅಂತರಂಗದಲ್ಲಿತ್ತು. ಈ ವಿಚಾರಗಳನ್ನೆಲ್ಲಾ ಶ್ರೀ ಜಿ.ವಿ.ನಾ.ರವರಿಗೆ ತಿಳಿಸಿರಲಿಲ್ಲ. ಸುಡುವ ಮತ್ತಿತರ ಉಗ್ರ ಚಟುವಟಿಕೆಗಳನ್ನು ಇವರು ಒಪ್ಪುತ್ತಿರಲಿಲ್ಲ. ತಾಲ್ಲೋಕ್ ಕಛೇರಿಯ ಮುಂಭಾಗದಲ್ಲಿ ಮತ್ತು ಉರ್ದು ಶಾಲೆಯ ಮುಂಭಾಗದ ರಸ್ತೆಗಳ ಬಳಿ ಬಸ್ಸುಗಳನ್ನು ತಡೆದು ವಿದೇಶಿ ವಸ್ತುಗಳನ್ನು ಸುಡುತ್ತಿದ್ದ ಸಂದರ್ಭ ಗಳಲ್ಲಿ ಶ್ರೀ ಜಿ.ವಿ.ನಾ.ರವರು ಧಾವಿಸಿ ಬಂದು ಬುದ್ಧಿ ಹೇಳಿ ತಡೆಯುತ್ತಿದ್ದರು. ರಸ್ತೆಗಳ ಪಕ್ಕಗಳಲ್ಲಿಯೆ ಚಳುವಳಿಗಾರರನ್ನೆಲ್ಲ ಸಭೆ ಸೇರಿಸಿ ಗಾಂಧೀಜಿಯವರ ತತ್ವಕ್ಕೆ ಅನುಗುಣವಾಗಿಯೆ ಸತ್ಯ, ಅಹಿಂಸೆ, ಶಾಂತಿ ಮತ್ತು ಶಿಸ್ತಿನಿಂದಲೇ ಚಳುವಳಿ ಮಾಡಬೇಕೆಂದೂ ಮತ್ತು ಯಾವ ಕಾರಣದಿಂದಲೂ ಹಿಂಸೆಗೆ ಅವಕಾಶವಾಗುವಂತೆ ನಡೆದುಕೊಳ್ಳಬಾರದೆಂದೂ ಭೋದಿಸುತ್ತಿದ್ದರು.

ಶ್ರೀ ಜಿ.ವಿ.ನಾ.ರವರ ಸಮರ್ಥನೀಯ ಮಾರ್ಗದರ್ಶನವಿದ್ದುದರಿಂದ ಯಾವ ದುರ್ಘಟನೆಗಳೂ ನಡೆಯದೆ ಪ್ರಾಣಾಪಾಯವೂ ಆಗದೆ ಗಾಂಧೀಜಿಯವರ ಮಹೋನ್ನತ ತತ್ವಕ್ಕೆ ಅನುಗುಣವಾಗಿ ಕೊನೆಯುವರೆವಿಗೂ 1942ರಲ್ಲಿ ಸತ್ಯಾಗ್ರಹ ಶಾಂತಿ, ಶಿಸ್ತು ಅಹಿಂಸೆಯಿಂದ ನಡೆಯಿತೆಂಬುದು ಅಭಿಮಾನದ ಸಂಗತಿ. ಜಿ.ವಿ.ನಾ.ರವರ ಚಳುವಳಿ ಯಲ್ಲಿ ತತ್ವವಿತ್ತು—ದೃಢತೆಯಿತ್ತು.

## 1943ರಿಂದ 1946ರ ವರೆಗೆ

1942ರಲ್ಲಿ ಕ್ರಾಂತಿಯುತವಾಗಿ ನಡೆಸಿದ ಸ್ವಾತಂತ್ರ್ಯ ಹೋರಾಟದಿಂದ ಬ್ರಿಟಿಷ್ ಸರ್ಕಾರ ನಡುಗಿ ಹೋಗಿತ್ತು. ಆದರೂ ಸ್ವಾತಂತ್ರ್ಯವನ್ನು ಕೊಡಲು ಪೂರ್ಣವಾಗಿ ಅವರು ಒಪ್ಪಿರಲಿಲ್ಲ. ಅಖಿಲ ಭಾರತ ಕಾಂಗ್ರೆಸ್ ಮಹಾ ಸಂಸ್ಥೆಯೊಂದಿಗೆ ಬ್ರಿಟಿಷ್ ಸರ್ಕಾರ ಸಂಧಾನಗಳನ್ನು ಮುಂದುವರಿಸುತ್ತಲಿತ್ತು.

ಸ್ವಾತಂತ್ರ್ಯ ಸಂಘಟನಾ ಕಾರ್ಯ ತೀವ್ರಗತಿಯಲ್ಲಿ ರಾಷ್ಟ್ರದ ಎಲ್ಲಾ ಕಡೆಗಳಲ್ಲೂ ನಡೆಯಬೇಕೆಂದೂ ಹೋರಾಟಕ್ಕೆ ಜನರನ್ನು ಸಿದ್ಧಗೊಳಿಸಬೇಕೆಂದೂ ಗಾಂಧೀಜಿಯವರು ಕರೆಕೊಟ್ಟಿದ್ದರು. ಮೇಲಿಂದ ಮೇಲೆ ಸೂಚನೆಗಳನ್ನು ಕೊಡುತ್ತಿದ್ದರು. ಪೂಜ್ಯ ಬಾಪೂಜಿಯವರಿಂದ ವೃತ್ತ ಪತ್ರಿಕೆಗಳ ಮೂಲಕ ಬರುತ್ತಿದ್ದ ಸೂಚನೆಗಳನ್ನೆಲ್ಲ ಶಾಸನವೆಂಬಂತೆ ಪರಿಗಣಿಸಿ ಗೌರವದಿಂದ ಸ್ವಾಗತಿಸಲಾಗುತ್ತಿತ್ತು.

ಮಾನ್ಯ ಶ್ರೀ ಜಿ.ವಿ.ನಾ.ರವರು ಈ ಕ್ಷೇತ್ರದಲ್ಲಿ ಸ್ವಾತಂತ್ರ್ಯ ಸಂಘಟನಾ ಕಾರ್ಯ ಚಟುವಟಿಕೆಗಳನ್ನು ತಮ್ಮದೇ ಆದ ವಿಶಿಷ್ಟ ರೀತಿಗಳಲ್ಲಿ ಮುಂದುವರಿಸಿದರು. ಅದಕ್ಕೆ ಅವರು ಕಂಡುಕೊಂಡ ಮಾರ್ಗ—

ಗಾಂಧೀಜಯಂತಿ ಸಪ್ತಾಹ ಕಾರ್ಯಕ್ರಮ. ದಿವಂಗತ ಸಿ. ಎಸ್. ತಮ್ಮಯ್ಯನವರ ವಿಶಾಲವಾದ ಆಶ್ರಮದ ಮೈದಾನದಲ್ಲಿ ಇವರ ಕಾರ್ಯಾಚರಣೆ ಪ್ರತಿದಿನ ಇಬ್ಬರು ಹೊರಗಿನ ಭಾಷಣಕಾರರು. ಹರಿಜನೋದ್ಧಾರ ಕುರಿತು ಒಬ್ಬರು ಭಾಷಣ ಮಾಡಿದರೆ ಮತ್ತೊಬ್ಬರು ಸ್ವಾತಂತ್ರ್ಯಸಂಘಟನೆ ಕುರಿತು ಉಪನ್ಯಾಸ ಮಾಡಬೇಕೆಂಬ ನಿಯಮ. ಹಿಂದೂ ಮುಸ್ಲಿಂ ಐಕ್ಯತೆ, ಖಾದಿ ಮತ್ತು ಗ್ರಾಮೋದ್ಯೋಗ, ವೀರ ಭಗತ್‌ಸಿಂಗರ ಬಲಿದಾನ, ನೇತಾಜಿ ಸುಭಾಸ್ ಚಂದ್ರಬೋಸರ (I.N.A.) ಭಾರತ ರಾಷ್ಟ್ರೀಯ ಸೇನೆ, ಬ್ರಿಟಿಷರ ಕ್ರೂರ ಆಡಳಿತದ ವರ್ಣನೆ ಇವು ಆ ದಿನಗಳ ಭಾಷಣಗಳ ವಿಷಯವಾಗಿರುತ್ತಿತ್ತು. ಈ ಮಹನೀಯರುಗಳ ಉಪನ್ಯಾಸಗಳು ಜನಜಾಗೃತಿಯನ್ನು ಅತ್ಯಂತ ಪರಿಣಾಮಕಾರಿಯಾಗಿ ಮಾಡಿದುವು ಎಂಬುದಕ್ಕೆ ಹಳ್ಳಿಯ ಜನಸಾಮಾನ್ಯರು ಈ ಕಾರ್ಯಕ್ರಮಗಳಲ್ಲಿ ಹೆಚ್ಚು ಹೆಚ್ಚು ಭಾಗವಹಿಸುತ್ತಿದ್ದುದೇ ಸಾಕ್ಷಿ.

ಮಹಾತ್ಯಾಗಿಗಳೂ, ಧೀಮಂತ ಹೋರಾಟಗಾರರೂ ಸ್ವಾತಂತ್ರ್ಯ ಶಿಲ್ಪಿಗಳೂ, ಹೆಸರಾಂತ ಸಾಹಿತಿಗಳೂ ರಚನಾತ್ಮಕ ಕಾರ್ಯಕರ್ತರುಗಳೂ ಆದ ಮಾನ್ಯಶ್ರೀ ಟಿ. ಸುಬ್ರಹ್ಮಣ್ಯಂ, ಕೆ. ಟಿ. ಭಾಷ್ಯಂ, ಕೆ. ಪಟ್ಟಾಭಿರಾಮನ್, ಸಿದ್ಧವನಹಳ್ಳಿ ಕೃಷ್ಣಶರ್ಮ, ಆರ್ಶಿ ಆದರಾಜಯ್ಯ ಮುಂತಾದ ಅನೇಕ ಜನ ಮುಖಂಡರು ಗಾಂಧಿ ಜಯಂತಿ ಸಪ್ತಾಹ ಮಹೋತ್ಸವದಲ್ಲಿ ಭಾಗವಹಿಸಿದ್ದರು. ಶ್ರೀ ಜಿ.ವಿ.ನಾ.ರವರು ಇಂತಹವರಿಂದ ಭಾಷಣ ಮಾಡಿಸುವುದರ ಮೂಲಕ ಹೆಚ್ಚಿನ ಸಂಘಟನಾ ಕಾರ್ಯ ಮಾಡುತ್ತಿದ್ದರು.

ಪ್ರತಿದಿನ ಧ್ವಜ ಹಿಡಿದು ಊರೆಲ್ಲಾ ಮೆರವಣಿಗೆ ಮಾಡಲಾಗುತ್ತಿತ್ತು. ಮಾಮೂಲಿನಂತೆ ಜಯಘೋಷ, ರಾಷ್ಟ್ರೀಯ ಗೀತೆಗಳನ್ನು ಹಾಡಿಸಲಾಗುತ್ತಿತ್ತು. ಸಪ್ತಾಹ ಕಾರ್ಯಕ್ರಮಗಳು ಜರುಗುವ ಸ್ಥಳದಲ್ಲಿ ರಾಷ್ಟ್ರೀಯ ಭಾವನೆ ಎದ್ದು ಕಾಣುವಂತೆ ಗಾಂಧೀಜಿ ಮುಂತಾದ ನಾಯಕರುಗಳ ಭಾವಚಿತ್ರಗಳ ಪ್ರದರ್ಶನಗಳೊಂದಿಗೆ ವಿಶಿಷ್ಟವಾದ ರೀತಿಯಲ್ಲಿ ಅಂದವಾದ ಚಪ್ಪರಗಳನ್ನು ನಿರ್ಮಿಸಲಾಗುತ್ತಿತ್ತು. ಈ ಎಲ್ಲಾ ಏರ್ಪಾಡುಗಳನ್ನು ಅತ್ಯಂತ ಉತ್ಸಾಹದಿಂದ ಮಾಡುವಂತಹ ಸ್ವಯಂಸೇವಕರ ತಂಡವನ್ನು ಶ್ರೀ ಜಿ.ವಿ.ನಾ.ರವರು ನಿರ್ಮಿಸಿದ್ದರು.

ಹೀಗೆ ಸ್ವಾತಂತ್ರ್ಯ ಸಂಪಾದನೆಯಾಗುವ ತನಕ ಪ್ರತಿವರ್ಷವೂ ಗಾಂಧೀ ಜಯಂತಿ ಸಪ್ತಾಹಗಳನ್ನು ಆಚರಿಸುವುದರ ಮೂಲಕ ಸ್ವಾತಂತ್ರ್ಯ ಹೋರಾಟದ ಸಂಘಟನಾ ಕಾರ್ಯವನ್ನು ಶ್ರೀ ಜಿ.ವಿ.ನಾ.ರವರು ಮಾಡಿದರು.

ಜಯಂತಿಯ ಮಹೋತ್ಸವ ಮಾತ್ರವಲ್ಲ ಇತರ ದಿನಗಳಲ್ಲಿ ಹಳ್ಳಿಗಳಿಗೆ ಹರಿಜನರ ಕೇರಿಗಳಿಗೆ ಹೋಗಿ ಪ್ರಚಾರ ಕಾರ್ಯಗಳನ್ನು ಮಾಡುವುದೂ ಜಿ.ವಿ.ನಾ.ರವರ ಕಾರ್ಯ ಕ್ರಮವಾಗಿತ್ತು. ಶ್ರೀ ರಾಮಸ್ವಾಮಿ ಮುಂತಾದ ಅನೇಕ ಲಾವಣಿಕಾರರಿಂದ ಲಾವಣಿ ಹೇಳಿಸುವುದರ ಮೂಲಕ ಜನರಲ್ಲಿ ಉತ್ಸಾಹ ಹೆಚ್ಚಿಸಲಾಗುತ್ತಿತ್ತು.

1947ರಲ್ಲಿ ಜವಾಬ್ದಾರಿ ಸರ್ಕಾರ ನಿರ್ಮಾಣಕ್ಕಾಗಿ ಮೈಸೂರು ರಾಜ್ಯದಲ್ಲಿ ಸತ್ಯಾಗ್ರಹಗಳು ಪ್ರಾರಂಭವಾದ ತಕ್ಷಣ ಚಿಕ್ಕನಾಯ್ಕನಹಳ್ಳಿಯಲ್ಲಿಯೂ ಶ್ರೀ ಜಿ.ವಿ.ನಾ. ರವರ ನಾಯಕತ್ವದಲ್ಲಿ ಹೋರಾಟಗಳು ಪ್ರಾರಂಭವಾದವು.

ಪೊಲಿಗೆ ಕೆಲಸ ಮಾಡುತ್ತಿದ್ದ ಜೈಹಿಂದ್ ಟೈಲರಿಂಗ್ ಹಾಲನ್ನು ಸತ್ಯಾಗ್ರಹ ಶಿಬಿರವನ್ನಾಗಿ ಪರಿವರ್ತನೆ ಮಾಡಿದರು. ಊರಿನ ಜನರೆಲ್ಲ ಸತ್ಯಾಗ್ರಹ ಶಿಬಿರದಲ್ಲಿ ಉತ್ಸಾಹದಿಂದ ಭಾಗವಹಿಸುತ್ತಿದ್ದರು. ಶಿಬಿರದ ವಿಶಾಲವಾದ ಮೈದಾನದಲ್ಲಿ ಧ್ವಜಕ್ಷೇತ್ರ ನಿರ್ಮಿಸಲಾಗಿತ್ತು. ಸರ್ಕಾರ ವಿಧಿಸಿದ್ದ 145ನೇ ನಿಯಮವನ್ನು ಉಲ್ಲಂಘಿಸಿ ಜೈಲಿಗೆ ಹೋಗುವ ಸತ್ಯಾಗ್ರಹಿಗಳಿಗೆ ಹಾರಗಳನ್ನು ಹಾಕಿ ಮೆರವಣಿಗೆ ಮಾಡಲಾಗುತ್ತಿತ್ತು. ಜೈಲಿಗೆ ಹೋಗುವ ನೂರಾರು ಉತ್ಸಾಹಶಾಲಿಗಳನ್ನು ತಡೆದು ಪ್ರತಿದಿನ ನಾಲ್ಕು ಅಥವಾ ಎಂಟು ಜನರನ್ನು ಮಾತ್ರ ಕಳುಹಿಸಲಾಗುತ್ತಿತ್ತು. ಜೈಲಿಗೆ ಹೋಗುವವರ ಸಂಖ್ಯೆ ದಿನೇ ದಿನೇ ಹೆಚ್ಚುತ್ತಿತ್ತು. ಸತ್ಯಾಗ್ರಹದ ಖರ್ಚುಗಳಿಗಾಗಿ ಧ್ವಜಾರೋಹಣ ಸಭೆಯಲ್ಲಿ ಹಣದ ಸಹಾಯ ದೊರೆಯುತ್ತಿತ್ತು. ಜೇಬಿನಲ್ಲಿ ಹಣ ಇಲ್ಲದವರು ತಮ್ಮ ಕೈಯಲ್ಲಿದ್ದ ಚಿನ್ನದ ಉಂಗುರಗಳನ್ನು ಎಸೆಯುತ್ತಿದ್ದುದು, ಉಂಗುರ ಗಳನ್ನು ಹರಾಜು ಹಾಕುತ್ತಿದ್ದುದು ಆ ಉತ್ಸಾಹಕ್ಕೆ ನಿದರ್ಶನವೆನ್ನಬೇಕು. ಕಾರ್ಯ ಕರ್ತರಿಗೆ ಮಹಿಳೆಯರು ಉಪಹಾರ ಸಿದ್ಧಮಾಡಿಕೊಡುತ್ತಿದ್ದರು.

ತಾಲ್ಲೂಕ್ ಕಛೇರಿಯ ಮುಂಭಾಗದಲ್ಲಿ ಚಳುವಳಿ ಶಾಂತಿ ಶಿಸ್ತಿನಿಂದ ಪ್ರಾರಂಭ ವಾಗಿತ್ತು. ಆಫೀಸಿನ ಒಳಕ್ಕೆ ಒಬ್ಬ ನೌಕರನನ್ನೂ ಬಿಡದಂತೆ ಬಾಗಿಲಿನಲ್ಲಿ 50 ಜನಗಳ ವರೆಗೆ ಕುಳಿತು ಶ್ರೀರಾಮ ಭಜನೆ ನಡೆಸಲಾಗುತ್ತಿತ್ತು. ಇರುತ್ತಿದ್ದ ಸ್ವಲ್ಪ ಖಾಲಿ ಜಾಗದಲ್ಲಿ ಪಾದ ಊರಿ ಒಳಗಡೆ ಹೋಗಲು ತಹಸೀಲ್‌ದಾರರು ಮತ್ತು ನೌಕರರು ಪ್ರಯತ್ನ ಮಾಡುತ್ತಿದ್ದರು. ಪಾದ ಊರಿ ಹೋಗುವ ಜಾಗಗಳಲ್ಲಿ ಎದೆ ಚಾಚಿ ಸತ್ಯಾಗ್ರಹಿಗಳು ಮಲಗುತ್ತಿದ್ದರು. ಮನಸ್ಸು ಕರಗಿ ಅಧಿಕಾರಿಗಳು ಹಿಂದಿರುಗು ತ್ತಿದ್ದರು. ಶ್ರೀ ಜಿ.ವಿ.ನಾ.ರವರು ಸ್ಥಾಪಿಸಿರುವ ವಿದ್ಯಾಪೀಠದ ವಿದ್ಯಾರ್ಥಿ ಸತ್ಯಾಗ್ರಹಿಗಳು ಸೇವಾದಳದ ಸಮವಸ್ತ್ರ ಧರಿಸಿ 40 ಜನಗಳ ಗುಂಪುಗಳಾಗಿ ತಾಲ್ಲೂಕ್ ಕಛೇರಿ ಮೈದಾನದ ಎಲ್ಲ ಕಡೆಯೂ ತುಂಬಿಕೊಂಡರು. ಊರಿನ ಇತರ ಯುವಕರೂ

ಶಿಸ್ತಿನ ಸಿಪಾಯಿಗಳಂತೆ ಗುಂಪುಗುಂಪುಗಳಾಗಿ ಬಂದು ಸೇರಿದರು. ಈ ಗುಂಪಿನ ಯುವಕರೆಲ್ಲರೂ ಗೀತೆಗಳನ್ನು ಹಾಡುತ್ತ ಶಿಸ್ತಿನಿಂದ ನಡೆಯುತ್ತಿದ್ದರು. ತರಪೇತು ಹೊಂದಿದ ಸೈನಿಕರು ಯುದ್ಧ ಮೈದಾನದಲ್ಲಿ ಮಾಡಿದಂತೆ ಚಟುವಟಿಕೆಗಳನ್ನು ನಡೆಸುತ್ತ ಆಫೀಸಿನ ಬಾಗಿಲಿನಲ್ಲಿ ಕುಳಿತು ಸತ್ಯಾಗ್ರಹ ಮಾಡುತ್ತಿದ್ದವರಿಗೆ ಮೇಲಿಂದ ಮೇಲೆ ಉತ್ಸಾಹವನ್ನು ತುಂಬುತ್ತಿದ್ದರು ಜಿ.ವಿ.ನಾ. ಕೆಲವು ಚಳುವಳಿಗಾರರು ಸಮ ಉಡುಪು ಧರಿಸಿ ಲಾಠಿ ಹಿಡಿದು ಪಹರೆ ಮಾಡುತ್ತಿದ್ದರು. ಮತ್ತೆ ಕೆಲವರು ಲಾಠಿ ಹಿಡಿದು ಅಲ್ಲಲ್ಲೆ ನಿಂತು ಸೂಚನೆಗಳನ್ನು ಕೊಡುತ್ತಿದ್ದರು. ಕೆಲವು ಅಧಿಕಾರಿಗಳು ನುಸುಳಿಕೊಂಡು ಒಳಗೆ ಹೋಗಲು ಪ್ರಯತ್ನಗಳನ್ನು ಮಾಡುತ್ತಿದ್ದರು. ಅವರುಗಳ ಪ್ರಯತ್ನ ಯಶಸ್ವಿಯಾಗದಂತೆ ದೂರದಲ್ಲೆ ಲಾಠಿ ಹಿಡಿದು ನಿಂತಿರುತ್ತಿದ್ದ ಹೋರಾಟಗಾರರು 'ಎಚ್ಚರಿಕೆ', 'ಎಚ್ಚರಿಕೆ' ಎಂದು ದೊಡ್ಡ ಧ್ವನಿಯಲ್ಲಿ ಸೂಚನೆಗಳನ್ನು ಕೊಡುತ್ತಿದ್ದರು. ಶಾಂತಿ, ಶಿಸ್ತು, ಅಹಿಂಸೆಯಿಂದ ಕೂಡಿ ಮೈನವಿರೇಳುವಂತೆ ನಡೆಯುತ್ತಿದ್ದ ಸ್ವಾತಂತ್ರ್ಯ ಹೋರಾಟವ ಅಮೋಘ ದೃಶ್ಯವಾಗಿತ್ತು ಅದು. ಈ ಹೋರಾಟ ನೋಡುತ್ತ ನಿಂತಿದ್ದ ಸಾರ್ವಜನಿಕರಲ್ಲೂ ಕೆಚ್ಚು ಮೂಡಿ ತಾವೂ ಸತ್ಯಾಗ್ರಹದಲ್ಲಿ ಪಾಲ್ಗೊಳ್ಳುವಂತೆ ಪ್ರೇರೇಪಿಸುತ್ತಿತ್ತು.

ರಮಣೀಯವೂ, ರೋಮಾಂಚಕಾರಿಯೂ ಆಗಿ ನಡೆಯುತ್ತಿದ್ದ ಸತ್ಯಾಗ್ರಹ ಹೋರಾಟಗಳನ್ನು ವೀಕ್ಷಿಸಲು ಊರಿನ ಮತ್ತು ತಾಲ್ಲೂಕಿನ ವಿವಿಧ ಗ್ರಾಮಗಳಿಂದ ಮಹಿಳೆಯರೂ, ಮುದಿಯರೂ ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಬಂದು ಸೇರುತ್ತಿದ್ದರು.

ಸತ್ಯಾಗ್ರಹ ಮಾಡುತ್ತಿದ್ದವರಿಗೆ ಸ್ವಾತಂತ್ರ್ಯಾಭಿಮಾನದಿಂದ ತಿಂಡಿ, ತಿನಸು, ಹಣ್ಣು ಇತ್ಯಾದಿಗಳನ್ನು ಧಾರಾಳವಾಗಿ ತಾವೇ ತಾವಾಗಿ ಒದಗಿಸುತ್ತಿದ್ದರು.

ಯಾವ ದುರ್ಘಟನೆಗಳಿಗೂ ಅವಕಾಶ ಕೊಡದೆ ಶಾಂತಿ, ಶಿಸ್ತು ಮತ್ತು ಅಹಿಂಸಾ ಮಾರ್ಗಗಳಲ್ಲಿ ಅತ್ಯಂತ ಆದರ್ಶ ರೀತಿಯಲ್ಲಿ ಶ್ರೀ ಜಿ. ವಿ. ನಾರಾಯಣಮೂರ್ತಿಗಳು ಸತ್ಯಾಗ್ರಹ ನಡೆಸಿ ಬಂಧನಕ್ಕೊಳಗಾದರು.

ಶ್ರೀ ಜಿ.ವಿ.ನಾ.ರವರ ಬಂಧನದನಂತರವೂ ಅವರ ಮಾರ್ಗದರ್ಶನದಂತೆ ಸತ್ಯಾಗ್ರಹ ಮುಂದುವರಿಯಿತು.

ಮಹಿಳೆಯರು ಸಹ ಜೈಲಿಗೆ ಹೋಗಲು ಸಿದ್ಧರಾಗಿ ತಾಲ್ಲೂಕು ಕಛೇರಿ ಕಟ್ಟಡದ ಮೇಲಕ್ಕೆ ಹತ್ತಿ ಕಾಂಗ್ರೆಸ್ ಧ್ವಜವನ್ನು ಸಾಹಸದಿಂದ ಹಾರಿಸಿದರು.

ತಾಲ್ಲೂಕು ಕಛೇರಿಯ ಮುಂಭಾಗದಲ್ಲಿದ್ದ ಶ್ರೀಗಂಧದ ಮರವನ್ನು ಕತ್ತರಿಸಿ ಹರಾಜು ಮಾಡಲು ಹೋಗಿ ಅನೇಕ ಜನ ಬಂಧನಕ್ಕೊಳಗಾಗಿ ವಿವಿಧ ಜೈಲುಗಳನ್ನು ಸೇರಿದರು.

ಹೀಗೆ ಪ್ರಚಂಡ ಜನಶಕ್ತಿ ನಿರ್ಮಿಸಿ ಪೂಜ್ಯ ಬಾಪೂಜಿಯವರ ಮಾರ್ಗದರ್ಶನ ದಂತೆಯೆ ಅಹಿಂಸೆ, ಶಾಂತಿ, ಶಿಸ್ತಿನಿಂದ ಅತ್ಯಂತ ಆದರ್ಶ ರೀತಿಯಲ್ಲಿ ಶ್ರೀ ಜಿ.ವಿ.ನಾ. ರವರು ಸ್ವಾತಂತ್ರ್ಯ ಹೋರಾಟಗಳನ್ನು ಜಯಪ್ರದವಾಗಿ ನಡೆಸಿದರು.

ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಸಾವಿರಾರು ಮಂದಿಯಲ್ಲಿ ಒಬ್ಬರು ಜಿ.ವಿ.ನಾ. ಬೆಳೆಗೆಕೆಯ ದಿಟ್ಟತನದ ಧುರೀಣರ—ಮಾರ್ಗದರ್ಶಕರ ಸಾಲಿಗೆ ಸೇರಿದವರು ಅವರು ಎಂಬುದನ್ನು ಪ್ರತ್ಯಕ್ಷವಾಗಿ ಕಂಡ ನಾವು ಧನ್ಯರೆನಿಸುತ್ತದೆ ಅವರ ಆ ಕಾರ್ಯ ನಮ್ಮನ್ನಿಂದು ಸ್ಫೂರ್ತಿಯಿಂದ ಮೂಕನನ್ನೂ ವಾಚಾಳನನ್ನಾಗಿ ಮಾಡುವಂತಾಗಿದೆ. ಆ ನೆನಪುಗಳು ಅಚ್ಚಳಿಯದೆ ಉಳಿದಿವೆ.

—000—

ಪ
ಥಿ
ಕ

# ಸಮಾಜಸೇವಕ ಜಿ.ವಿ.ನಾ.

**ಹೆಚ್. ವಿ. ಸುಬ್ಬರಾಮಯ್ಯ**

ಸಮಾಜ ಸೇವೆ ಮತ್ತು ಸಾರ್ವಜನಿಕರ ಸೇವೆ ಭಾರತಕ್ಕೆ ಹೊಸದೇನೂ ಅಲ್ಲ ಸಹಸ್ರಾರು ವರ್ಷಗಳಿಂದ ಇದು ನಡೆಯುತ್ತಲೇ ಇದೆ. ಅನೇಕ ಪ್ರಾಂತಗಳಲ್ಲಿ ಇದು ಸದ್ದುಗದ್ದಲವಿಲ್ಲದೆ ನಡೆದುಕೊಂಡು ಬಂದಿದೆ.

ಭಾರತಕ್ಕೆ ಬ್ರಿಟಿಷರು ಬರುವ ಮೊದಲು ಅನಂತರ ಇದ್ದ ಸಮಾಜದ ಸ್ಥಿತಿ ಮತ್ತು ಜನರ ಸ್ಥಿತಿಯನ್ನು ನೋಡಿದರೆ ಅಲ್ಲೊಬ್ಬ ಇಲ್ಲೊಬ್ಬ ಸಣ್ಣ ಪುಟ್ಟ ರಾಜರು ಪರ ದೇಶೀಯರನ್ನು ಓಡಿಸಲು ಧೈರ್ಯದಿಂದ ಕಾದಿದ ಪ್ರಸಂಗ ಚರಿತ್ರೆಯಲ್ಲಿ ಕಂಡು ಬರುತ್ತದೆ. ಆದರೆ ಭಾರತಾದ್ಯಂತ ಹರಡಿದ್ದ ಅನೈಕ್ಯತೆ, ಅನಕ್ಷರತೆಯ ನಿರ್ಮೂಲನ. ಮೂಢನಂಬಿಕೆಯ ನಿರ್ಮೂಲನ ಇವೇ ಮುಂತಾದ ಕಾರ್ಯಗಳಿಗೆ ಅಖಂಡ ಭಾರತದ ನಾಯಕತ್ವ !ವಹಿಸಿ ಸಾಮೂಹಿಕವಾಗಿ ಸಮಾಜಸೇವೆ ಕೆಲಸ ಪ್ರಾರಂಭವಾದದ್ದು ಗಾಂಧೀಜಿ ಭಾರತದಲ್ಲಿ ರಾಜಕೀಯ ರಂಗವನ್ನು ಪ್ರವೇಶಿಸಿದನಂತರವೇ.

ರಾಮಕೃಷ್ಣಾಶ್ರಮಗಳು, ಪ್ರೊ॥ ಕರ್ವೆ, ಈಶ್ವರಚಂದ್ರ ವಿದ್ಯಾಸಾಗರರು, ರಾಜಾರಾಂ ಮೋಹನರಾಯ ಮುಂತಾದ ಸಂಸ್ಥೆ ಮತ್ತು ಮಹಾನ್ ವ್ಯಕ್ತಿಗಳು ಸಮಾಜ ಸೇವೆಗೆ ತೊಡಗಿ ಸಹಗಮನ ಪದ್ಧತಿಯ ನಿರ್ಮೂಲನೆಗೆ, ಮಹಿಳೆಯರ ಉನ್ನತಿಗೆ ಶ್ರಮಿಸಿದುದು ಇವೇ ಮುಂತಾದುವು ಕಂಡುಬರುತ್ತವೆ. ದಕ್ಷಿಣ ಆಫ್ರಿಕಾದಿಂದ ಗಾಂಧೀಜಿ ಭಾರತಕ್ಕೆ ವಾಪಸ್ ಬಂದನಂತರ ಶ್ರೀ ಗೋಪಾಲಕೃಷ್ಣ ಗೋಖಲೆ ಮತ್ತು ಶ್ರೀ ತಿಲಕರವರ ಸಲಹೆ ಪಡೆದು ಗಾಂಧೀಜಿ ಸಕ್ರಿಯವಾಗಿ ರಾಜಕೀಯವನ್ನು ಪ್ರವೇಶಿಸಿದ ಅನಂತರ ಭಾರತಾದ್ಯಂತ 2–3 ಸಲ ಪ್ರವಾಸ ಮಾಡಿದರು. ಬ್ರಿಟಿಷರು ಎಲ್ಲಿಯವರೆಗೆ ಭಾರತದಲ್ಲಿರುವರೋ ಅಲ್ಲಿಯ ತನಕ ಭಾರತದ ಪ್ರಸ್ತುತ ಸಮಾಜದ ಉದ್ಧಾರ ಮತ್ತು ಭಾರತೀಯರ ಸ್ಥಿತಿಗತಿಯ ಉದ್ಧಾರ ಸಾಧ್ಯವಿಲ್ಲ ಎಂಬುದನ್ನು ಮನಗಂಡರು. ಬ್ರಿಟಿಷರನ್ನು ಇಲ್ಲಿಂದ ಓಡಿಸಲು ಭಾರತೀಯರೆಲ್ಲರ ಸಂಘಟನೆಗೆ ಹಾಗೆಯೇ ಆಗ ಅಜ್ಞಾನ ಮೂಢನಂಬಿಕೆಗಳಿಂದ ಆವರಿಸಿದ್ದ ಜನರ ಮನಃಪರಿವರ್ತನೆಗೆ ಹರಿಜನರ ಉದ್ಧಾರಕ್ಕೆ ಶ್ರಮಿಸಲು ಪ್ರಾರಂಭಿಸಿದರು. ಇಲ್ಲಿಂದ ಸಮಾಜಸೇವೆ ಮಾಡುವವರಿಗೆ ಒಂದು ನಿರ್ದಿಷ್ಟವಾದ ಕಾರ್ಯ ಮತ್ತು ಯೋಜನೆ ದೊರೆಯಿತು. ಒಂದು ಹೊಸ ತಿರುವು ಸಮಾಜಸೇವೆಗೆ ಮೂಡಿತು.

ಗಾಂಧೀಜಿ ಸಮಾಜ ಸೇವೆಯ ಕಾರ್ಯವನ್ನು ರಚನಾತ್ಮಕ ಕಾರ್ಯವೆಂದು ಕರೆದು 14 ಅಂಶಗಳನ್ನೊಳಗೊಂಡ ವಿಧಾಯಕ ಕಾರ್ಯಗಳನ್ನು ಸಲಹೆ ಮಾಡಿ

ದೇಶದ ಮುಂದಿಟ್ಟರು. ಇದರ ಜೊತೆಗೆ ತಮ್ಮ ರಾಜಕೀಯ ವಿಷಯಗಳ ಪ್ರಚಾರ, ಕಾಂಗ್ರೆಸ್ ಸಂಸ್ಥೆಯನ್ನು ಬಲಪಡಿಸುವುದು ಅಲ್ಲದೆ ಈ ಎಲ್ಲ ಕಾರ್ಯಗಳಿಗೆ ಶ್ರೀ ನಾರಾಯಣಮೂರ್ತಿಯವರಂತಹ ಸಹಸ್ರಾರು ಕಾರ್ಯಕರ್ತರಿಗೆ ಗಾಂಧೀಜಿ ಕರೆ ನೀಡಿ ಅವರನ್ನು ಸಮಾಜ ಸೇವೆಗೆ ಅಥವಾ ರಚನಾತ್ಮಕ ಕಾರ್ಯದಲ್ಲಿ ತೊಡಗಿಸಿದರು.

1920ರಿಂದ 1942ರ ವರೆಗೆ ಭಾರತದ ಎಲ್ಲಾ ಪ್ರಾಂತಗಳಲ್ಲೂ ಸಮಾಜ ಸೇವೆಯ ಕಾರ್ಯ ಉನ್ನತ ಮಟ್ಟದಲ್ಲಿ ನಡೆಯಿತು. ಈ ಎಲ್ಲ ಕೆಲಸಗಳಿಗೂ ಪ್ರಚಾರ ನೀಡುವುದು, ರಚನಾತ್ಮಕ ಕಾರ್ಯಕರ್ತರು ಅಥವಾ ಸಮಾಜಸೇವಕರಿಗೆ ತಿಳುವಳಿಕೆ ನೀಡುವುದು ಮತ್ತು ಗಾಂಧೀಜಿ ರಾಜಕೀಯ ಅಭಿಪ್ರಾಯಗಳನ್ನು ವಿವರವಾಗಿ ಪ್ರಕಟಿಸುವುದು ಇದಕ್ಕಾಗಿ "ಹರಿಜನ" ಪತ್ರಿಕೆ ಪ್ರಾರಂಭಿಸಿದರು. ಭಾರತಾದ್ಯಂತ ಹರಿ ಜನರ ಉದ್ಧಾರ ಕಾರ್ಯ ಮತ್ತು ಸಮಾಜದಲ್ಲಿ ತೀರಾ ಹಿಂದೆ ಉಳಿದಿದ್ದ ಇವರನ್ನು ಮನುಷ್ಯರನ್ನಾಗಿ ಮಾಡುವ ಪ್ರಯತ್ನ ಸಫಲವಾಗಿ ಈ ಪತ್ರಿಕೆಗೆ ಹರಿಜನ ಎಂದು ಹೆಸರಿಟ್ಟರು. ಹರಿಜನರ ಸೇವಾಕಾರ್ಯ ಗಾಂಧೀಜಿಗೆ ತುಂಬಾ ಪ್ರಿಯವಾಗಿತ್ತು. ತಾವೇ ಸ್ವತಃ ಹರಿಜನಕಾಲೋನಿಗೆ ಭೇಟಿ ಇತ್ತು ಅವರೊಂದಿಗೆ ಸಮಾಲೋಚಿಸಿ ಅವರ ಏಳಿಗೆಗೆ ಸೇವಾಕಾರ್ಯಗಳನ್ನು ಮಾಡುತ್ತಿದ್ದರು. ಸಮಾಜಸೇವಾಕಾರ್ಯಕರ್ತ ಹೇಗಿರ ಬೇಕು ಎಂಬುದನ್ನು ಗಾಂಧೀಜಿ ತಿಳಿಸಿರುವರು. ಸತ್ಯ. ಧರ್ಮ. ಅಹಿಂಸೆಯಲ್ಲಿ ಪೂರ್ಣ ನಂಬಿಕೆ, ಸರ್ವ ಧರ್ಮಗಳಲ್ಲೂ ಪೂರ್ಣ ನಂಬಿಕೆ, ಸರ್ವ ಜನರನ್ನೂ ಪರಸ್ಪರ ಸಮಾನತೆ ಯಿಂದ ಕಾಣುವುದು, ಅಕ್ಷರ ಪ್ರಚಾರ, ಗೃಹ ಕೈಗಾರಿಕೆಗಳಿಗೆ ಪ್ರೋತ್ಸಾಹ, ಖಾದಿ ಉತ್ಪತ್ತಿ ಮತ್ತು ತೊಡುವುದು. ಹರಿಜನರು ಹಿಂದುಳಿದವರ ಏಳಿಗೆಗೆ ನಿಷ್ಠೆಯಿಂದ ಪ್ರಯತ್ನ ಇವೇ ಮುಂತಾದುವನ್ನು ಗಾಂಧೀಜಿ ಭಾರತದ ಎಲ್ಲ ಸಮಾಜ ಕಾರ್ಯಕರ್ತರ ಮುಂದಿಟ್ಟರು. ಗಾಂಧೀಜಿ ಆಗಾಗ್ಗೆ ಭಾರತದ ಎಲ್ಲಾ ಪ್ರಾಂತ್ಯಗಳಲ್ಲಿ ಪ್ರವಾಸಮಾಡಿ ಸಮಾಜಸೇವಾಕಾರ್ಯಕರ್ತರೆಲ್ಲರ ಪರಿಚಯವಿಟ್ಟುಕೊಳ್ಳುತ್ತಿದ್ದರು. ಅವರಿಗೆ ಉದ್ಭವಿಸುವ ಸಮಸ್ಯೆಗಳಿಗೆ ಪರಿಹಾರ ಹೇಳಿ ಸಮಾಜಸೇವೆಯಲ್ಲಿ ಮುಂದುವರಿಯಲು ಪ್ರೋತ್ಸಾಹ ನೀಡಿದರು.

ಶ್ರೀ ಜಿ. ವಿ. ನಾರಾಯಣಮೂರ್ತಿಯವರು ಗಾಂಧೀಜಿ ಮಾರ್ಗದಲ್ಲಿ ಬಂದ ಒಬ್ಬ ಶಿಸ್ತಿನ ಸಿಪಾಯಿ ಅಥವಾ ಸಮಾಜಸೇವಾಕಾರ್ಯಕರ್ತರು. ತಮ್ಮ ಜೀವಿತ ವನ್ನು ಸಮಾಜದ ಸೇವೆಗೆ ಮುಡುಪಾಗಿಟ್ಟು ಚಿಕ್ಕನಾಯ್ಕನಹಳ್ಳಿಯಲ್ಲಿ ನೆಲಸಿ ರಾಷ್ಟ್ರೀಯ ವಿದ್ಯಾಶಾಲೆ ಪ್ರಾರಂಭಿಸಿದರು. ಶ್ರೀ ನಾರಾಯಣಮೂರ್ತಿಯವರ ನಡೆ ನುಡಿ ಅಹಿಂಸಾಮಾರ್ಗ ಸರ್ವಜನರನ್ನೂ ಆಕರ್ಷಿಸಿತು, ಶಾಲೆಯಿಂದ ಸಹಸ್ರಾರು ಜನ ಉನ್ನತ ಮಟ್ಟದಲ್ಲಿ ನಡೆಯುವ ವಿದ್ಯಾರ್ಥಿಗಳನ್ನು ತಯಾರು ಮಾಡಿ ಸಮಾಜಸೇವೆಗೆ ತೊಡಗಿಸಿದರು. ಇವರುಗಳು ಭಾರತಾದ್ಯಂತ ಅನೇಕ ಜವಾಬ್ದಾರಿ ಸ್ಥಾನಗಳಲ್ಲಿ ನಿಸ್ಪೃಹತೆಯಿಂದ ಸೇವೆ ಸಲ್ಲಿಸುತ್ತಿರುವರು. ಗಾಂಧೀಜಿ,–ಗಾಂಧೀ ಮಾರ್ಗದಲ್ಲಿ ಪೂರ್ಣ ನಂಬಿಕೆಯುಳ್ಳ ಶ್ರೀ ನಾರಾಯಣಮೂರ್ತಿಯವರಿಗೆ ಗಾಂಧೀಜಿ ಬಗ್ಗೆ ಪೂರ್ಣವಾದ,

ಶಾಶ್ವತವಾದ ಸೇವೆ ಸಲ್ಲಿಸಲು ಮೈಸೂರಿನಲ್ಲಿ ಮತ್ತೊಂದು ಅವಕಾಶ ಲಭಿಸಿತು. ಅದು ಗಾಂಧಿ ಸಾಹಿತ್ಯವನ್ನು ಅಧಿಕಾರಯುತವಾಗಿ, ಸಂಪೂರ್ಣವಾಗಿ ಸಾಮಾನ್ಯ ಜನತೆಗೆ ದೊರಕಿಸಲು ಕೈಗೊಂಡ ಪ್ರಕಟನಾ ಕಾರ್ಯ. ಈ ಕಾರ್ಯವನ್ನು ಶ್ರೀ ಯಾಮುನಾ ಚಾರ್ಯರ ಸಂಪಾದಕತ್ವದಲ್ಲಿ ಶ್ರದ್ಧೆ ಮತ್ತು ಸಂಪೂರ್ಣ ನಿಷ್ಠೆಯಿಂದ ನೆರವೇರಿಸಿದರು. ಗಾಂಧೀ ಸಾಹಿತ್ಯ ಮಾಲೆಯಲ್ಲಿ 19 ಸಂಪುಟಕ್ಕೂ ಮೇಲ್ಪಟ್ಟ ಗ್ರಂಥಗಳು ಬಂದುವು. ಈ ಸಾಹಿತ್ಯದಿಂದ ಕನ್ನಡ ಲೋಕಕ್ಕೆ ಸಂಪೂರ್ಣವಾಗಿ ಗಾಂಧೀಜಿಯ ಬರಹ, ಬರವಣಿಗೆಗಳು ಲಭ್ಯವಾದುವು. ಗಾಂಧೀಜಿ, ಗಾಂಧೀ ಮಾರ್ಗ, ಸಮಾಜಸೇವೆಗೆ ಉತ್ತಮವಾದ ಮಾರ್ಗದರ್ಶನ ಪ್ರಾಪ್ತಿಯಾಯಿತು. ಶ್ರೀ ನಾರಾಯಣಮೂರ್ತಿಯವರು ತಾವು ನೇರವಾಗಿ ಸಮಾಜ ಸೇವೆಯಲ್ಲಿ ತೊಡಗಿದುದಲ್ಲದೆ, ಗಾಂಧೀ ಸಾಹಿತ್ಯಮಾಲೆಯ ಪ್ರಕಟಣಾ ಕಾರ್ಯದಲ್ಲಿ ಪಾಲುಗೊಂಡು ಸಮಾಜ ಸೇವೆಗೆ ತೊಡಗಬೇಕೆಂದಿರುವ ಕಾರ್ಯಕರ್ತರಿಗೆ ಉತ್ತಮ ಮಾರ್ಗದರ್ಶನ ಮಾಡಿದ್ದಾರೆ.

ಈಗ ಇಳಿವಯಸ್ಸಿನಲ್ಲಿದ್ದು ಅಸ್ವಸ್ಥತೆಯಿಂದ ಇದ್ದರೂ ಸಮಾಜಕ್ಕೆ ಇನ್ನೂ ತನ್ನಿಂದ ಸೇವೆ ಸಲ್ಲಬೇಕಾದುದು ತುಂಬಾ ಇದೆ ಎಂಬ ಹಂಬಲ ಅವರಲ್ಲಿ ಇದ್ದೇ ಇದೆ. ಸೇವೆ ಸಲ್ಲಿಸುತ್ತೇನೆಂಬ ಕೆಚ್ಚು ಇದೆ.

ಶ್ರೀ ನಾರಾಯಣಮೂರ್ತಿಯವರಂತಹ ನಿಸ್ಪೃಹ ಸೇವಕರ ಅಗತ್ಯ ಸಮಾಜಕ್ಕೆ ಈಗ ತುಂಬಾ ಇದೆ. ಶ್ರೀ ನಾರಾಯಣಮೂರ್ತಿಯವರು ದೀರ್ಘಕಾಲ ನಮ್ಮೊಡನಿದ್ದು ಮಾರ್ಗದರ್ಶನ ಮಾಡಲಿ ಎಂದು ಹಾರೈಸುವುದು ನನ್ನ ಅವಶ್ಯ ಕರ್ತವ್ಯವೆಂದು ಭಾವಿಸಿದ್ದೇನೆ. ಅದಕ್ಕಾಗಿ ಸರ್ವಶಕ್ತನನ್ನು ಪ್ರಾರ್ಥಿಸುತ್ತೇನೆ.

—000—

ಪ
ಥಿ
ಕ

# ಆದರ್ಶ ಗುರು ಜಿ.ವಿ.ನಾ.

ಎಸ್. ಬಿ. ಮುತ್ತೇಗೌಡ

ಶಿಕ್ಷಣತಜ್ಞ, ಸಮಾಜಸೇವಕ, ಸರ್ವೋದಯ ಕಾರ್ಯಕರ್ತ, ಸಾಹಿತಿ, ಗಾಂಧೀವಾದಿ ಗೂಳೂರು ವೆಂಕಣ್ಣಾಚಾರ್ ನಾರಾಯಣಮೂರ್ತಿಯವರು ನನ್ನ ಗುರುಗಳು. 2–5–1912 ಇವರ ಜನ್ಮ ದಿನ. ಏಳು ದಶಕಗಳ ಸಾರ್ಥಕ ಜೀವನ ನಡೆಸಿದ್ದಾರೆ. ಒಂದು ವ್ಯಕ್ತಿಯ ಜೀವನವನ್ನು ಆಕಸ್ಮಿಕಗಳು ರೂಪಿಸುತ್ತವೆ ಎನ್ನುವ ಮಾತಿಗೆ ಇವರು ಒಂದು ಒಳ್ಳೆಯ ಉದಾಹರಣೆ. "ಕನ್ನಡ ಜನ ಜೀವನ" ಪತ್ರಿಕೆಯ ಉಪಸಂಪಾದಕರಾಗಿ ತಮ್ಮ ಸೇವಾವೃತ್ತಿಯನ್ನು ಆರಂಭಿಸಿದ ಜಿ. ವಿ. ನಾ. ಅವರು ಕನಕಪುರ ಸಮೀಪದ ಮರಳವಾಡಿ ಕೆರೆ ಕಟ್ಟುವಾಗ ಅಲ್ಲಿಗೆ ಕಾರಕೂನರಾಗಿ ಬಂದು ಸೇರಿದುದು ಒಂದು ಯೋಗಾಯೋಗ. ಅಲ್ಲಿ ಪರಿಚಿತರಾದ ಎಸ್. ಕರಿಯಪ್ಪನವರು ಸ್ನೇಹಿತರಾದರು. ಆ ಹೊತ್ತಿಗಾಗಲೇ ಕರಿಯಪ್ಪನವರು 'ದಯಾನಂದ' ವಿದ್ಯಾರ್ಥಿ ನಿಲಯವನ್ನು ಸ್ಥಾಪಿಸಿದ್ದರು. ಮಹರ್ಷಿ ದಯಾನಂದರ ಸತ್ಯಾರ್ಥ ಪ್ರಕಾಶಿಕೆಯನ್ನು ಓದಿದ್ದ ಜಿ.ವಿ.ನಾ.ರವರಿಗೆ ಈ ಹೆಸರು ತುಂಬ ಸಂತೋಷ ವನ್ನು ನೀಡಿತು. ಈ ಹೆಸರಿನಿಂದ ಅವರು ಎಷ್ಟು ಪ್ರಭಾವಿತರಾದರೆಂದರೆ ತಮ್ಮ ಒಬ್ಬನೇ ಮಗನಿಗೆ 'ದಯಾನಂದ' ಎಂದೇ ಹೆಸರಿಟ್ಟರು. ಕೆರೆಯ ಕೆಲಸ ಮುಗಿದು ಪೋಲೀಸ್ ಇಲಾಖೆಯಲ್ಲಿ ಗುಮಾಸ್ತರಾಗಿ ಕೆಲಸ ದೊರೆಯಿತು. ವಕೀಲ ವೃತ್ತಿಯನ್ನು ಅವಲಂಬಿ ಸುವ ಅಭಿಲಾಷೆಯಿಂದ ಪ್ಲೀಡರ್ ಪರೀಕ್ಷೆಗಳನ್ನು ಪಾಸು ಮಾಡಿದರು. ತುಮಕೂರಿನ ಪ್ರಸಿದ್ಧ ವಕೀಲರಾಗಿದ್ದ ದಿವಂಗತ ಕೆ. ರಂಗಯ್ಯಂಗಾರ್ಯರಲ್ಲಿ ಕೆಲಸ ಕಲಿಯುವಾಗ Lawyers are Liars ಎನ್ನುವ ಮಾತಿನಿಂದ ಪ್ರಭಾವಿತರಾಗಿ ಆ ವೃತ್ತಿಯನ್ನು ತೊರೆದರು.

ಜಿ. ವಿ. ನಾ. ಅವರು ಬಿ.ಎ. ಪದವೀಧರರು. ವಿದ್ಯಾಭ್ಯಾಸ ನಡೆಸುತ್ತಿರು ವಾಗಲೇ ರಾಷ್ಟ್ರೀಯ ಪ್ರಜ್ಞೆಯನ್ನು ಬೆಳೆಸಿಕೊಂಡಿದ್ದರು. ತಿಲಕ್ ದಿನಾಚರಣೆ, ಪಾನ ನಿರೋಧ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಲಾಟಿ ಏಟನ್ನು ತಿಂದಿದ್ದರು. ಮಹಾತ್ಮಾ ಗಾಂಧೀಜಿಯವರ ಹಿಂದ್ ಸ್ವರಾಜ್ಯ ಪುಸ್ತಕವನ್ನು ಓದಿ ಪ್ರಭಾವಿತರಾಗಿದ್ದರು. ವಕೀಲ ವೃತ್ತಿಯನ್ನು ಬಿಟ್ಟ ಮೇಲೆ 31–8–1937ರ 'ಹರಿಜನ' ಪತ್ರಿಕೆಯ ಸಂಚಿಕೆಯಲ್ಲಿ ಮಹಾತ್ಮಾ ಗಾಂಧಿಯವರು ಬರೆದ "ನಯೀ ತಾಲೀಂ" (ನೂತನ ಶಿಕ್ಷಣ) ಎನ್ನುವ ಲೇಖನವನ್ನು ಓದಿದರು. ಅದರಲ್ಲಿ ಗಾಂಧೀಜಿಯವರು ಪ್ರತಿಪಾದಿಸಿದ್ದ ಶಿಕ್ಷಣ ಕ್ರಾಂತಿ, ರಾಜಕೀಯ, ಆರ್ಥಿಕ, ನೈತಿಕ ಮೋಕ್ಷಗಳಿಂದ ಪ್ರಭಾವಿತರಾದರು. ತಮ್ಮ ಗೆಳೆಯ

ಎಸ್. ಕರಿಯಪ್ಪನವರಿಗೆ ಈ ಬಗ್ಗೆ ಪತ್ರ ಬರೆದರು. ಇದರ ಫಲವಾಗಿ ಗ್ರಾಮ ವಿದ್ಯಾ ಪ್ರಚಾರ ಸಂಘ 1938ರಲ್ಲಿ ರೂಪುಗೊಂಡಿತು. ಈ ಸಂಸ್ಥೆಗಾಗಿ ಎಸ್. ಕರಿಯಪ್ಪನವರು ತಮ್ಮ ಜೀವನ ಪರ್ಯಂತ ದುಡಿದರು. ಇಂದು ಕನಕಪುರದ ಗ್ರಾಮ ವಿದ್ಯಾ ಪ್ರಚಾರಕ ಸಂಘ ಒಂದು ಬೃಹತ್ ಸಂಸ್ಥೆಯಾಗಿ ಗ್ರಾಮೀಣ ಶಿಕ್ಷಣಕ್ಕೆ ಒಂದು ಮಾದರಿಯಾಗಿ ನಿಂತಿದೆ.

ಈ ಸಂಸ್ಥೆಯ ಆರಂಭದೆಸೆಯಲ್ಲಿ ಎಂದರೆ 1938ರಿಂದ ಎರಡೂವರೆ ವರ್ಷ ಕಾಲ ಜಿ. ವಿ. ನಾ. ರವರು ಕರಿಯಪ್ಪನವರೊಂದಿಗೆ ಹೆಗಲೆಣೆಯಾಗಿ ದುಡಿದರು. ಸುಬ್ಬರಾಯರು ತಮ್ಮ ಜಮೀನನ್ನು ದಾನ ಮಾಡಿದಾಗ ಕನಕಪುರ ಪೇಟೆಯಿಂದ ಜಮೀನಿಗೆ ದಯಾನಂದ ವಿದ್ಯಾರ್ಥಿ ನಿಲಯ ಸ್ಥಳಾಂತರವಾಯಿತು. ಮುಂದೆ ಮಾಧ್ಯಮಿಕ ಶಾಲೆ, ಪ್ರೌಢಶಾಲೆ, ಕಾಲೇಜು ಆಗಿ ಬೆಳೆಯಿತು. ಈ ಸಂಸ್ಥೆಯ ಪ್ರಾಯೋಗಿಕ ಕಾರ್ಯಕ್ರಮಕ್ಕಾಗಿ ಗಾಂಧಿ ಫಾರಂ ಅನ್ನು ಮಾಡಿದರು. ಎಪ್ಪತ್ತೈದು ವಿದ್ಯಾರ್ಥಿಗಳಿಂದ ಪ್ರಾರಂಭವಾದ ಗ್ರಾಮ ವಿದ್ಯಾಪ್ರಚಾರಕ ಸಂಘದಲ್ಲಿ ಯು. ಎಂ. ಬಾಲಯ್ಯ, ಚಿಕ್ಕಬಸವಯ್ಯ, ಪುಟ್ಟಸ್ವಾಮಿ, ವಿ. ವೆಂಕಟರಾಮಯ್ಯ ಮುಂತಾದ ಅಧ್ಯಾಪಕವರ್ಗವಿದ್ದಿತು. ಶ್ರೀ ಎಸ್. ಕರಿಯಪ್ಪನವರು ತಮಗೆ ಪ್ರಿಯವಾದ ಇಂಗ್ಲಿಷ್ ವ್ಯಾಕರಣವನ್ನು ಬೋಧಿಸುತ್ತಿದ್ದರು.

ದಯಾನಂದ ವಿದ್ಯಾರ್ಥಿ ನಿಲಯದಲ್ಲಿ ಆ ಕಾಲದಲ್ಲಿ ಕೆ. ಟಿ. ಚನ್ನಬಸವೇಗೌಡ, ಎಸ್. ಬಿ. ಮುತ್ತೇಗೌಡ, ಡಿ. ಎಂ. ಪುಟ್ಟಸ್ವಾಮಿ, ಡಿ. ಎಂ. ಕುನ್ನಮರೀಗೌಡ, ಡಿ. ತಿಮ್ಮಹೆಗ್ಗಡೆ ಮುಂತಾದ ವಿದ್ಯಾರ್ಥಿಗಳಿದ್ದರು. ಅಧ್ಯಾಪಕರು ಮತ್ತು ವಿದ್ಯಾರ್ಥಿಗಳ ದಿನಚರಿ ಪ್ರಾತಃಕಾಲ 5 ಗಂಟೆಗೆ ಪ್ರಾರಂಭವಾಗುತ್ತಿದ್ದಿತು. ಇದರಲ್ಲಿ ಯಾವುದೇ ಭಿನ್ನ ಭಾವಗಳು, ರಿಯಾಯಿತಿಗಳು ಇರುತ್ತಿರಲಿಲ್ಲ. ಬೆಳಗಿನ ಝಾವ 5 ಗಂಟೆಗೆ ಈಜುವುದರಿಂದ ಕಾರ್ಯಕ್ರಮ ಪ್ರಾರಂಭವಾಗುತ್ತಿತ್ತು. 7 ಗಂಟೆಗೆ ಗೀತಾಪಠನ ಅನಂತರ ತಿಂಡಿ. 8–11 ಗಂಟೆವರೆಗೆ ತರಗತಿಗಳು. 12–30ಕ್ಕೆ ಊಟ. 2–3 ಗಂಟೆವರೆಗೆ ನೂಲುವುದು, ಕಾಗದದ ತಯಾರಿಕೆ ಮುಂತಾದ ಗ್ರಾಮ ಕೈಗಾರಿಕೆಗಳಲ್ಲಿ ತರಬೇತಿ. 3–5 ಗಂಟೆವರೆಗೆ ತರಗತಿಗಳು. 5–6 ಗಂಟೆವರೆಗೆ ತೋಟಗಾರಿಕೆ, ಅಡಿಗೆ ನೆರವು, ಆಟ. 6–30 ಗಂಟೆಗೆ ಸಾಮೂಹಿಕ ಪ್ರಾರ್ಥನೆ. 7–30ಕ್ಕೆ ಸಾಮೂಹಿಕ ಪ್ರಾರ್ಥನೆ ಮತ್ತು ಊಟ. 9–30ರ ವರೆಗೆ ವ್ಯಾಸಂಗ. ಈ ಎಲ್ಲ ಕಾರ್ಯಕ್ರಮಗಳಲ್ಲಿ ವಿದ್ಯಾರ್ಥಿಗಳು ಮತ್ತು ಉಪಾಧ್ಯಾಯರು ಭಾಗವಹಿಸುತ್ತಿದ್ದರು. ಅಂದು ಅವರು ನೀಡಿದ ಆದರ್ಶ, ಜೀವನದ ಶಿಸ್ತು ಸಾವಿರಾರು ವಿದ್ಯಾರ್ಥಿಗಳ ಬಾಳನ್ನು ಬೆಳಗಿತು. ಜಿ. ವಿ. ನಾ. ಮತ್ತು ಎಸ್. ಕೆ. ಅವರು ಅಣ್ಣತಮ್ಮಂದಿರಿಗಿಂತ ಹೆಚ್ಚಾಗಿ ಗ್ರಾಮಾಂತರ ಶಿಕ್ಷಣಕ್ಕಾಗಿ ದುಡಿದರು.

ಎರಡೂವರೆ ವರ್ಷಕಾಲ ಕನಕಪುರದಲ್ಲಿ ನೆಲಸಿದ್ದ ಜಿ. ವಿ. ನಾ. ಅವರು ಕಾರಣಾಂತರಗಳಿಂದ ತಮ್ಮ ಊರಿನಲ್ಲಿ ನೆಲಸಬೇಕಾಯಿತು. 1943ರಲ್ಲಿ ಚಿಕ್ಕನಾಯಕನ

ಹಳ್ಳಿಯಲ್ಲಿ ದೇಶೀಯ ವಿದ್ಯಾಪೀಠವನ್ನು ಸ್ಥಾಪಿಸಿದರು. ಈ ವಿದ್ಯಾಪೀಠ ಚಿಕ್ಕ ನಾಯಕನ ಹಳ್ಳಿ ತಾಲ್ಲೂಕಿನಲ್ಲಿ ರಾಷ್ಟ್ರೀಯ ಪ್ರಜ್ಞೆಯನ್ನು ಮೂಡಿಸಿತು. ಸ್ವಾತಂತ್ರ್ಯ ಹೋರಾಟಕ್ಕೆ ಆ ತಾಲ್ಲೂಕಿನವರನ್ನು ಅಣಿಗೊಳಿಸಿತು. ಈಗ ಈ ಸಂಸ್ಥೆಯ ಆಡಳಿತದಲ್ಲಿ ಎರಡು ಪ್ರೌಢಶಾಲೆಗಳಿವೆ. 1954ರಲ್ಲಿ ತುರುವೇಕೆರೆ ತಾಲ್ಲೂಕಿನ ಮಾಯಸಂದ್ರದಲ್ಲಿ ಸರ್ವೋದಯ ಶಿಕ್ಷಣ ಸಮಿತಿಯನ್ನು ಸ್ಥಾಪಿಸಿದರು. ಅದರ ಆಶ್ರಯದಲ್ಲಿ ಇಂದು ನೆಹರೂ ವಿದ್ಯಾಶಾಲಾ ಎನ್ನುವ ವಸತಿ ಶಿಕ್ಷಣ ಶಾಲೆಯಿದೆ. ಈಗ ಅದು ಕಿರಿಯ ಕಾಲೇಜು ಆಗಿದೆ. 1954ರಲ್ಲಿ ಮೈಸೂರು ಸರ್ಕಾರ ಮೂಲ ಶಿಕ್ಷಣದ ಬಗ್ಗೆ ಇವರಿಗಿರುವ ಆಸಕ್ತಿಯನ್ನು ಪರಿಗಣಿಸಿ ಎರಡು ವರ್ಷ ಕಾಲ ಇವರನ್ನು ರಾಜ್ಯ ಮೂಲ ಶಿಕ್ಷಣ ಸಲಹಾ ಸಮಿತಿಗೆ ಸದಸ್ಯರನ್ನಾಗಿ ನೇಮಿಸಿತು. ವಾರ್ಧಾದಲ್ಲಿ 1953–54ರಲ್ಲಿ ಸಂಶೋಧನ ವಿದ್ವಾಂಸರಾಗಿ ಕೆಲಸ ಮಾಡಿದರು.

ಶಿಕ್ಷಣತಜ್ಞ ಜಿ.ವಿ.ನಾ. ಅವರು ಸರ್ವೋದಯ ಚಳುವಳಿಯಲ್ಲಿ ಪ್ರಧಾನ ಪಾತ್ರ ವಹಿಸಿದರು. ಸರ್ವೋದಯ ಶಿಬಿರ ಮತ್ತು ಅಧ್ಯಯನಗಳನ್ನು ಏರ್ಪಡಿಸಿದರು. ಭಾರತ ಸೇವಕ ಸಮಾಜ ಮತ್ತು ಸೇವಾದಳಗಳ ಮುಖಾಂತರ ಸಮಾಜ ಸೇವೆ (Social Service)ಯನ್ನು ನಡೆಸಿದರು. ಸರ್ವೋದಯ ಶಿಕ್ಷಣಸಮಿತಿಯ ಆಶ್ರಯದಲ್ಲಿ ಮಾಯಸಂದ್ರದಲ್ಲಿ ಕಾಂಗ್ರೆಸ್ ಸೇವಾದಳ ಶಿಬಿರವನ್ನು ಏರ್ಪಡಿಸಿದ್ದರು. ಅಕ್ಟೋಬರ್ 1956ರಲ್ಲಿ ನಡೆದ ಈ ಶಿಬಿರಕ್ಕೆ ಪ್ರದೇಶ ಕಾಂಗ್ರೆಸ್ ನೆರವು ನೀಡಿತು. 1947–48ರಲ್ಲಿ ಮೈಸೂರು ರಾಜ್ಯ ಗಾಂಧೀರಚನಾತ್ಮಕ ಕಾರ್ಯಗಳ ಸಮಿತಿಯ ಜಂಟೀ ಕಾರ್ಯದರ್ಶಿ ಆಗಿದ್ದರು. 1969ರಲ್ಲಿ ಗಾಂಧೀ ಶತಮಾನೋತ್ಸವ ಸಮಾರಂಭಗಳ ರಾಜ್ಯಮಟ್ಟದ ಸಮಿತಿಯ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ.

ಗಾಂಧೀ ಸಾಹಿತ್ಯ ಪ್ರಕಟಣೆ ಮತ್ತು ಪ್ರಸಾರ ಕಾರ್ಯದರ್ಶಿ ಜಿ.ವಿ.ನಾ. ಅವರು ಸುಮಾರು 45 ವರ್ಷಗಳ ಕಾಲ ದುಡಿದಿದ್ದಾರೆ. ನಾಡಿನಾದ್ಯಂತ ಭಾಷಣಗಳನ್ನು ಮಾಡುವ ಮೂಲಕ ಸಾಮಯಿಕ ಲೇಖನಗಳನ್ನು ಬರೆಯುವ ಮೂಲಕ ನಾಡಿನ ಜನರ ಪ್ರಜ್ಞೆಯನ್ನು ಎಚ್ಚರಿಸಿದ್ದಾರೆ. ಈ ದಿಸೆಯಲ್ಲಿ ಅವರು ರಚಿಸಿದ ಕೃತಿಗಳು ಹೀಗಿವೆ. ಸತಿ ಕಸ್ತೂರಿ ಬಾ (1944) ಡಿ. ಎಸ್. ಶರ್ಮರು ಬರೆದ ಪುಸ್ತಕದ ಅನುವಾದ ಗಾಂಧೀ ಸೂತ್ರಗಳು (1946) ಶ್ರೀಮನ್ನಾರಾಯಣರ ಗಾಂಧೀಯನ್ ಕಾನ್ಸ್ಟಿಟ್ಯೂಶನ್ ಫಾರ್ ಫ್ರೀ ಇಂಡಿಯದ ಅನುವಾದ ಗಾಂಧೀ ರಾಜ್ಯಾಂಗ (1943), ಶ್ರೀಮನ್ನಾರಾಯಣರ ಕನ್ಸ್ಟ್ರಕ್ಟೀವ್ ವರ್ಕ್ ಫಾರ್ ಕಾಂಗ್ರೆಸ್ ಮೆನ್ ಪುಸ್ತಕದ ಅನುವಾದ ಕಾಂಗ್ರೆಸ್ಸಿಗರಿಗೆ ರಚನಾತ್ಮಕ ಕಾರ್ಯಕ್ರಮ (1953).

ಪ್ರಾಧ್ಯಾಪಕ ಯಾಮುನಾಚಾರ್ಯ, ಶ್ರೀ ಕೆ. ಎಸ್. ನಾರಾಯಣಸ್ವಾಮಿ ಮತ್ತು ಜಿ.ವಿ.ನಾ. ತ್ರಿಮೂರ್ತಿಗಳು ಗಾಂಧೀ ಸ್ಮಾರಕ ನಿಧಿಯ ಮೂಲಕ ಕನ್ನಡದಲ್ಲಿ ಗಾಂಧೀಜಿಯವರ ಕೃತಿಗಳನ್ನು 20 ಸಂಪುಟಗಳಲ್ಲಿ ಹೊರತಂದರು. ಈ ಕಾರ್ಯದಲ್ಲಿ ಸಹಾಯಕ

ಸಂಪಾದಕರಾಗಿ ಜಿ ವಿ ನಾ. ಅವರು ತುಂಬ ಸಮರ್ಥವಾಗಿ ಕೆಲಸಮಾಡಿದರು. ಈ ಅಂಗವಾಗಿ ಜಿ.ವಿ.ನಾ ರವರು ಪ್ರತಿಯೊಂದೂ ಸುಮಾರು 300 ಪುಟಗಳಿರುವ ಧರ್ಮ ನೀತಿ, ಸಮಾಜಧರ್ಮ, ಸತ್ಯಾಗ್ರಹ, ಮಹಿಳೆಯರು, ಗಾಂಧೀ ಪತ್ರಗಳು 2 ಮತ್ತು 3ನೆಯ ಸಂಪುಟಗಳನ್ನು ಸಿದ್ಧಪಡಿಸಿದರು. ಇದೆಲ್ಲಕ್ಕಿಂತ ಹೆಚ್ಚಾಗಿ ಸುಮಾರು 600 ಪುಟಗಳಿರುವ ಮಹಾತ್ಮಾಗಾಂಧೀಜಿಯವರ ಆತ್ಮಚರಿತ್ರೆಯನ್ನು ಅನುವಾದ ಮಾಡಿದರು.

ಈ ರೀತಿ ಗಾಂಧೀ ಸಾಹಿತ್ಯ ಅನುವಾದ ಕಾರ್ಯಕ್ರಮಗಳಲ್ಲದೆ ಸ್ವತಂತ್ರವಾಗಿ ಶರಣರ ಸಂಗ, ಗೀತಾಪತ್ರಗಳು, ಹಿಂದೂ ಧರ್ಮ, ಸಾಧನ ಪಥ, ಗಾಂಧೀಜಿಯವರ ಸರ್ವಧರ್ಮ ಸಮನ್ವಯ, ಗಾಂಧೀ ಸಾಹಿತ್ಯ, ಸಂತವಿನೋಬಾ, ವಿನೋಬಾ ಅವರ ಜೀವನ ಮತ್ತು ದರ್ಶನ, ಭಗವದ್ಗೀತಾ-ಒಂದು ಪ್ರಸ್ತಾವನೆ ಎನ್ನುವ ಕೃತಿಗಳನ್ನು ರಚಿಸಿದರು. ಫ್ಲೋರಲ್ ಆಫರಿಂಗ್ಸ್ ಎನ್ನುವ ಕೃತಿಯನ್ನು ಇಂಗ್ಲೀಷಿನಲ್ಲಿ ಬರೆದಿದ್ದಾರೆ. ಬೆಂಗಳೂರು ಭಾರತ ಭಾರತೀ ಪುಸ್ತಕ ಸಂಪದ ಅವರಿಗಾಗಿ ನಾರಾಯಣಗುರು, ಮಹಾತ್ಮ ಗಾಂಧೀಯವರನ್ನು ಕುರಿತು ಇಂಗ್ಲೀಷ್-ಕನ್ನಡ ಭಾಷೆಗಳಲ್ಲಿ ಪುಸ್ತಕಗಳನ್ನು ಬರೆದಿದ್ದಾರೆ. ರಮಣ ಮಹರ್ಷಿಗಳನ್ನು ಕುರಿತು ಇಂಗ್ಲೀಷಿನಲ್ಲಿ ಬರೆದಿದ್ದಾರೆ. ಗೋಪಾಲಕೃಷ್ಣ ಗೋಖಲೆ, ಠಕ್ಕರ್ ಬಾಪ, ನಾ. ಸು. ಹರ್ಡೀಕರ್, ಜಯಪ್ರಕಾಶ ನಾರಾಯಣರನ್ನು ಕುರಿತು ಕನ್ನಡದಲ್ಲಿ ಬರೆದಿದ್ದಾರೆ.

ಮೈಸೂರು ವಿಶ್ವವಿದ್ಯಾನಿಲಯದ ಕೋರಿಕೆಯ ಮೇರೆಗೆ ಡಾ॥ ಅಪ್ಪಾದೊರೈ ಅವರ ಸಬ್‌ಸ್ಟನ್ಸ್ ಆಫ್ ಪಾಲಿಟಿಕ್ಸ್ ಎನ್ನುವ 600 ಪುಟಗಳ ಕೃತಿಯನ್ನು ರಾಜ್ಯಶಾಸ್ತ್ರಸಾರ ಎಂದೂ ಡಾ॥ ಪಣಿಕ್ಕರ್ ಅವರ ಸರ್ವೆ ಆಫ್ ಇಂಡಿಯನ್ ಹಿಸ್ಟರಿ ಎನ್ನುವ 250 ಪುಟಗಳ ಪುಸ್ತಕವನ್ನು ಭಾರತೀಯ ಇತಿಹಾಸ ಸಮೀಕ್ಷೆ ಎಂದೂ ಅನುವಾದ ಮಾಡಿದ್ದಾರೆ. ದಿವಂಗತ ಶ್ರೀ ತೆಂಡೂಲ್ಕರ್ ಅವರು 8 ಸಂಪುಟಗಳಲ್ಲಿ ಬರೆದಿರುವ ಗಾಂಧೀಜಿಯವರ ಜೀವನ ಚರಿತ್ರೆಯ 1, 3 ಮತ್ತು 5ನೆಯ ಸಂಪುಟಗಳು ಎಂದರೆ ಸುಮಾರು 900 ಪುಟಗಳನ್ನು ಅನುವಾದ ಮಾಡಿದ್ದಾರೆ. ಕರ್ನಾಟಕ ವಿಶ್ವವಿದ್ಯಾನಿಲಯದವರು ದಿವಂಗತ ಡಾಕ್ಟರ್ ಜಯಸ್ವಾಲ್ ಅವರ 'ಹಿಂದು ಪಾಲಿಟಿಕ್ಸ್' ಎನ್ನುವ ಪುಸ್ತಕದ ಅನುವಾದವನ್ನು ಇವರಿಗೆ ವಹಿಸಿದ್ದಾರೆ.

ಇವರ ಸಾಹಿತ್ಯಿಕ ಮತ್ತು ಸಾಮಾಜಿಕ ಸೇವೆಯನ್ನು ಗುರುತಿಸಿ ತುಮಕೂರು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು 1972ರ ರಾಜ್ಯೋತ್ಸವದ ಸಂದರ್ಭದಲ್ಲಿ ಇವರನ್ನು ಗೌರವಿಸಿತು. 1972ರಲ್ಲಿ ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಕುಪ್ಪೂರು ಮಠ ಇವರ ಸಾಹಿತ್ಯ ಸೇವೆಯನ್ನು ಗುರುತಿಸಿ ಸನ್ಮಾನಿಸಿತು. 1977ರಲ್ಲಿ ಚಿಕ್ಕನಾಯಕನಹಳ್ಳಿ ಯವರು ಪೌರಸನ್ಮಾನವನ್ನು ನೀಡಿದರು. 1979ರಲ್ಲಿ ರಾಯಚೂರಿನಲ್ಲಿ ನಡೆದ ರಾಜ್ಯಮಟ್ಟದ ರ್‍ಯಾಲಿಯಲ್ಲಿ ಭಾರತ ಸೇವಾದಳದವರು ಇವರ ಸಮಾಜ ಸೇವೆಗಾಗಿ

ಅಭಿನಂದಿಸಿದರು. 1980ರಲ್ಲಿ ನಡೆದ ಎರಡನೆಯ ತುಮಕೂರು ಜಿಲ್ಲಾ ಸಾಹಿತ್ಯ ಸಮ್ಮೇಳನದಲ್ಲಿ ಇವರಿಗೆ ಗೌರವ ಅರ್ಪಣೆಯನ್ನು ಮಾಡಲಾಯಿತು.

ಜಿ. ವಿ. ನಾರಾಯಣಮೂರ್ತಿಯವರು ಇಂದು ತಾವು ಕೈಹಾಕಿದ ಪ್ರತಿಯೊಂದು ಕ್ಷೇತ್ರದಲ್ಲಿಯೂ ತ್ರಿವಿಕ್ರಮನಾಗಿ ಬೆಳೆದಿದ್ದಾರೆ. ಅವರು ಸಾಕಿ ಸಲಹಿ ಶಿಕ್ಷಣನೀಡಿದ ವಿದ್ಯಾರ್ಥಿಗಳೆಲ್ಲರೂ ಅವರಿಗೆ ಚಿರಋಣಿಗಳಾಗಿದ್ದೇವೆ. ಆ ಶಿಷ್ಯವರ್ಗದಲ್ಲಿ ಒಬ್ಬನಾದ ನಾನು ಎಲ್ಲರ ಪರವಾಗಿ ಗುರುವಂದನೆಯನ್ನು ಸಲ್ಲಿಸಿ ಅವರಿಗೆ ಆರೋಗ್ಯ ಐಶ್ವರ್ಯಾದಿಗಳನ್ನು ದಯಪಾಲಿಸಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇನೆ.

—000—

ಪಥಿಕ

# ಶಿಕ್ಷಣ ತತ್ವನಿಷ್ಠ ಜಿ.ವಿ.ನಾ.

**ಬಾಡಿಗಾರ್ಡ್ ಕೃಷ್ಣರಾವ್, ಎಂ.ಎ.,**

1943ರಲ್ಲಿ ಭಾರತದಲ್ಲಿ ರಾಷ್ಟ್ರೀಯತೆಯ ಮಹಾಮಂತ್ರ ಉದ್ದೀಪನಗೊಳ್ಳುತ್ತಿದ್ದಾಗ ನಯೀತಾಲೀಂ, ರಾಷ್ಟ್ರೀಯ ಮನೋಭಾವದ ಶಿಕ್ಷಣ–ಯುವ ಪೀಳಿಗೆಯ ಮನಸ್ಸಿನ ಮೇಲೆ ರಾಷ್ಟ್ರೀಯ ಚಾರಿತ್ರ್ಯ ಪೂರ್ಣ ಶಿಕ್ಷಣದ ಅನಿವಾರ್ಯತೆ ಆವಿರ್ಭಾವವಾಗತೊಡಗಿತ್ತು.

ನಾನಾ ರಾಷ್ಟ್ರ ನಾಯಕರು ರಾಷ್ಟ್ರಹಿತಚಿಂತಕರು, ಸ್ವಾತಂತ್ರ್ಯ ಹೋರಾಟಗಾರರು ಸ್ವಾತಂತ್ರ್ಯ ಸಾಧನೆಯ ಕ್ಷೇತ್ರದಲ್ಲಿ ರಾಷ್ಟ್ರೀಯತಾಶಿಕ್ಷಣದ ಮಹತ್ವಪೂರಿತ ಪಾತ್ರವನ್ನು ಅರಿತು ರಾಷ್ಟ್ರೀಯ ಶಿಕ್ಷಣ ಸಂಸ್ಥೆಗಳನ್ನು ಪ್ರಾರಂಭಿಸಿ ಮಾರ್ಗದರ್ಶನ ಮಾಡಿದ್ದರು. ಮ. ಮೋ. ಮಾಳವೀಯರ ಕಾಶಿ ಹಿಂದೂ ವಿಶ್ವವಿದ್ಯಾಲಯ–ವಿಶ್ವಕವಿ ರವೀಂದ್ರರ ವಿಶ್ವಭಾರತಿ, ಬೆಂಗಳೂರಿನ ನ್ಯಾಷನಲ್ ಹೈಸ್ಕೂಲು ಇತ್ಯಾದಿ ಸಂಸ್ಥೆಗಳು ಜನ್ಮತಾಳಿ ಈ ರಾಷ್ಟ್ರೀಯತಾ ಶಿಕ್ಷಣ ಕ್ಷೇತ್ರದಲ್ಲಿ ಸಾಕಷ್ಟು ಮುನ್ನಡೆ ಸಾಧಿಸಿದ್ದುವು. ಇದರಿಂದಾಗಿ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಸಚ್ಚಾರಿತ್ರ್ಯ ನಿರ್ಮಾಣ–ದೇಶಭಕ್ತಿ. ರಾಷ್ಟ್ರೀಯಮಹತ್ವ–ಸಂಸ್ಕೃತಿ–ಶಿಸ್ತು–ಶ್ರದ್ಧೆಗಳ ಪರಿಣಾಮವಾಗಿ ಹೋರಾಟವು ತತ್ವ–ನಿಷ್ಠೆಗಳ ಅನುಷ್ಠಾನದ ಮೇಲೆ ಮುಂದುವರಿದುದು ಹೆಮ್ಮೆಯ ವಿಷಯ. ಈ ರೀತಿಯ ಶಿಕ್ಷಣ ಸಂಸ್ಥೆಗಳ ಸ್ಥಾಪನೆ ಶಿಕ್ಷಣವು ಸ್ವಾತಂತ್ರ್ಯ ಸಂಗ್ರಾಮದಲ್ಲಿ ನೀಡಿದ ಅಮೋಘ ಸೇವೆ ಅಪಾರ ಹಾಗು ಚಿರಸ್ಮರಣೀಯ.

ಪತ್ರಿಕೆಗಳ ರಾಷ್ಟ್ರೀಯತಾ ಪ್ರಚೋದನಾತ್ಮಕ ಬರವಣಿಗೆ–ಸ್ಫೂರ್ತಿದಾಯಕವಾಗಿದ್ದುದು ಸ್ವಾತಂತ್ರ್ಯ ಸಂಗ್ರಾಮದ ಮತ್ತೊಂದು ಮಹಾಚೇತನ.

ಈ ದಿಶೆಯಲ್ಲಿ ರಾಷ್ಟ್ರೀಯ ಶಿಕ್ಷಣದ ಮಹತ್ವವರಿತ ಶ್ರೀ ಜಿ.ವಿ.ನಾ.ರವರು ಚಿ.ನಾ.ಹಳ್ಳಿಗೆ ಬಂದು ರಾಷ್ಟ್ರೀಯ ಶಿಕ್ಷಣದ ಮಹತ್ವ ಹಾಗು ಪ್ರೌಢ ಶಿಕ್ಷಣದ ಅಗತ್ಯಗಳನ್ನು ಮನಗಂಡು ಈ ಬಗ್ಗೆ ಕಾರ್ಯಮಗ್ನರಾದದ್ದೇ ದೇಶೀಯ ವಿದ್ಯಾಪೀಠದ ಸ್ಥಾಪನೆಗೆ ನಾಂದಿಯಾಗಿ, ಜಿ.ವಿ.ನಾ.ರವರ ಆಶೆಯ ವಿದ್ಯಾಪೀಠದ ಉಗಮಕ್ಕೆ ಕಾರಣವಾಯಿತು.

ಶಿಸ್ತು–ಶ್ರದ್ಧೆ–ನಿಯಮ–ಸದಾಚಾರಗಳ ಅಧ್ವರ್ಯುವಾಗಿದ್ದ ಜಿ.ವಿ.ನಾ.ರವರು ಇದೇ ತತ್ವಗಳ ಬುನಾದಿಯ ಮೇಲೆ ದೇಶೀಯ ವಿದ್ಯಾಪೀಠದ ಸ್ಥಾಪನೆ ಮಾಡಿ ಅವಿರತ ಶ್ರಮ–ತ್ಯಾಗ–ಶ್ರದ್ಧೆಗಳಿಂದ ಅದನ್ನು ಬೆಳೆಸಿದರು. ವಿದ್ಯಾಪೀಠದ ವಿದ್ಯಾರ್ಥಿ ಶಿಸ್ತು–ಶ್ರದ್ಧೆ–ವಿಧೇಯತೆಗಳನ್ನು ನಿಷ್ಠಾವಂತನಾಗಿ ಕಿಂಚಿತ್ತೂ ತಪ್ಪದೆ ಪಾಲಿಸಬೇಕಾಗಿತ್ತು.

ದೈನಂದಿನ ಪ್ರಾರ್ಥನೆ-ಒಂದು ಅಕ್ಷರವೂ ಲೋಪವಾಗಬಾರದು, ಭಗವದ್ಗೀತೆಯ ವಿಶ್ವರೂಪಸಂವರ್ಶನಯೋಗದ ಶ್ಲೋಕಗಳು ನಿರರ್ಗಳವಾಗಿ ಓತಪ್ರೋತ ವಾಗಿವಿದ್ಯಾರ್ಥಿಗಳ ಕಂಠದಿಂದ ಹರಿಯಬೇಕು. ಟೋಪಿಗಳು ಸ್ವಚ್ಛವಾಗಿರ ಬೇಕು. ಸೊಟ್ಟಾಗಿರಕೂಡದು. ನಿಲ್ಲುವ ಶೈಲಿ ಶಿಸ್ತಿನ ಸಿಪಾಯಿ ಸೆಟೆದು ನಿಂತ ರೀತಿಯ ಲ್ಲಿರಬೇಕು. ಕಣ್ಣು ಅತ್ತಿತ್ತ ಚಲಿಸಕೂಡದು. ಪಾಠ ಪ್ರವಚನಗಳಲ್ಲಿ ಕಿಂಚಿತ್ತೂ ತಪ್ಪ ಬಾರದು. ಮನೆಯ ಪಾಠವನ್ನು ಕಡ್ಡಾಯವಾಗಿ ಶಾಲೆಯಲ್ಲಿ ಒಪ್ಪಿಸಲೇಬೇಕು. ಸಹ ಶಿಕ್ಷಣವಿದ್ದರೂ ವಿದ್ಯಾರ್ಥಿನಿಯರ ಕಡೆ ವಿದ್ಯಾರ್ಥಿ ತಿರುಗಿ ಕೂಡಾ ನೋಡಬಾರದು. ವ್ಯಾಯಾಮ ಶಿಕ್ಷಣಕ್ಕೆ ತಪ್ಪದೆ ಬರಲೇಬೇಕು. ಸಮವಸ್ತ್ರವಿಲ್ಲದೆ ಶಾಲೆಗೆ ಬರುವಂತಿಲ್ಲ. ಇದು ಜಿ.ವಿ.ನಾ. ಅಂದು ವಿದ್ಯಾಕ್ಷೇತ್ರದಲ್ಲಿ ಭಾವಿಪೀಳಿಗೆಯ ಮೇಲೆ ಅಚ್ಚೊತ್ತಿ ಕಡೆದಿದ್ದ ಅಂದಿನ ಶಿಸ್ತಿನ ವಿದ್ಯಾರ್ಥಿ ಶಿಲ್ಪ.

ಊರಿಗೆ ವರ್ಷಂಪ್ರತಿ ಬರುತ್ತಿದ್ದ ಪ್ಲೇಗುಬೇನೆಯ ಪಿಡುಗು ಬಂದಾಗ ಊರಾಚೆ ತೋಟಿನಲ್ಲಿ ಮರದ ಕೆಳಗೆ ತರಗತಿಗಳನ್ನು ನಡೆಸುತ್ತಿದ್ದು-ಪಾಠಪ್ರವಚನಗಳು ಒಂದು ದಿನವೂ ತಪ್ಪಬಾರದೆಂಬ ಕಟ್ಟಳೆಗೊಳಗಾಗಿದ್ದರೂ. ಅಂದಿನ ಆ ಮರದ ಕೆಳಗೆ ನಡೆಯುತ್ತಿದ್ದ ತರಗತಿಯ ದೃಶ್ಯ ಪ್ರಾಚೀನ ಕಾಲದ ಗುರುಕುಲ-ಋಷ್ಯಾಶ್ರಮಗಳ ಚಿತ್ರಣವನ್ನು ನೀಡುತ್ತಿತ್ತು. ಅಧ್ಯಾಪಕ ವರ್ಗದಲ್ಲಿನ ಶಿಸ್ತು-ಕಾರ್ಯಕ್ಷಮತೆ ವಿದ್ಯಾರ್ಥಿಗಳ ಮನಸ್ಸಿನ ಒಳಹೊಕ್ಕು ಕಲಿಸುವ ವೃತ್ತಿಧರ್ಮವನ್ನು ಎತ್ತಿಹಿಡಿಯು ತ್ತಿತ್ತು. ಎಂತಹ ವಿದ್ಯಾರ್ಥಿಯ ಮನಸ್ಸನ್ನೂ ಅಯಸ್ಕಾಂತದಂತೆ ಸೆಳೆಯುವುದು ಅಂದಿನ ಜಿ.ವಿ.ನಾ.ರವರ ಶಿಕ್ಷಣ ಕ್ಷೇತ್ರದ ಸಾಧನೆಯ ಪ್ರಥಮ ಘಟ್ಟ. ಇದರಿಂದ ತಮ್ಮ ಸಾಧನೆಯ ಬಗ್ಗೆ ಜಿ.ವಿ.ನಾ.ರವರಿಗೆ ತೃಪ್ತಿಯ ಮನೋಭಾವವೂ ಮೂಡುತ್ತಿದ್ದುದು ಶುಭ ಚಿಹ್ನೆಯಾಗಿತ್ತು.

ಜಿ.ವಿ.ನಾ. ಅಧ್ಯಾಪನಕ್ಕೂ ಕೈಹಾಕಿದರು. ವಿದ್ಯಾರ್ಥಿಗಳ ಮನಸ್ಸಿನ ಮೇಲೆ ಗಾಂಧೀಜಿಯ ತತ್ವಗಳನ್ನು ಬಿತ್ತಿದರು. ಇತಿಹಾಸದ ಅಧ್ಯಾಪಕರಾಗಿ ಬ್ರಿಟಿಷರ ಚರಿತ್ರೆ ಅಲ್ಲಿನ ರಾಜಕೀಯ ತಿರುಗು ಮುರುಗುಗಳು ಯೂರೋಪಿನಲ್ಲಿ ಚರ್ಚ್-ಸಿಂಹಾಸನ- ಜನತೆಯ ನಡುವಣ ಕಲಹಗಳು, ಆರಸೊತ್ತಿಗೆಗಾಗಿ ನಡೆದ ರಕ್ತಪಾತಗಳು-ಇವನ್ನು ಬೋಧಿಸುವಾಗ ವಿದ್ಯಾರ್ಥಿಯನ್ನು ವಶೀಕರಣಕ್ಕೊಳಗಾಗಿಸಿಬಿಡುತ್ತಿದ್ದರು.

ಭಾರತ ಸ್ವಾತಂತ್ರ್ಯ ಸಂಗ್ರಾಮ ತೀವ್ರಗೊಂಡು "ಚಲೇಜಾವ್ ಚಳುವಳಿ" ಯಿಂದ ಮುಂದಿನ ಹಂತವಾಗಿ ಮಾಡು ಇಲ್ಲವೆ ಮಡಿ (Do or Die) ಮಜಲಿಗೆ ಬಂದು ಮುಂದೆ ಬ್ರಿಟಿಷ್ ಆಳರಸರಿಗೆ "ಭಾರತಕ್ಕೆ ಸ್ವಾತಂತ್ರ್ಯ ಕೊಡದೆ ವಿಧಿಯೇ ಇಲ್ಲ" ಎಂಬ ತೀರ್ಮಾನಕ್ಕೆ ಬರುವಷ್ಟು ತೀವ್ರವಾಯಿತು. ಲಾರ್ಡ್ ಮೌಂಟ್ ಬೇಟನ್ ರವರು ಗೌರ್ನರ್ ಜನರಲ್‌ರಾಗಿ ಭಾರತಕ್ಕೆ ಬಂದಿದ್ದರು. ಆಗ ದ್ವಿತೀಯ ವಿಶ್ವಸಮರ ದಲ್ಲಿ ವಿಜಯೋನ್ಮತ್ತತೆಯಿಂದ ಕೂಡಿದ್ದ ಚರ್ಚಿಲ್ ಭಾರತ ಸ್ವಾತಂತ್ರ್ಯಕ್ಕೆ ಅಡ್ಡಿ

ಯಾಗಿದ್ದು 1945 ದ್ವಿತೀಯ ವಿಶ್ವಸಂಗ್ರಾಮ ಮುಗಿದು, ಅಮೆರಿಕದ ಅಣುಬಾಂಬ್‌ನಿಂದ ಹಿರೋಷಿಮಾ ನಾಗಸಾಕಿಗಳಲ್ಲಿ ಮಾನವರ ಮಾರಣ ಹೋಮ ನಡೆದು ಜಪಾನ್–ಜರ್ಮನಿಗಳ ಶರಣಾಗತಿಯಾಗಿ–ಜರ್ಮನಿಯ ವಿಭಜನೆಯಾಗಿ ಸಮರ ಅಂತ್ಯಗೊಂಡ ಅನಂತರ ಬ್ರಿಟಿಷರ ರಾಜಕೀಯ ಪ್ರಜ್ಞೆಯ ದ್ಯೋತಕವಾಗಿ ಯುದ್ಧತಂತ್ರಕ್ಕೆ ಮಾತ್ರ ಚರ್ಚಿಲ್ ಸಾಕೆಂಬ ಭಾವನೆಯಿಂದ 1946ರಲ್ಲಿ ನಡೆದ ಬ್ರಿಟನ್ ಮಹಾ ಚುನಾವಣೆಯಲ್ಲಿ ಚರ್ಚಿಲ್ ಹಾಗು ಅವರ ಪಕ್ಷವನ್ನು ಪರಾಭವಗೊಳಿಸಿ ಲೇಬರ್ ಪಕ್ಷವನ್ನು ಅಧಿಕಾರದ ಗದ್ದುಗೆಗೇರಿಸಿ ಲಾರ್ಡ್ ಆಟ್ಲಿಯವರು ಪ್ರಧಾನಿಯಾಗಿ ಬಂದು ಭಾರತ ಸ್ವಾತಂತ್ರ್ಯ ಸಂಗ್ರಾಮದ ಭಾರತೀಯರ ಸ್ವಾತಂತ್ರ್ಯಾಕಾಂಕ್ಷೆಯ ಬಗ್ಗೆ ಸಹಾನುಭೂತಿ ತಳೆದಿದ್ದು ಭಾರತ ಸ್ವಾತಂತ್ರ್ಯ ಸೂರ್ಯನ ಉದಯ ಕಿರಣಗಳ ಛಾಯೆ ಮೂಡ ತೊಡಗಿತು. ಅಂತೇ 1947ರ ಆಗಸ್ಟ್‌ನಲ್ಲಿ ಭಾರತಕ್ಕೆ ಸ್ವಾತಂತ್ರ್ಯ ಲಭಿಸಿತು. ಈ ಸಮರದಲ್ಲಿ ದೇ. ವಿ. ಪೀಠದ ಅಧ್ಯಾಪಕ – ವಿದ್ಯಾರ್ಥಿ – ಜಿ.ವಿ.ನಾ.ರವರ ಪಾತ್ರ ಮಹತ್ತರ. ಸ್ವಾತಂತ್ರ್ಯದ ಬಗ್ಗೆ ವಿದ್ಯಾರ್ಥಿಗಳ ಮೂಲಕ ಜನತೆಗೆ ಮಾರ್ಗದರ್ಶನ–ಸ್ವಾತಂತ್ರ್ಯಗೀತೆ–ರಾಷ್ಟ್ರಭಕ್ತಿಗೀತೆಗಳು ಸೇವಾದಳದ ಕವಾಯಿತು ಇತ್ಯಾದಿ. ಇದರಿಂದ ಜಿ.ವಿ.ನಾ. ದೇ.ವಿ. ಪೀಠದ ರಾಷ್ಟ್ರೀಯ ಶಿಕ್ಷಣದ ಪರಿಣಾಮದ ಅರುಣೋದಯದ ಪ್ರಥಮ ಕಿರಣಗಳನ್ನು ಕಂಡರು. 1947ರ ಮೈಸೂರು ಜವಾಬ್ದಾರಿ ಸರ್ಕಾರದ ಚಳುವಳಿಯಲ್ಲಿ ದೇ.ವಿ. ಪೀಠದ ವಿದ್ಯಾರ್ಥಿಗಳ ಅಧ್ಯಾಪಕರ ಸ್ಥಾಪಕರ ಪಾತ್ರ ಚಿ.ನಾ.ಹಳ್ಳಿಯ ಚಳುವಳಿ ಕ್ಷೇತ್ರದಲ್ಲಿ ಅವಿಸ್ಮರಣೀಯ. ಗಾಂಧೀ ಜಯಂತಿ–ಸೂತ್ರಯಜ್ಞ–ಭಜನಾವಳಿಗಳು ಭಾರತ ಸಂಸ್ಕೃತಿಯ ಪ್ರತಿಬಿಂಬವೆಂಬಂತೆ ಪ್ರಜ್ವಲಿಸಿದುವು.

ಮುಂದೆ ?

ಕಾಲಚಕ್ರದ ಪರಿಭ್ರಮಣೆ ಸಾಗಿತ್ತು. ಪರಿವರ್ತನೆ ಇಣುಕುತ್ತಿತ್ತು.

ಮುಂದೆ ಜಿ.ವಿ.ನಾ. ಕೆಲಕಾಲ ಮಾಯಸಂದ್ರ, ಕನಕಪುರಗಳಲ್ಲಿ ವಿದ್ಯಾಸಂಸ್ಥೆಗಳನ್ನು ಸ್ಥಾಪಿಸಿ ಸುವ್ಯವಸ್ಥಿತ ಸ್ಥಿತಿಗೆ ತಂದು ಮತ್ತೆ ಚಿ. ನಾ. ಹಳ್ಳಿಯಲ್ಲಿ ಕೆಲಕಾಲ ಅಧ್ಯಾಪಕ ವೃತ್ತಿಯನ್ನು ಮುಂದುವರಿಸಿ ವಿದ್ಯಾರ್ಥಿಗಳಲ್ಲಿ ಸ್ವಾತಂತ್ರ್ಯಾನಂತರ ಹಾಗು ಕಾಲಧರ್ಮಕ್ಕನುಗುಣವಾಗಿ ಅವಿಧೇಯತೆ–ಅಶಿಸ್ತು–ನಿಷ್ಠೆ ಶಿಸ್ತುರಹಿತ ಗುಣಗಳು ಮೂಡುತ್ತಿರುವುದನ್ನು ನ್ಯಾಯ–ತತ್ವನಿಷ್ಠುರತೆಯಿಂದ ತೊಡೆದುಹಾಕಿ ತಮ್ಮದೇ ಆದ ಶೌರ್ಯದಿಂದ ಸಹಅಧ್ಯಾಪಕರ ಬಗ್ಗೆ ಸಂದರ್ಭೋಚಿತವಾಗಿ ಮುನಿಸುಗೊಂಡು ತಮ್ಮ ತತ್ವನಿಷ್ಠೆಯನ್ನೇ ಸಾಧಿಸುತ್ತಿದ್ದುದು ಒಮ್ಮೊಮ್ಮೆ ಅವರ ಹಠಮಾರಿತನದ ಬಗ್ಗೆ ಅಸಮಾಧಾನ ತಾಳುವ ಮಟ್ಟಕ್ಕೆ ಹೋಗುತ್ತಿತ್ತು. ಕಠಿಣ ಶಿಸ್ತನ್ನು ಪಾಲಿಸಲಾಗದ ವಿದ್ಯಾರ್ಥಿಗಳು ಈ ಶಾಲೆಯಲ್ಲಿ ಕಲಿಯಲಾರದೆ ಬೇರೆ ಊರಿನ ಶಾಲೆಗಳಿಗೆ ಹೋಗಿ ವ್ಯಾಸಂಗ ಮಾಡಬೇಕಾಗಿ ಬಂದದ್ದೂ ಹಾಗೆ ಮಾಡಲು

ಪ್ರೋಷಕರೂ ಒಪ್ಪಿ ಕಳಿಸಬೇಕಾಗಿ ಬಂದದ್ದೂ ಮುಂದೆ ಜನ ಜೀವನದಲ್ಲಿ–ವಿದ್ಯಾರ್ಥಿ ವರ್ಗದಲ್ಲಿ ಶಿಸ್ತು–ನಿಷ್ಠೆ–ವಿಧೇಯತೆ–ತ್ಯಾಗ–ರಾಷ್ಟ್ರೀಯ ಮನೋಧರ್ಮಗಳು ಕುಂಠಿತ ವಾಗುವ ಸೂಚನೆಯಾಗಿತ್ತು. ಅಕ್ಕಪಕ್ಕಗಳಲ್ಲಿ ಪ್ರಾರಂಭವಾದ ಇತರೆ ಪ್ರೌಢಶಾಲೆ ಗಳಲ್ಲಿ ಸಿಕ್ಕಿದ ಶಿಸ್ತು–ನಿಷ್ಠೆ–ಕಾಠಿಣ್ಯರಹಿತ ವಿದ್ಯಾರ್ಥಿ ಜೀವನ ವಿದ್ಯಾರ್ಥಿಗಳು ಅತ್ತ ಕಡೆಯೇ ಹೆಚ್ಚು ಆಕರ್ಷಿತರಾಗುವಂತೆ ಮಾಡಿತು. ಮುಂದೆ ಜಿ.ವಿ.ನಾ.ರವರು ತಮ್ಮ ಮನೋಭೂಮಿಕೆಯ ವೈಫಲ್ಯವನ್ನು ಕಾಣುವಂತಾದಾಗ ಅಧ್ಯಾಪಕ ವೃತ್ತಿ ತೊರೆದು ಸರ್ವೋದಯ–ಭೂದಾನ ಚಳುವಳಿಗೆ ಪಾದಾರ್ಪಣೆ ಮಾಡಿದರು. ಅಖಂಡ ಪಾದಯಾತ್ರೆ–ಭೂದಾನ–ವಿನೋಬಾಜಿ ಸಂಪರ್ಕ ಸಾನ್ನಿಧ್ಯಗಳಲ್ಲಿ ತಮ್ಮ ರಾಷ್ಟ್ರೀಯತಾ ತತ್ವದ ಬಾಳಿನ ಮುಂದಿನ ದಿನಗಳನ್ನು ಸಾರ್ಥಕತೆಯೆಡೆಗೆ ಸಾಗಿಸತೊಡಗಿದರು. ಮಾನವನು ನೈತಿಕ ಅಧಃಪತನದೆಡೆಗೆ ಸಾಗತೊಡಗಿದ್ದೊಂದು ದೈವಿಕ ಅರ್ಥಾತ್ ವಿಧಿಯ ದುರ್ವಿಪಾಕ.

—ಇಂದು—

"ನ ಇದಮಿತ್ಥಂ" ಎನ್ನುವುದು ಚಾರುವಾಕ ಸಿದ್ಧಾಂತ. ಈ ಸಿದ್ಧಾಂತ ಭವಿಷ್ಯದ ವಿಶ್ವದ ಎಲ್ಲ ಮೂಲೆಗಳಲ್ಲಿ ತನ್ನದೇ ಆದ ಪಾತ್ರ ಪ್ರಭಾವವನ್ನು ಬೀರುತ್ತದೆ ಎಂಬುದನ್ನು ಸ್ವತಃ ಚಾರುವಾಕನೇ ಊಹಿಸಿರಲಿಲ್ಲವೇನೊ !

ಭಾರತದ ಸ್ವಾತಂತ್ರ್ಯ ಸಂಗ್ರಾಮ ಕಾಲದಲ್ಲಿ ಜಾಜ್ವಲ್ಯಮಾನವಾಗಿದ್ದ ರಾಷ್ಟ್ರೀಯ ಭಾವನೆ--ರಾಷ್ಟ್ರಭಕ್ತಿ--ತತ್ವನಿಷ್ಠೆ--ಶಿಸ್ತು--ಸಂಯಮ--ಸದಾಚಾರಗಳು ಕಾಲಕ್ರಮೇಣ ಮರೆಯಾಗುತ್ತಾ ಬಂದು ಸ್ವಾತಂತ್ರ್ಯಾನಂತರ ಅಧಿಕಾರಕ್ಕೆ ಬಂದ ಅಧಿಕಾರಾರೂಢ ಸ್ವಾರ್ಥ ರಾಜಕಾರಣಿಗಳು-ಮಂತ್ರಿಮಾನ್ಯರು-ಅಧಿಕಾರಿಗಳು, ಸಾಮಾ ಜಿಕ ಕಾರ್ಯಕರ್ತರು ವಿದ್ಯಾಕ್ಷೇತ್ರದ ಮುಖಂಡರು, ವಿದ್ಯಾರ್ಥಿ-ಯುವಜನಾಂಗ ಇವರಲ್ಲೆಲ್ಲ ಸ್ವಾರ್ಥಪರತೆ-ಸುಖಲೋಲುಪತೆ-ಅನೀತಿ-ಅನ್ಯಾಯ-ಪಕ್ಷಪಾತ-ಅಶಿಸ್ತು. ಅನಾಚಾರ-ಜಾತೀಯತೆಗಳು ವಿಷವೃಕ್ಷವಾಗಿ ಬೆಳೆಯತೊಡಗಿ ನೈತಿಕ ಅಧಃಪತನದತ್ತ ಜನಜೀವನ ಸಾಗತೊಡಗಿತು. ನಿಷ್ಠಾವಂತ ತತ್ವವಾದಿಗಳು-ಧ್ಯೇಯವಾದಿಗಳು ಮೂಲೆಗುಂಪಾದರು. ಬುದ್ಧಿಜೀವಿಗಳು ಮೌನ ಏಕಾಂತದ ವಲ್ಮೀಕದಲ್ಲಿ ವಾಸಮಾಡತೊಡಗಿದರು. ಒಟ್ಟಾರೆ ತತ್ವನಿಷ್ಠರು, ಬುದ್ಧಿಜೀವಿಗಳು ಆದರ್ಶ ವ್ಯಕ್ತಿಗಳು ಭಾರತದ ಸಾರ್ವಜನಿಕ-ರಾಜಕೀಯ ಜೀವನರಂಗದಿಂದ ಮರೆಯಾಗತೊಡಗಿದರು.

ಈ ರೀತಿಯ ಅಧಃಪತನವನ್ನು ಗಮನಿಸಿದ ಜಿ.ವಿ.ನಾ. ರವರು ದೇ.ವಿ. ಪೀಠದ ಗತಿಯೂ ತತ್ವನಾಶದ ಮಾರ್ಗದೆಡೆಗೆ ಸಾಗುತ್ತಿರುವುದನ್ನು ಗುರುತಿಸಿದರು. ಮೈಸೂರಿ ನಲ್ಲಿ ಕೀರ್ತಿಶೇಷ ಯಾಮುನಾಚಾರ್ಯರ ಮುಖ್ಯ ಸಂಪಾದಕತ್ವದಲ್ಲಿ ಕಾರ್ಯನಿರತವಾದ ಗಾಂಧೀ ಶಾಂತಿಪ್ರತಿಷ್ಠಾನದ ಆಶ್ರಯದಲ್ಲಿ ಗಾಂಧೀ-ವಿನೋಬ-ಸರ್ವೋದಯ ಸಾಹಿತ್ಯ ಗ್ರಂಥಗಳ ಕನ್ನಡಾನುವಾದ ಕಾರ್ಯ ನಿರ್ವಹಿಸಿದರು. ಮತ್ತೆ ಚಿ.ನಾ. ಹಳ್ಳಿಗೆ ಬಂದು

ದೇ.ವಿ. ಪೀಠದಿಂದ ದೂರವಿದ್ದು ಕೇವಲ ಸಾಹಿತ್ಯರಚನೆ ಲೇಖನಗಳು-ಅಧ್ಯಯನ-ಸರ್ವೋದಯ–ಅಧ್ಯಯನ ಕೇಂದ್ರಗಳಲ್ಲಿ ಪ್ರಾರ್ಥನಾ ಸಭೆ–ಕರೆದಲ್ಲಿಗೆ ಹೋಗಿ ಗಾಂಧೀ ತತ್ವ-ಸರ್ವೋದಯ ತತ್ವಗಳ ನಿರೂಪಣೆಯಲ್ಲಿ ಕಾಲಯಾಪನೆ ಮಾಡತೊಡಗಿದರು, ಇದು ಎರಡನೆಯ ಘಟ್ಟ, ಸಾಧನಪಥದಲ್ಲಿ ಅವರೇನು ಸಾಧನೆ ಕಂಡರೋ-ಕಾಣಲಿಲ್ಲವೋ ಅಂತೂ ಅವರು ತಮ್ಮ ಆದರ್ಶ ತತ್ವದ ಕೃಷಿಯಲ್ಲಿ ಮೂಡಿಬಂದಿದ್ದ ಕಳೆ: ಬಂದರಿಕೆಯನ್ನು ಮಾತ್ರ ಮನಗಂಡು ಮರುಗಿದ್ದಂತೂ ರಹಸ್ಯ ಸತ್ಯ. ಇದನ್ನು ಜಿ.ವಿ.ನಾರವರನ್ನು ಅರಿತಿದ್ದವರು ಮಾತ್ರ ತಿಳಿದವರಾಗಿದ್ದಾರೆ. ಹೀಗೆ ಜಿ.ವಿ.ನಾರವರು ತಮ್ಮ ಆದರ್ಶದ ಕುದುರೆಯ ಬೆನ್ನೇರಿ ಕುಳಿತು ಸಾಧನಪಥದತ್ತ ಜೈತ್ರಯಾತ್ರೆ ಹೊರಟವರು ವೈಫಲ್ಯತೆ-ನಿರಾಶೆಗಳ ಮರುಭೂಮಿಯತ್ತ ತಮಗರಿವಿಲ್ಲದೆಯೇ ತಾವೇ ಸಾಗಿದ್ದರು. ದೇ.ವಿ. ಪೀಠ ಕೇವಲ ಹುಡುಗ ಹುಡುಗಿಯರ ಹೈಸ್ಕೂಲಾಗಿತ್ತು.

ದ್ವಾಪರಸಾರ್ವಭೌಮ ಕಲಿಸಾರ್ವಭೌಮನಿಗೆ ತನ್ನ ಯುಗದ ಆಡಳಿತಾಧಿಕಾರವನ್ನು ಬಿಟ್ಟುಕೊಡುವಾಗ ಕಲಿಯನ್ನು ಕೇಳಿದ್ದ–"ಕಲಿಸಾರ್ವಭೌಮಾ, ನಿನ್ನ ಯುಗದ ಆಡಳಿತಾಧಿಕಾರದ ಪ್ರಣಾಳಿಕೆ ಏನು?" ಎಂದು. ಕಲಿ ವಿಕಟಾಟ್ಟಹಾಸದಿಂದ ವಿಜೃಂಭಿಸಿ ಹೇಳಿದ್ದ "ದ್ವಾಪರಾ,ಕೃತ-ತ್ರೇತಾ, ನಿನ್ನ ದ್ವಾಪರ ಯುಗಗಳಲ್ಲಿ ಯಾವುದು ಅಲ್ಲವೆಂದೂ, ಅಧರ್ಮವೆಂದೂ, ಅನ್ಯಾಯ-ಅನೀತಿಯೆಂದೂ–ಅಸತ್ಯವೆಂದೂ ಭಾವಿಸಿ ದೂರಬಿಟ್ಟಿದ್ದರೋ ಆ ಸಮಸ್ತ ಕಾರ್ಯವೂ ನನ್ನ ಭವಿಷ್ಯದ ಕಲಿಯುಗದಲ್ಲಿ ನಡೆಯಲೇಬೇಕೆಂಬುದೇ ನನ್ನ ಆಡಳಿತ ಘೋಷಣೆ" ಎಂದು, "ಎಂದು ನಿನ್ನ ಆಡಳಿತ ಮುಕ್ತಾಯ" ಎಂದು ನಡುಗಿ ಕೇಳಿದ್ದ ದ್ವಾಪರ.

"ಎಂದು ಮಾನವ ಮಾನವನನ್ನು ಅರಿತು ಸತ್ಯಧರ್ಮನೀತಿಗಳು ವಿಜೃಂಭಿಸಿ ಸತ್ಯಸೂರ್ಯನ ಉದಯವಾಗಿ. ವಿಚಾರಮತಿಕೆಯ ವೃಷ್ಟಿ ಬಿದ್ದು, ಸತ್ಯಶಿವನ ತಾಂಡವ ನೃತ್ಯದ ಗೆಜ್ಜೆಯ ಝೇಂಕಾರ ನನ್ನ ಎದೆಯನ್ನು ನಡುಗಿಸುತ್ತದೋ ಅಂದೇ ನನ್ನ ಆಡಳಿತದ ಅಂತ್ಯ" ಎಂದು ನಕ್ಕು ಹೇಳಿದ್ದ ಕಲಿರಾಯ. ಆ ಮಂಗಳ ಮುಕ್ತಾಯ ಅತಿಬೇಗ ಬರಲೆಂದು ಹಲುಬಿ ಬೇಡಿದ್ದ ದ್ವಾಪರ ಸಾರ್ವಭೌಮ.

ಕಾಲಪುರುಷನ ಆಕ್ರಂದನ-ಕಲಿಭ್ರಮಣೆ ಸತತವಾಗಿ ಸಾಗಿತ್ತು. ಕಲಿಯ ವಿಸ್ತರಣಾಕಾಂಕ್ಷೆ ಭೂಮಿಯ ಎಲ್ಲ ಮೂಲೆಗೂ ವ್ಯಾಪಿಸತೊಡಗಿತ್ತು. ದಿನ ಕಳೆಯುತ್ತಿತ್ತು, ಕ್ಯಾಲೆಂಡರ್ ಹಾಳೆ ಮಗುಚುತ್ತಿತ್ತು, ವರ್ಷಗಳು-ತಿಂಗಳುಗಳು ಕಾಣಾಕಾಣದೆಯೇ ಉರುಳುತ್ತಿದ್ದುವು.

ಜನರಲ್ಲಿ ಧರ್ಮ-ನೀತಿ-ನ್ಯಾಯ-ಶಿಸ್ತು-ಆಚರಣೆಗಳು ಮಾಯವಾಗತೊಡಗಿವೆ. ವಿದ್ಯಾಕ್ಷೇತ್ರ ವ್ಯಾಪಾರದ ಮಾರುಕಟ್ಟೆಯಾಗಿದೆ. ವಾಗ್ದೇವಿ ಕಂಬನಿಯಲ್ಲಿ ಕೈತೊಳೆಯುತ್ತಾ, ಯಾರೂ ಕಾಣದ ದೂರದೂರದ ಅಸ್ಪೃಶ್ಯಲೋಕವೊಂದರಲ್ಲಿ ಮುದುರಿ ಮಲಗಿದ್ದಾಳೆ. ವಿದ್ಯಾರ್ಥಿಗಳು ಅನೀತಿ-ಅಶಿಸ್ತು-ಅವಿಧೇಯತೆ-ಅಶ್ರದ್ಧೆ-

ಅನಾಚಾರ-ಅವಿವೇಕಗಳಲ್ಲಿ ಮುಳುಗಿ ವಿದ್ಯಾರ್ಥಿ ಧರ್ಮವನ್ನೇ ಮರೆತಿದ್ದಾರೆ. ಅಧ್ಯಾಪಕರು ತಮ್ಮ ಅಧ್ಯಾಪನ ಧರ್ಮವನ್ನೇ ಮರೆತು ವಿದ್ಯಾರ್ಥಿಗಳಿಗಿಂತ ತಾವೇನು ಕಡಿಮೆ ಎಂಬಂತೆ ಅಶಿಸ್ತು ಅಶ್ರದ್ಧೆಗಳ ಕಡೆ ಬಾಗುತ್ತಿದ್ದಾರೆ.ಈ ಮಟ್ಟಕ್ಕೆ ಬಂದಿದೆ ಜಿ.ವಿ.ನಾರವರ ರಾಷ್ಟ್ರೀಯ ಭಾವನೆಯ ಆದರ್ಶದ ಪುಣ್ಯಾಶ್ರಮವಾದ ದೇಶೀಯ ವಿದ್ಯಾಪೀಠ ಎನ್ನುವುದೂ ಅತ್ಯಂತ ಶೋಚನೀಯ ಕಠೋರ ಸತ್ಯ.

ಏಸುಕ್ರಿಸ್ತನನ್ನು ಶಿಲುಬೆಗೆ ಏರಿಸಿದರು, ಸಾಕ್ರೆಟೀಸನಿಗೆ ವಿಷವಿಕ್ಕಿದರು, ಗಾಂಧೀಜಿಗೆ ಗುಂಡಿಕ್ಕಿದರು, ಕೆನಡಿಯುನ್ನು ಕೊಲೆಗೈದರು, ಮುಂಬನನ್ನು ಅಮಾನುಷ ವಾಗಿ ಕೊಂದರು. ಇದು ವಿಶ್ವದ ಮಾನವ ಇತಿಹಾಸದಲ್ಲಿ ಎದ್ದು ಕಾಣುವ ಮಾನವನ ರಾಕ್ಷಸೀ ಪ್ರವೃತ್ತಿ. ಈ ಆಸುರೀಗುಣ ಎಲ್ಲ ಕಾಲಕ್ಕೆ ಎಲ್ಲ ಜನಾಂಗಗಳಲ್ಲಿ ತನ್ನದೇ ಆದ ಪ್ರವೃತ್ತಿ ಶಕ್ತಿಸಮುಚ್ಚಯದಲ್ಲಿ ಎಲ್ಲಾ ಮಾನವರನ್ನು ಕಾಡದೇ ಬಿಡದು ಎಂಬುದು ಒಂದು ಪಲಾಯನಸೂತ್ರವಾದದಂತೆ ಕಂಡರೂ ಇದೊಂದು ನಿತ್ಯಸತ್ಯ. ಪ್ರಾಚೀನದಿಂದ ಅರ್ವಾಚೀನದವರೆಗೆ ನಡೆದು ಬಂದಿರುವ ಜ್ವಲಂತ ಉದಾಹರಣೆಯ ಇತಿಹಾಸ.

ಈ ವಿಶ್ವದಲ್ಲಿ ಯಾವ ಸತ್ವಮಾನವನು ತನ್ನ ಸತ್ಯಾರ್ಥನೆಯುಲ್ಲಿ, ಸತ್ವನಿಷ್ಠೆಯಲ್ಲಿ, ಆದರ್ಶ ಬಾಳಿನಲ್ಲಿ ಸಾಧಕನಾಗಬೇಕೆಂದು ಹಲುಬಿ-ಹಂಬಲಿಸಿ-ತ್ಯಾಗಮಾಡಿ ದುಡಿಯು ತ್ತಾನೋ ಅವನ ಸಾಧನೆ-ಶೂನ್ಯ-ವಿಫಲತೆಯೋ ಸಿದ್ಧ.

ಹಾಗೆಂದ ಮಾತ್ರಕ್ಕೆ ನೈರಾಶ್ಯವೇ ಅಂತಿಮ ಫಲಿತಾಂಶವಲ್ಲ-ಸಾಧಕ ಹೆದರಿ ಪಲಾಯನ ಮಾಡಬೇಕೆಂದೇನೂ ಅಲ್ಲ.

ಸಾವಿರ–ಸಾವಿರ ಯುಗಗಳಿಂದ ಧರ್ಮ-ಅಧರ್ಮ-ನ್ಯಾಯ-ಅನ್ಯಾಯಗಳ, ಸತ್ಯ-ಅಸತ್ಯಗಳ ಸಮರ ನಡೆದೇ ಇದೆ.

ಸತ್ಯಕ್ಕೆ ಸಾವಿಲ್ಲ–ಅದು ಅಮರ–ಅದನ್ನು ಕಾಣಬೇಕೆಂಬಅನ್ವೇಷಕರಿಗೆ ನೋವು ಆಕ್ರಂದನ ಕಟ್ಟಿಟ್ಟ ಮುಕ್ತಾಫಲ.

ಇಂದು ಜಿ.ವಿ.ನಾ. ಪಾರ್ಶ್ವವಾಯುವಿನ ಧಾಳಿಗೆ ಸಿಕ್ಕಿ ದೇಹ ಜರ್ಝರಿತವಾಗಿ ದ್ದರೂ, ಮನಸ್ಸು ಇಂದಿಗೂ—ಇಂದಿನ ನಮ್ಮ ಜನಾಂಗದ ಸಮಾಜದ–ರಾಷ್ಟ್ರದ ಅವನತಿ-ಅನೈಕ್ಯ-ಅಧರ್ಮ-ಅಶಿಸ್ತು-ಸ್ವಚ್ಛಂದ ಸ್ವೇಚ್ಛಾರಗಳನ್ನು ಕಂಡು ಮಮ್ಮಲ ಮರುಗುತ್ತಿದೆ. ಭಾಷಣ ಮಾಡಲಾರರು, ಬರಹ ಬರೆಯಲಾರರು, ಕಣ್ಣಿಗೆ ಕಂಡ ಶಿಷ್ಯರು-ಅಭಿಮಾನಿಗಳು ಮಾತಿಗೆ ಸಿಕ್ಕಿದಾಗ ಕೆಲನಿಮಿಷಗಳಾದರೂ ತಮ್ಮ ಅವ್ಯಕ್ತ ನೋವನ್ನು ಕೇವಲ ಸೂಚ್ಯವಾಗಿ ತೋಡಿಕೊಳ್ಳುತ್ತಾರೆ. ಆದರೂ ಈ ಜೀವ ತನ್ನ ಶಿಷ್ಯರನ್ನು ಬಿಟ್ಟಿಲ್ಲ. ಬಹುಶಃ ನಚಿಕೇತನ ಪರಂಪರೆಗೆ ಸೇರಿದವರೊ ಏನೋ. ತಮ್ಮ ಆದರ್ಶ ತತ್ವ ಸಂಸ್ಥೆ ತ್ಯಾಗದ ಹಸಿರುವನ ತಮ್ಮ ಮುಂದೆ ಈಚಲು ವನವಾಗುತ್ತಿರುವುದನ್ನು ನೋಡು ತ್ತಿರುವ ದೌರ್ಭಾಗ್ಯ ವಿಧಿಯಿಲ್ಲದೆ ಅವರ ಪಾಲಿಗೆ ಬಂದಿದೆ.

ಯಾವ ವಿದ್ಯಾಪೀಠದಲ್ಲಿ ಅಧ್ಯಾಪಕರು–ವಿದ್ಯಾರ್ಥಿಗಳು--ಸ್ಥಾಪಕರು ತ್ಯಾಗ–ನಿಷ್ಠೆ-ಉದಾರತೆಗಳಿಂದ ಬೆಳೆದು–ಕಲಿತು–ಕಲಿಸಿ ಬಾಳಿದರೊ ಅದೇ ವಿದ್ಯಾಪೀಠದಲ್ಲಿ

ಇಂದು ಅಧ್ಯಾಪಕ ನೌಕರಿಗಾಗಿ ಅಭ್ಯರ್ಥಿಗಳಿಂದ ಡೊನೇಷನ್ ಎಂಬ ಹೆಸರಿನ ಕ್ಯಾಪಿಟೇಷನ್ ಸಂಗ್ರಹಣೆ ಎರಡೂ ಪ್ರೌಢಶಾಲೆಗಳ ವಿದ್ಯಾರ್ಥಿ–ವಿದ್ಯಾರ್ಥಿನಿಯರಲ್ಲಿ ಅಶಿಸ್ತು–ಅವಿಧೇಯತೆ–ಬೋಧನಾ ಕ್ರಮದಲ್ಲಿ ಬೇಜವಾಬ್ದಾರಿ–ಕಲಿಯುವಿಕೆಯಲ್ಲಿ ಬೇಜವಾಬ್ದಾರಿ–ನಾಶವಾಗುತ್ತಿರುವ ಗುರುಶಿಷ್ಯ ಸಂಬಂಧ–ನೀತಿಯ ಅಧಃಪತನ ಭವಿಷ್ಯದಲ್ಲಿ ಇನ್ನೂ ಹತ್ತಾರು ವರ್ಷಗಳ ಕಾಲ ಜಿ.ವಿ.ನಾ.ರವರು ಬದುಕಿರುವಾಗ ಕಾಯುತ್ತಿರುವ–ಕಾಯಬೇಕಾಗಿರುವ ಭೀಭತ್ಸ ಹೃದಯ ಹಿಂಡುವ-ದಾರುಣಾವಸ್ಥೆಯ ದುರಂತ ದೃಶ್ಯ–ಇಂತಹ ಕ್ಲಿಷ್ಟಾವಸ್ಥೆಯಲ್ಲಿಯೂ ಕೆಲವು ಮಂದಿ ಅಧ್ಯಾಪಕರು ತಮ್ಮ ನೈಜವಾದ ತತ್ವ ಧ್ಯೇಯನಿಷ್ಠೆಗಳಿಗಾಗಿ ಹೋರಾಡುತ್ತಾ ವಿದ್ಯಾರ್ಥಿಗಳ ಮೇಲೆ ಪ್ರಭಾವ ಬೀರುತ್ತಿರುವುದು ಕಿಂಚಿತ್ ನೆಮ್ಮದಿಯ ನಿಟ್ಟುಸಿರಿಗೆ ಕಾರಣವಾಗಿದೆ.

ಇಂದು ನಾಗರಿಕತೆ–ವೈಜ್ಞಾನಿಕತೆ–ಆಧುನಿಕತೆ ಆಳರಸರ ವಿವೇಕರಹಿತ ಆಡಳಿತ–ಪೋಷಕರ ವಿವೇಚನಾರಹಿತ ಆಲಸ್ಯ, ವಿದ್ಯಾಕ್ಷೇತ್ರಗಳು ಶೋಷಣೆಯ ವ್ಯಾಪಾರಿ ಮಾರುಕಟ್ಟೆ, ಹಣ ಮಾಡುವ ಕೈಗಾರಿಕೆಯಾಗಿ ವಿದ್ಯಾಕ್ಷೇತ್ರ, ಚಿಂತಕರು–ತತ್ವನಿಷ್ಠರು ಹೃದಯಬಿರಿದು ಆಕ್ರಂದನ ಮಾಡುವ ಚಿತ್ರವೇ ಮುಂದಿನ ವಿದ್ಯಾಕ್ಷೇತ್ರದ ಭವಿಷ್ಯದ ಚಿತ್ರ. ಹಾಗಾಗದಿರಲಿ. ಸತ್ಯ ಸೂರ್ಯನ ಉದಯವಾಗಲಿ, ವಿಚಾರರಶ್ಮಿಯ ಕಿರಣಗಳು ಎಲ್ಲರ ವೈಮನಸ್ಸನ್ನು ಹೊಕ್ಕು ವಿವೇಕದೆಡೆಗೆ ಕೊಂಡೊಯ್ಯಲಿ. ಜಿ.ವಿ.ನಾ ರವರು ಮತ್ತು ಇವರಂತಹ ಅನೇಕ ತತ್ವನಿಷ್ಠರು ಮುಂದೆಯೂ ಮೂಡಿ ಬಂದು ಅಜ್ಞಾನದ ಅಂಧಕಾರದಿಂದ ಜ್ಞಾನದ ಬೆಳಕಿನೆಡೆಗೆ ನಮ್ಮನ್ನು ಕೊಂಡೊಯ್ಯಲಿ, ಎಂದು ಆಶಿಸೋಣ.

—oOo—

ಕಥನ

# ಪರಿಪಕ್ವ ಚೇತನ ಜಿ.ವಿ.ನಾ.

ಎಲ್. ಎಸ್. ಶೇಷಗಿರಿರಾವ್

ನನ್ನ ಮತ್ತು ಶ್ರೀ ನಾರಾಯಣಮೂರ್ತಿಗಳ ಮೊದಲ ಭೇಟಿ ಸುಮಾರು ಇಪ್ಪತ್ತೈದು ವರ್ಷಗಳ ಹಿಂದೆ ಆದದ್ದು. ಪ್ರೊ. ಯಾಮುನಾಚಾರ್ಯರೂ ಅವರ ಗೆಳೆಯರೂ ಗಾಂಧೀ ಗ್ರಂಥಮಾಲೆಯ ಎರಡು ಸಂಪುಟಗಳ ಬಿಡುಗಡೆಯ ಸಮಾರಂಭಕ್ಕೆ ಮಡಿಕೇರಿಗೆ ಬಂದ ಸಂದರ್ಭದಲ್ಲಿ. ಅವರು ಸಜ್ಜನರೆನ್ನುವುದಕ್ಕೆ ಅವರು ಪ್ರೊ. ಯಾಮುನಾಚಾರ್ಯರ ಸ್ನೇಹಿತರ ಬಳಗದವರು ಎನ್ನುವುದಷ್ಟೇ ಸಾಕ್ಷಿ ಸಾಕಾಗಿತ್ತು. ಅನಂತರದ ವರ್ಷಗಳ ಹಲವು ಸಂದರ್ಭಗಳಲ್ಲಿ ಅವರೊಡನೆ ಕೆಲಸ ಮಾಡಿದ್ದೇನೆ, ಸಮೀಪದಿಂದ ಅವರನ್ನು ಕಂಡಿದ್ದೇನೆ. ಅವರ ಸಾತ್ವಿಕ ಸ್ವಭಾವ, ದೇಶಸೇವೆಯ ನಿಷ್ಠೆ, ತಿಳುವಳಿಕೆಯ ಸಂಪತ್ತು, ಶಿಸ್ತು ಇವನ್ನೆಲ್ಲ ಕಂಡು ಮೆಚ್ಚಿಕೊಂಡಿದ್ದೇನೆ.

ಭಾರತದ ಚರಿತ್ರೆ, ಸ್ವಾತಂತ್ರ್ಯ ಹೋರಾಟ. ಗಾಂಧೀಜಿ, ವಿನೋಬಾ ಮತ್ತು ಜಯಪ್ರಕಾಶರ ಚಿಂತನ, ಶಿಕ್ಷಣದ ಸಮಸ್ಯೆಗಳು. ಗ್ರಾಮೋದ್ಯೋಗ ಮತ್ತು ಗ್ರಾಮಾಂತರ ಆರ್ಥಿಕ ಜೀವನ ಇವನ್ನು ಕುರಿತು ಅಧಿಕಾರಯುತವಾಗಿ ಮಾತನಾಡಬಲ್ಲವರು ನಾರಾಯಣಮೂರ್ತಿಗಳು. ಇತ್ತೀಚಿನ ವರ್ಷಗಳಲ್ಲಿ ಅವರ ಮಗ ಮತ್ತು ಅವರ ಕುಟುಂಬದವರು ನನ್ನ ನೆರೆಯವರಾದ ಕಾರಣದಿಂದ ಅನೇಕ ಬಾರಿ ಅವರೊಡನೆ ಗಂಟೆಗಟ್ಟಲೆ ಕಾಲ ಕಳೆಯುವ ಅವಕಾಶ ನನಗೆ ಲಭ್ಯವಾಯಿತು. ಭಾರತ-ಭಾರತಿ ಪುಸ್ತಕ ಸಂಪದದ ಪ್ರಧಾನ ಸಂಪಾದಕತ್ವದ ಹೊಣೆಯನ್ನು ನಾನು ಒಪ್ಪಿಕೊಂಡನಂತರ ಶ್ರೀ ನಾರಾಯಣ ಮೂರ್ತಿಗಳ ಸಹಕಾರ ನನಗೆ ಧೈರ್ಯದ ಒಂದು ಆಧಾರವಾಯಿತು. ಅವರನ್ನು ಪುಸ್ತಕ ಬರೆದುಕೊಡಿ ಎಂದು ಪ್ರಾರ್ಥಿಸಿ ಅವರನ್ನು ಒಪ್ಪಿಸಿಬಿಟ್ಟರೆ ಆ ಪುಸ್ತಕದ ಮಟ್ಟಿಗೆ ನನ್ನ ಹೊಣೆ ಮುಗಿಯಿತೆಂದು ನಾನು ಧೈರ್ಯವಾಗಿರಬಹುದಾಗಿತ್ತು. ಅಗತ್ಯ ಇದ್ದ ಮಾಹಿತಿಯನ್ನೆಲ್ಲ ಬೇರೆ ಬೇರೆ ಮೂಲಗಳಿಂದ ಸಂಗ್ರಹಿಸಿ, ಅವಶ್ಯಕವಾದರೆ ಹಲವು ದಶಕಗಳ ಹಿಂದಿನ ಹರಿಜನ, ಯಂಗ್ ಇಂಡಿಯ ಮೊದಲಾದ ನಿಯತಕಾಲಿಕಗಳ ಸಂಚಿಕೆಗಳನ್ನು ಕಷ್ಟಪಟ್ಟು ಸಂಪಾದಿಸಿ, ನಾವು ಸೂಚಿಸಿದ ಶಬ್ದಗಳ ಮಿತಿಯೊಳಗೆ, ಎಳೆಯ ಓದುಗರಿಗೆ ಅರ್ಥವಾಗುವಂತಹ ಸರಳ ಶೈಲಿಯಲ್ಲಿ, ಅವರ ಮನಸ್ಸನ್ನು ಸೆಳೆಯುವಂತಹ ನಿರೂಪಣೆಯೊಂದಿಗೆ. ಸುಂದರವಾದ ಅಕ್ಷರಗಳಲ್ಲಿ ತಾನೇ ಹಸ್ತಪ್ರತಿ ಬರೆದು ನಾವು ಸೂಚಿಸಿದ್ದ ದಿನಾಂಕಕ್ಕೆ ಒಂದು ದಿನ ಮುಂಚೆಯೇ ನಮ್ಮ ಕೈ ಸೇರುವಂತೆ ಕಳುಹಿಸುವ ಕ್ರಮ ಅವರದು. ನಾವು ದಿನಾಂಕ ಮರೆತಿದ್ದರೂ ಅವರ ಹಸ್ತಪ್ರತಿ ಕೈಸೇರಿ ದಿನಾಂಕವನ್ನು ಜ್ಞಾಪಿಸುತ್ತಿತ್ತು. ಯಾವುದಾದರೂ ಕಾರಣದಿಂದ ಆ ದಿನಾಂಕಕ್ಕೆ ಹಸ್ತ

ಪ್ರತಿಯನ್ನು ಕಳುಹಿಸಲು ಸಾಧ್ಯವಾಗದೆ ಹೋದರೆ ಹಿಂದಿನ ದಿನ ನನಗೆ ತಲುಪುವಂತೆ ಕಾಗದ ಬರುತ್ತಿತ್ತು. ಅದರಲ್ಲಿ ವಿಳಂಬವಾದುದಕ್ಕೆ ವಿವರಣೆ, ಎಂದು ಹಸ್ತಪ್ರತಿ ನನಗೆ ಸೇರುವುದೆಂಬ ವಿವರ. ಆ ದಿನಕ್ಕೆ ಹಸ್ತಪ್ರತಿ ಹಾಜರು. ಸಾಮಾನ್ಯವಾಗಿ ಹಸ್ತಪ್ರತಿಯಲ್ಲಿ ಕೆಲವು ಉಪಶೀರ್ಷಿಕೆಗಳನ್ನು ಕೊಟ್ಟರೆ ಪ್ರಧಾನ ಸಂಪಾದಕರ ಕೆಲಸ ಮುಗಿಯುತಿತ್ತು–ಹಸ್ತಪ್ರತಿಯನ್ನು ಅಚ್ಚಿನ ಮನೆಗೆ ಕಳುಹಿಸಬಹುದಾಗಿತ್ತು. ಎಂಟು ಹತ್ತು ವರ್ಷದ ಮಕ್ಕಳಿಗೆ ಮನಸ್ಸಿಗೆ ಹಿಡಿಸುವಂತೆ, ಆಸಕ್ತಿ ಉಳಿದು ಬರುವಂತೆ ಬರೆಯುವುದು ಸುಲಭವಲ್ಲ. ಆದರೆ ನಾರಾಯಣಮೂರ್ತಿಗಳಿಗೆ ಆ ಶೈಲಿ ಮತ್ತು ನಿರೂಪಣೆ ಕರಗತವಾಗಿದ್ದವು.

ಬರಬರುತ್ತ ನಾನು ಶ್ರೀ ನಾರಾಯಣಮೂರ್ತಿಯವರಲ್ಲಿ ಎಷ್ಟು ಸ್ವಾತಂತ್ರ್ಯ ವಹಿಸಿದೆ ಎಂದರೆ, ಅವರ ಅಧ್ಯಯನದ ಕ್ಷೇತ್ರಕ್ಕೆ ಸಂಬಂಧಿಸಿದ ವಿಷಯಗಳಲ್ಲಿ ನನಗೆ ಸ್ಪಷ್ಟೀಕರಣ ಬೇಕಾದರೆ ಅವರಿಗೆ ಬರೆದುಬಿಡುತ್ತಿದ್ದೆ. ಅವರು ಮಾಲೆಯ ಸಲಹೆಗಾರರಲ್ಲಿ ಒಬ್ಬರು ಎನ್ನುವಷ್ಟುಮಟ್ಟಿಗೆ ನೆರವು ನೀಡಿದರು. ಬರೆದ ಕಾಗದಕ್ಕೆ ಎರಡೇ ದಿನಗಳಲ್ಲಿ ಉತ್ತರ. ಸ್ಪಷ್ಟವಾದ ಮತ್ತು ಅಧಿಕಾರಯುತವಾದ ವಿವರಣೆ–ಇವು ಅತ್ಯಂತ ಸಹಜವಾಗಿಹೋದವು. ಅವರಿಗೆ ತೀವ್ರ ಅಸ್ವಸ್ಥವಾದಾಗ ನಾವು ಅವರಿಗೆ ತೊಂದರೆ ಕೊಡಲು ಸಾಧ್ಯವಿಲ್ಲದಾದಾಗ ನಮಗೆ ಮತ್ತೆಮತ್ತೆ ಆ ನೆರವಿನ ಬೆಲೆ ಅನುಭವಕ್ಕೆ ಬರುತ್ತಿತ್ತು. ಅವರು ಬೇರೊಬ್ಬರಿಗೆ ಹೇಳಿ ಬರೆಸುವಷ್ಟು ಶಕ್ತರಾದರು ಎಂದು ತಿಳಿಯುತ್ತಲೇ ಮತ್ತೆ ತೊಂದರೆ ಕೊಡಲು ಪ್ರಾರಂಭಿಸಿದೆವು. ನಮಗೆ ಪುಸ್ತಕಗಳನ್ನು ಬರೆದು ಕೊಟ್ಟರು, ಇತರರು ಸಿದ್ಧಗೊಳಿಸಿದ ಹಸ್ತಪ್ರತಿಗಳನ್ನು ನೋಡಿ ತಿದ್ದಿದರು, ನಾವು ಬೇಡಿದಾಗ ವಿವರಣೆಗಳನ್ನು ಕೊಟ್ಟರು, ಕೆಲವು ಶೀರ್ಷಿಕೆಗಳ ಮೇಲೆ ಬರೆಯಲು ಶಕ್ತರಾದವರ ಹೆಸರುಗಳನ್ನು ಸೂಚಿಸಿದರು, ಶೀರ್ಷಿಕೆಗಳನ್ನು ಸೂಚಿಸಿದರು. ಭಾರತ–ಭಾರತಿ ಪುಸ್ತಕಮಾಲೆ ತಮ್ಮ ಕೆಲಸ ಎನ್ನುವಷ್ಟು ಆತ್ಮೀಯತೆಯಿಂದ, ಅಭಿಮಾನದಿಂದ ನೆರವಾದರು.

ನಾರಾಯಣಮೂರ್ತಿಗಳೊಂದಿಗೆ ಯಾವ ವಿಷಯವನ್ನಾಗಲಿ ವೈಯಕ್ತಿಕ ಜೀವನದ ಸಮಸ್ಯೆಗಳು, ನಾಡಿನ ಆಗುಹೋಗುಗಳು, ಆರ್ಥಿಕ ಸಿದ್ಧಾಂತಗಳು, ಧರ್ಮ–ನ್ಯಾಯಗಳ ಕಲ್ಪನೆಗಳು, ಶಿಕ್ಷಣ, ಯಾವುದನ್ನೆ ಆಗಲಿ ಕುರಿತು ಚರ್ಚಿಸುವುದು ತುಂಬಾ ಮೌಲ್ಯವುಳ್ಳ ಅನುಭವ. ಏಕೆಂದರೆ ಅವರ ಅಧ್ಯಯನ ವಿಶಾಲವಾದದ್ದು; ಆಳವಾದದ್ದು; ಅವರ ವಿಮರ್ಶೆಯ ರೀತಿ ಪರಿಪಕ್ವತೆ ಮತ್ತು ತಾಳ್ಮೆಗಳ ಸಂಗಮ; ಇತರರ ಅಭಿಪ್ರಾಯಗಳನ್ನು ಗಮನವಿಟ್ಟು ಕೇಳುತ್ತಾರೆ, ಅರ್ಥಮಾಡಿಕೊಳ್ಳುತ್ತಾರೆ. ಅವರ ಜೀವನಾನುಭವವೂ ವಿಶಾಲ, ಆಳ. ಕ್ರಿಯಾಶೀಲರಾಗಿ ಹಲವು ಕ್ಷೇತ್ರಗಳಲ್ಲಿ ಕೆಲಸಮಾಡಿದವರು, ದೇಶದ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದವರು, ರಾಷ್ಟ್ರದ ಹಿರಿಯ ನಾಯಕರನ್ನು ಸಮೀಪದಿಂದ ಕಂಡವರು, ಹಲವಾರು ಸಂಸ್ಥೆಗಳನ್ನು ಪ್ರಾರಂಭಿಸಿ ನೀರೆರೆದು ಪೋಷಿಸಿದವರು. ಅವರ ಸಂಪದ್ಭರಿತ ಗ್ರಂಥಭಂಡಾರವನ್ನು ನೋಡುವುದೇ ಒಂದು

ಸಂತೋಷ. ಆದುದರಿಂದ ಅವರ ಮಾತಿನಲ್ಲಿ ಅಧ್ಯಯನ, ಅನುಭವ, ಚಿಂತನೆ ಮುಪ್ಪುರಿಗೊಳ್ಳುತ್ತವೆ. ಅವರು ಬಹಳ ಮೆಚ್ಚಿಕೊಂಡಿರುವ ವಿನೋಬಾ ಅವರನ್ನು ಒಮ್ಮೆ ನಾನು ಅವರೊಡನೆ ಮಾತನಾಡುತ್ತಾ ಬಹು ತೀಕ್ಷ್ಣವಾಗಿ ಟೀಕಿಸಿದ್ದುಂಟು. ಸ್ವಲ್ಪ ಲೇವಡಿ ಮಾಡಿದೆ ಎಂದು ನೆನಪು. ನಾರಾಯಣಮೂರ್ತಿಗಳಿಗೆ ಸ್ವಲ್ಪ ನೋವಾಯಿತೆಂದು ನನಗೆ ಭಾಸವಾಯಿತು. ಆದರೆ ಅವರ ಉತ್ತರದಲ್ಲಿ ಕಾವಿರಲಿಲ್ಲ, ತಾಳ್ಮೆ ಇತ್ತು, ಸೌಜನ್ಯವಿತ್ತು.

ನಾರಾಯಣಮೂರ್ತಿಗಳು ಬಹು ಶಿಸ್ತಿನ ಹಿರಿಯರು. ಏಳುವುದು, ಓಡಾಟ, ಅಧ್ಯಯನ, ಪತ್ರವ್ಯವಹಾರ ಎಲ್ಲದರಲ್ಲಿ ಕಾಲದ ನಿಯಮದ ಪರಿಪಾಲನೆಯಲ್ಲಿ ಬಹು ಕಟ್ಟುನಿಟ್ಟು. ಮಾತಿನಲ್ಲಿ, ಬರಹದಲ್ಲಿ, ನಡೆಯಲ್ಲಿ ಅಪೂರ್ವ ಸೌಜನ್ಯ. ರಾಜ್ಯದ ಮತ್ತು ರಾಷ್ಟ್ರದ ಆಗುಹೋಗುಗಳಲ್ಲಿ ತೀವ್ರವಾದ ಆಸಕ್ತಿ, ಅವುಗಳ ಕಲ್ಯಾಣದಲ್ಲಿ ತೀವ್ರ ಬಯಕೆ, ಅವರ ಟೀಕೆ ಟಿಪ್ಪಣಿಗಳೆಲ್ಲ ಆಳವಾದ ತಿಳಿವಳಿಕೆಯಿಂದ ಬಂದವು, ರಚನಾತ್ಮಕವಾದವು. ಗಾಂಧೀಯುಗದ ಶ್ರೇಷ್ಠ ಪ್ರತಿನಿಧಿ ಶ್ರೀ ನಾರಾಯಣಮೂರ್ತಿಗಳು. ಬುದ್ಧಿವಂತಿಕೆಯ ಮಾತುಗಳಿಂದ ಮಾಡಿದುದನ್ನೆಲ್ಲ ಸಮರ್ಥಿಸಿಕೊಳ್ಳುವ ನುಡಿಜಾಣರ ಕಾಲದಲ್ಲಿ ಅವರು ನಿಜವಾದ ಮೌಲ್ಯಗಳ ಸಾರ್ಥಕ ಪ್ರತಿನಿಧಿಯಾಗಿದ್ದಾರೆ. ಅವರು ಪತ್ರವನ್ನು 'ಪ್ರಿಯ ಬಂಧು' ಎಂದು ಪ್ರಾರಂಭಿಸುವಾಗ, 'ಎಲ್ಲ ಈಶ್ವರೇಚ್ಛೆ' ಎನ್ನುವಾಗ ಮಾತುಗಳು ಸೌಜನ್ಯಕ್ಕಾಗಿ ಅಥವಾ ಸಾಂಪ್ರದಾಯಿಕವಾಗಿ ಬಂದುವಲ್ಲ, ಮನಸ್ಸಿನಿಂದ ಚಿಮ್ಮಿ ಬಂದಂತಹವು. ಅವರ ಸೌಜನ್ಯ, ಮಾರ್ಗದರ್ಶನ, ಮೇಲ್ಪಂಕ್ತಿ ನಮಗೆ ಬಹುಕಾಲ ಉಳಿದು ಬರಲಿ ಎಂದು ಹಾರೈಸುತ್ತೇನೆ.

—000—

# ಪ್ರಿಯಬಂಧು-ಆತ್ಮೀಯ ಸ್ನೇಹಿತ-ಜಿ.ವಿ.ನಾ.

**ಅವರವರ ಭಾವ—ಅವರವರ ಅನುಭವ**
**ಜಿ.ವಿ.ನಾ. ವ್ಯಕ್ತಿತ್ವಕ್ಕೆ ಅರ್ಪಿಸಿದ ಕುಸುಮಹಾರ**

## ಸೋದರ ಬಂಧು

**ಜಿ. ಎಸ್. ಕೃಷ್ಣಮೂರ್ತಿ**

ಜಿ.ವಿ.ನಾ. ಅವರನ್ನು 'ನಾರಾಯಣ' ಎಂದು ಕರೆದರೂ, ಅವನಲ್ಲಿ ನಮಗೆ ಸಲಿಗೆ ಕಡಿಮೆ : ಕಾರಣ ಅವನು ನಮ್ಮ ಎಲ್ಲ ಬಂಧುಗಳಿಗಿಂತ ಹೆಚ್ಚು ಓದಿದವನು, ತಿಳಿದವನು. ಚಿಕ್ಕಂದಿನಿಂದಲೂ ನಾವು ಜೊತೆಯಲ್ಲಿ ಆಡಿದ್ದೇವೆ ; ಬೆಳೆದಿದ್ದೇವೆ. ನನಗೆ ಜ್ಞಾಪಕ ಬರುವಂತೆ 'ನಾರಾಯಣ' ಯಾವಾಗಲೂ ಸ್ವತಂತ್ರ ಧೋರಣೆಯ ವ್ಯಕ್ತಿ. ನನ್ನ ಚಿಕ್ಕಮ್ಮನ ಮಗನಾದ ಈತ ತನ್ನ ಸೋದರಮಾವನ ಮನೆಯಲ್ಲಿ ಬೆಳೆದ. ಈತನ ಬಾಲ್ಯದ ಕೆಲವು ಘಟನೆಗಳು ನನ್ನ ನೆನಪಿನಲ್ಲಿ ಸದಾ ಹಸಿರಾಗಿವೆ ; ಒಂದನ್ನು ಮಾತ್ರ ನಿರೂಪಿಸುತ್ತೇನೆ.

ಜಿ.ವಿ.ನಾ. ಜೀವನದ ಉದ್ದಕ್ಕೂ ಮನೆಯ ಮಹಡಿ ಮಹತ್ವಪೂರ್ಣವಾದುದು. ಸೋದರಮಾವನ ಮನೆಯ ಮಹಡಿಯೇ ಇವನ ಚಟುವಟಿಕೆಯ ತಾಣ. ಇವನಿಗೆ 'ಭೀಮ' (ಶ್ರೀ ಭೀಮಾಚಾರ್) 'ಕಿಟ್ಟು' (ಶ್ರೀ ಬಾಪು ಕೃಷ್ಣಮೂರ್ತಿ) ಎಂಬ ಸ್ನೇಹಿತರಿದ್ದರು. ಇವರೆಲ್ಲಾ 'ಓದು' ಹಾಗೂ 'ಸಾಮು' ಮಾಡಲು ಮಹಡಿಯ ಮೇಲೆ ಸೇರುತ್ತಿದ್ದರು. ನಾರಾಯಣ ಎರಡರಲ್ಲೂ ಮುಂದು. ಕಲ್ಲಿನ ಗುಂಡು ಮೇಲೆಸೆದು ಹಿಡಿಯುವುದು, ಭಾರ ಎತ್ತುವುದು ಮೊದಲಾದ ಅವನ ಕಾರ್ಯ ನನ್ನನ್ನು ವಿಸ್ಮಿತಗೊಳಿಸುತ್ತಿತ್ತು. ಒಮ್ಮೆ ತನ್ನ ತೋಳುಬಲವನ್ನು ದಪ್ಪ ಕಬ್ಬಿಣದ ಸೌಟಿನ ಹಿಡಿಯನ್ನು ಮುರಿಯುವ ಸಾಹಸದಲ್ಲಿ ನನ್ನ ಅಕ್ಕನಿಗೆ ತೋರಿಸಿದ. ಆಮೇಲೆ ತನ್ನ ಸೋದರತ್ತೆ ಬಯ್ಯುವರೆಂದು ಮುರಿದ ಸೌಟನ್ನು ಕಾಣದಂತೆ ಇಟ್ಟಿದ್ದ. ಕೆಲವು ದಿನಗಳನಂತರ ಸೌಟು ಸಿಕ್ಕಾಗ ಇದು ನಾರಾಯಣನದೇ ಕೆಲಸವೆಂದು ಅವರು ಕೂಗಾಡಿದರು. ಆ ಹೊತ್ತಿನಲ್ಲಿ ಈತ ಮಹಡಿಯಿಂದ ಕೆಳಗೆ ಬರಲೇ ಇಲ್ಲ.

ನಾರಾಯಣ ದೊಡ್ಡವನಾದಂತೆ ನಮ್ಮೆಲ್ಲರಿಗೂ ತಿಳುವಳಿಕೆಯ (ವ್ಯಾವಹಾರಿಕವಾಗಿ) ಆಕರ. ನಮ್ಮ ಸಮಸ್ಯೆ ಯಾವುದೇ ಇದ್ದರೂ, ಅವನು ಹೇಳಿದಂತೆ ನಡೆದು

ಕೊಳ್ಳುತ್ತಿದ್ದೆವು. ಇಂದಿಗೂ ಅದೇ ರೂಢಿ. ನಾನು ಸಣ್ಣದೊಂದು ಪ್ರೆಸ್ ಖರೀದಿಸಿದೆ. ಅಚ್ಚುಮಾಡುವ ತಾಂತ್ರಿಕ ವಿಧಾನದ ಪರಿಣತಯಿದ್ದರೂ, ನನ್ನ ಪ್ರಿಂಟಿಂಗ್ ಕೆಲಸ ಭಾಷಾದೋಷಗಳಿಂದ ಕೂಡಿರುತ್ತಿತ್ತು. ನಾರಾಯಣ ನನಗೆ ಪ್ರಿಂಟಿಂಗ್ ಕೆಲಸ ಒದಗಿಸಿ ಜೊತೆಗೆ 'ಮುದ್ರಾರಾಕ್ಷಸ'ನ ಹಾವಳಿಯನ್ನು ತಪ್ಪಿಸಲು ನೆರವಾಗುತ್ತಿದ್ದ. ಅವನ ಸಹಾಯದಿಂದ ಗಳಿಸಿದ ಅನುಭವ ನನ್ನ ಮುದ್ರಣಕಾರ್ಯ ದಲ್ಲಿ ಯಾವಾಗಲೂ ಅನುಕೂಲವಾಗಿದೆ. ಮುದ್ರಣಕಾರ್ಯ ನನ್ನ ಜೀವನದ ಉದ್ಯೋಗ. ನಾನು ಅಭಿವೃದ್ಧಿಹೊಂದಿದಂತೆ, ಮುದ್ರಣ ನೈಪುಣ್ಯ ಬೆಳೆಯಿತು. ನಾನು ಮಾಡಿದ ಮುದ್ರಣಕಾರ್ಯದಲ್ಲಿ ಮೆಚ್ಚುಗೆ ಬಂದಾಗ ನನ್ನ ತಮ್ಮ ನಾರಾಯಣ ನನ್ನು ಮನಸ್ಸಿನಲ್ಲೇ ವಂದಿಸಿದ್ದೇನೆ. ನಾನು ಕೆಲವು ತಿಂಗಳು ನಾರಾಯಣನಿಗಿಂತ ದೊಡ್ಡವನಾದರೂ, ಅವನೊಂದಿಗೆ ವ್ಯವಹರಿಸುವಾಗ ಜಾಗರೂಕನಾಗಿರುತ್ತೇನೆ. ಅವನ ತೀರ್ಮಾನ (ಯಾವ ವಿಷಯದಲ್ಲಾದರೂ ಸರಿ) ನಮ್ಮೆಲ್ಲರಿಗೂ ಒಮ್ಮತದ ಒಪ್ಪಿಗೆ: ಇದು ನನ್ನ–ಅವನ ಪ್ರೀತಿಯ ಸಂಕೇತವೂ ಹೌದು.

## ಸರಳತೆಯ ಸಾಕಾರ

**ಕೆ. ಶ್ರೀನಿವಾಸಮೂರ್ತಿ**

ನನ್ನ ಸೋದರರಾದ ನಾರಾಯಣಮೂರ್ತಿಯವರು. ನನ್ನ ಬಾಲ್ಯದಿಂದಲೂ ಅವರ ಬಗೆಗೆ 'ಗೌರವ.' ನನ್ನ ಎಲ್ಲಾ ಬಂಧುಗಳೂ ಜಿ.ವಿ.ನಾ. ಮಾತಿನ ಮೋಡಿಗೆ ಒಳಗಾದವರಂತೆ ನಡೆದುಕೊಳ್ಳುತ್ತಾರೆ. ಹುಡುಗನಾಗಿದ್ದಾಗ ಇದಕ್ಕೆ ಕಾರಣ ಹೊಳೆಯಲಿಲ್ಲ. ಕಾಲಕ್ರಮದಲ್ಲಿ ಜಿ.ವಿ.ನಾ. ಬಗೆಗೆ ಹೆಚ್ಚು ಅರಿತುಕೊಂಡೆ. ಅಂದಿನಿಂದ ನಾನು ಅವರನ್ನು ಆದರ್ಶ ಜೀವಿಯಾಗಿ ನೋಡಿದ್ದೇನೆ. ಇಂತಹ ವ್ಯಕ್ತಿಯ 'ಸೋದರಳಿಯ' ಎಂಬುದು ನನಗೆ ತುಂಬಾ ಹೆಮ್ಮೆ.

ನಾರಾಯಣಮೂರ್ತಿಯವರ ಜೀವನದ ವೈಖರಿ ನನಗೆ ಹತ್ತಿರದಿಂದ ಪರಿಚಯ ವಾದಾಗ, ಇಂಥ ಸರಳತೆ ಮನುಷ್ಯನಿಗೆ ಸಾಧ್ಯವೇ ಎಂದು ವಿಸ್ಮಯಗೊಂಡಿದ್ದೇನೆ. ಅವರ ಸರಳತೆ ನಿಜಕ್ಕೂ ಅಸಾಧಾರಣ. ಇದಕ್ಕೆ ಸಂಬಂಧಿಸಿದಂತೆ ಕೆಲವು ಅಂಶಗಳನ್ನು ನಿರೂಪಿಸುವುದು ನನ್ನ ಕರ್ತವ್ಯ.

ಹಲವು ಬಗೆಯ ಬಟ್ಟೆಗಳನ್ನು ಹೊಂದುವುದು, ಧರಿಸುವುದು, ಯಾರಿಗಾದರೂ ಸಂತಸ. ಆದರೆ ಜಿ.ವಿ.ನಾ. ಇದಕ್ಕೆ ಹೊರತು. ಬಿಳಿಯ ಜುಬ್ಬ, ಕಚ್ಚೆ ಪಂಚೆ — ಅವರ ಸದಾಕಾಲದ ಉಡುಪು. ಈ ಬಟ್ಟೆಗಳು ಒಂದು ಜೊತೆ ಮಾತ್ರ. ಒಂದನ್ನು ಉಟ್ಟರೆ, ಇನ್ನೊಂದನ್ನು ಮಡಿಮಾಡುವುದು. ವರ್ಣಮಯ ಮಿಲ್ ಬಟ್ಟೆಯ

ಮೋಹಕ್ಕೆ ಒಳಗಾದ ನಾನು, ಜಿ.ವಿ.ನಾ. ಅವರ ಕನಿಷ್ಠ ಜೀವನಾವಶ್ಯಕ ಉಡುಪಿನ ಉದಾಹರಣೆ ಸರಳತೆಯ ಪರಾಕಾಷ್ಠೆಯಲ್ಲದೆ ಮತ್ತಿನ್ನೇನು ಎಂದು ತಿಳಿದಿದ್ದೇನೆ.

ಇನ್ನೊಂದು ನಿದರ್ಶನ ಅವರ ಆರ್ಥಿಕ ಸರಳತೆಯ ಅಳತೆಗೋಲು. ಮನುಷ್ಯನಿಗೆ ಹಲವು ಹವ್ಯಾಸಗಳಿರುತ್ತವೆ. ಜಿ.ವಿ.ನಾ. ಅವರ ಹವ್ಯಾಸ ಖರ್ಚಿಗೆ ಎಡೆಕೊಡದ ರೀತಿಯದು. ಸಾಹಿತ್ಯಾಭ್ಯಾಸ. ಅದರಲ್ಲೂ ಗಾಂಧೀ ಸಾಹಿತ್ಯ, ಅಧ್ಯಯನ, ಬರವಣಿಗೆ ಮತ್ತು ಪತ್ರ ವ್ಯವಹಾರ ನನ್ನ ಮಾವನವರ ಜೀವನದ ಪ್ರಧಾನ ಅಂಶ. ಸಂಸ್ಥೆಗಳನ್ನು ಕಟ್ಟಿ ನಡೆಸಿದಾಗಲೂ ವೈಯಕ್ತಿಕ ಆರ್ಥಿಕ ವೆಚ್ಚ ಬಹಳ ಅಲ್ಪ ಪ್ರಮಾಣದ್ದು. ಅವರು ಜೀವನ ನಿರ್ವಹಣೆಗೆ ಮಾತ್ರ ಸಾಕಾದಷ್ಟು ಹಣ ಸಂಪಾದಿಸಿದವರು. ಅವರ ವೈಯಕ್ತಿಕ ಮಿತವ್ಯಯ ಜೀವನ, ತಮಗೆ ಸಾಧ್ಯವಾದಷ್ಟು ಇನ್ನೊಬ್ಬರಿಗೆ ನೆರವಾಗಲು ಅನುವಾಗಿದೆ. ಈ ರೀತಿ ಜಿ.ವಿ.ನಾ. ಅವರಿಂದ ಉಪಕೃತರಾದವರು ಅನೇಕರು. ರಾಜಕೀಯ ಆಂದೋಳನದಲ್ಲಿ ಭಾಗವಹಿಸಿದ್ದ ಅವರು ಸ್ವಾತಂತ್ರ್ಯಾನಂತರದಲ್ಲಿ, ಅದರ ವಿಷವರ್ತುಲದಲ್ಲಿ ಸಿಕ್ಕಿ ಬೀಳಲಿಲ್ಲ. ಇಂದಿನ ಪಕ್ಷ ರಾಜಕೀಯ ಅವರಿಗೆ ಬಹು ಬೇಸರದ ಸಂಗತಿ. ನೆಹರೂ ನಂತರ ವರ್ಷಗಳಲ್ಲಿ ಈ ದೇಶದ ಆರ್ಥಿಕ ಅಭಿವೃದ್ಧಿಯ ಜಾಡು ಪೂರ್ಣ ಪಾಶ್ಚಾತ್ಯ ಅಂಧಾನುಕರಣೆ, ಈ ವಿಷಯ ಜಿ.ವಿ.ನಾ.ಗೆ ವ್ಯಸನದ ಸಂಗತಿ. ಸರಳತೆಯನ್ನು ಕೈಬಿಟ್ಟ ಇಂದಿನ ಆರ್ಥಿಕ ಪರಿಸ್ಥಿತಿ ಈ ದೇಶದ ಜನತೆಯನ್ನು ಎಂದಿಗೂ ಉತ್ತಮ ಮಟ್ಟಕ್ಕೆ ಏರಿಸಲಾರದು ಎಂಬ ನಿರ್ದಿಷ್ಟ ಅಭಿಪ್ರಾಯ ನನ್ನ ಮಾವನವರದ್ದು. ಸರಳ ಜೀವನ ದೇಶದ ಆರ್ಥಿಕ ಸಂಪತ್ತನ್ನು ಎಲ್ಲರಿಗೂ ದೊರೆಯುವಂತೆ ಮಾಡುವುದು ಎಂದು ಅವರು ತಿಳಿದಿದ್ದಾರೆ. ಆದ್ದರಿಂದ ಸರಳ ನಡತೆ, ಉಡಿಗೆ, ಹವ್ಯಾಸ, ಮನೋಧರ್ಮ ಎಲ್ಲವೂ ವ್ಯಕ್ತಿಯ ಜೀವನದಲ್ಲಿ ಆರಂಭವಾಗಬೇಕು. ಈ ಅಭಿಪ್ರಾಯ ನನಗೆ ತಿಳಿದಂತೆ ಜಿ.ವಿ.ನಾ. ಬಾಳಿನ ಪುಟಗಳಲ್ಲಿ ಎದ್ದು ಕಾಣುವ ಆಣಿಮುತ್ತು. ಇದರ ತಿಳುವಳಿಕೆ ನನ್ನಲ್ಲಿ ಮೂಡಿದಂತೆ, ಜಿ.ವಿ.ನಾ. ಸರಳತೆಯ ಸಾಕಾರವಾಗಿ, ಆದರ್ಶ ಜೀವಿಯಾಗಿ ಕಂಡುಬಂದಿದ್ದಾರೆ. ಇಂತಹ ನನ್ನ ಪ್ರೀತಿಯ ಸೋದರಮಾವನವರಿಗೆ ಶತ ಶತ ಪ್ರಣಾಮಗಳು.

## ಹೆಮ್ಮೆಯ ಬಂಧು

**ವೇ. ಪಂ. ಟಿ. ನರಸಿಂಹಮೂರ್ತಾಚಾರ್ಯ**

ಅಗಸ್ತ್ಯಗೋತ್ರೋತ್ಪನ್ನರಾದ

ಸನ್ಮಾನ್ಯ ಶ್ರೀ ಜಿ. ವಿ. ನಾರಾಯಣಮೂರ್ತಿಗಳವರು 70 ವರ್ಷ ತುಂಬು ಜೀವನ ನಡೆಸಿ 71ರಲ್ಲಿ ಕಾಲಿಡುತ್ತಿರುವುದು ಬಹಳ ಸಂತೋಷ.

"ಚಕ್ರವತ್ ಪರಿವರ್ತಂತೆ ದುಃಖಾನಿ ಚ ಸುಖಾನಿ ಚ" ಎಂಬಂತೆ ಜೀವನ ಚಕ್ರ ತಿರುಗುತ್ತಾಯಿರುತ್ತದೆ. ಸುಖ ದುಃಖಗಳು ಮಿಂಚಿನಂತೆ ಸಾಗುತ್ತಾ ಹೋಗುತ್ತಿರು

ತ್ತವೆ. ಮಾನವ ಜೀವನದ ಆಳತೆಗೋಲು ಅವನು ಜೀವನದಲ್ಲಿ ಏನು ಸಾಧಿಸುತ್ತಾನೆ ಎಂಬುದರ ಮೇಲೆ ನಿಂತಿರುತ್ತೆ. ಈ ದಿಶೆಯಲ್ಲಿ ಜಿ.ವಿ.ನಾ. ಅವರ ಜೀವನದ ದಿನಚರಿಯ ಸಿಂಹಾವಲೋಕನ ಮಾಡಿದರೆ ಬಹಳ ಸಂತೋಷವಾಗುವುದು.

ಎಷ್ಟೇ ಕಷ್ಟಗಳು ಬಂದಿದ್ದಾಗ್ಯೂ ವಿದ್ಯಾಭ್ಯಾಸ ನಡೆಸಿ ಅಂದಿನ ಪರಿಸ್ಥಿತಿಯ ಕರೆಗೆ ಓಗೊಟ್ಟು ಭಾರತ ದೇಶದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ದುಡಿದು ಭಾರತಾಂಬೆಯ ದಾಸ್ಯಶೃಂಖಲೆ ಬಿಡಿಸಿದವರಲ್ಲಿ ಜಿ.ವಿ.ನಾ. ಒಬ್ಬರೆನಿಸಿದ್ದಾರೆ.

ನನಗೆ ಗೊತ್ತಿರುವಂತೆ ಬಾಲ್ಯ ವಿದ್ಯಾಭ್ಯಾಸದ ಬಗ್ಗೆ ಹೇಳುವುದಾದರೆ ತುಮಕೂರು ಶಾರದಾವಿಲಾಸ ಸಂಸ್ಕೃತ ಪಾಠಶಾಲೆಯಲ್ಲಿ ಜಿ. ರಾಮಾಶಾಸ್ತ್ರಿಗಳವರಿಂದ ಸಂಸ್ಕೃತ ಕಾವ್ಯಗಳನ್ನು ಓದಿದರು. ಆ ಕಾವ್ಯಗಳ ಸ್ಫೂರ್ತಿ ಇಂದು ಅವರ ಜ್ಞಾನದ ಅಡಿಗಲ್ಲು. ನಾನೂ ಸಹ ಅವರಲ್ಲಿಯೇ ನಾಟಕಾಂತ ಸಾಹಿತ್ಯಪರಿಯಂತ ವ್ಯಾಸಂಗ ಮಾಡಿದ್ದು ಜಿ.ವಿ.ನಾ ಸಲಹೆಯಿಂದಲೇ ಎಂದರೆ ತಪ್ಪಾಗಲಾರದು.

ಸಾಹಿತ್ಯ ಕ್ಷೇತ್ರದಲ್ಲಿ ಜಿ.ವಿ.ನಾ. ಅಪಾರ ಸೇವೆ ಸಲ್ಲಿಸಿದ್ದಾರೆ. ರಾಜಕೀಯದಲ್ಲಿ ಸೇವೆ ಸಲ್ಲಿಸಿದರೂ, ಪ್ರತಿಫಲಾಪೇಕ್ಷೆಯನ್ನು ದೂರೀಕರಿಸಿದ್ದಾರೆ. "ಅಗಸ್ತ್ಯರು ಮಾಡಿದ ಸಂಕಲ್ಪ ಹೇಗೆ ಪ್ರಪಂಚ ಉದ್ಧಾರಕ್ಕಾಯಿತೋ" ಜಿ.ವಿ.ನಾ. ಸಂಕಲ್ಪ ಅಷ್ಟಲ್ಲದಿದ್ದರೂ ಸ್ವಲ್ಪವಾದರೂ ನಾಡಿನ ಉದ್ಧಾರಕ್ಕಾಯಿತು ಎಂದರೆ ಅತಿಶಯೋಕ್ತಿಯಲ್ಲ.

ಜಿ.ವಿ.ನಾ. ಅವರ ಕೈ ಹಿಡಿದಿರುವ ಶ್ರೀಮತಿ ಸೌ॥ ಪದ್ಮಾವತಿಬಾಯಿಯವರ ನೆರವು ಅವರ ಕೌಟುಂಬಿಕ ಜೀವನ ನಿರಂತರ ಸನ್ಮಾರ್ಗದಲ್ಲಿ ನಡೆಯುವುದಕ್ಕೆ ಸಹಕಾರಿಯಾಗಿದೆ.

ಜಿ.ವಿ.ನಾ. ಅವರಿಂದ ಕಲಿತವರು ಬಹಳ ಜನ. ಅವರ ಉಪದೇಶ ಕೇಳಿ ಓದಿ ಇಂದಿಗೂ ಅವರನ್ನು ಸ್ಮರಿಸುವವರು ಅನೇಕ ಜನ.

ಜಿ.ವಿ.ನಾ. ಬಂಧುಗಳಾದ ನಮಗಂತೂ ಬಹಳ ಸಂತೋಷ; ಅಭಿಮಾನ· ಜಿ.ವಿ.ನಾ.ರವರ ಬಂಧುವೆನಿಸುವುದೇ ಭಾಗ್ಯವೆಂದೇ ನಮ್ಮ ಭಾವನೆ.

ಪರಮಾತ್ಮ ಅವರಿಗೆ ಆಯುರಾರೋಗ್ಯ ಕೊಡಲಿ.

## ದಾರಿದೀಪ

**ಜಿ. ಎಂ. ರಾಜಾಚಾರ್**

ನನಗೆ ಜಿ.ವಿ.ನಾ. ಅವರು ಹಿರಿಯರೂ, ಪೂಜ್ಯರೂ ಆಗಿದ್ದು ಅವರ ಶುದ್ಧ ಜೀವನ ಅವರಲ್ಲಿ ನಿತಾಂತ ಗೌರವ ಶ್ರದ್ಧೆಯನ್ನುಂಟುಮಾಡಿದೆ. ನಾನು ಬಾಲ್ಯ

ದಿಂದಲೂ ಹಿಂದೂ ಧರ್ಮ, ಸಂಘಟನೆ ಬಗ್ಗೆ ಆಸಕ್ತಿ ವಹಿಸಿ ಕೆಲಸ ಮಾಡುತ್ತಿದ್ದೆ, ಆಗ ಶ್ರೀ ಜಿ.ವಿ.ನಾ.ರವರು ನನಗೆ ಪೂಜ್ಯ ಗಾಂಧೀಜಿಯವರ ಜೀವನದ ಘಟನೆಗಳನ್ನು ವಿವರಿಸುತ್ತಾ, ಗಾಂಧೀಜಿಯವರು ಹೇಗೆ ಸರ್ವ ಶ್ರೇಷ್ಠ ಹಿಂದುವಾಗಿದ್ದರು, ಮತ್ತು ಅವರು ಹೇಗೆ ಆದರ್ಶ ಹಿಂದೂ ಜೀವನ ನಡೆಸಿದರು ಎಂಬುದನ್ನು ಮನಸೆಳೆಯುವಂತೆ ತಿಳಿಸಿ ನನಗೆ ಗಾಂಧೀಜಿಯವರ ವ್ಯಕ್ತಿತ್ವದ ದರ್ಶನ ಮಾಡಿಸಿದರು. ಪೂಜ್ಯ ವಿನೋಬಾಜಿಯವರ ಗ್ರಾಮದಾನ ಚಳುವಳಿಯಲ್ಲಿ ಜಿ.ವಿ.ನಾ. ಸಕ್ರಿಯ ಭಾಗವಹಿಸಿ ದುಡಿದುದಲ್ಲದೆ "Charity begins at Home" ಎಂಬಂತೆ ತಮ್ಮ ಸ್ವಂತ ಬೆಲೆ ಬಾಳುವ ಜಮೀನನ್ನು ದಾನ ಮಾಡಿದ ಘಟನೆ ಮರೆಯಲಾರದ ಅಂಶವಾಗಿದೆ.

ತುಮಕೂರು ಜಿಲ್ಲಾ ಹಿಂದಿ ಪ್ರಚಾರ ಸಮಿತಿಯವರು ಇವರನ್ನು ಪ್ರತಿ ವರ್ಷವೂ ಗಾಂಧೀ ಜಯಂತಿಯಂದು ಕರೆಸಿ ಉಪನ್ಯಾಸ ಏರ್ಪಡಿಸುತ್ತಿದ್ದರು. ಅದನ್ನು ನಾನು ಕೇಳಿ ತುಂಬಾ ಪ್ರಭಾವಿತನಾದೆ. ಅವರ ಆ ಭಾಷಣಗಳು ಇಂದಿಗೂ ನನಗೆ ಚೈತನ್ಯದಾಯಿಯಾಗಿವೆ.

ಲೋಕನಾಯಕ ಜಯಪ್ರಕಾಶ್‌ನಾರಾಯಣ್‌ರವರ ಹೋರಾಟದ ಜೀವನ. ದೇಶಪ್ರೇಮ, ಅಧಿಕಾರದಿಂದ ದೂರವಿದ್ದು ಗ್ರಾಮರಾಜ್ಯ ನಿರ್ಮಾಣಕ್ಕಾಗಿ ಸಂಪೂರ್ಣ ಕ್ರಾಂತಿಯ ಅವರ ಗುರಿ ಇದನ್ನು ಜಿ.ವಿ.ನಾ. ಅವರು ನನಗೆ ಬರೆಯುತ್ತಿದ್ದ ಪತ್ರಗಳ ಮೂಲಕ, ಹಾಗೂ ಅವರು ಪತ್ರಿಕೆಗಳಲ್ಲಿ ಬರೆಯುತ್ತಿದ್ದ ಲೇಖನಗಳನ್ನು ಓದಿ ಸ್ಫೂರ್ತಿ ಪಡೆಯುವಂತೆ ಮಾಡಿದರಲ್ಲದೆ ದಿವಂಗತ "ಲೋಕನಾಯಕರ" ಗುರಿಯನ್ನು ಪೂರ್ತಿಮಾಡಲು ಕಾರ್ಯತತ್ಪರನನ್ನಾಗಿ ಮಾಡಿ ಮಹದುಪಕಾರಮಾಡಿದ್ದಾರೆ.

ಇಂದಿಗೂ ಅವರನ್ನು ಆಗಾಗ್ಗೆ ಭೇಟಿ ಮಾಡುವಂಥ ಸೌಭಾಗ್ಯ ನನಗೆ ದೊರಕುತ್ತಿದೆ. ಅವರು ಭವಿಷ್ಯದ ಬಗ್ಗೆ ತುಂಬ ಕಳವಳಗೊಂಡಂತೆ ಭಾಸವಾಗುತ್ತದೆ. ಇಂದಿನ ಪರಿಸ್ಥಿತಿಯ ಬಗ್ಗೆ ಚಿಂತೆಗೆ ಒಳಗಾದಂತೆ ಕಂಡುಬರುತ್ತಿದೆ. ಆದಾಗ್ಯೂ ಅವರಿಂದ ಪ್ರೇರಣೆ ಪಡೆದ ಸಹಸ್ರಾರು ವಿದ್ಯಾರ್ಥಿಗಳು ನಾನಾ ಕ್ಷೇತ್ರದಲ್ಲಿ ಅವರ ಆದರ್ಶಗಳನ್ನು ಪಾಲಿಸುವ ವ್ಯಕ್ತಿಗಳಾಗಿ ಸೇವೆ ಸಲ್ಲಿಸುತ್ತಿರುವುದು ರಾಷ್ಟ್ರದ ಸೌಭಾಗ್ಯ. ಅಂತಹ ವ್ಯಕ್ತಿಗಳ ಸಾಲಿನಲ್ಲಿ ನಾನೂ ಒಬ್ಬನಾಗಬಲ್ಲೆನೆಂಬ ಆತ್ಮವಿಶ್ವಾಸ ನನ್ನದು. ಅವರ ಶುದ್ಧ ಜೀವನ ನನಗೆ ದಾರಿದೀಪ.

ಪತಿಪರಾಯಣೆಯಾದ ಪತ್ನಿ, ತಂದೆಗೆ ತೃಪ್ತಿ ನೀಡಿರುವ ಏಕೈಕ ಯೋಗ್ಯಪುತ್ರ ಮತ್ತು ಮೊಮ್ಮಕ್ಕಳು ಇವರಿಂದ ಕೂಡಿರುವ ಇವರು 70 ವರ್ಷಗಳ ಗಡಿಯನ್ನು ದಾಟಿ ಮುನ್ನಡೆ ಇಡುತ್ತಿದ್ದಾರೆ. ಇವರು ನೂರು ವರ್ಷಕ್ಕೂ ಹೆಚ್ಚಿನ ಬಾಳನ್ನು ಬಾಳುವಂತೆ ನಮ್ಮ ಕುಲದೈವ ಶ್ರೀ ಲಕ್ಷ್ಮೀನೃಸಿಂಹಸ್ವಾಮಿಯಲ್ಲಿ ನನ್ನ ಅನನ್ಯ ಪ್ರಾರ್ಥನೆ.

## ಅನುಕರಣೀಯ ವ್ಯಕ್ತಿ

**ಎಚ್. ಆರ್. ಚಂದ್ರವದನರಾವ್**

ಹಿರಿಯ ವ್ಯಕ್ತಿ ಪೂಜ್ಯ ಜಿ. ವಿ. ನಾ. ಅವರಿಗೆ ನನ್ನ ಪರಿಚಯವೂ ಇದೆ ಎಂದು ಹೇಳಿಕೊಳ್ಳುವುದಕ್ಕೆ ನನಗೆ ತುಂಬಾ ಜಂಭ. ಸುಮಾರು ಇಪ್ಪತ್ತಾರು-ಇಪ್ಪತ್ತೇಳು ವರ್ಷದ ಕೆಳಗೆ ನಾನು ಮಾಯಸಂದ್ರದ ಸರ್ಕಾರಿ ಮಾಧ್ಯಮಿಕ ಶಾಲೆಗೆ ಪದವೀಧರ ಮುಖ್ಯೋಪಾಧ್ಯಾಯನಾಗಿ ವರ್ಗವಾಗಿ ಬಂದಾಗ, ಆ ಮಾದರಿ ಹಳ್ಳಿಯಲ್ಲಿ, ಒಂದು ಮಾದರಿ ಪ್ರೌಢವಿದ್ಯಾಶಾಲೆಯನ್ನು ಶ್ರೀಜಿ.ವಿ.ನಾ.ರವರು ತೆರೆದು ಅದಕ್ಕೆ ಮುಖ್ಯೋಪಾಧ್ಯಾಯರಾಗಿದ್ದರು. ನಾನು ಮಾಯಸಂದ್ರದಲ್ಲಿ ಇದ್ದಷ್ಟು ಕಾಲ ಅವರನ್ನು ಆಗಾಗ್ಗೆ ನೋಡುತ್ತಿದ್ದೆ. ಅವರ ಜ್ಞಾನ ಸಂಪತ್ತು, ಭಾಷಣ ಕಲೆ, ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳ ಮೇಲೆ ಅವರಿಗೆ ಇರುವ ಪ್ರಭುತ್ವ, ಅವರ ಆಡಳಿತ ಮಾರ್ಗ-ಇವನ್ನು ನೋಡಿ ನಾನು ಅವರನ್ನು ಮೆಚ್ಚಿದ್ದೆ. ಅನಂತರ ಅವರು ಮೈಸೂರಿನಲ್ಲಿ ಇದ್ದಾಗ ಅವರನ್ನು ಅನೇಕ ಬಾರಿ ನೋಡಿದ್ದೇನೆ.

"ಸರಳ ಜೀವನ; ಉನ್ನತ ಆಲೋಚನೆ", ಇವಕ್ಕೆ ಆಗರ ಶ್ರೀ ಜಿ.ವಿ.ನಾ. ಅವರು ಬರೆದಿರುವ ಪುಸ್ತಕಗಳು ಸಾಕಷ್ಟು ಇವೆ. ವಯಸ್ಕರಿಗೆ ಬರೆದಿರುವ "ಗೀತಾ ಪತ್ರಗಳು" ಗೀತೆಯ ಬಗ್ಗೆ ಸುಲಭವಾಗಿ ತಿಳಿದುಕೊಳ್ಳಲು ಬರೆದಿರುವ ಒಂದು ಪುಸ್ತಕ. ಗಾಂಧಿ ವಾದದಲ್ಲಿ ಅವರಿಗೆ ಇರುವ ನಂಬಿಕೆ ಅದ್ವಿತೀಯ. ಶ್ರೀ ಜಿ.ವಿ.ನಾ.ರವರು ಉತ್ತಮ ಭಾಷಣಕಾರರಲ್ಲದೆ, ಗ್ರಂಥಕರ್ತರಲ್ಲದೆ ಆಸಕ್ತಿ ಕೆರಳಿಸುವ ಸಂಭಾಷಣಕಾರರೂ ಆಗಿದ್ದಾರೆ.

ಶ್ರೀ ಜಿ.ವಿ.ನಾ. ನೇರ ರಾಜಕಾರಣದಲ್ಲಿ ಇದ್ದಿದ್ದರೆ ಮಂತ್ರಿ ಆಗಬಹುದಿತ್ತೋ ಏನೋ. ಸ್ವಾರ್ಥಿಯಾಗಿದ್ದರೆ. ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ್ದರ ಫಲವಾಗಿ ಲಕ್ಷಾಂತರ ರೂಪಾಯಿಗಳನ್ನು ಮಾಡಿಕೊಳ್ಳಬಹುದಾಗಿತ್ತು. ಆದರೆ ಶ್ರೀ ಜಿ. ವಿ. ನಾ. ಅವರಿಗೆ ಇದು ಬೇಡ. ಅವರ ಗುಣ ಅನುಕರಣೀಯ.

## ಕಾರ್ಯೋನ್ಮುಖ

**ಎಸ್. ಮಲ್ಲಪ್ಪ**

ನಾನು ಹಾಗೂ ಶ್ರೀ ಜಿ.ವಿ.ನಾರವರು ಬಾಲ್ಯಸ್ನೇಹಿತರು ಹೌದು, ಸಹಪಾಠಿಗಳೂ ನಿಜ. ಶ್ರೀ ಜಿ.ವಿ.ನಾರವರ ಮಾತಿನಲ್ಲಿ ಹೇಳುವುದಾದರೆ ನಾವಿಬ್ಬರು 'ಪುಟಗೋಸಿ' ಸ್ನೇಹಿತರು. ಕಾಲೇಜು ವ್ಯಾಸಂಗ ಮುಗಿದನಂತರ ಬಹುಶಃ ಎರಡು ಬಾರಿ ಮಾತ್ರ ನಾವಿಬ್ಬರು ಒಟ್ಟುಗೂಡಿದೆವು; ಹಾಗೆ ನಾವಿಬ್ಬರೂ ಸೇರಿದಾಗಿನ ಕೆಲವು ಸಂದರ್ಭಗಳನ್ನು ಇಲ್ಲಿ ಜ್ಞಾಪಿಸಿಕೊಳ್ಳುತ್ತಿದ್ದೇನೆ.

ಸಮಾರು 1942ನೇ ಇಸ್ವಿಯಲ್ಲಿ ನಾನು ಚಿಕ್ಕನಾಯಕನಹಳ್ಳಿಗೆ ಸಹಕಾರಿ ಇಲಾಖಾ ಇನ್ಸ್‌ಪೆಕ್ಟರನಾಗಿ ಹೋಗಿ ಸುಮಾರು ಎರಡು ವರ್ಷವಿದ್ದೆ. ನಾವಿಬ್ಬರೂ ದಿನವೂ ಸೇರುತ್ತಿದ್ದೆವು. ಎರಡನೆ ಯುದ್ಧದ ದೆಸೆಯಿಂದಾಗಿ ಹತ್ತಿನೇಕಾರರಿಗೆ ನೇಯುವ ದಾರ ದೊರಕದೆ ಬಟ್ಟೆ ನೇಯುವುದನ್ನೇ ಅಲ್ಲಿಯ ನೇಕಾರರು ನಿಲ್ಲಿಸಬೇಕಾಗಿತ್ತು. ಆಗ ನಾವಿಬ್ಬರೂ ನೇಕಾರರ ಸಹಕಾರ ಸಂಘವೊಂದನ್ನು ರಚಿಸಿ ಆ ಮೂಲಕ ಅವರಿಗೆ ತಕ್ಕಷ್ಟುಮಟ್ಟಿಗೆ ಉದ್ಯೋಗಾವಕಾಶವನ್ನು ಕಲ್ಪಿಸಿದೆವು. ಸ್ಥಳೀಯವಾಗಿ ಚರಕಗಳನ್ನು ತಯಾರಿಸಿ ನೇಕಾರರಿಗೆ ಒದಗಿಸಿಕೊಟ್ಟು ತನ್ಮೂಲಕ ಸಹಾಯಮಾಡಿ ಬಟ್ಟೆನೇಕಾರಿಕೆಯನ್ನು ಮುಂದುವರಿಸಿದೆವು. ಜಿ.ವಿ.ನಾ ರವರ ಸಾಹಚರ್ಯೆ ನನ್ನನ್ನು ಈ ಸಮಾಜ ಸೇವೆಗೆ ಎಳೆದಿತ್ತು.

ಈಚೆಗೆ ನಾನು ಕೆಲಸದಿಂದ ನಿವೃತ್ತಿಹೊಂದಿದ ಮೇಲೆ ತುಮಕೂರಿಗೆ ಬಂದು ನೆಲಸಿದೆ. 1975-76ರಲ್ಲಿ ನಾವಿಬ್ಬರೂ ಪುನಃ ಸೇರಿದೆವು. ಖಾಸಗಿಯಾಗಿ ಕೆಲವು ಶಿಕ್ಷಣ ಸಂಸ್ಥೆಗಳನ್ನು ಅವರಂತೆಯೇ ನಾನೂ ಈ ಜಿಲ್ಲೆಯಲ್ಲಿ ಸ್ಥಾಪಿಸಿದೆನು. ಈ ಖಾಸಗೀ ಸಂಸ್ಥೆಗಳನ್ನು ಉತ್ತಮ ರೀತಿಯಲ್ಲಿ ನಡೆಸಬೇಕೆಂಬ ಆಕಾಂಕ್ಷೆಯಿಂದ ನಾವಿಬ್ಬರೂ ಸೇರಿ ತುಮಕೂರು ಜಿಲ್ಲೆಯಲ್ಲಿರುವ ಅಂತಹ ಎಲ್ಲಾ ಸಂಸ್ಥೆಗಳ ಸಮ್ಮೇಳನವೊಂದನ್ನು ಕರೆದೆವು. ತಕ್ಷಣವೇ "ತುಮಕೂರು ಜಿಲ್ಲಾ ಸಹಾಯಧನ ಪಡೆದ ಶಿಕ್ಷಣ ಸಂಯುಕ್ತ ಸಂಘ"ವನ್ನು ರಿಜಿಸ್ಟರ್ಡ್ ಮಾಡಿಸಿದೆವು. ಎರಡು-ಎರಡೂವರೆ ವರ್ಷ ಈ ಸಂಸ್ಥೆ ಶಿಕ್ಷಣ ಕ್ಷೇತ್ರದಲ್ಲಿ ಮಾಡಿದ ಕೆಲಸವನ್ನು ಇಲಾಖಾ ಮುಖ್ಯರೂ, ಮಂತ್ರಿಗಳೂ ಮುಕ್ತಕಂಠದಿಂದ ಶ್ಲಾಘಿಸಿ ಆಶೀರ್ವದಿಸಿದರು. ಅದೆಲ್ಲ ಕೀರ್ತಿಯು ಶ್ರೀ ಜಿ.ವಿ.ನಾ ರವರಿಗೆ ಸಲ್ಲತಕ್ಕದ್ದು. ಅವರು ಇತ್ತೀಚೆಗೆ ಸುಮಾರು ಎರಡೂವರೆ ವರ್ಷದ ಹಿಂದೆ ಮೈಸ್ವಸ್ಥವಿಲ್ಲದೆ, ಹೆಚ್ಚಿಗೆ ಹೊರಗಡೆ ಬಾರದೆ ಇದ್ದುದರಿಂದ ಆ ಸಂಸ್ಥೆ ಮೂಲೆಗುಂಪಾಗಿದೆ. ನನಗಂತೂ ಆ ಸಂಸ್ಥೆಯ ಬಗ್ಗೆ ಯೋಚನೆ ಮಾಡಿದಾಗ ಅತೀವ ದುಃಖವಾಗುತ್ತದೆ.

ಜಿ.ವಿ.ನಾ. ಮೂರ್ತಿಯವರ ವ್ಯಕ್ತಿತ್ವದ ಬಗ್ಗೆ ಹೇಳುವ ಮತ್ತೊಂದು ವಿಷಯ ಜ್ಞಾಪಕಕ್ಕೆ ಬರುತ್ತದೆ; ಸುಮಾರು 5 ದಶಕಗಳ ಹಿಂದಿನ ಮಾತು. ನಾವೆಲ್ಲ ಮೈಸೂರಿನಲ್ಲಿ ಜೂನಿಯರ್ ಬಿ.ಎ. ತರಗತಿಯಲ್ಲಿ ವ್ಯಾಸಂಗ ಮಾಡುವಾಗ, ಮಾರ್ಚಿ ತಿಂಗಳ ವರ್ಷಾಂತ್ಯದ ಪರೀಕ್ಷೆಗಾಗಿ ಓದಿ ಬಳಲಿ ಒಮ್ಮೆ ವಿದ್ಯಾರ್ಥಿನಿಲಯದ ಆವರಣದಲ್ಲಿ ಹರಟೆ ಹೊಡೆಯುತ್ತ ಕುಳಿತಿದ್ದೆವು. ಮೂರ್ತಿ ಅಲ್ಲಿಗೆ ಬಂದರು, ಯಾರೋ ಒತ್ತಾಯಪಡಿಸಿದರು—"ಮೂರ್ತಿ, ದಾಸರ ದೇವರನಾಮ ಒಂದೆರಡು ಹಾಡು" ಎಂದು. ಅವರು ನನಗೆ ಜ್ಞಾಪಕವಿದ್ದಂತೆ ಸುಮಾರು ಅರ್ಧಗಂಟೆ ಹಾಡಿದರು. ಸುಮಧುರವಾದ ಕಂಠ; ಭಕ್ತಿರಸವೇ ಹರಿಯಿತು, ಸ್ವಚ್ಛ ಚರಿತ್ರೆಯನ್ನು ಹೊಂದಿರುವವರಿಗೆ ಇದೆಲ್ಲವನ್ನು ದೇವರು ದಯಪಾಲಿಸುತ್ತಾನೆಂಬುದು ನಿಜ.

ಇಂತಹ ಅದೆಷ್ಟೋ ವಿಷಯಗಳು ನನಗೆ ಜ್ಞಾಪಕಕ್ಕೆ ಬರುತ್ತವೆ. ಇವರಿಗೆ ಭಗವಂತನು ದೀರ್ಘ ಆಯುರಾರೋಗ್ಯವನ್ನು ಇನ್ನು ಮುಂದೂ ಕರುಣಿಸಿ ಕಾಪಾಡಲೆಂದು ಪ್ರಾರ್ಥಿಸುತ್ತೇನೆ.

## ನಿಸ್ವಾರ್ಥ ಸೇವಾ ಧುರೀಣ

**ಬಿ. ಭೈರಪ್ಪಾಜಿ**

ಮಾನ್ಯ ಶ್ರೀ ಜಿ.ವಿ.ನಾ.ರವರ ಪರಿಚಯ ಪ್ರಥಮತಃ 1953ರಲ್ಲಿ. ಅದೂ ಮಾಯಸಂದ್ರದಲ್ಲಿ. "ನೆಹರೂ"ರವರ ಹುಟ್ಟುಹಬ್ಬದ ಸವಿನೆನಪಿಗಾಗಿ ಒಂದು ಪ್ರೌಢಶಾಲೆಯನ್ನು ಪ್ರಾರಂಭಿಸುವ ಶುಭ ಸಂದರ್ಭ. ದಿವಂಗತ ಮಾ.ಕೃ. ನರಸಿಂಹಯ್ಯನವರೊಡನೆ ಶ್ರೀ ಜಿ.ವಿ.ನಾ.ರವರು ಸೇರಿ ಪ್ರಾರಂಭಿಸಿದ ಈ ಶುಭಕಾರ್ಯದಲ್ಲಿ ಸಹಭಾಗಿಯಾಗಲು ನನಗೂ ಅವಕಾಶ ದೊರಕಿತು. ಅಂದು ನಾನು "ಪ್ರಜಾಸೋಷಿಯಲಿಸ್ಟ್" ಪಕ್ಷದ ಕಾರ್ಯಕರ್ತನಾಗಿದ್ದೆ. ಜಿ.ವಿ.ನಾ.ರವರ ಸರಳತೆ, ರಾಷ್ಟ್ರಭಕ್ತಿ, ನಿಸ್ವಾರ್ಥಸೇವೆ ಇವುಗಳು ನನಗೆ ಆಕರ್ಷಕವಾದುವು. ಇವರು ಜಾತಿ, ಮತ, ಪಂಥಗಳ ಭೇದವಿಲ್ಲದ ಒಬ್ಬ ನಿಷ್ಣಾತ ರಾಷ್ಟ್ರಪ್ರೇಮಿ.

ಶ್ರೀ ನೆಹರೂರವರ ನಾಮಾಂಕಿತದಲ್ಲಿ ಪ್ರಾರಂಭಿಸಲಾದ ವಿದ್ಯಾಶಾಲೆಯಲ್ಲಿ ವ್ಯಾಸಂಗ ಮಾಡುತ್ತಿದ್ದ ಬಡ ವಿದ್ಯಾರ್ಥಿಗಳಿಗಾಗಿ ಒಂದು ಸಾರ್ವಜನಿಕ ವಿದ್ಯಾರ್ಥಿ ನಿಲಯ ಪ್ರಾರಂಭಿಸಲು ನನಗೆ ದಿವಂಗತ ಮಾ.ಕೃ. ನರಸಿಂಹಯ್ಯನವರು ಹಾಗೂ ಶ್ರೀ ಜಿ.ವಿ.ನಾ.ರವರು ಅವಕಾಶಮಾಡಿಕೊಟ್ಟರು. ನಾನು ಅಂದು ಬಹಳ ಚಿಕ್ಕ ವಯಸ್ಸಿನವ. ನನಗೆ ಜನತೆಯ ಸಂಪರ್ಕ ಹೊಂದಲು ಹಾಸ್ಟಲ್ ಹಾಗೂ ಪ್ರೌಢಶಾಲೆ ವಿಷಯದಲ್ಲಿ ನನ್ನ ಕೈಲಾದ ಸೇವೆ ಮಾಡಲು ಪ್ರೇರೇಪಿಸಿದರು. ಇಂದು ನಾನು ಸಮಾಜದಲ್ಲಿ ಕಿಂಚಿತ್ ಕೆಲಸ ಮಾಡಲು ಅಥವಾ ಸಹಬಾಳ್ವೆಯಲ್ಲಿ ಕಿಂಚಿತ್ ಒಳ್ಳೆಯ ಹೆಸರು ಗಳಿಸಿದ್ದರೆ ಅದಕ್ಕೆ ಕಾರಣಕರ್ತರಲ್ಲಿ ಶ್ರೀ ಜಿ.ವಿ.ನಾ.ರವರೂ ಒಬ್ಬರು.

ಆತ್ಮೀಯರೂ, ಹಿರಿಯರೂ ಆದ ಶ್ರೀ ಜಿ.ವಿ.ನಾ.ರವರು ಪೂಜ್ಯ ಮಹಾತ್ಮ ಗಾಂಧಿಯವರ ನಿಷ್ಠಾವಂತ ಅನುಯಾಯಿಗಳು. ಇವರು ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿದ್ದ ನಿಷ್ಠಾವಂತ ಕಾರ್ಯಕರ್ತರಾದರೂ, ಸರ್ಕಾರದಿಂದಾಗಲೀ ಅಥವಾ ಇನ್ಯಾವುದೇ ಸಂಸ್ಥೆಯಿಂದಾಗಲೀ ಪ್ರತಿಫಲ ಪಡೆಯುವ ಹಂಬಲ ಇಟ್ಟುಕೊಳ್ಳದೆ, ಇದು ತನ್ನ ಕರ್ತವ್ಯ, ರಾಷ್ಟ್ರಕ್ಕೆ ಸಲ್ಲಿಸಬೇಕಾದ ಸೇವೆ ಎಂದು ಭಾವಿಸಿದ ಪುಣ್ಯಜೀವಿ. ಸ್ವಾತಂತ್ರ್ಯಾನಂತರ ವಿದ್ಯಾಕ್ಷೇತ್ರದ ಮೂಲಕ, ಗಾಂಧೀ ಸಾಹಿತ್ಯ ಪ್ರಕಟಣಾ ಹೊಣೆಗಾರಿಕೆಯ ಮೂಲಕ, ಒಳ್ಳೆಯ ಭವಿಷ್ಯವನ್ನು ಕಾಣಲು ಹಲವಾರು ವಿದ್ಯಾಸಂಸ್ಥೆಗಳನ್ನು ಕಟ್ಟಿ, ಪೋಷಿಸಿಕೊಂಡು ಬಂದಿದ್ದಾರೆ. ಇಂದು

ಸಹಸ್ರಾರು ಜನ ಅವರ ವಿದ್ಯಾರ್ಥಿ ಶಿಷ್ಯಂದಿರು ಅವರ ಮಾರ್ಗದರ್ಶನದಲ್ಲಿ ಸಮಾಜದ ಉತ್ತಮ ದೇಶಭಕ್ತರಾಗಿ ; ಉತ್ತಮ ಪ್ರಜೆಗಳಾಗಿ ಬಾಳ್ವೆ ನಡೆಸುತ್ತಿದ್ದಾರೆ.

ಪರಮಾತ್ಮನು ಪೂಜ್ಯ ಜಿ.ವಿ.ನಾ.ರವರಿಗೆ ಆಯುರಾರೋಗ್ಯಭಾಗ್ಯಗಳನ್ನು ಕೊಟ್ಟು ಇನ್ನೂ ನೂರ್ಕಾಲ ಬಾಳಿಸಿ ಅವರ ಮಾರ್ಗದರ್ಶನದಲ್ಲಿ ಇನ್ನೂ ಹೆಚ್ಚು ಹೆಚ್ಚು ಯುವಜನತೆ ಅಭಿವೃದ್ಧಿಹೊಂದಿ ನಾಡಿನ ಸೇವೆ ಮಾಡುವಂತಾಗಲಿ ಎಂದು ಹಾರೈಸುತ್ತೇನೆ.

## ಆತ್ಮೀಯ ಮುಖ್ಯೋಪಾಧ್ಯಾಯ

**ಮಾ.ಸು. ಅನಂತ**

1954ರ ಫೆಬ್ರವರಿ ತಿಂಗಳಿನಲ್ಲಿ ನೆಹ್ರೂ ವಿದ್ಯಾಶಾಲೆಯನ್ನು ಸೇರಿದೆ ಸಹ ಅಧ್ಯಾಪಕನಾಗಿ. ಶಾಲೆಯ ಮುಖ್ಯೋಪಾಧ್ಯಾಯರು ಪೂಜ್ಯ ಜಿ.ವಿ.ನಾ.ರವರು. ಸುಮಾರು ಒಂದು ವರ್ಷ ಕಾಲ ಅವರ ಜೊತೆ ಕೆಲಸ ಮಾಡುವ ಅದೃಷ್ಟ ನನ್ನ ಪಾಲಿಗೆ. ಆ ಸಮಯದ ರಸಘಳಿಗೆಗಳೆಷ್ಟೋ, ಕಲಿತ ವಿಷಯುಗಳೆಷ್ಟೋ. ಅವುಗಳಲ್ಲಿ ಒಂದರ ಸ್ಮರಣೆಯನ್ನು ಮಾಡಿಕೊಂಡಿದ್ದೇನೆ.

ಸಹ ಅಧ್ಯಾಪಕನಾದಮೇಲೆ ಶಾಲೆಗೆ ಬಂದಾಗ ಪೂಜ್ಯ ಶ್ರೀ ಜಿ.ವಿ.ನಾ.ರವರನ್ನು ದಿನದಲ್ಲಿ ಮೊದಲು ನೋಡಿದಾಗ "ನಮಸ್ಕಾರ ಸಾರ್" ಎಂದು ಹೇಳಿ ನಮಸ್ಕರಿಸುತ್ತಿದ್ದೆ, 2 ದಿನಗಳು ಕಳೆದಿರಬಹುದು. ಮೂರನೆಯ ದಿನ ಸಾಯಂಕಾಲ ಅವರು ನನ್ನನ್ನು ಕರೆದು ಈ ರೀತಿ ಕೇಳಿದರು.

"ಅನಂತೂ, ನಿಮ್ಮ ಮನೆಯಲ್ಲಿ ದೊಡ್ಡವರು ನಿಮ್ಮ ಅಣ್ಣ ಇದ್ದಾರೆ; ಪ್ರತಿದಿನ ಬೆಳಿಗ್ಗೆ ನೀನು ಅವರನ್ನು ಕಂಡಾಗ ನಮಸ್ಕಾರ ಮಾಡುವೆಯಾ ?" ಉತ್ತರ ಸ್ವಾಭಾವಿಕ "ಇಲ್ಲಾ." "ಅದೇ ರೀತಿ ಶಾಲೆಯಲ್ಲೂ, ಇಲ್ಲಿ ನಾನು ನಿನ್ನ ಅಣ್ಣನಂತೆ, ಆದ್ದರಿಂದ ನಮಸ್ಕಾರ ಬೇಡ." ಅಂದಿನಿಂದ ಅವರಿಗೆ ಕಂಡಾಗ ನಮಸ್ಕಾರ ಮಾಡುವುದಲ್ಲ, ನಮ್ಮ ಪ್ರೀತಿ, ವಿಶ್ವಾಸ ಮತ್ತು ಗೌರವಗಳನ್ನು ನಮ್ಮ ಮನಸ್ಸಿನಲ್ಲಿ ಇಟ್ಟುಕೊಂಡು ಮಕ್ಕಳಂತೆ ಅವರ ಜೊತೆ ಮಾತನಾಡುವುದು. ಅದೇ ಪ್ರೀತಿ ಅವರಿಗೆ ಇತರರಲ್ಲಿ. ಈ ರೀತಿ ಅವರಿಗೆ ಶಾಲೆ, ಮನೆ. ಸಮಾಜ ಎಲ್ಲಾ ಒಂದೇ. ಎಲ್ಲಾ ಕಡೆಯಲ್ಲೂ ಅದೇ ಪ್ರೀತಿ.

ನನ್ನ 15 ವರ್ಷಗಳ ವಿದ್ಯಾಭ್ಯಾಸದಲ್ಲಿ ಕಲಿಯದಿದ್ದ ಜೀವನಾವಶ್ಯಕ ವಿಷಯಗಳನ್ನು ಒಂದು ವರ್ಷದ ಅವರ ಸಹವಾಸದಲ್ಲಿ ಕಲಿತೆ ಎಂದು ಹೇಳಲು ಹೆಮ್ಮೆಪಡುತ್ತೇನೆ. ಪೂಜ್ಯ ಶ್ರೀ ಜಿ.ವಿ.ನಾ. ಚಿರಾಯುಗಳಾಗಲಿ ಎಂದು ಪ್ರಾರ್ಥಿಸುತ್ತೇನೆ.

## ಸ್ನಿಗ್ಧ ನೀಲ ಸಾಲಗ್ರಾಮ

ಅರ್ಯೆಯರ್

ಇಪ್ಪತ್ತೈದು ವರ್ಷದ ಪಾದಯಾತ್ರೆಯಲ್ಲಿ ನನಗೆ ದೊರೆತ ರತ್ನಗಳನೇಕ. ಅವುಗಳಿಂದ ನಾನು ಬಲು ಪ್ರಕಾಶ ಪಡೆದೆ. ಅವುಗಳಲ್ಲಿ ನನಗೆ ದೊರೆತ ಪರಮ ಪವಿತ್ರ "ಸ್ನಿಗ್ಧ ನೀಲ ಸಾಲಗ್ರಾಮ" ಶ್ರೀ ಪೂಜ್ಯ ಜಿ. ವಿ. ನಾರಾಯಣ ಮೂರ್ತಿಯವರು. ಗಂಡಕೀನದಿಗೂ ಪಾದಚಾರಿಯಾಗಿ ಹಿಂದೆ ಹೋಗಿದ್ದೆ. ಅಲ್ಲಿ ನನಗೆ ದೇವರು ದಯ ಪಾಲಿಸಿದ್ದ ಸಾಲಿಗ್ರಾಮ ಮೂರ್ತಿಗಳಲ್ಲೊಂದು ಮೂರ್ತಿಯನ್ನು, ನನ್ನ ಪಾದಯಾತ್ರೆಯಲ್ಲಿಟ್ಟುಕೊಂಡು ಪೂಜೆ ಮಾಡುತ್ತಿದ್ದೆ.

ಹಿಮಾಲಯದ ಆ ಸ್ನಿಗ್ಧಶಿಲೆಯ ಮಹಿಮೆಯೋ ಏನೋ ಅಷ್ಟೇ ಸ್ನೇಹಳ, ಸಹೃದಯ, ಸ್ಥಿರಗುಣ ಒಬ್ಬ "ವಿಶ್ವಮಾನವ" ದರ್ಶನ–ಸ್ಪರ್ಶನವಾಯಿತು, ಮೊಟ್ಟ ಮೊದಲು ತುಮಕೂರು ಜಿಲ್ಲೆಯ ಮಾಯಸಂದ್ರದಲ್ಲಿ, ಆಮೇಲೆ ಚಿಕ್ಕನಾಯಕನಹಳ್ಳಿಯಲ್ಲಿ.

ಸರ್ವೋದಯ ತಾರಕ ದೃಷ್ಟಿಯಿಂದ ಸಮಾಜರಚನಾಸೃಷ್ಟಿಗೆ ಇಳಿದ ಈ ನಾರಾಯಣಮೂರ್ತಿ. ಲಿಂಗರಾಜದೇವರಂಥ ಅನೇಕ ಶಾಸಕರಿಗೂ, ಗೋವಿಂದ ರಾಯರೇ ಮೊದಲಾದ ಅಧ್ಯಾಪಕರಿಗೂ, ಅನೇಕ ವಿದ್ಯಾರ್ಥಿಗಳಿಗೂ ಸಂದದ ದಾರಿ ದೀವಿಗೆ. ಗಾಂಧೀ ಸಾಹಿತ್ಯದ ಕನ್ನಡ ರಚನೆಯಲ್ಲಿ ಇವರ ಕಾಮಾಟಿತನವನ್ನು ಕನ್ನಡ ನಾಡಿನ ಶಿಕ್ಷಣ ಯೋಜಕರು ಇಂದೂ ಮುಂದೂ ಸಾರ್ಥಕಪಡಿಸಿಕೊಳ್ಳಬೇಕಾಗಿದೆ.

ತಿಮ್ಮನಹಳ್ಳಿಯ ಆ ಬೆಟ್ಟಪ್ರದೇಶದಲ್ಲಿ, ಆ ಕಠಿಣ ಕಲ್ಲು ಹಾದಿಯಲ್ಲಿ, ಬಂದು ನನಗೆ ದಾರಿ ತೋರಿದವರು ನಾರಾಯಣಮೂರ್ತಿಗಳು. ಅವರ ಹೃದಯ ಸ್ಥಿರ ಹಾಗೂ ಮೃದುವಾಗಿದ್ದಂತೆಯೇ ಅವರ ಪಾದ ಮೃದುವಾದರೂ ಆ ಹಾದಿಯ ಕಠಿಣತೆಯನ್ನು ಕಳೆಯಿತು. ದೊಡ್ಡವರ ಪ್ರತಿಯೊಂದೂ "ವಜ್ರಾದಪಿ ಕಠೋರಾಣಿ, ಮೃದೂನಿ ಕುಸುಮಾದಪಿ !" ಈ ಅನುಭವ ನನಗಾ ಪಾದಯಾತ್ರೆಯ ಎರಡು ದಿನಗಳಲ್ಲೂ ಚೆನ್ನಾಗಿ ಆಯಿತು. ಇವರ ಕಣ್ಣಿನ ಹೊಳಪಿನಿಂದ ಉಕ್ಕಿ ಉಕ್ಕಿ ಬರುತ್ತಿದ್ದ ಆ ರಸಮಯ ಸರಸ್ವತೀ ಪಾನ, ಆ ಕ್ರಾಂತಿ ಪಾರದರ್ಶಿತ್ವ, ಅವರ ಜೀವನದ ಅಂತರ್ ಭಕ್ತಿ ಮಾರ್ದವ, ಎಂಥವರ ಹೃದಯವನ್ನೂ ಮುಟ್ಟುವ ಸ್ಫಟಿಕ ಸಲಾಕಿಯ ವಾಕ್ಯ ರಚನೆ, ಆ ಸಹಜ ನಮ್ರತೆ, ನನ್ನ ತಿದ್ದುಪಾಡಿಗೆ ಬೇಕಾಗಿರುವ ಉಪಾಸ್ಯಗುಣಗಳಾದವು. ಇವರ ಲೋಕಾಭಿಮುಖ ಸೌಜನ್ಯವೇ ಆ ಪಾದಯಾತ್ರೆಯಲ್ಲಿ ಭೂಮಿದಾನ ದೊರಕಿಸಿ ಕೊಟ್ಟಿತು. ಹೊನ್ನೇಗೌಡರು ನಂಜೇಗೌಡರಂಥ ಸಹಜ ಸುಹೃಜ್ಜನರನ್ನು ದೊರಕಿಸಿ ಕೊಟ್ಟಿತು.

ಇಂದಿಗೂ ಮುಂದೆಂದಿಗೂ ನನ್ನಂತಹವರ ಆರ್ತ ಹೃದಯದಲ್ಲಿ ಪೂಜ್ಯ ಶ್ರೀ ಜಿ. ವಿ. ನಾರಾಯಣಮೂರ್ತಿಯವರು ನೆಲೆಸಿಯೇ ಇದ್ದು, ಸಮಾಜದ ಶಾಂತಿ ಸ್ನೇಹ ವರ್ಧನ ಮಾಡುವುದರಲ್ಲಿ ಸಂದೇಹವಿಲ್ಲ.

ರುಗ್ಣ ಶಯ್ಯೆಯಿಂದ ಚೇತರಿಸಿಕೊಂಡ ನಾರಾಯಣಮೂರ್ತಿಯವರು ಇಂದಿನ ಪರಿತಪ್ತ ಜಗತ್ತಿಗೆ 'ಚೈತನ್ಯಸ್ತನ್ಯದಾಯಿನಿ' ತಾಯಿಯಂತೆ, ನೂರು ವರ್ಷ ಆರೋಗ್ಯ ದಿಂದ ಬಾಳಲಿ.

## ಆತ್ಮೀಯ ಸ್ನೇಹಿತ

**ಕೆ. ಶ್ರೀನಿವಾಸರಾವ್**

ಶ್ರೀ ಜಿ. ವಿ. ನಾರಾಯಣಮೂರ್ತಿಯವರ ಬಗ್ಗೆ ನಾನು ಬರೆಯುವುದೇನಿದೆ. ಅವರ ಜೀವನವೇ ನಮಗೊಂದು ಪಾಠ.

'ಆಚಾರ್ಯ ಕುಲ'ಕ್ಕೆ ಸೇರಿದ ಶ್ರೀ ಜಿ. ವಿ. ನಾರಾಯಣಮೂರ್ತಿಯವರ ಸಹೃದ ಯತೆ, ಅಧ್ಯಯನ, ಚಿಂತನ, ದೇಶಪ್ರೇಮ, ತತ್ವನಿಷ್ಠೆ ನಮಗೆಲ್ಲರಿಗೂ ಸ್ಫೂರ್ತಿ ನೀಡಿದೆ. ಅವರ ಸಾತತ್ಯಶ್ರಮದಿಂದ ಎಷ್ಟೋ ಕೆಲಸವಾಗಿದೆ, ಪರಿಣಾಮವೂ ಬೀರಿದೆ.

ಅವರ ಗ್ರಂಥ—'ವಿನೋಬಾ: ಜೀವನ–ದರ್ಶನ'ಕ್ಕೆ ರಾಜ್ಯ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ದೊರೆತಿದೆ. ಸಂತೋಷ. ಆದರೆ ಅವರು ಎಂದೂ ಪ್ರಶಸ್ತಿಗಳಿಗಾಗಿ ಬರೆದವರಲ್ಲ. ಅವರ ಬರಹಗಳಲ್ಲಿ ಪಾಂಡಿತ್ಯವಿದೆ, ಕಳಕಳಿ ಇದೆ, ವಿಷಯ ವಿಮರ್ಶೆ ಇದೆ. ಯುವಕ ರನ್ನು ಆಕರ್ಷಿಸುವ ಶಕ್ತಿ ಇದೆ.

ಆದರೆ ನಾಡಿನ ದೌರ್ಭಾಗ್ಯ. ಅವರ ಆರೋಗ್ಯ ಸರಿಯಿಲ್ಲದೆ ನಾವು ಎಷ್ಟೋ ಕಳೆದುಕೊಂಡೆವು. ಅವರ ಹೆಸರನ್ನು ಕೇಳಿದ ತಕ್ಷಣವೇ ಯಾರ ಮನಸ್ಸಾದರೂ ಅರಳುತ್ತದೆ. ಇಂಥವರ ಸ್ನೇಹ ನಮಗೆ ದಾರಿದೀಪವಾಗಲಿ.

## ಜ್ಯೋತಿ ನೀಡುವ ಜ್ಯೋತಿ

**ಸಿ. ಹೆಚ್. ಮರಿದೇವರು**

ಜಿ.ವಿ.ನಾ. ಅವರು ಒಬ್ಬ ವ್ಯಕ್ತಿಯಲ್ಲ; ಅವರೊಂದು ದಿವ್ಯಶಕ್ತಿ. ಜ್ಞಾನ ಜ್ಯೋತಿಸ್ವರೂಪವಾದ ಆಧ್ಯಾತ್ಮಿಕ ಅನುಭೂತಿ ಪಡೆದ ಒಂದು ಚಿರಂತನ ತಪಃಶಕ್ತಿ ಅದು. ಈ ತಪಃಶಕ್ತಿಯಿಂದ ಹೊರಹೊಮ್ಮುವ ಒಂದೊಂದು ಉಕ್ತಿಯೂ ಜ್ಞಾನ ಜ್ಯೋತಿಸ್ವರೂಪವಾದುದಾಗಿರುತ್ತಿತ್ತು. ಈ ಜ್ಞಾನಜ್ಯೋತಿ ಮುಟ್ಟಿದ ಬತ್ತಿ ಜ್ಯೋತಿಯಾಯ್ತು ಎನ್ನುವುದಕ್ಕೆ ಅವರ ಅನಂತ ಶಿಷ್ಯಕೋಟಿಯಲ್ಲೊಬ್ಬನಾದ ನಾನೇ ಒಂದು ಜೀವಂತ ಜ್ವಲಂತ ಸಾಕ್ಷಿ.

ಒಂದು ದಿನ. ನಾನು ನನ್ನ ಚೊಚ್ಚಲ ಕೃತಿ "ಶಿಕ್ಷಣ ತತ್ವಶಾಸ್ತ್ರ" ಗ್ರಂಥವನ್ನು ತೆಗೆದುಕೊಂಡು ಗುರುಗಳಿಗೆ ಕಾಣಿಕೆಯಾಗಿ ಕೊಡಲು ಹೋದೆ. ಎಂದಿನಂತೆ ಅದೇ ಆತ್ಮೀಯವಾದ ತಾದಾತ್ಮ್ಯಭಾವದಿಂದ ಕೂಡಿದ ಮುಗುಳ್ನಗೆಯ ಸ್ವಾಗತ—ಅಂದೂ ಸಹ ಲಭ್ಯ. ಅವರು ಮಂಚದ ಮೇಲೆ ಕುಳಿತೇ ನನಗೊಂದು ಆಸನವನ್ನು ತೋರಿಸಿ ಕೂರಲು ಹೇಳಿದರು. ತೋರಿಸಿದ ಸ್ಥಳದಲ್ಲಿ ನಾನು ಸುಖಾಸೀನನಾದೆ. ಉಭಯ ಕುಶಲೋಪರಿಯನಂತರ ನಾನು ಕೊಂಡೊಯ್ದ ನನ್ನ ಗ್ರಂಥವನ್ನು ಕಾಣಿಕೆಯಾಗಿ ಕೊಟ್ಟು ಇದಕ್ಕೆ ರಾಜ್ಯ ಸರ್ಕಾರದ ಶ್ರೀ ದೇವರಾಜ ಬಹಾದ್ದೂರ ಸ್ಮಾರಕ ದತ್ತಿಯ ಪ್ರಥಮ ಬಹುಮಾನ ದೊರಕಿದೆ ಎಂದು ತಿಳಿಸಿದೆ. ಪುಸ್ತಕವನ್ನು ಆತ್ಮೀಯವಾಗಿ ಕೈಗೆತ್ತಿಕೊಂಡರು. ಅತ್ತಿಂದಿತ್ತ ಪುಟಗಳನ್ನು ತಿರುಗಿಸಿದರು ; ಮಂಚದಿಂದ ಮೇಲೆ ದ್ದರು ! ಆನಂದತುಂದಿಲರಾಗಿ ಮೇಲೆದ್ದರು !! ಅವರ ಕಣ್ಣಂಚಿನಲ್ಲಿ ಆನಂದ ಬಾಷ್ಪಗಳು ಒಡಮೂಡಿದ್ದುವು. ಅವರು ತಮ್ಮ ಅಮಿತವಾದ ಆನಂದೋತ್ಸಾಹ ದಲ್ಲಿಯೇ 'ಬಾರೆ' ನನ್ನ ಶಿಷ್ಯ ಎಂತಹ ಉದ್ಗ್ರಂಥವನ್ನು ಬರೆದು ತಂದಿದ್ದಾನೆ ನೋಡು. ಬಾ ಇವನಿಗೊಂದು ಲೋಟ ಒಳ್ಳೆಯ ಹಾಲು ತೆಗೆದುಕೊಂಡು ಬಾ"—ಎಂದು ಮಹಡಿಯ ಮೇಲಿಂದಲೇ ಕೂಗಿ ಹೇಳಿದರು ಅವರ ಧರ್ಮಪತ್ನಿಗೆ. ಆ ಮಹಾತಾಯಿ ಬಿಸಿಬಿಸಿಯ ನೊರೆ ಹಾಲು ತಂದರು. ತರುವಷ್ಟರಲ್ಲಿ ನನ್ನ ಪುಸ್ತಕದ ಹಾಳೆಗಳನ್ನು ತಿರುವುತ್ತಿರುವಾಗ ಕವಿ ರವೀಂದ್ರರ ಒಂದು ಪದ್ಯವನ್ನು ನಾನು ಅನುವಾದಿಸಿ ಮುದ್ರಿಸಿದ್ದು ಅವರ ಕಣ್ಣಿಗೆ ಬಿತ್ತು. ಅವರು ಆ ನನ್ನ ಅನುವಾದಿತ ಪದ್ಯವನ್ನು ಪೂರ್ಣವಾಗಿ ಓದಿದರು. ಭಾಷಾಂತರ ಬಹಳ ಸತ್ವಪೂರ್ಣವಾಗಿದೆ ಎಂದು ಹೇಳಿ ತಾವೂ ಆ ಪದ್ಯವನ್ನು ಆ ಹಿಂದೆಯೇ ಭಾಷಾಂತರಿಸಿದ್ದುದಾಗಿ ಹೇಳಿ ಅವರ ಭಾಷಾಂತರವನ್ನು ನನ್ನ ಭಾಷಾಂತರದೊಂದಿಗೆ ಹೋಲಿಸಿಕೊಂಡು ನೋಡಿ "ನಿನ್ನ ಭಾಷಾಂತರ ನನ್ನದಕ್ಕಿಂತ ಚೆನ್ನಾಗಿ ಬಂದಿದೆ" ಎಂದರು. ಆಗಲೂ ಅವರ ಕಣ್ಣಂಚಿನಲ್ಲಿ ಆನಂದಬಾಷ್ಪಗಳು ಹನಿಯೂಡುತ್ತಲೇ ಇದ್ದುವು. ಬಿಸಿಬಿಸಿಯ ನೊರೆ ಹಾಲು ಬಂತು. ಅವರೇ ಸ್ವತಃ ಒಂದು ಲೋಟ ನೊರೆಹಾಲನ್ನು ನನ್ನ ಕೈಗಿತ್ತು ಮತ್ತೊಂದನ್ನು ತಾವೆತ್ತಿಕೊಂಡು ಅವರ ಪತ್ನಿಯವರಿಗೆ ನನ್ನ ಪರಿಚಯ ಮಾಡಿ ಕೊಟ್ಟರು. ಪರಿಚಯದನಂತರ ಹಾಲು ಕುಡಿಯುತ್ತಲೇ ಆ ಮಹಾತಾಯಿಗೆ ನನ್ನ ಧನ್ಯವಾದಗಳನ್ನರ್ಪಿಸಿದೆ. ಅಂದು ಅವರು ಕೊಟ್ಟ ಹಾಲು ಬರಿಯ ಸಕ್ಕರೆ ಬೆರೆತ ಹಾಲು ಮಾತ್ರ ಆಗಿರಲಿಲ್ಲ. ಪ್ರಾಚೀನ ಭರತಖಂಡದ ಗುರುಪರಂಪರೆಯಲ್ಲಿ ಆಚಾರ್ಯ ಸ್ಥಾನವನ್ನು ಪಡೆದ ಮಹರ್ಷಿ ಗುರುವೊಬ್ಬರು ಕೊಟ್ಟ ಅಮೃತ ದೋಪಾದಿಯಲ್ಲಿತ್ತು. ಅವರು ಕೊಟ್ಟ ಶಿಕ್ಷಣ ಜ್ಯೋತಿ ನನ್ನ ಅಂತರಂಗದ ಶಿಕ್ಷಣದ ಬತ್ತಿಗೆ ಮುಟ್ಟಿ ತಾನೂ ಒಂದು ಜ್ಯೋತಿಯಾಯ್ತು !! ಅಂದಿನ ಋಷಿಕವಿ ಗುರುಪರಂಪರೆಯಲ್ಲಿ ಸೇರಬಲ್ಲಂಥ ಸೀಮಾಪುರುಷರಲ್ಲಿ ಜಿ.ವಿ.ನಾ. ಒಬ್ಬರು.

# ನಿಷ್ಕಾಮ ಕರ್ಮಯೋಗಿ

**ಶಾರದಾನಂದನ**

ಅಂದು ಅವಸರದಲ್ಲಿ ಶಾಲೆಗೆ ಹೊರಟಿದ್ದೆ. ಅಂಚೆಯ ಆಳು ಪಾರ್ಸೆಲೊಂದನ್ನು ಕೊಟ್ಟು ರುಜು ತೆಗೆದುಕೊಂಡು ಹೋದ. ಯಾವೊಂದಕ್ಕೂ ಆರ್ಡರ್ ಕೊಟ್ಟ ನೆನಪು ಬಾರದೆ ಸೋಜಿಗವಾಗಿತ್ತು. ವಿಳಾಸ ನನ್ನದೆಂದು ಖಚಿತಪಡಿಸಿಕೊಂಡು ಬಿಚ್ಚಿ ನೋಡಿದೆ. ಎಸ್. ರಾಧಾಕೃಷ್ಣನ್‌ರವರು ವ್ಯಾಖ್ಯಾನ ಮಾಡಿದ ಆಕರ್ಷಕವಾದ ಭಗವದ್ಗೀತೆಯ ಪುಸ್ತಕ ಉಚಿತ ಪ್ರತಿಯಾಗಿ ಬಂದಿತ್ತು. ಕಲ್ಕತ್ತೆಯ ಮುದ್ರೆಯಿತ್ತು. ಕಳಿಸಿದವರಾರೆಂದು ಮತ್ತೆ ಯೋಚನೆ, ಜಿಜ್ಞಾಸೆ, ಮಿತ್ರ ಹಿತೈಷಿಗಳನ್ನೆಲ್ಲಾ ನೆನೆದು ಉತ್ತರ ಹೊಳೆಯಲಿಲ್ಲ. ಮರುದಿನ ಕಲ್ಕತ್ತೆಯಿಂದಲೇ ಬಂದ ಪತ್ರ ನನ್ನ ಕುತೂಹಲಕ್ಕೆ ಪೂರ್ಣವಿರಾಮ ಹಾಕಿತು. ಚಿಕ್ಕನಾಯ್ಕನಹಳ್ಳಿಯ ಶ್ರೀ ಜಿ. ವಿ. ನಾರಾಯಣಮೂರ್ತಿಯವರು ಭಗವದ್ಗೀತೆಯಲ್ಲಿ ನನಗಿರುವ ಆಸಕ್ತಿಯನ್ನು ತಿಳಿಸಿದ್ದಾಗಿಯೂ ನನ್ನ ಹೆಸರನ್ನು ಶಿಫಾರಸು ಮಾಡಿ ಪ್ರತಿಯನ್ನು ಕಳಿಸುವಂತೆ ತಿಳಿಸಿದುದಾಗಿಯೂ ಆ ಪತ್ರದಿಂದ ತಿಳಿಯಿತು. ಈ ಮಧ್ಯೆ ನಾನು ಶ್ರೀ ಜಿ.ವಿ.ನಾ.ರವರನ್ನು ಭೇಟಿ ಮಾಡಿದ್ದೆ. ಆದರೆ ಈ ವಿಷಯವನ್ನವರು ಪ್ರಸ್ತಾಪಿಸಿರಲಿಲ್ಲ. ಉಪಕಾರವನ್ನು ಗುಪ್ತವಾಗಿ ಮಾಡಿದ್ದರು. ಗುಪ್ತದಾನವೇ ಸರ್ವಶ್ರೇಷ್ಠವೆಂಬುದನ್ನು ಮನಗಂಡಿದ್ದರು. ಮಾಡಿದ ಉಪಕಾರಕ್ಕೆ ಬಣ್ಣಹಚ್ಚಿ ಭೂತಗನ್ನಡಿ ಹಿಡಿಯುವ ಈ ಕಾಲದಲ್ಲೂ ಇಂತಹವರಿದ್ದಾರೆಂಬುದು ಹೆಮ್ಮೆಯ ವಿಷಯ. ಶ್ರೀ ಜಿ.ವಿ.ನಾ. ಅವರನ್ನು ಮನಸಾ ವಂದಿಸಿದೆ. ಅವರ ಅವ್ಯಾಜ ಅಭಿಮಾನ, ನಿಷ್ಕಾಮ ಕರ್ಮಯೋಗ ನಮಗೆಲ್ಲ ಆದರ್ಶಪ್ರಾಯ.

# ನನ್ನ ಜೀವನದ ಆಲೋಕನಗಳು

**ಜಿ. ವಿ. ನಾರಾಯಣಮೂರ್ತಿ**

"ತನ್ನ ಬಣ್ಣಿಸಬೇಡ
ಇದಿರ ಹಳಿಯಲು ಬೇಡ"

ಎಂದರು ಬಸವಾರ್ಯರು. ಆದರೆ ಲೋಕದ ರೀತಿ ಇದಕ್ಕೆ ವ್ಯತಿರಿಕ್ತವಾಗಿಯೇ ನಡೆದಿದೆ. ನಾವು ನೋಡಿದುದು, ಆಡಿದುದು, ಮಾಡಿದುದು, ಅನುಭವಿಸಿದುದು ಎಲ್ಲವನ್ನೂ ಬಣ್ಣಬಣ್ಣವಾಗಿ ವಿವರಿಸುತ್ತೇವೆ ; ವರ್ಣಿಸುತ್ತೇವೆ. ಅದರಲ್ಲಿ ನಮಗೆ ಏನೋ ತೃಪ್ತಿ. ಏನೋ ಸಂತೋಷ, ಏನೋ ಆನಂದ. ಬೇಡವೆಂಬುದೇ ನಮಗೆ ಬೇಕು, ಇತರರಿಗೂ ಬೇಕು.

ಈ ಬಣ್ಣಿಸುವ ಕೆಲಸ ನಾನಾ ವಿಧಗಳಲ್ಲಿ ಸೃಷ್ಟ್ಯಾದಿಯಿಂದ ಸಾಗಿ ಬಂದಿದೆ. ಸೃಷ್ಟಿಯೇ ಅನಂತ ರಂಗುಗಳಲ್ಲಿ ಬಣ್ಣನೆಯ ಕೆಲಸ. ಸೃಷ್ಟಿಕರ್ತ 'ಆದಿಕವಿ-ವಿಶ್ವಕವಿ' ಎಂದವರಿದ್ದಾರೆ. ಸೃಷ್ಟಿಕರ್ತನಿಗೂ ನಮಗೂ ಏನೋ ನಿಗೂಢ ಸಂಬಂಧವಿದೆ. ಅಂತೆಯೇ ಸೃಷ್ಟಿಕರ್ಮದಲ್ಲಿ ನಾವೂ ತೊಡಗುತ್ತೇವೆ. ಕಾಲ–ದೇಶಗಳ ಪರಿಸ್ತರಣದಲ್ಲಿ ಸೃಷ್ಟಿಯಾದುದು ವಿನಾಶದ ಗತಿಯನ್ನೇ ಪೊಂದುತ್ತದೆ. ಆದರೂ ಅದಕ್ಕೊಂದು ಅಮರತೆ, ಶಾಶ್ವತತೆ ಕೊಟ್ಟಿದ್ದೇವೆ.

ತನ್ನನ್ನು ಇತರರು ಬಣ್ಣಿಸಬೇಕೆಂಬ ಆಸೆ. ತನ್ನನ್ನು ತಾನೇ ಬಣ್ಣಿಸಿಕೊಳ್ಳಬೇಕೆಂಬ ಆಸೆ ಎಲ್ಲೋ ಮೂಲೆಯಲ್ಲಿ ತಲೆಮರೆಸಿಕೊಂಡು ಕೂತಿರುತ್ತದೆ. ಅವಕಾಶ ಬಂದಿತೋ ಆ ಆಸೆ ಜಗದಗಲ, ಮುಗಿಲಗಲ ಹರಡುತ್ತದೆ.

'ಆತ್ಮ ಕಥನ' ಅಥವಾ ಆತ್ಮ ಕಥೆ ಎಂಬುದು ಇದರ ಒಂದು ರೂಪ. ಸ್ವಪ್ರೇರಣೆಯಿಂದ ಅಥವಾ ಇತರರ ಪ್ರೇರಣೆಯಿಂದ ಇದರ ಅಸ್ತಿತ್ವ. ಅಬ್ರಹಾಂ ಲಿಂಕನ್, ಟಾಲ್‌ಸ್ಟಾಯ್ ಸ್ವಪ್ರೇರಣೆಯಿಂದ ಬರೆದರು. ಗಾಂಧೀಜಿ ಸಹ ಆತ್ಮಕಥನ ಬರೆದರು. ಸ್ವಾಮಿ ಆನಂದ್ ಮುಂತಾದ ಗೆಳೆಯರ, ಸಹ ಕಾರ್ಯಕರ್ತರ ಒತ್ತಾಯಕ್ಕೆ ಮಣಿದು ಬರೆದರು. ಈ ಎರಡು ಬಗೆಗಳ ಬಣ್ಣನೆಗಳೂ ಜಗದ್ವಿಖ್ಯಾತವಾಗಿವೆ. ಅವುಗಳಲ್ಲಿ ಕಂಡು ಬರುವ ಪ್ರಾಮಾಣಿಕತೆ, ಸತ್ಯಸಂಧತೆ ಎಲ್ಲ ಕಾಲಕ್ಕೂ ಮಾದರಿಯವು.

ಎಲ್ಲರಿಗೂ ಇದು ಸಾಧ್ಯವೇ ? ಆದುದರಿಂದ ಸ್ವಪ್ರೇರಣೆಯಿಲ್ಲದೆ ತನ್ನ ತಾನು ಬಣ್ಣಿಸಿಕೊಂಡುದು ಒಪ್ಪಾದ ಚಿತ್ರವೆನಿಸದು. ಎಲ್ಲರಿಗೂ ಸ್ವಪ್ರೇರಣೆ ಅಥವಾ ಆತ್ಮ ಪ್ರೇರಣೆ ಬರಲಾರದು. ಇಂಥ ಸಂದರ್ಭದಲ್ಲಿ ಇತರರು ಬರೆದುದೇ ಅಷ್ಟಿಷ್ಟು ಸಮತೂಕವೆನಿಸೀತು. ತನ್ನನ್ನು ಕುರಿತು ತಾನೇ ಬರೆದಾಗ ಬಣ್ಣ ಅತಿಯಾಗಬಹುದು : ಸಾಕಾಗದೆ

ಇರಬಹುದು. ಕೊರತೆ ಎನಿಸಬಹುದು. ಇಂಥವನ್ನು ಗಮನಿಸಿದಾಗ ಬಸವಾರ್ಯರ ನುಡಿಯು ಮಹತ್ವ ಗೋಚರಿಸೀತು.

ಸುಖದ ಅನುಭವ ಒಬ್ಬೊಬ್ಬರಿಗೆ ಒಂದೊಂದು ರೀತಿ. ದುಃಖವಾದರೋ ಎಲ್ಲರಿಗೂ ಸಮಾನ. ವಿವೇಕಾನಂದರು ಒಂದೆಡೆ ಹೇಳಿದ್ದಾರೆ, "ಜಗತ್ತಿನಲ್ಲಿ ದುಃಖದ ಮಡುವೇ ಇದೆ. ನಿನ್ನದೂ ದುಃಖ ಇದ್ದರೆ ಅದಕ್ಕೆ ಸೇರಿಸಬೇಡ. ಎಲ್ಲೋ ಮೂಲೆ ಗುಂಪಾಗಿ ಅಡಗಿ ಯಾರಿಗೂ ಹೇಳದಂತೆ ಅತ್ತುಬಿಡು. ಹಗುರವಾದ ಮನಸ್ಸಿನಿಂದ ನಗುಮೊಗದಿಂದ ಜಗತ್ತನ್ನು ಸ್ವಾಗತಿಸು." ಈ ಮಾತು ವಿರಕ್ತ ಸನ್ಯಾಸಿಯೊಬ್ಬನಿಗೆ ಸರಿಯಾದೀತು. ಮಾನವರು ಸುಖದುಃಖಗಳೆರಡನ್ನೂ ಸ್ವಾಗತಿಸಿಯೇ ಸ್ವಾಗತಿಸಿ ಯಾರು. ಈ ದೃಷ್ಟಿಯಿಂದ ಬಸವಾರ್ಯರ ಮಾತು ನಮಗೆ ಪಥ್ಯವೆನಿಸಿ ತನ್ನ ಸುಖವನ್ನು ಬಣ್ಣಿಸದೆ ದುಃಖವನ್ನೂ ಬಣ್ಣಿಸದೆ ಇರುವಂಥ ಮನೋಧರ್ಮ ಬರಲು ಸಾಧ್ಯವಾದೀತಲ್ಲವೇ ?

೨

'ನನ್ನ ಜೀವನದ ಆಲೋಕನಗಳು' ತನ್ನ ಬಣ್ಣಿಸುವ ರೀತಿಯಲ್ಲ. ಅದೊಂದು ರೀತಿಯ ಆತ್ಮಕಥನ ಎನಿಸಿದರೂ ಅದು ಆತ್ಮಕಥನವಲ್ಲ.

ಕಣ್ಣು, ಮನಸ್ಸು ಇದ್ದವರೆಲ್ಲರಲ್ಲಿಯೂ 'ಲೋಕನ' ಕಾರ್ಯ, ಲೋಕವನ್ನು ನೋಡುವ, ವೀಕ್ಷಿಸುವ ಕಾರ್ಯ ನಡೆದೇ ಇರುತ್ತದೆ. ಲೋಕವನ್ನು ವೀಕ್ಷಿಸಿದಾಗ ಒಂದು ಅನುಭವ ಅನಿವಾರ್ಯ. ಮೊದಲ ದೃಷ್ಟಿಗೆ ಲಾಭ-ನಷ್ಟ, ಸುಖ–ದುಃಖ, ನಲಿವು–ದುಮ್ಮಾನ ಕ್ರೋಡೀಕರಿಸಿ ಜೀವನ ಮುಂದೆ ಸಾಗುತ್ತದೆ. ಎಲ್ಲೋ ಒಮ್ಮೊಮ್ಮೆ 'ಆಲೋಕನ' ಬರುತ್ತದೆ. ಆಲೋಕನವೆಂದರೆ ಆಳವಾಗಿ ಲೋಕವನ್ನು ನೋಡುವುದು. ಇದು ದೀರ್ಘ ನಿರೀಕ್ಷಣದಿಂದ ಲಭಿಸುತ್ತದೆ. ಡಾ. ರಾಧಾಕೃಷ್ಣನ್ ಹೇಳುವಂತೆ ಆಲೋಕನವೆಂದರೆ ಪುನರ್ಲೋಕನ (A Second Look). ಇದು ಬದುಕಿನ ಬುಡಕ್ಕೆ ಹೋಗಿ ಮುತ್ತುರತ್ನಗಳಿವೆಯೋ, ಪಾಚಿ ಇದೆಯೋ ಎಂಬುದರ ವಿಮರ್ಶನ.

ಎಲ್ಲರಂತೆ ನನಗೂ ಜೀವನವಿದೆ, ಕಾರ್ಯವಿದೆ, ಸಾಧನವಿದೆ, ಸಿದ್ಧಿಯೂ ಇದೆ. ಇಲ್ಲದೆಯೂ ಇದೆ. ಸುಖ–ದುಃಖಗಳಿವೆ ; ದುಗುಡ–ದುಮ್ಮಾನಗಳಿವೆ ; ಸೋಲು ಗೆಲವುಗಳಿವೆ. ಆದರೆ ಪೈಪೋಟಿಯಿಂದಲ್ಲ, ಸ್ವೇಚ್ಛೆಯಿಂದ.

ಜೀವನ ಎರಡು ಬಗೆ. ಪ್ರತ್ಯಕ್ಷ–ಪರೋಕ್ಷ, ಅಂತರಂಗ–ಬಹಿರಂಗ. ಎರಡು ಬಗೆಯ ಜೀವನಕ್ಕೂ ಪ್ರೇರಣೆಗಳಿವೆ. ಹಿರಿಯರ ಆಶೀರ್ವಾದವಿದೆ. ಮಿತ್ರರ ಬಲವಿದೆ. ದೇವಕೃಪೆ ಇದೆ.

ಧ್ಯೇಯಕ್ಕಾಗಿ, ಆದರ್ಶಕ್ಕಾಗಿ ತಾಕಲಾಟ ನಡೆದಿದೆ. ಮನ ಒಗ್ಗಿದಂತೆ ಕಾರ್ಯ ಕ್ಷೇತ್ರ ಬದಲಿಸಿದೆ. ಆದರೆ ಅಗಮ್ಯ, ಅಗೋಚರ ಶಕ್ತಿಯೊಂದು ಕೈಹಿಡಿದು ನಡೆಸಿದೆ.

ಹುಟ್ಟಿದ್ದು ಎಲ್ಲೋ, ಬೆಳೆದದ್ದು ಎಲ್ಲೋ. ಯಾರ ಯಾರದೋ ಅವ್ಯಾಜ ಪ್ರೀತಿ ; ಅಭಿಮಾನದ ಚಿಲುಮೆ ಹರಿದಿದೆ. ಬಯಸಿ ಹೋದ ಕಡೆ ಪ್ರೀತಿ ಇರುವೆಡೆ

ನೆಲೆ ತಪ್ಪಿತು. ಹೊಸ ಹೊಸ ಪ್ರಯೋಗಗಳು. ಕೈ ಆಡಿಸಿದುದು ಅನೇಕ ಕ್ಷೇತ್ರಗಳಲ್ಲಿ. ಅಷ್ಟಿಷ್ಟು ಸಾಧನೆ. ರಾಷ್ಟ್ರೀಯ ರಾಜಕಾರಣ, ಶಿಕ್ಷಣ, ಸಮಾಜ ಸೇವೆ, ಹೊಸ ಸಮಾಜದ ಹಗಲು ಕನಸು. ಭೂದಾನ, ಸರ್ವೋದಯ.

ಇದು ಗಾಂಧೀ 'ಗೀಳು !' ಅಹಿಂಸಕ ಸಮಾಜ ರಚಿಸಬೇಕೆಂಬ ಹುಮ್ಮಸ್ಸು, ಆದರೆ ಎಲ್ಲಕ್ಕೂ ಮಿತಿ. ಮಾನವ ಹಕ್ಕಿಯಲ್ಲ. ಹಕ್ಕಿಯಂತೆ ಹಾರಬೇಕೆಂಬ ಆಸೆ. ಆದರ್ಶದ ಕರೆಗೆ ಸೆರೆ. ರೆಕ್ಕೆ ಮುರಿದಾಗ ಸ್ವಸ್ಥಾನ.

ಮಾತು, ಚಿಂತನ ಎಲ್ಲಕ್ಕೂ ಸಾಧನ ಬರಹ. ನಾನು ಇದರ ಚಟಕ್ಕೆ ಗುರಿಯಾಗಿಲ್ಲ. ಬರೆದರೂ ಹರ್ಷ, ಇಲ್ಲದಿದ್ದರೂ ಹರ್ಷ.

ಬರೆದುದಾಗಲೀ, ಆಡಿದುದಾಗಲೀ ವಿಚಾರ ನಂಬಿಕೆಗಳ ಫಲ. ವಿಚಾರದಿಂದ ವಿಚಾರಕ್ಕೆ ನೆಗೆತವಿಲ್ಲ. ಹೃದಯ ಸಂತಸದಿಂದ ಸ್ವಾಗತಿಸಿದ ವಿಚಾರ. ಜೀವನವನ್ನು ತುಂಬಿಸಿದ ವಿಚಾರ.

ಆಗಾಗ ಜೀವನದಲ್ಲಿ ಸ್ವಕೀಯಕ್ಕೂ, ಸಾರ್ವಜನಿಕಕ್ಕೂ ಸಂಪ್ರದಾಯಿಕ ಪರ್ಷಣೆ· ಇದಕ್ಕಾಗಿ ಬಸವಳಿದು ಬೇಸತ್ತಿದ್ದೇನೆ. ಸಿಡಿದು ಹೋಗಬೇಕೆಂದೂ ಉತ್ಕಟೇಚ್ಛೆ. ಅದಕ್ಕೆ ಹೊಂದಾಣಿಕೆಯೇ ಮದ್ದು. ಗಾಂಧೀ ವಾಣಿಯ ಸೆಲೆ, "ದೇವರೇ ನನ್ನ ಪ್ರಾರ್ಥನೆ ಹೀಗೆ. ಅವನ ಏಳಿಗೆ ನನ್ನ ಮಾರ್ಗದಲ್ಲಿ ಎಂದು ಬಲವಂತ ಮಾಡುವ ಬುದ್ಧಿ ಕೊಡಬೇಡ. ಅವನು ತನ್ನ ಮಾರ್ಗದಲ್ಲೇ ಶ್ರೇಯಸ್ಸು ಪಡೆಯಲಿ; ಉದ್ಧಾರ ಪಡೆಯಲಿ."

೩

ಬದುಕು ಏನನ್ನಾದರೂ ಕಲಿಸಿದೆಯೇ ಅಥವಾ ಅದೊಂದು ದೀರ್ಘ ಲಾಭ–ನಷ್ಟಗಳ ಗೃಧ್ರ ವೃತ್ತಿಯೇ ?

ಸಾಮಾನ್ಯವಾಗಿ ನಾವು ಎಲ್ಲವನ್ನೂ ನಮಗೇ ಆರೋಪಿಸಿಕೊಳ್ಳುತ್ತೇವೆ. 'ಇದು ನಾನು ಮಾಡಿದ್ದು. ನನ್ನಿಂದ ಆದುದು. ನಾನಿಲ್ಲದಿದ್ದರೆ ಇದು ಆಗುತ್ತಲೇ ಇರಲಿಲ್ಲ. ನಾನಾಗುವ ಹೊತ್ತಿಗೆ ಮಾಡಿದೆ. ನನ್ನ ಬಿಟ್ಟರೆ ಇನ್ನಿಲ್ಲ' ಎಂದು ಹೇಳಿ ಕೊಳ್ಳುತ್ತೇವೆ. ಆದರೆ ಪ್ರತಿ ಕ್ಷಣಕ್ಕೂ ಇದರ ಟೊಳ್ಳುತನ ಅನುಭವಕ್ಕೆ ಬರುತ್ತದೆ. ಆದರೂ "ಕಃ ಅನ್ಯಃ ಅಸ್ತಿ ಸದೃಶಂಮಮ" ಎಂದು ಬಡಾಯಿ ಕೊಚ್ಚುತ್ತೇವೆ.

ಯಾವ ಕೆಲಸವೂ ಒಬ್ಬನಿಂದಲೇ ಎಷ್ಟೇ ಗಟ್ಟಿಗನಾಗಿರಲಿ, ಎಷ್ಟೇ ಬುದ್ಧಿವಂತ ನಾಗಿರಲಿ, ಎಷ್ಟೇ ಪ್ರತಿಭಾವಂತನಾಗಿರಲಿ ಸಂಭವಿಸಲಾರದು. ಸ್ನೇಹ ವೃದ್ಧಿಯಾಗಿ ಅದರಿಂದ ಸಹಬಾಳ್ವೆ ಸಾಧ್ಯವಾಗುತ್ತದೆ. ಸ್ನೇಹ ಬೆಳೆಸುವುದರಲ್ಲೇ ವೃದ್ಧಿ. ವಿಗಸ ವೃದ್ಧಿಯಿಂದ ಹ್ರಾಸ. ಎಲ್ಲ ಸಾಮಾಜಿಕ ಕಾರ್ಯಗಳೂ ಸ್ನೇಹದಿಂದ ಮಾತ್ರ ಸಾಧ್ಯ.

ಸ್ನೇಹಕ್ಕೆ ಊಣೆಯ ತಂದುಕೊಳ್ಳಬಾರದು. ಮೈತ್ರಿ ಎಂಬುದಕ್ಕೆ ಸಾಟಿಯಿಲ್ಲ. ದುರದೃಷ್ಟವಶಾತ್ ಭಿನ್ನಾಭಿಪ್ರಾಯ ಮೂಡಿದರೆ ಅದನ್ನು ಜಾಣತನದಿಂದ, ಮೋಸ ದಿಂದಲ್ಲ, ಪರಿಹರಿಸಿಕೊಳ್ಳಬೇಕು. ಒಂದು ವೇಳೆ ಮಿತ್ರರೊಡನೆ ಮೂಲಭೂತವಾಗಿರುವ

ವ್ಯತ್ಯಾಸ ಕಂಡುಬಂದರೆ ಅವಕ್ಕೆ ಪ್ರೈಪೋಟಿಯಿಂದ ಎದುರು ನಿಲ್ಲದೆ. ಪರಿವರ್ತನಕ್ಕೆ ಬಿಡಬೇಕು.

ಅಂತರಂಗದ ಸ್ನೇಹ ಬಿಡಿಸಲಾರದಂತಿದ್ದರೆ ಅದಕ್ಕಾಗಿ ಅದರ ಹಿತಕ್ಕಾಗಿ ನಾವೇ ಕ್ಲೇಶ ಅನುಭವಿಸಲು ಸಿದ್ಧರಿರಬೇಕು. ಇದು ಪ್ರೀತಿಯ ಕುರುಹು. 'Love is Long suffering' ಎಂದ ಹಾಗೆ.

ಬದುಕಿನ ಅನಿರೀಕ್ಷಿತ ಪಾರ್ಶ್ವಗಳಿಂದ ನೇಹ ಪುಟಿದು ಬಂದೀತು. ಯಾವುದನ್ನೂ ಕೆಲಸಕ್ಕೆ ಬಾರದುದೆಂದು ತೀರ್ಮಾನಿಸಿಬಿಡಬಾರದು. ಹುಲ್ಲುಕಡ್ಡಿ ಪರ್ವತವಾದೀತು; ಪರ್ವತವೇ ಕರಗಿಹೋದೀತು; ಹುಡಿಪುಡಿಯಾದೀತು.

ನಿರಾಶೆ ಮೂಡಿದಾಗ ಅದರಿಂದಲೇ ಸದಾಶೆ ಮೂಡಿ ಬಂದೀತು. ಕಾರ್ಮೋಡದ ಅಂಚಿನಲ್ಲಿ ಬೆಳ್ಳಿಗೆರೆ ಇದ್ದೇ ಇರುತ್ತದೆ.

ನಿಶ್ಶಕ್ತನಾಗಿ, ನಿತ್ರಾಣನಾಗಿ ಇನ್ನು ಎಲ್ಲ ಮುಗಿಯಿತೆಂದು ಬಿದ್ದಾಗ ಎಲ್ಲಿಂದಲೋ, ಯಾರಿಂದಲೋ ಸಾಂತ್ವನ ಬಂದು 'ಮಾನವನ ಜೀವನ ಘನ, ದೊಡ್ಡದು' ಎಂಬ ಭಾವನೆಯನ್ನು ಉಕ್ಕುಳಿಸುತ್ತದೆ.

ಫಲಬೇಕೆಂದು ಅರಸುವವಗೆ ಅದು ದೂರ ಸರಿದೀತು: ಸಿಕ್ಕದಿದ್ದರೂ ಇದ್ದೀತು. ಅದಕ್ಕಾಗಿ ಹಾತೊರೆದು ಅರಸದವನಿಗೆ ಅದರ ಚಿಂತೆಯೇ ಇಲ್ಲ. ಸಿಕ್ಕಿದರೂ ಸಿಕ್ಕೀತು. ಕವಿ ಹೇಳುವಂತೆ 'ಸಾಹಸದಿ ಇಳಿವವಗೆ ಒಂದೆರಡು ಗುಟುಕು ದಕ್ಕೀತು.' ನೆಹರೂ ಹೇಳುವಂತೆ, 'ಸಾಹಸಿಗೆ ವಿಜಯಲಕ್ಷ್ಮಿ ಒಲಿದಾಳು, ಹೇಡಿಗೆಂದಿಗೂ ಇಲ್ಲ.'

'ನಮ್ಮ ಬದುಕು ನಮ್ಮದು' ಎಂದು ಭಾವಿಸುವವರೇ ಹೆಚ್ಚು. 'ಇನ್ನೊಬ್ಬರ ಗೊಡವೆ ನಮಗೇಕೆ? ಅವರನ್ನು ಇದ್ದ ಹಾಗೆ ಬಿಡು.' ಇದು ಕೆಲವರ ಭಾವನೆ. ಆದರೆ 'ಜಗವೆಲ್ಲ ಪರಬೊಮ್ಮನೆಂದರಿತು ಪಾಪವಾ ನಿಜಯುಕ್ಕೆ ಇಕ್ಕದಿದ್ದೊಡೆ' ಸಮಾಜ ಅದರಿಂದ ಛಿದ್ರಛಿದ್ರವಾದೀತು ; ಬಾಳು ನರಕವಾದೀತು. ತಾನು ನೆಮ್ಮದಿಯಿಂದ ಇರಬೇಕೆಂಬ ದೃಷ್ಟಿಯಿಂದಲಾದರೂ ಇನ್ನೊಬ್ಬರ ನೆಮ್ಮದಿಗೆ ನಾವು ಶ್ರಮಿಸಬೇಕು.

"ಪರೋಪಕಾರ ದೃಷ್ಟಿಯಿಂದ ನದಿಗಳು ಹರಿಯುತ್ತವೆ. ಸೂರ್ಯ ಪ್ರಕಾಶಿಸುತ್ತಾನೆ, ಗಾಳಿ ಬೀಸುತ್ತದೆ, ಹೂವು ಹಣ್ಣು ಫಲಿಸುತ್ತವಲ್ಲವೇ?"

೪

ಯಾವುದೇ ತತ್ವದ ಅನುಸರಣೆ ಬಹು ಕಷ್ಟ. ಅದೊಂದು ಬುದ್ಧಿಯ ಕಸರತ್ತಾದ್ದರಿಂದ ಎಲ್ಲಾದರೂ ಸ್ವಲ್ಪ ಎಡವಿ ಮುಗ್ಗರಿಸೀತು. ಗಾಂಧೀ ವಿಚಾರದ ಮಾತು ಹಾಗಲ್ಲ. ಅದೊಂದು ಕೂರಲಗಿನ ಮೇಲಿನ ನರ್ತನದಂತೆ. 'ಅಸಿಧಾರಾವ್ರತ.' ನದಿಯ ಹರಿವಿಗೆ ಇಕ್ಕೆಲದ ದಡಗಳಂತೆ. 'ಸತ್ಯ', 'ಅಹಿಂಸೆ'. ವಿವರಣೆಗೆ ನಿಲುಕವು. ಭಗವಂತ ಹೇಗೆ ಅನಿರ್ವಚನೀಯನೋ ಅಂತೆಯೇ ಅನಿರ್ವಚನೀಯ. ಮನುಷ್ಯಪ್ರಾಣಿ 'ಮಾನವ' ಎನ್ನಿಸಿ

ಕೊಳ್ಳಬೇಕಾದರೆ ಹೆಚ್ಚು ಹೆಚ್ಚು ಸತ್ಯಪ್ರಿಯನಾಗಬೇಕು. (More and more truth filled) ಹೆಚ್ಚು ಹೆಚ್ಚು ಪ್ರೇಮಮಯನಾಗಬೇಕು. (More and more love filled). ಇದರಿಂದಲೇ ಬದುಕಿಗೆ ಬೆಲೆ ಬಂದೀತು. ಬಾಳು ಸತ್ಯ ಸುಂದರ, ಸುಭಗ ಆದೀತು.

ಇದಕ್ಕೆ 'ಏಕಮೇವಾದ್ವಿತೀಯ' ಭಾವನೆ ಬೇಕು. ಬೈಬಲ್ ಹೇಳುವಂತೆ. 'You cannot serve both masters: god and Mammon'. ಎರಡು ಕುದುರೆಗಳ ಮೇಲೆ ಏಕಕಾಲಕ್ಕೆ ಸವಾರಿ ಮಾಡಲಿಕ್ಕಾಗದು. ಇಬ್ಬರು ಯಜಮಾನರನ್ನು ಏಕಕಾಲಕ್ಕೆ ಸೇವಿಸಲಾಗದು. 'ಬಾಯಲ್ಲಿ ವೇದಮಂತ್ರ, ಕೈಯಲ್ಲಿ ಬಂದೂಕು' ಇದು ವಿರೋಧ ಆಭಾಸ.

ನಾನು ಕೆಲವು ಕಾಲ ಮೈಸೂರಿನಲ್ಲಿದ್ದೆ. ಸಂಪಾದಕನಾಗಿ ಕಾರ್ಯಾಲಯದಲ್ಲಿ ಕೆಲಸ ಮಾಡುತ್ತಿದ್ದೆ. ತಲೆ ಬಗ್ಗಿಸಿಕೊಂಡು ಏಕಾಗ್ರದಿಂದಿದ್ದೆ. ಯಾರೋ ಒಳಗೆ ನಡೆದು ಬಂದಂತೆ ನೆರಳಾಯಿತು. ಹತ್ತಿರಕ್ಕೆ ಬಂದಂತೆ ಸಪ್ಪಳವಾಯಿತು,

ಎಚ್ಚೆತ್ತು ತಲೆಯೆತ್ತಿ ನೋಡಿದೆ. ಮಧ್ಯಮ ಆಕಾರದ ವ್ಯಕ್ತಿ: ತಲೆಬೋಳು, ಅಲ್ಲೊಂದು ಇಲ್ಲೊಂದು ಕೂದಲು. ಅಸ್ತವ್ಯಸ್ತ. ಸೂರ್ಯನ ಪ್ರಕಾಶದಿಂದ ಸುಟ್ಟ ಮುಖ. ಕೊಳವೆ ಶರಾಯಿ. ಹಾರಾಡುವ ನೆಕ್ಟೈ. ಎಂದೋ ಇಸ್ತ್ರಿ ಮಾಡಿಸಿದ ಕೋಟು. ಮುಖದಲ್ಲಿ ಪ್ರಸನ್ನತೆ ಇದೆ.

'ಬನ್ನಿ, ಕೂಡಿ. ಎಲ್ಲಿಂದ ಬಂದಿರಿ? ಏನು ಬೇಕು' ಎಂದೆ.

ವ್ಯಕ್ತಿ ಮುಗುಳ್ನಗೆ ನಕ್ಕರು. ಕುರ್ಚಿಯ ಮೇಲೆ ಕುಳಿತರು. ಒಮ್ಮೆ ಮುಂದೆ ನೋಡಿದರು. ಗಾಂಧೀಜಿಯ ದೊಡ್ಡ ಭಾವಚಿತ್ರ ನನ್ನ ಹಿಂದಿತ್ತು. ಸುತ್ತ ಕಣ್ಣು ಹಾಯಿಸಿದರು. ನನ್ನ ನೇರ ಎದುರಿನ ಗೋಡೆಯಲ್ಲಿ ಲೆನಿನ್ ಭಾವಚಿತ್ರವಿತ್ತು. ಅದನ್ನು ನೋಡಿದವರೇ

'ಇಲ್ಲಿ ಲೆನಿನ್‌ಗೂ ಜಾಗವಿದೆ!'

'ಯಾಕಿರಬಾರದು ?' ಎಂದೆ.

'ಅದೃಷ್ಟವಶಾತ್ ಎಬ್ಬರೂ ಎದುರುಬದುರಿಗೇ ಇದ್ದಾರೆ' ಎಂದರವರು.

ಅವರು ಮೆಕ್ಸಿಕೋ ರಾಜ್ಯದಿಂದ ಬಂದಿದ್ದರು. ಅಲ್ಲಿ ಒಂದು ವಿಶ್ವವಿದ್ಯಾನಿಲಯದ ಪ್ರಾಚಾರ್ಯ. ಭಾರತದ ತತ್ವಶಾಸ್ತ್ರಜ್ಞ ಅಣ್ಣಂಭಟ್ಟನ ತರ್ಕಶಾಸ್ತ್ರವನ್ನು ಮೆಕ್ಸಿಕನ್ ಭಾಷೆಗೆ ತರ್ಜುಮೆ ಮಾಡಿ ಅದನ್ನು ಅಲ್ಲಿ ಪಠ್ಯಪುಸ್ತಕವನ್ನಾಗಿ ವ್ಯಾಸಂಗಕ್ಕೆ ಇಟ್ಟಿರುವುದಾಗಿ ಹೇಳಿದರು. ಅವರ ಸರಳತೆಗೆ ನಾನು ಮಾರುಹೋಗಿದ್ದೆ.

'ಹೌದು, ಇಬ್ಬರೂ ಧ್ರುವಗಳಷ್ಟು ಅಂತರ. ಗಾಂಧೀಜಿಯನ್ನು ಸರಿಯಾಗಿ ಅರಿಯಲು ಲೆನಿನ್ ಪೂರ್ವ ಪಕ್ಷವಲ್ಲವೇ?' ಎಂದೆ,

'ಇದು ಕೇವಲ ಅರಿವಿಗಾಗಿ, 'ಅರಿವೇ ಬದುಕಲ್ಲವಲ್ಲ. ಒಬ್ಬೊಬ್ಬರನ್ನು ಮಾತ್ರ ಅನುಸಂಧಾನಕ್ಕೆ ಇರಿಸಿಕೊಳ್ಳಬೇಕು. ಇಬ್ಬರನ್ನೂ ಜತೆಗೂಡಿಸಿದರೆ ಕಲಬೆರಕೆ ಆದೀತು. ಎಚ್ಚರಿಕೆ ಇರಬೇಕು' ಎಂದರು.

'ಹೌದು, ಗಾಂಧೀ ಅಧ್ಯಾತ್ಮವಾದಿ. ಜಗತ್ತನ್ನು ನಿರಾಕರಿಸಿದವರಲ್ಲ. ಲೆನಿನ್ ಮಾನವತಾವಾದಿ. ಆದರೆ ಭೌತವಾದಿ ಅಥವಾ ಜಡವಾದಿ. ಆದರೂ ಮಾನವಾಂತಃಕರಣ ವಾದಿ' ಎಂದೆ.

ಆತ ಒಪ್ಪಿದರು. 'ಆದರೆ, ಗಾಂಧೀ ಅಧ್ಯಾತ್ಮವಾದಿಯಷ್ಟೇ ಅಲ್ಲ. ಆತ 'ದೈವ ನಿಷ್ಠ ಮಾನವತಾವಾದಿ' (Theo-centric Humanist) ಎಂದರು.

ಗಾಂಧೀ ವಿಚಾರದ ಅಡಿಗಲ್ಲು–ಭಗವಂತ–ಮೂರ್ತ ಹಾಗೂ ಅಮೂರ್ತ. ಗಾಂಧೀ ಜಿಗೆ ಮಾನವ ಪ್ರಿಯವಾಗಿದ್ದ. ಏಕೆಂದರೆ ಅವನಲ್ಲಿ ಭಗವಂತನ ಅಂಶವಿದೆ. ಆದುದ ರಿಂದಲೇ ಮಾನವಸೇವೆ ಭಗವಂತನ ಸೇವೆ.

ತೆಂಡುಲ್ಕರ್ 'ಮಹಾತ್ಮಾ ಗ್ರಂಥಕ್ಕೆ ಮುನ್ನುಡಿ ಬರೆಯುತ್ತಾ ಜವಹರಲಾಲ್ ನುಡಿದುದು ಎಷ್ಟು ಸತ್ಯವತ್ತಾಗಿದೆ. 'ದೇವತೆಗಳಾರಾದರೂ ಇರುವರೋ, ಇಲ್ಲವೋ ಕಾಣೆ. ನನಗೆ ಅದರ ಬಗೆಗೆ ಆಸಕ್ತಿಯೂ ಇಲ್ಲ. ಆದರೆ ಕೆಲವು ಗುಣಗಳಿರುವುದಂತೂ ನಿಜ. ಅವು ಮಾನವನನ್ನು ಸಾಮಾನ್ಯ ಜನಜಂಗುಳಿಯಿಂದ ಮೇಲೇರಿಸಿ. ಅವನು ಭಿನ್ನವಾದ ವ್ಯಕ್ತಿಕೆಯಿಂದ ಗೋಚರಿಸುವಂತೆ ಮಾಡುತ್ತವೆ.' ಆ ಮಹಾನುಭಾವನ ಕಾಲದಲ್ಲಿ ಬದುಕಿದ್ದುದೇ ಸುಕೃತವಲ್ಲವೇ? ಅವನ ವಿಚಾರಧಾರೆಗೆ ತನುಮನ ಧನವಿತ್ತು ದುಡಿದ ಮಂದಿಗೇನು ಕಮ್ಮಿ? ಅವರೆಲ್ಲ ನಾಡಿನ ಭಾಗ್ಯವಲ್ಲವೇ ? ರಾಷ್ಟ್ರಕ್ಕೆ ಸ್ವಾತಂತ್ರ್ಯದ ಉಸಿ ರನ್ನು ಊದಿದವರು ಅವರಲ್ಲವೇ ? ಅವರಿಗೆಲ್ಲ ನಮನ.

ಗಾಂಧೀಜೀ ತಮ್ಮ ಆದರ್ಶ ಸಮಾಜ ಕಲ್ಪನೆಯನ್ನು 'ಹಿಂದ್‌ಸ್ವರಾಜ್' ಎಂಬ ಪುಟ್ಟ ಹೊತ್ತಗೆಯಲ್ಲಿ ಉಲ್ಲೇಖಿಸಿದರು. ಅವರು ಅದನ್ನು 'ರಾಮರಾಜ್ಯ' ಎಂದು ಕರೆದರು. 'ಸರ್ವೋದಯ' ಎಂದೂ ಕರೆದರು. ಸರ್ವೋದಯ 'ಅಂತ್ಯೋದಯ'ದಿಂದ ಆರಂಭವಾಗಬೇಕೆಂಬುದು ಅವರ ಕಾರ್ಯವಿಧಾನ. ಅದು ಅಲ್ಲಿಗೇ ನಿಲ್ಲದೆ ಎಲ್ಲರ ಉದಯ, ಎಲ್ಲದರ ಉದಯ, ಅದರ ವ್ಯಾಪಕ ಕಕ್ಷೆಯಲ್ಲಿ ಬರುತ್ತದೆ. ಉದಯ ಸರ್ವವಿಧದ ಏಳ್ಗೆಯನ್ನೂ ಸೂಚಿಸುತ್ತದೆ. ಆರ್ಥಿಕ, ರಾಜಕೀಯ, ನೈತಿಕ, ಶೈಕ್ಷಣಿಕ. ಸಾಂಸ್ಕೃತಿಕ, ಹೀಗೆ ಎಲ್ಲ ವಿಧಗಳ ಏಳ್ಗೆಯೂ ಅದು. ಮನುಜ ವರ್ಗಹಷ್ಟೇ ಅಲ್ಲ, ಎಲ್ಲ ಜೀವರಾಶಿಯ ಏಳ್ಗೆಯ ಕಳಕಳಿ ಅದರಲ್ಲಿ, 'ಸರ್ವತ್ರ ಸುಖಿನಃ ಸಂತು, ಸರ್ವೇ ಸಂತು ನಿರಾಮಯಾಃ' ಎಂದೇ ಅವರ ನಿಡು ಕಹಳೆ.

ಗಾಂಧೀಜೀ ಭಾರತೀಯರಾಗಿ ಜನಿಸಿ ಬೆಳೆದರೂ ಅವರು ಸಮಗ್ರ ಮನುಕುಲದ ಉತ್ತಾರಕರು. ಭಾರತದ ಚೌಕಟ್ಟಿನಲ್ಲಿ ಅವರ ಕ್ರಿಯೆ ಸಾಗಿದರೂ ಅದು ವಿಶ್ವವ್ಯಾಪಕ. ಭಾರತಸ್ವತಂತ್ರವಾದರೆ ಅದು ಜಗತ್ತಿಗೇ ಸ್ವಾತಂತ್ರ್ಯ ತಂದೀತು ಎಂದವರ ಸುವರ್ಣ

ಕನಸು. ಅವರ ನಾಯಕತ್ವದಲ್ಲಿ ನಡೆದ ಸ್ವಾತಂತ್ರ್ಯ ಹೋರಾಟ ಅಧ್ಯಾತ್ಮದ ಪುಟ್ಟಕ್ಕೆ ಏರಿದ್ದಿತು. ಸತ್ಯ, ಅಹಿಂಸೆಗಳಿಂದ ಉದ್ದೀಪಿತವಾದ ಆ ಸಮರ ವಿಧಾನದ ಮೌಲ್ಯಗಳು ಚಿರಂತನ. ಮಾನವ ದೇವತ್ವಕ್ಕೇರಿದ ನಿದರ್ಶನಗಳು ಹಲವಾರು. ತ್ಯಾಗ ಬಲಿದಾನ ಗಳಿಂದ ನಾಡು ಪವಿತ್ರವಾಯಿತು. ಜಗತ್ತೇ ಬೆಬ್ಬರಗೊಂಡು ನೋಡಿತು. 'ಸತ್ಯಾಗ್ರಹ' ಹೋರಾಟ ವಿಧಾನ 'ಸತ್ಯಯುಗ'ದ ಕಲ್ಪನೆಯನ್ನು ಮುಂದಿಟ್ಟಿತು.

ಹೀಗೆ ಒಂದು ಕಡೆ ರಾಷ್ಟ್ರವನ್ನು ಹೋರಾಟಕ್ಕೆ ಅಣಿ ಮಾಡಿದರೆ ಇನ್ನೊಂದು ಕಡೆ ವ್ಯಕ್ತಿ ಸ್ವತಂತ್ರ ಬದುಕನ್ನು ಬಾಳಿ, ಸ್ವಾವಲಂಬಿಯಾಗಿ ಅನ್ಯೋನ್ಯಾವಲಂಬಿಯಾಗಿ, ಪ್ರೇಮಮಯಿಯಾಗಿ ರೂಪುಗೊಳ್ಳಲನುವಾಗುವಂತೆ ಕಾರ್ಯಕ್ರಮಗಳನ್ನು ರಾಷ್ಟ್ರದ ಮುಂದಿಟ್ಟುದು ಗಾಂಧೀ ವ್ಯಕ್ತಿತ್ವದ ವೈಶಿಷ್ಟ್ಯ. ಆ ಕಾರ್ಯಕ್ರಮಗಳು ಇಪ್ಪತ್ತೆರಡು. ಅವಕ್ಕೆ ವಿಧಾಯಕ ಕಾರ್ಯಕ್ರಮಗಳೆಂದು ಹೆಸರು. ಅವು ಒಮ್ಮೆಲೇ ಉದ್ಭವಿಸಿದುವಲ್ಲ, ವರ್ಷಗಳ ಅನುಭವದಿಂದ ರೂಪುಗೊಂಡವು. ಸಮಗ್ರ ಭಾರತದ ನಾನಾ ಸಮಸ್ಯೆಗಳ ಪರಿಹಾರಕ್ಕೆ ಯೋಜಿಸಲ್ಪಟ್ಟ ಕಾರ್ಯಕ್ರಮಗಳು. ಅವು ರಾಷ್ಟ್ರದ ಬದುಕಿನ ಸಮಸ್ತ ಪಾರ್ಶ್ವಗಳನ್ನೂ ಸ್ಪರ್ಶಿಸಿದ್ದವು. ವಿಧಾಯಕ ಕಾರ್ಯಕ್ರಮಗಳ ನಿಷ್ಠಾಪೂರ್ಣ ಅನುಷ್ಠಾನ ದಿಂದ ಬ್ರಿಟಿಷರು ಒಂದು ವೇಳೆ ರಾಜಕೀಯ ಸ್ವಾತಂತ್ರ್ಯವನ್ನು ನೀಡಲು ನಿಧಾನ ಮಾಡಿದ್ದರೂ ಸ್ವರಾಜ್ಯ, ಸ್ವಾವಲಂಬನರಾಜ್ಯ ಪ್ರಾಪ್ತವಾಗುತ್ತಿತ್ತು. ಗಾಂಧೀಜಿ ಯವರ ಮಾತಿನಲ್ಲಿಯೇ ಹೇಳಬೇಕೆಂದರೆ, 'ವಿಧಾಯಕ ಕಾರ್ಯಕ್ರಮಗಳ ಸಂಪೂರ್ಣ ಅನುಸರಣೆಯೇ ಪೂರ್ಣ ಸ್ವರಾಜ್ಯ ಪ್ರಾಪ್ತಿ.' ಈ ಮಾತಿನ ಅರ್ಥ ನಮಗಿಂದು ಸ್ಪಷ್ಟ ವಾಗಿ ಗೋಚರಿಸುತ್ತದೆ. ರಾಜಕೀಯ ಸ್ವಾತಂತ್ರ್ಯ ಬಂದು ಮೂವತ್ತೂರು ವರ್ಷ ಗಳಾದವು. ಆದರೆ ನಾವು ಸ್ವಾವಲಂಬಿ ಸ್ವರಾಜ್ಯ ಹೊಂದಿದ ಸ್ವತಂತ್ರ ರಾಷ್ಟ್ರ ವಾಗಿದ್ದೇವೆಯೇ ಎಂದು ಆತ್ಮಶೋಧನೆ ಮಾಡಿಕೊಳ್ಳಬೇಕಾಗಿದೆ. ದುಃಖದ ಮಾತೆಂದರೆ ವರ್ಷಗಳು ಕಳೆದಂತೆ ನಾವು ವಿವಿಧ ಗುಲಾಮಗಿರಿಗಳ ಶೃಂಖಲೆಯಲ್ಲಿ ಸಿಕ್ಕಿಹೋಗಿದ್ದೇವೆ. ಸ್ವದೇಶದಲ್ಲಿ ಪರದೇಶಿಗಳಾಗಿದ್ದೇವೆ. ಇದು ನಮ್ಮ ಅತೀವ ದೌರ್ಭಾಗ್ಯ.

೫

ಒಂದು ವಿಧದಲ್ಲಿ 1926ನೆಯ ಇಸವಿ ನನ್ನ ಜೀವನದಲ್ಲಿ ಹೊಸತನ ತುಂಬಿತು ಎನ್ನಬಹುದು. ಹೊಸ ಮೌಲ್ಯಗಳಿಂದ ನಾನು ಆಕರ್ಷಿತನಾದೆ. ಕೇವಲ ಸಣ್ಣ ಹರಯದ ಹುಡುಗನಾಗಿ ಅಖಿಲ ಭಾರತ ಹಿಂದುಸ್ಥಾನೀ ಸೇವಾದಳದ ಎರಡನೆಯ ಶಿಬಿರದಲ್ಲಿ ತರಬೇತಿ ಪಡೆದುದು. ಅದು ಹಿಂದುಸ್ಥಾನೀ ಸೇವಾದಳದ ಜನಕರಾದ ಗತಿಸಿದ ಡಾ. ಹರ್ಡೀಕರ್ ಅವರ ನೇತೃತ್ವದಲ್ಲಿ ನಡೆಯಿತು. ಪ್ರೌಢಶಾಲೆಯ ವಿದ್ಯಾರ್ಥಿ ಯಾಗಿ ಓದಿ ಪ್ರಭಾವಿತನಾಗಿದ್ದ ನನಗೆ ಕಾರ್ಯಾಸಕ್ತಿಯ ಮೂಲಬೀಜ ನೆಟ್ಟಿತು. ಅದೇ ವರ್ಷ ಗಾಂಧೀಜಿಯ ಪ್ರವಾಸ ಇದಕ್ಕೆ ಇನ್ನೂ ಇಂಬುಗೊಟ್ಟಿತು. ಗಾಂಧೀಜಿಯ ವಿಧಾ ಯಕ ಕಾರ್ಯಕ್ರಮಗಳಲ್ಲಿ ಖಾದಿ, ರಾಷ್ಟ್ರಭಾಷಾ ಹಿಂದೀ ಅಂದು ಪ್ರಮುಖವಾಗಿದ್ದವು,

1931ರಲ್ಲಿ ಅಖಿಲ ಭಾರತ ಹರಿಜನ ಸೇವಾ ಸಂಘ. 1934ರಲ್ಲಿ ಅಖಿಲ ಭಾರತ ಗ್ರಾಮೋದ್ಯೋಗ ಸಂಘ, 1937ರಲ್ಲಿ ಅಖಿಲ ಭಾರತ ನಯೀ ತಾಲೀಂ ಸಂಘ ಇವೆಲ್ಲವೂ ಸ್ಥಾಪನೆಯಾಗಿ ರಾಷ್ಟ್ರದಲ್ಲಿ ಹೊಸ ಚೈತನ್ಯವನ್ನು ತುಂಬುತ್ತಿದ್ದವು. ವಿಚಾರಪರ ಯುವಕರಿಗೆ ಸ್ವಾತಂತ್ರ್ಯ ಹೋರಾಟದ ಗುಂಗನ್ನೂ, ದೇಶಪ್ರೇಮಕ್ಕಾಗಿ ತ್ಯಾಗಮಾಡಬೇಕೆಂಬ ಭಾವನೆಯನ್ನೂ ಹುಟ್ಟಿಸುತ್ತಿದ್ದವು. ಇವೆಲ್ಲಕ್ಕೂ ತ್ಯಾಗದ ಮೂರ್ತಿಮಂತ ವ್ಯಕ್ತಿ ಗಾಂಧೀಜೀ ಆಗಿದ್ದರು. ಅವರ ಒಂದೊಂದು ಮಾತೂ ಸಿಡಿಲಿನ ಸ್ಫೋಟ. ಅವು ಹೊಸ ದಿಗಂತಗಳೆಡೆಗೆ ಮಾನವ ವ್ಯಕ್ತಿ ಪಯಣಿಸಲು ಸ್ಫೂರ್ತಿ ಕೊಡುತ್ತಿದ್ದವು. ಕೋಟಿಕೋಟಿ ಜನಕ್ಕೆ ಇದರ ಅಪ್ರತಿಹತ ಪ್ರಭಾವ ಬೀರಿದ್ದಿತು. ನನ್ನ ಮನದ ಮೂಲೆಯಲ್ಲಿಯೂ ಇವುಗಳ ಸಾಂಕ್ರಮಿಕ ಜಾಡ್ಯ ಪಸರಿಸಿದ್ದಿತು.

ಜೀವನ ಎಷ್ಟೇ ವಿಸ್ತಾರವಾದ, ವ್ಯಾಪಕವಾದ ಆದರ್ಶಕ್ಕೆ ಕಟ್ಟುಬಿದ್ದರೂ ಅವರ ಬೇಡಿಕೆಗಳು ಮನುಷ್ಯನನ್ನು ಧರೆಗೆ ಜಗ್ಗುತ್ತವೆ. ಬಾಳಿನ ಅಗತ್ಯತೆಗಳು, ಬವಣೆಗಳು ಅನಂತರೀತಿಯಲ್ಲಿ ಕಾಡುತ್ತವೆ. ಅವುಗಳ ಆಕರ್ಷಣಕ್ಕೆ ಗುರಿಯಾಗದ ಮಹಾನುಭಾವರು ಅತಿ ವಿರಳ, ಸಾಮಾನ್ಯ ಮಾನವರೆಲ್ಲ ಅವುಗಳಿಂದ ಆಕರ್ಷಿತರಾಗುತ್ತಾರೆ. ನಾನೂ ಹಾಗೇ.

ಕಾಲೇಜಿನ ವ್ಯಾಸಂಗವನ್ನು ಅನಿವಾರ್ಯವಾಗಿ ಅರ್ಧಾಂತವಾಗಿ ನಿಲ್ಲಿಸಿದ ನನಗೆ ಹಲವಾರು ಕೋಟಲೆಗಳ ಹೆಜ್ಜೆಗಳು. ಆರ್ಥಿಕ ದುಃಸ್ಥಿತಿಯ ತಿವಿತ. ಎಲ್ಲೆಲ್ಲೋ ಸೇವೆ. ಪತ್ರಿಕಾ ವ್ಯವಸಾಯ. ಲೋಕೋಪಯೋಗಿ ಇಲಾಖೆಯಲ್ಲಿ ಕಾರಕೂನನ ಕೆಲಸ, ಪೋಲೀಸ್ ಇಲಾಖೆಯಲ್ಲಿ ಸ್ವಲ್ಪಕಾಲ ಕಾರಕೂನನ ಕೆಲಸ. ಇವೆಲ್ಲ ಸಾಕಾಗಿ ಕೊನೆಗೆ 'ಬಂದದ್ದು ಬರಲಿ. ಆದದ್ದು ಆಗಲಿ' ಎಂದು ವಕೀಲ ವೃತ್ತಿಯನ್ನು ಕೈಗೊಳ್ಳಲು ನಿಶ್ಚಯ. ಅದಕ್ಕೆ ತಕ್ಕ ವ್ಯಾಸಂಗವನ್ನೂ ಮಾಡಿದುದಾಯಿತು. ಆದರೆ ಚಿಕ್ಕ ವಯಸ್ಸಿನಲ್ಲಿ ಮನದಲ್ಲಿ ನೆಲೆ ಮಾಡಿಕೊಂಡ ಧ್ಯೇಯಗಳ ಆಕರ್ಷಣೆ ಆಗಾಗ ನನಗೆ ತಪ್ಪಿಸಿಕೊಳ್ಳಲಾರದಂಥ ಅಂಶಗಳಾಗಿದ್ದವು.

ಮೇಲೆ ಹೇಳಿದಂತೆ 1926ರಲ್ಲಿ ರಾಷ್ಟ್ರೀಯ ಸ್ವಯಂಸೇವಕ ದೀಕ್ಷೆ ಬಂದುದು 1931ರಲ್ಲಿ ವಿದ್ಯಾರ್ಥಿದೆಸೆಯಲ್ಲಿದ್ದರೂ, ರಾಷ್ಟ್ರೀಯ ಹೋರಾಟದ ಪ್ರಥಮ ರುಚಿಯನ್ನು ತೋರಿಸಿತು. ಅದು ರಾಷ್ಟ್ರಕ್ಕೆ ಸ್ವಾತಂತ್ರ್ಯ ಬರುವವರೆಗೂ ನಾನಾ ಮಜಲುಗಳಲ್ಲಿ ತುಮಕೂರು, ಕನಕಪುರ. ಚಿಕ್ಕನಾಯಕನಹಳ್ಳಿಗಳಲ್ಲಿ ತನ್ನ ಪ್ರಭಾವ ತೋರಿತು. ತುಮಕೂರಿನಲ್ಲಿ ದಿವಂಗತ ರಂಗೈಯ್ಯಂಗಾರ್ಯರೂ, ದಿವಂಗತ ಟಿ. ಸುಬ್ರಹ್ಮಣ್ಯ ಇವರೆಲ್ಲ ನನ್ನ ರಾಷ್ಟ್ರಭಾವನೆಗೆ ತೈಲ ಎರೆದರು. ಕನಕಪುರದಲ್ಲಿ ದಿವಂಗತ ಶ್ರೀ ಎಸ್. ಕರಿಯಪ್ಪನವರು ನನ್ನ ಅಂತರಂಗದ ಮಿತ್ರರಾದರು. ಚಿಕ್ಕ ನಾಯಕನಹಳ್ಳಿಯಲ್ಲಿ ಅದೇ ಪಾತ್ರವನ್ನು ದಿವಂಗತ ಶ್ರೀ ಸಿ. ಎಚ್. ಲಿಂಗದೇವರು ದಿವಂಗತ ಶ್ರೀ ಎಸ್. ಮುರುಡಯ್ಯ, ಶ್ರೀ ಎಂ .ಎಸ್. ಹನುಮಂತರಾವ್,

ಶ್ರೀ ಸಿ. ಟಿ. ಈಶ್ವರನ್ ಮತ್ತು ಶ್ರೀ ಜಿ. ಸ. ಕೃಷ್ಣರಾವ್ ಇವರೆಲ್ಲ ತುಂಬಿಕೊಟ್ಟರು. ಜೊತೆಜೊತೆಗೆ ಹೋಗಿದರು. ತುರುಂಗವಾಸ ಅನುಭವಿಸಿದೆವು. ದಿವಂಗತ ಮಿತ್ರರನ್ನು ನೆನೆದಾಗ ಕಣ್ಣಲ್ಲಿ ನೀರು ಜಗುಳುತ್ತದೆ. ಕ್ಷಣಕಾಲ ಮನಸ್ಸು ಉದ್ವಿಗ್ನವಾಗಿ ಭಾರವಾಗುತ್ತದೆ.

ಅನೇಕರನ್ನು ಭಾಗ್ಯವೇ ಇಲ್ಲದ ಭಾಗ್ಯಶಾಲಿಗಳೆನ್ನಬಹುದು. ಭಾಗ್ಯವೆಂದರೆ ಸಾಮಾನ್ಯವಾಗಿ ಒಂದೇ ಅರ್ಥ. ಅದು ಹಿರೀಕರು ಗಳಿಸಿಟ್ಟ ಚರ-ಸ್ಥಿರ ಆಸ್ತಿ. ಅವುಗಳೇನೂ ಇಲ್ಲದಿದ್ದರೂ ಅಥವಾ ಅಲ್ಪಸ್ವಲ್ಪವಿದ್ದರೂ ಅದಕ್ಕಿಂತ ಹೆಚ್ಚಾಗಿ ಮಾನಸಿಕ ಸ್ವಾಸ್ಥ್ಯವನ್ನು ಜೊತೆಗೆ ದೇಹದಾರ್ಢ್ಯವನ್ನು ಕಾಪಾಡಿಕೊಂಡವರು ಭಾಗ್ಯಶಾಲಿಗಳಲ್ಲವೇ ?

ನನ್ನನ್ನು ಈ ಗುಂಪಿಗೆ ಸೇರಿಸಬಹುದೆನಿಸುತ್ತದೆ. ಶಿರ ಎಳೆ ವಯಸ್ಸಿನಲ್ಲಿ ಸಂಸಾರ ಒಡೆದು ನಮ್ಮ ತಾಯಿ ಮತ್ತು ನಾನು ಬೀದಿಪಾಲಾಗಬೇಕಾದ ಸಂದರ್ಭ ಒದಗಿದಾಗ ನಮ್ಮನ್ನು ಕೈ ಹಿಡಿದು ಸಲಹಿದವರು ಹಲವಾರು ಬಂಧುಗಳು ; ಪ್ರಧಾನವಾಗಿ ನನ್ನ ಸೋದರಮಾವಂದಿರು. ವಿದ್ಯಾರ್ಥಿದೆಸೆಯಲ್ಲಿ ಹೈಸ್ಕೂಲಿನಲ್ಲೂ, ಕಾಲೇಜಿನಲ್ಲೂ ಯಾವ ಕೊರತೆಯೂ ನಮಗೆ ಕಂಡುಬರದಂತೆ ನೆರವಿತ್ತವರು ಹಲವಾರು ಮಿತ್ರರು. ಅವರಲ್ಲಿ ಕೆಲವರು ಇಂದಿಗೂ ನನಗೆ ಸ್ನೇಹ-ಸೌಭಾಗ್ಯವನ್ನಿತ್ತಿದ್ದಾರೆ. ಕೆಲವರು ಇಂದಿನ ನನ್ನ ಸ್ಥಿತಿಯಲ್ಲೂ ನನ್ನನ್ನು ಆಗಾಗ ವಿಚಾರಿಸಿ ಅಭಾವ ಕಾಣದಂತೆ ಮಾಡಿದ್ದಾರೆ. ಎಲ್ಲಕ್ಕಿಂತ ಹೆಚ್ಚಾಗಿ ನಾನು ವಿವಾಹವನ್ನೇ ಮಾಡಿಕೊಳ್ಳಬಾರದೆಂದು ತೀರ್ಮಾನಿಸಿದ್ದ ಜೀವನಘಟ್ಟವೊಂದಿತ್ತು. ಅದು ಈಶ್ವರೇಚ್ಛೆಯಾಗಿರಲಿಲ್ಲ ಎಂದೆನಿಸುತ್ತದೆ. ನನ್ನ ಹೃದಯಾಂತರಾಳದ ಆದರ್ಶಗಳಿಗೆ, ಆಶೋತ್ತರಗಳಿಗೆ ವಿರೋಧವೋ ಎಂಬಂತೆ ಕಂಡುಬಂದರೂ ನನ್ನ ಕೈಹಿಡಿದ ಮಡದಿ ಬದುಕಿನ ಸುಖ-ದುಃಖಗಳಲ್ಲಿ ಪಾಲ್ಗೊಂಡುದು ಮತ್ತು ಶಾಶ್ವತ ನೆಲೆಯೇ ಇಲ್ಲದ ಸಮಯದಲ್ಲಿ ಬದುಕಿಗೆ ನೆಲೆ ಕಂಡುಬಂದುದು, ನನ್ನ ಎಲ್ಲ ಹುಚ್ಚಾಟಗಳಿಗೂ ಒಂದು ಅಭೇದ್ಯವಾದ ಆಶ್ರಯದ ನೆಲೆಯನ್ನು ಕಂಡುದು ಶ್ರೀಹರಿಯ ಅಮೋಘ ಕರುಣೆಯೆನ್ನಬೇಕು.

ಅಲ್ಲಿ ಇಲ್ಲಿ ತಾಕಲಾಡಿ ಚಿಕ್ಕನಾಯಕನಹಳ್ಳಿಯಲ್ಲಿ ನೆಲೆಸಿದಾಗ ನನಗೆ ಇಪತ್ತೈದರ ಹರಯಇರಬೇಕು. ವಕೀಲಿ ವೃತ್ತಿಯ ತರಬೇತು ಮುಗಿಯಿತು. ಇನ್ನೇನು ವಕೀಲನೆಂಬ ನಾಮಫಲಕ ಮನೆಬಾಗಿಲ ಮುಂದೆ ಹಾಕುವುದೇ ಬಾಕಿ. 1937ನೆ ಇಸವಿ. ಗಾಂಧೀಜೀ ಹರಿಜನ ಪತ್ರಿಕೆಯಲ್ಲಿ ಒಂದು ಪುಟ್ಟ ಲೇಖನ ಬರೆದರು. ಅಖಿಲ ಭಾರತ ಶಿಕ್ಷಣ ಕ್ಷೇತ್ರದಲ್ಲಿ ಒಂದು ದೊಡ್ಡ ಕೋಲಾಹಲವನ್ನೇ ಎಬ್ಬಿಸಿದರು. ರಾಷ್ಟ್ರೀಯ ರಾಜಕಾರಣಿ, ಮಹಾತ್ಮಾ, ಶಿಕ್ಷಣದ ಬಗೆಗೆ ತಮ್ಮ ಅಭಿಪ್ರಾಯಗಳನ್ನು ಹೊರಗೆಡಹಿದುದು ಅದರಲ್ಲಿಯೂ ಕ್ರಾಂತಿಕಾರಕ ಅಭಿಪ್ರಾಯಗಳನ್ನು ಸೂಚಿಸಿದುದು ಶಿಕ್ಷಣವೇತ್ತರನ್ನು ದಂಗುಬಡಿಸಿತು. ಅವರು 'ನಯೀ ತಾಲೀಂ-ಹೊಸ ಶಿಕ್ಷಣ' ಎಂಬ ಅಭಿಧಾನದಿಂದ ಸೂತ್ರರೂಪದಲ್ಲಿ ಬರೆದುದು ಸಾಂಪ್ರದಾಯಿಕ ಶಿಕ್ಷಣ ತಜ್ಞರಲ್ಲಿ ಅನೇಕರಿಗೆ ಕಸಿವಿಸಿ

ಎನಿಸಿತು. ರಾಷ್ಟ್ರೀಯ ಮನೋಭಾವವುಳ್ಳ ಶಿಕ್ಷಣವೇತ್ತರು ಅದರ ಬಗೆಗೆ ಚಿಂತಿಸಿ ಅದಕ್ಕೊಂದು ಸ್ವರೂಪವನ್ನು ಶಿಕ್ಷಣ ಪರಿಭಾಷೆಯಲ್ಲಿ ನೀಡಿದರು. ಡಾ. ಜಕೀರ್ ಹುಸೇನ್, ಶ್ರೀ ಇ. ಡಬ್ಲ್ಯೂ. ಆರ್ಯನಾಯಕಂ, ಶ್ರೀಮತಿ ಆಶಾದೇವಿ, ಶ್ರೀ ಜಿ. ರಾಮಚಂದ್ರನ್, ಶ್ರೀಮತಿ ಮಾರ್ಗರೆಟ್ ಸೈಕ್ಸ್ ಇವರೆಲ್ಲ 'ಗಾಂಧೀಗೀಳು' ಎಂದು ಅಂದು ಪ್ರಚಲಿತವಾಗಿದ್ದ ಶಿಕ್ಷಣ ತತ್ವಗಳಿಗೆ ಸಾಕಾರ ನೀಡಿದರು. ಅದನ್ನು 'ರಾಷ್ಟ್ರೀಯ ಮೂಲ ಶಿಕ್ಷಣ' ಎಂದು ಕರೆದರು. ಗಾಂಧೀಜೀಯಂತೂ ಅದನ್ನು ಅನೇಕ ಸಂದರ್ಭಗಳಲ್ಲಿ ಸತ್ಯ ಶಿಕ್ಷಣವೆಂದೇ ಕರೆದರು. ಇದು ಭಾರತದಲ್ಲಿ ನವಮನ್ವಂತರ ವನ್ನು ಸೃಷ್ಟಿಸುವ ಕಲ್ಪನೆಯಿಂದ ಕೂಡಿದ್ದಿತು. ಈ ಶಿಕ್ಷಣ ವಿಧಾನವನ್ನು ಗಾಂಧೀಜಿ ತಮ್ಮ ವಿಧಾಯಕ ಕಾರ್ಯಕ್ರಮಗಳ 'ಕಟ್ಟಕಡೆಯ ಕೊಡುಗೆ' ಎಂಬುದಾಗಿ ನುಡಿ ದಿದ್ದರು. ಅದರ ಮೂಲಕ ಪರಕೀಯರ ಆಳ್ವಿಕೆಯ ಪರಿಣಾಮವಾಗಿ ಸ್ವಂತಿಕೆಯನ್ನು ಕಳೆದುಕೊಂಡು ಪರಾಧೀನದ ಪಂಕದಲ್ಲಿ ಹುದುಗಿದ್ದ ಭಾರತ ಸ್ವಾತಂತ್ರ್ಯ, ಸ್ವಾವ ಲಂಬನೆ, ಅನ್ಯೋನ್ಯ ಭಾವನೆ. ಅಂತರರಾಷ್ಟ್ರೀಯ ಮೈತ್ರಿ ಇವುಗಳಿಂದ ಶೋಭಿತವಾದ ಪ್ರಜೆಯನ್ನು ಸೃಷ್ಟಿಸಬೇಕಾಗಿತ್ತು. ಅದು ಗಾಂಧೀಜೀಯ ಮಾತಿನಲ್ಲಿಯೇ. 'ಜೀವನ ದಲ್ಲಿ ಸತ್ಯ-ಅಹಿಂಸೆಗಳನ್ನು ಪ್ರತಿಷ್ಠಿಸಿ ನವ ಸಮಾಜವನ್ನು ರಚಿಸುವ ಚಿಲುಮೆಗಳಾಗ ಬೇಕಾಗಿತ್ತು.'

ಈ ಶಿಕ್ಷಣ ಕಲ್ಪನೆ ಅನೇಕ ಯುವಕರ ಮನಸ್ಸಿನಲ್ಲಿ ಸ್ಫೂರ್ತಿಯನ್ನು ಕೆರಳಿಸಿರ ಬೇಕು. ವಿಚಾರಶಕ್ತಿಯನ್ನು ಅರಳಿಸಿರಬೇಕು. ಈ ಲೇಖನವನ್ನು ಓದಿದಾಗ ನನಗೂ ಮನಸ್ಸಿನಲ್ಲಿ ಕಿಂಚಿತ್ ಕಲ್ಪನೆ ಗರಿಮೂಡಿತು. 'Lawyers are Liers' ಎಂಬ ಗಾಂಧೀಜಿಯ ಉದ್ಘೋಷಣೆ ನೆನಪಿಗೆ ಬಂದು ಆ ವೃತ್ತಿಯ ಬಗೆಗೆ ಒಂದು ಬಗೆಯ ತಾತ್ಸಾರವೇ ಮೂಡಿತು.

ಕನಕಪುರದ ದಿವಂಗತ ನೈಷ್ಠಿಕ ಬ್ರಹ್ಮಚಾರಿ ಶ್ರೀ ಎಸ್. ಕರಿಯಪ್ಪನವರು ನಾನು ಸ್ವಲ್ಪ ಕಾಲ ಲೋಕೋಪಯೋಗಿ ಇಲಾಖೆಯಲ್ಲಿದ್ದಾಗ ಪರಿಚಿತರಾಗಿದ್ದವರು. ಅವರಿಗೂ ನನಗೂ ಮೈತ್ರಿ ಬೆಳೆದಿತ್ತು. ಅವರೂ ರಾಷ್ಟ್ರೀಯವಾದಿಗಳು, ದಯಾನಂದ ಸರಸ್ವತಿಗಳ ಆರ್ಯಸಮಾಜ ಸೇರದಿದ್ದರೂ ಅವರ 'ಸತ್ಯಾರ್ಥ ಪ್ರಕಾಶಿಕೆ'ಯಿಂದ ಪ್ರಭಾವಿತರಾದವರು. ನಾನೂ ಅಷ್ಟೆ. ನಾವಿಬ್ಬರೂ ಸೇರಿದಾಗ ಅನೇಕ ವಿಷಯ ಗಳನ್ನು ಚರ್ಚಿಸುತ್ತಿದ್ದೆವು. ಅವರು ಒಂದು ವಿದ್ಯಾರ್ಥಿನಿಲಯ ನಡೆಸುತ್ತಿದ್ದರು. ನಾವಿಬ್ಬರೂ ಸೇರಿ ಒಂದು ಶಿಕ್ಷಣ ಸಂಸ್ಥೆಯನ್ನೇಕೆ ನಡೆಸಬಾರದು ಎಂದು ಆಲೋ ಚಿಸುತ್ತಿದ್ದೆವು. ಗಾಂಧೀಜಿಯ ವಿಚಾರಗಳು ನನಗೆ ಸ್ಫೂರ್ತಿ ನೀಡಿದ್ದಂತೆ ಅವರಿಗೂ ನೀಡಿದ್ದಿತು. ನಾನೊಂದು ಪತ್ರ ಬರೆದೆ. 'ಗಾಂಧೀಜಿಯ ಶಿಕ್ಷಣ ವಿಚಾರಗಳನ್ನು ಕಾರ್ಯರೂಪಕ್ಕೆ ತರಲು ಪ್ರಯತ್ನಿಸಬಾರದೇಕೆ ?' ತಕ್ಷಣ ಉತ್ತರ ಬಂದಿತು. 'ಬನ್ನಿ, ಇಬ್ಬರೂ ಸೇರಿ ಮಾಡೋಣ.' ಶಿಕ್ಷಣದ ಕಡೆಗೆ ತೀವ್ರ ಒಲವಿದ್ದ ನನಗೆ ಇದು ಒಳ್ಳೆಯ ಅವಕಾಶ ನೀಡಿತು, ಸುಮಾರು ಮೂರು ವರ್ಷಗಳ ಕಾಲ ಇಬ್ಬರೂ ಆ ಧ್ಯೇಯವನ್ನೇ

ಮುಂದುವರಿಸಿದೆವು. ಜೊತೆ ಜೊತೆಗೆ ರಾಷ್ಟ್ರೀಯ ರಾಜಕಾರಣದಲ್ಲೂ ಕ್ರಿಯೆ ಸಾಗಿತ್ತು. ಆದರೆ ಶಿಕ್ಷಣ ವಿಷಯವೇ ಹಗಲಿರುಳು ನಮ್ಮ ಚಿಂತನೆಯ ವಿಷಯವಾಗಿತ್ತು.

ಕನಕಪುರದಲ್ಲಿ ಮಾಡಿದ ಶಿಕ್ಷಣ ಕಾರ್ಯ ನನ್ನ ಮನಸ್ಸಿಗೆ, ನನ್ನ ಆತ್ಮಕ್ಕೆ ಬಹು ಶಾಂತಿ ತಂದುಕೊಟ್ಟಿತ್ತು. ಆದರೆ ವಿಧಿ ನನ್ನನ್ನು ಸ್ವಂತ ಊರಿಗೆ ಹಿಂದಕ್ಕೆ ಬರುವಂತೆ ಮಾಡಿತು. ನನ್ನ ಮಾವನವರು ಕಾಲವಾಗಿ ಇಬ್ಬರೇ ಉಳಿದಿದ್ದ ನನ್ನ ಪತ್ನಿ ಮತ್ತು ಅಕ್ಕನವರ ಸಂಸಾರವನ್ನು ನೋಡಿಕೊಳ್ಳುವ ನೈತಿಕ ಹೊಣೆ ನನ್ನ ಮೇಲೆ ಬಿದ್ದಿತು.

ಚಿಕ್ಕನಾಯಕನಹಳ್ಳಿಗೆ ಬಂದ ಮೇಲೆ ಸ್ವಾತಂತ್ರ್ಯ ಹೋರಾಟದ ರಾಷ್ಟ್ರೀಯ ರಾಜಕಾರಣವೇನೋ ನಡೆದೇ ಇತ್ತು. ಅದು ಯಾವ ಕಾಲದಲ್ಲೂ ನಿಲುಗಡೆ ಕಂಡಿರ ಲಿಲ್ಲ. ಸುಭಾಷ್‌ಬಾಬು ಒಮ್ಮೆ ನುಡಿದಿದ್ದ 'ಸ್ವಾತಂತ್ರ್ಯ ನನ್ನ ಆತ್ಮಗೀತೆ' ಎಂಬ ಮಾತೂ ಹಾಗೆಯೇ ಜವಹರಲಾಲರು ನುಡಿದ 'ಸಾಹಸಿಗೆ ಜಯ ದೊರಕೀತು ಹೇಡಿ ಗೆಂದಿಗೂ ಅಲ್ಲ' ಎಂಬ ಮಾತೂ ಈ ಉದ್ಯಮಕ್ಕೆ ಸದಾ ಕ್ರಿಯಾಶಕ್ತಿಯನ್ನು ನೀಡು ತ್ತಿದ್ದವು.

ಚಿಕ್ಕನಾಯಕನಹಳ್ಳಿಯಲ್ಲಿಯೂ ರಾಷ್ಟ್ರೀಯ ಹೋರಾಟದ ಅಲೆ ಪ್ರವಹಿಸಿತು. ನಾನು ಹಿಂದೆ ಹೇಳಿದ ವ್ಯಕ್ತಿಗಳೆಲ್ಲ ಅದರಲ್ಲಿ ನಿರತರಾಗಿದ್ದರು. ಇದರ ಜೊತೆಗೆ ರಾಷ್ಟ್ರೀಯ ಶಿಕ್ಷಣ ಸಂಸ್ಥೆಯೊಂದನ್ನು ಸ್ಥಾಪಿಸಬೇಕೆಂಬ ಯೋಚನೆಯೂ ಬಂದಿತು. ಮಿತ್ರರೆಲ್ಲ ಕಾರ್ಯೋನ್ಮುಖರಾದೆವು. 'ದೇಶೀಯ ವಿದ್ಯಾಪೀಠ' ಎಂಬ ಸಂಸ್ಥೆಯನ್ನು ಸ್ಥಾಪಿಸಿದೆವು. ಈ ಹೆಸರೇ ನಮ್ಮ ಮನಸ್ಸಿನ ಸ್ಫೂರ್ತಿಯನ್ನು ತೋರಿಸುತ್ತದೆ. ಕಾಶಿ ವಿದ್ಯಾಪೀಠ, ಗುಜರಾತ್ ವಿದ್ಯಾಪೀಠ ಎಂಬ ಹೆಸರುಗಳು ಅದಕ್ಕೆ ಮಾರ್ಗದರ್ಶನ ಕೊಟ್ಟಿದ್ದವು. ಸಂಸ್ಥೆಯಲ್ಲಿ ಶಿಕ್ಷಣ ಹೊಂದಿದ ಮಕ್ಕಳು ಪ್ರಧಾನವಾಗಿ ರಾಷ್ಟ್ರೀಯ ಹೋರಾಟದ ಪ್ರವೃತ್ತಿಗೆ ಹೊಂದಿಕೊಂಡು ಅದನ್ನು ಮುಂದುವರಿಸುವ ಕೈವಾರಿಗಳಾಗ ಬೇಕೆಂಬ ಇಚ್ಛೆ ನಮ್ಮದು. ಇಲ್ಲಿ ಒಂದು ತಪ್ಪು ಮಾಡಿದೆವೇನೋ ಎನಿಸುತ್ತದೆ. ರಾಷ್ಟ್ರೀಯ ಪ್ರವೃತ್ತಿಯನ್ನು ಬೆಳೆಸುವ ಯಾವ ಶಿಕ್ಷಣ ಕೊಟ್ಟರೂ, ರಾಜ್ಯದಲ್ಲಿ ಪ್ರಚ ಲಿತವಿರುವ ಶಿಕ್ಷಣ ಪದ್ಧತಿಗೆ ಹೊಂದಿಕೊಂಡಿರಬೇಕೆಂಬ ಅಂಶ ಕಾಲಕ್ರಮೇಣ ಅಡ ಚಣೆಯೇ ಆಯಿತು. ಆದರೂ 1947ರ ಹೋರಾಟದಲ್ಲಿ ಸ್ಥಾಪಕರ ಗುರಿಯ ಕೆಲವಂಶ ಸಿದ್ಧಿಸಿತೆನ್ನಬಹುದು. ಮುಖ್ಯೋಪಾಧ್ಯಾಯರಾದ ಶ್ರೀ ಸಿ. ಟಿ. ಈಶ್ವರನ್, ಸಹಾಯಕ ಅಧ್ಯಾಪಕರಾದ ಶ್ರೀ ಚಿ. ನ. ಕೃಷ್ಣರಾವ್ ಇವರೆಲ್ಲ ಹತ್ತಾರು ವಿದ್ಯಾರ್ಥಿಗಳೊಂದಿಗೆ ತುರಂಗವಾಸ ಅನುಭವಿಸಿದರು. ಇದು ಹೆಮ್ಮೆ ತರುವ ಅಂಶ. ಯಾವ ಧ್ಯೇಯವೂ ಪೂರ್ಣವಾಗಿ ಸಫಲವಾಗದೆಂಬ ಅಂಶವನ್ನು ಮನಸ್ಸಿಗೆ ತಂದಾಗ ಈ ಆಂಶಿಕ ಸಾಧನೆಯೇ ಎಷ್ಟೋ ಮಹತ್ವದ್ದೆನಿಸೀತು. ಆದರಲ್ಲಿಯೂ ಮೊದಲ ಮೂರು ವರ್ಷಗಳು ಸರ್ಕಾರದ ಧನ ಸಹಾಯ ಅಪೇಕ್ಷಿಸಿಯೇ ಇರಲಿಲ್ಲ. ಮಹಾಜನರ ಪ್ರೇಮ, ಔದಾರ್ಯಗಳಿಂದ ಬೆಳೆದು ಬಂದ ಸಂಸ್ಥೆ ಇದು ಎಂದು ನೆನೆದರೆ ಇಂದು ಇದೊಂದು ಪವಾಡವೇ ಎನಿಸು ತ್ತದೆ. ಇದಕ್ಕಾಗಿ ಮನಸಾರ ದುಡಿದ ಮಿತ್ರರು ಚಿರಸ್ಮರಣೀಯರು.

೬

ಬಹಿರಂಗದಲ್ಲಿ ರಾಷ್ಟ್ರೀಯ ಶಿಕ್ಷಣಕಾರ್ಯದಲ್ಲಿ ಮಗ್ನನಾಗಿದ್ದರೂ ನನ್ನ ಹೃದಯಾಂತರಾಳದ ಬಯಕೆ ಎತ್ತಲೋ ಎಳೆಯುತ್ತಿತ್ತು. ಆ ಸೆಳವು ಗಾಂಧೀಜಿಯ ವ್ಯಕ್ತಿತ್ವದ ಪರಿಣಾಮ ಮತ್ತು ಗಾಂಧೀ ಬರಹಗಳ ಅಧ್ಯಯನ. ಮೊದಲು ಮೊದಲು ಅಧ್ಯಯನ ಮಾಡಿದುದನ್ನು ಕನ್ನಡಿಗರಿಗೆ ಪರಿಚಯಿಸಬೇಕೆಂಬ ಆಸೆ. ಇದಕ್ಕೆ ಒಂದು ವೇದಿಕೆ ಬೇಕಲ್ಲ ? ಅದನ್ನು ನನಗೆ ಅತ್ಯಂತ ಪ್ರೀತ್ಯಾದರಗಳಿಂದ ಮತ್ತು ಸಮರ್ಥವಾಗಿ ಒದಗಿಸಿದವರು ದಿವಂಗತ ತಿರುಮಲೆ ತಾತಾಚಾರ್ಯಶರ್ಮ ಅವರು. ಅವರು ನಮ್ಮೂರಿನ ಕನ್ನಡ ಸಂಘದ ಒಂದು ಸಮಾರಂಭಕ್ಕೆ ಆಗಮಿಸಿದ್ದರು. ನಾನೇ ಸಂಘದ ಕಾರ್ಯದರ್ಶಿ. ನಮ್ಮ ಮನೆಯಲ್ಲೇ ಎರಡು ದಿನ ಬಿಡಾರ ಮಾಡಿದರು. ಆ ಸಮಯದಲ್ಲಿ ನಾನು ಅವರೊಂದಿಗೆ ರಾಷ್ಟ್ರೀಯ ವಿಚಾರಗಳಲ್ಲಿ, ಗಾಂಧೀ ವಿಚಾರಗಳಲ್ಲಿ ತುಂಬ ಚರ್ಚೆ ಮಾಡಿದ್ದೆ. ಅವರು ಬೆಂಗಳೂರಿಗೆ ನಿರ್ಗಮಿಸುವಾಗ ಬಸ್ ನಿಲ್ದಾಣದಲ್ಲಿ ನನ್ನ ಕೈ ಹಿಡಿದು ಹೇಳಿದರು, ''ಗಾಂಧೀ ವಿಚಾರದಲ್ಲಿ ಏನನ್ನಾದರೂ ಆಗಾಗ ಬರೆದು ಕಳಿಸುತ್ತಿರು.'' ಅವರ ಈ ವಾತ್ಸಲ್ಯವನ್ನು ಕಂಡು ನಾನು ಪುಳಕಿತನಾದೆ.

ಆಗಿನ ಕಾಲದಲ್ಲಿ ಪತ್ರಿಕೆಗಳಿಗೆ ಲೇಖನ ಬರೆದರೆ ಈಗಿನಂತೆ ಸಂಭಾವನೆ ಏನೂ ದೊರಕುತ್ತಿರಲಿಲ್ಲ. ಪ್ರಕಟನವಾಯಿತೆಂಬುದೇ ಮನಸ್ಸಿಗೆ ತೃಪ್ತಿ. ನನಗೂ ಹಾಗೆಯೇ. ಶ್ರೀ ಶರ್ಮರವರು ಧೀಮಂತ ಪತ್ರಿಕೋದ್ಯಮಿ. ಮೇಲಾಗಿ ಉದ್ದಾಮ ಸಾಹಿತಿ. ಅವರು ಗಾಂಧೀ ಬರಹಗಳ ನನ್ನ ಅನುವಾದವನ್ನು ಪ್ರಕಟಿಸುತ್ತಿದ್ದುದಲ್ಲದೆ, ''ಅನುವಾದ ಚೆನ್ನಾಗಿದೆ. ಅಭ್ಯಾಸ ಮಾಡು. ಬಿಡಬೇಡ'' ಎಂದು ಪ್ರೋತ್ಸಾಹಿಸಿ ಪತ್ರ ಬರೆದ ನೆನಪು.

ಮೊದಲು ಮೊದಲು 'ಗಾಂಧೀಜಿ–ಹಿಂದೂಧರ್ಮ' ಎಂಬ ಪುಸ್ತಕದಿಂದ ಆರಿಸಿ ಆರಿಸಿ ಅನೇಕ ಲೇಖನಗಳನ್ನು ಅನುವಾದ ಮಾಡಿ ಕಳಿಸುತ್ತಿದ್ದೆ. ಜೊತೆಗೆ ರಾಮಕೃಷ್ಣ ಪರಮಹಂಸರ ಭಾವದೀಪಿಕೆಗಳನ್ನೂ ಕನ್ನಡಿಸಿ ಕಳುಹಿಸುತ್ತಿದ್ದೆ. ಈ ಕಾರ್ಯ ನನ್ನ ಮನೋವೃತ್ತಿಯನ್ನೇ ಬದಲಾಯಿಸಿತು. ನಾನು ಹೆಚ್ಚು ಹೆಚ್ಚು ಅಂತರ್ಮುಖಿನಾದೆ. ಎಷ್ಟು ಬಹಿರಂಗ ಕಾರ್ಯಗಳಲ್ಲಿ ತೊಡಗಿದ್ದರೂ ಈ ಅಂತರ್ಮುಖದ ಪ್ರಭಾವ ನನ್ನ ಮೇಲೆ ಚೆನ್ನಾಗಿಯೇ ಬೀರಿತ್ತು.

ಈ ವೇಳೆಗೆ ಗಾಂಧೀ ಸ್ಮಾರಕ ನಿಧಿಯ ಕಾರ್ಯದರ್ಶಿಗಳಾಗಿದ್ದ ಶ್ರೀ ಶ್ರೀಧರ ಧೋತ್ರೆ ಮೈಸೂರು ರಾಜ್ಯಕ್ಕೆ ಭೇಟಿ ಕೊಟ್ಟರು. ಅವರು ವಿನೋಬಾಜಿ ಸಹಪಾಠಿ. ಗಾಂಧೀಜಿಯ ಕೊಚರಬ ಆಶ್ರಮವನ್ನು ಸೇರಿದವರಲ್ಲಿ ಮೊದಲಿಗರು. ಅವರನ್ನು ಭೇಟಿ ಮಾಡಿ ನನ್ನ ಕಾರ್ಯವನ್ನೆಲ್ಲಾ ವಿವರಿಸಿದಾಗ ಅವರು ವರ್ಧಾದಲ್ಲಿ ಜಮನಲಾಲ್ ಬಜಾಜ್ ನಿಧಿಯಿಂದ ಸ್ಥಾಪಿತವಾಗಿದ್ದ ಅಖಿಲ ಭಾರತ ಸಂಸ್ಥೆ 'ಗಾಂಧೀ ವಿಚಾರ ಪರಿಷದ್'ಗೆ ಸಂಶೋಧಕ ವಿದ್ಯಾರ್ಥಿಯಾಗಿ ಬರಲು ಆಹ್ವಾನಿಸಿದರು. ನಾನು ಒಪ್ಪಿ ಆ ಕೆಲಸಕೆ ಹೋದೆ. ವರ್ಧಾದಲ್ಲಿರುವಾಗ 'ಸರ್ವೋದಯ ಮತ್ತು ರಾಜಕೀಯ' ಎಂಬ ವಿಷಯ

ದಲ್ಲಿ ಗಾಂಧೀಜಿಯ ಬರಹಗಳನ್ನೆಲ್ಲಾ ಬಹುಮಟ್ಟಿಗೆ ವ್ಯಾಸಂಗ ಮಾಡುವ ಅವಕಾಶ ದೊರೆಯಿತು. ಆ ವೇಳೆಗೆ ಗಾಂಧೀಜೀ ತೀರಿಕೊಂಡಿದ್ದು ವಿನೋಬಾಜೀ ಭೂದಾನ ಚಳುವಳಿಯನ್ನು ಆರಂಭಿಸಿದ್ದರು. ಗಾಂಧೀಜೀಯ ಉದ್ದೇಶ ಸರ್ವೋದಯ ಸಮಾಜ ಸ್ಥಾಪನೆ. ಇದಕ್ಕಾಗಿ ಗಾಂಧೀ ವಿಚಾರದಲ್ಲಿ ನಂಬಿಕೆ ಇರುವವರೆಲ್ಲ ಒಟ್ಟಾಗಿ ಶ್ರಮಿಸ ಬೇಕು ಎಂದು ಅವರು ನಾಡಿಗೆ ನಿಡುಕರೆ ನೀಡಿದ್ದರು. ಪಾದಯಾತ್ರೆ ಮಾಡುತ್ತ ವಿಚಾರ ಪ್ರಚಾರ ಮಾಡುತ್ತಿದ್ದರು. ರಾಷ್ಟ್ರಪತಿಯಿಂದ ಹಿಡಿದು ಕಟ್ಟಕಡೆಯ ಸ್ವಾತಂತ್ರ್ಯ ಹೋರಾಟಗಾರನಿಗೆ ಏನೋ ಒಂದು ಹೊಸ ಸ್ಫೂರ್ತಿ ದೊರಕಿದಂತಾಯಿತು. ನಾನೂ ಅದಕ್ಕೆ ಕೈಂಕರ್ಯ ಸಲ್ಲಿಸಬೇಕೆಂದು ಮನಸ್ಸು ಮಾಡಿದೆ.

ಏಳು ತಿಂಗಳು ಕಾಲ ಅಧ್ಯಯನ ಮುಗಿಸಿ ಊರಿಗೆ ಬಂದನಂತರ ನನ್ನ ಚೇತನ ಸುಮ್ಮನೆ ಕೂಡಲಿಲ್ಲ. ಅದಕ್ಕಾಗಿ ಸಹೃದಯ ಮಿತ್ರರನ್ನು ಹುಡುಕತೊಡಗಿದೆ. ಮಾಯ ಸಂದ್ರದ ದಿವಂಗತ ಮಾ. ಕೃ. ನರಸಿಂಹಯ್ಯನವರು ಗಾಂಧೀ ವಿಚಾರಗಳಿಗೆ ಮನ ಸೋತಿದ್ದವರು. ಅವರೊಂದಿಗೆ ನಾನು ಪತ್ರ ವ್ಯವಹಾರ ಮಾಡಿದೆ. ನಮ್ಮ ಊರಿನಲ್ಲಿ ತುಮಕೂರು ಜಿಲ್ಲಾ ರಾಜಕೀಯ ಸಮ್ಮೇಳನ ನಡೆದಿತ್ತು. ಅದಕ್ಕೆ ಶ್ರೀ ನರಸಿಂಹಯ್ಯ ನವರೂ ಬಂದಿದ್ದರು. ಸಮ್ಮೇಳನದಲ್ಲಿ ಕರ್ನಾಟಕ ಏಕೀಕರಣದ ಪ್ರಶ್ನೆ ಪ್ರಧಾನವಾಗಿ ದ್ದುದರಿಂದ ಶ್ರೀ ಎಸ್. ಟಿ. ಮಾಗಡಿಯವರು ಬಂದಿದ್ದರು. ಶ್ರೀ ಟಿ. ಸುಬ್ರಹ್ಮಣ್ಯ ಅಧ್ಯಕ್ಷತೆ ವಹಿಸಿದ್ದರು. ಸಮ್ಮೇಳನದಲ್ಲಿ ನಾನೇ ನಿರ್ಣಯಗಳನ್ನು ಮಂಡಿಸಿದೆ. ಅವು ಗೊತ್ತುವಳಿಗಳಾದವು. ಸಮ್ಮೇಳನ ಮುಗಿದ ತರುವಾಯ ನಾನೂ ಶ್ರೀ ನರಸಿಂಹಯ್ಯ ನವರೂ ಪರಸ್ಪರ ಚರ್ಚಿಸಿ ಅವರ ಊರಿಗೆ ಹೋಗಿ "ಸರ್ವೋದಯ ಶಿಕ್ಷಣ ಸಮಿತಿ" ಯನ್ನು ಸ್ಥಾಪಿಸಿದೆವು. ಅದರ ಪತಿಯಲ್ಲಿ ಒಂದು ಪ್ರೌಢಶಾಲೆ ಮತ್ತು ಸರ್ವೋದಯ ಜೀವನ ವಿಧಾನವನ್ನು ವಿದ್ಯಾರ್ಥಿಗಳಲ್ಲಿ ಅನುಷ್ಠಾನಕ್ಕೆ ತರುವುದಕ್ಕೋಸ್ಕರ ಒಂದು ಪ್ರಸಾದ ನಿಲಯವನ್ನೂ ಆರಂಭಿಸಿದೆವು. ಈ ಕಾರ್ಯದಲ್ಲಿ ಉತ್ಸಾಹದಿಂದ ನೆರವಾದ ತರುಣ ಶ್ರೀ ಭೈರಪ್ಪಾಜಿಯವರು.

ಸರ್ವೋದಯ ಜೀವನ ವಿಧಾನ ಬಹು ಕಡುತರ. ಶಿಕ್ಷಣ ಸಮಿತಿಯ ಕಾರ್ಯ ಕಾರಿ ಮಂಡಲಿಯ ಸದಸ್ಯರೆಲ್ಲ ಖಾದಿ ಧರಿಸಬೇಕು, ಸತತ ಧರಿಸುವ ವ್ರತ ತೊಡಬೇಕು ಮತ್ತು ಸ್ವತಃ ನೂಲಬೇಕು. ಈ ಅಂಶಗಳನ್ನು ಸದಸ್ಯರು ತಕ್ಕಮಟ್ಟಿಗೆ ಪಾಲಿಸು ತ್ತಿದ್ದರು. ಶಾಲೆಯಲ್ಲಿ ವಿದ್ಯಾರ್ಥಿಗಳೆಲ್ಲ ನೂಲುವ ಕಲೆಯನ್ನು ಕಲಿತರು. ಮೊದಲು ಮೊದಲು ಅರ್ಧಗಂಟೆ ನೂಲುವುದು. ಕ್ರಮೇಣ ಒಂದು ಗಂಟೆ ಹೊತ್ತು ನೂಲುವುದು. ಕೆಲವು ವಿದ್ಯಾರ್ಥಿಗಳಂತೂ ತಕಲಿಯಲ್ಲಿ ನೂಲುವುದನ್ನು ಚೆನ್ನಾಗಿ ಕಲಿತರು. ಮೂರು ವರ್ಷಗಳ ಕಾಲ ನೂಲುವುದು, ನೂತ ನೂಲನ್ನು ಬೆಂಗಳೂರಿನಲ್ಲಿ ವಸ್ತ್ರ ಮಾಡಿಸುವುದು ಈ ಕಾರ್ಯ ಸಮರ್ಪಕವಾಗಿ ನಡೆಯಿತು. ಇದೊಂದು ಪ್ರಯೋಗ, ಚಿಕ್ಕನಾಯಕನ ಹಳ್ಳಿ ದೇಶೀಯ ವಿದ್ಯಾಪೀಠದಲ್ಲಿ ರಾಷ್ಟ್ರೀಯ ಜಾಗೃತಿ ಉಂಟುಮಾಡಿದಂತೆಯೇ.

ಈ ಪ್ರಯೋಗದ ಫಲಿತಾಂಶವನ್ನು ಸಾದ್ಯಂತವಾಗಿ ಅಧ್ಯಯನ ಮಾಡಿ ಅಂದಿನ ಶಿಕ್ಷಣ ಸಚಿವರಾಗಿದ್ದ ದಿವಂಗತ ಶ್ರೀ ಎ. ಜಿ. ರಾಮಚಂದ್ರರಾಯರ ಬಳಿಗೆ ತುಮಕೂರು ಜಿಲ್ಲೆಯ ರೆವಿನ್ಯೂ ಜಿಲ್ಲಾಧಿಕಾರಿ ಶ್ರೀ ರಹಮತುಲ್ಲಾಖಾನ್ ಅವರೊಡಗೂಡಿ ನಾವು ನಾಲ್ಕು ಜನ (ಮಾ. ಕೃ. ನರಸಿಂಹಯ್ಯನವರು, ಶ್ರೀ ಶ್ರೀನಿವಾಸ ಅಯ್ಯಂಗಾರ್ಯರು) ನಿಯೋಗ ಹೋದೆವು. ಶಿಕ್ಷಣ ಸಚಿವರು ಸಹಾನುಭೂತಿಯಿಂದ ಕೂಡಿ ಇಂಥ ಪ್ರಯೋಗ ವನ್ನು ರಾಜ್ಯದ ಪ್ರೌಢಶಾಲೆಗಳಲ್ಲೆಲ್ಲಾ ಏಕೆ ಆಚರಣೆಗೆ ತರಬಾರದು ಎಂದು ಪ್ರಶ್ನಿಸಿ ರಾಜ್ಯದ ಏಳು ಶಾಲೆಗಳಲ್ಲಿ ಪ್ರಯೋಗ ಪರೀಕ್ಷೆ ಮಾಡಲು ಆಜ್ಞೆ ಮಾಡಿದರು. ಇದು ಕ್ರಿಯಾತ್ಮಕ ಶಿಕ್ಷಣಕ್ಕೆ ದೊರೆತ ಒಂದು ಮನ್ನಣೆ ಎನ್ನಬೇಕು. ಆದರೆ ಕಾರ್ಯಸ್ವರೂಪ ದಲ್ಲಿ ಅದರ ಗತಿ ಏನಾಯಿತು ಹೇಳಬೇಕಾಗಿಲ್ಲ.

ಭಾರತದಾದ್ಯಂತ ಸಂಚರಿಸುತ್ತಿದ್ದ ವಿನೋಬಾಜೀ ಕರ್ನಾಟಕಕ್ಕೂ ಬಂದರು. ಅವರು ಬರುವ ಮುನ್ನ ಮೈಸೂರು ಪ್ರದೇಶ ಕಾಂಗ್ರೆಸ್ ಕಮಿಟಿ ದಿವಂಗತ ಶ್ರೀ ಚನ್ನಯ್ಯನವರ ಅಧ್ಯಕ್ಷತೆಯಲ್ಲಿ ಬೆಂಗಳೂರಿನಿಂದ ಮೈಸೂರಿಗೆ ಒಂದು ಪಾದ ಯಾತ್ರೆಯ ಕಾರ್ಯಕ್ರಮವನ್ನು ಏರ್ಪಡಿಸಿತ್ತು. ಈ ಪಾದಯಾತ್ರೆಯಲ್ಲಿ ನಾನೂ ಭಾಗ ವಹಿಸಿದ್ದೆ. ಶ್ರೀ ಎಚ್. ಎಸ್. ದೊರೆಸ್ವಾಮಿ, ಶ್ರೀ ಅನೆಯರ್ ಶ್ರೀನಿವಾಸ ಅಯ್ಯಂ ಗಾರ್, ರಾಜಕೀಯ ಧುರೀಣರಾದ ಶ್ರೀ ಕೆ. ಸುಬ್ರಹ್ಮಣ್ಯ, ಶ್ರೀ ಟಿ. ಮರಿಯಪ್ಪ ಮತ್ತು ಶ್ರೀ ಎಚ್.ಎಸ್. ರುದ್ರಪ್ಪ ಇವರೆಲ್ಲ ಭಾಗವಹಿಸಿದ್ದರು. ಈ ಪಾದಯಾತ್ರೆ ಬಹಳ ಚೆನ್ನಾಗಿ ನಡೆದು [illegible]ಯಲ್ಲಿ ಮುಕ್ತಾಯವಾಯಿತು. ಹದಿನೈದು ದಿನ ನಡೆದ ಈ ಪಾದಯಾತ್ರೆ ನನ್ನ ವ್ಯಕ್ತಿತ್ವದಲ್ಲಿ ತೀವ್ರ ಬದಲಾವಣೆ ಮಾಡಿತು. ಇದರ ಪರಿಣಾಮವಾಗಿ ಮಿತ್ರರಲ್ಲಿ ಮಾತಾಡಿ ಸರ್ವೋದಯ ಶಿಕ್ಷಣ ಸಮಿತಿಯ ಹೊಣೆಗಾರಿಕೆ ಯಿಂದ ಮುಕ್ತನಾದೆ.

ಮಾಯಸಂದ್ರ ನನ್ನ ಬಾಲ್ಯದ ನೆನಪುಗಳ ಊರು. ಅಲ್ಲಿ ನನ್ನ ತಂದೆ ಸರ್ಕಾರಿ ನೌಕರಿಯಲ್ಲಿದ್ದರು. ನಾನು ದೊಡ್ಡವನಾದ ಮೇಲೆ ಅಲ್ಲಿಗೆ ಹೋಗಿ ಒಂದು ಶಿಕ್ಷಣ ಸಂಸ್ಥೆಯನ್ನು ಸ್ಥಾಪಿಸುತ್ತೇನೆಂದು ಕನಸಿನಲ್ಲಿಯೂ ಇರಲಿಲ್ಲ. ಆ ಸಂಸ್ಥೆಯ ವಾತಾ ವರಣ ವಿದ್ಯಾರ್ಥಿಗಳ ನೈತಿಕ ಮತ್ತು ದೈಹಿಕ ಬೆಳವಣಿಗೆ ಇವು ನನಗೆ ಸಂತೃಪ್ತಿ ತಂದಿದ್ದವು. ಇದಕ್ಕೆ ಜೊತೆ ಜೊತೆಯಾಗಿ ಏಕದೇಹ ನ್ಯಾಯದಂತೆ ದುಡಿದ ಆದರ್ಶಮಿತ್ರ ಶ್ರೀ ನರಸಿಂಹಯ್ಯನವರು ಇಂದು ಬದುಕಿಲ್ಲ. ಒಳ್ಳೆಯ ಕಾರ್ಯಕರ್ತರೂ, ಕ್ರಿಯಾಸಕ್ತ ವ್ಯಕ್ತಿ ಭೈರಪ್ಪಾಜಿಯವರ ನೇತೃತ್ವದಲ್ಲಿ ಅದು ಮುಂದುವರಿಯುತ್ತಿದೆ. ನನಗೆ ಪ್ರಚಲಿತ ಶಿಕ್ಷಣ ಪದ್ಧತಿಯಲ್ಲಿ ನಂಬಿಕೆಯೂ ಕಡಿಮೆಯಾಯಿತು. ಸರ್ಕಾರ ಅನುದಾನ ಕೊಡುವ ನೆಪದಲ್ಲಿನ ಅನೇಕ ಭ್ರಷ್ಟಾಚಾರಗಳನ್ನು ಕಂಡು ನನ್ನ ಅಂತರಂಗ ಆ ವ್ಯವಸ್ಥೆಯಿಂದ ಸಿಡಿದು ಹೊರಕ್ಕೆ ಬಂದಿತು. ಇನ್ನು ಶಿಕ್ಷಣ ಕ್ಷೇತ್ರದಲ್ಲಿ ನಾನು ಪ್ರವೇಶಿಸದಂತೆ ಮಾಡಿತು.

ಪ್ರಥಮ ಕನ್ನಡ ಅನುವಾದ ಇಂಗ್ಲೀಷಿನಿಂದ 'ಮರಳುಗಾಡಿನ ಮಕ್ಕಳು' (Children of the Desert). ಶ್ರೀ ದೇವುಡು ಅವರ ಮೆಚ್ಚುಗೆಯನ್ನು ಪಡೆದ ಲೇಖನ ಅಚ್ಚಾಯಿತು. ನಾನು ಏನೋ ಸಾಮ್ರಾಜ್ಯವನ್ನು ಗೆದ್ದಷ್ಟು ಸಂತಸ. ಇಂದಿಗೂ ಆ ಪುಣ್ಯಪುರುಷನ ನಗೆ ಮುಖ ನೆನಪು ಮಾಡಿಕೊಂಡರೆ ನನಗೆಷ್ಟೋ ಶಕ್ತಿ ಬಂದಂತಾಗುತ್ತದೆ.

ಚಿಕ್ಕಂದಿನಲ್ಲಿಯೇ ಗಾಂಧೀಜಿಯ ವಿಚಾರಗಳಿಗೆ, ಬರಹಗಳಿಗೆ ಮನಸೋತೆನೆಂದು ಹಿಂದೆಯೇ ಹೇಳಿಕೊಂಡಿದ್ದೇನೆ. 'ಯಂಗ್ ಇಂಡಿಯಾ', 'ಹರಿಜನ' ಪತ್ರಿಕೆಗಳು ನನ್ನನ್ನು ಅಭೂತಪೂರ್ವವಾಗಿ ಆಕರ್ಷಿಸಿದ್ದವು. ಆ ಕಾಲದಲ್ಲಿ ಗಾಂಧೀಜಿಯವರ ಇಂಗ್ಲಿಷ್, ಅದರ ಸರಳತೆ, ಭಾಷೆಯ ಸೊಗಸು, ವಿಚಾರ ಪುಷ್ಟಿ ಇವುಗಳ ದೃಷ್ಟಿಯಿಂದ ಇಂಗ್ಲಿಷ ಗದ್ಯಲೇಖಕ ಆಲಿವರ್ ಗೋಲ್ಡ್ ಸ್ಮಿತ್ ಸಮನೆಂದು ನನ್ನ ಇಂಗ್ಲಿಷ್ ಅಧ್ಯಾಪಕರೊಬ್ಬರು ಹೇಳಿದ್ದ ನೆನಪು. ಆಲಿವರ್ ಗೋಲ್ಡ್ ಸ್ಮಿತ್‌ನ ಪ್ರಬಂಧಗಳನ್ನೂ, ಕಾದಂಬರಿಯನ್ನೂ ಮತ್ತು ಪದ್ಯಗಳನ್ನೂ ಹೆಸರಾಂತ ಇಂಗ್ಲೀಷ್ ಪ್ರಾಧ್ಯಾಪಕ ಶ್ರೀ ಎಸ್. ವಿ. ರಂಗಣ್ಣನವರಿಂದ ವಿಶ್ಲೇಷಣೆಯೊಡನೆ ಕೇಳಿ ಮನವತ್ತ ಒಲಿದಿತ್ತು. ಗಾಂಧೀಜಿಯ ಬರಹವೂ ಅದಕ್ಕೆ ಸಾಟಿ ಎಂದು ಕೇಳಿದ ಮೇಲೆ ಇನ್ನೂ ಉತ್ಸುಕತೆ ಮೂಡಿತು.

ಆ ಕಾಲದಲ್ಲಿ ತುಮಕೂರಿನ ಶ್ರೀ ಡಿ. ರಾಮರಾವ್ ಎಂಬ ವಕೀಲರು ಒಳ್ಳೆ ರಾಷ್ಟ್ರೀಯ ಪ್ರವೃತ್ತಿಯುವರಾಗಿದ್ದರು. ಸಮಾಜಸೇವಾ ಕಾರ್ಯಕರ್ತರಾಗಿದ್ದರು. ಅವರ ಅಳಿಯ ಶ್ರೀ ರಾಮಚಂದ್ರರಾವ್ ಎಂಬುವರು ಒಂದು ಬೂಸಾ ಅಂಗಡಿಯಿಟ್ಟಿದ್ದರು. ನನಗೆ ವಿರಾಮ ಸಿಕ್ಕಿದಾಗ ಅವರಲ್ಲಿ ಕೂಡುವ ಪದ್ಧತಿ. ಅವರು ದಿನಪತ್ರಿಕೆಯೊಂದಕ್ಕೆ ತುಮಕೂರು ನಗರದ ಪ್ರತಿನಿಧಿಯಾಗಿದ್ದರು. ಒಂದು ದಿನ ಅಲ್ಲಿಗೆ ಹೋದೆ. ಅದು ಇದು ಮಾತನಾಡಿದ ಮೇಲೆ ಅವರ ಮೇಜಿನ ಮೇಲಿದ್ದ ಪುಸ್ತಕದಕಡೆ ನನ್ನ ಕಣ್ಣು ಹರಿಯಿತು. ಪುಸ್ತಕ ಆಕರ್ಷಕವಾಗಿತ್ತು. ಕೈಗೆ ತೆಗೆದುಕೊಂಡೆ. 'ಗಾಂಧೀ ಸೂತ್ರಗಳು'. ಕರ್ತೃ ಡಿ. ಎಸ್. ಶರ್ಮ. ಅವರು ಮದ್ರಾಸಿನ ಒಬ್ಬ ಪ್ರಸಿದ್ಧ ಸಂಸ್ಕೃತ ವಿದ್ವಾಂಸರಿಂದ ಸಂಸ್ಕೃತದಲ್ಲಿ ನೂರೆಂಟು ಸೂತ್ರಗಳನ್ನು ರಚನೆ ಮಾಡಿಸಿ ಅದಕ್ಕೆ ಇಂಗ್ಲೀಷಿನಲ್ಲಿ ವ್ಯಾಖ್ಯಾನ ರೂಪವಾಗಿ ಗಾಂಧೀಜಿಯ ರಾಜಕೀಯ ಸೂತ್ರ ಸದೃಶ ವಾಕ್ಯಗಳನ್ನು ಕೆಳಗಡೆ ಉಲ್ಲೇಖಿಸಿದ್ದರು. ಈ ಪುಸ್ತಕ ನನ್ನ ಮೇಲೆ ಅದ್ಭುತ ಪರಿಣಾಮ ಮಾಡಿತು. ನಾಲ್ಕು ದಿನ ಇಟ್ಟುಕೊಂಡು ಓದಿದೆ. ಮನಕ್ಕೆ ತೃಪ್ತಿಯಾಗಲಿಲ್ಲ. ಕೆಲವು ಸೂತ್ರಗಳನ್ನು ಬರೆದಿಟ್ಟುಕೊಂಡು ಆಗಾಗ ಪಠಿಸುತ್ತಿದ್ದ ನೆನಪು. ಆ ಪುಸ್ತಕದ ಬೆಲೆ ಕೇವಲ ಒಂದೂ ಕಾಲು ರೂಪಾಯಿ. ಆದರೂ ಅದನ್ನು ತರಿಸಿಕೊಳ್ಳುವ ನನ್ನಲ್ಲಿ ಹಣಕಾಸಿನ ಚೈತನ್ಯವಿರಲಿಲ್ಲ. ಎಲ್ಲದಕ್ಕೂ ಸೋದರಮಾವಂದಿರನ್ನು ಕೇಳಲು ಸಂಕೋಚ. ಆಸೆಯನ್ನು ಅದುಮಿಕೊಂಡೆ. ಈ ಆಸೆ ಪ್ರಥಮ ಕುಡಿ ಒಡೆಯಬೇಕಾದರೆ ಹನ್ನೆರಡು ವರುಷಗಳೇ ಬೇಕಾಯಿತು. ನಾನು ವಿದ್ಯಾಪೀಠವನ್ನು ಸ್ಥಾಪಿಸಿದ ಮೇಲೆ ಆ ಪುಸ್ತಕವನ್ನು

ಮೈಸೂರಿನಲ್ಲಿ 'ಗಾಂಧೀ ಗ್ರಂಥಮಾಲೆ' ಆರಂಭವಾದಮೇಲೆ ಅದರ ಪ್ರಧಾನ ಸಂಪಾದಕರಾದ ಶ್ರೀ ಎಂ. ಯಾಮುನಾಚಾರ್ಯರು ನನ್ನನ್ನೂ ಆಹ್ವಾನಿಸಿದರು. ಆ ಗ್ರಂಥಮಾಲೆಯಲ್ಲಿ ಶ್ರೀ ಖಾದ್ರಿ ಶಾಮಣ್ಣ, ಶ್ರೀ ಬಿ. ಆರ್. ಪ್ರಾಣೇಶರಾವ್, ಶ್ರೀ ಕೆ. ಎಸ್. ನಾರಾಯಣಸ್ವಾಮಿ ಇವರೆಲ್ಲರ ಪರಿಚಯವಾಯಿತು. ಶ್ರೀ ಯಾಮುನಾಚಾರ್ಯರ ವ್ಯಕ್ತಿತ್ವ ಬಹು ದೊಡ್ಡದು. ಪಾಶ್ಚಾತ್ಯ ಮತ್ತು ಪೌರಸ್ತ್ಯ ತತ್ವಶಾಸ್ತ್ರಗಳಲ್ಲಿ ಎಷ್ಟು ಉದ್ದಾಮ ಪಂಡಿತರೋ ಅಷ್ಟೇ ಮಾನವಾನುಕಂಪಯುತ ವ್ಯಕ್ತಿ. ಅಗಾಧ ಜ್ಞಾನದ ಹೊರೆ ಅವರ ಹೆಗಲ ಮೇಲೆ ಕುಸುಮದಷ್ಟು ಹಗುರವಾಗಿ ಕುಳಿತಿತ್ತು. ಅವರ ಸನಿಹದಲ್ಲಿ ನನಗೆ ಪೂರ್ಣ ಕ್ರಿಯಾ ಸ್ವಾತಂತ್ರ್ಯ ಹಾಗೂ ವಿಚಾರ ಸ್ವಾತಂತ್ರ್ಯ ಇದ್ದುದು ಒಂದು ಅಪೂರ್ವ ಸಂಗತಿ. ಶ್ರೀಯುತರೇ ಪ್ರಧಾನ ಸಂಪಾದಕರಾಗಿದ್ದಲ್ಲಿ ಗ್ರಂಥಮಾಲೆಯ ಕಾರ್ಯದಲ್ಲಿ ನಾನೆಷ್ಟು ದಿನ ಇರುತ್ತಿದ್ದೆನೋ ಸಂದೇಹವೇ. ಐದು ವರ್ಷ ಐದು ಕ್ಷಣಗಳಾಗಿ ಕಳೆಯಿತು. ನನ್ನ ಬಾಳನ್ನೂ ಒಕ್ಕಮಟ್ಟಿಗೆ ಮಾಗಿಸಿತ್ತೆನ್ನಬಹುದು. ಬರಹಗಾರನಾಗಿ ನಾನು ಇನ್ನೇನನ್ನಾದರೂ ರಚಿಸಿದ್ದಾದರೆ ಅದೆಲ್ಲವೂ ಶ್ರೀಯುತರ ಪ್ರೇಮದ ಫಲ.

ಶ್ರೀಯುತರ ಬಗೆಗೆ ಒಂದು ಪ್ರಸಂಗದ ನೆನಪು ಬರುತ್ತದೆ.

ಗಾಂಧೀ ಗ್ರಂಥಮಾಲೆಯ ಕಾರ್ಯ ಮುಗಿದ ಮೇಲೆ ಶ್ರೀಯುತರು ನವದೆಹಲಿಯಲ್ಲಿ ಕೇಂದ್ರ ಗಾಂಧೀ ಸ್ಮಾರಕ ನಿಧಿ ಆಶ್ರಯದಲ್ಲಿ 'ಸಂಶೋಧಕ ಮಾರ್ಗದರ್ಶಿ'ಯಾಗಿ ನೇಮಿಸಲ್ಪಟ್ಟು ಅಲ್ಲಿಗೆ ಹೋದರು. ಅಲ್ಲಿಂದ ನನಗೆ ಒಂದು ಪತ್ರ ಬರೆದರು. ಆ ಪತ್ರಕ್ಕೆ ಉತ್ತರವಾಗಿ ಬರೆಯುತ್ತ ನಾನೊಂದು ಪ್ರಸಂಗವನ್ನು ಉಲ್ಲೇಖಿಸಿದ್ದೆ. ಆ ಪ್ರಸಂಗ 'ಚಂದಮಾಮ' ಪುಸ್ತಕದಿಂದ ಹರಿದು ತೂರಿಬಂದ ಒಂದು ಹಾಳೆಯಲ್ಲಿತ್ತು. ನಾನು ರಸ್ತೆಯಲ್ಲಿ ಹೋಗುವಾಗ ಆ ಹಾಳೆಯಿಂದ ಆಕರ್ಷಿತನಾಗಿ ಪ್ರಸಂಗವನ್ನು ಓದಿದೆ. ಅದು ವಿಶಿಷ್ಟಾದ್ವೈತ ಸಿದ್ಧಾಂತದ ಪ್ರತಿಪಾದಕರಾದ ರಾಮಾನುಜಾಚಾರ್ಯರ ಗುರು ಯಾಮುನಾಚಾರ್ಯರಿಗೆ ಸಂಬಂಧಿಸಿದುದು. ಆ ಹೆಸರನ್ನು ನಿಮಗಿಟ್ಟಿರುವುದು ಬಹು ಸಾರ್ಥಕವಾಯಿತು ಎಂದು ಬರೆದೆ. ಅದಕ್ಕೆ ಅವರು ಬರೆದ ಉತ್ತರ ಹೀಗಿದ್ದಿತು. 'ನಾನು ಆ ಮಹಾನುಭಾವರ–ಯಾಮುನಾ ದಾಸದಾಸ ಆದರೆ ಸಾಕು.' ಇದನ್ನು ಓದಿದಾಗ ನನಗೆ ಗಾಂಧೀಜೀಯ ಆಶ್ರಮವ್ರತನಿಷ್ಠೆಯ ಜ್ಞಾಪಕ ಬಂದಿತು. ಏಕಾದಶ ವ್ರತಗಳನ್ನು ನಮ್ರತೆಯಿಂದ ಸ್ವೀಕಾರ ಮಾಡಬೇಕು. ಈ ನಮ್ರತೆ ಕಲಿಕೆಯಿಂದ ಬರುವುದಲ್ಲ. ಸಹಜ ಗುಣವಾಗಬೇಕು.

ಗಾಂಧಿಯ ನಂತರ ನನ್ನ ಮನಸೆಳೆದ ಇನ್ನಿಬ್ಬರು ವ್ಯಕ್ತಿಗಳೆಂದರೆ ಆಚಾರ್ಯ ವಿನೋಬಾ ಮತ್ತು ಜಯಪ್ರಕಾಶನಾರಾಯಣ. ವಿನೋಬಾ ಒಂದೆಡೆ ಹೇಳುತ್ತಾರೆ. ವ್ಯಕ್ತಿ 'ಪೂಜ್ಯ'ನಾಗಬೇಕು. ಎಂದರೆ 'ಸೊನ್ನೆ'ಯಾಗಬೇಕು. ಅವನು ಮನ್ನಣೆಯ ಕಣಕ್ಕಿಂತಲೂ ಶೂನ್ಯನಾಗಬೇಕು,

ಇಂದು ಸ್ವತಂತ್ರ ಭಾರತದಲ್ಲಿ ಗಾಂಧೀ ಮಾರ್ಗದಿಂದ ಸಿಡಿದು ಬೇರೆಡೆಗೆ ಹೋಗುತ್ತಿರುವಾಗ ಅದನ್ನು ಸ್ವಲ್ಪ ಮಟ್ಟಿಗೆ ಗಾಂಧೀ ಮಾರ್ಗಕ್ಕೆ ತಿರುಗಿಸಿದ ಪುಣ್ಯಾತ್ಮನನ್ನು 'ಜೆ.ಪಿ'ಯಲ್ಲಿ ಕಾಣಬಹುದು.

'ಸಮ್ಮತಿ' ಗಾಂಧೀ ವಿಚಾರ ಸರ್ವಸ್ವದ ಸಾರ. ಅದು ಸಿದ್ಧವಾಯಿತೋ, ವ್ಯಕ್ತಿಯಲ್ಲಿ ಮೂಡಿತೋ ಅವನಿಗೆ ಸತ್ಯ ಅಹಿಂಸೆ ಇತ್ಯಾದಿ ಎಲ್ಲವೂ ಹಗಲೊಡನೆ ಸೂರ್ಯಪ್ರಕಾಶ ಬಂದಷ್ಟು ಸ್ಪಷ್ಟ.

ಇದಕ್ಕಾಗಿ ವ್ಯಕ್ತಿ, ರಾಷ್ಟ್ರ ಎಷ್ಟು ಕಾಲ ಕಾಯಬೇಕೋ.

೨

ಮೂರಿಪ್ಪತ್ತು ಮೇಲೆ ದಶಕದ ಗೆರೆಯಲ್ಲಿ ಪಯಣ ಮಾಡುತ್ತಿರುವ ನನ್ನಂಥ ಮಂದಿಗೆ ಸಹಜವಾಗಿಯೇ ಒಂದು ಪ್ರಶ್ನೆ ಮನಸ್ಸಿನಲ್ಲಿ ಮೂಡುತ್ತದೆ. ಅದು ಇಂದಿನ ಸ್ಥಿತಿಯನ್ನು ನೆನೆದಾಗಲಂತೂ ಪೆಡಂಭೂತ ಆಕಾರವನ್ನು ಹೊಂದುತ್ತದೆ. ಪ್ರಶ್ನೆ ಸುತ್ತಿ ಸುತ್ತಿ ಉತ್ತರ ದೊರೆಯದೆ ಹಾಗೆಯೇ ನಿಲ್ಲುತ್ತದೆ. ಆ ಪ್ರಶ್ನೆ ಯಾವುದು ? ರಾಷ್ಟ್ರೀಯವಾಗಿ. ವೈಯಕ್ತಿಕವಾಗಿ ನಾವಿಂದು ಸ್ವಾತಂತ್ರ್ಯ. ಸ್ವರಾಜ್ಯಗಳನ್ನು ಅನುಭವಿಸುತ್ತಿದ್ದೇವೆಯೇ ?

ನಮ್ಮ ಭಾರತದಲ್ಲಿ ಸ್ವಾತಂತ್ರ್ಯ, ಸ್ವರಾಜ್ಯ ಈ ಮಾತುಗಳು ಬಗೆಬಗೆಯ ಜನಕ್ಕೆ ಬಗೆಬಗೆಯ ರೂಪದಲ್ಲಿ ಕಾಣಿಸಿಕೊಂಡಿತು. ಕವಿಗಳು 'Into that land of Freedom let my country avake' ಎಂದು ಹಾಡಿ ಜನತೆಯನ್ನು ಜಾಗ್ರತಗೊಳಿಸಿದರು. ಲೋಕಮಾನ್ಯ ತಿಲಕರಂಥ ರಾಜಕೀಯ ಮುತ್ಸದ್ದಿಗಳು 'ಸ್ವರಾಜ್ಯ ನನ್ನ ಆಜನ್ಮ ಹಕ್ಕು. ಅದನ್ನು ನಾನು ಹೊಂದಿಯೇ ತೀರುವೆ' ಎಂದು ಉದ್ಘೋಷಿಸಿ ಜಡತೆಯ ಕೆಸರಿನಲ್ಲಿ ಸಿಕ್ಕಿದ್ದ ಜನತೆಗೆ ಪಾರಾಗುವ ಪಥ ತೋರಿದರು. ಮಹಾತ್ಮ 'ಸ್ವರಾಜ್ಯವೆಂದರೆ ಆತ್ಮಸಂಯಮ' ಎಂದು ನುಡಿದು ಜನತೆಯಲ್ಲಿ ನಿರ್ಭೀತಿಯು [illegible] ಬೆಳೆಸುವಂತೆ ಮಾಡಿದರು. ಅವರ ಸತ್ಯ ಅಹಿಂಸಾ ಪ್ರಧಾನವಾದ ಸತ್ಯಾಗ್ರಹದ ಅಸ್ತ್ರಕ್ಕೆ ವಿದೇಶೀ ಆಳರಸರು ಬಗ್ಗಿ ಮಣಿದು ರಾಜಕೀಯದ ಸ್ವಯಂ ನಿರ್ಣಯಾಧಿಕಾರದ ಸಂಪತ್ತನ್ನು ನಮಗೆ ತಂದು ಕೊಟ್ಟರು. ಆ ಸಂಪತ್ತಿಗೆ ನಾವು ಎಷ್ಟು ಅರ್ಹರು ?

ಸ್ವಾತಂತ್ರ್ಯ ಮತ್ತು ಕ್ರಾಂತಿಯನ್ನು ಏಕಕಾಲದಲ್ಲಿ ಬಯಸಿದ ವಿನೋಬಾ ಗಾಂಧೀ ಮಾರ್ಗವನ್ನೇ ಅನುಸರಿಸಿ ಸ್ವರಾಜ್ಯ, ಸ್ವಾತಂತ್ರ್ಯಗಳು ಕೇವಲ ಘಟನಾತ್ಮಕ ಆಕಾರದಲ್ಲಿರದೆ ವಾಸ್ತವಿಕ ಸಂಗತಿಯಾಗುವಂತೆ ಕಾಲು ಶತಮಾನ ಕಾಲ ರಾಷ್ಟ್ರಕ್ಕೆ ದಾರಿ ನಿರ್ದೇಶಿಸಿದೆ. ಶೋಷಣಾಹೀನ ಸಮಾಜ, ವರ್ಗ ವ್ಯತ್ಯಾಸರಾಹಿತ್ಯ, ಪಕ್ಷಾತೀತ ಪ್ರಭುತ್ವ ಇವುಗಳನ್ನು ರಾಷ್ಟ್ರದ ಮುಂದಿಟ್ಟರು.

ಆದರೆ ಆಳರಸರು ಅಧಿಕಾರ ಸೂತ್ರ ಹಿಡಿದವರು ಗಾಂಧೀಜಿ ಒಮ್ಮೆ ಹೇಳಿದ 'A brute majority is nothing other than a road roller in operation' ಎನ್ನುವುದನ್ನು ಸಾದೃಶ್ಯಪಡಿಸಿದರು.

ಸ್ವಾತಂತ್ರ್ಯ ಹೋರಾಟ ಕಾಲದಲ್ಲಿ ಮಹಾನಾಯಕರುಗಳ ಜೊತೆ ಮುಂಚೂಣಿಯಲ್ಲಿ ದುಡಿದು ಅಪಾರ ತ್ಯಾಗ. ಸೇವೆಗಳ ಮೂರ್ತಿ ಎನಿಸಿದ್ದ ಜೆ. ಪಿ. ರಾಷ್ಟ್ರದ ಗಮನವನ್ನು ಗಾಂಧಿಪಥದೆಡೆಗೆ ಒಯ್ಯಲು ಸಮಗ್ರ ಕ್ರಾಂತಿಯ ಕಹಳೆ ಕೊಟ್ಟರು. ಒಂದು ಅದ್ಭುತ ಜನಶಕ್ತಿ ಅದರಿಂದ ಜಾಗೃತವಾಗಿ ಗಾಂಧೀ ವಿಚಾರಕ್ಕೆ ಮತ್ತೊಮ್ಮೆ ಉಜ್ವಲ ಭಾವನೆಯನ್ನು ಮೂಡಿಸಿತು. ಅವರೆಸಗಿದ ಅದ್ಭುತ ಕಾರ್ಯ ಎರಡನೇ ಸ್ವಾತಂತ್ರ್ಯ ಸಮರ ಎನಿಸಿತು. ಗಾಂಧೀ ಕಾರ್ಯಕರ್ತರೇ ಅಲ್ಲ ರಾಷ್ಟ್ರದ ಸಾಮಾನ್ಯ ವ್ಯಕ್ತಿಯಲ್ಲೂ ಸಹ ನೂತನ ಶಕ್ತಿಯ ಆವಿರ್ಭಾವವಾಯಿತೋ ಎನ್ನುವಂತಾಯಿತು. ಅದು ಕೋಟಿ ಕಾಲ ಕಂಗೊಳಿಸಿ ಪ್ರಾತಃಕಾಲದ ಮಂಜುಮಣಿಯಂತಾಯಿತು.

ರಾಷ್ಟ್ರದ ಇಂದಿನ ಪರಿಸ್ಥಿತಿಯಲ್ಲಿ ಕಂಡುಬರುವುದೇನು ? ನಿರಂಕುಶ ಪ್ರಭುತ್ವದ ಲಕ್ಷಣಗಳು. ಸಿ. ಆರ್. ದಾಸರು ಒಮ್ಮೆ ನುಡಿದಿದ್ದ ಮಾತು. ಬಿಳಿಯರ ಅಧಿಕಾರಶಾಹಿ ಹೋಗಿ ಕಂದು ಬಣ್ಣದವರ ಅಧಿಕಾರಶಾಹಿ ಬಂದರೆ ಅದು ಸ್ವರಾಜ್ಯವಲ್ಲ. ಸ್ವಾತಂತ್ರ್ಯವಲ್ಲ' ಇಂದು ನಿಜವಾಗುವಂತಿದೆ. ನಮ್ಮವರೇ ನಮ್ಮ ಪ್ರತಿನಿಧಿಗಳೇ ರೂಕ್ಷ ಪ್ರವೃತ್ತಿಯಿಂದ ವರ್ತಿಸಿ ವ್ಯಕ್ತಿ ಸ್ವಾತಂತ್ರ್ಯವನ್ನು ಮಾನವೀಯ ಹಕ್ಕುಬಾಧ್ಯತೆಗಳನ್ನು ಮೊಟಕು ಮಾಡುತ್ತಿದ್ದಾರೆಂದರೆ ಎಂತಹ ಅವನತಿಯ ಸ್ಥಿತಿ ! ನೀತಿ ನಿಷ್ಠೆಗಳು ಗಾಳಿಗೆ ತೂರಿಹೋಗಿವೆ. ಅವುಗಳನ್ನು ಹೇಳಿಕೊಂಡೆ ಅತ್ಯಾಚಾರ, ಅನಾಚಾರ ನಡೆಯುತ್ತಿವೆ. ಸಜ್ಜನರು ಅದನ್ನು ಕುರಿತು ಹೇಳಿದರ ಅದಕ್ಕೆ ತಾತ್ಸಾರವೇ ಫಲ. ಯಾರೂ ಏನೂ ಹೇಳುವಂತಿಲ್ಲ. ಉಸಿರು ಕಟ್ಟಿದ ಸ್ಥಿತಿ ಎಲ್ಲೆಡೆ ಗೋಚರಿಸುತ್ತದೆ.

ಇಂಥ ಸ್ಥಿತಿಯಲ್ಲಿ ನನಗೆ ಹಿಂದಿನ ಒಂದು ಪ್ರಸಂಗ ನೆನಪಿಗೆ ಬರುತ್ತದೆ. ಅದು 'ಕ್ವಿಟ್ ಇಂಡಿಯಾ' ಅಥವಾ 'ಬ್ರಿಟಿಷರೇ ಭಾರತ ಬಿಟ್ಟು ಹೊರಡಿ' ಎಂಬ ಕಾಲದ ನೆನಪು. ಆಗ ಭಾರತವನ್ನು ಆಳುತ್ತಿದ್ದ ಬ್ರಿಟಿಷರು ಮತ್ತು ಮಿತ್ರರು ಎರಡನೆಯ ಜಾಗತಿಕ ಯುದ್ಧದಲ್ಲಿ ತೊಡಗಿದ್ದರು. ಅದನ್ನು ಕುರಿತು ಅವರು ವಿವರಿಸಿದ ಬಗೆ ಹೀಗೆ : This is a war waged to make the world safe from war and pave the way for freedom and democracy.' ಅಂತಹ ಉತ್ಕಟ ಸಮಯದಲ್ಲಿ ಗಾಂಧೀಜಿ ಸಾಮೂಹಿಕ ಶಾಸನೋಲ್ಲಂಘನ ಚಳುವಳಿಯನ್ನು ಹೂಡುವರೆಂಬ ವದಂತಿ ದಟ್ಟವಾಗಿ ಹಬ್ಬಿದ್ದಿತು. ಆಗ ಒಬ್ಬ ಪತ್ರಿಕೋದ್ಯಮಿ ಅವರ ಬಳಿಗೆ ಬಂದು, 'ಈ ಸಮಯದಲ್ಲಿ ನೀವು ಶಾಸನೋಲ್ಲಂಘನ ಚಳುವಳಿ ಆರಂಭಿಸುವುದಾದರೆ ಆಗಲೇ ದೇಶದಲ್ಲಿ ತಾಂಡವವಾಡುತ್ತಿರುವ ಅರಾಜಕತೆ ಇನ್ನೂ ಉಲ್ಬಣವಾಗುವುದಿಲ್ಲವೇ ?' ಎಂದು ಕೇಳಿದರು. ಅದಕ್ಕೆ ಗಾಂಧೀಜಿ ನೀಡಿದ

ಪ
ದ
ಚಿ
ಹ್ನೆ

# ಗಾಂಧಿ ಸಾಹಿತ್ಯ

**ದೇಜಗೌ**

ಸಾಹಿತ್ಯ ಮನೋರಂಜನೆಯ ಸಾಧನ ಮಾತ್ರವಲ್ಲ. ಆತ್ಮೋದ್ಧಾರದ ಮಾರ್ಗವೂ ಅಹುದೆನ್ನುವುದಕ್ಕೆ. ವಿಶಿಷ್ಟವಾದ ಅನುಭವಾಲೋಚನೆಗಳೇ ಅದರ ಸತ್ವವೆನ್ನುವುದಕ್ಕೆ 'ಗಾಂಧಿ ಸಾಹಿತ್ಯ'ವೇ ಸಾಕ್ಷಿಯಾಗಿದೆ. ಭರತಖಂಡದ ಸ್ವಾತಂತ್ರ್ಯ ಸಂಗ್ರಾಮದ ಕತೆ ಗಾಂಧೀಜಿಯವರ ಜೀವನದಲ್ಲಿ ಹಾಸುಹೊಕ್ಕಾಗಿ ಹೆಣೆದುಕೊಂಡು. ಅವೆರಡೂ ಅಭಿನ್ನವೆಂಬಂತೆ ತೋರುತ್ತವಾದರೂ. ಅದೊಂದು ಸಾಧಕನ ಹಾಗೂ ಸಿದ್ಧಪುರುಷನ ಆತ್ಮದ ತೀರ್ಥಯಾತ್ರೆಯೂ ಆಗಿದೆ. ಬಹಿರಂಗದಲ್ಲಿ ರಾಜಕೀಯಾಂದೋಲನವಾಗಿ ಕಾಣುವ ಆ ಕತೆ ಅಂತರಂಗದಲ್ಲಿ ಆತ್ಮದ ಹೋರಾಟವಾಗಿ ಪರಿಣಮಿಸುತ್ತದೆ.

ಭಾರತದ ಬೃಹಜ್ಜೀವನವೇ ಗಾಂಧಿ ಸಾಹಿತ್ಯದಲ್ಲಿ ಅನುರಣನಗೈಯುತ್ತಿರುವಂತೆ ತೋರುವುದರಲ್ಲಿ ಆಶ್ಚರ್ಯವಿಲ್ಲ. ನಾಡಿನ ನಾಡಿಯೇ ಅದರಲ್ಲಿ ಮಿಡಿಯುತ್ತಿರುವಂತೆ ಭಾಸವಾಗುತ್ತದೆ. ಅದೊಂದು ಮಹಾನಾಟಕವೂ ಅಹುದು. ಅದರಲ್ಲಿ ಬರುವ ಅನೇಕ ಪಾತ್ರಗಳು ಮಹಾಭಾರತದ ವ್ಯಕ್ತಿಗಳನ್ನು ನೆನಪಿಗೆ ತರುತ್ತವೆ. ಗಾಂಧೀಜೀಯ ಜೀವನವೇ ಒಂದು ಮಹಾಕಾವ್ಯವಾದ್ದರಿಂದ ಭರತಖಂಡದ ಮೂಲೆಮೂಲೆಯ ಎಲ್ಲ ವರ್ಗಗಳ ಜನರ ಪ್ರತಿನಿಧಿಗಳು ಅಲ್ಲಿ ಕಣ್ಣಿಗೆ ಬೀಳುತ್ತಾರೆ. ಇಡೀ ಜನಜೀವನದ ಪ್ರತಿಬಿಂಬವನ್ನಲ್ಲಿ ಗುರುತಿಸಬಹುದಾಗಿದೆ.

ಧರ್ಮದ ತಳಹದಿಯ ಮೇಲೆ ಮಾನವನ ಸಕಲ ವ್ಯವಹಾರಗಳು ರೂಪುಗೊಳ್ಳಬೇಕೆಂದು ಪ್ರತಿಪಾದಿಸಿದವರಲ್ಲಿ ಬಸವೇಶ್ವರರನಂತರ ಗಾಂಧೀಜೀಯವರ ಹೆಸರು ಎದ್ದುಕಾಣುತ್ತದೆ. 'ನಾನು ಸಾಧಿಸಬೇಕೆಂದಿರುವುದು—ಈ ಮೂವತ್ತು ವರ್ಷಗಳಿಂದ ತೀವ್ರ ಬಯಕೆಯಿಂದ ಸಾಧಿಸಲು ಯತ್ನಿಸುತ್ತಿರುವುದು—ಆತ್ಮಸಾಕ್ಷಾತ್ಕಾರ, ಈಶ್ವರನ ಪ್ರತ್ಯಕ್ಷದರ್ಶನ ಅಥವಾ ಮೋಕ್ಷ. ನನ್ನ ಬಾಳು, ಕ್ರಿಯೆ ಮತ್ತು ಇರವು ಎಲ್ಲವೂ ಆ ಗುರಿಯ ಸಾಧನೆಗಾಗಿಯೇ. ನನ್ನ ಮಾತು, ಬರೆಹ ಮತ್ತು ರಾಜಕೀಯ ಕ್ಷೇತ್ರದಲ್ಲಿ ಎಲ್ಲ ಪ್ರಯತ್ನಗಳ ಗುರಿ ಇದೇ ಆಗಿದೆ.'[1] ಗಾಂಧಿ ಸಾಹಿತ್ಯದ ಧ್ಯೇಯೋದ್ದೇಶಗಳು

---

೧. ಗಾಂಧಿ ಸಾಹಿತ್ಯ : ಜಿ. ವಿ. ನಾರಾಯಣಮೂರ್ತಿ, ಪು. ೧.

1948ರ ಜನವರಿಯಲ್ಲಿ ಪರಂಧಾಮವನ್ನೈದುವತನಕ ನಿರಂತರವಾಗಿ, ನಿರರ್ಗಳವಾಗಿ ಹರಿಯುತ್ತದೆ. ಅವರ ರಾಜಕೀಯ ಜೀವನದ ಹಾಗೂ ಅಧ್ಯಾತ್ಮ ಸಾಧನೆಯ ಅನಿವಾರ್ಯಾಂಗವಾಗಿ ಅದು ಹೊರಹೊಮ್ಮುತ್ತದೆ. ಅವರು ಪುಸ್ತಕ ರೂಪದಲ್ಲಿ ಬರೆದದ್ದು ಕಡಮೆ. ಹಿಂದ್ ಸ್ವರಾಜ್ಯ, ಸರ್ವೋದಯ, ನೀತಿಧರ್ಮ. ಆರೋಗ್ಯ ಮಾರ್ಗದರ್ಶಿನೀ, ದಕ್ಷಿಣ ಆಫ್ರಿಕಾದಲ್ಲಿ ಸತ್ಯಾಗ್ರಹ. ಆತ್ಮಕಥೆ. ಅನಾಸಕ್ತಿಯೋಗ, ಮಂಗಳ ಪ್ರಭಾತ, ನಿರ್ಮಾಣಕಾರ್ಯಕ್ರಮ–ಇವು ಅವರ ಗ್ರಂಥಗಳು. ಇವುಗಳಲ್ಲಿ 'ಹಿಂದ್ ಸ್ವರಾಜ್ಯ ಗಾಂಧೀ ವಿಚಾರಕ್ಕೆ ಸೂತ್ರ ಗ್ರಂಥ ಎನ್ನಬಹುದು.'[2] ಆಧುನಿಕ ನಾಗರಿಕತೆಯನ್ನು ಖಂಡಿಸುವ ಈ ಪುಸ್ತಕ ಸಂವಾದ ರೂಪದಲ್ಲಿದೆ. ಅದು ಪ್ರಕಟವಾದಾಗ (1909) ಅನೇಕ ಗಣ್ಯರಿಂದ ಉಗ್ರ ಟೀಕೆಗೆ ಗುರಿಯಾಗುತ್ತದೆ. ರಸ್ಕಿನ್ನನ 'ಅಂಟು ದಿಸ್ ಲಾಸ್ಟ್' ಎಂಬ ಗ್ರಂಥವನ್ನು 'ಸರ್ವೋದಯ' ಎಂಬ ಹೆಸರಿನಿಂದ ಗುಜರಾತಿ ಭಾಷೆಯಲ್ಲಿ ಪ್ರಕಟಿಸುತ್ತಾರೆ. ಗಾಂಧೀಜಿಯ ಮೂಲ ಧ್ಯೇಯೋದ್ದೇಶಗಳು ಈ ಕೃತಿಗಳಲ್ಲಿ ಪ್ರತಿಫಲನಗೊಂಡಿವೆಯೆಂದು ಹೇಳಬಹುದಾಗಿದೆ. ಅವರ ಎಲ್ಲ ಬರಹಗಳು ನೂರು ಸಂಪುಟಗಳಷ್ಟಾಗುತ್ತವೆನ್ನುವಾಗ. ಗಾಂಧೀ ಸಾಹಿತ್ಯದ ಬೃಹತ್ತ್ವವಾಗಿದ ಹಾಗೂ ಅದರ ವಿರಾಟ್ ಸ್ವರೂಪದ ಮಹತ್ತು ಯಾರನ್ನಾದರೂ ದಿಗ್ಭ್ರಮೆಗೊಳಿಸದಿರಲಾರದು.

ವಸ್ತುವಿಸ್ತಾರ ದೃಷ್ಟಿಗಳಲ್ಲಿಯೂ ಗಾಂಧಿ ಸಾಹಿತ್ಯ ಅನ್ಯಾದೃಶವಾದುದು. ರಾಜನೀತಿಯ, ಆರ್ಥಿಕ ವಿಚಾರಗಳ. ಧಾರ್ಮಿಕ ನೈತಿಕ ಹಾಗೂ ಆಧ್ಯಾತ್ಮಿಕ ತತ್ತ್ವಗಳ. ಸಾಮಾಜಿಕ ಸಮಸ್ಯೆಗಳ, ಶಿಕ್ಷಣದ ಮೂಲಸೂತ್ರಗಳ ಒಂದೆರಡೆ ನೂರಾರು ಹಾದಿಯಾದ ವಿಷಯಗಳು ಗಾಂಧಿಸಾಹಿತ್ಯದ ವಸ್ತುಗಳಾಗುತ್ತವೆ. ಈ ಸಮಗ್ರ ವಸ್ತುವನ್ನು ನಾರಾಯಣಮೂರ್ತಿಗಳು ಮುಂದೆ ತೋರಿಸಿರುವಂತೆ ವಿಂಗಡಿಸಿದ್ದಾರೆ. ಸತ್ಯ-ಅಹಿಂಸೆ. ಧರ್ಮ–ನೀತಿ, ಸಮಾಜಧರ್ಮ, ಮಹಿಳೆಯರು, ಅರ್ಥವಿಚಾರ. ರಾಜಕಾರಣ, ಮೂಲಶಿಕ್ಷಣ, ಧರ್ಮದರ್ಶೀ ಸಿದ್ಧಾಂತ. ಅವರು ಇನ್ನೂ ಮುಂದುವರಿದು ಸರ್ವೋದಯ ಮತ್ತು ಸತ್ಯಾಗ್ರಹ ಎಂಬ ಪ್ರಧಾನ ಶೀರ್ಷಿಕೆಗಳಲ್ಲಿ ಎಲ್ಲವನ್ನು ಅಳವಡಿಸಬಹುದೆನ್ನುತ್ತಾರೆ. ಅವರ ಜೀವನ ಧ್ಯೇಯಗಳಾದ ಸತ್ಯಸಾಕ್ಷಾತ್ಕಾರ. ಭಾರತದ ಸ್ವಾತಂತ್ರ್ಯ. ಮತ್ತು ವಿಶ್ವಶಾಂತಿಗಳು ಅವರ ಲೇಖನಗಳಲ್ಲೆಲ್ಲ ಹಾಸುಹೊಕ್ಕಾಗಿ ಹರಡಿವೆ. ಅವರ ದೃಷ್ಟಿಯಲ್ಲಿ ದೇವರು ಸತ್ಯಸ್ವರೂಪ, ಆದ್ದರಿಂದ ಸತ್ಯಶೋಧನೆಯ ಮೂಲಕ ಆತ್ಮಸಾಕ್ಷಾತ್ಕಾರವಾಗುತ್ತದೆ : ಭಾರತದ ಸ್ವಾತಂತ್ರ್ಯಾಂದೋಲನವಾಗಲಿ. ವಿಶ್ವಶಾಂತಿ ಸ್ಥಾಪನೆಯ ಪ್ರಯತ್ನವಾಗಲಿ ಸತ್ಯಶೋಧನೆಯ ವಿವಿಧ ಸೋಪಾನಗಳೆಂದು ಅವರು ಬಗೆಯುತ್ತಾರೆ, ವ್ಯಕ್ತಿ ಸ್ವಾತಂತ್ರ್ಯ. ಸ್ತ್ರೀ ಪುರುಷ ಸಮಾನತೆ. ಯಂತ್ರ ನಾಗರಿಕತೆಯ

2, ಗಾಂಧೀ ಸಾಹಿತ್ಯ : ಜಿ. ವಿ, ನಾರಾಯಣಮೂರ್ತಿ, ೧೮.

ನಿರಾಕರಣೆ, ವಿಕೇಂದ್ರೀಕರಣ, ಧರ್ಮದರ್ಶಿ ಸಿದ್ಧಾಂತ, ಮೂಲಶಿಕ್ಷಣ ಇವೇ ಮೊದಲಾದ ವಿಚಾರಗಳ ಟೀಕೆನಲ್ಲಿ ಅವರು ಜನಕಲ್ಯಾಣವನ್ನು ಸಾಧಿಸಲು ಪ್ರಯತ್ನಿಸುತ್ತಾರೆ. ಸತ್ಯಾಗ್ರಹದ ಮೂಲಕ ಎಲ್ಲ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಬಹುದೆಂಬ ಅಚಲ ನಂಬಿಕೆ ಅವರದು. ಅಹಿಂಸಾತ್ಮಕ ಅಸಹಕಾರ, ಸಾಮೂಹಿಕ ಪ್ರತಿಭಟನೆ, ಕಾನೂನು ಶಾಸನೋಲ್ಲಂಘನ, ಪ್ರಾಯೋಪವೇಶ — ಇವು ಅವರು ಪ್ರತಿಪಾದಿಸಿರುವ ಸತ್ಯಾಗ್ರಹದ ಭಿನ್ನ ಭಿನ್ನ ರೂಪಗಳು.

ಭಾಷಣಗಳು, ಹೇಳಿಕೆಗಳು, ಸಂಭಾಷಣೆಗಳು ಹಾಗೂ ಪತ್ರಗಳು ಅವರ ಸಾಹಿತ್ಯ ಕೃಷಿಯ ವಿವಿಧ ಮುಖಗಳನ್ನು ಪ್ರತಿನಿಧಿಸುತ್ತವೆ. ಅವು ಅವರ ಪ್ರಮುಖವಾದ ಸಾಹಿತ್ಯಪ್ರಕಾರಗಳೆಂದೂ ಸಲ್ಲುತ್ತವೆ. ನಾಡಿನ ಜನಜೀವನವನ್ನು ಬಾಧಿಸುವ, ಅವರ ಸಮಸ್ಯೆಗಳನ್ನೆತ್ತಿಯೂ, ಜನತೆಯ ಸಂಕಟದ ದಿನಗಳಲ್ಲಿ ಪಾಲ್ಗೊಳ್ಳುವ ಹಾಗೂ ಅವರಿಗೆ ಸಾಂತ್ವನ ನೀಡುವ ಸಲುವಾಗಿ ಅವರು ದೇಶಾದ್ಯಂತ ಸಂಚರಿಸಿ, ಕಾಲದೇಶಗಳ ಸ್ಫೂರ್ತಿಯಿಂದ ಪ್ರಭಾವಿತರಾಗಿ, ನಿರಾಡಂಬರ ಶೈಲಿಯಲ್ಲಿ, ಶ್ರೋತೃಗಳ ಮನಮುಟ್ಟುವಂತೆ ಅವರು ಭಾಷಣ ಮಾಡುತ್ತಿದ್ದರು. ವಿಷಯನಿರೂಪಣೆಯ ಸ್ಪಷ್ಟತೆ ಮತ್ತು ಹೃದಯ ಸಂವಾದ ಅವರ ಭಾಷಣದ ಮುಖ್ಯ ಗುಣಗಳಾಗಿದ್ದುವು. ಅವರು ಮಹಾವಾಗ್ಮಿಯಾಗಿರದಿದ್ದರೂ ಜನರನ್ನಾಕರ್ಷಿಸುವ ಚುಂಬಕಶಕ್ತಿ ಅವರಲ್ಲಿತ್ತು. ಎಂಥ ವಿಷಮ ಪರಿಸ್ಥಿತಿಯಲ್ಲಿಯೂ ಅವರು ಸತ್ಯವನ್ನೇ ಆಡುತ್ತಿದ್ದರು. ಅವರು 1917ರಲ್ಲಿ ಕಾಶೀ ವಿಶ್ವವಿದ್ಯಾಲಯದ ಪ್ರಾರಂಭೋತ್ಸವ ಸಮಯದಲ್ಲಿ, 1931ರಲ್ಲಿ ದುಂಡು ಮೇಜಿನ ಪರಿಷತ್ತಿನ ಮುಂದೆ, 1942ರಲ್ಲಿ 'ಇಂಡಿಯಾ ಬಿಟ್ಟು ತೊಲಗಿ' ಕರೆ ನೀಡಿದ ಸಂದರ್ಭದಲ್ಲಿ ಮಾಡಿದ ಭಾಷಣಗಳಿಗೆ ಐತಿಹಾಸಿಕ ಪ್ರಾಮುಖ್ಯತೆ ಇರುವುದು ಮಾತ್ರವಲ್ಲ, ಅವು ಕ್ಲಾಸಿಕ್ ಆಗಿ ಪರಿಣಮಿಸಿವೆ. ಅವುಗಳಲ್ಲಿ ಆತ್ಮವಿಶ್ವಾಸವಿದೆ, ದೇಶಾಭಿಮಾನವಿದೆ, ಕಟು ಸತ್ಯವಿದೆ, ನಿರ್ಭೀತಿಯಿದೆ. ಭಾರತೀಯರು ಮರೆಯಲಾರದ ರೋಮಾಂಚಕಾರಕವಾದ, ಸ್ಫೂರ್ತಿದಾಯಕವಾದ, ಅಮೃತವಾಣಿಗಳ ಮಾಲೆಗಳವು. ಭಾರತೀಯ ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸ ಅವರಲ್ಲಿ ಘನೀಭವಿಸಿದೆಯೆಂದೇ ಹೇಳಬಹುದು.

ತಮ್ಮ ವಿಚಾರಧೋರಣೆ ಮತ್ತು ಯೋಜನೆಗಳನ್ನು ಕುರಿತು ಇತರರು ಮಂಡಿಸುತ್ತಿದ್ದ ಪ್ರತಿಕ್ರಿಯೆ ಅಥವಾ ಆಕ್ಷೇಪಗಳಿಗೆ ಪ್ರತಿಯಾಗಿ ಗಾಂಧೀಜಿ ಆ ಕೂಡಲೇ ತಮ್ಮ ಅಭಿಪ್ರಾಯಗಳನ್ನು ಹೇಳಿಕೆಗಳ ರೂಪದಲ್ಲಿ ಪ್ರಕಟಿಸುತ್ತಿದ್ದರು. 1922ರಲ್ಲಿ ನ್ಯಾಯಾಸ್ಥಾನದ ಮುಂದೆ ಕೊಟ್ಟ ಹೇಳಿಕೆ ಸೋಕ್ರೆಟೀಸ್ ವಿಚಾರಣೆಯ ಸಮಯದಲ್ಲಿ ಕೊಟ್ಟ ಹೇಳಿಕೆಯೊಡನೆ ಹೋಲಿಸಬಹುದಾದಂಥದು. ಪ್ರಾಯಶಃ ಆ ಹೇಳಿಕೆಗಳನ್ನು ಹೋಲುವಂಥವು ಜಗತ್ತಿನ ಇತಿಹಾಸದಲ್ಲಿ ಬೇರೆ ಸಿಗಲಾರವು.

ಗಾಂಧೀಜಿ ಕಾಲಹರಣಕ್ಕಾಗಿ ಎಂದೂ ಸಂಭಾಷಣೆಯಲ್ಲಿ ತೊಡಗಿದವರಲ್ಲ. ದೇಶವಿದೇಶಗಳಿಂದ ನಾನಾವರ್ಗದ ಹಲವು ಅಭಿರುಚಿಗಳ ಬಹುಮನೋಧರ್ಮಗಳ ಜನ ವಿಚಾರವಿನಿಮಯಕ್ಕಾಗಿ. ಸಂದೇಹ ನಿವಾರಣೆಗಾಗಿ. ತಮ್ಮ ನಿಲವಿನ ಪ್ರತಿಪಾದನೆಗಾಗಿ. ಸಾಂತ್ವನವನ್ನು ಪಡೆಯುವುದಕ್ಕಾಗಿ ಅವರ ಬಳಿ ಹಿಂಡು ಹಿಂಡಾಗಿ ಬರುತ್ತಿದ್ದರು. ಗಾಂಧೀಜಿಯ ಸಾನ್ನಿಧ್ಯದಿಂದ ಅವರಿಗೆ ಬೌದ್ಧಿಕ ಕಲ್ಪವಾದಂತಾಗಿ. ಮರುಹುಟ್ಟು ಪಡೆದಂತಾಗಿ, ನವ ಚೈತನ್ಯದಿಂದ ಹಿಂದಿರುಗುತ್ತಿದ್ದರು. ಭಾಷಣ ಹೇಳಿಕೆಗಳಲ್ಲಿ ಕಾಣಸಿಗದ ಆತ್ಮೀಯತೆ. ಹೃದಯ ಸಂವಾದ ಹಾಗೂ ಸಾಮೀಪ್ಯ ಸಂಭಾಷಣೆಯಲ್ಲಿ ಒದಗುತ್ತದೆ. ಭಾಷಣದಂತೆ ಸಂಭಾಷಣೆಯೂ ಒಂದು ಕಲೆ ಎಂಬ ಸಂಗತಿ ಮಹದೇವ ದೇಸಾಯಿ ಮತ್ತು ಪ್ಯಾರೇಲಾಲ್ ಬರೆದಿಟ್ಟಿರುವ ಅವರ ಸಂಭಾಷಣೆಗಳನ್ನೋದಿದವರಿಗೆ ವೇದ್ಯವಾಗುತ್ತದೆ. ದೇವರ ಅಸ್ತಿತ್ವದಿಂದ ಹಿಡಿದು ಜನಸಂಖ್ಯಾನಿಯಂತ್ರಣದವರೆಗೂ ಸಂಭಾಷಣೆಯ ವಸ್ತು ಹಬ್ಬಿರುತ್ತಿತ್ತು. ಇಡೀ ವಿಶ್ವವೇ ಅವರಲ್ಲಿ ಅಡಗಿರುತ್ತಿತ್ತೆಂದರೂ ಅಚ್ಚರಿಯಾಗದು. ಗಾಂಧೀಜಿಯ ಹಾಸ್ಯಪ್ರವೃತ್ತಿ ಅತ್ಯಂತ ಸಾಂದ್ರವಾಗಿ ಇತರೆಡೆಗಳಿಗಿಂತ ಸಂಭಾಷಣೆಯಲ್ಲಿ ಮಿಂಚುತ್ತಿರುವುದನ್ನು ಓದುಗರು ಗಮನಿಸಬಹುದು

ಪತ್ರಗಳು ಸಾಹಿತ್ಯದ ಆಕರ್ಷಕ ಪ್ರಕಾರಗಳಲ್ಲೊಂದು. ಆಪ್ತತ್ವ. ಪ್ರತ್ಯಕ್ಷೀಕರಣ ಮತ್ತು ಗಾಢ ಸಂಬಂಧಕ್ಕೆ ಪತ್ರಗಳು ಉಪಯುಕ್ತ ಮಾಧ್ಯಮವಾಗುತ್ತವೆ. ವಿಚಾರ ವಿನಿಮಯಕ್ಕೆ ಹಾಗೂ ಪರಸ್ಪರ ಅರಿವಿಗೆ ಅದೊಂದು ಸಮರ್ಥ ಸಾಧನವಾಗುತ್ತದೆ. ಗಾಂಧೀಜಿ ಬಲಗೈಯಿಂದ ಮಾತ್ರವಲ್ಲ. ಎಡಗೈಯಿಂದಲೂ ಬರೆಯುವ ಅಭ್ಯಾಸವನ್ನು ರೂಢಿಸಿಕೊಂಡಿದ್ದರು. ಅವರು ಬರೆದ ಪತ್ರಗಳ ಸಂಖ್ಯೆ ಒಂದು ಲಕ್ಷಕ್ಕೂ ಅಧಿಕವಾಗಿದೆ. ಪರಿಚಿತರೊ, ಅಪರಿಚಿತರೊ, ದೊಡ್ಡವರೊ, ಸಣ್ಣವರೊ ಯಾರಾದರಿರಲಿ. ಎಲ್ಲರ ಪತ್ರಗಳಿಗೆ ಉತ್ತರ ಬರೆಯುವ ಪರಿಪಾಠವನ್ನಿಟ್ಟುಕೊಂಡಿದ್ದರು. ಅವರು ಕಷ್ಟದಲ್ಲಿದ್ದಾಗ ಧೈರ್ಯತುಂಬಿ. ಸುಖದಲ್ಲಿದ್ದಾಗ ಬೆನ್ನುತಟ್ಟಿ. ಅವರ ಸಮಸ್ಯೆಗಳಿಗೆ ಪರಿಹಾರಗಳನ್ನು ಸೂಚಿಸುತ್ತಿದ್ದರು. ಅವರ ಕಾರ್ಯಕ್ಷೇತ್ರ ರಾಷ್ಟ್ರವ್ಯಾಪಿಯಾಗಿದ್ದುದರಿಂದ ವೈಸ್‌ರಾಯ್ ಮೊದಲುಗೊಂಡು ದೂರದ ಸತ್ಯಾಗ್ರಹಿಯ ಕೊನೆಯವನಾಗಿ ಎಲ್ಲರೊಡನೆಯೂ ಪತ್ರವ್ಯವಹಾರ ನಡೆಸಬೇಕಾಗಿತ್ತು. ವಿಶ್ವಶಾಂತಿಯೇ ಅವರ ಜೀವನದ ಮಹೋದ್ದೇಶವಾಗಿದ್ದುದರಿಂದ ಹಿಟ್ಲರನಿಗೂ ಪತ್ರ ಬರೆದದ್ದುಂಟು.

ಕನ್ನಡಿಯಲ್ಲಿ ಆನೆಯನ್ನು. ಬಟ್ಟಲು ನೀರಿನಲ್ಲಿ ಸೂರ್ಯನನ್ನು ಹಿಡಿಯುವಂತೆ ಶ್ರೀ ನಾರಾಯಣಮೂರ್ತಿಯವರು ಸಮಗ್ರ ಗಾಂಧಿ ಸಾಹಿತ್ಯದ ಪರಿಚಯವನ್ನು ಈ ಕಿರುಹೊತ್ತಗೆಯಲ್ಲಿ ಸಮರ್ಥವಾಗಿ ಮಾಡಿಕೊಟ್ಟಿದ್ದಾರೆ. ಸಿಂಹಾವಲೋಕನ ಕ್ರಮದಿಂದ ಅದನ್ನು ಸಂಗ್ರಹಿಸಿದ್ದಾರೆ. ಗಾಂಧಿಸಾಹಿತ್ಯವನ್ನು ಆಮೂಲಾಗ್ರವಾಗಿ ಅಧ್ಯಯನ ಮಾಡಿ. ಅದನ್ನು ಜೀರ್ಣಿಸಿಕೊಂಡದ್ದರಿಂದ ಅವರಲ್ಲಿಯೇ ತೇಲಿ ಮುಳುಗಿದವ

ರಾಷ್ಟ್ರೀಯ. ಅದು ಅವರ ನಾಡಿನಾಡಿಗಳಲ್ಲಿ ಮಿಡಿಯುತ್ತಿದ್ದುದರಿಂದ ಈ ಸಂಗ್ರಹಕಾರ್ಯದಲ್ಲಿ ಸಫಲರಾಗಿದ್ದಾರೆ. ಇಡೀ ಸಾಹಿತ್ಯವನ್ನು ಏಕಕಾಲದಲ್ಲಿ ಕಣ್ಮುಂದೆ ಚಿತ್ರಿಸಿಕೊಂಡಾಗ ಮಾತ್ರ ಈ ಸಂಕ್ಷೇಪಣ ಕಾರ್ಯ ಯಶಸ್ವಿಯಾದೀತು. ಈ ಕೃತಿಯನ್ನೋದಿ ಮುಗಿಸಿದ ನಂತರ ಗಾಂಧಿಸಾಹಿತ್ಯದ ವೈಪುಲ್ಯ ವೈಶಾಲ್ಯಗಳು ಓದುಗರಿಗೆ ಮನವರಿಕೆಯಾಗುವುದರಲ್ಲಿದೆ. ಆ ಕಡೆಗೆ ಆಕರ್ಷಿತನಾಗಬಹುದು ಮಾತ್ರವಲ್ಲ. ಅವನ ಹೃದಯ ಪರಿವರ್ತನೆಯೂ ಸಾಧ್ಯವಾಗಬಹುದು. ಒಟ್ಟಿನಲ್ಲಿ ಇದು ಗಾಂಧಿ ಸಾಹಿತ್ಯಕ್ಕೆ ನಾಂದಿಯಂತಿದೆ. ಪ್ರವೇಶದ್ವಾರದಂತಿದೆ. ವಿಹಂಗಮದರ್ಶನದಂತಿದೆ, ಸಾರಸಂಗ್ರಹವಾಗಿದೆ.

ಗಾಂಧೀಜಿ ವೃತ್ತಿ ಸಾಹಿತಿಯೂ ಅಲ್ಲ. ಹವ್ಯಾಸಿ ಸಾಹಿತಿಯೂ ಅಲ್ಲ. 'ಗಾಂಧೀಜಿ ಲೇಖಕನಾಗಬೇಕೆಂದು ಬಯಸದಿದ್ದರೂ, ಅನಾಸಕ್ತಿಯಿಂದ ಅವರು ಮಾಡಿದ ಕೃತಿಯ ಪರಿಣಾಮ ಉತ್ತಮೋತ್ತಮ ಲೇಖಕರಲ್ಲಿ ಅವರೊಬ್ಬರು ಎಂದು ಪರಿಗಣನೆಗೆ ಬರುವಂತಾಗಿದೆ. ಅಲಂಕಾರಿಕ ಭಾಷೆಯಿಂದ, ಮನಸೆಳೆವ ಶೈಲಿಯಿಂದ, ಕಲ್ಪನಾತ್ಮಕ ಭಾವಗಳಿಂದ ಅವರು ಲೇಖಕರಾಗಬೇಕೆಂದು ಬಯಸಿದವರಲ್ಲ. ಸತ್ಯದ ಸಹಜತೆ, ಸರಳತೆ, ಮಿಗಿಲಾಗಿ ಸೌಮ್ಯತೆ ಇವುಗಳಿಂದ ಕೂಡಿದ ಅವರ ಬರಹ. ಮಾತು ಸತ್ಯವಾಗಿಯೇ ಇದ್ದು ಕಾಲಕ್ಕೂ ನಿಲ್ಲುವಂತಾಯಿತು. ಅವರು ತಮ್ಮ ಮಾತೃಭಾಷೆಯಾದ ಗುಜರಾತಿಯಲ್ಲೇ ಬರೆಯಲಿ, ಇಂಗ್ಲಿಷಿನಲ್ಲಿಯೇ ಬರೆಯಲಿ. ಅವರಲ್ಲೊಂದು ನೈಜ ಸೊಗಸು. ಸ್ವಾಭಾವಿಕವಾದ ತೂಕ. ವಿಚಾರದ ಬೆಳಕು ಕಂಡುಬರುತ್ತಿತ್ತು.[1] ದಿವಂಗತ ನಾರಾಯಣಮೂರ್ತಿಯವರ ಮಾತಿನಲ್ಲಿ ಗಾಂಧಿ ಸಾಹಿತ್ಯದ ಲಕ್ಷಣಗಳು ಹೆಪ್ಪುಗಟ್ಟಿದಂತಿವೆ. ಗಾಂಧೀಜಿಯ ಬರಹದ ಸತ್ವಕ್ಕೆ ಅವರ ಮಾತಿನ ಹೋಲಿಕೆಯೇ ಪ್ರಧಾನ ಕಾರಣ. ಶಬ್ದಗಳ ಶಕ್ತಿ ವ್ಯಾಪ್ತಿ ಔಚಿತ್ಯ ಮರ್ಜಿಗಳನ್ನು ಅವರು ಬಲ್ಲವರಾಗಿದ್ದರು ಅವರ ಲೇಖನಿಯ ಮೂಲಕ ಹರಿದು ಬಂದಾಗ ಮಾತುಗಳಿಗೆ ಹೊಸ ಕಳೆ ಪ್ರಾಪ್ತವಾಗುತ್ತಿತ್ತು. ತಾವು ನೋಡಿದ ದೃಶ್ಯಗಳನ್ನಾಗಲೀ, ವ್ಯಕ್ತಿಗಳನ್ನಾಗಲೀ ಚಿತ್ರಿಸುವಲ್ಲಿ ಅವರ ಬಣ್ಣನೆಯ ಕಲೆಗಾರಿಕೆ ಎದ್ದು ಕಾಣುತ್ತಿತ್ತು.

ಗಾಂಧಿಸಾಹಿತ್ಯ ಸುಭಾಷಿತಗಳ ಗಣಿ. ಅವುಗಳಲ್ಲಿ ಜೇನಿನ ಮಾಧುರ್ಯವಿದೆ, ಹಾಲಿನ ಸತ್ವವಿದೆ. ಕಾಮನ ಬಿಲ್ಲಿನ ಮೋಹಕತೆಯಿದೆ. ಮಲ್ಲಿಗೆಯ ಪರಿಮಳವಿದೆ. ನಕ್ಷತ್ರಗಳ ಕಾಂತಿಯಿದೆ. ಗೋವು ಕರುಗಳ ಸಾಮ್ಯ'ವೆನ್ನುವುದೇ ಕಾವ್ಯಮಯವಾಗಿದೆ. 'ಹಸಿವು ಇಲ್ಲದಿದ್ದರೆ ತಿನ್ನಬಾರದು. ಮನಸ್ಸಿಲ್ಲದಿದ್ದರೆ ತಿರುಗಾಡಬಾರದು. ಹಾಗೆಯೇ ಬರೆಯುವ ಮನಸ್ಸಿಲ್ಲದಾಗ ಬರೆಯಬಾರದು. ಅಥವಾ ಬಹಳ ಬರೆದಿದ್ದೇನೆ ಎಂದು ಅಷ್ಟೇ ಬರೆದು ಮುಗಿಸಬೇಕು.' 'ಸತ್ಯಶೋಧನೆಗೆ ಲೋಕಾಚಾರ ಅಡ್ಡಿ ಬಂದರೆ

---

1. ಗಾಂಧಿ ಸಾಹಿತ್ಯ. ಪು. ೧೩೪.

ಅದನ್ನು ಕಿತ್ತೊಗೆಯಬೇಕು.' ಇಂಥ ಹಲವು ನುಡಿಮುತ್ತುಗಳನ್ನು ಸಂಗ್ರಹಿಸಿರುವ ನಾರಾಯಣಮೂರ್ತಿಯವರು ಅವನ್ನು 'ಭಾವಾರ್ಥ ಭಂಡಾರಗಳು: ಮಂತ್ರರೂಪದ ಮೋಹಕ ವಚನಗಳು,' ಎಂದು ಕರೆದಿರುವುದು ಸೂಕ್ತವಾಗಿದೆ.

ನಂಬಿದವರಿಗೆ ಗಾಂಧಿಸಾಹಿತ್ಯ ತಾರಕಶಕ್ತಿಯಾಗಬಲ್ಲುದು: ಅನುಷ್ಠಾನ ಮಾಡಿದವರಿಗೆ ಗಾಂಧಿತತ್ತ್ವ ಕಲ್ಪತರುವಾಗಬಲ್ಲುದು. ಈಗ ಜಗತ್ತು ಗಾಂಧಿತತ್ತ್ವ ಅಥವಾ ಸಾಮ್ಯವಾದವನ್ನು ಆರಿಸಿಕೊಳ್ಳಬೇಕಾಗಿದೆ, ಮೂರನೆಯದು ತಲೆದೋರುವ ತನಕವಾದರೂ.

ನಾರಾಯಣಮೂರ್ತಿಗಳು ನಿಷ್ಠಾವಂತ ಕಟ್ಟಾ ಗಾಂಧಿ ಅನುಯಾಯಿ ಎನ್ನುವುದಕ್ಕೆ ಅವರ ಪ್ರಾಮಾಣಿಕತೆಗೆ, ಅವರ ಸಂಗ್ರಹ ಕೌಶಲ್ಯಕ್ಕೆ ಈ ಕೃತಿ ನಿರುಪಮ ಸಾಕ್ಷಿಯಾಗಿದೆ.

ಅವರನ್ನು "ತಾವು ಸಿದ್ಧಪುರುಷರೆ ?" ಎಂದು ಕೇಳಿದ್ದರೆ ಅವರು 'ಹೌದು' ಎಂದು ಹೇಳುವ ಧೈರ್ಯ ಮಾಡುತ್ತಿರಲಿಲ್ಲ. ಆದರೆ ಜನರು ಹಾಗೆ ಭಾವಿಸಿದರೆ ಅಪಾಯವೇನೂ ಘಟಿಸುವುದಿಲ್ಲ. ಹರಿಶ್ಚಂದ್ರನೂ ಪ್ರಾರಂಭದಲ್ಲಿ ಸುಳ್ಳು ಹೇಳಿದಂತೆ, ವಂಚಿಸಿದಂತೆ ಕಾಣುತ್ತದೆ. ಆದರೆ ತನ್ನ ಮುಂದೆ ಅನಿರೀಕ್ಷಿತವಾಗಿ ಬಂದು ನಿಂತ ಸವಾಲೊಂದನ್ನು ಸ್ವೀಕರಿಸಿ ದೃಢಚಿತ್ತದಿಂದ ಎದುರಿಸಿ, ಕಷ್ಟನಷ್ಟ ಪರಂಪರೆಗಳಿಗೆ ಗುರಿಯಾಗಿ ಕಡೆಗೆ ಸತ್ಯಹರಿಶ್ಚಂದ್ರನಾದುದನ್ನು ನೋಡಬಹುದು. ಆದ್ದರಿಂದ ಮುಖ್ಯವಾದುದು ಯಾವುದೆಂದರೆ ಮಾನವ ಮನಸ್ಸು. ಇದನ್ನು ಎಲ್ಲರೂ ಒಪ್ಪುತ್ತಾರೆ. ಆದರೆ ಅರ್ಥ ತಪ್ಪುತ್ತಾರೆ. ಅಂದರೆ ಯಾವುದು ಸರಳವಾದುದೋ, ಸ್ಪಷ್ಟವಾಗಿ ಕಾಣುತ್ತದೋ ಅದನ್ನೇ ಪಾಲಿಸುವುದು ಕಷ್ಟವೆಂದ ಹಾಗಾಯಿತು. ಗಾಂಧೀಜಿಯ ಮಟ್ಟಿಗಂತೂ ಸರಳ ಅಂದರೆ ಅತ್ಯಂತ ಕಷ್ಟಸಾಧ್ಯ.

ಪತ್ರಗುಚ್ಛ ಭಾಗ ೨ ಮತ್ತು ೩ರಲ್ಲಿ ಗಾಂಧೀಜಿಯವರು ಬೇರೆ ಬೇರೆ ಸಮಯಗಳಲ್ಲಿ ಬೇರೆ ಬೇರೆಯವರಿಗೆ ಬರೆದ ಪತ್ರಗಳಿವೆ. ಇಲ್ಲಿನ ಪತ್ರಗಳು ಹಲವಾರು ವಿಷಯಗಳನ್ನು ಒಳಗೊಂಡಿವೆ. ಕೆಲವು ರಾಜಕೀಯ ವಿಚಾರವನ್ನು ತಿಳಿಸಿವೆ. ಇನ್ನು ಕೆಲವು ಸಮಾಧಾನದ ಮಾತುಗಳನ್ನು ಹೊಂದಿವೆ. ಹಲವಾರು ಪತ್ರಗಳಲ್ಲಿ ಅವರ ವೈಯಕ್ತಿಕ ವಿಚಾರಗಳಿವೆ. ಸಾಮಾನ್ಯ ಕ್ಷೇಮ ಸಮಾಚಾರವನ್ನು ವಿಚಾರಿಸುವ ಪತ್ರಗಳೂ ಇವೆ. ಗಾಂಧೀಜಿಯವರ ಜೀವನದ ಬಗ್ಗೆ ಸಮಗ್ರವಾಗಿ ತಿಳಿಯಲು ಇವೆಲ್ಲವೂ ಬೇಕಾಗುತ್ತವೆನ್ನುವುದರಲ್ಲಿ ಎರಡು ಮಾತಿಲ್ಲ. ಆದರೆ ಇವೆಲ್ಲವೂ 'ಅಮೂಲ್ಯ ಸಾಹಿತ್ಯ'ವೆಂಬ ಹೆಸರಿನಲ್ಲಿ ಹೋಗಬೇಕಾದ ಅಗತ್ಯವಿಲ್ಲ. ಗಾಂಧೀಜಿಯವರು ಸಂಘಜೀವಿ ಎನ್ನುವುದು ಹೆಜ್ಜೆ ಹೆಜ್ಜೆಗೂ ಇಲ್ಲಿ ಸ್ಪಷ್ಟವಾಗುತ್ತದೆ. ಆಧ್ಯಾತ್ಮಿಕ ಸಾಧಕನಾದವನು ಏಕಾಂತವನ್ನು ಬಯಸುವಂತೆ. ಹಲವು ಸಲ ಸ್ವಾರ್ಥಿಯೂ ಆಗುವಂತೆ. ಗಾಂಧೀಜಿಯವರು ಆಗದಿದ್ದುದು ದೇಶದ ಭಾಗ್ಯ. ಈ ದೇಶದಲ್ಲಿ ಏನನ್ನು ಬೇಕಾದರೂ ಸಮರ್ಥಿಸಿಕೊಳ್ಳಲು ಸಾಕಾದಷ್ಟು ಶ್ರುತಿ ಸ್ಮೃತಿ ವಾಕ್ಯಗಳ ಸಿದ್ಧ ನೆರವು ಯಥೇಚ್ಛವಾಗಿ ಲಭಿಸುತ್ತದೆ ಆದರೆ ಎಲ್ಲಕ್ಕಿಂತ ಮುಖ್ಯವಾದುದು ಮಾನವೀಯತೆ. ಮಾನವೀಯತೆಯೇ ಗಾಂಧೀಜಿಯವರಲ್ಲಿ ಅತ್ಯಧಿಕ ಪ್ರಮಾಣದಲ್ಲಿದ್ದುದು. ವಿದ್ವತ್ತು, ವಾಗ್ವೈಭವ, ಮುಂತಾದುವುಗಳಿಗೆ ಅವರು ಆಗರವೂ ಆಗಲಿಲ್ಲ. ಆಗ್ರಹವನ್ನೂ ತೋರಿಸಲಿಲ್ಲ. ಆದರಿಂದ ಅವರಾಗಲೀ, ದೇಶವಾಗಲೀ ನಷ್ಟಕ್ಕೆ ಗುರಿಯಾಗಬೇಕಾದ ಪ್ರಮೇಯವೂ ಇರಲಿಲ್ಲ.

ಈ ಪತ್ರ ಸಂಗ್ರಹಗಳಲ್ಲಿರುವ ಪತ್ರಗಳಲ್ಲಿ ಹಳೆಯದು 1894ನೇ ಇಸವಿಗೆ ಸೇರುತ್ತದೆ. ಅವರು 1948ನೇ ಇಸವಿಯಲ್ಲಿ ಬರೆದ ಪತ್ರವೂ ಇದರಲ್ಲಿ ಸೇರಿದೆ. ಪತ್ರಗುಚ್ಛ–೨ರಲ್ಲಿ ಗಾಂಧೀಜಿಯವರು ಟಾಲ್‌ಸ್ಟಾಯ್, ನೆಹರೂ, ಪಟೇಲ್ ಮುಂತಾದವರಿಗೆ ಬರೆದ ಪತ್ರಗಳಿವೆ. ಟಾಲ್‌ಸ್ಟಾಯ್ ಅವರು ಗಾಂಧೀಜಿಯವರ ವಿಚಾರಗಳನ್ನು

ಒಪ್ಪಿಕೊಂಡು ನೈತಿಕ ಬೆಂಬಲವನ್ನು ವ್ಯಕ್ತಪಡಿಸಿದ್ದಾರೆ. ಟಾಲ್‌ಸ್ಟಾಯ್ ಅವರು ಮಹಾಸಾಹಿತಿಯೆಂದು ಹೆಸರಿಗೆ ಪಾತ್ರರಾಗಿದ್ದು 'ಆಶ್ರಮವಾಸಿ'ಯೂ ಆಗಿದ್ದುದರಿಂದ ಗಾಂಧೀಜಿಯವರು ತಮ್ಮ ಅನುಮಾನಗಳಿಗೆ ಪರಿಹಾರವನ್ನು ಕಂಡುಕೊಳ್ಳಲು ಬಯಸುತ್ತಿದ್ದರು. 'ಮಹಾಪುರುಷರು ಒಂದೇ ರೀತಿಯಲ್ಲಿ ಆಲೋಚಿಸುತ್ತಾರೆ' ಎಂಬಂತೆ ಅವರಿಬ್ಬರೂ ಒಂದೇ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಟಾಲ್‌ಸ್ಟಾಯ್ ಅವರ ಕಡೆಯ ಪತ್ರ ಅತ್ಯಂತ ಮಹತ್ವದ್ದಾಗಿದೆ. ಅವರ ಪತ್ರದಲ್ಲಿ ಕಂಡುಬರುವ ಕೆಲವು ನುಡಿಗಳು ಹೀಗಿವೆ–"ಪ್ರೇಮವೆಂದರೆ. ಇತರ ಆತ್ಮಗಳೊಂದಿಗೆ ಸಮರಸಭಾವ ಹೊಂದುವ. ಏಕತೆ ಹೊಂದುವ ಆಕಾಂಕ್ಷೆ. ಈ ಆಕಾಂಕ್ಷೆ ಯಾವಾಗಲೂ ಉದಾತ್ತ ಕ್ರಿಯೆಗಳ ಮೂಲಕವೇ ವ್ಯಕ್ತಗೊಳ್ಳುತ್ತದೆ. ಈ ಪ್ರೇಮ ಮಾನವನ ಬಾಳಿನ ಸಾರ್ವಭೌಮ ಮತ್ತು ಅದ್ವಿತೀಯ ತತ್ವ" "ಹಿಂಸಾ ಪ್ರಯೋಗ ಜೀವನದ ಮೂಲಭೂತ ತತ್ವವಾದ ಪ್ರೇಮದ ಜೊತೆಗೆ ಮೇಳವಿಲ್ಲದೆ ಹೋಗುತ್ತದೆಂದು ಕ್ರಿಸ್ತನಿಗೆ ಗೊತ್ತಿದ್ದಿತು" "ಕ್ರೈಸ್ತ ನಾಗರಿಕತೆಯಿಲ್ಲ ಅದು ಬಾಹ್ಯರೂಪದಲ್ಲಿ ಅದ್ಭುತವಾಗಿ ಕಂಡುಬಂದರೂ ತಪ್ಪು ತಿಳುವಳಿಕೆಯ ಆಧಾರದ ಮೇಲೆ ಬೆಳೆದು ಬಂದಿದೆ"–ಇದಲ್ಲದೆ ಅವರು ಗಾಂಧೀಜಿಯವರ ಕಾರ್ಯವನ್ನು ಪ್ರಶಂಸಿಸುತ್ತಾ "ನೀವು ಟ್ರಾನ್ಸ್‌ವಾಲಿನಲ್ಲಿ ಮಾಡುತ್ತಿರುವ ಕೆಲಸ, ನಮ್ಮ ಈ ಜಗತ್ತಿನಿಂದ ದೂರವಿದ್ದರೂ ಅದು ಅತ್ಯಂತ ಮೂಲಭೂತವೂ ಮತ್ತು ಪ್ರಧಾನವೂ ಆಗಿದೆ. ಅದು ಇಡೀ ಜಗತ್ತಿಗೆ ಒಂದು ಪ್ರಬಲವಾದ ಪ್ರತ್ಯಕ್ಷ ಪ್ರಮಾಣವನ್ನು ದೊರಕಿಸಿಕೊಡುತ್ತದೆ" ಎಂದು ಹೇಳಿರುವುದು ಭಾರತದಲ್ಲಿ ಚರಮಾವಸ್ಥೆಯನ್ನು ಮುಟ್ಟಿರುವುದನ್ನು ಟಾಲ್‌ಸ್ಟಾಯ್ ಅವರು ಕಾಣಲಾಗಲಿಲ್ಲ.

ಗಾಂಧೀಜಿಯವರು 189[illegible]ರಲ್ಲಿ ದಾದಾಭಾಯಿ ನವರೋಜಿಯವರಿಗೆ ಬರೆದಿರುವ ಪತ್ರದಲ್ಲಿ ಅವರ ರಾಜಕೀಯ ಪ್ರಜ್ಞೆಯು ಜಾಗೃತವಾಗಿರುವುದನ್ನು ಕಾಣಬಹುದು. ವರ್ಣದ್ವೇಷ. ಪಕ್ಷಪಾತ. ಕರಾಳ ಕಾನೂನುಗಳನ್ನು ಪರಿಹರಿಸಲು ನಿಶ್ಚಯಿಸಿ ಹೊಸದೊಂದು ಶಕ್ತಿಯನ್ನು ಪ್ರಾರಂಭಿಸಿದರು. ಅದು ಸತ್ಯಾಗ್ರಹಶಕ್ತಿಯೆಂದು ಉತ್ತರೋತ್ತರ ಅಭಿವೃದ್ಧಿಯಾಗಿ ಗಾಂಧೀಜಿಯವರ ಸ್ವೋಪಜ್ಞತೆಯನ್ನು ಬೆಳಕಿಗೆ ತಂದಿತು. ಗಾಂಧೀಜಿ ಕೇವಲ ಒಳ್ಳೆಯ ವ್ಯಕ್ತಿಯಾಗಿರಲು ಇಚ್ಛಿಸಲಿಲ್ಲ. ತಟಸ್ಥ ಅಥವಾ ಜಡ ಒಳ್ಳೆಯತನ ನಮ್ಮಲ್ಲಿ ಬಹುಜನರಲ್ಲಿ ಇದ್ದೇ ಇದೆ. ಆದರೆ ಅದರಿಂದ ಹೆಚ್ಚು ಲಾಭವಿಲ್ಲ ಸಮಾಜದ ದುಃಖ ಮತ್ತು ಅನ್ಯಾಯ. ಅಧರ್ಮಗಳ ಮೂಕ ಸಾಕ್ಷಿಯಾಗಿರುವುದು ಒಳ್ಳೆಯತನದ ಲಕ್ಷಣವಲ್ಲವೆಂದು ಅವರು ಭಾವಿಸಿದರು. ಸ್ವಂತ ಕೀರ್ತಿಗಾಗಿ ಅವರು ದಕ್ಷಿಣ ಆಫ್ರಿಕಾದಲ್ಲಿ ಚಳುವಳಿಯನ್ನು ಪ್ರಾರಂಭಿಸಲಿಲ್ಲ. ಇಂದಿನ ಕೆಲವು ಕಳ್ಳ ಸುಳ್ಳ ಪ್ರಚಾರಿಗಳು ಭಾವಿಸಿಕೊಂಡಷ್ಟು ಸುಲಭದ ಮಾರ್ಗವಾಗಿರಲಿಲ್ಲ. ಮೂವತ್ತು ವರ್ಷ ವಯಸ್ಸಾಗುವವರೆಗೆ ಮೊಗ್ಗಿನ ಅವಸ್ಥೆಯಲ್ಲಿಯೇ ಇದ್ದ ಅವರ ಆಚಾರ ವಿಚಾರಗಳು ಪರಿಸರದ ಒತ್ತಡಕ್ಕೆ ಸಿಕ್ಕಿ ವಿಕಾಸಗೊಂಡು ಸೌರಭವನ್ನು ಬೀರಿದಾಗ ಅನೇಕ ಅನು

ಯಾಯಿ ಭೃಂಗಗಳು ದೂರದೂರದಿಂದ ಹಾರಿಬಂದುದು ಕಂಡುಬರುತ್ತದೆ. ಹೂವು ತನ್ನ ಸೌರಭವನ್ನು ತಡೆಹಿಡಿದುಕೊಳ್ಳಲು ಸಾಧ್ಯವೂ ಆಗುವುದಿಲ್ಲ. ದುಂಬಿಗಳನ್ನು ನಿವಾರಿಸಲೂ ಆಗುವುದಿಲ್ಲ. ಏಕಾಂತವಾಸಿ. ಭಾಷಣ ದ್ವೇಷಿ. ಪ್ರಚಾರದೂರ. ಗಾಂಧೀಜಿಯವರು ಜನಸಮ್ಮರ್ದದ ನಡುವೆ ನಿಂತು ಆಂದೋಲನವನ್ನು ಪ್ರಾರಂಭಿಸಿದುದು ಒಂದು ಪವಾಡಸದೃಶಕಾರ್ಯ. ಮನುಷ್ಯನು ಸಮಾಜ ಜೀವಿ ಎನ್ನುವುದರ ಸಮರ್ಥನೆ. ಮುಖಹೇಡಿಗಳಿಗೆ ಮಾರ್ಗದರ್ಶನ.

ನೆಹರೂ ಅವರಿಗೆ ಗಾಂಧೀಜಿಯವರು ಬರೆದಿರುವ ಪತ್ರಗಳಲ್ಲಿ ಮೊದಲನೆಯದು (ಈ ಸಂಗ್ರಹದಲ್ಲಿ) 1922ನೆಯ ಇಸವಿಯಲ್ಲಿ ಬರೆದದ್ದು. ನೆಹರೂ ಅವರ ದಕ್ಷತೆ, ಭಾವುಕತೆ ಮುಂತಾದುವು ಗಾಂಧೀಜಿಯವರಿಗೆ ಮೆಚ್ಚುಗೆಯಾದಂತೆ ಕಾಣುತ್ತದೆ. ಎಷ್ಟೋ ವಿಷಯಗಳಲ್ಲಿ ಅವರಿಬ್ಬರ ಮಧ್ಯೆ ಭಿನ್ನಾಭಿಪ್ರಾಯಗಳಿದ್ದರೂ, ಪ್ರೀತಿಯು ಮನೋರಾಜ್ಯವನ್ನಾಳುತ್ತಿತ್ತು. ನೆಹರೂಗೆ ಒಂದು ರೀತಿಯ ರಾಜಕೀಯದ ಶಿಕ್ಷಣವನ್ನು ಗಾಂಧೀಜಿ ಕೊಟ್ಟರೆಂದೇ ತಿಳಿಯಬಹುದು. ನೆಹರೂ ಒಮ್ಮೊಮ್ಮೆ ಗಾಂಧೀಜಿಯವರನ್ನು ವಿರೋಧಿಸಬೇಕೆಂದು ಇಚ್ಛಿಸಿದರೂ, ಬಾಪೂದರ್ಶನದಿಂದ ಭಾವುಕರಾಗಿಬಿಡುತ್ತಿದ್ದರು. ಗಾಂಧೀಜಿಯವರ ಸಾತ್ವಿಕತೆಯ ಶಕ್ತಿ ಅಗಾಧವಾಗಿತ್ತು. ಯುವಕ ನೆಹರೂ ರಭಸಮತಿಯಾಗಿದ್ದುದು ಆಶ್ಚರ್ಯವಲ್ಲ. ಗಾಂಧೀಜಿಗೆ ತುಂಬಾ ವ್ಯವಹಾರಜ್ಞಾನವಿದ್ದುದನ್ನು ಕಡೆಗಣಿಸುವಂತಿಲ್ಲ. ಬ್ರಿಟಿಷರೊಡನೆ ಯುದ್ಧಕ್ಕಿಳಿಯುವ ಶಕ್ತಿಯು ಶೋಷಿತ ಜನತೆಗೆ ಇಲ್ಲವೆಂದು ಮನಗಂಡಿದ್ದರು. ಅವರ ಅಹಿಂಸಾತ್ಮಕ ಚಳುವಳಿಗೆ ಇದೇ ಪ್ರಧಾನ ಕಾರಣವೆನ್ನುವುದು ಶುದ್ಧ ಅವಿವೇಕವಾಗುತ್ತದೆ. ನಾಡಿನ ನಾಡಿಯ ಮಿಡಿತವನ್ನು, ಆರ್ಥಿಕ ಸ್ಥಿತಿಯನ್ನು, ಧಾರ್ಮಿಕ ಒಲ್ಮೆಯನ್ನು ಗಮನಿಸಿ ಎಲ್ಲಾ ನಿಟ್ಟುಗಳನ್ನೂ ಪರಿಶೀಲಿಸಿ ಅಸಹಕಾರ ಆಂದೋಲನವೇ ಅತ್ಯುತ್ತಮ ಮಾರ್ಗವೆಂದು ಕಂಡುಕೊಂಡರು. ಕೆಲವು ಯುವಕರು ಸಮಗ್ರ ದೃಷ್ಟಿಯನ್ನು ಹೊಂದಿರದೆ ಗಾಂಧೀಜಿಯವರನ್ನು ಧರ್ಮಗೊಡ್ಡು ಎಂದು ಕರೆದಿದ್ದರೆ ಆಶ್ಚರ್ಯವಲ್ಲ. ನೆಹರೂ ಅಂಗೈಯಲ್ಲಿ ಅಮರಾವತಿಯನ್ನು ತೋರಿಸುವಂತಹ ವಾಗ್ಮಿ. ಗಾಂಧೀಜಿಯವರ ತಾಳ್ಮೆ ಮಾತಿನ ಇತಿಮಿತಿ ನೆಹರೂ ಅವರಿಗಿರಲಿಲ್ಲ. ಆಗಾಗ್ಗೆ ಗಾಂಧೀಜಿ ನೆಹರೂಗೆ ಎಚ್ಚರಿಕೆಯನ್ನು ಕೊಡುತ್ತಿದ್ದರು. ಒಂದು ಪತ್ರದಲ್ಲಿ "ಚೌರಿ ಚೌರಾ ಸುದ್ದಿಯೂ ಬಂದಿತು. ಅಹಿಂಸೆಯು ಗುಲಾಬಿ ಹೂವಿನ ಅತ್ತರಿನ ಸುವಾಸನೆಯಂತೆ ದೇಶದಲ್ಲೆಲ್ಲಾ ಹರಡುತ್ತಿದ್ದರೂ ಹಿಂಸೆಯ ಅಸಹ್ಯ ನಾತ ಇನ್ನೂ ಪ್ರಬಲವಾಗಿಯೇ ಇದೆ" ಎಂದು ನೆಹರೂ ಗಮನವನ್ನು ಸೆಳೆದಿದ್ದಾರೆ. ಇನ್ನೊಮ್ಮೆ "ನೀನು ತಂಟೆಕೋರರಿಗೂ ಪುಂಡರಿಗೂ ಪ್ರೋತ್ಸಾಹ ನೀಡಲು ಹೇಗೆ ಚಿಂತಿಸುವುದಿಲ್ಲವೋ ಹಾಗೆಯೇ ನಿನ್ನ ಈ ಎಲ್ಲ ಚಟುವಟಿಕೆಗಳ ಬಗೆಗೆ ನಾನು ಚಿಂತಿಸುವುದಿಲ್ಲ. ಶುದ್ಧ ಅಹಿಂಸೆಯಲ್ಲಿ ನಿನಗೆ ಇನ್ನೂ ನಂಬಿಕೆ ಇದೆಯೋ ಇಲ್ಲವೋ ನಾನು ಕಾಣೆ" ಎಂದು ಎಚ್ಚರಿಸುತ್ತಾರೆ. ನೆಹರೂಗೆ ಗಾಂಧೀಜಿ

ಎಲ್ಲವನ್ನೂ ಬಹಿರಂಗಪಡಿಸುತ್ತಿದ್ದರು. 'ಸನಾತನಿಗಳೊಂದಿಗೆ ಹೋರಾಟ ಹೆಚ್ಚು ಆಸಕ್ತಿಯುತವೂ, ಹೆಚ್ಚು ಕಷ್ಟಕರವೂ ಆಗುತ್ತಿದೆ' 'ಇದರಿಂದ ಅಂಬೇಡ್ಕರ್ ಮತ್ತು ನಮ್ಮಿಬ್ಬರ ನಡುವೆ ಸನಾತನಿಗಳಿಗೆ ಹೊಸದೊಂದು ಕೋಲಾಹಲ ದೊರಕುತ್ತದೆ. ನನಗಂತೂ ಹೆಚ್ಚು ತೊಂದರೆಯೇ' 'ನಮ್ಮ ಗುರಿ ಪೂರ್ಣ ಸ್ವರಾಜ್ಯವಲ್ಲದೆ ಬೇರೆ ಏನೂ ಅಲ್ಲವೆಂಬ ವಿಷಯದಲ್ಲಿ ನನಗೆ ಸ್ವಲ್ಪವೂ ಸಂದೇಹವಿಲ್ಲ.' ಎಂದು ಬರೆದಿದ್ದಾರೆ. ಗಾಂಧೀಜಿ ತಮ್ಮ ಅಭಿಪ್ರಾಯಗಳನ್ನು ಯಾರ ಮೇಲೂ ಹೇರುತ್ತಿರಲಿಲ್ಲವೆನ್ನುವುದು ಅತ್ಯಂತ ಸ್ಪಷ್ಟವಾಗಿದೆ. 'ನನ್ನ ಅಭಿಪ್ರಾಯಗಳ ಮೇಲೂ ನನ್ನ ಮೇಲೂ ನೀನು ಬಹಿರಂಗ ಹೋರಾಟವನ್ನೇ ನಡೆಸಬೇಕೆಂಬುದು ನನಗೆ ಸ್ಪಷ್ಟವಾಗಿ ಕಾಣುತ್ತಿದೆ' ಎಂದು ಮುಚ್ಚುಮರೆಯಿಲ್ಲದೆ ಹೇಳಿದ್ದಾರೆ. ನೆಹರೂ ವ್ಯಕ್ತಿತ್ವದ ಅರಿವು ಗಾಂಧೀಜಿಯವರಿಗಿದ್ದುದರಿಂದ ಅವರು 'ದೇಶಕ್ಕೆ ನಿನ್ನಿಂದ ಪರಮಸೇವೆ ಸಲ್ಲಬೇಕೆಂದು ನನ್ನ ಬಯಕೆ. ನನ್ನ ಕೀಟಲೆ ನಿನಗೆ ಕಿರಿಕಿರಿಯನ್ನುಂಟುಮಾಡುವುದಾದರೆ ನಾನು ನಿಜವಾಗಿಯೂ ತೊಂದರೆಯನ್ನು ನೀಡಿದಂತೆ ಆಗುತ್ತದೆ'' ಎಂದು ಪ್ರಾಮಾಣಿಕವಾಗಿ ಹೇಳಿದ್ದಾರೆ. ಗಾಂಧೀಜಿ ನೆಹರೂ ಜೊತೆ ಚರ್ಚೆಮಾಡಿ ತೀರ್ಮಾನಕ್ಕೆ ಬರಲು ಯಾವಾಗಲೂ ಇಚ್ಛಿಸುತ್ತಿದ್ದರು. ಏಕೆಂದರೆ 'ನಾನಾದರೂ ನನ್ನ ಉತ್ತರಾಧಿಕಾರಿಯನ್ನು ಅರ್ಥಮಾಡಿಕೊಳ್ಳಬೇಕು ಮತ್ತು ನನ್ನ ಉತ್ತರಾಧಿಕಾರಿಯೂ ನನ್ನನ್ನು ಅರ್ಥಮಾಡಿಕೊಳ್ಳಬೇಕು' ಎನ್ನುವುದು ಅವರ ನಂಬಿಕೆಯಾಗಿತ್ತು.

ಸರದಾರ್ ವಲ್ಲಭಭಾಯಿ ಪಟೇಲರು ಗಾಂಧೀಜಿಯವರಿಗಿಂತ ಆರೇಳು ವರ್ಷ ಚಿಕ್ಕವರು ಮತ್ತು ನೆಹರೂಗಿಂತ ಹನ್ನೆರಡು ಹದಿಮೂರು ವರ್ಷಗಳಷ್ಟು ಹಿರಿಯರು. ಗಾಂಧೀಜಿ ತಮ್ಮ ಉತ್ತರಾಧಿಕಾರಿಯನ್ನಾಗಿ ಹಿರಿಯರಾದ (ನೆಹರೂಗಿಂತ) ಪಟೇಲರನ್ನು ಆಯ್ಕೆಮಾಡಿಕೊಳ್ಳದೆ ನೆಹರೂರವರನ್ನೇ ಏಕೆ ಆರಿಸಿಕೊಂಡರೆಂಬುದು ಚಿದಂಬರ ರಹಸ್ಯವಾಗಿದೆ. ಅನೇಕರ ಅಭಿಪ್ರಾಯದಲ್ಲಿ, ಪಟೇಲರೇ ಪ್ರಧಾನಿಯಾಗಿದ್ದರೆ ಕಾಶ್ಮೀರ ಸಮಸ್ಯೆ ಇರುತ್ತಲೇ ಇರಲಿಲ್ಲ. ಪತ್ರಗುಚ್ಛ ಎರಡನೇ ಭಾಗದಲ್ಲಿ ಗಾಂಧೀಜಿ ಮತ್ತು ಸರದಾರರ ನಡುವೆ ನಡೆದಿರುವ ಪತ್ರವ್ಯವಹಾರದಲ್ಲಿ ಅವರಿಬ್ಬರ ಮಧ್ಯೆ ವಿರಸವಿದ್ದಂತೆ ಕಾಣುವುದಿಲ್ಲ. ಗಾಂಧೀಜಿಯವರು ಪಟೇಲರ ಆರೋಗ್ಯದ ಬಗ್ಗೆ ಹೆಚ್ಚು ಕಾಳಜಿ ವಹಿಸಿರುವುದೂ ಸ್ಪಷ್ಟವಾಗಿದೆ. ಒಂದು ಸಲ ಪಟೇಲರ ಪತ್ರವು ಬರುವುದು ತಡವಾದಾಗ ಗಾಂಧೀಜಿ 'ನಿಮ್ಮಿಂದ ಪತ್ರಗಳಿಲ್ಲದಿರಲಾರೆ. ಈ ಅಭ್ಯಾಸವನ್ನು ನನಗೆ ಕಲಿಸಿದವರು ನೀವೇ' ಎಂದು ಆರೋಪಿಸಿದ್ದಾರೆ. 'ನಿಮ್ಮ ದೃಷ್ಟಿ ಸದಾ ನನ್ನ ಕಡೆಗೇ ಇದೆ ಎಂದು ನಾನು ಬಲ್ಲೆ. ಅದು ನನ್ನನ್ನು ಅಪಾಯದಿಂದ ಪಾರುಮಾಡಲಾರದೆ ?' ಎಂದು ಕೇಳುವ ಆತ್ಮೀಯತೆ ಕಂಡುಬರುತ್ತದೆ. ತಮ್ಮ ನಂಬಿಕೆಯ ಬಗ್ಗೆ ಅವರು ಪಟೇಲರಿಗೆ "ಕೇವಲ ಬೌದ್ಧಿಕ ತೃಪ್ತಿಗಾಗಿ ನಾನು ದೇವರಲ್ಲಿ ನಂಬಿಕೆಯನ್ನಿಟ್ಟಿಲ್ಲ. ಅವನೊಬ್ಬನೇ ಸತ್ಯ. ಆ ಮಹಾಪರೀಕ್ಷೆಯ ನೇತೃತ್ವದಲ್ಲಿ ನಮ್ಮೆಲ್ಲರ ಬದುಕು,

ಚಟುವಟಿಕೆ'' ಎಂದು ಬರೆದಿದ್ದಾರೆ. ಗವರ್ನರನ್ನು ಭೇಟಿ ಮಾಡುವ, ಉಪವಾಸ ಕೈಗೊಳ್ಳುವ, ಕಾರ್ಮಿಕರ ಮುಷ್ಕರದ ಬಗ್ಗೆ ಹಲವಾರು ಪತ್ರಗಳು ಓಡಾಡಿವೆ. ಪಟೇಲರು ಮೂಗಿನ ತೊಂದರೆಯಿಂದ ನರಳುತ್ತಿದ್ದುದು ಗಾಂಧೀಜಿಯವರ ಗಮನಕ್ಕೆ ಬಂದು ಆಗಾಗ್ಗೆ ಎಚ್ಚರಿಕೆ ಕ್ರಮಗಳನ್ನು ಪರಿಹಾರೋಪಾಯಗಳನ್ನು ತಿಳಿಸುತ್ತಿರುತ್ತಾರೆ. 'ಮೂಗು ಬಹಳ ಸೂಕ್ಷ್ಮವಾದ ಅಂಗ. ಅದನ್ನು ಸರಿಪಡಿಸಿಕೊಳ್ಳಬೇಕು — ಕೆಲವೇಳೆ ವೈದ್ಯರುಗಳೇ ನಿಸ್ಸಹಾಯಕರಾಗುತ್ತಾರೆ ...ಪ್ರಾಣಾಯಾಮ ಮತ್ತು ಕೆಲವು ಆಸನಗಳನ್ನು ಅಭ್ಯಸಿಸುವುದರಿಂದ ಅನುಕೂಲವಾದೀತು...' 'ಇನ್ನೂ ನಿಮ್ಮ ಮೂಗಿಗೆ ಏನನ್ನೂ ಮಾಡಲು ಸಾಧ್ಯವಾಗಿಲ್ಲವೇನೋ ಎಂದು ಕಂಡುಬರುತ್ತದೆ.' ಎಂದು ಮೇಲಿಂದ ಮೇಲೆ ಎಚ್ಚರಿಸುತ್ತಿದ್ದರು. ಗಾಂಧೀಜಿಯವರು ಕಾಂಗ್ರೆಸ್ ಸಂಸ್ಥೆಯಿಂದ ದೂರವಿದ್ದುಕೊಂಡು ಕೆಲಸ ಮಾಡಬೇಕೆಂದು ಬಯಸಿದ ವಿಚಾರವೂ ಪಟೇಲರಿಗೆ ಬರೆವ ಪತ್ರದಲ್ಲಿಯೇ ಇದೆ. '...ಪ್ರಾಥಮಿಕ ಸದಸ್ಯತ್ವವೂ ಸೇರಿ—ನಾನು ಪೂರ್ಣವಾಗಿ ತ್ಯಜಿಸಬೇಕು...ಹಗುರವಾದ ಮನಸ್ಸಿನಿಂದ ನಾನು ಈ ಮಹಾ ಸಂಸ್ಥೆಯನ್ನು ತ್ಯಜಿಸುತ್ತಿಲ್ಲ. ನಾನು ಇನ್ನೂ ಹೆಚ್ಚು ಕಾಲ ಅದರಲ್ಲಿದ್ದರೆ ಅದಕ್ಕೆ ಒಳ್ಳೆಯದಾಗುವುದಕ್ಕಿಂತಲೂ ಹೆಚ್ಚು ಅಪಾಯವೇ ಆದೀತೆಂದು ಭಾವಿಸುತ್ತೇನೆ ..ಅನೇಕ ಕಾಂಗ್ರೆಸ್ಸಿಗರಿಗೂ ನನಗೂ ನಡುವೆ ಒಂದು ಪ್ರಧಾನ ದೃಷ್ಟಿಭೇದ ಬೆಳೆಯುತ್ತಿದೆ. ...ಸಿಟ್ಟಿನಿಂದಾಗಲೀ, ವಿಚಾರ ಶೂನ್ಯತೆಯಿಂದಾಗಲೀ ಅಥವಾ ನಿರಾಶೆಯಿಂದಾಗಲೀ ನಾನು ಸಂಸ್ಥೆಯನ್ನು ತ್ಯಜಿಸುತ್ತಿಲ್ಲ' (1934). ಪಟೇಲರಿಗೆ ಆಗಾಗ್ಗೆ ತಪ್ಪುಗಳನ್ನು ಗಮನಕ್ಕೆ ತಂದು ಎಚ್ಚರಿಕೆಯನ್ನು ಕೊಡುತ್ತಿದ್ದರು. ಅಲ್ಲದೆ ಅವರು ವಿನಯದಿಂದ 'ಲಕ್ಷಾಂತರ ಜನರ ಆಗುಹೋಗುಗಳನ್ನು ಕುರಿತು ನೀವು ನಡೆಸುತ್ತಿರುವ ಆಡಳಿತ ವಿಧಾನ ನನಗೆ ಸಾಧಿಸಲು ಸಾಧ್ಯವಾಗದು. ನಿಮ್ಮ ಜಾಗದಲ್ಲಿಯೇ ನಾನೂ ಇದ್ದಿದ್ದರೆ ಬಹುಶಃ ನೀವೆಲ್ಲ ಮಾಡುತ್ತಿರುವಂತೆಯೋ ನೀವೆಲ್ಲ ಮಾಡುತ್ತಿರುವಂತೆಯೇ ನಾನೂ ಮಾಡುತ್ತಿದ್ದೆನೋ ಏನೋ' ಎಂದು ಹೇಳುತ್ತಾರೆ.

ಜಮ್ನಾಲಾಲ್ ಬಜಾಜ್‌ರವರು ಗಾಂಧೀಜಿಯನ್ನು ತಮ್ಮ ತಂದೆಯೆಂದು ಭಾವಿಸಿದ್ದರು. ಆ ಜವಾಬ್ದಾರಿಯನ್ನು ಗಾಂಧೀಜಿಯವರು ಸಂತೋಷದಿಂದಲೇ ಸ್ವೀಕರಿಸಿದ್ದರು. ಅಹಿಂಸೆಯ ಬಗ್ಗೆ ಬಜಾಜರಿಗೆ ಬರೆಯುತ್ತಾ 'ವಿಷಕ್ರಿಮಿ ನಾಶಕಗಳನ್ನು ಉಪಯೋಗಿಸುವುದು ಹಿಂಸೆಯೆನಿಸಿದರೂ ಅವನ್ನು ಉಪಯೋಗಿಸದೆ ಇರಲು ನಮಗೆ ಸಾಧ್ಯವಿಲ್ಲ' ಎಂದು ತಿಳಿಸುತ್ತಾರೆ. ಜಮ್ನಾಲಾಲ್ ಶ್ರೀಮಂತರಾದರೂ ನಿಧಿಗೆ ಧರ್ಮದರ್ಶಿಗಳಂತೆ ಇದ್ದರು. ಮನೋಸಂಸ್ಕಾರಕ್ಕೆ ತೀವ್ರವಾಗಿ ಆಶಿಸುತ್ತಿದ್ದರು. ಗಾಂಧೀಜಿಯವರು ಆಗಾಗ್ಗೆ ಸಲಹೆ ಸೂಚನೆಗಳನ್ನು ನೀಡುತ್ತಿದ್ದರು. ಒಮ್ಮೆ 'ಅಶುದ್ಧಭಾವನೆ ಜನಿಸಿದ ಕೂಡಲೇ ಅದನ್ನು ಒಳ್ಳೆಯ ಭಾವನೆಯೊಡನೆ ತುಲನೆಮಾಡಬೇಕು' ಎಂದೂ ಇನ್ನೊಮ್ಮೆ 'ಪ್ರಿಯವಾದ ಧ್ಯೇಯವೊಂದನ್ನು ಅನುಸರಿಸುವ ಸಂದರ್ಭದಲ್ಲಿ ನಾವಿನ್ನು

ಪ್ರಾಪ್ತಿಯಾದರೂ ಅದು ಹರ್ಷದಿಂದ ಸ್ವಾಗತಿಸಲ್ಪಡಬೇಕು' ಎಂದೂ ಹೇಳುತ್ತಾರೆ. ಬಜಾಜರು ಬಟ್ಟೆ ಗಿರಣಿಯನ್ನು ನಡೆಸಲು ತೀರ್ಮಾನಿಸಿ ಗಾಂಧೀಜಿಯವರ ಸಲಹೆ ಕೇಳಿದಾಗ ಗಾಂಧೀಜಿ ನಿರ್ದಾಕ್ಷಿಣ್ಯವಾಗಿ ವಿರೋಧಿಸಿದರು. 'ಖಾದೀ ಕಾರ್ಯದಲ್ಲಿ ಇಷ್ಟೊಂದು ಆಸಕ್ತವಹಿಸಿರುವ ನಿನ್ನಂತಹವರು ಈ ರೀತಿ ಮಾಡುವುದು ಅಸಮಂಜಸವೆನಿಸುತ್ತದೆ....ದಾನವನ್ನು ನೀಡುವುದಕ್ಕೋಸ್ಕರ ನಿನಗೆ ಹೆಚ್ಚು ಸಂಪಾದನೆ ಬೇಕೆನಿಸಿದರೆ, ನೀನು ಅಂಥ ದಾನವನ್ನೇ ಮಾಡುವುದನ್ನು ಬಿಡಬಹುದು' ಎಂದು ಬಜಾಜರನ್ನು ತಡೆದುಬಿಟ್ಟರು. ಗಾಂಧೀಜಿಯವರು ತಮ್ಮ ಒಂದು ಸಾಧನೆಯ ಬಗ್ಗೆ ಬಜಾಜರಿಗೆ ಬರೆಯುತ್ತಾ ಹೀಗೆ ತಿಳಿಸುತ್ತಾರೆ 'ನಮ್ಮ ಪರಿವಾರದಲ್ಲಿ ಸ್ತ್ರೀಯರಿಗೆ ವೈಯಕ್ತಿಕ ಸೇವೆ ಸಲ್ಲಿಸಬಲ್ಲವನು ನಾನೊಬ್ಬನೇ ಎಂದು ಹೇಳಿಕೊಳ್ಳಬಹುದು....ಶುಕದೇವನಂತೆ ಆಗಬೇಕೆಂಬುದೇ ನನ್ನ ಆಕಾಂಕ್ಷೆ, ಆದರ್ಶ' ಬಜಾಜರು ಅನೇಕ ಜನಹಿತ ಕಾರ್ಯಗಳನ್ನು ಕೈಗೊಳ್ಳಲು ಗಾಂಧೀಜಿ ಕಾರಣರೆಂಬುದನ್ನು ಅವರ ಪತ್ರಗಳಲ್ಲಿ ಕಾಣಬಹುದಾಗಿದೆ.

ಬಜಾಜರ ಹಾಗೆ ನಾಗಿಕವಾದ ಮತ್ತೊಬ್ಬ ಶ್ರೀಮಂತರೆಂದರೆ ಘನಶ್ಯಾಮದಾಸ್ ಬಿರ್ಲಾರವರು. ಬಜಾಜರವರು ಗಾಂಧೀಜಿಯವರನ್ನು ತಮ್ಮ ತಂದೆಯೆಂದು ಭಾವಿಸಿದರೆ ಬಿರ್ಲಾರವರು ಅವರನ್ನು ತಮ್ಮ ಪುತ್ರನೆಂದು ಭಾವಿಸಿದ್ದರು. ಬಿರ್ಲಾರವರ ಔದಾರ್ಯವನ್ನು ಗಾಂಧೀಜಿ ಅನೇಕ ಸಲ ಕೊಂಡಾಡಿದ್ದಾರೆ. ಬಿರ್ಲಾರವರು ಗಾಂಧೀಜಿಯವರ ರಾಜಕೀಯ ತೀರ್ಮಾನಗಳ ಬಗ್ಗೆ ತಮ್ಮ ಟೀಕೆಗಳನ್ನು ವ್ಯಕ್ತಪಡಿಸುತ್ತಿದ್ದರು. ಮತಾಂತರಗೊಂಡವರನ್ನು ಪುನಃ 'ಶುದ್ಧಿ' ಮಾಡಿ ಕರೆದುಕೊಳ್ಳುವುದರ ಬಗ್ಗೆ ಬಿರ್ಲಾರವರು ಕೇಳಿದಾಗ ಗಾಂಧೀಜಿ 'ಶುದ್ಧಿ ಚಳುವಳಿಯನ್ನು ಮುಂದುವರಿಸುವುದರಿಂದ ಆಗಲೇ ಇರುವ ಕೊಳೆಗೆ ಇನ್ನೂ ಕೊಳೆ ಸೇರಿಸಿದಂತಾಗುವುದಲ್ಲದೆ ಹಿಂದೂ ಧರ್ಮಾನುಯಾಯಿಗಳಲ್ಲಿರುವ ಸುಧಾರಣೆಗೆ ಸ್ವಪ್ರೇರಿತ ಸ್ಫೂರ್ತಿಯನ್ನು ತಪ್ಪಿಸಿದಂತಾಗುತ್ತದೆ' ಎಂದು ಹೇಳುತ್ತಾರೆ. ಗಾಂಧೀಜಿ ಬಿರ್ಲಾರಂತಹ ಶ್ರೀಮಂತರ ಹಂಗಿಗೆ ಒಳಗಾಗಿರಲಿಲ್ಲವೆಂಬುದು ಒಂದು ಪತ್ರದಲ್ಲಿ ಆಶ್ಚರ್ಯಕರ ರೀತಿಯಲ್ಲಿ ಸ್ಪಷ್ಟವಾಗುತ್ತದೆ. 'ಎಂ.ಳನ್ನು ನನ್ನ ತೊಡೆಯ ಮೇಲೆ ಕೂರಿಸಿಕೊಂಡಾಗ ಅದನ್ನು ಶುದ್ಧ ಹೃದಯದ ತಂದೆಯಂತೆ ಮಾಡುತ್ತೇನೆಯೇ ಅಥವಾ ಅಧರ್ಮಕ್ಕೆ ಜಾರಿದ ತಂದೆಯಂತೆಯೇ ?...ನೀವು ನನ್ನೊಂದಿಗೆ ಎಲ್ಲ ಸಂಬಂಧಗಳನ್ನು ತ್ಯಜಿಸಿದರೂ ನಾನು ಒಂದೂ ಹನಿ ಕಣ್ಣೀರಿಡೆನು. ನಾನು ಹೇಗೆ ನನ್ನ ಧರ್ಮಕ್ಕೆ ಬಿಡದೆ ಹೊಂದಿಕೊಳ್ಳಬೇಕೋ ಹಾಗೆಯೇ ನೀವೂ ನಿಮ್ಮ ಧರ್ಮಕ್ಕೆ ಹೊಂದಿಕೊಳ್ಳಬೇಕು' ಎಂದು ಬರೆದಿದ್ದಾರೆ. ಇತ್ತೀಚಿನ ಕೆಲವರು ಗಾಂಧೀಜಿಯವರನ್ನು ಖಂಡಿಸುವಾಗ 'ಅವರು ಬಜಾಜ್, ಬಿರ್ಲಾರವರಂತಹ ಶ್ರೀಮಂತರ ಏಜೆಂಟರಾಗಿದ್ದರು' ಎನ್ನುವುದುಂಟು. ಆದರೆ ಸಮಕಾಲೀನ ಪರಿಸ್ಥಿತಿಗೆ ಯಾವುದು ಔಚಿತ್ಯಪೂರ್ಣವಾದುದೆಂಬುದನ್ನು ವ್ಯಾವಹಾರಿಕ ಬುದ್ಧಿಯಿಂದಲೂ, ಹಲವಾರು ದೃಷ್ಟಿಗಳಿಂದಲೂ ಆಲೋಚಿಸಿ ಮಾಡಬೇಕಾಗುತ್ತದೆ. ಟೀಕಾಕಾರರು ಅವನ್ನು ಸಾವಧಾನವಾಗಿ ಯೋಚಿಸಬೇಕಾಗುತ್ತದೆ.

ಗಾಂಧೀಜಿ ಸಾಬರಮತಿಯ ಸತ್ಯಾಗ್ರಹಾಶ್ರಮವನ್ನು 1915ರಲ್ಲಿ ಸ್ಥಾಪಿಸಿದರು. ಅಲ್ಲಿ ಕೆಲವು ಮಕ್ಕಳು ಉತ್ತಮ ಜೀವನ ಸಂಪ್ರದಾಯಗಳನ್ನು ಕಲಿಯುತ್ತಿದ್ದರು. ಗಾಂಧೀಜಿಯವರು ಪ್ರವಾಸದಲ್ಲಿದ್ದಾಗ ಆಶ್ರಮದ ಮಕ್ಕಳಿಗೆ ಕಾಗದಗಳನ್ನು ಬರೆಯುತ್ತಿದ್ದರು. ಮಕ್ಕಳ ಬುದ್ಧಿ, ಮನಸ್ಸುಗಳ ಮಟ್ಟಕ್ಕೆ ಬಾಪು ಇಳಿದು ಬರೆಯುವುದನ್ನು ಕಾಣಬಹುದು. ಒಂದು ಮಗು ಗಾಂಧೀಜಿ ಕಂಡ ಇಂಗ್ಲೆಂಡನ್ನು ವರ್ಣಿಸಬೇಕೆಂದು ಕೇಳಿದಾಗ ಗಾಂಧೀಜಿಯವರು ಹೀಗೆ ವರ್ಣಿಸುತ್ತಾರೆ–'ಲಂಡನ್ ಒಂದು ದೊಡ್ಡ ನಗರ. ಅಲ್ಲಿ ಅನೇಕ ಹೊಗೆ ಕೊಳವೆಗಳು ಇವೆ. ಅವು ಎಲ್ಲವನ್ನೂ ಕಪ್ಪಾಗಿ ಮಾಡುತ್ತವೆ. ಅಲ್ಲಿ ಯಾವುದೂ ಬಿಳಿಯಾಗಿ ಉಳಿಯದು. ಸೂರ್ಯದರ್ಶನ ಅಪರೂಪ. ಆಂಗ್ಲ ಜನರು ನಮಗಿಂತ ಹೆಚ್ಚು ಉದ್ಯೋಗಶೀಲರು. ಇಂಗ್ಲೆಂಡಿನ ರಸ್ತೆಗಳೆಲ್ಲ ಬಹಳ ಚೊಕ್ಕಟವಾಗಿರುತ್ತವೆ'. ಮಗುವಿನ ಮಟ್ಟಕ್ಕೆ ಇದು ಎಷ್ಟು ಸಮರ್ಪಕವಾದ ವರ್ಣನೆಯಾಗಿದೆ! ಗಾಂಧೀಜಿಯವರು ಸ್ತ್ರೀಯರ ಬಗ್ಗೆ ಒಳ್ಳೆಯ ಭಾವನೆಯನ್ನು ಹೊಂದಿದ್ದರು. 'ಮಹಿಳೆಗೆ ಬಂದಿರುವ 'ಅಬಲಾ' ಮತ್ತು 'ಭೀರು' ಎಂಬ ಹೆಸರುಗಳನ್ನು ನೀವು ಅಲ್ಲವೆನಿಸಿದರೆ ನನಗೆ ಎಷ್ಟು ಸಂತಸವಾದೀತು' ಎನ್ನುವುದನ್ನು ಗಮನಿಸಬೇಕು. ಆಶ್ರಮದ ಕಾರ್ಯಕರ್ತರಿಗೆ ಪರೋಕ್ಷವಲ್ಲಿಯೂ ಮಾರ್ಗದರ್ಶನ ಮಾಡುತ್ತಲೇ ಇದ್ದರು. ಅವರು ದುಡಿಮೆಗೆ ಪ್ರಾಧಾನ್ಯವನ್ನು ಕೊಟ್ಟಿದ್ದರು. ಗಾಂಧೀಜಿಯವರನ್ನು ಜನರು ಕೇಳುವ ಪ್ರಶ್ನೆಯೂ ನಾನಾ ರೀತಿಯವಾಗಿರುತ್ತಿದ್ದವು. ಅವರು ಅವುಗಳಿಗೆ ಉತ್ತರ ಕೊಡದೆಯೂ ಇರುತ್ತಿರಲಿಲ್ಲ. ವೇದಾಂತದಿಂದ ಹಿಡಿದು ಕುಟುಂಬ ನಿಯಂತ್ರಣ ಕಾರ್ಯದವರೆಗೂ ಅವರು ಪ್ರಶ್ನೆಗಳಿಗೆ ಉತ್ತರಿಸುತ್ತಿದ್ದರು. 'ಭಿನ್ನ ಭಿನ್ನ ಮತ–ಧರ್ಮಗಳವರ ನಡುವೆ ಆಗುವ ವಿವಾಹ ಒಂದು ಅಪಾಯಕರ ಪ್ರಯೋಗ' ಎನ್ನುತ್ತಿದ್ದರು. 'ಇತರ ಧರ್ಮಗಳಿಂದ ನಾವು ಸ್ವೀಕರಿಸುವಂಥದೇನೂ ಇಲ್ಲವೆಂದು ಭಾವಿಸುವುದು ಧರ್ಮಾಂಧತೆ ಎನಿಸುತ್ತದೆ' ಎಂದು ಕಾರ್ಯಕರ್ತರಿಗೆ ಹೇಳುತ್ತಿದ್ದರು. 'ಹೃದಯ ಭಾವಮಯ. ಅದನ್ನು ಶುದ್ಧವಾಗಿ ಇಡದಿದ್ದರೆ ತಪ್ಪು ಮಾರ್ಗ ಹಿಡಿದೀತು. ಮನೆಯನ್ನೂ ಅದರಲ್ಲಿರುವ ಎಲ್ಲ ವಸ್ತುಗಳನ್ನೂ ಸ್ವಚ್ಛವಾಗಿ ಇಟ್ಟಹಾಗೆ ಅದು' ಎನ್ನುವುದು ಅವರ ಪತ್ರಗಳಲ್ಲಿ ಅಲ್ಲಲ್ಲಿ ಕಂಡುಬರುತ್ತದೆ. 'ಬಹುಜನದ ಬಹುಸುಖ ವಾದದಲ್ಲಿ ನನಗೆ ನಂಬಿಕೆ ಇಲ್ಲ...ಮಾನವೀಯ ಸಿದ್ಧಾಂತವೆಂದರೆ ಸರ್ವರ ಸುಖ. ಇದು ಕರಗತವಾಗಬೇಕಾದರೆ ಅತ್ಯಂತ ಆತ್ಮತ್ಯಾಗವೊಂದೇ ಮಾರ್ಗ' ಎನ್ನುವುದು ಎ. ಡಿ. ನವರೋಜಿಯವರಿಗೆ ಬರೆದ ಪತ್ರದಲ್ಲಿ ಕಂಡುಬರುತ್ತದೆ. ಕಲೆಯ ಬಗ್ಗೆ ಕಾರ್ಯಕರ್ತರೊಬ್ಬರಿಗೆ ಬರೆಯುತ್ತಾ 'ಕಲೆ ನಮ್ಮ ಉದ್ದಿಷ್ಟ ಗುರಿಗೆ ಕೇವಲ ಒಂದು ಸಾಧನ. ಇದಕ್ಕೆ ಪ್ರತಿಯಾಗಿ ಕಲೆಯೇ ಗಮ್ಯವಾದರೆ ಅದು ಮಾನವತೆಯನ್ನು ದಾಸ್ಯಕ್ಕೆ ಗುರಿಮಾಡಿ ಅದನ್ನು ಅವನತಿಗೆ ಇಳಿಸುತ್ತದೆ' ಎನ್ನುವುದು ಹಲವರಿಗೆ ಒಪ್ಪಿಗೆಯಾಗದಿರಬಹುದು. ಮಥುರಾದಾಸ್‌ಗೆ ಬ್ರಹ್ಮಚರ್ಯ, ಸಂತಾನೇಚ್ಛೆ ಮುಂತಾದುವುಗಳ ಬಗ್ಗೆ ಗಾಂಧೀಜಿ 'ಕಾಮೇಚ್ಛೆಗೆ ಅಂಕೆಯಿಲ್ಲದೆ ಹೋದರೆ ಅದು ಪ್ರಗತಿಗೆ ಪ್ರಚಂಡ ಅಡ್ಡಿಯಾಗುತ್ತದೆ. ಕೃತಕ

ಸಂತಾನ ನಿರೋಧ ಮಾರ್ಗವನ್ನು ಅನುಸರಿಸಿದವರು ನಿಜವಾಗಿಯೂ ನಿವೀರ್ಯರಾಗುತ್ತಾರೆ' ಎಂದಿರುವುದು ವಿಚಾರಶೂನ್ಯತೆಯ ಮಾತಲ್ಲ. ಈಗೀಗ ಅವರು ಹೇಳಿದ ಮಾತುಗಳ ಮಹತ್ವ ಅರಿವಾಗತೊಡಗಿದೆ. ದೇಶವನ್ನು ಕಟ್ಟುವ ಯುವಕರು ಸಂತಾನದ ಭಯದಿಂದ್ದನೆ ವೀರ್ಯನಾಶಕ್ಕೆ ಮನಸ್ಸು ಮಾಡಿದರೆ ದೈಹಿಕ, ಮಾನಸಿಕ ಕ್ಲೇಶಗಳು ಒದಗುತ್ತವೆ. ಆದರಿಂದ ಪರೋಕ್ಷವಾಗಿ ದೇಶ ಸೊರಗುತ್ತದೆ. ನಿರ್ಭಯವಾದ ಅನೈತಿಕತೆಗೂ ಹಾದಿಯು ಸುಗಮವಾದಂತಾಗುತ್ತದೆ. ಇದು ಅತಿ ಮಡಿವಂತರ ಮೌಢ್ಯವೆಂದು ತಿಳಿದರೆ, ಕಾಲವೇ ಅದನ್ನು ತೀರ್ಮಾನಿಸಬೇಕಾಗುತ್ತದೆ. ಆದರೆ ಟೀಕಿಸಿದ ಪೀಳಿಗೆ ಆಗ ಇರದೆ ಹೋಗುವುದರಿಂದ ಇನ್ನು ಯಾರು ತಿದ್ದಿಕೊಳ್ಳುವುದು ?

ದೇವದಾಸ್‌ಗಾಂಧಿಯು ಗಾಂಧೀಜಿಯವರ ಮಗ. ಅವರಿಗೆ ಗಾಂಧೀಜಿಯು ದೊಡ್ಡ ಮಗನಾದ ಹರಿಲಾಲನ ಬಗ್ಗೆ ಬರೆಯುತ್ತಾ 'ಹರಿಲಾಲನ ಸದ್ಯದ ದುಸ್ಥಿತಿಗೆ ನಾನೇ ಬಹುಮಟ್ಟಿಗೆ ಕಾರಣವೆಂದು ಭಾವಿಸುತ್ತೇನೆ. ಅವನು ಜನಿಸುವುದಕ್ಕೆ ಮುಂಚೆ ನಾನು ತಮೋಭರಿತನಾಗಿದ್ದೆ. ಅವನು ಮಗುವಾಗಿದ್ದಾಗ ಅತಿ ಕಾಮುಕನಾಗಿದ್ದೆ' ಎಂದು ತಮ್ಮ ತಪ್ಪನ್ನು ಒಪ್ಪಿಕೊಳ್ಳುವುದರಲ್ಲಿ ಒಂದು ತತ್ವವೂ ನಮ್ಮ ಗಮನಕ್ಕೆ ಬರುತ್ತದೆ. ಆನುವಂಶಿಕ ಸಿದ್ಧಾಂತದ ಜೊತೆಗೆ ತತ್ಕಾಲೀನ ಮನೋಸ್ಥಿತಿಯೂ ಮುಖ್ಯವಾದುದು ಎಂಬುದು ಮನನೀಯ. 'ಶತಾಬ್ದಗಳಲ್ಲಿ ಯೋಗ್ಯನಾದ ವ್ಯಕ್ತಿ ಎಂದಿಗೂ ಕಾಮತೃಪ್ತಿಗೆ ಗುಲಾಮನಾಗಿರುವುದಿಲ್ಲ. ಅಂಥವನಿಗೆ ಅವನಿಗೆ ವಿರಾಮವೇ ಇರಲಾರದು' ಎಂಬ ವ್ಯಾವಹಾರಿಕ ಸಲಹೆಯು ಉಪಯುಕ್ತವಾದುದು. ಗಂಡನ ಭೋಗೇಚ್ಛೆಗೆ ಒಳಗಾಗಲು ಹೆಂಡತಿಗೆ ಇಷ್ಟವಿಲ್ಲದಿದ್ದರೆ, ಗಂಡನು ಬೇರೊಬ್ಬ ಸ್ತ್ರೀಯನ್ನು ಮದುವೆಯಾಗಲು ಅನುಮತಿಯನ್ನು ಕೊಡುವುದು ಹಿತವಾದುದೆಂದು ಹೇಳಿರುವುದನ್ನು ನೋಡಿದರೆ ಗಾಂಧೀಜಿ ಎಷ್ಟು ವ್ಯಾವಹಾರಿಕ ಬುದ್ಧಿಯನ್ನು ಹೊಂದಿದ್ದರೆಂಬುದು ಸ್ಪಷ್ಟವಾಗುತ್ತದೆ. ಅವರು ಕೇವಲ ಒಣಕಾನೂನು, ನಿಯಮಗಳನ್ನು ಕಟ್ಟುಮಟ್ಟು ಹೇರುತ್ತಿರಲಿಲ್ಲ. ಕೆಲವು ಕಾರ್ಯಕರ್ತರು ಗಾಂಧೀಜಿಯವರು ಬಾಲಕಿಯರೊಡನೆ ವಿನೋದವಾಡುವುದನ್ನು ಟೀಕಿಸಿದರೆಂದು ತೋರುತ್ತದೆ. ಅದಕ್ಕೆ ಅವರು 'ಆಶ್ರಮವಾಸಿಗಳಲ್ಲಿ ಕೆಲವರು ಅಸಮಾಧಾನಗೊಂಡಿದ್ದರೆ ನಾನು ಅಂಥ ಸಲಿಗೆಯನ್ನು ನಿಲ್ಲಿಸಬೇಕು......ಅದನ್ನು ತ್ಯಜಿಸುವುದು ಬಾಲಿಕೆಯರ ಮನಸ್ಸಿನಲ್ಲಿ ದುರ್ಭಾವನೆಗೆ ಎಡೆಕೊಡುವುದಾದರೆ ಆಶ್ರಮವಾಸಿಗಳಿಗೆ ವಿವರಣೆಕೊಟ್ಟು ನಾನು ಸಲಿಗೆಯಿಂದ ವರ್ತಿಸುವುದನ್ನು ಪುನಃ ಆರಂಭಿಸಬೇಕು....ಆದರೆ ಬೇರೆ ಯಾರೂ ನನ್ನಂತೆ ಸಲಿಗೆಯಿಂದ ವರ್ತಿಸಲು ಅನುಕರಿಸಬಾರದು,' ಎಂದು ಎಚ್ಚರಿಕೆಯನ್ನೂ ಕೊಡುತ್ತಾರೆ. ಮಹಾರಾಣಿ ಸಾಧು ಎನ್ನುವವರಿಗೆ ಬರೆದ ಕಾಗದದಲ್ಲಿ ಬಾಹ್ಯ ಶುದ್ಧಿಯ ಬಗ್ಗೆ ಬರೆಯುತ್ತಾ 'ಬಾಹ್ಯಶರೀರದ ಪರಿಶುದ್ಧತೆಯಿಂದಲೇ ಮಾನಸಿಕ ಶುದ್ಧಿಯನ್ನು ಸಾಧಿಸಲು ಸಾಧ್ಯ. ಬಾಹ್ಯ ಶರೀರ ಶುದ್ಧಿಯಿಲ್ಲದೆ ಮಾನಸಿಕ ಶುದ್ಧಿಯನ್ನು ಪಡೆಯಲು ಯತ್ನಿಸುವವರು ತಪ್ಪುದಾರಿಗೆ ಹೋಗುವ

ಸಂಭವವಿದೆ' ಎಂದಿರುವುದು ದಿಟವಾದ ಮಾತಾಗಿದೆ. ಅನೇಕರು ತದ್ವಿರುದ್ಧವಾಗಿ
ಆಚರಿಸುವುದೂ ಕಂಡುಬರುವಾಗ ಯಾವುದನ್ನು ಏನೆಂದು ನಂಬುವುದು.

ಗಾಂಧೀಜಿಯವರು ತಮ್ಮ ಪತ್ರಗಳಲ್ಲಿ ಯಾವ ಕಾವ್ಯಾತ್ಮಕ ನಿರೂಪಣೆಗಾಗಲೀ
ಭಾವುಕತೆಗಾಗಲೀ ಅವಕಾಶವನ್ನು ಕೊಡುತ್ತಿರಲಿಲ್ಲವೆಂದು ಕಾಣುತ್ತದೆ. ಆದರೆ ಮೀರಾ
ಬೇನ್ (ಇಂಗ್ಲೆಂಡಿನ ಮ್ಯಾಡಿಲೇನ್ ಸ್ಲೇಡ್)ಳನ್ನು ತಮ್ಮ ಪುತ್ರಿಯೆಂದು ಭಾವಿಸಿ
ಆತ್ಮೀಯತೆಯಿಂದ ಪತ್ರಗಳನ್ನು ಬರೆದಿರುವುದನ್ನು ನೋಡಬಹುದು. ಮೀರಾಬೇನ
ಳಷ್ಟು ಸೇವಾನಿಷ್ಠರಾದ ವ್ಯಕ್ತಿಗಳು ಅತ್ಯಂತ ವಿರಳ. ಗಾಂಧೀಜಿ ಇನ್ನು ಯಾರಿಗೂ
ತೋರದಷ್ಟು ವಾತ್ಸಲ್ಯವನ್ನು ತೋರಿದ್ದಾರೆ. ಮೀರಾಬೇನಳ ದಿನಚರಿಯ ಬಗ್ಗೆ
ತುಂಬಾ ಆಸ್ಥೆಯನ್ನು ಗಾಂಧೀಜಿ ಹೊಂದಿದ್ದರು. ಆದರೂ 'ನನ್ನನ್ನು ಪ್ರತಿಭಟಿಸ
ಬೇಕಾದಾಗ ಹಿಂಜರಿಯಬೇಡ. ಏಕೆಂದರೆ ನಾನು ನಿನ್ನನ್ನು ಎಷ್ಟೇ ಪ್ರೀತಿಸಿದರೂ
ನಿನ್ನನ್ನು ತಪ್ಪಾಗಿ ತಿಳಿದುಕೊಳ್ಳಲು ಸಾಧ್ಯ. ನಾನು ಎಂದಿಗೂ ತಪ್ಪು ಮಾಡದವ
ನೆಂದು ನೀನು ತಿಳಿದುಕೊಳ್ಳಬಾರದೆಂದು ನನ್ನ ಇಚ್ಛೆ' ಎಂದು ಹೇಳುವುದನ್ನು ಮರೆ
ಯುವುದಿಲ್ಲ. ಮೀರಾ ಬಗ್ಗೆ ಗಾಂಧೀಜಿ ಎಷ್ಟು ಹಚ್ಚಿಕೊಂಡಿದ್ದರೆಂದರೆ 'ಇಡೀ ದಿನ
ನಿನ್ನ ಯೋಚನೆಯಲ್ಲಿಯೇ ನಾನು ಇದ್ದೆ ಎಂಬುದನ್ನು ತೋರಿಸುವುದು. ಯಾವ
ಪ್ರೇಮಿಯೂ ತಾನೂ ಹೆಚ್ಚು ನೋವನ್ನನುಭವಿಸದೆ ನೋವನ್ನುಂಟುಮಾಡಿಲ್ಲ......
ನಿನ್ನ ಅಗಾಧ ಪ್ರೀತಿಯನ್ನಲ್ಲದೆ ಬೇರೆ ಏನನ್ನೂ ಚಿಂತಿಸಲಾರೆ ನಾನು. ನಿನ್ನ ಮೋಹ
ವೆಂದು ಯಾವುದನ್ನು ನಾನು ಭಾವಿಸಿರುವೆನೋ ಅದನ್ನು ದೇವರು ಇಲ್ಲದಂತೆ ಮಾಡಲಿ,
ಇಲ್ಲವೆ ನನ್ನ ಅರಿವಿನ ಕಣ್ಣನ್ನು ತೆರೆಸಿ, ತಪ್ಪನ್ನು ಕಂಡುಕೊಳ್ಳುವಂತೆ ಮಾಡಲಿ'
ಎಂದು ಹೇಳಿದ್ದಾರೆ. ಇನ್ನೊಂದು ಪತ್ರದಲ್ಲಿ ಅವರು 'ಕಾಂಗ್ರೆಸ್ ಸಂಸ್ಥೆಯಲ್ಲಿ ಕಂಡು
ಬರುವ ಭ್ರಷ್ಟಾಚಾರ ಹಿಂದೆ ಎಂದೂ ಇಷ್ಟು ನನ್ನ ಮನಸ್ಸಿನ ಮೇಲೆ ಪರಿಣಾಮ
ಮಾಡಿರಲಿಲ್ಲ. ಕಾಂಗ್ರೆಸ್ಸನ್ನು ತ್ಯಜಿಸಿ ಅದರ ಆದರ್ಶಗಳನ್ನು ಸಂಸ್ಥೆಯ ಹೊರಗಡೆ
ಯಿಂದ ಮುಂದುವರಿಸುವ ಬಗೆಗೆ ಸೂಕ್ತತೆ ಕುರಿತು ಗೆಳೆಯರಲ್ಲಿ ಪ್ರಸ್ತಾಪಿಸುತ್ತಿದ್ದೇನೆ'
ಎಂದಿರುವುದು ಪಟೇಲರಿಗೆ ಬರೆದ ಪತ್ರದಲ್ಲಿಯೂ (1934) ಕಂಡುಬರುತ್ತದೆ. ಮೀರಾ
ಬೇನಳೊಡನೆ ರಾಜಕೀಯ ವಿಚಾರವನ್ನೂ ಚರ್ಚಿಸುತ್ತಿದ್ದುದು ಅನೇಕ ಪತ್ರಗಳಲ್ಲಿ
ಸ್ಪಷ್ಟವಾಗಿದೆ. ಎಸ್ತರ್ ಫೇರಿಂಗ್ ಎಂಬ ಡೆನ್ಮಾರ್ಕ್ ದೇಶದ ಮಹಿಳೆಯು ಗಾಂಧೀಜಿ
ಯವರ ವ್ಯಕ್ತಿತ್ವದಿಂದ ಪ್ರಭಾವಿತರಾಗಿದ್ದರು. ಮೀರಾ ಬೇನಳಿಗಿಂತಲೂ ಹೆಚ್ಚು
ವಿಶ್ವಾಸದಿಂದ ಗಾಂಧೀಜಿಯನ್ನು ನೋಡುತ್ತಿದ್ದ ಆಕೆ ದೀರ್ಘಕಾಲ ಆಶ್ರಮದಲ್ಲಿ ನಿಲ್ಲದೆ
ಮೆನನ್ ಎಂಬ ಡಾಕ್ಟರನ್ನು ವಿವಾಹವಾಗಿ ಬರ್ಮಿಂಗ್‌ಹ್ಯಾಮ್ ಬಳಿ ನೆಲಸಿದ್ದಳು.
ಗಾಂಧೀಜಿ ಎಸ್ತರಳನ್ನು 'ನನ್ನ ಪ್ರಿಯ ಮಗು' ಎಂದೇ ಉದ್ದೇಶಿಸಿ ಬರೆಯುತ್ತಿದ್ದರು.
ಎಸ್ತರ್‌ಗೆ ಬರೆಯುತ್ತಿದ್ದ ಪತ್ರಗಳಲ್ಲಿಯೂ ತಾತ್ವಿಕ ವಿಚಾರಗಳನ್ನು ಕಾಣಬಹುದಾ
ಗಿತ್ತು, 'ನ್ಯಾಯವಾಗಿರುವ ಜನಾಂಗ ಆತ್ಮಶಕ್ತಿಯಿಂದಲೇ ಹೋರಾಡೀತು...ಭಾರತ

ಅಂಥ ಜನಾಂಗವೆಂದು ನಾನು ಭಾವಿಸಿದ್ದೆ. ಇದು ತಪ್ಪು ಎನ್ನಿಸುತ್ತದೆ' ಎಂದು ಹೇಳಬೇಕಾದರೆ ಯಾವುದೋ ದೊಡ್ಡ ನೋವು ಅವರಿಗುಂಟಾಗಿರಬೇಕು. ಗಾಂಧೀಜಿಯವರ ನಿರೀಕ್ಷೆಗೆ ಜನರು ಅಷ್ಟು ಸುಲಭವಾಗಿ ಏರಲಾರರೆಂದು ಯಾರು ತಾನೇ ಹೇಳುವಂತಿತ್ತು. ಅಂತರಂಗದ ವಾಣಿಯಂತೆ ಗಾಂಧೀಜಿ ನಡೆಯುತ್ತಿದ್ದರೆಂದು ಬಹಳ ಕಡೆ ತಿಳಿದುಬರುತ್ತದೆ. ಆದರೆ ಅವರು ಅದನ್ನು ಹೇಗೆ ವಿಮರ್ಶಿಸುತ್ತಿದ್ದರೆಂಬುದಕ್ಕೆ ಇಲ್ಲಿ ಸೂಚನೆ ದೊರೆಯುತ್ತದೆ. 'ಸಂಯಮಪೂರಿತ ಅಂತರ್ವಾಣಿಯಂತೆಯೇ ನಡೆಯಬೇಕು. ಅದು ಭಗವಂತನ ವಾಣಿ. ಸಂಯಮ ರಹಿತ ಅಂತರ್ವಾಣಿ ನರಕಕ್ಕೆ ಮಾರ್ಗ. ಅದು ಪಿಶಾಚಿಯ ವಾಣಿ' ಎಂಬ ಮಾತಿನಲ್ಲಿ ಅಂತರ್ವಾಣಿಯನ್ನೂ ವಿಶ್ಲೇಷಿಸಿರುವುದು ಗಮನಾರ್ಹವಾದುದು. 'ಅತ್ಯಂತ ದೊಡ್ಡ ಹೊಣೆಗಾರಿಕೆಯನ್ನು ನಿರ್ವಹಿಸುವುದೇ ಅತ್ಯಂತ ದೊಡ್ಡ ಸ್ವಾತಂತ್ರ್ಯ' ಎನ್ನುವುದು ಮೇಲುನೋಟಕ್ಕೆ ವಿಚಿತ್ರವೆನಿಸಿದರೂ ಅದನ್ನು ನಡೆಸಿರುವವರಿಗೆ ವೇದ್ಯವಾಗುತ್ತದೆ.

ಗಾಂಧೀಜಿ ಕಸ್ತೂರಬಾ ಅವರಿಗೆ ಬರೆದ ಪತ್ರಗಳು ದಾಂಪತ್ಯದ ನಿಲುವುಗಳನ್ನು ತೋರಿಸುತ್ತವೆ. ಪತ್ರಮುಖೇನ ಪತ್ನಿಗೆ ಶಿಕ್ಷಣ ಕೊಡುತ್ತಿದ್ದುದೂ ಕಂಡುಬರುತ್ತದೆ. ಬಾ ಅವರು ಪತಿಯಿಂದ ಕಷ್ಟನಷ್ಟಗಳನ್ನು ಅನುಭವಿಸಿದರೂ. ಅದರ ಉತ್ತಮ ಫಲವನ್ನು ಕಡೆಯಲ್ಲಿ ಪಡೆಯುವುದನ್ನೂ ಕಾಣಬಹುದು. ಗಾಂಧೀಜಿ ಅಂತರಂಗದಲ್ಲಿ ಅಧ್ಯಾತ್ಮಜೀವಿ. ಬಹಿರಂಗದಲ್ಲಿ ರಾಜಕೀಯದಲ್ಲಿ ಆಸಕ್ತರಂತೆ ಕಾಣುತ್ತಿದ್ದರು. ಅದೇನೂ ಇಂದಿನ ರಾಜಕಾರಣದಂತಹುದೂ ಅಲ್ಲ. ಸ್ವಾತಂತ್ರ್ಯ ಪ್ರಾಪ್ತಿಗಾಗಿ ಅವರು ನಡೆಸಿದ ಹೋರಾಟವೆಂದರೆ ಔಚಿತ್ಯಪೂರ್ಣವೆನಿಸುತ್ತದೆ.

ಗಾಂಧೀಜಿಯವರು ತಮ್ಮ ಪತ್ರಗಳಲ್ಲಿ ಕಷ್ಟಸುಖಗಳನ್ನು ವಿಚಾರಿಸಿಕೊಳ್ಳುವ, ಆರೋಗ್ಯ ವರ್ಧನೆಗೆ ಸಲಹೆ ನೀಡುವ, ಸಾಮಾನ್ಯ ವ್ಯವಹಾರದ ವಿಚಾರಗಳನ್ನು ಚರ್ಚಿಸುವ ಮನಸ್ಸನ್ನು ತೋರಿಸಿದ್ದಾರೆ. ಅವರಿಗೆ ಯಾವುದೂ ಅಮುಖ್ಯವೆನ್ನಿಸಿರಲಿಲ್ಲ. ಭಾರತಕ್ಕೆ ಸ್ವಾತಂತ್ರ್ಯ ಪ್ರಾಪ್ತಿಯು ಎಷ್ಟು ಪ್ರಮುಖವಾದ ಅಂಶವೋ, ಅಷ್ಟೇ ಮುಖ್ಯವಾದ ಅಂಶ ಆಶ್ರಮದ ಕಾರ್ಯಕರ್ತನಿಗೆ ಉಂಟಾದ ಜ್ವರದ ವಿಷಯವೂ ಕೂಡ. ಗಾಂಧೀಜಿ ಅತ್ಯಂತ ವಾಸ್ತವವಾದಿ. ನೆಲದ ಮೇಲೆ ಕಾಲೂರದೆ ಎಂದೂ ಹಾರಾಡಲಿಲ್ಲ. ವಾಸ್ತವ ಜೀವನದ ಕಟುಸತ್ಯಗಳು ಅವರಿಗೆ ತಿಳಿದಿದ್ದುವು. ಮನುಷ್ಯ ಎದುರಿಸಬೇಕಾದ ಸಮಸ್ಯೆಗಳನ್ನು ಅವರು ಚೆನ್ನಾಗಿ ಬಲ್ಲವರಾಗಿದ್ದರು. ಆದ್ದರಿಂದಲೇ ಜನತೆಯನ್ನು ಸಾಮೂಹಿಕವಾಗಿ ತಮ್ಮ ದಾರಿಗೆ ಸೆಳೆಯುವುದರಲ್ಲಿ ಯಶಸ್ವಿಗಳಾದರು. ಈ ಪತ್ರಗುಚ್ಛಗಳನ್ನು ಓದುತ್ತಿದ್ದಂತೆಯೇ ಗಾಂಧೀಜಿಯವರ ಚಿತ್ರವು ಕಣ್ಮುಂದೆ ನಿಂತಂತಾಗುತ್ತದೆ. ಮಾತನಾಡಿದಂತಾಗುತ್ತದೆ. ಅವರ ಶೈಲಿಯೂ ಅವರಂತೆಯೇ ಸರಳ. ಅನುವಾದವೆಂದು ಗೊತ್ತಾಗದಂತಹ ಅನುವಾದವಾಗಿದೆ ಪತ್ರಗುಚ್ಛ.

ಪ ದ ಚಿ ಹ್ನೆ

# ಸತ್ಯಾಗ್ರಹ

–ಕ್ಯಾತನಹಳ್ಳಿ ರಾಮಣ್ಣ.

ಶ್ರೀ ಜಿ. ವಿ ನಾ. ಅವರು ಅನುವಾದಿಸಿರುವ ಅನೇಕ ಗಾಂಧೀಕೃತ ಗ್ರಂಥಗಳಲ್ಲಿ 'ಸತ್ಯಾಗ್ರಹ' ಎಂಬುದು ಒಂದು. ಸ್ವತಃ ಗಾಂಧೀಜಿಯವರ ಬದುಕೇ ಈ ಗ್ರಂಥಕ್ಕೆ ಮೂಲನೆಲೆ. ಬದುಕಿನಲ್ಲಿ ಬಂದದ್ದು ಯಾವುದೂ ಪೊಳ್ಳಾಗುವುದಿಲ್ಲ. ಕಲ್ಪನೆಯಿಂದ ಎಷ್ಟೋ ತಾತ್ತ್ವಿಕ ಗ್ರಂಥಗಳನ್ನು ರಚಿಸಬಹುದು. ಓದಿದವರು ಅಲ್ಲಿನ ತತ್ತ್ವಗಳನ್ನು ಮೆಚ್ಚಬಹುದು, ಒಪ್ಪಬಹುದು, ಅನುಕರಣೀಯವೆನ್ನಿಸಲೂಬಹುದು. ಆದರೂ ತನ್ನ ಮಿತಿಯಲ್ಲಿ ಮಾತ್ರ ಅಂಥದು ತತ್ತ್ವವೆನ್ನಿಸುತ್ತದೆ. ಪ್ರಾಯೋಗಿಕ ಹಿನ್ನೆಲೆ ಅದಕ್ಕಿರುವುದಿಲ್ಲ ಎಂಬುದೊಂದೇ ಮಿತಿ ಅದನ್ನು ಸಾಕಷ್ಟು ಹಿಂಜರಿಯುವಂತೆ ಮಾಡುತ್ತದೆ. ಧೈರ್ಯವಿದ್ದವರು ಅದನ್ನು ಅನುಕರಿಸಬಹುದು. ಯಶಸ್ವಿಯಾಗಬಹುದು. ಹಾಗೆ ಯಶಸ್ವಿಯಾದವರು ಎಷ್ಟು ಮಂದಿ ಇದ್ದಾರು. ಅವರೆಲ್ಲ ತಮ್ಮ ಯಶಸ್ಸನ್ನು ಪ್ರಚಾರ ಮಾಡಬಲ್ಲರೆ, ಅನುಯಾಯಿಗಳನ್ನು ಸೃಷ್ಟಿಸಬಲ್ಲರೆ, ಇತ್ಯಾದಿ ಪ್ರಶ್ನೆಗಳು ಆ ಕಲ್ಪನಾಲೋಕದ ತಾತ್ತ್ವಿಕತೆಯನ್ನು ಹಿಂಬಾಲಿಸಿಕೊಂಡೇ ಬರುತ್ತವೆ.

ಆದರೆ ಗಾಂಧೀಜಿಯವರ ತತ್ತ್ವಗಳೆಲ್ಲ ಅವರ ಬದುಕಿನಿಂದ ಬಂದಂಥವು. ಅವರ ತತ್ತ್ವಗಳು ಅವರದೇ ಆದ ಕಲ್ಪನಾಪ್ರತಿಭೆಯ ಕೂಸುಗಳಾಗಿರಬಹುದು. ತಮ್ಮ ಕಲ್ಪನೆಗಳಿಗೆ ತಾವೇ ಅನುಯಾಯಿಯಾದರು. ಜೀವನಪರ್ಯಂತ ಅನುಕರಿಸಿದರು. ಅವರು ಯಾರನ್ನೂ ತಮ್ಮ ಅನುಯಾಯಿಯಾಗಲು ಪ್ರಚೋದಿಸಲಿಲ್ಲ. ಅವರ ಮಾರ್ಗ, ಅವರ ತತ್ತ್ವಗಳು, ಸರಿಯೆಂದು ಅನ್ನಿಸಿದವರೆಲ್ಲ ಅವರ ಹಾಗೂ ಅವರ ತತ್ತ್ವಗಳ ಅನುಯಾಯಿಗಳಾದರು.

ಗಾಂಧೀಜಿ ಹೇಳಿದರು– 'ಅಹಿಂಸೆ ನನ್ನ ದೇವರು. ಸತ್ಯ ನನ್ನ ದೇವರು. ಅಹಿಂಸೆಯ ಸಾಧನೆಗಾಗಿ ನಾನು ಶ್ರಮಿಸುವಾಗ ಸತ್ಯ ಹೇಳುತ್ತದೆ: "ನನ್ನ ಮೂಲಕವೇ ಅದರ ಸಿದ್ಧಿ" ಎಂದು. ಸತ್ಯದ ಸಾಧನೆಗಾಗಿ ನಾನು ಶ್ರಮಿಸುವಾಗ ಅಹಿಂಸೆ ಹೇಳುತ್ತದೆ: "ನನ್ನ ಮೂಲಕವೇ ಅದರ ಸಿದ್ಧಿ" ಎಂದು.

ಇದು ಗಾಂಧೀಜಿಯವರ ದ್ವಂದ್ವವಲ್ಲ. ಸತ್ಯ ಮತ್ತು ಅಹಿಂಸೆ–ಈ ಎರಡರಲ್ಲಿ ಒಂದನ್ನು ಬಿಟ್ಟು ಮತ್ತೊಂದಿಲ್ಲ ಎಂದು ಹೇಳುವುದು ಅವರ ಉದ್ದೇಶ. ಯಾವ

ಸಾಧನೆಗಾದರೂ ಈ ಎರಡು ವಸ್ತುಗಳು ಮೂಲದ್ರವ್ಯಗಳಾಗಬೇಕು ಎಂಬುದು ಅವರ ಬದುಕು ಕಂಡುಕೊಂಡ ಬೆಳಕು.

ಇಂದಿನ, ಅಥವಾ ಹಿಂದಿನ, ಅಂದರೆ ಗಾಂಧೀಜಿಯವರ ಅನಂತರದ ರಾಜಕೀಯ ಚರಿತ್ರೆಯ ಹಿನ್ನೆಲೆಯಲ್ಲಿ ನೋಡುವಾಗ, ಅವರ ಒಂದು ಮಾತು ನೆನಪಾಗುತ್ತದೆ. ಆ ಮಾತಿನಿಂದ ಇವತ್ತಿನ ಜನಸಾಮಾನ್ಯನಿಗೊದಗುವುದು ಒಂದು ಬಗೆಯ ವೇದನೆ ಮಾತ್ರ. ಗಾಂಧಿ ಹೇಳಿದರು : "ನನ್ನ ಬದುಕಿನ ಅತ್ಯಂತ ಆತ್ಮೀಯ ವಸ್ತುಗಳಿಂದ ರಾಜಕೀಯವನ್ನು ಬೇರ್ಪಡಿಸಲಾರೆ. ಕಾರಣ ಇಷ್ಟೆ : ನನ್ನ ರಾಜಕೀಯ ಕಲುಷಿತವಲ್ಲ". ಇವತ್ತಿನ ಕಲುಷಿತಗೊಂಡವುಗಳ ಪಟ್ಟಿಯಲ್ಲಿ ರಾಜಕೀಯವೇ ಮೊದಲ ಸ್ಥಾನಗಳಿಸಿಕೊಳ್ಳಬಲ್ಲುದು ಎಂಬುದೇ ಜನಸಾಮಾನ್ಯನ ವೇದನೆಗೆ ಕಾರಣ.

ಯಾವುದೇ ಒಂದು ಕ್ಷೇತ್ರದಲ್ಲಿ ಕಲುಷಿತ ಎಂಬ ಶಬ್ದ ಪ್ರವೇಶ ಪಡೆದುಕೊಳ್ಳಬಾರದು ಎಂದಾದರೆ ಅಲ್ಲಿ ಧರ್ಮ ಅನಿವಾರ್ಯ ; ತ್ಯಾಗವುಳ್ಳ ಧರ್ಮ. ಎಷ್ಟೋ ಧರ್ಮಗಳಿಗಿಂತ ತ್ಯಾಗಧರ್ಮ ಶ್ರೇಷ್ಠವಾದುದು. ಅದಿಲ್ಲದವನು ಮನುಷ್ಯ ಎನ್ನಿಸಿಕೊಳ್ಳಲಾರ. ಆದ್ದರಿಂದಲೇ ಗಾಂಧೀಜಿ ಹೇಳಿದರು : "ಮೃಗಗಳಿಗಿಂತ ಮಾನವ ಭಿನ್ನ ಎಂದು ತೋರುವುದು ತ್ಯಾಗಧರ್ಮ ಒಂದರಿಂದಲೇ." ಮನುಷ್ಯ ಮನುಷ್ಯನಾಗಿ ಬದುಕಬೇಕು. ಅದಕ್ಕಾಗಿ ಅವನು ಕಳೆದುಕೊಳ್ಳಬೇಕು. ಸ್ವಾರ್ಥರಹಿತ ಕಳೆದುಕೊಳ್ಳುವಿಕೆಯೇ ತ್ಯಾಗ ಎನ್ನಿಸಿಕೊಳ್ಳುತ್ತದೆ. ಅದನ್ನೇ ಧರ್ಮವನ್ನಾಗಿ ಉಳ್ಳವನನ್ನು ಮಾತ್ರ ಗಾಂಧೀಜಿ ಮನುಷ್ಯ ಎಂದು ಪರಿಗಣಿಸುತ್ತಾರೆ. ಆದರೆ ಮನುಷ್ಯರು ಎಲ್ಲಿ ಸಿಕ್ಕಬಹುದು ನಮಗೆ? ತ್ಯಾಗದ ಜೊತೆಗೆ ನಿಸ್ವಾರ್ಥತೆಯೂ ಇದ್ದರೆ ಅಂಥವನ ವ್ಯಕ್ತಿತ್ವ ವೃದ್ಧಿಯಾಗುತ್ತದೆ. "ಮನುಷ್ಯ ಎಷ್ಟರ ಮಟ್ಟಿಗೆ ಪರಾರ್ಥಕ್ಕಾಗಿ ಶ್ರಮಿಸುತ್ತಾನೆಯೋ ಅಷ್ಟರ ಮಟ್ಟಿಗೆ ಅವನು ದೊಡ್ಡವನಾಗುತ್ತಾನೆ." ಸತ್ಯ ಮತ್ತು ಅಹಿಂಸೆಗಳನ್ನು ಗಾಂಧೀಜಿ ತಮ್ಮ ದೇವರೆಂದು ನಂಬಿದ್ದವರು. ದೇಶದ ಆಗುಹೋಗುಗಳನ್ನು ಗಮನಿಸಿ ಅವರೊಮ್ಮೆ ಹೇಳಿದರು : "ಸತ್ಯವನ್ನು ಕೈಬಿಡಬಲ್ಲವನು ತನ್ನ ದೇಶವನ್ನೂ ಕೈಬಿಡಬಲ್ಲ. ಆಪ್ತೇಷ್ಟರನ್ನೂ ಕೈಬಿಡಬಲ್ಲ."

▪

ಸ್ವಾತಂತ್ರ್ಯಗಳಿಕೆಗಾಗಿ ಬ್ರಿಟಿಷರ ವಿರುದ್ಧ ಗಾಂಧೀಜಿಯವರು ಬಳಸಿದ ಬ್ರಹ್ಮಾಸ್ತ್ರ ಸತ್ಯಾಗ್ರಹ. ಅದು ಮತ್ತಷ್ಟು ಪ್ರಜ್ವಲಿಸುವಂತೆ ಮಾಡುವ ಮತ್ತೊಂದು ಒತ್ತಾಸೆ ಅಹಿಂಸೆ. ಶ್ರೀ ಜಿ. ಪಿ. ರಾ. ಅವರು ತಮ್ಮ ಸಮರ್ಥ ಶೈಲಿಯಲ್ಲಿ ಗಾಂಧೀ ಸಾಹಿತ್ಯವನ್ನು ಕನ್ನಡಿಗರಿಗೆ ಉಣ್ಣಿಸಿದ್ದಾರೆ. ಜಿಪಿರಾ ಅವರ ಶೈಲಿಯಲ್ಲಿ ಒಂದೆರಡು ಗಾಂಧೀ ನುಡಿಗಳನ್ನು ನೋಡಿ :

"ಸತ್ಯಪಥ ಎಷ್ಟು ನೇರವೋ ಅಷ್ಟೇ ಕಠಿಣವಾದುದು. ಅಹಿಂಸೆಯೂ ಹೀಗೆಯೇ, ಇದೊಂದು ಅಸಿಧಾರಾವ್ರತದಂತೆ. ಚಿತ್ತೈಕಾಗ್ರತೆಯನ್ನು ಅಭ್ಯಸಿಸಿದ ದೊಂಬ

ಪಗ್ಗದ ಮೇಲೆ ನಡೆದಾನು, ಆದರೆ ಸತ್ಯ-ಅಹಿಂಸೆಗಳ ಪಥದಲ್ಲಿ ನಡೆವುದಕ್ಕೆ ಇವನ್ನು ಮೀರಿದ ಚಿತ್ತೈಕಾಗ್ರತೆ ಬೇಕು"

"ಸತ್ಯಾಗ್ರಹದ ಶಬ್ದಾರ್ಥ : ಸತ್ಯನಿಷ್ಠೆ, ಹಠ. ಈ ನಿಷ್ಠೆ, ಹಠ, ಅವರ ಅನುಯಾಯಿಗೆ ಅಗಾಧ ಶಕ್ತಿಯನ್ನು ಕೊಡುತ್ತದೆ. ಈ ಶಕ್ತಿಗೇ ಸತ್ಯಾಗ್ರಹವೆಂದು ಹೆಸರು."

"ಪ್ರೇಮವು ಯಾರನ್ನೂ ದಹಿಸದು, ತನ್ನನ್ನೇ ದಹಿಸಿಕೊಳ್ಳುತ್ತದೆ. ಆದುದರಿಂದ ಒಬ್ಬ ಸತ್ಯಾಗ್ರಹಿ, ಎಂದರೆ, ಸವಿನಯ ಪ್ರತಿಭಟನೆಕಾರ, ಸಾವನ್ನೂ ಆನಂದವಾಗಿ ಸ್ವಾಗತಿಸುತ್ತಾನೆ."

–ಹೀಗೆ ಉದ್ದಕ್ಕೂ ಶ್ರೀ ಜಿವಿನಾ ಅವರು ತಮ್ಮ ಶೈಲಿಯಲ್ಲಿ ಆಕರ್ಷಣೆಯನ್ನು ವೃದ್ಧಿಸಿಕೊಳ್ಳುತ್ತ ನಡೆಯುತ್ತಾರೆ.

ಸತ್ಯಾಗ್ರಹ ಎಷ್ಟು ಪರಿಣಾಮಕಾರಿಯೋ ಅಷ್ಟೇ ಕಠಿಣತರವಾದುದು. ನೈತಿಕ ಶಕ್ತಿ ಅವನ ಬಂಡವಾಳವಾಗಬೇಕು. ಸಾಕಷ್ಟು ವೇದನೆಯನ್ನು ಅನುಭವಿಸಬೇಕು. ಅವನು ವೇದನೆಯಿಂದ ಆರ್ದ್ರನಾಗಬೇಕು. ಹಾಗಾದಾಗಲೇ ತನ್ನ ಗುರಿಗೆ ಈಡಾದವರನ್ನು ಆರ್ದ್ರಗೊಳಿಸಲು ಸಾಧ್ಯ : ಆ ಮೂಲಕ ಕರಗಿಸಲು ಸಾಧ್ಯ, ಕರುಣೆಗೀಡು ಮಾಡಲು ಸಾಧ್ಯ. "ಸತ್ಯಾಗ್ರಹಿ ಕೇವಲ ಸಚ್ಚಾರಿತ್ರ್ಯ ಮತ್ತು ವೇದನೆಯ ಶಕ್ತಿಯಿಂದ ತನ್ನ ವಿರೋಧಿಯನ್ನು ಪರಿವರ್ತಿಸಲು ಯತ್ನಿಸುತ್ತಾನೆ. ಅವನು ಶುದ್ಧನಾದಷ್ಟೂ ವೇದನೆಯನ್ನು ತಾಳಿದಷ್ಟೂ ಪ್ರಗತಿಯು ಹೆಚ್ಚುತ್ತದೆ." ಆದ್ದರಿಂದ ಕಡೆಗೆ ವಿಜಯಿಯಾಗುವವನು ಅವನೇ.

ಸತ್ಯಾಗ್ರಹ ಅನೇಕಸಲ ಹಿಂಸೆಯ ಮಾರ್ಗವನ್ನು ತುಳಿಯಬಹುದು. ವೇದನೆ ಸಹಿಸಲಸಾಧ್ಯವೆನ್ನಿಸಿದಾಗ ಸತ್ಯಾಗ್ರಹಿ ಹಿಂಸಾಕಾರಿಯಾಗಿ ಪರಿವರ್ತಿಸಬಹುದು. ಸತ್ಯಾಗ್ರಹಕ್ಕೆ ಕಾರಣರಾದವರು ಕೂಡ ಅಂಥ ಸಂದರ್ಭದಲ್ಲಿ ತಪ್ಪು ಮಾರ್ಗ ಅನುಸರಿಸಲಾರರು ಎಂದು ಹೇಳಲಾಗುವುದಿಲ್ಲ. ಸತ್ಯಾಗ್ರಹಕ್ಕೆ ಸಂಬಂಧಪಟ್ಟ ವಿಷಯವಾಗಲಿ, ಕೊಲೆ ಸುಲಿಗೆ ದರೋಡೆಗಳಿಗೆ ಸಂಬಂಧಪಟ್ಟ ವಿಷಯವಾಗಲಿ, ತಪ್ಪಿತಸ್ಥ ತಪ್ಪಿತಸ್ಥನೇ. ತಪ್ಪಿತಸ್ಥರನ್ನು ದಂಡಿಸುವುದೇ ಸರಿ. ಕಾರಾಗೃಹ ವಾಸವೂ ಅಂಥವರಿಗೆ ಎಷ್ಟೋ ಸಲ ಸೂಕ್ತ ದಂಡನೆಯಾಗಬಹುದು. ಆದರೆ ದಂಡನೆಯ ಮೂಲಕವೂ ಸುಧಾರಣೆ ಸಾಧ್ಯವಾಗಬೇಕು ಎಂಬುದು ಗಾಂಧೀಜಿಯವರ ಅಭಿಪ್ರಾಯವಾಗಿತ್ತು. ಆದ್ದರಿಂದ ಅವರು ಹೇಳಿದರು : "ಕಾರಾಗೃಹಗಳನ್ನು ದಂಡನೆಯ ಸ್ಥಳಗಳನ್ನಾಗಿ ಉಪಯೋಗಿಸುವುದಕ್ಕಿಂತಲೂ ಸುಧಾರಣೆಯ ಶಾಲೆಗಳನ್ನಾಗಿ ಉಪಯೋಗಿಸಬೇಕೆಂದು ಪ್ರತಿಪಾದಿಸಿ ನಾ ತೃಪ್ತನಾಗಿದ್ದೇನೆ".

ಸತ್ಯಾಗ್ರಹ ಹೂಡಿದವರನ್ನು ಬಂಧಿಸುವ ಸಾಧ್ಯತೆಗಳುಂಟು. ಅಂಥ ಬಂಧನ ನ್ಯಾಯಸಮ್ಮತವೋ ನ್ಯಾಯಬಾಹಿರವೋ ಎಂಬ ವಿವೇಚನೆ ಆ ಸಂದರ್ಭದಲ್ಲಿ ಸ್ಥಾನ ಕಳೆದುಕೊಂಡಿರುತ್ತದೆ. ಸತ್ಯಾಗ್ರಹಿ ಬಂಧನಕ್ಕೆ ಒಳಗಾಗುತ್ತಾನೆ. ಅದು ಕೇವಲ ಬಂಧನ. ಮಾನಸಿಕವಾಗಿ ಅವನು ಸ್ವತಂತ್ರನೇ ಆಗಿರುತ್ತಾನೆ. ಅವನ ವಿಚಾರಗಳನ್ನು ಬಂಧಿಸಲು ಯಾರಿಂದಲೂ ಸಾಧ್ಯವಿಲ್ಲ. ಅವನ ಬಂಧನ ನ್ಯಾಯಸಮ್ಮತವೇ ಆಗಿದ್ದರೂ ಅದು ಅಷ್ಟರಮಟ್ಟಿನ ಬಂಧನಕ್ಕೆ ಮಾತ್ರ ಅರ್ಹ. ಅವನ ವಿಚಾರಗಳಿಂದಲೇ ಅವನು ಗುರಿಯನ್ನು ತಲುಪಲು ಸಾಧ್ಯ. ಗಾಂಧೀಜಿ ತಾವು ಹೇಳಿದ ತಾತ್ತ್ವಿಕ ಅಂಶಗಳನ್ನೆಲ್ಲ ತಮ್ಮ ಬದುಕಿನ ಸಾರರೂಪದಲ್ಲಿ ಹೇಳಿದ್ದಾರೆ. "ಸತ್ಯಾಗ್ರಹಿ ಪ್ರತಿಭಟಿಸುತ್ತಿರುವ ಪೀಡಕನಿಗೆ ಸತ್ಯಾಗ್ರಹಿಯ ಶರೀರ ಮತ್ತು ಆಸ್ತಿಪಾಸ್ತಿಯ ಮೇಲೆ ಅಧಿಕಾರವಿದ್ದೀತೇ ಹೊರತು ಅವನ ಆತ್ಮದ ಮೇಲೆ ಏನೂ ಇರದು ಎಂಬುದು ಒಂದು ಮೂಲಭೂತ ತತ್ತ್ವ. ಶರೀರ ಬಂಧಿತವಾಗಿದ್ದರೂ ಆತ್ಮನನ್ನು ಜಯಿಸಲು ಸಾಧ್ಯವಿಲ್ಲ; ಅದು ಅಜೇಯ. ಈ ಮೂಲ ತತ್ತ್ವದ ಜ್ಞಾನದಿಂದಲೇ ಸತ್ಯಾಗ್ರಹಶಾಸ್ತ್ರವೆಲ್ಲ ಜನಿಸಿದೆ."

ಬಂಧನಕ್ಕೊಳಗಾದ ಸತ್ಯಾಗ್ರಹಿ ಕುಗ್ಗಬಾರದು. ಅಶಕ್ತತೆಯ ಅನುಭವ ಅವನಿಗಾಗಬಾರದು. ಏಕೆಂದರೆ, "ಸತ್ಯಾಗ್ರಹವೆಂದರೆ ಎಲ್ಲ ಅಶಕ್ತಿಯ ಉಚ್ಚಾಟನೆ." ಸತ್ಯಾಗ್ರಹಿಯಾದವನಿಗೆ ಸಾಮಾಜಿಕ ಪ್ರಜ್ಞೆ ಅತ್ಯವಶ್ಯ. ಆ ಮೂಲಕ ಅವನು ಸಾಮಾಜಿಕವಾಗಿ ಸ್ಥಾನಗಳಿಸಿಕೊಳ್ಳಬೇಕು. "ಸತ್ಯಾಗ್ರಹ ಆಚರಿಸುವವನಲ್ಲಿ ಆತ್ಮ ಸಂಯಮ, ಆತ್ಮಶುದ್ಧಿ, ಸಾಮಾಜಿಕ ಪ್ರತಿಷ್ಠೆ ಇದ್ದ ಇರಬೇಕು." ಸಾಮಾಜಿಕ ಪ್ರಜ್ಞೆಯಿಂದ ಗಳಿಸಿಕೊಂಡ ಸಾಮಾಜಿಕ ಪ್ರತಿಷ್ಠೆ ಕೂಡ ಒಬ್ಬ ವ್ಯಕ್ತಿಯು ಸತ್ಯಾಗ್ರಹದ ಮಾರ್ಗದಲ್ಲಿ ಸಹಾಯಕವಾಗುತ್ತದೆ. ಏಕೆಂದರೆ ಸತ್ಯಾಗ್ರಹಕ್ಕೆ ಸಾರ್ವಜನಿಕ ಸಹಕಾರ ಅಗತ್ಯ. ಈ ಸಹಕಾರ ದೊರಕಬೇಕಾದರೆ ಸಾಕಷ್ಟು ವಿಸ್ತಾರವಾಗಿ ಸತ್ಯಾಗ್ರಹದ ಉದ್ದೇಶ ಪ್ರಸಾರವಾಗಬೇಕು. "ಸತ್ಯಾಗ್ರಹ ನಿಶ್ಶಬ್ದವಾಗಿಯೂ ಆದುದರಿಂದ ನಿಧಾನವಾಗಿಯೂ ಪರಿಣಾಮ ಮಾಡುವ ಶಕ್ತಿ. ವಾಸ್ತವವಾಗಿ, ಅದರಷ್ಟು ನೇರವಾಗಿ ಅಥವಾ ವೇಗವಾಗಿ ಪರಿಣಾಮ ಮಾಡುವ ಶಕ್ತಿಯೇ ಜಗತ್ತಿನಲ್ಲಿಲ್ಲ. ಆದರೆ, ಪಾಶವಿಕ ಶಕ್ತಿಗೇ ಶೀಘ್ರಫಲ ದೊರೆತಂತೆ ಆಗಾಗ ಭಾಸವಾಗುವುದುಂಟು." ಪಾಶವೀ ಶಕ್ತಿಗೆ ದೊರಕಿದಂತೆ ತೋರುವ ಶೀಘ್ರಫಲ ತಾತ್ಕಾಲಿಕವಾದುದು ಎಂಬುದನ್ನು ಸತ್ಯಾಗ್ರಹಿ ಅರಿತಿರಬೇಕು. ಆದರಿಂದ ಅವನ ಏಕಾಗ್ರತೆ ವಿಚಲಿತವಾಗಬಾರದು. "ಸತ್ಯಾಗ್ರಹವು ಮೌನವಾಗಿ ಪ್ರಭಾವ ಬೀರುವುದಾದರೂ ಸತ್ಯಾಗ್ರಹಿಯಿಂದ ಸ್ವಲ್ಪ ಪ್ರಮಾಣದ ಕ್ರಿಯೆ ಅವಶ್ಯಕ. ಸತ್ಯಾಗ್ರಹಿ ತಾನು ತೊಡೆದುಹಾಕಲು ನಿರ್ಧರಿಸುವ ಕೆಟ್ಟ ಅಂಶದ ವಿರುದ್ಧವಾಗಿ, ವ್ಯಾಪ್ತಿಯುಳ್ಳ ತೀವ್ರ ಚಳುವಳಿಯ ಮೂಲಕ ಸಾರ್ವಜನಿಕ ಅಭಿಪ್ರಾಯವನ್ನು ಒಂದುಗೂಡಿಸಿ ಸಿದ್ಧಗೊಳಿಸುವುದು ಅವನ ಪ್ರಥಮ ಕರ್ತವ್ಯ." ಹೀಗೆ ಸಾರ್ವಜನಿಕ ಅಭಿಪ್ರಾಯಗಳನ್ನು ಕಲೆಹಾಕುವುದರ ಮೂಲಕ ತಾನು ನಿರತವಾಗಿರುವ ಸತ್ಯಾಗ್ರಹಕ್ಕೆ ಹೆಚ್ಚಿನ ಶಕ್ತಿ

ಯನ್ನು ಗಳಿಸಿಕೊಳ್ಳಬೇಕು. ಹಾಗೆ ಮಾಡುವಾಗ ಸತ್ಯಾಗ್ರಹಿಯ ಸಾಮಾಜಿಕ ಪ್ರಜ್ಞೆ ಪ್ರತಿಷ್ಠೆಗಳು ಹಿನ್ನೆಲೆಯಲ್ಲಿ ನೆರವಾಗುತ್ತವೆ.

ಗಾಂಧೀಜಿ ಎಷ್ಟು ಕಠಿಣವೋ ಅಷ್ಟೇ ಮೃದು. ಅವರಲ್ಲಿ ಅಹಂ ಎಂದೂ ಪ್ರವೇಶಿಸಿದ್ದೇ ಇಲ್ಲ. ಜೀವನಪರ್ಯಂತ ಪರಾರ್ಥ ಸಾಧನೆಯಲ್ಲಿ ತೊಡಗಿದವರು. ಸ್ವಾರ್ಥ ಎಂದೂ ಅವರ ಕಣ್ಣಮುಂದೆ ಸುಳಿದಿದ್ದಿಲ್ಲ. ತಾವು ಕೈಗೊಂಡ ಯಾವುದೇ ಸಾಧನೆಯಾದರೂ ಪ್ರಾಣಾರ್ಪಣೆಯಂಥ ಉತ್ಕಟ ಪರಿಸ್ಥಿತಿಗೂ ಸಿದ್ಧರಿರುತ್ತಿದ್ದವರು. ಇತರರಿಗೆ ಎಂದೂ ಕೇಡೆಣಿಸಿದವರಲ್ಲ. ಅವರೊಮ್ಮೆ ಹೇಳಿದರು : "ಯಾರು ನಿರ್ಭೀತನಾಗಿ ತನ್ನ ಶತ್ರುವಿಗೆ ಕೆಡುಕನ್ನು ಎಣಿಸದೆ ಅಸುವನ್ನು ಅರ್ಪಿಸುವನೋ ಅವನೇ ನಿಜವಾದ ಧೈರ್ಯಶಾಲಿ, ಅವನೇ ನಿಜವಾದ ಹುತಾತ್ಮ; ಕೊಂದು ತಾನೂ ಸಾಯುವವನಲ್ಲ."

ಗಾಂಧೀಜಿ ಒಬ್ಬ ಮಹಾ ನಿಸ್ವಾರ್ಥಿ. ತಮ್ಮ ಬದುಕು ಹೊಸ ಪಂಥವೊಂದನ್ನು ಸೃಷ್ಟಿಸಬೇಕು ಎಂಬ ಆಸೆಯೇನೂ ಅವರಲ್ಲಿ ಇರಲಿಲ್ಲ. ಆದರೂ 'ಗಾಂಧೀಪಂಥ'ವೊಂದು ತಾನಾಗಿಯೇ ಹುಟ್ಟಿಕೊಳ್ಳುವಂತೆ ಅವರು ಬದುಕಿದರು. ಹೊಸ ಹೊಸ ತತ್ತ್ವಗಳನ್ನಾಗಲಿ ಹೊಸ ಹೊಸ ಸಿದ್ಧಾಂತಗಳನ್ನಾಗಲಿ ಸೃಷ್ಟಿಸಿ ತಮ್ಮ ಹೆಸರನ್ನು ಚಿರಸ್ಥಾಯಿಯಾಗಿಸಬೇಕೆಂದು ಎಂದೂ ಅವರು ಬಯಸಲಿಲ್ಲ. ಆದರೆ ಅವರ ಬದುಕು ಅನೇಕ ತತ್ತ್ವಗಳಿಗೆ ಅನೇಕ ಸಿದ್ಧಾಂತಗಳಿಗೆ ಜನ್ಮ ನೀಡುವ ಅವಕಾಶದಿಂದ ಮುಕ್ತವಾಗಲಿಲ್ಲ. ಗಾಂಧೀಜಿ ಹಾಗೆ ಬದುಕಿದರು. ತಮ್ಮ ಕಣ್ಣೆದುರಿನಲ್ಲೇ ಗಾಂಧೀ ಎಂಬ ಹೆಸರಿನ ನೆರಳಿನಲ್ಲಿ ಏನೇನು ಹುಟ್ಟಿಕೊಳ್ಳುತ್ತಿವೆ ಎಂದು ಗಾಂಧೀಜಿ ಗಮನಿಸಿದಾಗ ಹೇಳಿದರು : "ಗಾಂಧೀಪಂಥ ಎಂಬುದೊಂದಿಲ್ಲ. ನನ್ನ ತರುವಾಯ ಯಾವ ಪಂಥವನ್ನೂ ಕಟ್ಟಿಹೋಗುವ ಇಚ್ಛೆ ನನಗಿಲ್ಲ. ನಾನು ಯಾವುದಾದರೂ ನೂತನ ತತ್ವದ ಅಥವಾ ಸಿದ್ಧಾಂತದ ಮೂಲಪುರುಷ ಎಂಬ ಭಾವನೆ ನನಗಿಲ್ಲ. ನಿತ್ಯಸತ್ಯಗಳನ್ನು ನಮ್ಮ ದೈನಂದಿನ ಜೀವನ ಹಾಗೂ ಸಮಸ್ಯೆಗಳಿಗೆ ಅಳವಡಿಸಲು ನನ್ನ ರೀತಿಯಲ್ಲಿ ನಾನು ಸಾಧಾರಣನಂತೆ ಪ್ರಯತ್ನಿಸಿದ್ದೇನೆ ; ಅಷ್ಟೆ."

ಗಾಂಧೀಜಿಯವರ ಇಂಥ ಆಸೆಗಳು ಆಕಾಂಕ್ಷೆಗಳು ಈಡೇರಲೇ ಇಲ್ಲ. ಅವರ ಹೆಸರು ಹೆಚ್ಚು ಬಳಕೆಯಾಗುತ್ತ ಬಂದಿತು. ಬಳಕೆಯಾದಹಾಗೆಲ್ಲ ಆ ಹೆಸರಿನ ಪವಾಡಸದೃಶ ಶಕ್ತಿಯು ಅರಿವಾಗುತ್ತ ಬಂದಿತು. ಅವರ ಹೆಸರಿನಿಂದಲೇ ಎಲ್ಲವೂ ಆಗುವಾಗ ಅವರ ತತ್ತ್ವಗಳಿಂದ ಸಿದ್ಧಾಂತಗಳಿಂದ ಏನಾಗಬೇಕಾಗಿದೆ ? ಅವುಗಳ ಅನುಕರಣೆಯೂ ಕಠಿಣತಮ ಮಾರ್ಗವೇ ಆಗಿತ್ತು. ಆದ್ದರಿಂದ ಮಾನವಸಹಜ ಆಸೆ 'ಗಾಂಧಿ' ಎಂಬ ಮಂತ್ರೋಚ್ಚಾರಣೆಯಿಂದ ಎಲ್ಲವನ್ನು ಸುಲಭೀಕರಣಗೊಳಿಸುತ್ತ ನಡೆಯಿತು. ಜನ ಹೆಚ್ಚುಹೆಚ್ಚಾಗಿ ಅವರ ಹೆಸರಿಗೆ ಜೋತುಬೀಳತೊಡಗಿದರು. ಕಡಗೊಮ್ಮೆ, ಎಂದಿಗಿಂತ

ಇಂದಿನ ಪರಿಸ್ಥಿತಿಗೆ ಹೆಚ್ಚು ಅನ್ವಯವಾಗುವಂತಿರುವ, ಸಾರ್ವಕಾಲಿಕ ಹಿತವಚನವನ್ನು ಗಾಂಧೀಜಿಯವರೇ ಹೇಳಬೇಕಾಯಿತು :

"ನನ್ನ ಅನಂತರ ಏನಾಗುತ್ತದೆ ಎಂಬುದನ್ನು ತಿಳಿಯುವ ಚಿಂತೆ ನನಗಿರಕೂಡದು. ಆದುದರಿಂದ ನನ್ನನ್ನು ಮರೆತುಬಿಡಿ. ನೀವು ಭದ್ರವಾಗಿ ಅಂಟಿಕೊಳ್ಳಬೇಕಾದುದು ನನ್ನ ಹೆಸರಿಗಲ್ಲ, ತತ್ವಗಳಿಗೆ."

ಪ ದ ಒಃ ಹ್ನೆ

# ಗಾಂಧಿ ಸೂತ್ರಗಳು

**ಬಿ. ಶಾಮಸುಂದರ**

ಗಾಂಧೀಜಿಯವರ ಕಾಲದಲ್ಲಿ ಹಾಗೂ ನಂತರದ ಕೆಲವು ವರ್ಷಗಳಲ್ಲಿ ಖಾದಿ ಜುಬ್ಬ, ಖಾದಿ ದಟ್ಟಿ, ಖಾದಿ ಟೋಪಿ ಇವುಗಳಿಗೆ ಬಹು ಮಹತ್ವವಿತ್ತು, ಗೌರವವಿತ್ತು. ಹಿಂದೆ ಇವು ರಾಷ್ಟ್ರಭಕ್ತರ, ಸ್ವಯಂಸೇವಕರ ಗೌರವದ ಉಡುಪಾಗಿತ್ತು, ದೇಶಭಕ್ತಿಯ ಗುರುತಾಗಿತ್ತು. ಈಗ ಬರಿಯ ರಾಜಕೀಯ ವ್ಯಕ್ತಿಗಳ ಗುರುತಾಗಿವೆ. ಸಾಮಾನ್ಯರು ಈಗ ಖಾದಿಗೆ ಹೆಚ್ಚು ಗೌರವವನ್ನು ಕೊಡುತ್ತಿಲ್ಲ. ಅದಕ್ಕೆ ಇಂದಿನ ಸಾಮಾಜಿಕ, ರಾಜಕೀಯ ಪರಿಸ್ಥಿತಿಯೇ ಮುಖ್ಯ ಕಾರಣಗಳೆನ್ನಬಹುದು. ಇಷ್ಟೆಲ್ಲ ಅವನತಿಯನ್ನು ನಾವು ಗುರುತಿಸಿದರೂ ಹಿಂದಿನ ತಲೆಮಾರಿನ ನಿಜವಾದ ಗಾಂಧಿ ಮತ್ತು ಖಾದಿ ಭಕ್ತರು ಈಗಲೂ ಅಪರೂಪಕ್ಕೆ ಒಬ್ಬರು ಸಿಗುತ್ತಾರೆ. ಆ ಬಗೆಯ ಹಳೆಯ ತಲೆಮಾರಿನವರಲ್ಲಿ ಶ್ರೀ ಜಿ. ಪಿ. ನಾರಾಯಣಮೂರ್ತಿಯವರೂ ಒಬ್ಬರು. ಗಾಂಧಿ ತತ್ವಗಳ ನಿಷ್ಠ ಅನುಯಾಯಿಗಳಲ್ಲಿ ಒಬ್ಬರಾದ ಇವರು ತಮ್ಮ ಜೀವನವನ್ನು ಗಾಂಧೀಮಾರ್ಗದಲ್ಲೇ ಸವೆಸಿದರು. ಪ್ರಸ್ತುತ ಶ್ರೀ ಜಿ. ಪಿ. ನಾರಾಯಣಮೂರ್ತಿಯವರು ಶ್ರೀ ಡಿ. ಎಸ್. ಶರ್ಮಾ, ಎಂ.ಎ., ಪ್ರಾಧ್ಯಾಪಕ, ವಿವೇಕಾನಂದ ಕಾಲೇಜ್, ಮದರಾಸು. ಅವರ ಗಾಂಧೀಯವರ ಸೂತ್ರಗಳನ್ನು ಕುರಿತಾದ ಪುಸ್ತಕವನ್ನು ಕನ್ನಡಕ್ಕೆ ಭಾಷಾಂತರಿಸಿ "ಗಾಂಧಿಸೂತ್ರಗಳು"—ಪುಸ್ತಕವನ್ನು ನಮಗೆ ಇತ್ತಿದ್ದಾರೆ. ಇದೊಂದು ಬಹು ಹಳೆಯ ಪುಸ್ತಕ. 30ನೆಯ ಜನವರಿ 1949ರಲ್ಲಿ ಪ್ರಕಟವಾಗಿದೆ. ಪ್ರಸಿದ್ಧ ಮಿಂಚಿನ ಬಳ್ಳಿಯ ಪ್ರಕಾಶನ ಹಾಗೂ ಶ್ರೀ ಬುರ್ಲಿ ಬಿಂದು ಮಾಧವರ ಸಂಪಾದಕತ್ವದಲ್ಲಿ ಹೊರ ಬಂದಿದೆ. ಆಗ ಅಂದರೆ 1949ರಲ್ಲಿ ಇದೊಂದು ಬಹು ಮಹತ್ವದ ಪ್ರಕಟಣೆ ಮತ್ತು ಅಮೂಲ್ಯ ಗ್ರಂಥವಾಗಿತ್ತೆಂದು ಹೇಳಬಹುದು. ಗಾಂಧೀಜಿಗೆ, ಗಾಂಧಿತತ್ವಗಳಿಗೆ ಬಹಳ ಗೌರವವಿದ್ದ ಕಾಲ ಅದು. ಆದರೆ ಈಗ ಈ ಗ್ರಂಥಕ್ಕೆ ಅಷ್ಟೇ ಮಹತ್ವವಿದೆ ಯೆಂದು ಹೇಳಲಾರೆ. ಕಾಲ ಬದಲಾದಂತೆ, ಸಾಮಾಜಿಕ, ರಾಜಕೀಯ ಬದಲಾವಣೆ ಗಳಾದಂತೆ ಮಾನವ ಕಲ್ಪಿತ ಮೌಲ್ಯಗಳೂ ಬದಲಾಗುತ್ತ ಬರುತ್ತವೆ. ಅದಕ್ಕೆ ನಾನಾ ಕಾರಣಗಳನ್ನು ಕೊಡಬಹುದು. ಸದ್ಯಕ್ಕೆ ಅದು ಅಪ್ರಸ್ತುತವಾಗಿದ್ದು ನೇರ ವಾಗಿ ಪುಸ್ತಕದ ಕಡೆ ಗಮನ ಹರಿಸೋಣ.

ಗಾಂಧಿಯವರನ್ನು ಅರಿತುಕೊಳ್ಳಲು ಈ ಸೂತ್ರಗಳು ಒಂದು ಬಗೆಯ ಮಾರ್ಗದರ್ಶಿಗಳಾಗಿವೆ ಎನ್ನಬಹುದು. ಗಾಂಧಿಯಂತಹ ವ್ಯಕ್ತಿ ಇದ್ದರೇನು ?

ಎಂದು ಪ್ರಶ್ನೆ ಕೇಳುವ ಈ ಕಾಲದಲ್ಲಿ ಗಾಂಧಿಸೂತ್ರಗಳನ್ನು ನಮ್ಮ ಇಂದಿನ ಜನಾಂಗಕ್ಕೆ ಹೆಚ್ಚು ಪರಿಚಯ ಮಾಡಿಕೊಟ್ಟು ಅವರ ಒಳಿತು ಕೆಡಕುಗಳ ವಿಚಾರ ಮಾಡಿ ಒಳ್ಳೆಯದನ್ನು ಅನುಸರಿಸುವಂತೆ ಮಾಡಬೇಕಾದದ್ದು ಇಂದಿನವರ ಕರ್ತವ್ಯ. ದೇವರ, ದೇಶಭಕ್ತಿ, ಗಾಂಧಿ ಎಂದರೆ ಹಾಸ್ಯ ಮಾಡುವ ಡಿಸ್ಕೋ ಸಂಗೀತಕ್ಕೆ ಮಾರುಹೋಗಿ ಕುಣಿದಾಡುವ, ಮುಕ್ತ ಲೈಂಗಿಕ ಸಂಪರ್ಕ ಬಯಸುವ ವಿದೇಶಿ ಪ್ರಚಾರಕ್ಕೆ ಮರುಳಾಗಿರುವ ಮತ್ತು ಜಾತಿ ಪದ್ಧತಿಗಳ ತೊಡಕಿನಲ್ಲಿ ಸಿಕ್ಕು ನರಳುತ್ತಿರುವ ನಮ್ಮ ಇಂದಿನ ಜನಾಂಗದ ಸ್ಥಿತಿ ಒಂದು ಬಗೆಯಲ್ಲಿ ಬೇಸರಕೆ ತರಿಸುವಂತಹದಾಗಿದೆ. ಗಾಂಧಿಯನ್ನು ಅರಿತುಕೊಳ್ಳಲು ಎಷ್ಟು ಮಂದಿ ಯುವ ಜನರು ಆಸಕ್ತಿ ತೋರುತ್ತಾರೆಂದರೆ ನಮಗೆ ಬಹು ನಿರಾಶೆಯಾಗುವಷ್ಟು. ಒಟ್ಟಿನಲ್ಲಿ ಇಂದು ಪರಿಸ್ಥಿತಿ ಹೇಗಿದೆ ಎಂದರೆ ಮತ್ತೊಮ್ಮೆ ಗಾಂಧಿ ಹುಟ್ಟಿ ಬರಬೇಕಾಗಿದೆ.

ಹಿಂದೆ ಒಬ್ಬ ಅಮೇರಿಕ ಪ್ರವಾಸಿಯನ್ನು "ನೀವು ಭಾರತಕ್ಕೆ ಬಂದ ಉದ್ದೇಶವೇನು?" ಎಂದು ಪ್ರಶ್ನಿಸಿದಾಗ ಆತ "ಹಿಮಾಲಯ, ತಾಜಮಹಲ್ ಮತ್ತು ಮಹಾತ್ಮಾಗಾಂಧಿಯವರನ್ನು ನೋಡಲು" ಎಂದುತ್ತರವಿತ್ತನಂತೆ. ಹಿಮಾಲಯದಷ್ಟು ಘನ ವ್ಯಕ್ತಿತ್ವ ಪಡೆದಿದ್ದ ಗಾಂಧಿಯವರ ಬಗ್ಗೆ ಆಗಿನ ಜನಾಭಿಪ್ರಾಯ ಹೇಗಿತ್ತೆಂಬುದು ಇದರಿಂದ ತಿಳಿದು ಬರುತ್ತದೆ. "ಅಂತಹ ಗಾಂಧಿ" "ನಾನೇನು ಮಹಿಮಾ ಪುರುಷನಲ್ಲ. ಮಾನವ ಸಹಜವಾದ ಗುಣದೋಷಗಳಿಗೆ ನಾ ಹೊರತಾಗಿಲ್ಲ" (ಯಂಗ್ ಇಂಡಿಯಾ, 15-12-1927) ಎಂದು ನಮ್ರರಾಗಿ ಹೇಳಿದ್ದಾರೆ. ಹಾಗೆಯೇ ತಮ್ಮ ತತ್ವಗಳನ್ನು ಕುರಿತು-"ಗಾಂಧೀವಾದವೆಂಬುದಿಲ್ಲ. ನಾನೊಂದು ಮತಕಟ್ಟಿ ನನ್ನ ಹಿಂದೆ ಶಿಷ್ಯಪರಂಪರೆಯನ್ನು ಬಿಡಬೇಕೆಂಬ ಆಸೆಯಿಲ್ಲ." (ಹರಿಜನ, 28-3-1936) ಎಂದಿದ್ದಾರೆ.

ದೇವರ ಇರುವಿಕೆ ಬಗ್ಗೆ ಗಾಂಧಿಯವರ ಈ ಮಾತುಗಳು ಗಮನಾರ್ಹವಾದವು- "ದೇವರ ಸ್ವರೂಪವನ್ನು ಚರ್ಚಿಸಿ ತಿಳಿದುಕೊಳ್ಳಲಾಗುವುದಿಲ್ಲ. ವಾದಿಸಿ ತೋರಿಸಲು ಸಾಧ್ಯವಿಲ್ಲ. ಆದರೂ 'ಅವನ' ಇರುವಿಕೆಯ ವಿಷಯದಲ್ಲಿ ನನ್ನ ಇರುವಿಕೆಗಿಂತಲೂ ಹೆಚ್ಚಿನ ನಂಬಿಕೆ ನನಗಿದೆ" ಎಂದು ದೇವರಲ್ಲಿ ತಮಗಿರುವ ಅಚಲ ನಂಬಿಕೆಯನ್ನು ತೋರಿಸಿದ್ದಾರೆ. (ಹರಿಜನ. 14-5-1928). ಹಿಂದೂ ಧರ್ಮ ಕುರಿತು ಗಾಂಧಿಯವರು ಹೇಳುವ ಮಾತುಗಳು ಇಂತಿವೆ—"ಹಿಂದೂ ಧರ್ಮದ ಸಾರವೇನೆಂದು ಯಾರಾದರೂ ನನ್ನನ್ನು ಪ್ರಶ್ನಿಸಿದರೆ ಅಹಿಂಸಾ ಮಾರ್ಗದಲ್ಲಿ ಸತ್ಯಾನ್ವೇಷಣೆ ಎಂಬುದೇ ನನ್ನ ಉತ್ತರ" ಎಂದಿದ್ದಾರೆ. (ಯಂಗ್ ಇಂಡಿಯಾ. 10-4-1921) ಪ್ರಾಣಿದಯೆ ಕುರಿತು ಗಾಂಧೀಜಿ ಹೇಳಿರುವ ಈ ಮಾತುಗಳು ಯೋಚಿಸಬೇಕಾದವು-"ಒಂದು ಹಾವಿನ ಪ್ರಾಣಕ್ಕಿಂತ ನನ್ನ ಪ್ರಾಣ ಹೆಚ್ಚೆಂದು ನಾನು ಭಾವಿಸುವುದಿಲ್ಲ. ಅನ್ಯ

ನನ್ನನ್ನು ಚಚ್ಚಿ ಸಾವಿಗೆ ಗುರಿಮಾಡಿದರೂ ನಾನು ಅವನ್ನು ಕೊಲ್ಲಲು ಬಯಸು ವುದಿಲ್ಲ. ಕ್ರೂರ ಜಂತುಗಳನ್ನೆಲ್ಲಾ ಸ್ನೇಹ ಮಮತೆಯಿಂದ ಕಾಣುವಷ್ಟು ಧೈರ್ಯ ಶಕ್ತಿ ನನಗಿನ್ನೂ ಬಂದಿಲ್ಲವೆಂದು ಒಪ್ಪಿಕೊಳ್ಳುತ್ತೇನೆ. ಹಾವು, ಹುಲಿ, ಇತ್ಯಾದಿ ಕ್ರೂರ ಜಂತುಗಳನ್ನು ಭಗವಂತ ಏಕೆ ಸೃಷ್ಟಿಸಿದ್ದಾನೆ? ಎಂದು ಪ್ರಶ್ನೆ ಮಾಡಿರಿ. ನಾವು ನಮ್ಮ ಮನಸ್ಸಿನಲ್ಲಿ ಹುದುಗಿಡಬಹುದಾದ ಕೆಟ್ಟ ಭಾವನೆಯಂತೆ ಪ್ರಕೃತಿಯಲ್ಲೂ ಇವೆ ಎಂದು ಸೂಚಿಸುವುದಕ್ಕಾಗಿ ಎಂದು ನನ್ನ ಉತ್ತರ" ಎಂದು (ಯಂಗ್ ಇಂಡಿಯಾ, 14-4-1927) ಒಂದು ಕಡೆ ಹೇಳಿದರೆ ಮತ್ತೊಂದೆಡೆ "....ನನ್ನ ಆಶ್ರಮದಲ್ಲಿ ಕಂಡುಬಂದ ಹಾವುಗಳನ್ನು ಅಪಾಯವಿಲ್ಲದ ರೀತಿಯಲ್ಲಿ ಸಾಗಿಸಲು ಸಾಧ್ಯವಿಲ್ಲದಿದ್ದರೆ ಅವುಗಳನ್ನು ಕೊಂದುಹಾಕಲು ಹೇಳುತ್ತೇನೆ. ಆಶ್ರಮಕ್ಕೆ ನುಗ್ಗಿ ಬರುವ ದನಗಳನ್ನು ಓಡಿಸಲು ಏಟು ಕೊಡಲೂ ಹೇಳಿದ್ದೇನೆ. ಈ ಎಲ್ಲ ದೃಷ್ಟಿಗಳಿಂದ ಪ್ರತ್ಯಕ್ಷವಾಗಿಯೋ, ಪರೋಕ್ಷವಾಗಿಯೋ ನಾನು ಮಾಡುವ ಹಿಂಸೆಗೆ ಲೆಕ್ಕವಿಲ್ಲ. ಈ ಬಗೆಯ ನನ್ನ ಹೇಳಿಕೆ ಯಿಂದ ಮಿತ್ರರು ನಾನು ಅಹಿಂಸಾ ಆಚರಣೆಯ ವಿಷಯದಲ್ಲಿ ನಿರಾಶನಾಗಿದ್ದೇನೆಂದು ಭಾವಿಸಬಾರದು" ಎಂದಿದ್ದಾರೆ. (ಯಂಗ್ ಇಂಡಿಯಾ, 1-11-1928), ಗಾಂಧೀವಾದ. ಗಾಂಧಿತತ್ತ್ವಗಳನ್ನು ಸರಿಯಾಗಿ ತಿಳಿದುಕೊಂಡು ಅವುಗಳಿಗೆ ತಕ್ಕಂತೆ ನಡೆಯುವುದು ಸುಲಭವಲ್ಲ. ದೇಹಕ್ಕೆ ಬುದ್ಧಿಗೆ–ಬಾಹ್ಯ ಹಾಗೂ ಅಂತಃಕರಣ ಎರಡಕ್ಕೂ ತಕ್ಕ ಕೆಲಸ ದೊರಕಿ ಸಾಣೆಗೆ ಹಿಡಿದ ವಸ್ತುಗಳಂತೆ ನಾವು ಆಗುತ್ತೇವೆ. ಕೆಲವೊಮ್ಮೆ ಗಾಂಧಿತತ್ತ್ವ ಗಳನ್ನು ಒಪ್ಪಲಿಕ್ಕೆ ಆಗದೆ. ಆಚರಣೆಗೆ ದುಸ್ಸಾಧ್ಯವೆನಿಸಿ ತ್ಯಜಿಸಬೇಕಾಗುತ್ತದೆ.

ಗಾಂಧೀಜಿ ಗೋರಕ್ಷಣೆ ಕುರಿತು "ಗೋಶಾಲೆಗಳು ಪೂರ್ತಿಯಾಗಿ ಗೋವುಗಳಿ ಗಾಗಿಯೇ ಇರಬೇಕು. ಹಾಗಿಲ್ಲದೆ ಎಮ್ಮೆಗಳೂ, ಮೇಕೆಗಳೂ ಇತ್ಯಾದಿ ಪ್ರಾಣಿಗಳಿಗೂ ಅವಕಾಶ ಸಿಕ್ಕಿದರೆ ಪ್ರಯೋಜನವಿಲ್ಲ. (ಯಂಗ್ ಇಂಡಿಯಾ, 31-3-1927) ಎಂದಿ ದ್ದಾರೆ. ಪ್ರಾಣಿದಯೆಯುಳ್ಳವರಿಗೆ ಮೇಕೆ, ಹಸು, ಎಮ್ಮೆ ಒಂದೇ ಅಲ್ಲವೆ. ಹಾಗಿದ್ದೂ ಈ ತಾರತಮ್ಯವೇಕೆ ಎನಿಸುತ್ತದೆ. ಹಿಂದುಗಳ ವೃಕ್ಷಪೂಜೆ ಕುರಿತು ಗಾಂಧಿಯವರು "ಹಿಂದುಗಳಲ್ಲಿ ವೃಕ್ಷಪೂಜೆಯ ಪದ್ಧತಿಯಿದೆ. ಇದಕ್ಕೆ ಕೆಲವರ ಆಕ್ಷೇಪಣೆಯುಂಟು. ಆದರೆ ಇದು ಸಮಗ್ರ ಸಸ್ಯವರ್ಗಕ್ಕೆ ಮಾನವನ ಕೃತಜ್ಞತೆ ಮತ್ತು ಪ್ರೇಮಗಳನ್ನು ಸೂಚಿ ಸುವ ಸಂಕೇತವಾಗಿದೆ. ಹಾಗೆಯೇ ಸೌಂದರ್ಯದಿಂದ ಕೂಡಿದ ವಿಶ್ವ ಸೃಷ್ಟಿಕರ್ತ ನನ್ನು ಮನಸಾರ ವಂದಿಸುವುದು ಎಂದರ್ಥವಾಗುತ್ತದೆ." (ಯಂಗ್ ಇಂಡಿಯಾ, 26-9-1929) ಎಂದು ವೃಕ್ಷಪೂಜೆಯ ಮಹತ್ವವನ್ನು ಸಾರಿದ್ದಾರೆ. ನಮ್ಮ ದೇಶಕ್ಕೆ ಒಂದು ಬಗೆಯ ಶಾಪವಾಗಿರುವ ವರ್ಣ ಮತ್ತು ಜಾತಿ ಕುರಿತ ಗಾಂಧೀಜಿ ಯವರ ಅನಿಸಿಕೆಯನ್ನು ಅವರ ಮಾತಿನಲ್ಲೇ ಗಮನಿಸೋಣ—"ಹಿಂದೂ ಧರ್ಮದ ಚತುರ್ವರ್ಣ ವಿಂಗಡಣೆಯನ್ನು ನಾನು ಒಪ್ಪಿಕೊಂಡಿದ್ದೇನೆ. ಆದರೆ ಅಸ್ಪೃಶ್ಯತೆಯು ಮಾನವನ ಧರ್ಮಕ್ಕೆ ಅಕ್ಷಮ್ಯ ಕಲಂಕವೇ ಸರಿ. ಯಾವಾಗ ಅದು ಹಿಂದೂ ಸಮಾಜ

ದೀವ ಹೋಗುತ್ತದೆಯೋ ಆಗ ಹಿಂದೂ ಧರ್ಮಕ್ಕೆ ಕಳೆ ಏರುತ್ತದೆ. ಅಸ್ಪೃಶ್ಯತೆಯು ಶಾಸ್ತ್ರಾಧಾರದಿಂದ ಕೂಡಿದೆಯೆಂದು ಕೆಲವರು ಹೇಳುತ್ತಾರೆ. ಅಂತಹ ಶಾಸ್ತ್ರಗಳು ಅಪಶಾಸ್ತ್ರಗಳೆಂದು ನಾನು ನಿಸ್ಸಂದೇಹವಾಗಿ ಘೋಷಿಸುತ್ತೇನೆ." (ಯಂಗ್ ಇಂಡಿಯಾ, 8-12_1920) ಎಂದು ಹೇಳಿದ್ದಲ್ಲದೆ "...ಜಾತಿ ಪದ್ಧತಿ ಹಿಂದೂ ಸಮಾಜಕ್ಕೆ ಅನಿಷ್ಟಕಾರಕವಾಗಿದೆ. ಅದು ಹೋದ ಹೊರತೂ, ಹಿಂದೂಧರ್ಮ ಮತ್ತು ಸಮಾಜಗಳು ಏಳಿಗೆಗೆ ಬರಲಾರವು." (ಪ.ಪಿ.ಇ. 16–4–1945.) ಎಂದು ಹೇಳಿದ್ದಾರೆ. ಹಾಗೆಯೇ "ಸಹಭೋಜನ, ಅಂತರ್ಜಾತೀಯ ವಿವಾಹ ಇವುಗಳಿಂದ ಮಾನವನಿಗೆ ಜನ್ಮದಿಂದ ಬಂದ ಸ್ಥಾನ ಚ್ಯುತವಾಗುತ್ತದೆಂದು ನಾನು ಭಾವಿಸುವುದಿಲ್ಲ. ನಾಲ್ಕು ವರ್ಣಗಳು ಮಾನವನ ವಿವಿಧ ಭೌತಿಕ ಜಗತ್ತಿನಲ್ಲಿ ಜೀವನೋಪಾಯದ ಮಾರ್ಗವನ್ನು ಸೂಚಿಸುತ್ತವೇ ಹೊರತು ಪರಸ್ಪರ ಸಂಸರ್ಗ, ಮಿಲನ ಜೀವನ, ಕೂಟ ಜೀವನ, ಇವನ್ನು ನಿಷೇಧಿಸುವುದಿಲ್ಲ. ವರ್ಣಗಳು ಕರ್ತವ್ಯಗಳನ್ನು ಸೂಚಿಸುತ್ತವೆಯೇ ಹೊರತು ಹಕ್ಕುಬಾಧ್ಯತೆಗಳನ್ನಲ್ಲ. ಉಚ್ಚ ನೀಚ ಎಂಬ ಭಾವನೆ ಹಿಂದೂ ಮತಕ್ಕೆ ಕಳಂಕಪ್ರಾಯವೆಂದು ನನ್ನ ಅಭಿಪ್ರಾಯ." (ಯಂಗ್ ಇಂಡಿಯಾ 6-10–1921.) ಎಂದು ಸಾರಿದ್ದಾರೆ. ಗಾಂಧಿಯವರಿಗೆ ಹರಿಜನರ ಏಳಿಗೆಯೇ ಹಿಂದೂಧರ್ಮದ ಏಳಿಗೆ ಎಂದು ತಿಳಿದಿದ್ದು ಹೋದ ಕಡೆಯೆಲ್ಲ ಅದನ್ನು ಜನರಿಗೆ ತಿಳಿಸಿ ಹೇಳುತ್ತಿದ್ದರು. ಇದರ ಬಗ್ಗೆ ಹರಿಜನ ಮತ್ತು ಯಂಗ್ ಇಂಡಿಯಾ ಪತ್ರಿಕೆಗಳಲ್ಲಿ ಬಹಳಷ್ಟು ಬರೆದರು. ಅದರಲ್ಲಿ ಒಂದು ತುಣುಕು ಈ ರೀತಿಯಿದೆ–"ಅಸ್ಪೃಶ್ಯರನ್ನು 'ಅಂತ್ಯಜ'ರೆನ್ನುವುದಕ್ಕೆ ಪ್ರತಿಯಾಗಿ 'ಹರಿಜನ'ರೆಂಬುದಾಗಿ ಸಂಬೋಧಿಸಬೇಕೆಂದು ನನ್ನ ಗೆಳೆಯರೊಬ್ಬರು ಸೂಚಿಸಿದರು. ಈ ಶಬ್ದವನ್ನು ಸಾಧು ನರಸಿಂಹ ಮೆಹತಾರವರು ಉಪಯೋಗಿಸಿದರು. ಅವರು ಬ್ರಾಹ್ಮಣರಾದರೂ ಅಸ್ಪೃಶ್ಯರನ್ನು ತಮ್ಮವರೆಂಬುದಾಗಿ ತಿಳಿದು ವರ್ತಿಸಿದರು. ಅಷ್ಟು ದೊಡ್ಡ ಸಾಧುಗಳಿಂದ ಪ್ರಯೋಗವಾದ ಶಬ್ದವನ್ನು ಬಳಸಲು ನನಗೆ ಪ್ರಿಯವೆನಿಸಿತು. ಹರಿಜನರೆಂದರೆ ದೇವರಿಗೆ ಪ್ರಿಯರಾದ ಜನರೆಂದು ಅರ್ಥ. ಆದರೆ ನನಗೆ ಈ ಶಬ್ದ ಇನ್ನೂ ಗೂಢವಾದ ಅರ್ಥದಿಂದ ಕೂಡಿದೆ. ಅಸ್ಪೃಶ್ಯರು ಹರಿಜನರಾದರೆ ನಾವು ದುರ್ಜನರು, ಪಾಪಿಗಳು. ನಮ್ಮ ನೈರ್ಮಲ್ಯ ಮತ್ತು ಸುಖಕ್ಕಾಗಿ ಅಸ್ಪೃಶ್ಯರು ಎಷ್ಟೋ ಅಸಹ್ಯವಾದ ಕಷ್ಟಕರವಾದ ಕೆಲಸವನ್ನು ಮಾಡುತ್ತಾರೆ. ಅವರನ್ನು ನಾವು ತುಂಬಾ ತುಳಿದುಹಾಕಿದ್ದೇವೆ. ಅಸ್ಪೃಶ್ಯರಲ್ಲಿ ಕಂಡುಬರುವ ಎಲ್ಲ ಲೋಪದೋಷಗಳಿಗೂ ನಾವೇ ಕಾರಣೀಭೂತರು. ಅಸ್ಪೃಶ್ಯರಿಗೆ ನಾವು ಮಾಡಿರುವ ಪಾಪಗಳಿಗಾಗಿ ಮನಃಪೂರ್ತಿಯಾಗಿ ಪರಮಾತ್ಮನಲ್ಲಿ ಕ್ಷಮೆ ಬೇಡಬೇಕು." (ಯಂಗ್ ಇಂಡಿಯಾ, 7–8–1931) ಬ್ರಾಹ್ಮಣರೆಂಬ ಗರ್ವದಿಂದ ಮೆರೆದ ಕೆಲವು ಮಂದಿಯನ್ನು ಕುರಿತು ಗಾಂಧಿಯವರು ಹೇಳಿರುವ ಈ ಮಾತುಗಳನ್ನು ಗಮನಿಸಿ –

"...ಹಿಂದೂ ಧರ್ಮಕ್ಕೆ ಎಲ್ಲ ಬಾಳೂ ಒಂದೇ. ಒಂದು ವೇಳೆ ಬ್ರಾಹ್ಮಣನು ಇತರ ವರ್ಣಗಳಿಗಿಂತ ನಾನು ಶ್ರೇಷ್ಠನೆಂದು ಹೇಳಿಕೊಂಡರೆ ಅದು ಅಹಂಭಾವವಾಗು

ತ್ತದೆ. ಪ್ರಾಚೀನ ಕಾಲದ ಬ್ರಾಹ್ಮಣರೆಂದೂ ಹಾಗೆ ಹೇಳಿಕೊಳ್ಳಲಿಲ್ಲ. ತಾವು ಉಚ್ಚ ವರ್ಣದವರೆಂದು ಹೇಳಿಕೊಂಡದ್ದರಿಂದ ಅವರಿಗೆ ಸಮಾಜದಲ್ಲಿ ಪುರಸ್ಕಾರ ದೊರೆಯಲಿಲ್ಲ....ಇಂದಿನ ಪುರೋಹಿತರೂ, ಪೂಜಾರಿಗಳೂ ಹಿಂದಿನ ಬ್ರಾಹ್ಮಣರಿಗೆ ಸಮನಲ್ಲ." (ಯಂಗ್ ಇಂಡಿಯಾ, 20–9–1928) ಅಹಿಂಸೆ ಹೇಡಿಗಳ ಅಸ್ತ್ರವಲ್ಲ, ಅದು ಬಲಿಷ್ಠರ ಬಲವೆಂಬುದು ಗಾಂಧಿಯವರ ವಾದ. ಆತ್ಮಗೌರವ ರಕ್ಷಣೆಗೆ ಹಿಂಸೆ ಮಾಡಲೂ ಹಿಂಜರಿಯಬಾರದು ಎನ್ನುವ ಗಾಂಧೀಜಿಯವರು ಭಾರತ ತನ್ನ ಆತ್ಮ ಗೌರವ ರಕ್ಷಣೆಗೆ ಶಸ್ತ್ರಧಾರಣೆ ಮಾಡಬಹುದೆಂದು ಹೇಳಿದ್ದಾರೆ. (ಯಂಗ್ ಇಂಡಿಯಾ, 11–8–1920) ರಾಷ್ಟ್ರ ವಿಕಾಸ ಕುರಿತು ಗಾಂಧಿಯವರು ಹೇಳಿರುವ ಮಾತು ಸರ್ವ ಕಾಲಕ್ಕೂ ಅನ್ವಯವಾಗುವಂತಿವೆ. ಇಂದಿನ ನಮ್ಮ ರಾಷ್ಟ್ರದ ಪರಿಸ್ಥಿತಿಯನ್ನು ಗಮನಿಸಿ ದರೆ ಆ ಮಾತುಗಳನ್ನು ಮತ್ತೊಮ್ಮೆ ನಮ್ಮ ಜನರಿಗೆ ನೆನಪು ಮಾಡಿಕೊಡಬೇಕೆನಿಸು ತ್ತದೆ. ಗಾಂಧಿಯವರು ಹೇಳಿರುವ ಈ ಅಮೂಲ್ಯ ಮಾತುಗಳಿವು—"ಅಶಿಸ್ತಿನ ಚಳು ವಳಿ, ಹಿಂಸೆಯ ಮಾತು ಮತ್ತು ಕಾರ್ಯ ಇವುಗಳು ರಾಷ್ಟ್ರದ ಬೆಳವಣಿಗೆಯನ್ನು ನಿಧಾನ ಮಾಡುತ್ತವೆ. ಇವುಗಳ ಫಲವಾಗಿ ಸೇಡನ್ನು ತೀರಿಸಿಕೊಳ್ಳುವ ಮನೋ ಧರ್ಮವು ಜನಿಸುತ್ತದೆ. ರಾಷ್ಟ್ರದ ವಿಕಾಸಕ್ಕೆ ಶಿಸ್ತಿನ ಚಳುವಳಿಯೇ ಕಾರಣೀಭೂತ ವಾಗುತ್ತದೆ." ಎಂದಿದ್ದಾರೆ. 'ಯಜ್ಞವಿಲ್ಲದೆ ಯಾರು ಭೋಜನ ಮಾಡುತ್ತಾರೋ ಅವರು ಕಳ್ಳರೇ ಸರಿ' ಅಂದರೆ ಇಲ್ಲಿ ಯಜ್ಞವೆಂದರೆ— ಕರ್ಮ, ದುಡಿತ, ಶ್ರಮ ಎಂದು ಅರ್ಥ. ಗಾಂಧಿಯವರು ಮೇ, 11. 1935ರ ಹರಿಜನದಲ್ಲಿ ಈ ರೀತಿ ಬರೆದಿ ದ್ದಾರೆ—"ಭಿಕ್ಷುಕನೇ ಆಗಲಿ ತನ್ನ ದಿನದ ಕರ್ಮ ಮಾಡಿದ ಹೊರತು ಆಹಾರಕ್ಕೆ ಅರ್ಹತೆ ಬರುವುದಿಲ್ಲ. ಹಾಗೆ ಕರ್ಮ ಮಾಡದಿದ್ದಲ್ಲಿ ಅವನಿಗೆ ಆಹಾರವಿಲ್ಲದೆ ಕಳಿಸಿ ಬಿಡಲು ನಾನು ಹಿಂಜರಿಯುವುದಿಲ್ಲ. ಅಶಕ್ತರಾದವರನ್ನು, ಕುಂಟರು, ಕುರುಡರು ಇವರನ್ನು ರಾಷ್ಟ್ರವೇ ಕಾಪಾಡಬೇಕು."

ವಿವಾಹ ಕುರಿತು ಗಾಂಧಿಯವರ ವಿಚಾರ ಈ ಬಗೆಯಲ್ಲಿದೆ—"ಹಿಂದೂ ಧರ್ಮವು ವಿವಾಹವನ್ನು ಮೋಕ್ಷ ಸಾಧನೆಗೆ ಅತ್ಯಂತ ಅವಶ್ಯಕವಾದ ಸಾಧನವೆಂದು ಹೇಳುವುದಿಲ್ಲ. ಜನನವು ಹೇಗೆ ಒಂದು ಪತನವೋ ವಿವಾಹವೂ ಹಾಗೆಯೇ." "ಅವಿವಾಹಿತ ಜೀವನ ಪೂರ್ಣ ಜೀವನವನ್ನು ಭಗವಂತನಿಗಾಗಿಯೇ ನಿವೇದಿಸಲು ಅವಕಾಶವನ್ನು ಕಲ್ಪಿಸು ತ್ತದೆ." "ಗಂಡಸರಿಗೆ ಹೇಗೋ ಹೆಣ್ಣು ಮಕ್ಕಳೂ ಹಾಗೆ ಅವಿವಾಹಿತರಾಗಿರುವುದು ಉತ್ಕೃಷ್ಟವೇ ಸರಿ. ಆದರೆ ವಸ್ತುತಃ ಹತ್ತು ಲಕ್ಷದಲ್ಲಿ ಒಬ್ಬರು ಈ ರೀತಿಯಲ್ಲಿರ ಬಹುದು. ಆದುದರಿಂದ ವಿವಾಹವು ಬಾಳಿಗೆ ಅತ್ಯಂತ ನೈಸರ್ಗಿಕವಾದುದು. ಅದನ್ನು ಕೀಳೆಂದು ಭಾವಿಸುವುದು ತಪ್ಪು" ಎಂದು ಯಂಗ್ ಇಂಡಿಯಾ ಮತ್ತು ಹರಿಜನದಲ್ಲಿ ಬರೆದಿದ್ದಾರೆ. ಹಾಗೆಯೇ ಬ್ರಹ್ಮಚರ್ಯವನ್ನು ಕುರಿತು—"....ಕೇವಲ ಕಾಮವನ್ನು ಜಯಿಸುವುದು ಬ್ರಹ್ಮಚರ್ಯವೆಂದು ಭಾವಿಸುತ್ತಾರೆ...ಬ್ರಹ್ಮಚರ್ಯವೆಂದರೆ ಎಲ್ಲ

ಇಂದ್ರಿಯಗಳ ಸಂಯಮನ." "ಮಾನವನಿಗೆ ಪೂರ್ಣ ಅಧ್ಯಾತ್ಮಿಕ ಜೀವನವು ಲಭಿಸ ಬೇಕಾದರೆ ಕಾಯಾ, ವಾಚಾ, ಮನಸಾ. ಬ್ರಹ್ಮಚರ್ಯೆಯು ಅವಶ್ಯಕ"ವೆಂದಿದ್ದಾರೆ.

ಭಾರತದ ಕೈಗಾರಿಕಾ ಪ್ರಗತಿಯಲ್ಲಿ ಗಾಂಧೀಜಿಯ ವಿಚಾರ ಅನೇಕರ ಮನಸ್ಸಿಗೆ ವಿರುದ್ಧವಾದುವಾಗಿತ್ತು. ಭಾರಿ ಕೈಗಾರಿಕೆಗಳ ವಿಸ್ತರಣೆ ಮತ್ತು ಯಂತ್ರದಾಸ್ಯ ಗಾಂಧೀಜಿಗೆ ಒಪ್ಪಿತವಲ್ಲ. ಮಾನವ ಕುಲ ತಾನೇ ನಿರ್ಮಿಸಿದ ಯಂತ್ರಗಳ ಗುಲಾಮ ನಾಗಬಾರದು. ಕೈಗಾರಿಕೆಗಳಲ್ಲಿ ಮಾನವ ಶಕ್ತಿ, ಬುದ್ಧಿಗಳ ಉಪಯೋಗ ಹೆಚ್ಚಿರಬೇಕು, ನಿರುದ್ಯೋಗ ನಿವಾರಣೆಯಾಗಬೇಕು ಇದು ಗಾಂಧೀಜಿಯವರ ಬಯಕೆ. ಇದನ್ನು ಕುರಿತು—"ಮಾನವನಿಂದ ಮಾಡಲು ಸಾಧ್ಯವಾದ ಕಾರ್ಯಕ್ಕೆ ದೊಡ್ಡ ಯಂತ್ರಗಳ ಸಹಾಯಬೇಕು. ಆ ಯಂತ್ರಗಳು ಪ್ರಭುತ್ವದ ಸ್ವಾಧೀನದಲ್ಲಿದ್ದು ರಾಷ್ಟ್ರದ ಎಲ್ಲ ಜನರ ಉಪಕಾರಕ್ಕೂ ದೊರೆಯಬೇಕು. ಅನೇಕ ಉದ್ಯೋಗವನ್ನು ಹಾಳುಮಾಡಿ ಕೆಲವರಿಗೆ ಮಾತ್ರ ಸಂಪತ್ತನ್ನು ಕೊಡುವ ಯಂತ್ರವನ್ನು ನಾನು ಒಪ್ಪಲಾರೆ" (ಹರಿಜನ. 22-6-1935) ಎಂದಿದ್ದಾರೆ. ಹಾಗೆ ಖಾದಿ ಮತ್ತು ಚರಕದ ಪ್ರಾಮುಖ್ಯತೆ ಯನ್ನೂ ಜನರಿಗೆ ತಿಳಿಸಿಕೊಟ್ಟರು—"ಚರಕದ ವಿಷಯದಲ್ಲಿ ತುಂಬಾ ಪ್ರತಿಭಟನೆ ಬಂದಿದೆ. ಏನೇ ಬರಲಿ ಇದು ರಾಷ್ಟ್ರೀಯ ಉದ್ಯಮವಾದ ಹೊರತು ದೇಶಕ್ಕೆ ಮೋಕ್ಷ ವಿಲ್ಲವೆಂದು ನಾನು ಒತ್ತಿ ಒತ್ತಿ ಹೇಳುತ್ತೇನೆ. ಈ ಕೈಗಾರಿಕೆಗೆ ಸಂಬಂಧಿಸಿದ ಅನೇಕ ಉಪಕಸುಬುಗಳೂ ಅಭಿವೃದ್ಧಿಗೆ ಬಂದು ನಿರುದ್ಯೋಗವೇ ಇಲ್ಲದಂತಾಗುತ್ತದೆಂದು ನನ್ನ ನಂಬಿಕೆ.

ಬಡತನದಿಂದ ಎಷ್ಟೋ ಹೆಣ್ಣುಮಕ್ಕಳು ಅನೀತಿ ಮಾರ್ಗಕ್ಕೆ ಹೋಗುತ್ತಾರೆ. ಭಿಕ್ಷುಕರಾಗುತ್ತಾರೆ. ಇವೆಲ್ಲವೂ ತಪ್ಪಿ ಹೋಗಲು ಅವಕಾಶವಿದೆ. ಚರಕವನ್ನು ದೇಶ ದಲ್ಲೆಲ್ಲಾ ಪ್ರಚಾರ ಮಾಡುವುದಕ್ಕಾಗಿ ನಾವು ಸರ್ಕಾರದೊಡನೆ ಹೋರಾಡಬೇಕು. ಪರದೇಶೀಯ ವಸ್ತ್ರಕ್ಕೆ ಬಹಿಷ್ಕಾರ ಹಾಕಿ ಸ್ವದೇಶಿ ವಸ್ತ್ರವನ್ನೇ ಪ್ರಚಾರ ಮಾಡಬೇಕು." ಎಂದು ಬರೆದರು. (ಯಂಗ್ ಇಂಡಿಯಾ, 22-9-1921) ಭಾರತದ ಅಭಿವೃದ್ಧಿ ಅದರ ಗ್ರಾಮಗಳ ಅಭಿವೃದ್ಧಿಯನ್ನು ಅವಲಂಬಿಸಿದೆ ಎಂದಿದ್ದಾರೆ. ಅದನ್ನು ಕುರಿತು "...ಹಳ್ಳಿಗಳು ಉತ್ತಮವಾದ ಹೊರತು ದೇಶವು ಉತ್ತಮವಾಗುವುದಿಲ್ಲವೆಂದು ನಾನು ಸಾರಿ ಹೇಳುತ್ತೇನೆ. ಹಳ್ಳಿಯು ಸುಲಿಗೆ ನಿಂತು ದೇಶವೆಲ್ಲ ಅಭಿವೃದ್ಧಿಯಾದರೆ ಅದೇ ಭಾರತದ ಅಭಿವೃದ್ಧಿ" ಎಂದು ಬರೆದರು. (ಹರಿಜನ. 29-8-1936). 'ರಾಷ್ಟ್ರೀಯ ಶಿಕ್ಷಣ ವಿಷಯದಲ್ಲಿ ನನ್ನ ಅಭಿಪ್ರಾಯಗಳನ್ನು ಸೂಕ್ಷ್ಮವಾಗಿ ತಿಳಿಸುತ್ತೇನೆ' ಎಂದು ಗಾಂಧೀಜಿ ತಮ್ಮ ಅಭಿಪ್ರಾಯವನ್ನು ಈ ಬಗೆ ಹೇಳಿದ್ದಾರೆ "(ಇಂದಿನ ಶಿಕ್ಷಣ) ವಿದೇಶೀಯ ಸಂಸ್ಕೃತಿಯ ಆಧಾರದ ಮೇಲೆ ನಿಂತಿದೆ. ದೇಶೀಯ ಸಂಸ್ಕೃತಿಯನ್ನು ಪೂರ್ಣವಾಗಿ ಕಡೆಗಾಣಿಸಿದೆ. ಹೃದಯ, ಕೈ, ಇವುಗಳ ಶಿಕ್ಷಣವನ್ನು ಪೂರ್ತಿಯಾಗಿ ನಿರ್ಲಕ್ಷಿಸಿ ತಲೆಗೆ ಮಾತ್ರ ಶಿಕ್ಷಣವನ್ನು ಕೊಡುತ್ತದೆ. ವಿದೇಶೀ ಭಾಷೆ ಮೂಲಕ

ನಿಜವಾದ ಶಿಕ್ಷಣವು ಸಾಧ್ಯವಾಗುವುದಿಲ್ಲ." (ಯಂಗ್ ಇಂಡಿಯಾ. 1-9-1921) ಹಾಗೇ ನಾಡ ಭಾಷೆ ಕುರಿತು "ಆಂಗ್ಲ ವಿದ್ಯಾಭ್ಯಾಸ ಮಾಡಿದ ಭಾರತೀಯ ಯುವಕನು ನಿರ್ವೀರ್ಯನಾಗಿ ಹೋಗಿದ್ದಾನೆ. ಭಾರತ ಬ್ರಿಟನ್ನಿನ ಸಂಬಂಧದಲ್ಲಿ ದೇಶೀಯ ಸಂಸ್ಕೃತಿಗೆ, ಮುಖ್ಯವಾಗಿ ಭಾಷೆಗೆ ಆಗಿರುವ ನಷ್ಟ ಯಾವುದರಿಂದಲೂ ಆಗಿಲ್ಲ" ಎಂದು ಬರೆದರು. (ಯಂಗ್ ಇಂಡಿಯಾ, 27-4-1921) ಇಂದು ಎಲ್ಲಿ ನೋಡಿದರೂ ಮತ, ಮತಾಂತರ ಇವುಗಳ ಮಾತೇ ನಡೆದಿದೆ. ಬಹಳ ಹಿಂದೆಯೇ ಗಾಂಧೀಜಿ ಇವನ್ನು ಕುರಿತು ಹೇಳಿರುವ ಮಾತು ನಾವು ಮರೆತದ್ದರಿಂದಲೇ ಈಗಿನ ಅನಾಹುತಗಳಿಗೆ ಕಾರಣವೆನ್ನಿಸುತ್ತಿದೆ. ಆ ಮಾತುಗಳು ಹೀಗಿವೆ–"...ಮತಾಂತರ ಹೊಂದಲೇಬಾರದೆಂದು ನನ್ನ ಭಾವನೆಯಲ್ಲ. ಅದರ ಕ್ರಮಕ್ಕೆ ಮಾತ್ರ. ಇಂದು ಅದೊಂದು ವ್ಯಾಪಾರವಾಗಿದೆ. ಒಂದು ಮತ ಪ್ರಚಾರಕ ಸಂಸ್ಥೆಯಲ್ಲಿ ವರ್ಷ ಒಂದಕ್ಕೆ ಮತಾಂತರ ಮಾಡಲು ಸರಾಸರಿ ಇಷ್ಟು ಖರ್ಚು ಬೀಳುತ್ತದೆ ಎಂಬ ವರದಿ ಓದಿದ್ದೇನೆ. ಇದು ವಿಚಿತ್ರವಲ್ಲವೆ? ಇದೇ ರಾಷ್ಟ್ರನಾಶಕವಾದುದು." (ಯಂಗ್ ಇಂಡಿಯಾ. 23 1931) ಇದೇ ವಿಷಯ ಕುರಿತು ಹರಿಜನದಲ್ಲಿ ಈ ರೀತಿ ಬರೆದರು – "ಸರಿಯಾಗಿ ಯೋಚಿಸಿದರೆ ಒಂದು ಮತದಿಂದ ಇನ್ನೊಂದು ಮತಕ್ಕೆ ಪರಿವರ್ತನೆ ಮಾಡುವುದೆಂಬುದೇ ಅರ್ಥಕಾಣಿಸುವುದಿಲ್ಲ. ಮತವು ಕೇವಲ ವ್ಯಕ್ತಿಗತವಾದದ್ದು. ವ್ಯಕ್ತಿಗೂ ಅವನ ಅಂತರಾತ್ಮಕ್ಕೂ ಸಂಬಂಧಪಟ್ಟದ್ದು. ನನ್ನ ನೆರೆಹೊರೆಯವರನ್ನು ಮತಾಂತರಗೊಳಿಸಬೇಕೆಂದು ನಾನು ಇಚ್ಛಿಸುವುದಿಲ್ಲ....." (ಹರಿಜನ. 28-9-1935) ಸತ್ಯಾಗ್ರಹ ಮತ್ತು ಅದರ ಮಹತ್ವ ಕುರಿತು ಗಾಂಧೀಜಿ ಹೇಳಿರುವ ಈ ಮಾತುಗಳು ಬಹು ಮನನೀಯ—"ಪೂರ್ಣ ಆತ್ಮತ್ಯಾಗವೂ. ಅತ್ಯಂತ ನಮ್ರತೆಯೂ. ಕೊನೆಯಿಲ್ಲದ ಸಹನೆಯೂ. ಉಜ್ವಲವಾದ ನಂಬಿಕೆಯೂ. ಸತ್ಯಾಗ್ರಹದ ಕುರುಹುಗಳು." (ಯಂಗ್ ಇಂಡಿಯಾ. 26-2-1925) ಉಪವಾಸ ಕುರಿತ ಅವರ ಅಭಿಪ್ರಾಯ ಈ ರೀತಿಯಿದೆ– "ಪೂರ್ಣ ಉಪವಾಸವು ಆತ್ಮ ನಿವೇದನ. 'ನನ್ನ ಜೀವ, ನನ್ನ ಸರ್ವಸ್ವ. ಎಲ್ಲವೂ ನಿನ್ನದು' ಎಂಬುದಾಗಿ ಹೇಳುವ ವಾಡಿಕೆ ನಮ್ಮಲ್ಲಿದೆ. ಈ ಬಗೆಯ ನಿವೇದನ ಮುಚ್ಚುಮರೆಯಿಲ್ಲದೆ. ಮನೋ ಕಿಂಕೃತಿಯಿಲ್ಲದೆ. ಹರ್ಷಪೂರಿತವಾಗಿರಬೇಕು. ನಿರಾಹಾರವು ಉಪವಾಸದ. ಆತ್ಮನಿವೇದನದ ಪ್ರಥಮ ಪಾದ ಮಾತ್ರ" (ಹರಿಜನ. 5-4-1933).

"ದುಷ್ಟ ಪ್ರಭುತ್ವದ ಆಡಳಿತದಲ್ಲಿ ಸಭ್ಯ ಮನುಷ್ಯರಿಗೆ ಕಾರಾಗೃಹವು ವಾಸಸ್ಥಾನ." (ಯಂಗ್ ಇಂಡಿಯಾ, 22-9-1921) ಈ ಬಗೆಯಲ್ಲಿ ಭಾರತೀಯರಲ್ಲಿ ಆತ್ಮಗೌರವವನ್ನೂ, ಧೈರ್ಯವನ್ನೂ ಗಾಂಧೀಜಿ ತುಂಬಿ ದಾಸ್ಯದ ವಿರುದ್ಧ ಹೋರಾಡಲು ಅಣಿಗೊಳಿಸಿದರು. ಇಡೀ ಭಾರತವನ್ನೇ ತಮ್ಮ ಅಮೃತವಾಣಿಯಿಂದ, ವಿಚಾರಪೂರಿತ ಮಹತ್ವ ಬರಹದಿಂದ ಜಾಗೃತಗೊಳಿಸಿದರೆನ್ನಬಹುದು.

ಪದಚಿಹ್ನೆ

# ಮಹಾತ್ಮಾ ಗಾಂಧೀ[1]

**ಹಾ. ತಿ. ಕೃಷ್ಣೇಗೌಡ**

ಗಾಂಧಿ ಒಬ್ಬ ವಿಚಿತ್ರ ವ್ಯಕ್ತಿ. ತಾವು ನಂಬಿದ ಕೆಲವು ಮೌಲ್ಯಗಳಿಗಾಗಿ ಕಡೆಯ ಉಸಿರಿರುವವರೆಗೆ ಹೋರಾಡಿದವರು. ಗಾಂಧಿ ಎಂದರೆ ಮಾನವೀಯ ಗುಣಗಳ ಸಾಕಾರರೂಪ. ಗಾಂಧಿ ಬಗ್ಗೆ ಓದುವುದೆಂದರೆ ನಮ್ಮನ್ನು ನಾವು ಶೋಧನೆಗೆ ತೊಡಗಿಸಿ ಕೊಂಡಂತೆಯೆ. ಗಾಂಧೀ ಜೀವನ ಚರಿತ್ರೆಯನ್ನು ಓದುವುದೆಂದರೆ ಭಾರತದ ಸ್ವಾತಂತ್ರ್ಯಾಂದೋಲನದ ಇತಿಹಾಸದಲ್ಲಿ ಹಾದಿ ಬಂದಂತೆ. ಭಾರತದ ಸ್ವಾತಂತ್ರ್ಯದ ಇತಿಹಾಸ, ಗಾಂಧೀಜೀವನ—ಇವೆರಡಕ್ಕೂ ಬಿಡಿಸಲಾಗದ ನಂಟು. ಗಾಂಧೀಜಿಯವರ ಜೀವನ ಚರಿತ್ರೆಯನ್ನು ಕುರಿತಂತೆ ಅನೇಕ ಪುಸ್ತಕಗಳು ಪ್ರಕಟವಾಗಿವೆ. ಬಿ. ಆರ್. ನಂದಾ ಅವರ ಈ ಕೃತಿ ಅಂಥ ಕೃತಿ ಪರಂಪರೆಯಲ್ಲಿ ನಿಜಕ್ಕೂ ಉಲ್ಲೇಖಾರ್ಹವಾದುದು. ಇದರಲ್ಲಿ ಆರಂಭದ ವರ್ಷಗಳು, ಉದಯೋನ್ಮುಖ ಗಾಂಧಿ, ಯುದ್ಧ ಮತ್ತು ಶಾಂತಿ, ಕೊನೆಯ ಘಟ್ಟ ಎಂಬ ನಾಲ್ಕು ವಿಭಾಗಗಳಿವೆ. ಪ್ರತಿ ವಿಭಾಗದಲ್ಲಿಯೂ ಅನೇಕ ಉಪಶೀರ್ಷಿಕೆಗಳಿವೆ. ಒಂದೊಂದು ಉಪಶೀರ್ಷಿಕೆ ಒಂದೊಂದು ವಿಷಯವನ್ನು ಪ್ರಸ್ತಾಪಿಸುತ್ತದೆ. ಇಡೀ ಕೃತಿಯಲ್ಲಿ ನಮ್ಮನ್ನು ಆಕರ್ಷಿಸುವ ವಿವರಗಳೆಂದರೆ ಗಾಂಧಿಯವರ ವೈಯಕ್ತಿಕ ಬದುಕಿನ ಅನುಭವಗಳು ಹಾಗೂ ಅವರು ಆ ಅನುಭವಗಳನ್ನು ನೋಡುವಲ್ಲಿ ಎದುರಿಸುವ ಸವಾಲುಗಳು. ಮೊದಲನೆಯ ಭಾಗವಾದ ಆರಂಭದ ವರ್ಷಗಳು ಎಂಬುದರಲ್ಲಿ ಬಹು ಅಪ್ಪಟ ಧಾಟಿಯ ಬರವಣಿಗೆ ಕಂಡುಬರುತ್ತದೆ. ಬದುಕಿನ ಸವಾಲುಗಳಿಗೆ ಮೈಯೊಡ್ಡಿ ಒಂದು ವ್ಯಕ್ತಿತ್ವ ಹೇಗೆ ರೂಪುಗೊಳ್ಳಲು ಸಾಧ್ಯವಾಯಿತು ಎಂಬುದರ ಚಿತ್ರಣ ಇಲ್ಲಿ ಕಂಡುಬರುತ್ತದೆ. ಗಾಂಧಿ ಇದ್ದಕ್ಕಿದ್ದಂತೆ ಮಹಾತ್ಮರಾದವರಲ್ಲ; ಅವರು ಪವಾಡಪುರುಷರೂ ಅಲ್ಲ; ಎಲ್ಲರಂತೆಯೇ ಇದ್ದು ಎಲ್ಲರಿಗಿಂತ ಭಿನ್ನರಾದವರು. ಗಾಂಧಿ ಮೌಲ್ಯಗಳನ್ನು ಇಟ್ಟುಕೊಂಡು ಅವುಗಳನ್ನು ಸಾಧಿಸ ಹೊರಟವರಲ್ಲ. ಹೋರಾಡುತ್ತ ಮೌಲ್ಯಗಳಿಗೆ ಸ್ಥಾಯೀರೂಪ ಕೊಟ್ಟವರು. ಈ ಎಲ್ಲ ಮಾತುಗಳಿಗೆ ದಾಖಲೆ ಈ ಪುಸ್ತಕದ ಮೊದಲ ಭಾಗದಲ್ಲಿ ದೊರೆಯುತ್ತದೆ. ಸತ್ಯ, ಅಹಿಂಸೆ—ಇವು ಅವರು ರೂಢಿಸಿದ ಪರಮ ಮೌಲ್ಯಗಳು. ಮೊದಲನೆಯ ಭಾಗವನ್ನು ಓದಿದರೆ

---

[1] ಮೂಲ ಲೇಖಕರು—ಶ್ರೀ ಬಿ. ಆರ್. ನಂದಾ. ಅನುವಾದಕರು—ಶ್ರೀ [illegible] ನಾರಾಯಣಮೂರ್ತಿ. ಪ್ರಕಾಶಕರು : [illegible] 1963

ಮುಂದಿನ ಬರವಣಿಗೆ ಹೆಚ್ಚಾಗಿ ರಾಜಕೀಯ ಬದುಕನ್ನು ಕುರಿತದ್ದಾಗಿದೆ. ಅಲ್ಲಲ್ಲಿ ಗಾಂಧೀ ಜೀವನದ ವೈಯಕ್ತಿಕ ವಿವರದ ತುಣುಕುಗಳು ದೊರೆಯುತ್ತವೆ. ಆದರೂ ಪ್ರಾಧಾನ್ಯ ದೊರಕಿರುವುದು ರಾಜಕೀಯ ಮುಖಕ್ಕೆ. ಕಡೆಯ ಘಟ್ಟ ಎಂಬ ಕೊನೆಯ ಅಧ್ಯಾಯದಲ್ಲಿ ಗಾಂಧಿ ಅವಸಾನದ ಮರ್ಮಭೇದಕ ಚಿತ್ರಣವಿದೆ. ವರ್ಣದ ಹಾಗೂ ಜಾತಿ ಸಂಘರ್ಷದ ಆಘಾತ ಗಾಂಧಿಯವರ ಮೇಲೆ ಬಹುವಾಗಿ ಆಗಿದ್ದು ಅವರ ಸಾವಿಗೆ ಈ ಸಮಸ್ಯೆಯೇ ಮೂಲ ಕಾರಣವಾಯಿತೆಂಬ ಸಂಗತಿ ಹೃದಯವಿದ್ರಾವಕವಾದುದು. ಇಲ್ಲಿ ನಿರೂಪಿತವಾಗಿರುವ ಹರಿಜನರು, ಅಸ್ಪೃಶ್ಯತೆ, ಗ್ರಾಮಗಳ ಆರ್ಥಿಕೋನ್ನತಿ ಮೊದಲಾದ ಸಂಗತಿಗಳ ಬಗೆಗಿನ ಗಾಂಧಿಯವರ ಮಾನವೀಯ ದೃಷ್ಟಿಕೋನ ಎಂಥವರ ಮನಸ್ಸನ್ನೂ ಸೆಳೆದುಕೊಳ್ಳುತ್ತದೆ.

ಈ ಕೃತಿಯಲ್ಲಿ ಅಲ್ಲಲ್ಲಿ ಲೇಖಕರ ಕೆಲವು ಅಭಿಪ್ರಾಯದ ನುಡಿಗಳು ಬಂದಿದ್ದು ಅವು ಗಾಂಧಿಯವರ ವ್ಯಕ್ತಿತ್ವವನ್ನು ಸಮರ್ಪಕವಾಗಿ ಬಿಂಬಿಸುತ್ತವೆ. ಉದಾಹರಣೆಗೆ (ಅ) ಗಾಂಧಿಯನ್ನು ಅವರ ಜೀವಿತಕಾಲದಲ್ಲಿ ಸನಾತನ ಹಿಂದೂ, ಹಿಂದೂ ಧರ್ಮದಿಂದ ಬಾಹಿರ, ಬೌದ್ಧ, ಥಿಯೋಸೊಫಿಸ್ಟ್, ಕ್ರೈಸ್ತ, ಮುಸಲ್ಮಾನ ಇತ್ಯಾದಿ ಕರೆದುದುಂಟು. ಅವರು ಇವೆಲ್ಲ ಆಗಿದ್ದುದಲ್ಲದೆ ಇನ್ನೂ ಹೆಚ್ಚಾಗಿದ್ದರು. (ಆ) ಗಾಂಧಿ ಸಿದ್ಧಾಂತಿಯಲ್ಲ; ವಾಸ್ತವಿಕ ಸಮಸ್ಯೆಗಳನ್ನು ಎದುರಿಸುತ್ತಿದ್ದ ವ್ಯವಹಾರಪೂರ್ಣ ವ್ಯಕ್ತಿ. ಇಂಥ ಮಾತುಗಳು ಕೇವಲ ಉತ್ಸಾಹದ ಎಲ್ಲೆಮೀರಿ ಪಕ್ಷಪಾತದಿಂದ ಆಡಿದ ಮಾತುಗಳಲ್ಲ. ಗಾಂಧಿಯವರ ವ್ಯಕ್ತಿತ್ವವನ್ನು ಸ್ಪಷ್ಟವಾಗಿ ಅರಿತು ಆಡಿದಂತವು. ಹಾಗಾಗಿ ಈ ಮಾತುಗಳಲ್ಲಿ ಕೃತಿಯಲ್ಲಿ ಬೆಲೆ ದೊರಕಿದೆ. ಗಾಂಧಿಯವರ ಆತ್ಮಕಥೆಯನ್ನು ಓದಿದವರಿಗೆ ಈ ಕೃತಿಯಲ್ಲಿನ ಅಂಥ ವಿವರಗಳು ಕಡಿಮೆ ಅನಿಸಬಹುದು. ಕೆಲವೊಮ್ಮೆ ಓದುಗನಿಗೆ ಹಾಗನಿಸುತ್ತದೆ. ಆದರೂ ಗಾಂಧೀ ಜೀವನ ವಿವರಗಳನ್ನು ಸಮಗ್ರವಾಗಿ ಕಟ್ಟಿಕೊಡುವಲ್ಲಿ ಈ ಕೃತಿ ಸಾರ್ಥಕವಾಗಿದೆ. ಅನುವಾದವಾದರೂ ಸ್ವತಂತ್ರ ಕೃತಿಯಂತೆ ಇದರ ಭಾಷೆ, ಶೈಲಿ ಆಪ್ತವಾಗಿದೆ. ಎಲ್ಲೂ ಅಸ್ಪಷ್ಟತೆ, ಗೊಂದಲಕ್ಕೆ ಅನುವಾದ ಎಡೆಮಾಡಿಕೊಟ್ಟಿಲ್ಲ. ಅನುವಾದ ಚೊಕ್ಕಟವಾಗಿದೆ. ಕಡೆಯದಾಗಿ ಒಂದು ಮಾತು. ಗಾಂಧಿಯವರನ್ನು ಕುರಿತು ಒಮ್ಮೆ ಐನ್‌ಸ್ಟೀನ್ ಹೀಗೆ ಅಭಿಪ್ರಾಯಪಟ್ಟಿದ್ದರು. "ತಲೆಮಾರುಗಳು ಕಳೆದ ಮೇಲೆ ಇಂಥ ವ್ಯಕ್ತಿ ಭೂಮಿಯ ಮೇಲೆ ಎಂದಾದರೂ ನಿಜವಾದ ದೇಹಧರಿಸಿ ಬದುಕಿದ್ದನೆ ಎಂದು ಶಂಕಿಸಬಹುದು." ಈ ಮಾತು ಕೇವಲ ಮೂವತ್ತಮೂರು ವರ್ಷಗಳಲ್ಲಿ ಸಾಬೀತಾದದ್ದು ಎಂಥ ದುರಂತ !

ಪದಚಿತ್ರ

# ವಿನೋಬಾ, ಜೀವನ-ದರ್ಶನ

— ನೀಲತ್ತಹಳ್ಳಿ ಕಸ್ತೂರಿ

"ಈ ತಲೆಮಾರಿನ ಪುಣ್ಯ. ನಮ್ಮ ಮಧ್ಯೆ ವಿನೋಬಾ ಅವರಂತಹ ಉತ್ತುಂಗ ಮಾನವ ಜೀವಿಸಿದ್ದಾರೆ....ಗಾಂಧೀಜೀವನದ ಮೌಲ್ಯಗಳಿಗೆ ಅವರೊಂದು ಜೀವಂತ ಸಾಕ್ಷಿ; ಭಾರತೀಯತೆಯ ಚೈತನ್ಯದ ಪ್ರತಿನಿಧಿ. ಅವರೂ ಆಧುನಿಕ ವಿಶ್ವದ ವಿಚಾರ ಧಾರಗಳನ್ನರಗಿಸಿಕೊಂಡವರು. ಅವರೊಂದು ಉಜ್ವಲ ದಾರಿದೀಪ."

— ಈ ಮಾತು ಜವಹರಲಾಲನೆಹರೂ ಅವರದು. ವಿನೋಬಾಜಿಯನ್ನು ಕುರಿತದ್ದು.

ಇದು ಬಹುಮಟ್ಟಿಗೆ ನಮ್ಮ ಜಿ. ವಿ. ನಾರಾಯಣಮೂರ್ತಿಯವರಿಗೂ ಸಲ್ಲುತ್ತದೆ ಎಂದರೆ ತಪ್ಪಲ್ಲ. ಅತಿಶಯೋಕ್ತಿಯೂ ಅಲ್ಲ. ವಿನೋಬಾಜಿಯ ಹಾಗೆಯೆ ಜಿ.ವಿ.ನಾ. ಸಹ ದೇಶದ ಕಾರ್ಯಕ್ಕೆ ಅದರಲ್ಲೂ ಹಳ್ಳಿಗಾಡಿನ ಸೇವೆಗೆ ತಮ್ಮನ್ನು ತಾವೇ ತೆತ್ತುಕೊಂಡವರು. ಸ್ವರಾಜ್ಯದ ಸಂಪಾದನೆಗೆ ಹೋರಾಡಿದವರು. ಜೈಲು ಕಂಡವರು. ಸ್ವರಾಜ್ಯ ಬಂದ ಮೇಲೆ, ಬಾರದೆ ದೂರದೇ ನಿಂತ ಗ್ರಾಮ-ರಾಜ್ಯದ ಸಂಪಾದನೆಗಾಗಿ ಹೆಣಗಿದವರು, ಹೆಣಗುತ್ತಲೇ ಹಣ್ಣಾದವರು. ಹೋರಾಟದ ಕಾಲದಲ್ಲಿ ಗಾಂಧೀ ವಿಚಾರ. ಅನಂತರ ವಿನೋಬಾ ವಿಚಾರ. ಸರ್ವೋದಯ ವಿಚಾರ, ಗ್ರಾಮ ಸ್ವರಾಜ್ಯದ ಕಲ್ಪನೆ, ಭೂದಾನ ಗ್ರಾಮದಾನಗಳ ಆಂದೋಲನ. ಇವೆಲ್ಲದರ ನಡುವೆ ತಾವಿದ್ದ ಕಡೆಯೆ ಚಿಕ್ಕನಾಯಕನಹಳ್ಳಿಯಲ್ಲೆ ಚೊಕ್ಕ ಸೇವಾ ಕೈಂಕರ್ಯ. ಶಿಕ್ಷಣದ ಕೆಲಸ. ಹೊರಗೆ ಒಳಗೆ ಒಂದೇ ಆದ ಬದುಕು. ಸ್ಫಟಿಕಶುದ್ಧ. ಪಾರದರ್ಶಕ. ಸರಳತೆ ಸೌಜನ್ಯಗಳ ಚೌಕಟ್ಟು. ವಿಚಾರದಲ್ಲಿ ನುಡಿಯಲ್ಲಿ ನಡೆಯಲ್ಲಿ ಒಂದೇ ಶ್ರುತಿ. ಏಕತಾನ. ವಿನೋಬಾ ಹಾಗೆಯೆ......ಒಂದೇ ವ್ಯತ್ಯಾಸ. ವಿನೋಬಾ ಬ್ರಹ್ಮಚಾರಿ, ಜಿ.ವಿ.ನಾ. ಗೃಹಸ್ಥರು. ನಿಷ್ಠೆಯ ಆದರ್ಶದ ಗಾರ್ಹಸ್ಥ್ಯ. ಸಮಾಜ ಸೇವೆಯ ಕೆಲಸದಲ್ಲಿ ಕೇಂದ್ರಬಿಂದುವಾಗಿ ಕಣದಲ್ಲಿನ ಮೇಟಿಯಂತೆ ನಡೆದ ಸದ್ಗೃಹಸ್ಥ !

ಜಿ. ವಿ. ನಾ. ಕೇವಲ ಶ್ರದ್ಧಾಳು ಮಾತ್ರವಲ್ಲ. ಹಾಗೆಂದರೆ ಶ್ರದ್ಧಾಳು ಕಡಿಮೆ ಎಂದಲ್ಲ. ಶ್ರದ್ಧೆ ದೊಡ್ಡ ಶಕ್ತಿ. ಪ್ರೇರಕಶಕ್ತಿ. ಶುದ್ಧೀಕರಣದ ಶಕ್ತಿ. ಶ್ರದ್ಧೆ ಇಲ್ಲದಾದರೆ ಯಾವ ಸಾಧನೆಯೂ ಹಗಲುಗನಸೇ! ಶ್ರದ್ಧಾವಾನ್ ಲಭತೇ ಜ್ಞಾನಂ. ಶ್ರದ್ಧೆಯ ಜೊತೆಗೆ ಜ್ಞಾನ - ವಿಚಾರವೂ ಸೇರಿದರೆ ಆ ಸಂಯೋಗ ನವನೀತಸದೃಶ

ದ್ದಾಗುತ್ತದೆ. ಆಗ ತತ್ತ್ವ ಗಟ್ಟಿಯಾಗುತ್ತದೆ. ಮಾಡಿದ ಕೆಲಸ ಸ್ಥಿರ ಆಗುತ್ತದೆ. 'ಶ್ರದ್ಧಾ ಭಕ್ತಿ ಬಢಾವೋ ಸಂತನಕಿ ಸೇವಾ' ಎನ್ನುವ ಮಾತಿದೆ ಆಶ್ರಮ ಭಜನೆಯಲ್ಲಿ! ಶ್ರದ್ಧೆ ಭಕ್ತಿಗಳಿಗೆ ವಿಚಾರಶಕ್ತಿ ಬೆನ್ನೆಲುಬಾಗಿ ನಿಂತರೆ ಎಂಥ ಅದ್ಭುತ ವ್ಯಕ್ತಿತ್ವ ರೂಪುಗೊಳ್ಳುತ್ತದೆ. ಎಂಥ ಶಕ್ತಿ ಸಂಚಿತವಾಗುತ್ತದೆ ಎನ್ನುವುದಕ್ಕೆ ನಮ್ಮ ಕಣ್ಣೆದುರಿಗೇ ಜೀವಂತ ನಿದರ್ಶನಗಳಿವೆ. ಗಾಂಧೀಜಿ ಹಾಗಿದ್ದರು, ತಿಲಕರು ಹಾಗಿದ್ದರು. ಗೋಖಲೆ ಹಾಗಿದ್ದರು. ವಿನೋಬಾ ಹಾಗಿದ್ದಾರೆ. ಇನ್ನೂ ಎಷ್ಟೋ ಜನ. ಈಗಲೂ ಅಲ್ಲಲ್ಲಿ ಇದ್ದಾರೆ. ಇವತ್ತಿನ ಪರಿಸ್ಥಿತಿಯಲ್ಲಿ ಶ್ರದ್ಧಾಮಯ ಜ್ಞಾನಿಗಳು ಅಪರೂಪ ಎನಿಸಬಹುದು. ಅಂಥ ವ್ಯಕ್ತಿಗಳಲ್ಲಿ ಜಿ.ವಿ.ನಾ. ಒಬ್ಬರು. ಶ್ರದ್ಧೆ-ಭಕ್ತಿ-ವಿಚಾರ (ಜ್ಞಾನ)ಗಳ ಕೂಡಲಿ.

ಗಾಂಧೀಜಿ ಹೇಳಿದ ರಚನಾತ್ಮಕ ಕಾರ್ಯಗಳನ್ನು ವೈಚಾರಿಕವಾಗಿ ಅರ್ಥಮಾಡಿಕೊಂಡು ನಿಷ್ಠೆಯಿಂದ ಆಚರಣೆಗೆ ತಂದವರು ಅನೇಕರು. ಅಂತೆಯೇ ವಿನೋಬಾ ವಿಚಾರವನ್ನು ಸಹ. ಆ ಪೈಕಿ ಕರ್ನಾಟಕದ ಹಲವು ಹಿರಿಯ ಸತ್ವರಲ್ಲಿ ಜಿ.ವಿ.ನಾ. ಒಬ್ಬರು. ಅವರ ಮಾತು ಕೃತಿ ಸರಳ ಸುಂದರ ಸವಿ. ಅವರ ಜೊತೆಯಲ್ಲಿ ಕೆಲಕಾಲ ಕಳೆದರೆ ನಮಗೆ ಅಲೌಕಿಕ ಶುಚಿತ್ವ ಶುಭ್ರತೆಗಳ ಅನುಭವ ಆಗುತ್ತದೆ. ನಾನು ವೈಯಕ್ತಿಕವಾಗಿ ಅವರ ಸಂಪರ್ಕವನ್ನು ಹೆಚ್ಚು ಪಡೆದಿಲ್ಲ. ಆದರೆ ದೊರೆತ ಎರಡು ಮೂರು ಸಂದರ್ಭಗಳೇ ನನಗೆ ಈ ಒಂದು ಆನಂದದ ಅನುಭವವನ್ನು ತಂದುಕೊಟ್ಟಿವೆ. ಅವರು ಆಡಿದ ಒಂದೆರಡು ಮಾತು ಮನಸ್ಸಿನಲ್ಲಿ ನೆಲೆಯೂರಿ ನಿಂತಿವೆ. ಅವರ ಒಂದೆರಡು ಪತ್ರಗಳು ಅಂಥವೇ ಪ್ರೀತಿಯ ಸಂದೇಶವನ್ನು ಇತ್ತಿವೆ. ಅವು ನನ್ನ ಬಳಿ ಭದ್ರವಾಗಿ ರಕ್ಷಿತವಾಗಿವೆ. ಆಗಾಗ ತೆಗೆದು ನೋಡುವುದಕ್ಕೆ ಒದಗುತ್ತವೆ. ಮತ್ತೆಮತ್ತೆ ಜಿ. ವಿ. ನಾ. ಅವರ ಪ್ರೇಮಮಯ ವ್ಯಕ್ತಿತ್ವವನ್ನು ಕಣ್ಣಮುಂದೆ ನಿಲ್ಲಿಸುತ್ತವೆ.

ಅಂಥ ಹಿರಿಯರಿಗೆ ಗೌರವ ಸಲ್ಲಿಸುವ ಈ ಕಾರ್ಯದಲ್ಲಿ ನನ್ನ ಅಳಿಲು ಸೇವೆಗೂ ಅವಕಾಶ ಸಿಕ್ಕಿದೆ. ನಾನು ಧನ್ಯ.

೨

ವಿನೋಬಾ ನಮ್ಮ ನಾಡಿನ ವಿಚಾರಪರ ಸಂತರಲ್ಲಿ ಬಹು ಮುಖ್ಯರು. ಗಾಂಧೀಜಿ ಆದಮೇಲೆ, ಅದೇ ವಿಚಾರಕ್ಕೆ ಹೊಸ ಅರ್ಥವನ್ನು ಇಂಬನ್ನು ಕೊಟ್ಟು ವಿಶ್ವವ್ಯಾಪಿಯಾಗಿ ಬೆಳೆಸಿದವರು. ಸ್ವಾರ್ಥ, ರಾಗದ್ವೇಷ, ಲಾಭದೃಷ್ಟಿ, ಸ್ಪರ್ಧೆ, ಹಿಂಸೆಗಳ ಮೇಲೆ ಕಟ್ಟಿದ ಮಾನವ ಸಮಾಜಕ್ಕೆ ಬದಲಾಗಿ ಪ್ರೇಮ, ಕರುಣೆ, ಸಹಕಾರ, ಸಹಯೋಗ, ಸಹಾನುಭೂತಿ ಮುಂತಾದ ಮಾನವೀಯ ಗುಣಗಳ ಆಧಾರವುಳ್ಳ ಸರ್ವೋದಯ

ಅತ್ಯಂತ ತೀಕ್ಷ್ಣಮತಿಯ ಚಿಂತಕರು, ಅಧ್ಯಯನಪಟುಗಳು. ವೇದೋಪನಿಷತ್ತುಗಳಿಂದ ಹಿಡಿದು ಆಧುನಿಕ ಜ್ಞಾನದವರೆಗೆ ಅವರ ಅಧ್ಯಯನದ ಹರಹು. ಅವರ ಭಾಷಾಜ್ಞಾನ ಅನಂತ. ಇಳಿವಯಸ್ಸಿನಲ್ಲೂ, ನಿರಂತರ ಪಾದಯಾತ್ರೆಯಲ್ಲೂ, ದುರ್ಬಲ ದೇಹಸ್ಥಿತಿಯಲ್ಲೂ ಅವರು ಸದಾ ಅಧ್ಯಯನಶೀಲರು. ಮುದಿತನದಲ್ಲಿ ಜಪಾನೀ ಭಾಷೆ ಕಲಿತರು. ಭಾರತದ ಪ್ರಮುಖ ಭಾಷೆಗಳೆಲ್ಲ ಅವರಿಗೆ ಸಲೀಸು. ಗಣಿತದಲ್ಲಿ ಅವರ ಆಸಕ್ತಿ ಅಪಾರ. ದರ್ಶನ ವಿಚಾರಗಳನ್ನು ಗಣಿತದ ಸೂತ್ರಗಳಲ್ಲಿ ಸಮೀಕರಣಗಳಲ್ಲಿ ಸೂಚಿಸುತ್ತಾರೆ. ಬ್ರಹ್ಮಸೂತ್ರಗಳಂತೆಯೆ ಅವರು ಸಾಮ್ಯಸೂತ್ರಗಳನ್ನು ರಚಿಸಿಕೊಟ್ಟರು. ಅವರ ಗೀತಾಪ್ರವಚನ, ಸ್ಥಿತಪ್ರಜ್ಞದರ್ಶನ, ಸ್ವರಾಜ್ಯಶಾಸ್ತ್ರ, ವಿಚಾರಮಂಜರಿ, ಶಿಕ್ಷಣವಿಚಾರ ಇತ್ಯಾದಿ ಗ್ರಂಥಗಳು ಅವರ ಅಧ್ಯಯನದ ಆಳಕ್ಕೂ ಅನುಭವದ ಅಗಲಕ್ಕೂ ದಾರ್ಶನಿಕ ದೃಷ್ಟಿಯ ದೀರ್ಘತೆಗೂ ಸಾಕ್ಷಿಗಳು. 'ಗೀತಾಪ್ರವಚನ'ವಂತೂ ಇತಿಹಾಸ ಸೃಷ್ಟಿಸಿದ ಕೃತಿ. ಎಲ್ಲ ಭಾರತೀಯ ಭಾಷೆಗಳಲ್ಲೂ ಬಂದಿದೆ. ಕನ್ನಡದಲ್ಲಿ ಮೊಟ್ಟಮೊದಲು. ಕನ್ನಡ ಕೃತಿ ಲಕ್ಷಕ್ಕೂ ಹೆಚ್ಚು ಮಾರಾಟ ಆಗಿದೆ. ಪ್ರಾಯಶಃ ಇದೊಂದು ವಿಕ್ರಮ. ವಿನೋಬಾಜಿಯ ಆ ಸುಂದರ ವ್ಯಾಖ್ಯಾನ. ಅದಕ್ಕೆ ಸರಿಸಾಟಿಯಾದ ಸಿದ್ಧವನಹಳ್ಳಿ ಕೃಷ್ಣಶರ್ಮಾಜಿಯವರ ಬೆಡಗಿನ ಕನ್ನಡ. ಗೀತಾಪ್ರವಚನವನ್ನು ಜನಪ್ರಿಯಗೊಳಿಸಿವೆ.

ಗಾಂಧೀಜಿಯವರ ಸಾಹಿತ್ಯರಾಶಿಯನ್ನು ವಿಷಯಾನುಸಾರ ಕ್ರೋಢೀಕರಿಸಿ ಹಲವು ಅನುಕೂಲಕರವಾದ ಸಂಪುಟಗಳಲ್ಲಿ ಪ್ರಕಟಿಸುವ ಯೋಜನೆ ಮೊದಲು ಆರಂಭವಾದದ್ದು ಕನ್ನಡದಲ್ಲಿ. ಪ್ರೊ॥ ಎಂ. ಯಾಮುನಾಚಾರ್ಯ ನೇತೃತ್ವದಲ್ಲಿ. ಸಮರ್ಥರೂ ಅನುಭವಿಗಳೂ ಶ್ರದ್ಧಾಳುಗಳೂ ಆದ ಹಿರಿಯರು 'ಗಾಂಧೀ ಗ್ರಂಥಮಾಲೆ'ಯನ್ನು ಯಶಸ್ವಿಯಾಗಿ ನಿರ್ವಹಿಸಿದರು. ಆ ಮಿತ್ರರ ಪೈಕಿ ಜಿ.ವಿ.ನಾ. ಸಹ ಒಬ್ಬರು.

ವಿನೋಬಾ ವಿಚಾರವನ್ನು ಅದೇ ಬಗೆಯಾಗಿ ವಿಂಗಡಿಸಿ, ಸೂಕ್ತವಾದ ಅಡಕವಾದ ಸಂಪುಟಗಳಲ್ಲಿ ಸಿದ್ಧಗೊಳಿಸಬೇಕೆಂಬ ಯೋಜನೆಯನ್ನು ಕರ್ನಾಟಕ ಮಾಡಿತು. ಕರ್ನಾಟಕ ಸರ್ವೋದಯಸಾಹಿತ್ಯಸಮಿತಿ ವಿನೋಬಾ ಗ್ರಂಥಮಾಲೆಯನ್ನು ಆರಂಭಿಸಿತು. ಉತ್ಸಾಹೀ ಕಾರ್ಯಕರ್ತರ ಹುರುಪು. ಹಿನ್ನೆಲೆಗೆ ಹಿರಿಯರ ಮಾರ್ಗದರ್ಶನ ದೊರೆತು ಈ ಗ್ರಂಥಮಾಲೆಯೂ ಗಾಂಧೀ ಗ್ರಂಥಮಾಲೆಯಂತೆಯೇ ತನ್ನ ಸದುದ್ದೇಶವನ್ನು ಸಾರ್ಥಕಗೊಳಿಸುತ್ತ ಸಾಗಿಬರುತ್ತಿದೆ. ಸರ್ವೋದಯ ಚಿಂತಕರೂ, ಗಾಂಧಿಶಾಂತಿ ಪ್ರತಿಷ್ಠಾನದ ಕಾರ್ಯಕರ್ತರೂ ಆದ ಶ್ರೀ ಕೆ. ಎಸ್. ನಾರಾಯಣಸ್ವಾಮಿಯವರ ನೇತೃತ್ವದಲ್ಲಿ ಈ ಗ್ರಂಥಮಾಲೆ 1974ರಲ್ಲಿ ಆರಂಭವಾಯಿತು. ಗ್ರಾಮಸ್ವರಾಜ್ಯ ನಿಧಿಯ ನೆರವನ್ನು ಉಪಯೋಗಿಸಿಕೊಂಡು ವಿನೋಬಾ-ಸರ್ವೋದಯ-ಸಂಪೂರ್ಣ ಕ್ರಾಂತಿಗಳ ವಿಚಾರಸಾರವನ್ನು ೫-೬ ಸಂಪುಟಗಳಲ್ಲಿ ಕನ್ನಡ ಜನಕ್ಕೆ ಒದಗಿಸುವುದು ಮಾಲೆಯ ಯೋಜನೆ. ಇದು ಈಗಾಗಲೇ ಸಾಕಷ್ಟು ಸಫಲಗೊಂಡಿದೆ. ಈವರೆಗೆ

ಈ ಮೂರೂ ಪ್ರಕಟವಾಗಿ ಹತ್ತಾರು ವರ್ಷ ಆಗಿವೆ. ಆದ್ದರಿಂದ ಅವು ವಿನೋಬಾಜಿಯ ಬದುಕಿನ ಒಂದೊಂದು ಘಟ್ಟಕ್ಕೆ ನಿಲ್ಲುತ್ತವೆ. ಅಲ್ಲಿಂದ ಈಚಿನ ಅವರ ಬದುಕು ಸಮಕಾಲೀನ ಸಂಗತಿ ಆದರೂ ಲೇಖನಯೋಗ್ಯವಾದುದೇ. ವಿನೋಬಾ ನಮ್ಮ ಪುಣ್ಯದಿಂದ ಇನ್ನೂ ಇದ್ದಾರೆ. ಮಾತ್ರವಲ್ಲ ಅವರ ದೇಹ ಕಳಿತು, ಅವರ ಓಡಾಟ ನಿಂತಿದ್ದರೂ. ಅವರ ಚಿಂತನೆ ಅವರ ತಪಸ್ಸು ನಿಂತಿಲ್ಲ. ನಿರಂತರ ಆತ್ಮ ಶೋಧನೆ ಅವರದು. 'ಜೀವನಂ ಸತ್ಯಶೋಧನಂ' ಎಂಬ ಅವರದೇ ಸೂತ್ರಕ್ಕೆ ಅವರೇ ಜೀವಂತ ನಿದರ್ಶನ. ಅವರ ವಿಚಾರಗಳು ಎಂದೂ ಎಲ್ಲೂ ಕಲ್ಲಾಗಿ ನಿಲ್ಲುವುದಿಲ್ಲ. ತಮ್ಮ ಚಲನಶಕ್ತಿಯನ್ನೂ ಊರ್ಧ್ವಗಮನವನ್ನೂ ಬೆಳವಣಿಗೆಯನ್ನೂ ಕಳೆದುಕೊಳ್ಳುವುದಿಲ್ಲ. ಅವರ ಬುದ್ಧಿ ಪ್ರತಿಭೆಗಳು ಅಕ್ಷರಶಃ ನವನವ ಉನ್ಮೇಷಶಾಲಿನೀ. ಹೀಗಾಗಿ ಅವರ ಯಾವುದೇ ಜೀವನ ಚರಿತ್ರೆಯೂ, ದರ್ಶನ ಚಿತ್ರಣವೂ uptodate ಎನಿಸಿಕೊಳ್ಳಲಾರದು. ಅದು ಎಲ್ಲಿಗೋ ನಿಲ್ಲಬೇಕಾಗುತ್ತದೆ. ಆದರೆ ವಿನೋಬಾ ಚಿಂತನ ಮಾತ್ರ ಅಲ್ಲಿಂದಾಚೆಗೂ ಮುಂದುವರಿದೇ ಇರುತ್ತದೆ. 'ಚರೈವೇತಿ ಚರೈವೇತಿ' ಎಂಬ ಪ್ರಾಚೀನ ವಾಕ್ಯವನ್ನು ವಿನೋಬಾ ತಮ್ಮ ಪಾದಯಾತ್ರೆಯಲ್ಲಿ ಹೇಳುತ್ತಿದ್ದರು. ಈಗ ಅವರ ದೈಹಿಕ ಚಲನೆ ನಿಂತಿದೆ. ಆದರೆ ಅವರ ಚೇತನ ಮಾತ್ರ ಇನ್ನೂ 'ಚರೈವೇತಿ'ಯಲ್ಲೇ ಇದೆ.

೫

ಜಿ.ವಿ.ನಾ. ಅವರ ಕೃತಿ ಈ ಪೈಕಿ ಇತ್ತೀಚಿನದು. (೧೯೭೫). ಸಾಕಷ್ಟು ವಿಸ್ತಾರವಾದದ್ದು. ೩೫೦ ಪುಟಗಳ ಹರಹು. ಅದರಲ್ಲಿ ಜೀವನ ಚರಿತ್ರೆ ೨೯೯ ಪುಟ. ಕೊನೆಯ ೩೦ ಪುಟ ವಿನೋಬಾ ಚಿಂತನಧಾರೆ. ಆರು ಪುಟಗಳಲ್ಲಿ ವಿನೋಬಾ ಜೀವನದ ಪ್ರಮುಖ ಘಟ್ಟಗಳ ಪಟ್ಟಿ. ಎರಡು ಪುಟಗಳಲ್ಲಿ ಭೂದಾನ–ಗ್ರಾಮದಾನ–ಕೆಲಸದ ಅಂಕಿ ಅಂಶಗಳು.

ಪ್ರಾರಂಭಕ್ಕೆ ಸರ್ವೋದಯ ಸಾಹಿತ್ಯ ಸಮಿತಿಯ ಪರವಾಗಿ ಶ್ರೀ ಕೆ. ಎಸ್. ನಾರಾಯಣಸ್ವಾಮಿಯವರು ಮಾಲೆಯ ಉದ್ದೇಶ. ಗೊತ್ತುಗುರಿ, ವಿನೋಬಾ ಸಾಹಿತ್ಯ ಹಾಗೂ ಜಿ.ವಿ.ನಾ. ಅವರ ಬಗೆಗೆ ವಿವರಣೆ ನೀಡಿದ್ದಾರೆ. ಸಹಜವಾಗಿಯೇ ಅದರಲ್ಲಿ ಕನ್ನಡದಲ್ಲಿ ವಿನೋಬಾ ಚಿಂತನವನ್ನು ಹರಿಸಿದ ಹರಿಸುತ್ತಿರುವ ಹಲವರನ್ನು ನೆನೆಸಿಕೊಂಡಿದ್ದಾರೆ. ದಿವಂಗತರಾದ ಕೃಷ್ಣಶರ್ಮಾಜಿ, ತಿಮ್ಮಪ್ಪನಾಯಕರು. ಪ್ರಿಯವ್ರತರು ಹಾಗೂ ಇನ್ನೂ ಕಾರ್ಯಪ್ರವೃತ್ತರಾಗಿರುವ ಜಿ.ವಿ.ನಾ. ಹೊದಿಕೆಮಾಸ್ತರು. ವೆಂಕೋಬರಾವ್. ಖಾದ್ರಿ ಶಾಮಣ್ಣ. ತಿರುಮಲೆ ಅನಂತರಂಗಾಚಾರ್. ಸತ್ಯವ್ರತ. ಕೆ. ಶ್ರೀನಿವಾಸರಾವ್ ಆದಿಯಾಗಿ. ವಿನೋಬಾ ಚಿಂತನವನ್ನು ಕನ್ನಡಕ್ಕೆ ತಂದಿತ್ತ ಆದ್ಯರಲ್ಲಿ ಇನ್ನೊಬ್ಬರ ಹೆಸರೂ ಉಲ್ಲೇಖನೀಯ. ಹಲವು ದಶಕಗಳ ಹಿಂದೆಯೆ

ವಿನೋಬಾ ಇನ್ನೂ ಗಾಂಧೀಆಶ್ರಮವಾಸಿ ಆಗಿದ್ದಾಗಲೇ ಅವರ ಚಿಂತನವನ್ನು "ವಿನೋಬಾ ವಿಚಾರಲಹರಿ" ಎಂದು ಶ್ರೀ ಶ್ರೀನಿವಾಸಮೂರ್ತಿಯವರು ಬರೆದಿದ್ದರು, ಅದು ಮೊಟ್ಟಮೊದಲ ಗ್ರಂಥಗಳಲ್ಲಿ ಬಂದಿರಬಹುದು. "ಕನ್ನಡದಲ್ಲಿ ಗಾಂಧೀ ಸಾಹಿತ್ಯ" ಎಂಬ ಸೂಚೀ ಪುಸ್ತಕ ಬಂದಿದೆ. ಅದರ ಹಾಗೆಯೆ ವಿನೋಬಾ ವಾಙ್ಮಯದ ಬಗ್ಗೆಯೂ ಬಂದರೆ ಒಳಿತೇನೋ. ಈ ಗ್ರಂಥಮಾಲೆಗೆ ಆಚಾರ್ಯ. ದಿವಾಕರ. ನಿಟ್ಟೂರು. ದೇಜಗೌ. ತಿಪ್ಪೇರುದ್ರಸ್ವಾಮಿ ಮುಂತಾದ ಹಿರಿಯರ ಸಲಹೆ ದೊರೆತಿದೆ ಎಂದು ತಿಳಿಸಲಾಗಿದೆ. ಈ ಗ್ರಂಥ ೧೯೭೫ ಸೆಪ್ಟೆಂಬರ್ ೧೧ರಂದು ವಿನೋಬಾ ಜಯಂತಿ ಅಥವಾ ಭೂಜಯಂತಿಯ ದಿನವಂದೇ ಪ್ರಕಟವಾದುದು ವಿಶೇಷ.

ಸುಮಾರು ಹತ್ತು ಪುಟಗಳ 'ಪ್ರಸ್ತಾವನೆ' ಪ್ರೊ|| ಎಂ. ವಿ. ಸೀತಾರಾಮಯ್ಯನವರು ಬರೆದದ್ದು. ಈ ಗ್ರಂಥಕ್ಕೆ ಹಿರಿಯರು ಇಟ್ಟ ತಿಲಕ. ತಳೆದ ಸೇಸೆ. ಸೀತಾರಾಮಯ್ಯ ನಮ್ಮ ಖ್ಯಾತ ವಿದ್ವಾಂಸರು. ಸಾಹಿತಿಗಳು, ಕವಿಗಳು. ಪ್ರಸ್ತಾವನೆಯೆ ಅಧ್ಯಯನಯೋಗ್ಯವಾದ ಲೇಖನ. ಭಾರತೀಯ ಚಿಂತನಧಾರೆಯ ವೈಶಿಷ್ಟ್ಯ. ಅದರ ಹಿನ್ನೆಲೆಯಲ್ಲಿ ಗಾಂಧೀಜಿ–ವಿನೋಬಾರವರ ವಿಚಾರಲಹರಿ. ಸಾಧನೆಗಳನ್ನು ವಿವರಿಸಲಾಗಿದೆ. ಧರ್ಮದ ಸ್ವರೂಪದ ಪ್ರಸ್ತಾಪವಿದೆ. ಭಾರತದ ರಾಜಕೀಯಕ್ಕೆ ಅಧ್ಯಾತ್ಮದ ಹಿನ್ನೆಲೆಯನ್ನು ಗೋಖಲೆ. ತಿಲಕ್. ಗಾಂಧೀಜಿ ಒದಗಿಸಿದರು. ಈಗ ಭಾರತದ ಆರ್ಥಿಕ ಸಮಸ್ಯೆಗಳಿಗೆ ವಿನೋಬಾ ಅಂಥದೇ ಆಧ್ಯಾತ್ಮಿಕ ಹಿನ್ನೆಲೆಯನ್ನೂ ಧರ್ಮಮಾರ್ಗವನ್ನೂ ಉಳ್ಳ ಪರಿಹಾರವನ್ನು ಪ್ರಕಟಿಸಿದ್ದಾರೆ. "ಗಾಂಧೀ ಹಾಗೂ ವಿನೋಬಾ ಅವರ ಜೀವನ ದರ್ಶನದಲ್ಲಿ ರಾಜಕೀಯ. ಅಧ್ಯಾತ್ಮ. ಲೌಕಿಕ–ಮೂರೂ ತ್ರಿವೇಣೀ ಸಂಗಮವಾಗಿ ಮೇಳೈಸಿವೆ: ಪರಂಪರೆಯಲ್ಲಿ ಗಟ್ಟಿಕಾಲನ್ನು ಇಟ್ಟುಕೊಂಡು. ಹೊಟ್ಟನ್ನು ತೂರಿ ಕಳೆದು. ವಿಜ್ಞಾನ ಯುಗದ ವೈಚಾರಿಕತೆಗೆ ಅದು ಇಂಬುಗೊಟ್ಟಿದೆ" ಎನ್ನುತ್ತಾರೆ ಎಂ. ವಿ. ಸೀತಾರಾಮಯ್ಯನವರು. ಅವರ ಇನ್ನೊಂದು ಮಾತು ಇಡೀ ಗ್ರಂಥದ ಸಾರಮಯ ವಿಮರ್ಶೆ ಆಗಿದೆ. "ಕೃತಿ ಅವರ (ವಿನೋಬಾಜಿಯ) ಜೀವನ 'ದರ್ಶನ' ಮಾಡಿಸುವುದಲ್ಲದೆ. ಅವರ 'ಜೀವನ ದರ್ಶನ' (philosophy of life) ವನ್ನೂ ಒಳಗೊಂಡಿದೆ." ಕನ್ನಡದ ಕವಿರಾಜಮಾರ್ಗದ ಹಾಗೆ. ಅದು ಕವಿರಾಜರ ಮಾರ್ಗ, ಹಾಗೆಯೆ ಕವಿಗಳ ರಾಜಮಾರ್ಗ.

ಈ ರೀತಿ ತನ್ನ ಹೆಸರನ್ನು ಸಾರ್ಥಕಪಡಿಸಿಕೊಳ್ಳುವ ಈ ಕೃತಿ ೨೫ ಅಧ್ಯಾಯಗಳಲ್ಲಿ ವಿನೋಬಾಜಿಯ ಜೀವನವನ್ನೂ ದರ್ಶನವನ್ನೂ ಜೊತೆಜೊತೆಗೇ ನಮಗೆ ಮನದಟ್ಟುಮಾಡಿಸುತ್ತದೆ. ವಿಚಾರ. ತತ್ತ್ವಚಿಂತನೆ. ದರ್ಶನಗಳಿಗೆ ಹೆಸರಾದ ವ್ಯಕ್ತಿಗಳ ಜೀವನಚರಿತ್ರೆಗಳಲ್ಲಿ ಸಾಮಾನ್ಯವಾಗಿ ಜೀವನಚರಿತ್ರೆಯನ್ನು ಮೊದಲು ಬೇರೆ

ಕೊಟ್ಟು, ತತ್ತ್ವಚಿಂತನೆಯನ್ನು ಬೇರೆಯಾಗಿ ಕೊಡುವುದು ಉಂಟು. ಆದರೆ ಇಲ್ಲಿ ಲೇಖಕರು ಹಾಗೆ ವಿಭಜಿಸಿಲ್ಲ. ಜೀವನ–ದರ್ಶನ ಜೊತೆಜೊತೆಯಾಗಿ ಪ್ರಕಟಗೊಳ್ಳುತ್ತವೆ. ಇದು ಗಾಂಧೀ ಮಂದಿಗೆ ಸಹಜ. ಗಾಂಧೀಜಿಯಾಗಲಿ ವಿನೋಬಾಜಿ ಆಗಲಿ ಬದುಕನ್ನು ಇಡಿಯಾಗಿ ಕಂಡವರು, ಬಾಳಿದವರು. ವ್ಯವಹಾರ, ವಿಚಾರ, ಮಾತು, ಕಲೆಗಾರಿಕೆ, ರಸಿಕತೆ, ಅಧ್ಯಾತ್ಮ ಯಾವುದನ್ನೂ ಬೇರೆಬೇರೆ ಮಾಡಿದವರಲ್ಲ. ಎಲ್ಲವೂ ಬದುಕಿನಲ್ಲೆ, ಬದುಕಿಗಾಗಿಯೆ ಎಂಬುದು ಸೂತ್ರ. ಬದುಕಿನ ಗಳಿಗೆ ಗಳಿಗೆಯಲ್ಲೂ, ಘಟನೆ ಘಟನೆಯಲ್ಲೂ, ಕಣಕಣದಲ್ಲೂ ಮೂಡಿಬರುವ ಸಿರಿಬರವ. ಜೊತೆಗೂಡಿಬರದ ದರ್ಶನವಾಗಲಿ ರಸಿಕತೆಯಾಗಲಿ ಚಿಂತನವಾಗಲಿ ಅಪ್ರಯೋಜಕ. ಹುಲಿಯ ಮೊಲೆಯ ಹಾಲು. ಯಾವುದೇ ಚಿಂತನವೂ ಬದುಕಿನಲ್ಲಿ ಅನ್ವಯ ಆದಾಗ, ಆಚಾರದಲ್ಲಿ ಇಳಿದು ಬಂದಾಗಷ್ಟೆ ಸಾರ್ಥಕ, ಸಜೀವ. ಕೇವಲ ಗ್ರಾಂಥಿಕ ಜ್ಞಾನ ಪರಿಪೂರ್ಣವಲ್ಲ. ವಿನೋಬಾ ಅವರ ಬದುಕು ಈ ಸಮನ್ವಯಕ್ಕೆ ಈ ಸಾಮರಸ್ಯಕ್ಕೆ ಸಾಕ್ಷಿ. ಇದನ್ನೇ ಜಿ.ವಿ.ನಾ. ಅವರ ಪುಸ್ತಕ ಚಿತ್ರಿಸುತ್ತದೆ. ಇಲ್ಲಿ ವಿನೋಬಾ ಚಿಂತನಕ್ಕೆ ಅಲಾಯದ ಅಧ್ಯಾಯ ಇಲ್ಲ. ಬದುಕಿನ ಕತೆ ಬೆಳೆದಂತೆ ಚಿಂತನವೂ ಬಳ್ಳಿವರಿಯುತ್ತ ಹೋಗುವುದನ್ನು ನಾವು ಕಾಣುತ್ತೇವೆ. ಕೊನೆಯ ಅಧ್ಯಾಯ "ಶಬ್ದ, ಕೃತಿ, ಚಿಂತನ, ಅಚಿಂತನ" ಎಂಬುದು ಮೇಲುನೋಟಕ್ಕೆ ಕೇವಲ ತತ್ತ್ವದರ್ಶಕ ಎಂದು ಕಂಡರೂ, ಅದು ನಿಜಕ್ಕೂ ವಿನೋಬಾಜಿಯ ಬದುಕಿನ ಚಿತ್ರಣವೇ. ಗ್ರಂಥದ ವ್ಯಾಪ್ತಿಗೆ ಬರುವ ಬದುಕಿನ ಕೊನೆಯ ಕೆಲವು ಘಟ್ಟಗಳ ಚಿತ್ರಣ.

ಹೀಗೆ ಮೊದಲ ಪುಟದಿಂದ ಕೊನೆಯಪುಟದವರೆಗೂ ವಿನೋಬಾ ಜೀವನ–ದರ್ಶನ ಜೊತೆಗೂಡಿ ಮೇಳೈಸಿಕೊಂಡು ಸಾಗಿವೆ.

೬

ವಿನೋಬಾಜಿಯ ಪ್ರಾರಂಭಿಕ ಜೀವನ ಅವರ ಮುಂದಿನ ಪ್ರಬುದ್ಧ ಜೀವನಕ್ಕೆ ಹೊಂದಿಕೊಂಡದ್ದೇ. ಎಳೆತನದಿಂದಲೇ ಅವರು ಚಿಂತನಶೀಲರು, ಸಾಧುಜೀವಿ, ಸೇವಾಪರರು, ವ್ರತನಿಷ್ಠರು, ಸರಳರು. ಈ ಗುಣಗಳೆಲ್ಲ ಹಿರಿಯರಿಂದ ಬಂದವು, ಮನೆತನದಲ್ಲಿ ಹರಿದುಬಂದವು. ತಂದೆ ನರಹರಿರಾವ್ ಸ್ವಾವಲಂಬನೆಯ ವ್ರತಕ್ಕೆ ಬದ್ಧರು. "ಸೇವಕ ಒಂದಲ್ಲ ಒಂದು ತಪ್ಪನ್ನು ಮಾಡುತ್ತಾನೆ. ಇದರಿಂದ ಅತೃಪ್ತಿ ಸಹಜ. ಆದುದರಿಂದ ಸ್ವತಃ ಶ್ರಮಿಸಿ ಕೆಲಸಮಾಡುವುದರಿಂದ ಮಾನಸಿಕ ಕಿರಿಕಿರಿ ಇಲ್ಲದಾಗುತ್ತದೆ" ಎನ್ನುವುದು ಅವರ ವಿಚಾರ. ಇದು ಅನುಕೂಲಸಿಂಧು ಎನ್ನಿಸಬಹುದು. ಆದರೆ ತನ್ನ ಕೆಲಸ ತಾನು ಮಾಡಿಕೊಳ್ಳಬೇಕು ಎಂಬ ತತ್ತ್ವದ ಬೀಜ ಇಲ್ಲಿದೆ. ಇದನ್ನೇ ಮುಂದೆ ವಿನೋಬಾಜಿ ತಾತ್ತ್ವಿಕ ದೃಷ್ಟಿಯಿಂದ ಅರ್ಥೈಸಿದರು. ನರಹರಿರಾಯರ ಸಮಾಧಿಯ ಮೇಲೆ "ಸರ್ವಜೀವಿಗಳೂ ಸುಖವಾಗಿ ಬಾಳಲಿ ಎಂಬುದೇ ನನ್ನ ಆಶಯ" ಎಂದು

ಲಿಖಿತವಾಗಿದೆಯಂತೆ. ಈ ಮಾತು ವಿನೋಬಾರ ಬದುಕಿನಲ್ಲಿ ಹೇಗೆ ಸಾರ್ಥಕತೆ ಪಡೆದಿದೆ ಎನ್ನುವುದು ಸುಸ್ಪಷ್ಟ.

ವಿನೋಬಾ ಮೇಲೆ ತಾಯಿಯ ಪ್ರಭಾವ ಬಹಳ. ಬಹುಪಾಲು ಎಲ್ಲ ಮಕ್ಕಳ ಮೇಲೂ ಹಾಗೆಯೆ. ಗಾಂಧೀಜಿಗೂ ಹಾಗೇ ಆಗಿತ್ತು. ವಿನೋಬಾ ತಾಯಿ ರುಕ್ಮಿಣೀ ದೇವಿ ಸರಳತೆ, ಪ್ರೇಮ, ಸಂಯಮ, ನಿಷ್ಠೆ, ವಿಚಾರಪರತೆ, ದೈವಭಕ್ತಿ ಮೊದಲಾದ ಗುಣಗಳ ಸಾಕಾರಮೂರ್ತಿ. ತಾಯಿಯ ನಡತೆಯೆ ಮಗನನ್ನು ಬಹುಮಟ್ಟಿಗೆ ರೂಪಿಸಿದ್ದು. ಮಕ್ಕಳು ಮದುವೆ ಮಾಡಿಕೊಂಡು ಸುಖವಾಗಿ ಬಾಳಲಿ ಎನ್ನುವುದು ಸಾಮಾನ್ಯವಾಗಿ ತಂದೆತಾಯಿಗಳ ಇಚ್ಛೆ. ಆದರೆ ರುಕ್ಮಿಣೀದೇವಿ ವಿನೋಬಾ ಬ್ರಹ್ಮಚಾರಿಯಾಗಲಿ ಎಂದೇ ಬಯಸಿದರು. ಅದನ್ನೇ ಪ್ರೋತ್ಸಾಹಿಸಿದರು. "ವಿವಾಹ ಮಾಡಿಕೊಂಡು ಒಳ್ಳೆಯ ಬಾಳನ್ನು ನಡೆಸುವವನು ತನ್ನ ಕುಟುಂಬಕ್ಕೆ ಒಳ್ಳೆಯ ಹೆಸರನ್ನು ತರುತ್ತಾನೆ. ಆದರೆ ನೈಷ್ಠಿಕ ಬ್ರಹ್ಮಚಾರಿಯಾಗಿ ಬಾಳುವವನು ಒಂದು ತಲೆಮಾರನ್ನಲ್ಲ, ನಲವತ್ತೆರಡು ತಲೆಮಾರುಗಳನ್ನು ಪಾವನಗೊಳಿಸುತ್ತಾನೆ" ಎನ್ನುವುದು ಆಕೆಯ ಮಾತು. ಇಂಥ ತಾಯಿಯ ಗಂಡುಮಕ್ಕಳೆಲ್ಲ ಬ್ರಹ್ಮಚರ್ಯಕ್ಕೆ, ಸೇವೆಗೆ ಮನಸೋತುದು ಆಶ್ಚರ್ಯವೇನಲ್ಲ. ಭಾರತೀಯ ನಾರಿ ಮುಗ್ಧೆ, ಅರಿಯದವಳು, ವಿಚಾರಪರಳಲ್ಲ, ಗಂಡಸಿನ ದಾಸಿ ಎಂದೆಲ್ಲ ಉಗ್ಘಡಿಸುವ ಜನ ಈ ನಿದರ್ಶನದ ಬಗೆಗೆ ಏನೆನ್ನುತ್ತಾರೊ! ವಿಚಾರಪರಳೂ ಶ್ರದ್ಧಾಳುವೂ ಆದ ಸ್ತ್ರೀಯ ಮಹತ್ವಪೂರ್ಣವಾದ ಉದಾಹರಣೆ ಇಲ್ಲಿದೆ.

ಬಾಲ್ಯದಲ್ಲೇ ವಿನೋಬಾಗೆ ತತ್ತ್ವದ ಸೆಳೆತ, ಅಧ್ಯಾತ್ಮದ ಆಕರ್ಷಣೆ. ಜೊತೆಗೇ ಭಾರತದ ಸ್ವಾತಂತ್ರ್ಯ ಹೋರಾಟದ ಕರೆ, ಅದರಲ್ಲೂ ಕ್ರಾಂತಿಕಾರಿಗಳದು. ಅವರ ಗೃಹತ್ಯಾಗ, ಹಿಮಾಲಯ ದರ್ಶನಮಾಡಿ ತಪಸ್ಸು ಮಾಡಲು ಹೋಗಿ 'ಮಾನವ ಹಿಮಾಲಯ' ಗಾಂಧೀಜಿಯನ್ನು ಕಂಡದ್ದು, ಗಾಂಧೀ ಆಶ್ರಮವಾಸ, ಹೊಸ ಬಾಳಿನ ಕರೆ, ಹೊಸ ವಿಚಾರದ ಮಂಥನ, ಸಂಸ್ಕೃತ ಅಧ್ಯಯನ, ಕಾಶೀವಾಸ, ಪ್ರತ್ಯೇಕ ಆಶ್ರಮಗಳ ಸ್ಥಾಪನೆ, ಜನಸೇವೆ, ದೈಹಿಕ ಪರಿಶ್ರಮ, ಕರ್ಮದ ದ್ವಾರಾ ಜ್ಞಾನ—ಎಲ್ಲ ಘಟನೆಗಳೂ ಹೃದಯಂಗಮವಾಗಿ ಚಿತ್ರಿತವಾಗಿವೆ. ವಿನೋಬಾ ಅಂಥ ನಿಷ್ಠಾವಂತ ಚೈತನ್ಯಪೂರ್ಣ ಪುತ್ಥಳಿ, ಗಾಂಧೀ ಆಶ್ರಮದ ಕುಲುಮೆಯಲ್ಲಿ ರೂಪುಗೊಂಡುದರ ಸುಂದರ ಚಿತ್ರಣವಿದೆ. ಅದು ಗುರುವಿಗೂ ಅಭಿವಂದನೆ, ಶಿಷ್ಯನಿಗೂ ಅಭಿವಂದನೆ!

ವಿನೋಬಾ ವಿಲಕ್ಷಣ ವ್ಯಕ್ತಿ ಒಂದು ರೀತಿಯಲ್ಲಿ. ಅವರು ಮಾಡದ ಸಾಧನೆ ಇಲ್ಲ. ಆಹಾರದ ವಿಚಿತ್ರ ಪ್ರಯೋಗಗಳು, ದೇಹಶ್ರಮದ ಕಠಿಣತೆ, ಕೈಯಿಂದ ಅಗೆದು ಮಾಡಿದ ಕೃಷಿ, ಕುಷ್ಠರೋಗಿಗಳ ಸೇವೆ, ಉಪವಾಸಗಳು, ಜೊತೆ ಜೊತೆಗೇ ಆಳವಾದ ಅಧ್ಯಯನ, ಶಬ್ದಗಳೊಡನೆ ಸಂಭಾಷಣೆ, ಭಾಷೆಗಳ ಕಲಿಕೆ, ಗಣಿತದ ಚೆಲ್ಲಾಟ, ಸದಾ

ಪ್ರಯೋಗಶೀಲತೆ. 'ಮಂಗನ ದೀಪ'ದ ಆವಿಷ್ಕಾರವಾಗಲಿ ಸರ್ವೋದಯ ಪಾತ್ರೆಯ ಕಲ್ಪನೆಯಾಗಲಿ. ಲೌಕಿಕವೋ ಭೌತಿಕವೋ. ಆಧ್ಯಾತ್ಮಿಕವೋ ಸದಾ ಸಂಶೋಧನೆಯ ಪ್ರವೃತ್ತಿ, ಇದೆಲ್ಲದರ ನಡುವೆ ಅಹಂಕಾರವನ್ನು ಗೆಲ್ಲುವ ನಿರಂತರ ಪ್ರಯತ್ನ.

ಅಹಂಕಾರ ನಿರ್ಮೂಲನದ ಪ್ರಯತ್ನಕ್ಕೆ ಉದಾಹರಣೆಗಾಗಿ ಒಂದು ಸೊಗಸಾದ ಘಟನೆಯನ್ನು ನೋಡಬಹುದು. ಲೇಖಕರ ಚಿತ್ರಣಕಲೆ. ಕಥನಕಲೆ ಮಿಂಚಿರುವುದನ್ನು ಇಲ್ಲಿ ಕಾಣಬಹುದು.

"ಗಾಂಧೀಜಿ ವಿನೋಬಾ ಅವರಿಗೆ ಆಗಾಗ ಪತ್ರ ಬರೆದು, ಆಶ್ರಮದ ಬೆಳವಣಿಗೆ ಬಗೆಗೆ ಸಲಹೆ ಕೊಡುತ್ತಿದ್ದರು. ವರ್ಷಕ್ಕೆ ಒಂದು ತಿಂಗಳ ಕಾಲ ವರ್ಧಾಕ್ಕೆ ಬಂದು ಆಶ್ರಮದಲ್ಲಿ ಇರುತ್ತಿದ್ದರು. ವಿನೋಬಾ ಕಾಲಕಾಲಕ್ಕೆ ತಮ್ಮ ಕಾರ್ಯದ ವರದಿಯನ್ನು ಅವರಿಗೆ ಕಳಿಸುತ್ತಿದ್ದರು. ಒಂದು ಸಲ ಪತ್ರ ಬರೆದು ವಿನೋಬಾ ಅವರನ್ನು ಅವರ ಕಾರ್ಯವನ್ನೂ ಶ್ಲಾಘಿಸಿದ್ದರು. 'ನಿನಗಿಂತ ಘನತರ ವ್ಯಕ್ತಿಯನ್ನು ನಾನು ಕಂಡಿಲ್ಲ' ಎಂದು ಬರೆದಿದ್ದರು. ಪತ್ರ ಓದಿದ ಮೇಲೆ ವಿನೋಬಾ ಅದನ್ನು ಹರಿದು ಚೂರು ಚೂರು ಮಾಡಿ. ಕಸದ ಬುಟ್ಟಿಗೆ ಹಾಕಿದರು. ಇದನ್ನು ಕಂಡ ಕಮಲನಯನ ಬಜಾಜ್ ಅವುಗಳನ್ನೆಲ್ಲ ಕಲೆಹಾಕಿ ಜೋಡಿಸುವುದನ್ನು ಗ್ರಹಿಸಿದರು. ತರುವಾಯ ವಿನೋಬಾ ಅವರನ್ನು ಪ್ರಶ್ನಿಸಿದರು. 'ಬಾಪೂ ಬರೆದ ಪತ್ರವನ್ನು ಏಕೆ ಹರಿದು ಹಾಕಿದಿರಿ ?' ಉತ್ತರವಿತ್ತರು ವಿನೋಬಾ. 'ನನ್ನನ್ನು ಒಬ್ಬ ಮಹಾಪುರುಷ ಎಂದು ಬಾಪೂ ಕರೆಯುವುದು ತಪ್ಪಲ್ಲವೇ? ಇದರಿಂದ ನನಗೂ ಅನ್ಯಾಯ. ನನಗಿಂತ ಘನತೆ ಹೊಂದಿದವರಿಗೂ ಅನ್ಯಾಯ'.

"ಬಾಪೂ ವ್ಯಕ್ತಿಗಳ ಅರ್ಹತೆ ನಿರ್ಣಯಿಸುವುದರಲ್ಲಿ ಗಟ್ಟಿಗರು. ಅವರು ಎಂದಿಗೂ ತಪ್ಪು ಮಾಡರು" ಎಂದರು ಕಮಲನಯನ ಬಜಾಜ್.

"ಸರಿ ; ಒಪ್ಪೋಣ. ಬಾಪೂ ತಪ್ಪೆಸಗದಿದ್ದರೂ. ನಾನು ಏಕೆ ಆ ಪತ್ರವನ್ನು ರಕ್ಷಿಸಿ ಇಡಬೇಕು ? ಅದು ನನ್ನಲ್ಲಿ ಅಹಂಭಾವವನ್ನು ತುಂಬುತ್ತದೆ" ಎಂದರು ವಿನೋಬಾ.

"ಕಮಲನಯನ ಬಜಾಜರು ಚೂರುಚೂರಾಗಿದ್ದ ಪತ್ರವನ್ನು ಮತ್ತೆ ಕೂಡಿಸಿದ್ದನ್ನು ವಿನೋಬಾ ಸರಿ ಎಂದು ಒಪ್ಪಲಿಲ್ಲ. ಕಮಲನಯನ್ ಅದನ್ನು ವಿನೋಬಾ ಎದುರಿನಲ್ಲಿಯೇ ಅಗ್ನಿಗೆ ಅರ್ಪಿಸಿಬಿಟ್ಟರು". (ಪುಟ ೫೨–೫೩).

ಇಲ್ಲಿದೆ ವಿನೋಬಾ ದರ್ಶನದ ಒಂದು ಎಳೆ! ನಾವಾಗಿದ್ದರೆ ಆ ಪತ್ರಕ್ಕೆ ಕಟ್ಟು ಹಾಕಿಸಿ ಗೋಡೆಗೆ ತೂಗು ಹಾಕುತ್ತಿದ್ದೆವು !

ವಿನೋಬಾ ಚಿಂತಕರು ಹೇಗೋ, ಕವಿಯೂ ಹಾಗೆ. ಎಷ್ಟೋ ಕವಿತೆ ಬರೆದಿದ್ದರು. ಆದರೆ ಎಲ್ಲವನ್ನೂ ಬೆಂಕಿಗೆ ಹಾಕುತ್ತಿದ್ದರು. ಕೇಳಿದರೆ "ಶ್ರೇಷ್ಠವಾದುದನ್ನು ತಾನೇ ದೇವರಿಗೆ ಅರ್ಪಿಸಬೇಕು" ಎನ್ನುತ್ತಿದ್ದರು. ಸಂತರ ಪರಿಯೇ ಬೇರೆ!

ಇಂಥ ಹಲವಾರು ತುಣುಕುಗಳು, ಘಟನೆಗಳು, ಮಾತುಗಳು ವಿನೋಬಾಜಿಯ ಜೀವನ ಚಿತ್ರವನ್ನು ಕಟ್ಟಿ ಬೆಳೆಸಿವೆ. ಅವರ ದರ್ಶನವನ್ನು ಪ್ರತಿಬಿಂಬಿಸುತ್ತವೆ.

ಕಟ್ಟಾ ಬ್ರಹ್ಮಚಾರಿಯಾಗಿದ್ದ ವಿನೋಬಾ ತಮ್ಮ ಶಿಷ್ಯನ ಮದುವೆಗ ತಾವೇ ತರದೂದು ಮಾಡಿದ ಘಟನೆ ಸ್ವಾರಸ್ಯಕರ.

"ವಿವಾಹದ ಬಗೆಗಿನ ವಿಚಾರಗಳು ನಿನ್ನ ಮನಸ್ಸಿಗೆ ಬರದೇ ಇದ್ದರೆ ಅದರ ಮಾತೇ ಬೇರೆ. ಆದರೆ ವಿವಾಹದ ಅಭಿಪ್ರಾಯ ಸ್ವಲ್ಪ ಮನಸ್ಸಿಗೆ ಬಂದರೂ ನೀನು ಅದನ್ನು ಹಿಂದೆ ಹಾಕುತ್ತ ಹೋಗಬಾರದು. ನಾನು ನಿನಗೆ ಯೋಗ್ಯಳಾದ ಕನ್ಯೆಯನ್ನು ಹುಡುಕುತ್ತೇನೆ" ಎನ್ನುತ್ತಾರೆ ಶಿಷ್ಯನಿಗೆ.

"ಗೃಹಸ್ಥಾಶ್ರಮ ಮತ್ತು ಬ್ರಹ್ಮಚರ್ಯಾಶ್ರಮ ಎರಡಕ್ಕೂ ತಮ್ಮದೇ ಆದ ಪ್ರಾಧಾನ್ಯವಿದೆ. ವಿವಾಹವಾಗುವುದರಿಂದ ಅಧ್ಯಾತ್ಮ ಪತನವಾಗುವುದೆಂಬ ಭಾವನೆ ಯೊಂದಿದೆ. ಅದು ತಪ್ಪು. ಎಲ್ಲವೂ ಮನೋಧರ್ಮವನ್ನು ಅವಲಂಬಿಸಿದೆ" ಎನ್ನುತ್ತಾರೆ.

ಹೀಗೆ ಸಣ್ಣ ಸಣ್ಣ ಘಟನೆಗಳ ಮಾಲೆಮಾಲೆಗಳನ್ನೇ ಜ. ವಿ. ನಾ. ಕೊಟ್ಟಿದ್ದಾರೆ, ಆದರಲ್ಲೂ ಪೂರ್ವಾರ್ಧದ ಭಾಗ ಇಂಥ ಪ್ರಸಂಗಗಳಿಂದ ಪುಷ್ಟವಾಗಿದೆ. ಉತ್ತರಾರ್ಧ ದಲ್ಲಿ ಕೆಲವು ಕಡೆ ಭೂದಾನ ಚಳುವಳಿಯ ವರದಿಯ ಹಾಗೆ ಕಂಡುಬಂದರೂ, ಸ್ವಾರಸ್ಯ ಕುಗ್ಗುವುದಿಲ್ಲ.

ಗಾಂಧೀಜಿ–ವಿನೋಬಾಜಿ ಸಂಬಂಧ ವಿಶಿಷ್ಟ ಬಗೆಯದು. ಗುರು–ಶಿಷ್ಯ, ತಂದೆ–ಮಗ, ನಾಯಕ–ಅನುಯಾಯಿ ಹೀಗೆ ಹಲವು ರೂಪದ್ದು, ಒಂದೊಂದು ವೇಳೆ ಗುರುವನ್ನೂ ಮೀರಿಸುವ ಶಿಷ್ಯ. ಇಬ್ಬರಲ್ಲೂ ಹೋಲಿಕೆಯೂ ಉಂಟು, ವ್ಯತ್ಯಾಸವೂ ಉಂಟು. "ಗಾಂಧೀಜಿ ವಿರೋಧಗಳ ಕೂಡಲಿ" ಎಂದು ಕೃಷ್ಣಶರ್ಮಾಜಿ ಪರ್ಣಕುಟಿ ಯಲ್ಲಿ ಹೇಳಿದ್ದಾರೆ. ಗಾಂಧೀಜಿಯ ವೈಶ್ಯವಿವೇಕ, ಬ್ರಾಹ್ಮಣನಿಷ್ಠೆ, ಕ್ಷಾತ್ರತೇಜ, ಶೂದ್ರಸೇವಾವ್ರತ, ದೀನನ ನಮ್ರತೆ, ತ್ಯಾಗದ ಪರಾಕಾಷ್ಠೆ, ಜೊತೆಗೇ ಕಾಸಿಗೆ ಕಾಸು ಲೆಕ್ಕದ ಮಾರ್ವಾಡಿತನ ಎಲ್ಲ ವಿಶಿಷ್ಟ. ಆದರೆ ವಿನೋಬಾ ಬದುಕು ಏಕತಾನ! ಏರಿಲ್ಲ ಪೇರಿಲ್ಲ. ಒಮ್ಮುಖವಾದ ಬದುಕು. ಇದರ ಚಿತ್ರಣ ಪುಸ್ತಕದಲ್ಲಿ ಅಲ್ಲಲ್ಲಿ ಬೆಳಗಿದೆ.

ಭಗವದ್ಗೀತೆ ಗಾಂಧೀಜಿಗೆ ಹೇಗೊ ಹಾಗೇ ವಿನೋಬಾಗೂ ತಾಯಿ ! 'ಗೀತಾಯಿ' (ಗೀತಾ ತಾಯಿ). ತಮ್ಮ ತಾಯಿಗೆ ಮಾತುಕೊಟ್ಟ ಹಾಗೆ ಅವರು ಗೀತೆಯನ್ನು ಮರಾಠಿಯಲ್ಲಿ ಬರೆದರು. ಇನಿದಾದ ಕೃತಿ. ಜೈಲುವಾಸಿಗಳಿಗೆ ಹೇಳಿದ ಗೀತಾಪ್ರವಚನ ಲೋಕಪ್ರಸಿದ್ಧ. ಗೀತೆ ವಿನೋಬಾಜಿಯ ಬದುಕನ್ನು ಆವರಿಸಿಕೊಂಡುದರ ಚಿತ್ರಣ ಹೃದ್ಯ. ಲೋಕಾಂತದಲ್ಲೂ ಏಕಾಂತದಲ್ಲೂ ವಿನೋಬಾಗೆ ಗೀತೆಯೇ ಬಾಳಸಂಗಾತಿ, ಚುಕ್ಕಾಣಿ !

ಗೀತೆಯ ಅನೇಕ ಶಬ್ದಗಳಿಗೆ. ಪ್ರಾಚೀನ ಶಾಸ್ತ್ರಗಳ ಹಲವು ಶಬ್ದ ಕಲ್ಪನೆಗಳಿಗೆ ವಿನೋಬಾ ಹೊಸ ಅರ್ಥ ಕೊಡುತ್ತಾರೆ. ಯಜ್ಞ, ದಾನ, ತಪಸ್ಸು, ಕರ್ಮ, ಅಕರ್ಮ, ವಿಕರ್ಮ, ಸಾಮ್ಯಯೋಗ, ಇತ್ಯಾದಿ ಶಬ್ದಗಳು ಅವರ ಟಂಕಸಾಲೆಯಲ್ಲಿ ನವೀಕೃತವಾಗಿ ಹೊಸ ಮೌಲ್ಯವನ್ನು ಪಡೆದು ಬರುತ್ತವೆ.

ಗಾಂಧೀಜಿಯ ರಚನಾತ್ಮಕ ಕೆಲಸಗಳು, ಗ್ರಾಮಸೇವೆ, ನಡುನಡುವೆ ಸ್ವಾತಂತ್ರ್ಯ ಸಂಗ್ರಾಮ, ಕಠಿಣವಾದ ಆಶ್ರಮ ಜೀವನ, ಶಿಕ್ಷಣದ ಪ್ರಯೋಗಗಳು. ಕೊನೆಗೆ ಭೂದಾನ ಗ್ರಾಮದಾನ ಸರ್ವೋದಯದ ವಿಚಾರದ ವಿಕಸನ ಇವೆಲ್ಲವೂ ಚೆನ್ನಾಗಿ ವಿಸ್ತಾರವಾಗಿ ಚಿತ್ರಿತವಾಗಿವೆ. ಚಂಬಲ್ ಢಕಾಯಿತರ ಹೃದಯ ಪರಿವರ್ತನೆ ವಿನೋಬಾಜಿಯ ವಿಶಿಷ್ಟ ಸಾಧನೆ. ಎರಡೂವರೆ ಸಾವಿರ ವರ್ಷದ ಹಿಂದೆ ಭಗವಾನ್ ಬುದ್ಧ ಕ್ರೂರನಾಗಿದ್ದ ಅಂಗುಲೀಮಾಲನನ್ನು ಹೀಗೆಯೇ ಪರಿವರ್ತಿಸಿದ್ದ ಕತೆ ಕೇಳಿದೇವೆ. ಬೇಡನೊಬ್ಬ ವಾಲ್ಮೀಕಿ ಋಷಿಯಾದುದನ್ನು ಕೇಳಿದೇವೆ. ಈಗ ನಮ್ಮ ಕಣ್ಣೆದುರಿಗೇ ಅಂಥದೇ ಪವಾಡ ನಡೆಯಿತು. ಲೋಕೋತ್ತರ ಘಟನೆ. ಸತ್ಯಸಂಗತಿ. ದುರದೃಷ್ಟ ಎಂದರೆ ಇದಕ್ಕೂ, ಮುಂದೆ ಜಯಪ್ರಕಾಶರ ಮುಂದೆ ಆರುನೂರಕ್ಕೂ ಹೆಚ್ಚಿನ ಢಕಾಯಿತರು ಶರಣು ಬಂದುದಕ್ಕೂ ಸೂಕ್ತ ಪ್ರಚಾರ ಸಿಗದೆ ಹೋದುದು. ದಿನ ಬೆಳಗಾದರೆ ಚೀಲಿ ಪರಿಕೆ, ಕೊಲೆ, ಕಳ್ಳತನ, ಕ್ಷುದ್ರ ರಾಜಕೀಯ. ಓಟಿನ ಬೇಟೆ, ಅಧಿಕಾರದ ದುರಾಸೆ, ಮೋಸ, ಕಳ್ಳಪೇಟೆ, ಅಶಿಸ್ತು, ಅತ್ಯಾಚಾರ, ಅನಾಚಾರ, ಭ್ರಷ್ಟತೆಗಳ ಸುದ್ದಿಗಳಲ್ಲೆ ಮುಳುಗಿರುವ ನಾವು ಹಿಂಸೆ ಅಹಿಂಸೆಗೆ ಮಣಿದ ಮಹಾ ಘಟನೆಗಳನ್ನು ಸಾಕಷ್ಟು ಗಮನಿಸಿಯೇ ಇಲ್ಲ. ನಮ್ಮ ಸರ್ಕಾರಗಳೂ ಏನೇನೊ ನೆವ ಹೇಳಿ ಪ್ರತಿಷ್ಠೆಯ ಸೋಗಿಗೆ ಕಟ್ಟುಬಿದ್ದು ಇವನ್ನು ಹಿಂಬದಿಗೆ ಸರಿಸಿದವು. ಇಂಥ ಮಹತ್ತರ ಅಹಿಂಸಾ ಪ್ರಯೋಗಕ್ಕೆ ಸ್ಪಂದಿಸದಷ್ಟು ನಿರ್ಜೀವ ನಿರಾಸಕ್ತ ನೀರಸ ಸಮಾಜವಾಗಿದೆ ನಮ್ಮದು.

ಭೂದಾನಯಜ್ಞ ವಿನೋಬಾಜಿಯ ಇನ್ನೊಂದು ವಿಶಿಷ್ಟ ಚಿಂತನೆ, ಕಲ್ಪನೆ, ಸಾಧನೆ. ಅದು ಮಾನವನ ಒಂದು ಮೂಲಗುಣವಾದ ಸಂಗ್ರಹಬುದ್ಧಿಗೇ ಎಸೆದ ಸವಾಲು. ಆರ್ಥಿಕ ಸಮಸ್ಯೆಗೆ ಅಹಿಂಸೆಯ ಅಂಜನ. ಕಷ್ಟ ಸುಖಗಳನ್ನು ಹಂಚಿಕೊಂಡು ಬದುಕುವ ಸರ್ವೋದಯ ಸಮಾಜದ ರಚನೆಗೆ ದಾರಿತೋರುವ ಕೈಗಂಬ.

ಭೂದಾನ, ಸಂಪತ್ತಿದಾನ, ಗ್ರಾಮದಾನ, ಕೊನೆಗೆ ಜೀವದಾನ—ಹೀಗೆ ದಾನಗಳ ಸಾಲು. ಜೆ. ಪಿ. ಜೀವನದಾನ ಘೋಷಿಸಿದ್ದು ಒಂದು ಪಾವನ ಪ್ರಸಂಗ. ಆಗ ಪಕ್ಕದಲ್ಲಿ ಇದ್ದ ಪ್ರಭಾವತೀದೇವಿ (ಜೆ. ಪಿ. ಅವರ ಪತ್ನಿ) ಆನಂದಬಾಷ್ಪ ಸುರಿಸಿ "ಓ, ಬಾಪೂ ಈಗ ಇದ್ದಿದ್ದರೆ!" ಎಂದರಂತೆ. "ಬಾಪೂ ಇದ್ದಾರೆ. ಎಲ್ಲೆಲ್ಲೂ ಇದ್ದಾರೆ. ನಮ್ಮೆಲ್ಲರ ಹೃದಯದಲ್ಲೂ ಇದ್ದು ಅವರೇ ಈ ಕೆಲಸ ಮಾಡಿಸುತ್ತಿದ್ದಾರೆ" ಎಂದರು ವಿನೋಬಾ. ಈ ಹೃದಯಂಗಮ ಘಟನೆಯನ್ನು ಲೇಖಕರು ಸೇರಿಸಬಹುದಾಗಿತ್ತು. ಕ್ರಾಂತಿಕಾರಿ ಜೆ. ಪಿ. ಈಗ ನಿಜಕ್ಕೂ ಕ್ರಾಂತದೃಷ್ಟಿ ತೋರಿದರು. ಸರ್ವೋದಯದ ಸೇನಾನಿ ಆದರು. ಅಂತೆಯೇ "ನೂತನ ಕ್ರಾಂತಿಶಿಲ್ಪಿ" ಎಂದು ವಿನೋಬಾರನ್ನು ಶ್ರೀ ವೆಂಕೋಬರಾಯರು ವರ್ಣಿಸಿರುವುದು ಎಷ್ಟು ಸೂಕ್ತ !

ಹೀಗೆ ವಿನೋಬಾಜಿಯ ಬದುಕಿನ ಯಾತ್ರೆ ಸಾಗುತ್ತದೆ. ಚಿಂತನ ಹರಿಯುತ್ತದೆ, ದರ್ಶನ ಪ್ರತ್ಯಕ್ಷವಾಗುತ್ತ ಹೋಗುತ್ತದೆ. ಪುಟಪುಟಗಳಲ್ಲಿ, ಸಾಲುಗಳಲ್ಲಿ, ಸೂತ್ರಗಳಲ್ಲಿ ಸಮೀಕರಣಗಳ ರೂಪದಲ್ಲಿ.

ರಾಜಕಾರಣ + ವಿಜ್ಞಾನ = ಸರ್ವನಾಶ.

ಆತ್ಮಜ್ಞಾನ + ವಿಜ್ಞಾನ = ಸರ್ವೋದಯ.

"ನಿಮ್ಮ ಕುಟುಂಬದಲ್ಲಿ ಐದು ಮಂದಿ ಇದ್ದರೆ, ನಾನು ಆರನೆಯವ. ದರಿದ್ರ ನಾರಾಯಣನ ಪ್ರತಿನಿಧಿ. ನನಗೆ ಪಾಲು ನೀಡಿ" ಎಂದು ಕೇಳುತ್ತ ನಡೆಯುತ್ತಾರೆ ವಿನೋಬಾ. ಹಳ್ಳಿಯಿಂದ ಹಳ್ಳಿಗೆ, ಹಳ್ಳಿಯಿಂದ ದಿಳ್ಳಿಗೆ, ರಾಜ್ಯದಿಂದ ರಾಜ್ಯಕ್ಕೆ, ಕಾಶ್ಮೀರದಿಂದ ಕಡಲದಂಡೆಗೆ. ಹಿಮಾಲಯದ ಚಳಿನಲ್ಲಿ, ನದಿಯ ಬಯಲಿನಲ್ಲಿ, ಕಾಡು ಮೇಡಿನಲ್ಲಿ, ಬಿಸಿಲು ಮಳೆಯಲ್ಲಿ ನಿಲ್ಲದೆ ನಡೆಯುತ್ತಾರೆ. ಈ ಅದ್ಭುತ ಪ್ರಯೋಗದ ವಿಸ್ತಾರವಾದ ರಸವತ್ತಾದ ಚಿತ್ರಣವನ್ನು ಜಿ.ವಿ.ನಾ. ಅವರ ಲೇಖನಿಯ ಕುಂಚ ಮೂಡಿಸುತ್ತ ಹೋಗುತ್ತದೆ. ಯಾತ್ರೆಯಷ್ಟೇ ಸಲೀಸಾಗಿ, ನಿಲ್ಲದೆ. 'ಚರೈವೇತಿ, ಚರೈವೇತಿ'. 'ನಡೆಮುಂದೆ, ನಡೆಮುಂದೆ'. ಆಧುನಿಕ ಭಾರತ ಕಂಡ ಮಹಾ ಆಂದೋಲನ ಇದು. ಮತ್ತೆ ದುರದೃಷ್ಟ, ನಾವು ಭಾರತೀಯರು ಇದನ್ನು ಸಾಕಷ್ಟು ಗಮನಿಸಿಯೇ ಇಲ್ಲ.

ಪಾದಯಾತ್ರೆ ನಮ್ಮ ಪರಂಪರೆಯಲ್ಲಿ ಬಂದುದು. ಸಾಮಾನ್ಯವಾಗಿ ದಿವ್ಯ ದೇಶಗಳ ದರ್ಶನಕ್ಕಾಗಿ, ತೀರ್ಥಕ್ಷೇತ್ರಗಳಿಗೆ ನಡೆದು ಯಾತ್ರೆಮಾಡುವುದು ಪದ್ಧತಿ. ಅದರಲ್ಲಿ ಹಲವು ಲಾಭ. ನಾಡುನುಡಿ, ಜನರ ಪರಿಚಯ, ಅನುಭವ, ದೇಹಪರಿಶ್ರಮ, ನಿಸರ್ಗದೊಂದಿಗೆ ಸಂಪರ್ಕ. ದೇಹಶ್ರಮದನಂತರ ಸಿಗುವ ದರ್ಶನದ ಆನಂದದ ಹಿರಿಮೆ ಇತ್ಯಾದಿ. ವಿನೋಬಾ ಅದೇ ಸಾಧನವನ್ನು ತಮ್ಮ ವಿಚಾರದ ಪ್ರಚಾರಕ್ಕೆ ಬಳಸಿಕೊಂಡರು.

ಗ್ರಾಮ ಗ್ರಾಮಗಳನ್ನು ತೀರ್ಥಕ್ಷೇತ್ರಗಳನ್ನಾಗಿ ಭಾವಿಸಿ, ಜನರನ್ನೇ ಜನಾರ್ದನನನ್ನಾಗಿ ಭಾವಿಸಿ ಯಾತ್ರೆ ಮಾಡಿದರು. ನೂರಾರು ಲಕ್ಷಾಂತರ ಮಂದಿಗೆ ಯಾತ್ರೆಯ ದೀಕ್ಷೆಯಿತ್ತರು. ಹಲವಾರು ವಿದೇಶಿಯರೂ ಬಂದು ಸೇರಿದರು. ಅವರು ಕೆಲವರ ಪರಿಚಯವನ್ನು ಗ್ರಂಥದಲ್ಲಿ ಸೇರಿಸಬಹುದಾಗಿತ್ತು. ಹಲ್ಲಾಮ್‌ಟೆನಿಸನ್, ಡೊನಾಲ್ಡ್‌ಗ್ರೂಮ್ ಮೊದಲಾಗಿ.

೭

ಈ ಮಹಾಯಾತ್ರೆಯ ಕತೆ ೧೯೭೦ಕ್ಕೆ ನಿಲ್ಲುತ್ತದೆ. ಆಗ ವಿನೋಬಾಗೆ ೭೫ ವರ್ಷ. ಮುಂದಿನ ಐದು ವರ್ಷದ ಕತೆಯನ್ನು ಕೇವಲ ಒಂದೂವರೆ ಪುಟದಲ್ಲಿ ಹೇಳಿ ಮುಗಿಸಲಾಗಿದೆ. ಈ ಐದು ವರ್ಷದ ಅವಧಿ ಸಾಮಾನ್ಯವಾದುದಲ್ಲ. ಆಗ ದೇಶದಲ್ಲಿ ಪ್ರಮುಖ ಘಟನೆ ನಡೆದವು. ವಿನೋಬಾ ಜೀವನದಲ್ಲೂ ಸಹ, ವಿಚಾರಕ್ರಾಂತಿ ಆಯಿತು. ಮಾತನ್ನು ದಾಟಿ ಮೌನದತ್ತ, ಚಿಂತನವನ್ನು ದಾಟಿ ಅಚಿಂತನದತ್ತ ಅವರ ಸಾಧನೆ ತಪಸ್ಸು ಸಾಗಿದೆ. ವಿನೋಬಾಗೆ ಜೀವನ ಸತ್ಯಶೋಧನ ಮಾತ್ರವಲ್ಲ. ಸತ್ಯಶೋಧನ ಸಹ. ಈ ಭಾಗದ ವಿವರಣೆ ಇನ್ನಷ್ಟು ಇದ್ದಿದ್ದರೆ ಚೆನ್ನಾಗಿರುತ್ತಿತ್ತು ಎನಿಸುತ್ತದೆ.

ಆದರೆ ಇಲ್ಲಿ ಲೇಖಕರಿಗೆ ಸಹಜವಾಗಿಯೆ ಒಂದು ತೊಡಕು ಅಡ್ಡಗಾಲು ಹಾಕಿದೆ. ಯಾರಿಗಾದರೂ ಅಷ್ಟೆ. ೧೯೭೫ರ ವೇಳೆಗೆ ಭಾರತದ ರಾಜಕೀಯ ಓಟವನ್ನು ಅಡ್ಡ ದಾರಿ. ಅದರಲ್ಲಿ ಆಗ ಆಡಳಿತದ ಸೂತ್ರ ಹಿಡಿದಿದ್ದ ಇಂದಿರಾಗಾಂಧಿಯವರು ದೇಶಕ್ಕೆ ಹಾಕಿಕೊಟ್ಟ ಮೇಲುಪಂಕ್ತಿ ಎಲ್ಲರಿಗೂ ತಿಳಿದದ್ದೇ. ಅದರ ಪರಿಣಾಮವಾಗಿ ಜೆ. ಪಿ. ಅವರು ಜನಾಂದೋಲನವನ್ನು ಸಂಘಟಿಸಬೇಕಾಗಿ ಬಂತು. ಗಂಡಾಂತರಕ್ಕೆ ಸಿಕ್ಕಿದ ಪ್ರಜಾಪ್ರಭುತ್ವದ ರಕ್ಷಣೆಗಾಗಿ ಮತ್ತೊಂದು ಸ್ವಾತಂತ್ರ್ಯ ಹೋರಾಟವೇ ನಡೆಯಬೇಕಾಯಿತು. ಈ ಸಂದರ್ಭದಲ್ಲಿ ವಿನೋಬಾಜಿಯ ಕೆಲವು ಮಾತು, ಕೊನೆಗೆ ಮೌನವ್ರತ, ಜೆ. ಪಿ. ಸಂಗಡ ಭಿನ್ನಾಭಿಪ್ರಾಯ ಇವೆಲ್ಲ ಅವರು ಇಂದಿರಾಗಾಂಧಿಯನ್ನು ಬೆಂಬಲಿಸಿದರೊ, ಸಕ್ರಿಯವಾಗಿಯೊ ಇಲ್ಲವೇ ನಿಷ್ಕ್ರಿಯವಾಗಿಯೊ ಬೆಂಬಲಿಸಿದರೊ ಎಂಬ ಶಂಕೆಗೆ ಎಡೆಗೊಟ್ಟಿತು. ಇಂದಿರಾಗಾಂಧಿ ಬಂದಾಗ ಅವರು ತಮ್ಮ ಮೌನವ್ರತವನ್ನು ಮುರಿದರು. ಉಳಿದಂತೆ ತಮ್ಮ ಸರ್ವೋದಯ ಕಾರ್ಯಕರ್ತರಿಗೂ ಈ ವಿನಾಯಿತಿ ತೋರಲಿಲ್ಲ. ಇದರಿಂದಾಗಿ ಜನತೆ ವಿನೋಬಾಜಿಯಂಥ ಮಹಾ ತಪಸ್ವಿಯಿಂದ, ಆಧ್ಯಾತ್ಮಿಕ ನಾಯಕರಿಂದ ತನ್ನ ಸಂಕಟದ ಸ್ಥಿತಿಯಲ್ಲಿ ಏನು ಸಾಂತ್ವನವನ್ನು ಏನು ಸ್ಫೂರ್ತಿ ಸಂದೇಶವನ್ನು ನಿರೀಕ್ಷಿಸಿತ್ತೊ ಅದು ಸಿಗಲಿಲ್ಲ. ಜನತೆಗೆ ನಿರಾಸೆ ಆಯಿತು. ಭೂದಾನದ ಮೂಲಕ ವಿನೋಬಾ ಯಾವ ಸಾತ್ವಿಕ ಶಕ್ತಿಯನ್ನು ಜನರಲ್ಲಿ ಎಚ್ಚರಿಸಿದ್ದರೊ, ದೇಶಕ್ಕೆ ಗಂಡಾಂತರ ಬಂದಾಗ ಜನಕ್ಕೆ ಅವರಿಂದ ಅಂಥದೇ ನಾಯಕತ್ವ, ಸಾತ್ವಿಕ ಪ್ರತಿರೋಧಕ್ಕೆ ಸ್ಫೂರ್ತಿ ಸಿಗದೆ ಹೋಯಿತು. ಅವರೇ ಆಡಳಿತಗಾರರ ಕ್ರಮಕ್ಕೆ ಸಮ್ಮತಿ ಇತ್ತರೊ, ಇಲ್ಲವೇ ಆಡಳಿತಗಾರರು ಚಾಣಾಕ್ಷ ಕುಟಿಲತೆಯಿಂದ ಈ ಭೋಳೇಸ್ವಭಾವದ ಸಂತರ ಮಾತು

ಮೌನ ಕೃತಿಗಳನ್ನು ತಮ್ಮ ಪರವಾಗಿ ತಿರುಚಿ ಬಳಸಿಕೊಂಡರೂ ಅಂತೂ ಹೀಗೆ ಆದದ್ದು ಇತ್ತೀಚಿನ ಇತಿಹಾಸ. ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ಕರೆ ಬಂದಾಗಲೆಲ್ಲ. ತಮ್ಮ ಆಶ್ರಮದ ಕೆಲಸವನ್ನು ತಪಸ್ಸನ್ನು ಬಿಟ್ಟು ಚಳುವಳಿಗೆ ಧುಮುಕುತ್ತಿದ್ದರು ವಿನೋಬಾ. ಈಗ ಪ್ರಜಾಪ್ರಭುತ್ವ ಅಧಿಕಾರಪಿಪಾಸಿಗಳ ಅಡಿಯಾಳಾದಾಗ ಜನ ಕಂಗಾಲಾಗಿ ಮೊರೆ ಯಿಟ್ಟಾಗ, ವಿನೋಬಾ ನೆರವಿಗೆ ಬರಲಿಲ್ಲ. ಆಪತ್ಕಾಲಕ್ಕೆ ಒದಗಲಿಲ್ಲ. ತಮ್ಮ ಸುತ್ತ ಮೌನವ್ರತದ ಮುಸುಕನ್ನು ಎಳೆದುಕೊಂಡುಬಿಟ್ಟರು. ಈ ಬಗೆಯ ಶಂಕೆ ಜನರಲ್ಲಿ ಉಂಟಾಯಿತು. ನೆಹರೂ ಮನೆತನದ ಮೇಲೆ ವಿನೋಬಾಗೆ ಇರುವ ಪ್ರೀತ್ಯಾದರದಿಂದ ಹೀಗೆ ಆಯಿತೇ, ಅವರಿಗೂ ಮಹಾಭಾರತದ ಭೀಷ್ಮದ್ರೋಣರಿಗೆ ಆದಂತೆ ಮೋಹ ಕವಿಯಿತ್ತೇ ಎಂಬೆಲ್ಲ ಪ್ರಶ್ನೆಗಳು ಜನರಲ್ಲಿ ಹುಟ್ಟಿದವು. ಕಾಲವೇ ಅವಕ್ಕೆ ಉತ್ತರಿಸ ಬೇಕು. ಏನೇ ಆಗಲಿ. ನಾಡಿನ ದುರದೃಷ್ಟ. ನಮ್ಮ ನಡುವೆ ಈ ಯುಗದ ಅತ್ಯಂತ ಶ್ರೇಷ್ಠ ಸಂತ ಕ್ರಾಂತಿಕಾರಿ ನಾಯಕ ಇದ್ದರೂ. ನಮಗೆ ಅವರ ನಾಯಕತ್ವ ಆಪತ್ಕಾಲದಲ್ಲಿ ಒದಗಿಬರಲಿಲ್ಲ.

ಈ ಘಟ್ಟವನ್ನು ವಿವರಿಸಲು ಲೇಖಕರಿಗೆ ಸಂಕೋಚ ಉಂಟಾಗಿರುವಂತೆ ತೋರುತ್ತದೆ. ಜಿ. ವಿ. ನಾ. ಅವರಿಗೆ ವಿನೋಬಾ ಅವರಲ್ಲೂ ಭಕ್ತಿ. ಜೆ. ಪಿ. ಅವರಲ್ಲೂ ಗೌರವ. ದೇಶದ ಸ್ಥಿತಿ ಬಗ್ಗೆ ಕಾತರ. ಬಹುಪಾಲು ದೇಶಭಕ್ತರಿಗೆ ಆದಂತೆ ಅವರಿಗೂ ಈ ಇಬ್ಬರು ನಾಯಕರ ಭಿನ್ನತೆಯಿಂದ ಇಬ್ಬಂದಿಯ ಪರಿಸ್ಥಿತಿ. ಆದ್ದರಿಂದ ಈ ವಿಷಯದಲ್ಲಿ ಹೆಚ್ಚು ಹೆಕ್ಕಿನೋಡದೆ ಸ್ಥೂಲವಾಗಿ ನಾಲ್ಕು ಮಾತುಗಳಲ್ಲಿ ಮುಗಿಸಿದ್ದಾರೆ ಎನಿಸುತ್ತದೆ. ಅಂತೆಯೆ ಪುಸ್ತಕದ ಮುಕ್ತಾಯ ಒಮ್ಮೆಲೇ ಆಗಿ ಹೋದಂತಿದೆ. ಇನ್ನಷ್ಟು ನಿರೀಕ್ಷಿಸಿದ್ದ ಓದುಗನಿಗೆ ಚಟ್ಟನೆ ಮುಕ್ತಾಯದ ಮಾತು ಅಷ್ಟು ನಿಲ್ಲುತ್ತದೆ. ಜೀವಂತ ವ್ಯಕ್ತಿಗಳ ಬಗ್ಗೆ ಬರೆಯುವಾಗ ಹೀಗೆ ಆಗುವುದು ಅಪೂರ್ವವೇನಲ್ಲ.

ವಿನೋಬಾಜಿಯ ಕೆಲಸ ಮಹತ್ವಾದುದಾದರೂ. ಜನತೆಯ ಮೇಲೆ ನೈತಿಕ ಶಕ್ತಿಯ ಸಾಕಷ್ಟು ಪರಿಣಾಮ ಕಾಣುತ್ತಿಲ್ಲವಲ್ಲ ಎನ್ನುವುದು ವಿಪರ್ಯಾಸ. ಭಾರತಾದ್ಯಂತ ಅವರು ಉಕ್ಕಿಸಿದ ಜನಜಾಗೃತಿ. ಸಾತ್ವಿಕ ಸಂಘಟನೆ ಸಹ ಜನತೆಯ ದುಃಸ್ಥಿತಿಯನ್ನು, ರಾಜಕೀಯ ಭ್ರಷ್ಟತೆಯನ್ನು. ಸಕಲ ವಿಧವಾದ ಹಿಂಸೆ ಅನಾಚಾರಗಳನ್ನು ತಡೆಯದೆ ಹೋಗುತ್ತಿದೆಯಲ್ಲ ಎನಿಸುತ್ತದೆ. ದಾನವಾಗಿ ಬಂದ ಭೂಮಿ ಪೂರಾ ಹಂಚಿಕೆ ಆಗಲಿಲ್ಲ. ಭೂಸಮಸ್ಯೆಗೆ ಕಾನೂನಿನ ಪರಿಹಾರ ಬೇಕಾಯಿತು. ಆ ಕಾನೂನು ಬಿಡಿಸಿದ ಸಮಸ್ಯೆಗಿಂತ ಸೃಷ್ಟಿಸಿದ ಸಮಸ್ಯೆಯೇ ಹೆಚ್ಚು. ಹಳ್ಳಿ ಹಳ್ಳಿಯಲ್ಲೂ ರಾಜಕೀಯ ಕ್ಷುದ್ರತೆ, ಒಡಕು, ಸಂಘರ್ಷ, ದುರಾಸೆ ತುಂಬಿ ಹೋಗಿದೆ. ನಗರಗಳಲ್ಲಂತೂ ರಾಜಕೀಯ–ಆರ್ಥಿಕ ಶಕ್ತಿ ಮುಗಿಲುಮುಟ್ಟಿ ನಿಂತಿದೆ. ಲಾಭವೊಂದೇ ಇಲ್ಲಿನ ಚಾಲಕಶಕ್ತಿ. ಚುನಾವಣೆ ಭ್ರಷ್ಟಾಚಾರದ ತೊಟ್ಟಿಲು. ಅಧಿಕಾರ ಲೂಟಿಗೆ ಸಾಧನ. ವಿನೋಬಾ

ಅವರಿಂದಲೂ, ಭೂಕ್ರಾಂತಿಯಂಥ ವಿಚಾರದಿಂದಲೂ ಜನರಿಗೆ ಈ ಎಲ್ಲ ಬಗೆಯ ಹೀನದೀನ ಸ್ಥಿತಿಯಿಂದ ಮುಕ್ತಿ ಸಿಗದೆ ಹೋದರೆ. ಮುಕ್ತರಾಗಲು ಸ್ಫೂರ್ತಿ ಬರದೆ ಹೋದರೆ ಇನ್ನಾವುದರಿಂದ ಬಂದೀತು ? ಬೇಸತ್ತ ಜನತೆ ಸಹಜವಾಗಿಯೆ ಈಗ ಹೆಚ್ಚು ಹೆಚ್ಚು ಕಮ್ಯೂನಿಸಂ ಅತ್ತ ವಾಲಬಹುದು. ಇದಾಗಲೇ ಕಾಣಬರುತ್ತಿದೆ. ಈ ಸ್ಥಿತಿಯಿಂದ ಮುಕ್ತರಾಗಲು ಜನ ಇನ್ನಾರಿಗೆ ಕಾಯಬೇಕೊ, ಇನ್ನಾವ ವಿಚಾರಕ್ಕೆ ಕಾಯಬೇಕೊ, ನಾಡಿಗೆ ಶುಭದಿನ ಎಂದಿಗೊ, ದೇವರೇ ಬಲ್ಲ !

೮

ಪುಸ್ತಕದ ಕೊನೆಗೆ ಶ್ರೀ ನಾರಾಯಣಸ್ವಾಮಿಯವರು ಸಂಕಲನ ಮಾಡಿಕೊಟ್ಟಿರುವ "ವಿನೋಬಾ ವಿಚಾರಧಾರೆ" ತುಂಬ ಉಪಯುಕ್ತವಾಗಿದೆ. ಪುಸ್ತಕಕ್ಕೆ ಪೂರಕವಾಗಿದೆ. ಹಸುವಿನ ನಾಲ್ಕು ಮೊಲೆಗಳಲ್ಲಿ ಹಾಲು ಹರಿದು ಬರುವಂತೆ, ಇಲ್ಲಿ ಸಾಮ್ಯಯೋಗ, ಸಮನ್ವಯ, ಸತ್ಯಾಗ್ರಹ, ಸರ್ವೋದಯ ಎಂಬ ನಾಲ್ಕು ಧಾರೆಗಳಲ್ಲಿ ವಿನೋಬಾ ಚಿಂತನ ಹರಿದುಬಂದಿದೆ. ಎಷ್ಟೊ ಉದ್ಗಾರ ವಾಕ್ಯಗಳು ಕಾವ್ಯದ ತುಣುಕುಗಳೇ ಆಗಿವೆ. ಪರಂಪರಾಗತ ಮೌಲ್ಯಗಳಿಗೆ, ಕಲ್ಪನೆಗಳಿಗೆ, ಶಬ್ದಗಳಿಗೆ ನವಯುಗಕ್ಕೆ ಸೂಕ್ತವಾದ ವಿಶ್ವಚಿಂತನದ ಹಿನ್ನೆಲೆಯಲ್ಲಿ ಮೂಡಿಬರುವ ಹೊಸ ಅರ್ಥವನ್ನು ಹೊಸ ರೂಪನ್ನು ಕೊಡುವುದರಲ್ಲಿ ವಿನೋಬಾ ತುಂಬ ಕುಶಲರು. ಜೊತೆಗೇ ಅವರೂ ಹೊಸ ಮಂತ್ರಸದೃಶ ಮಾತುಗಳನ್ನು ಶಬ್ದಗಳನ್ನೂ ಟಂಕಿಸಿಕೊಡುತ್ತಾರೆ. ಆತ್ಮವಿದ್ಯೆ—ವ್ಯವಹಾರವಿದ್ಯೆ ಒಂದರೊಡನೆ ಒಂದು ಭೇದವಿಲ್ಲದೆ ಹಾಸುಹೊಕ್ಕಾಗಿ ಬೆಸೆದುಕೊಂಡು ಬದುಕನ್ನು ಸೃಷ್ಟಿಸುವ ಕಲೆಯನ್ನು ಈ ಮಾತುಗಳು ತೋರ್ಪಡಿಸುತ್ತವೆ. ವಿನೋಬಾಜಿಯ ಚಿಂತನದ ಸೂಕ್ಷ್ಮತೆ, ಅಂತರಂಗದ ಪ್ರೇಮಲತೆ, ಕೋಮಲತೆ, ವ್ರತದ ಕಠೋರತೆ ಎಲ್ಲವೂ ಈ ಮಾತುಗಳಲ್ಲಿ ಒಡಮೂಡಿ ತೋರುತ್ತವೆ.

ವಿನೋಬಾ ಜೀವನದ ಘಟ್ಟಗಳ ಪಟ್ಟಿಯೂ ಉಪಯುಕ್ತ. ಜನನದಿಂದ ೧೯೭೫ರ ವರೆಗೆ ನಡೆದ ಘಟನೆಗಳ ಪಟ್ಟಿ. ಸ್ವಾರಸ್ಯವೆಂದರೆ ಪುಸ್ತಕದ ಒಡಲಿನಲ್ಲಿ ಲೇಖಕರು ಕೇವಲ ಸೂಚಿಸಿ ಮುಗಿಸಿರುವ ೧೯೭೦-೭೫ರ ಅವಧಿಯ ಘಟನೆಗಳನ್ನು ಈ ಪಟ್ಟಿಯಲ್ಲಿ ಬಿಡದೆ ಕೊಟ್ಟಿದ್ದಾರೆ. ಜೆ. ಪಿ. ಅವರಿಗೆ ಥಕಾಯಿತರ ಶರಣು. ಪ್ರಭಾವತಿ ಮರಣ, ಜೆ. ಪಿ.—ವಿನೋಬಾ ಚರ್ಚೆ ಹಾಗೂ ಭಿನ್ನಾಭಿಪ್ರಾಯ, ಸರ್ವಸೇವಾಸಂಘದಲ್ಲಿ ಇಬ್ಬಂದಿಯ ಸ್ಥಿತಿ. ಎಲ್ಲದರ ಪ್ರಸ್ತಾಪವಿದೆ. ಇವೆಲ್ಲವನ್ನು ಪುಸ್ತಕದ ಒಡಲಿನಲ್ಲಿ ಸ್ವಲ್ಪ ಮಟ್ಟಿಗೆ ವಿವರವಾಗಿ ಚಿತ್ರಿಸಬೇಕಾಗಿತ್ತು ಎನಿಸುತ್ತಿದೆ, ಮೊದಲೇ ಆಶಿಸಿದಂತೆ.

ನಮ್ಮ ಆಸೆ ನಿರೀಕ್ಷೆ ಹಾಗಿರಲಿ, ಇಲ್ಲಿ ಲೇಖಕರು ಕೊಡಮಾಡಿರುವ ಕೃತಿಮಾತ್ರ ಪರಿಣತ ಪ್ರಜ್ಞೆಯ ಪರಿಪಕ್ವ ಫಲ. ಶ್ರದ್ಧೆ ಅನುಭವ ಹಾಗೂ ಆದರದ ಅಡುಗೆ.

ಪದಚಿಹ್ನೆ

# ವಿನೋಬಾ–ಶರಣರ ಸಂಗ

— **ನಗುವನಹಳ್ಳಿ ಪಿ. ರತ್ನ**

ನವಭಾರತ ನಿರ್ಮಾಣ ಕಾರ್ಯದಲ್ಲಿ ಎಲ್ಲ ಮೂಲೆಗಳಿಂದಲೂ ಕೇಳಿ ಬರುತ್ತಿರುವ ಹೆಸರು ವಿನೋಬಾ. ಕಡುಬಡವರ, ದೀನದಲಿತರ ಏಳಿಗೆಗಾಗಿ ಶ್ರಮಿಸಿದವರಲ್ಲಿ ವಿನೋಬಾ ಅವರ ಹೆಸರನ್ನು ಮರೆಯುವಂತಿಲ್ಲ. ಇಂಥ ವ್ಯಕ್ತಿಯ ಜೀವನ ಚಿತ್ರಣವನ್ನು ಪುಸ್ತಕ ರೂಪದಲ್ಲಿ ತಂದು ಜನಸಾಮಾನ್ಯರಿಗೂ ಅರ್ಥವಾಗುವ ಹಾಗೆ ಸರಳ ಶೈಲಿಯಲ್ಲಿ ನಿರೂಪಿಸಿದವರೆಂದರೆ ಶ್ರೀ ಜಿ. ವಿ. ನಾರಾಯಣಮೂರ್ತಿ ಅವರು.

"ವಿನೋಬಾ" ಪುಟ್ಟ ಪುಸ್ತಕವಾದರೂ ಅವರ ಜೀವನ ಸಾಧನೆ ಹಾಗೂ ಸಂದೇಶವನ್ನು ಕುರಿತಾದಂತಹ ಕಿರುಹೊತ್ತಿಗೆ ಆಗಿದೆ. ವಿನೋಬಾ ಅವರ ಬಾಲ್ಯ, ವಿದ್ಯಾಭ್ಯಾಸ, ತಾಯಿಯಿಂದ ಪಡೆದ ದೀಕ್ಷೆ, ಅವರು ಬೆಳೆದು ಬಂದ ಪರಿಸರ, ಗಾಂಧೀಜಿಯಿಂದ ಪಡೆದ ಮಾರ್ಗದರ್ಶನ, ದೇಶಕ್ಕಾಗಿ ಹೋರಾಟ, ನಾಡುನುಡಿಗಳ ಹಿತಚಿಂತನೆ, ಉನ್ನತ ಆದರ್ಶ ಸ್ಥಾಪನೆಗಾಗಿ ಹೋರಾಟ, ಭೂದಾನ ಚಳುವಳಿಯ ಪಾತ್ರ ಮುಂತಾದ ವಿಷಯಗಳನ್ನು ಲೇಖಕರು ಸರಳವಾಗಿ, ನೇರವಾಗಿ, ಹೃದ್ಯವಾಗಿ ನಿರೂಪಿಸಿದ್ದಾರೆ.

"ವಯಸ್ಕರ ಶಿಕ್ಷಣ ಪುಸ್ತಕಮಾಲೆ"ಯಲ್ಲಿ ಅಚ್ಚಾಗಿರುವ ಈ ಪುಸ್ತಕವು ವಯಸ್ಕರ ತರಗತಿಗಳಲ್ಲಿ ವಿದ್ಯಾವಂತರಾದವರು ತಮ್ಮ ಓದನ್ನು ಮುಂದುವರಿಸಲು ಅನುಕೂಲವಾಗಲೆಂಬ ದೃಷ್ಟಿಯನ್ನು ಇಟ್ಟುಕೊಂಡು ಬರೆದುದಾಗಿದೆ.

ಏಳು ಅಧ್ಯಾಯಗಳಿರುವ ಈ ಕೃತಿ ವಿನೋಬಾ ಅವರ ವೈಯಕ್ತಿಕ ಹಾಗೂ ರಾಜಕೀಯ ಜೀವನವನ್ನು ಸಂಕ್ಷಿಪ್ತವಾಗಿ ಮಂಡಿಸುತ್ತದೆ. ಗಾಂಧೀಜಿ ತೀರಿಕೊಂಡ ಅನಂತರ ಅವರ ಸರ್ವೋದಯ ತತ್ವಕ್ಕೆ ಸಂಪೂರ್ಣ ಶರಣಾಗಿ, ತಮ್ಮ ಸರ್ವಸ್ವವನ್ನು ಸಮರ್ಪಿಸಿಕೊಂಡು ಗಾಂಧೀಜಿ ಸತ್ತಿಲ್ಲವೆಂಬ ಭಾವನೆಯನ್ನು ಮೂಡಿಸಿದ ಮಹಾನುಭಾವ ವಿನೋಬಾ ಅವರು. ಗಾಂಧೀಜಿಯವರ ಸರ್ವೋದಯ ಕಲ್ಪನೆಯನ್ನು ಕಾರ್ಯಗತಗೊಳಿಸುವ ಪ್ರಯತ್ನದಲ್ಲಿ ವಿನೋಬಾ ಮೊದಲಿಗರು.

ವಿನೋಬಾ ಅವರು ಮಹಾರಾಷ್ಟ್ರ ರಾಜ್ಯದ ಕೊಲಾಬಾ ಜಿಲ್ಲೆಯ ಗಾಗೋದೆ ಎಂಬ ಗ್ರಾಮದಲ್ಲಿ 11-9-1885ರಲ್ಲಿ [illegible] ಎಂಬ ಬ್ರಾಹ್ಮಣ ಮನೆತನದಲ್ಲಿ

ಜನಿಸಿದರು. ಇವರ ಬಾಲ್ಯ, ವಿದ್ಯಾಭ್ಯಾಸ, ಶಿಕ್ಷಣ ಕ್ರಮಗಳ ವಿಭಿನ್ನತೆ ಮುಂತಾದ ವಿಷಯಗಳನ್ನೆಲ್ಲಾ ಹೃದಯಂಗಮವಾಗಿ ಚಿತ್ರಿಸಲಾಗಿದೆ.

"ಮಕ್ಕಳಿಗೆ ಮನೆಯೇ ಪ್ರಥಮ ಪಾಠಶಾಲೆ" ಎನ್ನುವಂತೆ ತಾಯಿಯ ಪ್ರಭಾವವು ವಿನೋಬಾ ಅವರ ಮೇಲೆ ಅಗಾಧವಾದ ಪರಿಣಾಮ ಬೀರಿತ್ತು. ಆಕೆ ಒಂದು ಸಲ ತಮ್ಮ ಮಗನಿಗೆ ಹೀಗೆ ಹೇಳಿದರು : "ವಿವಾಹ ಮಾಡಿಕೊಂಡು ಚೆನ್ನಾಗಿ ಬಾಳುವವನು ತನ್ನ ಕುಟುಂಬಕ್ಕೆ ಒಳ್ಳೆಯ ಹೆಸರನ್ನು ತರುವವನು. ಆದರೆ ವಿವಾಹ ವನ್ನೇ ಮಾಡಿಕೊಳ್ಳದೆ ಬ್ರಹ್ಮಚಾರಿಯಾಗಿಯೇ ಇರುವವನು ನಲವತ್ತೆರಡು ತಲೆಮಾರು ಗಳನ್ನು ಪಾವನಗೊಳಿಸುವನು" "ದಾನ ನೀಡುವವನು ದೇವ. ದಾನ ನೀಡದವನು ದಾನವ" ಎಂಬ ತಾಯಿಯ ಮಾತು ಮಗನಿಗೆ ವೇದವಾಕ್ಯದಂತಾಗುತ್ತದೆ. ಹೀಗೆ ವಯಸ್ಕರಿಗೆ ಮನಮುಟ್ಟುವಂತೆ ನಾರಾಯಣಮೂರ್ತಿ ಅವರು ಕೃತಿ ರಚಿಸುವಲ್ಲಿ ಶಕ್ತರಾಗಿದ್ದಾರೆ. ಅನಿವಾರ್ಯವಾದ ಕ್ಲಿಷ್ಟ ಪದಗಳಿಗೆ ಸರಳಾರ್ಥವನ್ನು ಒದಗಿಸಿ ಪುಸ್ತಕ ಪ್ರಯೋಜನವಾಗುವಲ್ಲಿ ನೆರವಾಗಿದ್ದಾರೆ. ವಿನೋಬಾ ಅವರಿಗೆ ತಂದೆ ತಾಯಿಗಳು ಇಟ್ಟ ಹೆಸರು "ವಿನಾಯಕ". ಇವರು ಇಪ್ಪತ್ತೊಂದನೇ ವಯಸ್ಸಿನಲ್ಲಿ ಗಾಂಧೀಜಿ ಅವರ ಆಶ್ರಮವನ್ನು ಸೇರಿ ಅವರ ಮೆಚ್ಚುಗೆ ಪಡೆದು ವಿನೋಬಾ ಎಂಬ ಹೆಸರನ್ನು ಪಡೆದರು.

ಗ್ರಾಮದಾನದ ಚಳುವಳಿಯ ಪಿತ. ಭೂದಾನ ಯಜ್ಞದ ಅಧ್ವರ್ಯ ವಿನೋಬಾ ಭಾವೆ ಎಂಬ ಹೆಸರನ್ನು ಪಡೆದರು. 1951ರ ಮಾರ್ಚ್ 8ರಂದು ಹೈದರಾಬಾದಿನ ಶಿವರಾಮಪಲ್ಲಿಯಲ್ಲಿ ಸರ್ವೋದಯ ಕಾರ್ಯಕರ್ತರ ಅಧಿವೇಶನ ಏರ್ಪಟ್ಟಿತ್ತು. ವಿನೋಬಾ ಅವರು ವರ್ಧಾದಿಂದ ಪಾದಯಾತ್ರಿಕರಾಗಿಯೇ ಶಿವರಾಮಪಲ್ಲಿಯನ್ನು ಸೇರಿ ಅಧಿವೇಶನದಲ್ಲಿ ಭಾಗಿಯಾಗಿದ್ದರು. ಪ್ರಪ್ರಥಮವಾಗಿ ಇಲ್ಲಿಂದಲೇ ಭೂದಾನ ಚಳುವಳಿಯನ್ನು ಪ್ರಾರಂಭಿಸಿ, ಭೂದಾನ ಚಳುವಳಿಗೆ ಒಂದು ಹೊಸ ರೂಪವನ್ನೇ ಕೊಟ್ಟುಬಿಟ್ಟರು.

ವಿನೋಬಾ ಅವರು ಬಹುಭಾಷಾ ಪಂಡಿತರು. ಇವರು ಭಗವದ್ಗೀತೆಯ ಮೇಲೆ ಕೊಟ್ಟ ಉಪನ್ಯಾಸಗಳು "ಗೀತಾಪ್ರವಚನ" ಎಂಬ ಹೆಸರಿನಿಂದ ಅತ್ಯಂತ ಜನಪ್ರಿಯ ವಾಗಿದೆ. ವಿನೋಬಾ ಅವರ ಮಾರ್ಗದರ್ಶನದಿಂದ ಭಾರತದಲ್ಲಿ ಹೊಸದೊಂದು ಸಮಾಜ ರಚನೆಯಾದಂತಾಯಿತು. ದೇಶದ ಜನತೆಗೆ "ಜೈಜಗತ" ಎಂಬ ಜಯಘೋಷ ವನ್ನು ಹೇಳಿರುತ್ತಾರೆ.

ಸ್ವಾತಂತ್ರ್ಯ ಸಂಗ್ರಾಮದ ಹೋರಾಟ. ಸತ್ಯಾಗ್ರಹಗಳ ಸೆರೆಮನೆವಾಸ, ಸರ್ವೋ ದಯದ ನಾಯಕತ್ವ. ಭೂದಾನ ಚಳುವಳಿಗೆ ಪಾದಯಾತ್ರಿಕರಾಗಿ ದೇಶವನ್ನೆಲ್ಲಾ

ಸಂಚಾರ ಮಾಡಿದ್ದು, ಈ ಎಲ್ಲಾ ಸಂದರ್ಭಗಳನ್ನೂ ಲೇಖಕರು ಸರಳ ಶೈಲಿಯಲ್ಲಿ ರೋಮಾಂಚಕವಾಗಿ ಚಿತ್ರಿಸಿದ್ದಾರೆ.

ಒಬ್ಬ ಉದಾತ್ತ, ಉನ್ನತ ವ್ಯಕ್ತಿಯ ಜೀವಂತ ಪರಿಚಯ ಈ ಪುಸ್ತಕವಲ್ಲಿ ಆಗುವುದರ ಜೊತೆಗೆ. ಭೂದಾನ ಚಳುವಳಿಯ ನಾಯಕತ್ವ ಹಾಗೂ ಹಿಂದಿನ ತಾತ್ವಿಕ ನೆಲೆಗಟ್ಟುಗಳನ್ನು ಮನವರಿಕೆ ಮಾಡಿಕೊಡುವ ಪ್ರಯತ್ನ ಇಲ್ಲಿದೆ. ಪ್ರಕೃತ ಕೃತಿಯಲ್ಲಿ ಜಿ. ವಿ. ನಾರಾಯಣಮೂರ್ತಿ ಅವರು ಸರಳವಾದ ಶೈಲಿಯಲ್ಲಿ ಎಲ್ಲರ ಮೆಚ್ಚುಗೆಗೂ ಪಾತ್ರವಾಗುವಂತೆ ವಿಷಯ ಬರೆದಿದ್ದಾರೆ.

## 'ಶರಣರಸಂಗ'

ಈ ಕೃತಿಯು ಹೆಸರೇ ಸೂಚಿಸುವಂತೆ ಶರಣರ ಸಂಕ್ಷಿಪ್ತ ಜೀವನ ಚರಿತ್ರೆ ಹಾಗೂ ಅವರುಗಳ ಬೋಧನೆಯನ್ನು ತಿಳಿಸುವಂತಹ ಪುಟ್ಟ ಪುಸ್ತಕವಾಗಿದೆ. ಶರಣರ ಬದುಕು ಉಜ್ವಲಗೊಳಿಸಲು, ವ್ಯಕ್ತಿತ್ವ ಧೀಮಂತಗೊಳಿಸಲು, ಬದುಕಿನಲ್ಲಿ ಮಾರ್ಗದರ್ಶನ ಪಡೆಯಲು ಅನುಸರಿಸಿದ ಕ್ರಮಗಳನ್ನು ಜಿ. ವಿ. ನಾರಾಯಣಮೂರ್ತಿ ಅವರು ಸರಳವಾಗಿ, ಸುಲಭಗ್ರಾಹ್ಯವಾಗಿ ನಿರೂಪಿಸಿರುತ್ತಾರೆ.

ಪ್ರಸ್ತುತ ಕೃತಿಯಲ್ಲಿ ಐದು ಜನ ಸಂತರ ವಿಚಾರವನ್ನು ತಿಳಿಯಪಡಿಸಿದ್ದಾರೆ. ಒಬ್ಬೊಬ್ಬ ಶರಣರ ಜೀವನದಿಂದ ಒಂದೊಂದು ಮುಕ್ತಿಮಾರ್ಗವನ್ನು ಪಡೆಯಲು, ಅವರ ಆದರ್ಶ ಜೀವನವನ್ನು, ತೋರಿದ್ದಾರೆ. ವಯಸ್ಕರನ್ನು ದೃಷ್ಟಿಯಲ್ಲಿಟ್ಟುಕೊಂಡು ಈ ಕಿರು ಪುಸ್ತಕವನ್ನು ರಚಿಸಿರುವುದರಿಂದ ಇದರ ಪ್ರಯೋಜನ ಅಪಾರವಾಗಿದೆ. ಒಟ್ಟಿನಲ್ಲಿ ಈ ಕಿರು ಕೃತಿಯು ಭಕ್ತಿರಸಪ್ರಧಾನವೆಂಬುದನ್ನು ತಿಳಿಯಬಹುದು.

"ಅಸ್ಪೃಶ್ಯರೆಂಬ" ಭಾವನೆ ನಿವಾರಣೆಯಾಗಲು ತಿಳಿಯಪಡಿಸಲು ಯತ್ನಿಸುವಲ್ಲಿ ಲೇಖಕರು "ನರಸಿಂಹ ಮೆಹತಾ"ರಂತಹವರ ಸತ್ಪುರುಷರ ವಿಚಾರವನ್ನು ನಿರೂಪಿಸಿ. ಆ ಭಾವನೆಯನ್ನು ಮನವಟ್ಟಾಗುವಂತೆ ಚಿತ್ರಿಸುವುದರಲ್ಲಿ ಯಶಸ್ವಿಯಾಗಿದ್ದಾರೆ.

ಅಷ್ಟೆ ಅಲ್ಲ ಸಂದರ್ಭೋಚಿತ ಘಟನೆಗಳಿಗೆ ತಕ್ಕ ಚಿತ್ರಗಳನ್ನು ಅಳವಡಿಸಿ, ಓದುಗರ ಆಸಕ್ತಿಯನ್ನು ಕೆರಳಿಸುವುದರಲ್ಲಿ ನಾರಾಯಣಮೂರ್ತಿ ಸಫಲತೆ ಹೊಂದಿದ್ದಾರೆ.

ಕಬೀರ, ನಾನಕ ಮತ್ತು ತುಕಾರಾಮ ಇವರುಗಳು ಬಡತನದಲ್ಲಿ ಹುಟ್ಟಿ ಬೆಳೆದು ಸಾಂಸಾರಿಕ ಕ್ಲೇಶಗಳಿಗೆ ಒಳಗಾಗಿಯೂ. ಆಧ್ಯಾತ್ಮಿಕ ಜೀವನದತ್ತ ಒಲವು ತೋರಿಸಿದ ಬಗೆಯನ್ನು ವಿವರಿಸಿದ್ದಾರೆ.

"ಸತ್ತ ಹಿರಿಯರಿಗೆ ತರ್ಪಣ ಕೊಡುತ್ತಿದ್ದ ಜನರನ್ನು ಕಂಡು ನಾನಕನು ಬೊಗಸೆ ನೀರನ್ನು ತನ್ನ ಜಮೀನಿಗೆಂದು ಮೇಲಕ್ಕೆ ಎಸೆಯುತ್ತಿರುತ್ತಾನೆ. ಅದನ್ನು ಕಂಡು 'ಇಲ್ಲಿಂದ ಎರಚಿದ ನೀರು ಗ್ರಾಮದ ಜಮೀನಿಗೆ ಸೇರಲು ಸಾಧ್ಯವೆ?' ಎಂದು ಶಾಸ್ತ್ರ ಕೇಳುತ್ತಾರೆ. ಸ್ವರ್ಗದಲ್ಲಿರುವ ಹಿರಿಯರಿಗೆ ಇಲ್ಲಿಂದ ಎರಚಿದ ನೀರು ತಲುಪುವುದಾದರೆ ಇದೂ ಸಾಧ್ಯವೆ" ಎಂದು ನಾನಕ ಉತ್ತರಿಸುತ್ತಾನೆ.

ಈ ಸಂಭಾಷಣೆಯನ್ನು ಗಮನಿಸಿದಾಗ ಮನುಷ್ಯರಿಗೆ ವೈಚಾರಿಕ ಮನೋಭಾವ ಹಾಗೂ ವಿಶಾಲ ದೃಷ್ಟಿಕೋನ ಮತ್ತು ವಿಚಾರ ಮಾಡುವ ಶಕ್ತಿ ಅವರಲ್ಲಿ ಬರಬೇಕು ಎಂಬ ದೃಷ್ಟಿಕೋನವನ್ನಿಟ್ಟುಕೊಂಡು ಲೇಖಕರು ರಚಿಸಿದ್ದಾರೆನಿಸುತ್ತದೆ.

"ರಾಮದಾಸ" ಎಂಬುವರು ಮತ್ತೊಬ್ಬ ಸಂತರು. ಹುಟ್ಟಿದ ಹೆಸರು "ನಾರಾಯಣ" ಎಂದು. ರಾಮಜಪವನ್ನು ಜಪಿಸಿ, ಉಗ್ರ ತಪಸ್ಸನ್ನು ಮಾಡಿ ಬಾಳಿನ ಮರ್ಮ ಅರಿತು ನಾರಾಯಣ "ರಾಮದಾಸ" ಆದರು. ಒಂದೇ ದೃಢಚಿತ್ತದಿಂದ ತಪಸ್ಸು ಮಾಡಿದ ಫಲ ಏನು ಎಂಬುದರ ಅರಿವಾಗುತ್ತದೆ. ಭಕ್ತಿಯನ್ನೇ ಪ್ರಧಾನವಾಗಿಟ್ಟುಕೊಂಡರೆ ಮಾನವ "ದೇವರಾಗ"ಬಹುದು ಎಂದು ತಿಳಿದು ಬರುತ್ತದೆ. ರಾಮದಾಸರು ತಮ್ಮ ಬೋಧನೆಯನ್ನು ಗೀತೆಗಳ ಮೂಲಕ ಹಾಡಿದ್ದಾರೆ.

ಸಂತರ ಅಥವಾ ಶರಣರ ವಿಚಾರವನ್ನು ಭಾಷೆಯ ಸುಲಭತೆಯಿಂದ, ಸರ್ವಗ್ರಾಹ್ಯವಾಗುವಂತೆ ರಚಿಸುವಲ್ಲಿ ನಾರಾಯಣಮೂರ್ತಿ ಅವರು ಪರಿಣತರಾಗಿದ್ದಾರೆ. ಸತ್ಪುರುಷರು. ಶರಣರು. ಸಂತಕವಿಗಳ ಜೀವನ ಅವರ ಸಾಧನೆ ಮತ್ತು ಗೀತೆಗಳ ಸಾರಾಂಶವನ್ನು ಕುರಿತಾದ ಈ ಕಿರು ಹೊತ್ತಿಗೆಯು ಆಸಕ್ತಿಯಿಂದ ಓದಿಸಿಕೊಂಡು ಹೋಗುತ್ತದೆ.

ಪದಚಿಹ್ನೆ

# ಸತೀ ಕಸ್ತೂರೀಬಾ

ಪದ್ಮಾಶೇಖರ್ (ಟಿ. ವಿ. ಪದ್ಮಾವತಿ)

'ಗೃಹಣೀ ಗೃಹಮುಚ್ಯತೇ' 'ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರದೇವತಾಃ'—ಮುಂತಾಗಿ ಸ್ತ್ರೀಯನ್ನು ಪೂಜನೀಯಳೆಂದು ಗೌರವಿಸುವ ಸಮಾಜವೇ 'ನಸ್ತ್ರೀ ಸ್ವಾತಂತ್ರ್ಯಮರ್ಹತಿ' ಎಂದು ಉದ್ಘೋಷಿಸಿತು. ಇದನ್ನು ಪ್ರತಿಭಟಿಸುವ ಚೇತನ ಅಂದಿನ ಹೆಣ್ಣಿಗಿರಲಿಲ್ಲ. ನಾಲ್ಕು ಗೋಡೆಯನ್ನೇ ತನ್ನ ಪ್ರಪಂಚವೆಂದಾಕೆ ಭಾವಿಸುವುದು ಅನಿವಾರ್ಯವಾಯಿತು. ಸಮಾಜ ನಿಂತ ನೀರಲ್ಲ: ಹರಿವ ಹೊಳೆ. ಜೀವನಕ್ರಮ ಬದಲಾದಂತೆ ಸಮಾಜದ ಮೌಲ್ಯಗಳೂ ಬದಲಾಗ ತೊಡಗಿದವು. ಈ ಬದಲಾದ ಸಮಾಜದಲ್ಲಿ ಹೆಣ್ಣು ಅಲ್ಪ ಅಲ್ಪವಾಗಿ ತನ್ನ ಸಾಮಾಜಿಕ ಜವಾಬ್ದಾರಿಯನ್ನು ಅರಿತುಕೊಂಡಳು. ತನಗೂ ತನ್ನದೇ ಆದ ಧ್ವನಿಯಿದೆ ಎಂಬುದನ್ನು ಗುರುತಿಸಿಕೊಂಡಳು. ಈ ಭಾವನೆಯ ಉಚ್ಛ್ರಾಯ ಸ್ಥಿತಿಯನ್ನು 12ನೇ ಶತಮಾನದಲ್ಲಿ ದರ್ಶಿಸಬಹುದು. ವಚನಕಾರರು ಸ್ತ್ರೀಗೆ ಮುಕ್ತ ಸ್ವಾತಂತ್ರ್ಯವನ್ನು ಕೊಟ್ಟರು. ಹೆಣ್ಣು ಸೃಷ್ಟಿಕರ್ತಳು ಮಾತ್ರವೇ ಅಲ್ಲ 'ಪರಾಶಕ್ತಿ'ಯೂ ಹೌದೆಂದು ವಚನಯುಗ ಪರಿಚಯಿಸಿತು. ಹೆಣ್ಣು ಗಂಡುಡುಗೆ ತೊಟ್ಟು ರಣಕಲಿಯಾಗಿಯೂ ಮೆರೆದಳು. ಕಿತ್ತೂರುಚೆನ್ನಮ್ಮ, ಝಾನ್ಸಿರಾಣಿ, ಚಿತ್ತೂರ ಪದ್ಮಿನಿ ಈ ದಿಕ್ಕಿನಲ್ಲಿ ನಡೆದು ಬದುಕಿನ ಸಾರ್ಥಕ್ಯ ಕಂಡುಕೊಂಡವರು. ಕಸ್ತೂರೀಬಾರವರ ಬದುಕು ಇದೇ ದಿಸೆಯದಾದರೂ ಮೇಲಿನವರಿಗಿಂತ ಭಿನ್ನವಾದುದು. ಇದಕ್ಕೆ ಅವರು ಬೆಳೆದ ಪರಿಸರ, ಸಾಧಿಸಿದ ಉದ್ದೇಶ ಮುಂತಾದವು ಕಾರಣವಾಗುತ್ತವೆ ಎಂಬುದನ್ನೂ ಮರೆವಂತಿಲ್ಲ. ಹಾಗೆ ನೋಡಿದರೆ ಮೇಲಿನವರಿಗಿಂತ ಕಸ್ತೂರೀಬಾ ನಮಗೆ ಹತ್ತಿರದವಳು: ಆತ್ಮೀಯಳು. ಏಕೆ ಎಂದರೆ ಈಕೆ ಗತಕಾಲದ ವ್ಯಕ್ತಿಯಲ್ಲ. ಐತಿಹಾಸಿಕವಾಗಿ ಆಕೆಯನ್ನು ಹುಡುಕಬೇಕಾದ ಅಗತ್ಯವೂ ಇಲ್ಲ. ಕಾರಣ ಈಕೆ ವರ್ತಮಾನದವಳು. ಅವಳು ಬದುಕಿನಲ್ಲಿ ಸಾಧಿಸಿದ, ನಡೆಸಿದ ರೀತಿನೀತಿಗಳು ನಮ್ಮ ಮುಂದೆ ಇನ್ನೂ ಜೀವಂತವಾಗಿವೆ; ಮಾರ್ಗದರ್ಶಿಯಾಗಿವೆ.

'ಸತೀ ಕಸ್ತೂರೀ ಬಾ' ಅರವತ್ತೆಂಟು ಪುಟದ ಕಿರುಹೊತ್ತಿಗೆ: ಒಂದು ಅನುವಾದ ಕೃತಿ. ಇದರಲ್ಲಿ ಆಕೆಯ ಹುಟ್ಟಿನಿಂದ ಮೊದಲ್ಗೊಂಡು ಅಂತಿಮಕ್ರಿಯೆ ನಡೆದವರೆಗಿನ ಪೂರ್ಣ ಜೀವನಚಿತ್ರವಿದೆ. ಜನನ-ಬಾಲ್ಯ, ಮದುವೆ-ದಂಪತಿ, ದಕ್ಷಿಣ ಆಫ್ರಿಕಾದ ಕರೆ, ಗೃಹಸತ್ಯಾಗ್ರಹ, ಕಸ್ತೂರೀಬಾರವರ ಧೈರ್ಯ, ಆದರ್ಶದ ಕರೆ,

ಭಾರತಕ್ಕೆ ಪುನರಾಗಮನ, ಸೆರೆಮನೆವಾಸ, ಕೊನೆಯ ಬಂಧನ. ಸಂಚಯನ. ಸಂಸ್ಕಾರ ಕ್ರಿಯೆ. ಅಂತ್ಯಕಾಲ. ಶೋಕತಪ್ತ ಭಾರತ-ಗಳೆಂಬುದಾಗಿ ಕ್ರಮಾನುಗತವಾಗಿ ಅವರ ಬದುಕನ್ನು ಗ್ರಹಿಸಲಾಗಿದೆ.

ಕಸ್ತೂರಿಬಾ ಪೋರ್‌ಬಂದರಿನಲ್ಲಿ ಏಪ್ರಿಲ್ 1869ರಲ್ಲಿ ಜನಿಸಿದರು ಇವರ ತಂದೆ ಗೋಕುಲದಾಸ ಮಕಂಜಿ : ವರ್ತಕರು. ಗಾಂಧೀಜಿ ತಂದೆ ಕರಮ್‌ಚಂದರಿಗೂ ಗೋಕುಲದಾಸರಿಗೂ ಗಳಸ್ಯಕಂಠಸ್ಯ. ಹಾಗಾಗಿ ಈ ಎರಡೂ ಮನೆಯ ನಡುವಿನ ಸಂಬಂಧ ಇಬ್ಬರಿಗೂ ಪ್ರಿಯವಾದುದಾಗಿತ್ತು. ಕಸ್ತೂರಿಬಾಳ ಏಳನೇ ವಯಸ್ಸಿನಲ್ಲೇ ಗಾಂಧಿಯವರೊಂದಿಗೆ 'ವೀಳೆಯಶಾಸ್ತ್ರ' ಮುಗಿಸಲಾಯಿತು. ಕೆಲಕಾಲದ ತರುವಾಯ 1882ರಲ್ಲಿ ವಿವಾಹ ಜರುಗಿತು. ಆಗ ದಂಪತಿಗಳಿಬ್ಬರ ವಯಸ್ಸೂ ಒಂದೇ ಆಗಿತ್ತು. ಅಂದರೆ ಹದಿಮೂರು ವರ್ಷಗಳು. ಇವರ ಬದುಕಿನಲ್ಲಿ ವಿವಾಹದ ಘಟನೆಯ ಅರ್ಥ ಹೀಗಿತ್ತು —'ಆಟ ಆಡಲು ಪರಸ್ಪರ ದೊರೆತ ಸಂಗಾತತ್ವ'.

ಇಲ್ಲಿಂದ ಕಸ್ತೂರಿಬಾರವರ ನೈಜ ಚಿತ್ರಣವನ್ನು ಲೇಖಕ ಕೊಡಲು ಯತ್ನಿಸಿದ್ದಾರೆ. ಗಾಂಧಿಯನ್ನು ದೈವತ್ವಕ್ಕೇರಿಸಿ ಇಂದು ಪೂಜಿಸುವ ನಾವು ಅವರ ಸಾಮಾನ್ಯ ನಡವಳಿಕೆಯಿಂದ ವಿನಾಯಿತಿ ಕೊಟ್ಟುಬಿಡುತ್ತೇವೆ. ಕಾರಣ ಅವರು ನಮ್ಮ ದೃಷ್ಟಿಯಲ್ಲಿ ಮಹಾನ್ ವ್ಯಕ್ತಿ. ಆದರೆ ವಸ್ತುಸ್ಥಿತಿ ಹಾಗಿಲ್ಲ. ಗಾಂಧೀಜಿ ಮತ್ತು ಕಸ್ತೂರಿಬಾರವರ ದಾಂಪತ್ಯದ ಬದುಕನ್ನು ಓದಿದ ಯಾರಾದರೂ ಗಾಂಧೀಜಿ ನಮ್ಮಂತೆ ಸಾಮಾನ್ಯ ವ್ಯಕ್ತಿಯೂ ಆಗಿದ್ದರು ಎಂಬುದನ್ನು ಮರೆಯಲಾರರು. ಈ ಅಭಿಪ್ರಾಯವನ್ನು ಕಸ್ತೂರಿಬಾರವರ ಬದುಕು ನಮಗೆ ಪರಿಚಯಿಸುತ್ತದೆ.

ಕಸ್ತೂರಿಬಾ ಸರಳಸ್ವಭಾವದವಳು; ಸ್ವಾತಂತ್ರ್ಯಪ್ರಿಯೆ: ಗಂಭೀರೆ: ಅವಿದ್ಯಾವಂತೆ. ಕಲಿತ ಗಾಂಧೀಜಿಯೂ ಆಕೆಯನ್ನು ಓದಿಗೆ ಹಚ್ಚಲಿಲ್ಲ. ಇದಕ್ಕೆ ಗಾಂಧಿ ಕೊಡುವ ಕಾರಣವಿದು —'ನನ್ನ ಹೆಂಡತಿ ನನಗೆ ವಿಧೇಯಳಾಗಿರಬೇಕು. ಆಕೆಯಿಂದ ಸೇವೆ ಪಡೆಯುವುದು ನನ್ನ ಹಕ್ಕು. ಆ ಹಕ್ಕನ್ನು ನಾನು ಚೆನ್ನಾಗಿ ಉಳಿಸಿಕೊಳ್ಳಬೇಕು. ಆಕೆಯ ವಿಧೇಯತೆ ವಿಷಯದಲ್ಲಿ ನನಗೆ ಅಪನಂಬಿಕೆ ಇಲ್ಲದಿದ್ದರೂ ಏನು ಬಗೆಯ ಅಸೂಯೆ ನನ್ನನ್ನು ಬಾಧಿಸುತ್ತಿತ್ತು. ಆದ್ದರಿಂದ ಆಕೆಯ ನಡವಳಿಕೆಯನ್ನೆಲ್ಲಾ ನಾನು ಮೈಯೆಲ್ಲ ಕಣ್ಣಾಗಿ ನೋಡುತ್ತಿದ್ದೆ. ನನ್ನ ಅಪ್ಪಣೆಯಿಲ್ಲದೆ ಆಕೆ ಎಲ್ಲಿಗೆ ಹೋಗಲು ಅವಕಾಶವಿರಲಿಲ್ಲ' (ಪು. 3–4). ಇದು ಯಾವ ಮೂರ್ಖ ವ್ಯಕ್ತಿಯೂ ಮಾಡಬಹುದಾದ ಕೆಲಸ. ಬಲಾತ್ಕಾರದಿಂದ ಸೇವೆಯನ್ನು ಹೊಂದುವುದು ಕ್ಷಮಾರ್ಹವಲ್ಲದ ವಿಷಯ. ಇಂದಿಗೂ ಈ ಪ್ರವೃತ್ತಿಯಿಂದ ನಮ್ಮ ಪುರುಷ ವರ್ಗ ಮುಕ್ತವಾಗಿಲ್ಲ. ಹೆಣ್ಣನ್ನು ತೊತ್ತಿನಂತೆ ಆ ವರ್ಗ ದುಡಿಸಿಕೊಳ್ಳುತ್ತಿದೆ. ಇದಕ್ಕೆ ಗಾಂಧೀಜಿಯಂಥವರೇ ಸಾಮಿಲಾಗಿದ್ದು

ಮೇಲೆ ಸಾಮಾನ್ಯ ಜನತೆ ಹೇಗೆ ತಾನೇ ಹೊರತಾಗಿ ನಿಲ್ಲಬಲ್ಲುದು? ಬಹುಶಃ ಇದೇ ಹೆಣ್ಣು ಸಂಪ್ರದಾಯದ ಸೋಗಿಗೆ ಒಳಗಾಗುವುದಕ್ಕೆ ಕಾರಣವೂ ಆಗಿರಬಹುದು.

ಆದರೆ ಈ ಅಂಶ ಸಹಜವಾಗಿ ಸರಳಸ್ವಭಾವದವಳಾದ ಕಸ್ತೂರಿಬಾಳನ್ನು ರೊಚ್ಚಿಗೆಬ್ಬಿಸಿತು. ಹೆಣ್ಣು 'ಕಾರ್ಯೇಷುದಾಸಿ ಕ್ಷಮಯಾಧರಿತ್ರಿ'ಯಾದರೂ ಅದಕ್ಕೂ ಒಂದು ನಿರ್ದಿಷ್ಟ ಎಲ್ಲೆಯಿದೆ. ಅದು ಮೀರಿದಾಗಲೇ ಆಕೆ ಮಹಾಕಾಳಿಯಾಗುವುದು. ಇಲ್ಲಿಯೂ ಅಷ್ಟೇ. ಗಾಂಧೀಜಿಯವರ ಅನುರೋಧ ಜಾಸ್ತಿಯಾದಂತೆ ಕಸ್ತೂರಿಬಾಳ ಸಹನೆಯ ಕಟ್ಟೆ ಒಡೆಯಿತು. ತಮಗಿಷ್ಟ ಬಂದಂತೆ ನಡೆದುಕೊಳ್ಳ ತೊಡಗಿದರು. ಈಗ ಅಸಹಾಯಕರಾಗಿ ನಿಲ್ಲುವುದು ಗಾಂಧೀಜಿ ಸರದಿಗೆ ಬಂತು. ಬಿದ್ದರೂ ಮೀಸೆ ಮಣ್ಣಾಗಲಿಲ್ಲವಂತೆ. ಹಾಗೆ ಗಾಂಧೀಜಿ ತಮ್ಮ ಸೋಲಿಗೆ ಕೊಡುವ ಕಾರಣ ನೋಡಿ: "ನನ್ನ ಪ್ರೇಮವೆಲ್ಲ ಒಂದೇ ಹೆಣ್ಣಿನಲ್ಲಿ ಕೇಂದ್ರೀಕೃತವಾಗಿತ್ತು. ಆಕೆಯು ಅದೇ ರೀತಿ ಇರಬೇಕೆಂದು ನನ್ನ ಅಭಿಲಾಷೆಯಾಗಿತ್ತು." ಅತಿಯಾದ ಪ್ರೇಮ ಹೆಣ್ಣನ್ನು ಹೇಗೆ ನಿರ್ಬಂಧಿಸುತ್ತದೆ ಎಂಬುದಕ್ಕೆ ಇದೊಂದು ನಿದರ್ಶನ.

ಕಸ್ತೂರಿಬಾಳದು ಬಾಲ್ಯವಿವಾಹ. ಬಾಲ್ಯಸಹಜ ಆಸೆ ಆಕಾಂಕ್ಷೆಗಳಿಂದ ಆಕೆಯಿನ್ನೂ ಮುಕ್ತಳಾಗಿರಲಿಲ್ಲ. ಬದುಕಿನಲ್ಲಿ ತುಂಬು ಕುತೂಹಲ ಆಕೆಗೆ. ಸ್ವಂತ ವ್ಯಕ್ತಿತ್ವ ರೂಪಿಸಿಕೊಳ್ಳಲು ಬಯಸಿದಷ್ಟೂ ಗಾಂಧೀಜಿಯವರ ಬಂಧನ ಬಿಗಿಯಾಗುತ್ತಿತ್ತು. ಆದರೂ ಆಕೆ ಪತ್ನಿ : ಪತಿಯ ಕಷ್ಟಸುಖಗಳಲ್ಲಿ ಸಮಭಾಗಿ ; ತಾಯಾಗಿ ಆಕೆಗಿದ್ದ ಹೊಣೆಗಾರಿಕೆಯೂ ಅಪಾರ. ದಕ್ಷಿಣ ಆಫ್ರಿಕಕ್ಕೆ ಗಾಂಧೀಜಿ ಕುಟುಂಬದೊಂದಿಗೆ ತೆರಳಿದಾಗ ಅಲ್ಲಿಗೆ ತಕ್ಕಂತೆ ಉಡುಗೆಯನ್ನು ತೊಡಲು ನಿರ್ಧರಿಸಿದರು. ಷೂ ಮತ್ತು ಕಾಲುಚೀಲ ಹಾಕಿಕೊಳ್ಳುವುದರಿಂದ ಗಾಯವಾಗುತ್ತಿದ್ದರೂ. ತಮ್ಮ ಬದುಕಿನ ಮಟ್ಟವನ್ನು ತೋರಿಸುವ ಆಡಂಬರ ಗಾಂಧೀಜಿಗೆ ಇದು ಗಾಂಧೀಜಿಯವರ ಪರದೇಶೀ ವಸ್ತು ವ್ಯಾಮೋಹವನ್ನು ಸೂಚಿಸುತ್ತದೆ.

ಗಾಂಧೀಜಿ ಬಲು ಕಠೋರ ಪತಿ. ಡರ್ಬನ್ನಿನಲ್ಲಿದ್ದಾಗ ನಡೆದ ಪ್ರಸಂಗವಿದು – ಪಾಶ್ಚಾತ್ಯ ಶೈಲಿಯಲ್ಲಿರುವ ಗಾಂಧೀಜಿಯ ಮನೆಯಲ್ಲಿ ಬಚ್ಚಲಿನ ವ್ಯವಸ್ಥೆಯಿರಲಿಲ್ಲ. ಅದಕ್ಕಾಗಿ ಪ್ರತಿ ಕೊಠಡಿಯಲ್ಲಿ ಕೊಳಚೆ ನೀರಿಗಾಗಿ ಮಡಕೆಗಳನ್ನು ಇಟ್ಟು. ಅವನ್ನು ತಾವೇ ತೊಳೆಯಬೇಕಾಗುತ್ತಿತ್ತು. ಒಮ್ಮೆ ಈಸಾಯಿಯೊಬ್ಬನ ಮಡಕೆಯನ್ನು ಕಸ್ತೂರಿಬಾ ತೊಳೆಯಬೇಕಾದ ಸನ್ನಿವೇಶ. ಕಸ್ತೂರಿಬಾ ನಿರಾಕರಿಸಿದರು. ಗಾಂಧೀಜಿ ತಮ್ಮ ಪಟ್ಟು ಬಿಡದೆ ಆಕೆಯೇ ತೊಳೆಯಬೇಕೆಂದು ಬಲಾತ್ಕರಿಸಿದರು. ಬಲಾತ್ಕಾರದ ಕ್ರಿಯೆ ಗಾಂಧೀಜಿಗೆ ಹಿಡಿಸದ 'ಈ ಬಗೆಯ ವರ್ತನೆ ನನ್ನ ಮನೆಯಲ್ಲಿ

ಕಸ್ತೂರೀ ಬಾರ ಬದುಕಿನ ಮುಂದಿನ ಘಟ್ಟದಲ್ಲಿ ರಾಷ್ಟ್ರಪ್ರೇಮಿಯೊಬ್ಬಳ ತ್ಯಾಗ, ಧೈರ್ಯ, ಸಾಹಸಗಳನ್ನು ಕಾಣುತ್ತೇವೆ.

1906ರಲ್ಲಿ ಗಾಂಧೀಜಿ ಬಿಳಿಯರ ದೌರ್ಜನ್ಯದಿಂದ ಭಾರತೀಯರನ್ನು ರಕ್ಷಿಸುವ ಚಳುವಳಿಗೆ ಕರೆಗೊಟ್ಟರು, ಸಂಸಾರ ಆದರ್ಶವೆರಡನ್ನೂ ಏಕಕಾಲದಲ್ಲಿ ನಿರ್ವಹಿಸಲಾರದ ಅವರ ಚೇತನ ಬ್ರಹ್ಮಚರ್ಯ ಪಾಲಿಸಲು ಅನುವಾಯಿತು. ಇದಕ್ಕೆ ಇನ್ನೂ ಬದುಕಿನ ಬಗ್ಗೆ ಆಸಕ್ತಿಯಿದ್ದ ಕಸ್ತೂರೀ ಬಾ ಕೊಟ್ಟ ಅನುಮತಿ ಗಾಂಧೀಜಿಯವರ ನಿರ್ಧಾರಕ್ಕಿಂತ ಹಿರಿದಾದುದು. ಇಲ್ಲಿಂದಲೇ ಗಾಂಧೀಜಿ ಮತ್ತು ಕಸ್ತೂರೀಬಾ ಬದುಕಿನಲ್ಲಿ ಮಹತ್ವದ ತಿರುವು ಕಾಣಿಸಿಕೊಂಡಿತು. ಕಸ್ತೂರೀಬಾ ಗಾಂಧೀಜಿ ಪಾಲಿಗೆ ಕೇವಲ ಹೆಂಡತಿಯಾಗಿರದೆ ತಾಯಿ, ದೇವಿ, ತಂಗಿಯಾಗಿ ಕಂಡರು. ಅದೇ ಕಸ್ತೂರೀಬಾ ಗಾಂಧೀಜಿಯೊಂದಿಗೆ ತಮ್ಮನ್ನು ತಾವೇ ದೇಶಕ್ಕಾಗಿ ಸಮರ್ಪಣ ಮಾಡಿಕೊಂಡರು. ಇಷ್ಟಾದರೂ ಪತ್ನಿಯನ್ನು ಎಷ್ಟೋ ಬಾರಿ ಜೈಲಿಗೆ ಹೋಗುವ ಸಂದರ್ಭದಲ್ಲಿಯೂ ಗಾಂಧೀಜಿ ಕಳುಹಿಸಿಕೊಡಲು ಇಷ್ಟಪಡಲಿಲ್ಲ ಕಾರಣ ಆಕೆಯ ಮನೋಸಾಮರ್ಥ್ಯದ ಬಗ್ಗೆ ಗಾಂಧೀಜಿಗಿನ್ನೂ ಉಳಿದಿದ್ದ ಗುಮಾನಿ. ಆದರೆ ಈ ಅಭಿಪ್ರಾಯ ಬದಲಾಯಿಸಿ 'ತೊಟ್ಟಿಲನ್ನು ತೂಗುವ ಕೈ ಜಗವನ್ನು ಆಳಬಲ್ಲುದು' ಎಂಬುದನ್ನು ಬಾ ಸಾಬೀತುಪಡಿಸಿದರು.

ಇದುವರೆಗೂ ಸಾಮಾನ್ಯ ಗೃಹಿಣಿಯಂತೆ ತನ್ನ ಯಜಮಾನನ ರಕ್ಷಣೆಯಲ್ಲಿ ಸಾತ್ವಿಕ ಜೀವನ ನಡೆಸುವುದರಲ್ಲಿ ಲೀನವಾಗಿದ್ದ ಕಸ್ತೂರೀಬಾ ಜೀವನ ಹೆಮ್ಮರವಾಗಿ ಬೆಳೆಯತೊಡಗಿತು. ಸತ್ಯಾಗ್ರಹ ಸಮರದ ಕಷ್ಟನಿಷ್ಠುರಗಳಲ್ಲಿ ಭಾಗಿಯಾದರು. ಸಬರಮತಿ ಆಶ್ರಮದ ನಿರ್ವಾಹಕಿಯಾಗಿ ಬಾ ಕೈಗೊಂಡ ಕಾರ್ಯಕ್ರಮ. ಕಲಿತ ವಿಷಯಗಳು, ನಡೆಸಿದ ಸಾಧನೆಗಳು ಸುಪ್ತವಾಗಿದ್ದ ಸ್ವಾತಂತ್ರ್ಯಪ್ರಿಯರನ್ನು ಬಡಿದೆಬ್ಬಿಸುವಂಥವು. ಒಂದು ಮಹಿಳಾ ಪಡೆಯನ್ನು ನಿರ್ಮಿಸಿ, ಗುಡಿಸಲಿನಿಂದ ಗುಡಿಸಲಿಗೆ ಭೇಟಿಕೊಟ್ಟು ಅನಾಥರ ರಕ್ಷಣೆಯಲ್ಲಿ ಪಾಲ್ಗೊಂಡಿದ್ದು, ಅಸ್ಪೃಶ್ಯರೆಂದರೆ ಮೂಗುಮುರಿಯುತ್ತಿದ್ದ ಅಂದಿನ ಜನರ ನಡುವೆ, ಅಸ್ಪೃಶ್ಯರ ಕುಟುಂಬವನ್ನೇ ಆಶ್ರಮಕ್ಕೆ ಸೇರಿಸಿಕೊಂಡು ಶಾಂತವಾಗಿ ಜನರ ವಿಕೋಪವನ್ನು ಪರಿಹರಿಸಿದ್ದು ಆಕೆಯ ವ್ಯವಹಾರ ಕುಶಲತೆಗಳನ್ನು ಸ್ಪಷ್ಟಪಡಿಸುತ್ತವೆ. ಹೀಗೆಯೇ 1921, 1930, 1932 ಮೊದಲಾದ ಚಳುವಳಿಯ ಹೋರಾಟದಲ್ಲಿ ಬಾ ಗಾಂಧೀಜಿಯ ಅನುಯಾಯಿಯಾಗಿ ಸೆರೆಮನೆ ವಾಸವನ್ನು ಅನುಭವಿಸಿದ್ದು, ಅವರಲ್ಲಿದ್ದ ರಾಷ್ಟ್ರಪ್ರೇಮವನ್ನು ನಾವು ಗೌರವಿಸುವಂತೆ ಮಾಡುತ್ತವೆ.

1922ರಲ್ಲಿ ಗಾಂಧೀಜಿ ದಸ್ತಗಿರಿಯಾದಾಗ ಕಸ್ತೂರೀಬಾ ಮುಂಚಿನಂತೆ ಜನತೆಯನ್ನು ಕಲೆಹಾಕಿ ಪರದೇಶಿ ವಸ್ತುಗಳಿಗೆ ಬಹಿಷ್ಕಾರ ಹಾಕಿದರು ; ಖಾದಿ ಧರಿಸಲು

ಪ್ರಚೋದಿಸಿದರು : ಚರಕದಿಂದ ನೂಲುವ ಕಾಯಕದಲ್ಲಿ ನಿರತರಾಗಲು ಜನತೆಯನ್ನು ಪ್ರೇರೇಪಿಸಿದರು: ಸ್ವತಃ ತಾವೇ ಆ ಕಾಯಕವನ್ನು ಮಾಡಿ ತೋರಿಸಿದರು. 1939ರಲ್ಲಿ ರಾಜಕೋಟೆಯಲ್ಲಿ ಪ್ರಜಾವಿಪ್ಲವ ನಡೆಯಿತು. ಬಾ ತನ್ನ ದಿಟ್ಟತನಕ್ಕೆ ಮುಖವಾಣಿಯೆನಿಸಿದರು. ರಾಜಕೋಟೆ ಬಾರವರ ಜನ್ಮಭೂಮಿ. ಹೆಣ್ಣಾಗಿ ತನ್ನ ಹುಟ್ಟೂರಿಗೆ ಅವರು ಸಲ್ಲಿಸಿದ ಕಾಣ್ಕೆ ಕರ್ತವ್ಯ ಸ್ವಾತಂತ್ರ್ಯಪ್ರಿಯರಿಗಿತ್ತ ಎಚ್ಚರಿಕೆ.

1942ರಲ್ಲಾದ ಬಂಧನವೇ ಬಾರವರ ಕೊನೆಯ ಬಂಧನ. ಸ್ವಾತಂತ್ರ್ಯಕ್ಕಾಗಿ ಜನ ದಟ್ಟೈಸಿ ದಂಗೆಯೆದ್ದ ಸಂದರ್ಭ. ಸೆರೆಮನೆಯಲ್ಲಿಯೇ ಬಾ ಹೃದಯಬೇನೆಗೆ ತುತ್ತಾದರು. ಇತ್ತ ತಮ್ಮ ರಾಜಮಾತೆಯ ಅನಾರೋಗ್ಯದ ಬಗ್ಗೆ ಜನ ಕೆಂಗೆಟ್ಟಿತು : ಬಿಡುಗಡೆಯ ಬೇಡಿಕೆಯನ್ನು ಸರ್ಕಾರದ ಮುಂದಿಟ್ಟಿತು. ಸರ್ಕಾರ ಬಿಡುಗಡೆಗಿಂತ ಬಂಧನವೇ ಬಾರವರಿಗೆ ಕ್ಷೇಮ ತರುವಂಥದ್ದೆಂದು ಪ್ರಕಟಿಸಿತು. ಈ ಸನ್ನಿವೇಶದಲ್ಲಿ ಬಾರವರ ಚಿಂತನೆ ಹರಿದ ರೀತಿಯನ್ನು ಮಗ ದೇವದಾಸರ ಮಾತಿನಲ್ಲಿ ನೋಡಿ: "ಬಂಧನ ಅನಂತವಾಗಿ ತೋರಿತು. ಆ ಸನ್ನಿವೇಶದ ಎಲ್ಲ ಕೃತಕ ಸುಖವೂ ಆಕೆಗೆ ಮಾನಸಿಕ ಮತ್ತು ಆತ್ಮಿಕ ಶಾಂತಿಯನ್ನು ಕೊಡಲು ತಮ್ಮಂತೆಯೇ ಇನ್ನೂ ಸಾವಿರಾರು ಮಂದಿ ಬಂಧನದಲ್ಲಿ ಕೊಳೆಯುತ್ತಿದ್ದಾರೆಂಬ ಅಂಶ ಅವರ ಮಾನಸಿಕ ಅಶಾಂತಿಯನ್ನು ಇಮ್ಮಡಿಸಿತು. ತಮಗೂ ಮತ್ತು ಬಾಪೂಗೂ ಅನಂತಕಾಲದ ಬಂಧನವಾದರೂ ಚಿಂತೆಯಿಲ್ಲ ; ಬವಣೆಗೀಡಾಗಿರುವ ಇತರರಿಗೆ ಬಿಡುಗಡೆಯಾದರೆ ಸಾಕೆಂದು ದೇವರಲ್ಲಿ ಹಗಲಿರುಳು ಪ್ರಾರ್ಥಿಸುತ್ತಿದ್ದರು"–ಎಂದು ಚೇತನ ಕಷ್ಟನಿಷ್ಠುರಗಳ ಸಾಣೆಯಿಂದ ಪರಿಪಕ್ವವಾಗಿ ಉನ್ನತ ಸ್ಥಾನವನ್ನು ದೊರಕಿಸಿಕೊಡಬಲ್ಲದೆಂಬುದಕ್ಕೆ ಬಾರವರ ಬದುಕು ಸಾಕ್ಷಿ ನುಡಿಯುತ್ತದೆ. ಬಾ ಸಾಮಾನ್ಯ ಹೆಣ್ಣಾದರೂ ಅಸಾಮಾನ್ಯ ಭಾವನೆಗಳನ್ನು ಹಂತ ಹಂತವಾಗಿ ಬೆಳೆಸಿಕೊಂಡಂಥವರು. ಆದ್ದರಿಂದ ಸಾವಿನ ಅಂಚಿನಲ್ಲೂ ಬೇರೆಯವರ ಕ್ಷೇಮವನ್ನು ಬಯಸುವ, ಹಾರೈಸುವ ನಿರ್ಮಲ ಮನಸ್ಸು ಹೊಂದಿದವರಾಗಿದ್ದರು,

ಹೀಗೆ ಬದುಕಿನ ಹಲವು ಮುಖಗಳ ಸಿಹಿಕಹಿಗಳನ್ನುಂಡ ಕಸ್ತೂರಿಬಾ 1942 ಫೆಬ್ರವರಿ 22ರಂದು ಮುಕ್ತಿಯನ್ನು ಹೊಂದಿದರು. ಕಾಕತಾಳೀಯವೋ ಎಂಬಂತೆ ಆಕೆ ಶಿವರಾತ್ರಿಯ ದಿನವೇ ಮರಣ ಹೊಂದಿದ್ದರು. ಇದು ಅವರನ್ನು ದೈವತ್ವಕ್ಕೇರಿಸುವುದಕ್ಕೆ ಸುಲಭ ಮಾರ್ಗದರ್ಶಿಯಾಯಿತು.

ಇಲ್ಲಿಗೆ ಬಾರವರ ಜೀವನಚರಿತ್ರೆ ಭಾಗ ಮುಗಿಯುತ್ತದೆ. ಮುಂದೆ ಹಲವು ಗಣ್ಯವ್ಯಕ್ತಿಗಳ ನೆನಪುಗಳು, ಭಾರತ ಜನತೆ ಶೋಕ. ಕಸ್ತೂರಿಬಾ ಮಗನಿಗೆ ಬರೆದ ಒಂದೆರಡು ಪತ್ರ, ಮುಂತಾಗಿ ಈ ಕೃತಿಗೆ ಅನುಬಂಧವೋ ಎಂಬಂತೆ ಅಧ್ಯಾಯಗಳನ್ನು ಸೇರಿಸಲಾಗಿದೆ.

ಒಟ್ಟಿನಲ್ಲಿ ಕಸ್ತೂರೀಬಾ ಜೀವನವನ್ನು ಕುರಿತ ಇದು ಉಪಯುಕ್ತ ಕೃತಿಯೆನಿಸಿದರೂ ಅರೆಕೊರೆಗಳಿಂದ ಹೊರತಾಗಿಲ್ಲ. ಕಸ್ತೂರೀಬಾರವರ ಬಾಲ್ಯಜೀವನದ ಬಗ್ಗೆಯಾಗಲಿ, ತಾಯಿಯಾಗಿ ಆಕೆಯ ವ್ಯಕ್ತಿತ್ವ ಮತ್ತು ನಿಲವನ್ನು ಕುರಿತಾಗಲಿ, ಪತ್ನಿಯಾಗಿ ಆಕೆ ಗಾಂಧೀಜಿಯನ್ನು ಕಂಡಿದ್ದ, ಅರಿತಿದ್ದ ಬಗ್ಗೆಯಾಗಲಿ, ರಾಷ್ಟ್ರಜೀವನ ಕುರಿತಾಗಲಿ ಅನುಕ್ರಮಣಿಕೆ ಸರಿಯಾಗಿ ಕಂಡುಬರುವುದಿಲ್ಲ. ಆದ್ದರಿಂದ ಇದು ಅಪೂರ್ಣ ಕೃತಿಯಾಗಿಯೇ ಉಳಿಯುತ್ತದೆ. ಇದು ಅನುವಾದ ಕೃತಿಯಾದ್ದರಿಂದ ಈ ಆಪಾದನೆಗಳಿಂದ ಲೇಖಕರು ಮುಕ್ತರಾಗಿರುವುದು ಸಹಜ. ಅನುವಾದ ಸರಳವಾಗಿದೆ: ನಿರೂಪಣೆಯಲ್ಲಿ ಸಹಜತೆಯಿದೆ. ತಾವು ಉತ್ತಮ ಅನುವಾದಕರಾಗಬಲ್ಲ ಆಶಯವನ್ನು ನಾರಾಯಣಮೂರ್ತಿಯವರು ಈ ಗ್ರಂಥದಿಂದ ತೋರಿಸಿಕೊಂಡಿದ್ದಾರೆ.

# ಮಹಿಳೆಯರು

ವೈ. ಸಿ. ಭಾನುಮತಿ

ವೇದ ಕಾಲದ ಮಹಿಳೆ ಸಮಾಜದಲ್ಲಿ ಪುರುಷನಿಗೆ ಸರಿಸಮಾನವಾದ ಸ್ಥಾನವನ್ನು ಪಡೆದಿದ್ದಳು. ಈ ಸ್ಥಾನ ಆಕೆಗೆ ಬಹಳ ಕಾಲ ಉಳಿಯಲಿಲ್ಲ. ಮುಂದೆ ಮನು ಇತ್ಯಾದಿಗಳ ಪ್ರಭಾವದಿಂದಾಗಿ ಕಾಲಚಕ್ರದಲ್ಲಿ ಸಿಕ್ಕಿ ತನಗಿದ್ದ ಎಲ್ಲ ಸ್ವಾತಂತ್ರ್ಯವನ್ನೂ ಕಳೆದುಕೊಂಡಳು. ಪುರುಷನ ಭೋಗವಸ್ತುವಾದಳು. ಆಕೆಗೆ ಶಿಕ್ಷಣ ಪಡೆಯುವ ಸ್ವಾತಂತ್ರ್ಯ ಕೂಡ ಇರಲಿಲ್ಲ. ಇವುಗಳೊಂದಿಗೆ ಸಹಗಮನ ಪದ್ಧತಿ, ಪರದಾ ಪದ್ಧತಿ, ದೇವದಾಸಿ ಪದ್ಧತಿ ಮೊದಲಾದ ಅಮಾನುಷ ಪದ್ಧತಿಗಳಿಂದ ಬಂಧಿತಳಾಗಿದ್ದಳು. ಹತ್ತೊಂಬತ್ತನೆಯ ಶತಮಾನದ ಆದಿಭಾಗದಲ್ಲಿ ಸ್ತ್ರೀಸುಧಾರಣೆಯ ಹೊಳಹುಗಳು ಕುಡುಬಂದವು. ಸ್ತ್ರೀ ಸುಧಾರಣೆಗಾಗಿ ಶ್ರಮಿಸಿದ ಪ್ರಾರಂಭದ ವ್ಯಕ್ತಿಗಳಲ್ಲಿ ರಾಜಾರಾಮಮೋಹನರಾಯರು ಒಬ್ಬರು. ಇವರು ಸಹಗಮನ ಪದ್ಧತಿಯನ್ನು ನಿರ್ಮೂಲನ ಮಾಡಿದರು. ಇದರಿಂದಾಗಿ 1829ರಲ್ಲಿ ಸಹಗಮನ ವಿರೋಧಿ ಅಧಿನಿಯಮ ಜಾರಿಗೆ ಬಂದಿತು. ಒಟ್ಟಿನಲ್ಲಿ ಗಾಂಧೀಜಿಯವರ ಪೂರ್ವದಲ್ಲಿಯೇ ಸ್ತ್ರೀ ಸ್ವಾತಂತ್ರ್ಯ ಚಳವಳಿಯ ಹೊಳಹುಗಳಿದ್ದುವು. ಗಾಂಧೀಜಿ ಸ್ವಾತಂತ್ರ್ಯ ಚಳವಳಿಯೊಂದಿಗೆ ಮಹಿಳಾ ವಿಮೋಚನ ಚಳವಳಿಗಳನ್ನೂ ಪ್ರೋತ್ಸಾಹಿಸಿ ಒಂದು ಹೊಸ ಆಯಾಮವನ್ನು ತಂದುಕೊಟ್ಟರು.

ಗಾಂಧೀಜಿಗೆ ಸ್ತ್ರೀಯರ ಬಗೆಗೆ ಅಪಾರ ಗೌರವವಿತ್ತು ; ಅನುಕಂಪವಿತ್ತು. ಸ್ತ್ರೀಯನ್ನು ಪುರುಷನ ದಾಸ್ಯದಿಂದ ಮುಕ್ತಗೊಳಿಸಬೇಕೆಂಬ ಕಳಕಳಿಯಿತ್ತು. ಆದ್ದರಿಂದಲೇ ಗಾಂಧೀಜಿ ಸ್ತ್ರೀಯರ ಹಲವು ಹತ್ತು ಸಮಸ್ಯೆಗಳನ್ನು ಪರಿಶೀಲಿಸಿ ಅವುಗಳಿಗೆ 'ಮಹಿಳೆಯರು' ಕೃತಿಯಲ್ಲಿ ಪರಿಹಾರ ಸೂಚಿಸಿದ್ದಾರೆ. ಗಾಂಧೀಜಿಯವರ ಕಾಲದಲ್ಲಿದ್ದ ಹಲವು ಸಮಸ್ಯೆಗಳು ಇಂದಿಗೂ ಇರುವುದರಿಂದ ಅವರ ಹಲವು ಅಭಿಪ್ರಾಯಗಳು ಸ್ವೀಕಾರಾರ್ಹವಾಗಿವೆ. ಸ್ತ್ರೀ ಪುರುಷರ ಸಮಾನತೆ, ಮಹಿಳೆಯರ ಪುನರುದ್ಧಾರ, ಸಮಾಜದಲ್ಲಿ ಮಹಿಳೆಯರ ಸ್ಥಾನ ಮತ್ತು ಪಾತ್ರ, ವಿವಾಹ ಇತ್ಯಾದಿ ಹಲವು ವಿಷಯಗಳನ್ನು ಇಲ್ಲಿ ಚರ್ಚಿಸಿದ್ದಾರೆ. ಸ್ತ್ರೀ ಪುರುಷನಿಗಿಂತ ಯಾವ ದೃಷ್ಟಿಯಲ್ಲೂ ಕಡಿಮೆಯಿಲ್ಲ. ಪುರುಷನಿಗಿರುವ ಸ್ವಾತಂತ್ರ್ಯ ಸ್ತ್ರೀಗೂ ಲಭ್ಯವಾಗಬೇಕು ಎಂಬುದನ್ನು ಅವರು ಮನಗಂಡಿದ್ದರು. ''ನಮ್ಮ ಮಹಿಳೆಯರಿಗೆ ಅತ್ಯಂತ ಹೆಚ್ಚಿನ ಸ್ವಾತಂತ್ರ್ಯವಿರಬೇಕೆಂದು ನಾನು ತೀವ್ರವಾಗಿ ಆಶಿಸುತ್ತೇನೆ'' ಎಂದಿದ್ದಾರೆ. ಗಾಂಧೀಜಿ ತಮ್ಮ ಬಾಲ್ಯದಲ್ಲಿ ಅನೇಕ ಅಪರಾಧಗಳನ್ನು

ಎಸಗಿದಂತೆ ತಮ್ಮ ಹೆಂಡತಿಯ ವಿಚಾರದಲ್ಲಿಯೂ ಇಂತಹ ತಪ್ಪುಗಳನ್ನು ಮಾಡಿದ್ದರು. ಮೊದಮೊದಲು ಅವರು ತಮ್ಮ ಹೆಂಡತಿಯೊಂದಿಗೆ ಒಬ್ಬ ಸಾಮಾನ್ಯ ಗಂಡನಂತೆಯೇ ವರ್ತಿಸುತ್ತಿದ್ದರು. ತಮ್ಮ ತತ್ತ್ವಗಳನ್ನು ಕಸ್ತೂರಿಬಾ ಅವರಿಗೆ ಬಲಾತ್ಕಾರದಿಂದ ಹೇರುತ್ತಿದ್ದರು. ಅಂತಹ ಸಂದರ್ಭಗಳಲ್ಲಿ ಕಸ್ತೂರಿಬಾ ವಿರೋಧಿಸುತ್ತಿದ್ದರು. ಮುಂದೆ ಗಾಂಧೀಜಿಗೆ ಅವರ ಜೀವನಗತಿ ಬದಲಾದಾಗ ತಮ್ಮ ತಪ್ಪಿನ ಅರಿವಾಗುತ್ತದೆ. ಅವರು ಹೆಣ್ಣಿನೊಡನೆ ಹೆಣ್ಣಿನಂತೆಯೇ ವರ್ತಿಸುತ್ತಾರೆ. "ಹೆಣ್ಣಿನ ಹೃದಯವನ್ನು ಗೆಲ್ಲುವುದಕ್ಕೋಸ್ಕರ ನಾನು ಮನಸಾ ಹೆಣ್ಣಾಗಿದ್ದೇನೆ. ನನ್ನ ಹೆಂಡತಿಯ ಹೃದಯ ವನ್ನೇ ಆಗಲಿ ನಾನು ಗೆಲ್ಲಬೇಕಾದರೆ ನಾನು ಆಕೆಯನ್ನು ಕಾಣುತ್ತಿದ್ದ ವಿಧಾನವನ್ನು ಬಿಟ್ಟು ಆಕೆಯ ಗಂಡನೆಂಬ ಕಾರಣದಿಂದ ಹೊಂದಿದ್ದ ಹಕ್ಕುಬಾಧ್ಯತೆಗಳನ್ನು ತ್ಯಜಿಸಿದ ಹೊರತು ಅದು ಸಾಧ್ಯವಾಗಲಿಲ್ಲ" ಎಂದು ತಮ್ಮ ಅನುಭವವನ್ನು ಹೇಳಿಕೊಂಡಿದ್ದಾರೆ. ಮಾತು ಬೇರೆ, ಕೃತಿ ಬೇರೆಯಾಗದೆ ಗಾಂಧೀಜಿಯವರು ತಮ್ಮ ಮನೆಯಿಂದಲೇ ಸ್ತ್ರೀ ಸ್ವಾತಂತ್ರ್ಯವನ್ನು ಅನುಷ್ಠಾನಕ್ಕೆ ತಂದಿದ್ದರು. ಸ್ತ್ರೀಯರಲ್ಲಿ ಕಂಡುಬರುವ ಕೆಲವೊಂದು ವಿಶಿಷ್ಟ ಗುಣಗಳನ್ನು ಗುರುತಿಸಿದ ಗಾಂಧೀಜಿಯವರಿಗೆ "ಸ್ತ್ರೀ ಪುರುಷರಲ್ಲಿ ಸ್ತ್ರೀಯೇ ಹೆಚ್ಚು ಘನತೆವೆತ್ತವಳು: ಏಕೆಂದರೆ ತ್ಯಾಗ ಮೌನ ವೇದನಾನುಭವ ಸಮ್ರತೆ ನಂಬಿಕೆ ಜ್ಞಾನ ಇವುಗಳಿಗೆ ಇಂದಿಗೂ ಆಕೆಯೇ ಮೂರ್ತಸ್ವರೂಪವೆನಿಸಿದಾಳೆ" ಎನಿಸಿತು.

ವಿವಾಹಕ್ಕೆ ಸಂಬಂಧಿಸಿದಂತೆ ಗಾಂಧೀಜಿಯವರು ಬಾಲ್ಯವಿವಾಹ, ವಿಧವಾವಿವಾಹ, ವರದಕ್ಷಿಣೆ ಮೊದಲಾದುವುಗಳ ಬಗ್ಗೆ ಪ್ರಸ್ತಾಪಿಸಿದ್ದಾರೆ. ಅವರ ಪ್ರಕಾರ ವಿವಾಹವು ಕೇವಲ ದೇಹಗಳ ಕೂಡಿಕೆಯಲ್ಲ. ಅದು ಆತ್ಮಗಳ ಐಕ್ಯತೆಯನ್ನು ಸೂಚಿಸುತ್ತದೆ. ವಿವಾಹದ ವಯಸ್ಸನ್ನು ಏರಿಸಬೇಕೆಂದು ಹೇಳುತ್ತಿದ್ದರು. ಅಲ್ಲದೆ ಗಂಡುಹೆಣ್ಣಿನ ಒಪ್ಪಿಗೆಯಿಲ್ಲದೆ ವಿವಾಹ ಮಾಡಬಾರದೆಂಬುದು ಅವರ ಅಭಿಪ್ರಾಯವಾಗಿತ್ತು. ಅವರು ವಿಧವಾ ವಿವಾಹವನ್ನು ಪ್ರೋತ್ಸಾಹಿಸುತ್ತಿದ್ದರು. "ಒಪ್ಪಿ ವಿವಾಹ ಮಾಡಿಕೊಳ್ಳದ ಹತ್ತು ಹದಿನೈದುವಯಸ್ಸಿನ ಬಾಲಿಕೆ, ವಿವಾಹವಾದ ತರುವಾಯ ಗಂಡನೆನಿಸಿಕೊಳ್ಳುವವ ನೊಂದಿಗೆ ಎಂದೂ ಸಹ ವಾಸಿಸದೆ ಆಕಸ್ಮಿಕವಾಗಿ ವಿಧವೆಯೆಂದು ಘೋಷಿಸಲ್ಪಟ್ಟವಳು ವಿಧವೆಯಲ್ಲವೆಂದೇ ನನ್ನ ನಂಬಿಕೆ" ಎಂದು ಪತ್ರಿಕೆಗಳಲ್ಲಿ ಬರೆದರು. ಬಾಲವಿಧವೆ ಯರನ್ನು ಮದುವೆಯಾಗುವಂತೆ ಯುವಕರಿಗೆ ಕರೆ ನೀಡಿದರು. ಆಗ ಕೆಲ ಸಂಪ್ರದಾಯ ವಾದಿಗಳು ವಿಧವಾ ವಿವಾಹವನ್ನು ಪ್ರತಿಭಟಿಸಿ ಪತ್ರಿಕೆಗಳಿಗೆ ಹಾಗೂ ಗಾಂಧೀಜಿಗೆ ಪತ್ರ ಬರೆದರು. ಆದರೆ ಗಾಂಧೀಜಿಯವರಿಂದ ಸ್ಫೂರ್ತಿ ಹೊಂದಿದ ಯುವಕರ ಸಂಖ್ಯೆಯೇ ಅಧಿಕವಾಗಿದ್ದುದರಿಂದ ಈ ವಿಚಾರದಲ್ಲಿ ಅವರಿಗೆ ಚೇತೋಹಾರಿ ಪ್ರತಿಕ್ರಿಯೆ ಬಂದಿತ್ತು.

ಇಂದು ವರದಕ್ಷಿಣೆ ನಮ್ಮ ಸಮಾಜದ ಶಾಪವಾಗಿ ಪರಿಣಮಿಸಿದೆ. ನಮ್ಮ ದೇಶದಲ್ಲಿ ಪ್ರತಿ ವರ್ಷವೂ ನೂರಾರು ಮಹಿಳೆಯರು ವರದಕ್ಷಿಣೆಯ ಪಿಡುಗಿಗೆ ಬಲಿಯಾಗಿ ತಮ್ಮ

ಪ್ರಾಣವನ್ನು ಕಳೆದುಕೊಳ್ಳುತ್ತಿದ್ದಾರೆ. ಗಾಂಧೀಜಿಯವರ ಕಾಲದಲ್ಲಿಯೂ ವರದಕ್ಷಿಣೆ ಸಮಸ್ಯೆ ಇತ್ತು. ಇಂಥ ದುಷ್ಟ ಪದ್ಧತಿಯನ್ನು ವಿರೋಧಿಸುವ ಕನ್ಯೆಯರಿಗೆ ಗಾಂಧೀಜಿ "ನೀವು ವಿವಾಹವಾಗುವ ಕಾಲ ಬಂದಾಗ ನೀವು ಜೀವನ ಸಂಗಾತಿಯನ್ನು ಹೊಂದಬೇಕೆಂದು ಯೋಚಿಸಿದಾಗ ಪಾರ್ವತಿಯಂತೆ, ಹಣ ಕೀರ್ತಿ ಸೌಂದರ್ಯ ಇವುಗಳೇ ಇರುವವನನ್ನು ಹುಡುಕದೆ ಅನುಪಮ ಶೀಲವಂತನನ್ನು ಹುಡುಕುವಿರಿ" ಎಂದಿದ್ದಾರೆ.

ಪತಿ ಪತ್ನಿಯರಲ್ಲಿ ಯಾರೂ ಪರಸ್ಪರ ಗುಲಾಮರಲ್ಲ. ಅವರು ಅನ್ಯೋನ್ಯವಾಗಿರಬೇಕೆಂದು ಗಾಂಧೀಜಿ ಬಯಸುತ್ತಿದ್ದರು. ಅವರ ಆದರ್ಶ ದಂಪತಿಗಳೆಂದರೆ ರಾಮ ಮತ್ತು ಸೀತೆ. ಗಂಡನಿಂದ ನಿತ್ಯವೂ ಹೊಡೆಯಿಸಿಕೊಳ್ಳುವ ಹೆಂಡತಿಯರನ್ನು ಕಂಡು ಗಾಂಧೀಜಿ ಮರುಕಪಟ್ಟಿದ್ದರು. ಈಗಲೂ ಹಳ್ಳಿಗಳಲ್ಲಿ ಗಂಡನಿಂದ ಹೆಂಡತಿಯ ಮೇಲೆ ದೌರ್ಜನ್ಯ ನಡೆಯುವುದು ಮುಂದುವರಿದಿದೆ. ಕುಟುಂಬದ ಆಸ್ತಿಯ ಮೇಲಿನ ಒಡೆತನ ಪುರುಷನಿಗಿರುವಂತೆ ಸ್ತ್ರೀಯರಿಗೂ ಇರಬೇಕೆಂಬುದು ಅವರ ಅಭಿಲಾಷೆಯಾಗಿತ್ತು. ಈಗ ಭಾರತ ಸರ್ಕಾರ ಅಧಿನಿಯಮ ಜಾರಿಗೆ ತಂದಿದ್ದರೂ ಮಹಿಳೆಗೆ ಇದರ ಸಂಪೂರ್ಣ ಲಾಭ ಪಡೆಯಲಾಗಿಲ್ಲ.

ಸ್ತ್ರೀ ಶಿಕ್ಷಣ ಚಳವಳಿಯ ಫಲವಾಗಿ ಇಂದು ಪಟ್ಟಣ ಪ್ರದೇಶದಲ್ಲಿ ಮಹಿಳೆ ಅನೇಕ ಉದ್ಯೋಗದಲ್ಲಿ ತೊಡಗಿದ್ದಾಳೆ. ಸ್ತ್ರೀ ವೈದ್ಯೆಯಾಗಿ, ಶಿಕ್ಷಕಿಯಾಗಿ, ರಾಜಕಾರಣಿಯಾಗಿ ಹಲವು ಹತ್ತು ಉದ್ಯೋಗದಲ್ಲಿದ್ದು ತನ್ನ ಕೆಲಸವನ್ನು ಸಮರ್ಥವಾಗಿ ನಿರ್ವಹಿಸುತ್ತಿದ್ದಾಳೆ. ಈ ಕುರಿತು ಗಾಂಧೀಜಿಯವರ ಅಭಿಪ್ರಾಯದಲ್ಲಿ ದ್ವಂದ್ವತೆ ಕಂಡುಬರುತ್ತದೆ. "ಸ್ತ್ರೀಯರು ಜೀವನೋಪಾಯಕ್ಕಾಗಿ ದುಡಿಯಬೇಕೆಂಬುದರಲ್ಲಾಗಲೀ ವಾಣಿಜ್ಯೋದ್ಯಮಗಳಲ್ಲಿ ಭಾಗವಹಿಸಬೇಕೆಂಬುದರಲ್ಲಾಗಲೀ ನನಗೆ ನಂಬಿಕೆಯಿಲ್ಲ" ಎಂದಿದ್ದಾರೆ. ಬೆಲೆ ಏರಿಕೆಯ ಈ ದಿನಗಳಲ್ಲಿ ಕುಟುಂಬದ ಆರ್ಥಿಕ ಸಮತೋಲನವನ್ನು ಕಾಪಾಡುವುದಕ್ಕಾಗಿ ಮಹಿಳೆ ದುಡಿಯಲೇಬೇಕಾದ ಅನಿವಾರ್ಯ ಸ್ಥಿತಿ ಒದಗಿದೆ. ಆದ್ದರಿಂದ ಸ್ತ್ರೀ ಉದ್ಯೋಗ ನೀತಿಯಲ್ಲಿ ಉದಾರ ಭಾವನೆ ತಾಳಬೇಕಾಗಿದೆ.

ಮಹಿಳೆ ತಾಯಿಯಾಗಿ ನಿರ್ವಹಿಸಬೇಕಾದ ಪಾತ್ರ ದೊಡ್ಡದು. ಆಕೆ ತನ್ನ ಕುಟುಂಬದ ಕರ್ತವ್ಯವನ್ನು ಕಡೆಗಣಿಸಿದರೆ ಅದರಿಂದ ಕುಟುಂಬ ಮತ್ತು ಆ ಮೂಲಕ ಸಮಾಜದ ಮೇಲೆ ದುಷ್ಪರಿಣಾಮಗಳಾಗುತ್ತವೆ. ಮಕ್ಕಳನ್ನು ಸನ್ಮಾರ್ಗಕ್ಕೆ ಒಯ್ಯುವಲ್ಲಿ ತಾಯಿಯ ಹೊಣೆಗಾರಿಕೆಯೂ ಮಹತ್ವಪೂರ್ಣವಾದುದು. ಮಕ್ಕಳನ್ನು ಹೇಗೆ ನೋಡಿಕೊಳ್ಳಬೇಕೆಂದು ಕೇಳಿದ ತಾಯಿಯೊಬ್ಬಳಿಗೆ ಗಾಂಧೀಜಿ "ಮಗುವಿನ ಐದನೆಯ ವಯಸ್ಸಿನವರೆಗೂ ಅದರೊಂದಿಗೆ ಸರಸವಾಡು. ತರುವಾಯ ಹತ್ತು ವರುಷಗಳು ಅದನ್ನು ಚೆನ್ನಾಗಿ ಕೆಲಸದಲ್ಲಿ ತರಬೇತು ಮಾಡು. ಹದಿನಾರನೆಯ ವಯಸ್ಸಿನಿಂದ ಗೆಳೆಯನಂತೆ ಪರಿಭಾವಿಸು" ಎಂದು ನಮ್ಮ ಪ್ರಾಚೀನರ ಅಭಿಪ್ರಾಯವನ್ನೇ ಬೆಂಬಲಿಸಿದ್ದಾರೆ.

ಗಾಂಧೀಜಿಯವರ ಕಾಲದಲ್ಲಿಯೂ ಮಹಿಳೆಯರ ಸಮ್ಮೇಳನಗಳು ನಡೆಯು ತ್ತಿದ್ದವು. ಬೊಂಬಾಯಿಯ ಭಗಿನೀ ಸಮಾಜದ ವಾರ್ಷಿಕಮೇಳದ ಅಧ್ಯಕ್ಷ ಸ್ಥಾನದಿಂದ ಗಾಂಧೀಜಿ ಆಡಿದ ಮಾತುಗಳು ಇಂದಿಗೂ ಅರ್ಥಪೂರ್ಣವಾಗಿವೆ. ಅಖಿಲಭಾರತ ಮಹಿಳಾ ಸಮ್ಮೇಳನ ತನ್ನ ಹೆಸರನ್ನು ಸಾರ್ಥಕಪಡಿಸಿಕೊಳ್ಳಬೇಕಾದರೆ ಅದು ಗ್ರಾಮಾಂತರ ಮಟ್ಟಕ್ಕೆ ಇಳಿಯಬೇಕು ಎಂದಿದ್ದರು. ಈ ವಿಚಾರದಲ್ಲಿ ಇಂದಿಗೂ ಯಾವ ಬದಲಾವಣೆಯೂ ಆಗಿಲ್ಲ. ಸಾಮಾನ್ಯವಾಗಿ ನಮ್ಮ ಮಹಿಳಾ ಸಮ್ಮೇಳನಗಳು ದೊಡ್ಡ ದೊಡ್ಡ ನಗರಗಳಲ್ಲಿ ಸಕಲ ಸೌಕರ್ಯಗಳು ಇರುವಂತಹ ಕಡೆಗಳಲ್ಲಿ ನಡೆಯು ತ್ತವೆ. ಈ ಸಮ್ಮೇಳನಗಳಲ್ಲಿ ಭಾಗವಹಿಸುವ ಬಹುಪಾಲು ಮಹಿಳೆಯರು ಆರ್ಥಿಕ ಸ್ವಾತಂತ್ರ್ಯವುಳ್ಳವರಾಗಿರುತ್ತಾರೆ. ಇಂತಹ ಸಂದರ್ಭದಲ್ಲಿ ಮಹಿಳಾ ಸಮ್ಮೇಳನಗಳು, ಮಹಿಳಾ ವರ್ಷಗಳು ನಮ್ಮ ಗ್ರಾಮೀಣ ಮಹಿಳೆಯರನ್ನು ತಲುಪುವ ಸಾಧ್ಯತೆಗಳೇ ಇಲ್ಲವಾಗಿವೆ.

ಗಾಂಧೀಜಿ ಸರಳತೆ ಮತ್ತು ನಿರಾಡಂಬರಕ್ಕೆ ಪ್ರಾಮುಖ್ಯತೆ ಕೊಟ್ಟಿದ್ದರು. ಭಗಿನೀ ಸಮಾಜದ ಸ್ತ್ರೀಯರಿಗೂ ಇದನ್ನೇ ಒತ್ತಿ ಹೇಳಿದ್ದರು. ಭಾರತದಂತಹ ಬಡರಾಷ್ಟ್ರದ ಮಹಿಳೆಯರು ನಿತ್ಯ ಜೀವನದಲ್ಲಿ ನಿರಾಡಂಬರ ಮತ್ತು ಸರಳತೆಯನ್ನು ಅಗತ್ಯವಾಗಿ ಅಳವಡಿಸಿಕೊಳ್ಳಬೇಕು. ಸ್ತ್ರೀಯರು ಆಭರಣಗಳನ್ನು ಧರಿಸುವುದನ್ನು ಗಾಂಧೀಜಿ ವಿರೋಧಿಸುತ್ತಿದ್ದರು. ''ಅತಿ ಬೆಲೆ ಬಾಳುವ ಆಭರಣವನ್ನು ಧರಿಸುವುದು ದೇಶಕ್ಕೆ ನಿಜವಾದ ನಷ್ಟವೆಂದು ನನ್ನ ಅಭಿಪ್ರಾಯ. ಅಷ್ಟು ಬಂಡವಾಳ ಬಂಧಿಸಿಟ್ಟಂತಲ್ಲದೆ ನಶಿಸಿಹೋದಂತೆ'' ಎಂಬ ಅವರ ಮಾತುಗಳು ಗಮನಾರ್ಹ. ಸ್ತ್ರೀಯರು ಉಡುಪಿನಲ್ಲಿಯೂ ಸರಳರಾಗಿರಬೇಕೆಂದು ಅವರು ಅಪೇಕ್ಷಿಸುತ್ತಿದ್ದರು. ಅದಕ್ಕಾಗಿ ಖಾದಿ ಸೀರೆಯನ್ನು ಧರಿಸಲು ಹೇಳುತ್ತಿದ್ದರು.

ಗಾಂಧೀಜಿ ಗರ್ಭಪಾತವನ್ನು ಒಂದು ಪಾತಕವೆಂದು ಭಾವಿಸಿದ್ದರು. ಪುರುಷನ ಕಪಟವನ್ನರಿಯದೆ ದಾರಿ ತಪ್ಪಿದ ಸ್ತ್ರೀಗೆ ಶುದ್ಧ ಜೀವನ ನಡೆಸಲು ಜೀವನಾಂಶವನ್ನು ಶಿಕ್ಷಣವನ್ನೂ ನೀಡಬೇಕೆಂಬುದು ಅವರ ಅಭಿಪ್ರಾಯವಾಗಿತ್ತು. ದೇವರ ಹೆಸರಿನಲ್ಲಿ ವೇಶ್ಯಾವೃತ್ತಿಗೆ ಇಳಿಸುವ ದೇವದಾಸೀ ಪದ್ಧತಿಯನ್ನಾಗಲಿ, ಸತೀ ಪದ್ಧತಿಯನ್ನಾಗಲಿ ಗಾಂಧೀಜಿ ತೀವ್ರವಾಗಿ ವಿರೋಧಿಸುತ್ತಿದ್ದರು. ''ವಿಧವೆಯಾದವಳು ತನ್ನ ಕಾಲವಾದ ಪತಿಯ ಜೊತೆಗೆ ಬಲಿಯಾಗುವುದು ಅಂಧಶ್ರದ್ಧೆಯಿಂದ ಕೂಡಿದ ಅಜ್ಞಾನ ಮತ್ತು ಕುರುಡು ಹೆಮ್ಮೆ ಇವುಗಳಿಂದ ಹುಟ್ಟಿದ ಪದ್ಧತಿಯೆಂದು ಖಚಿತವಾಗಿ ಇಟ್ಟುಕೊಳ್ಳ ಬಹುದು'' ಎಂದು ಸತೀ ಪದ್ಧತಿಯ ಬಗ್ಗೆ ಬರೆದಿದ್ದಾರೆ.

ಒಮ್ಮೆ ಬಾರಿಸಾಲಿನಲ್ಲಿ ವೇಶ್ಯೆಯರು ಗಾಂಧೀಜಿಯವರನ್ನು ಭೇಟಿಮಾಡಿದ್ದರು. ಅಲ್ಲಿದ್ದ ವೇಶ್ಯೆಯರಲ್ಲಿ ಬಹುಮಂದಿ ಬಡತನದಿಂದಾಗಿ ಈ ವೃತ್ತಿಯನ್ನು ಕೈಗೊಂಡಿ ದ್ದರು. ಗಾಂಧೀಜಿ ಅವರ ಪ್ರಭಾವದಿಂದ ಅಲ್ಲಿದ್ದವರಲ್ಲಿ ಕೆಲವು ಮಹಿಳೆಯರು ತಮ್ಮ

ವೃತ್ತಿಯನ್ನು ಬಿಟ್ಟು ನೂಲುವುದನ್ನೂ ನೇಯ್ಗೆಯನ್ನೂ ಮಾಡುವುದಾಗಿ ಆಶ್ವಾಸನೆ ಕೊಟ್ಟರು. ಆದರೂ ಬಂಗಾಳದಲ್ಲಿ ಹೆಚ್ಚುತ್ತಿದ್ದ ವೇಶ್ಯಾವೃತ್ತಿ ಕನ್ಯಾಪಹರಣಗಳನ್ನು ಕಂಡು ಗಾಂಧೀಜಿ ಬಹಳ ದುಃಖದಿಂದ ಬರೆಯುತ್ತಾರೆ. ಕೆಲವು ವೇಶ್ಯಾ ಸ್ತ್ರೀಯರು ಕಾಂಗ್ರೆಸ್ ಸದಸ್ಯರಾಗಲು ಬಯಸಿದ್ದರು. ಸಮುದಾಯ ಜೀವನದಲ್ಲಿ ನೈತಿಕ ಸೊಬಗನ್ನು ನಿರೀಕ್ಷಿಸುತ್ತಿದ್ದ ಗಾಂಧೀಜಿ ವ್ಯೇಶ್ಯಯರು ತಮ್ಮ ವೃತ್ತಿಯನ್ನು ಬಿಡುವವರೆಗೂ ಪ್ರತಿನಿಧಿಗಳಾಗುವುದು ಕಾಂಗ್ರೆಸ್ ಸದಸ್ಯರಾಗುವುದು ತಪ್ಪು ಎಂದು ಭಾವಿಸಿದ್ದರು.

ಸ್ತ್ರೀ ಮಾನರಕ್ಷಣೆಯ ವಿಚಾರದಲ್ಲಿ ಗಾಂಧೀಜಿ ಎರಡು ಸಲಹೆಗಳನ್ನು ಸೂಚಿಸಿದ್ದಾರೆ. ಒಂದು ಆಕೆಯ ಕುಟುಂಬದ ಪುರುಷ ಅವಳ ಮಾನವನ್ನು ರಕ್ಷಿಸುವುದು, ಇನ್ನೊಂದು ಸ್ತ್ರೀ ಸ್ವತಃ ತನ್ನ ಮಾನರಕ್ಷಣೆ ಮಾಡಿಕೊಳ್ಳುವುದು. ಸ್ತ್ರೀ ಸೀತೆಯಂತಿದ್ದರೆ ಯಾವ ದುರುಳನೂ ಆಕೆಯನ್ನು ಮುಟ್ಟಲಾರ ಎನ್ನುತ್ತಾರೆ. ಆದರೆ ಸ್ತ್ರೀಯರ ಮೇಲಿನ ಅತ್ಯಾಚಾರಗಳು ಹೆಚ್ಚುತ್ತಿರುವ ಈ ದಿನಗಳಲ್ಲಿ ಸ್ತ್ರೀ ಸೀತೆಯಾದರೇನು ಸಾವಿತ್ರಿಯಾದರೇನು ? ಆಗ ರಕ್ಷಣೆಯೆಲ್ಲಿದೆ ? ಸ್ತ್ರೀ ತನ್ನ ಪ್ರಾಣವನ್ನಾದರೂ ಕೊಟ್ಟು ಮಾನವನ್ನು ರಕ್ಷಿಸಿಕೊಳ್ಳಬೇಕೆಂಬ ಗಾಂಧೀಜಿಯವರ ಸಲಹೆಗೆ ದಾರಿಯೆಲ್ಲಿದೆ ?

ಆಧುನಿಕ ಸಾಹಿತ್ಯದಲ್ಲಿ ಸ್ತ್ರೀ ವರ್ಣನೆ ಅತಿಯಾಗಿ ಬರುವುದು ಗಾಂಧೀಜಿಯವರಿಗೆ ಹಿಡಿಸುತ್ತಿರಲಿಲ್ಲ. ಇದರಿಂದ "ಅಜ್ಞಾನದಿಂದ ಕೂಡಿದ ಸರಳ ಸ್ತ್ರೀಯರು ಕಾದಂಬರಿಗಳಲ್ಲಿ ತಮ್ಮ ವರ್ಣನೆಯ ಬಗಗೆ ಹೊಂದಿಕೊಳ್ಳಬೇಕೆಂಬುದರಲ್ಲಿಯೇ ತಮ್ಮ ಕಾಲವನ್ನು ಕಳೆಯುತ್ತಾರೆ" ಎಂದು ತಿಳಿದಿದ್ದರು. ಗಾಂಧೀಜಿಯವರ ಈ ಮಾತಿನಲ್ಲಿ ಉತ್ಪ್ರೇಕ್ಷೆ ಇಲ್ಲ. ಏಕೆಂದರೆ ಕಮರ್ಷಿಯಲ್ ಸಿನಿಮಾ, ಲೇಖಕಿಯರ ಕಾದಂಬರಿಗಳನ್ನು ಓದಿಕೊಂಡು ಕಾಲ ಕಳೆಯುವ ಬಹುತೇಕ ಮಹಿಳೆಯರು ಕಾದಂಬರಿಯಲ್ಲಿ ಓದಿದ ಅಥವಾ ಸಿನಿಮಾದಲ್ಲಿ ನೋಡಿದ ನಾಯಕಿಯನ್ನು ಅನುಸರಿಸುವುದನ್ನು ನಾನು ಗಮನಿಸಿದ್ದೇನೆ.

ಗಾಂಧೀಜಿಯವರ ವಿಶಿಷ್ಟ ವ್ಯಕ್ತಿತ್ವ ಹಲವಾರು ಮಹಿಳೆಯರನ್ನು ಸೂಜಿಗಲ್ಲಿನಂತೆ ಆಕರ್ಷಿಸಿತು. ಕೆಲವು ಮಹಿಳೆಯರು ಗಾಂಧೀಜಿಯವರಿಗೆ ಪತ್ರ ಬರೆದು ತಮ್ಮ ಸಮಸ್ಯೆಗಳನ್ನು ಪರಿಹರಿಸಿಕೊಳ್ಳುತ್ತಿದ್ದರು. ಮತ್ತೆ ಕೆಲವರು ಗಾಂಧೀಜಿಯವರಿಂದ ಪ್ರಭಾವಿತರಾಗಿ ಸ್ವಾತಂತ್ರ್ಯ ಚಳವಳಿ, ಸ್ತ್ರೀವಿಮೋಚನಾ ಚಳವಳಿಗಳಲ್ಲಿ ಭಾಗವಹಿಸಿದ್ದರು. ಬಿಹಾರದ ಸ್ತ್ರೀಯರು ಪರದಾ ಪದ್ಧತಿಯನ್ನು ವಿರೋಧಿಸಿ ಅವುಗಳನ್ನು ತ್ಯಜಿಸಿದ್ದರು. ಹೀಗೆ ಗಾಂಧೀಜಿಯವರ ಪ್ರೋತ್ಸಾಹದಿಂದ ಸ್ತ್ರೀ ಚಳವಳಿಗೆ ನವಚೇತನ ಮೂಡಿತು.

ಮಹಿಳಾ ವಿಮೋಚನ ಚಳವಳಿಯ ಸ್ತ್ರೀಯರಲ್ಲಿ ಕೆಲವರು ಇಂದು ಸ್ವಾತಂತ್ರ್ಯದ ಹೆಸರಿನಲ್ಲಿ ಸ್ವೇಚ್ಛಾಚಾರಿಗಳಾಗುತ್ತಿದ್ದಾರೆ. ತಾಳಿಯನ್ನು ಕಿತ್ತು ಬಿಸಾಡುವುದರಲ್ಲಾಗಲೀ ಗಂಡಸಿನ ಕೈಗೆ ಸೌಟು ಕೊಡುವುದರಲ್ಲಾಗಲೀ ಸ್ತ್ರೀ ಉದ್ಧಾರ ಖಂಡಿತಾ ಸಾಧ್ಯವಿಲ್ಲ.

ಮತ್ತೆ ಕೆಲವು ಮಹಿಳೆಯರು ಜನಪ್ರಿಯತೆಗಾಗಿ ಮಹಿಳಾ ಚಳವಳಿಯ ಸೋಗನ್ನು ಹಾಕಿಕೊಂಡಿದ್ದಾರೆ. ಇದರಿಂದಾಗಿ ಮಹಿಳಾ ವಿಮೋಚನ ಚಳವಳಿಗಳು ಗ್ರಾಮೀಣ ಮಹಿಳೆಯನ್ನು ಯಾವ ರೀತಿಯಿಂದಲೂ ತಲುಪಲು ಸಾಧ್ಯವಾಗಿಲ್ಲ. ಆದ್ದರಿಂದ ಆಸಕ್ತಿಯಿರುವ ವಿದ್ಯಾವಂತ ಮಹಿಳೆ ಗ್ರಾಮಗಳಿಗೆ ಹೋಗಿ ಗ್ರಾಮೀಣ ಮಹಿಳೆಯರಿಗೆ ತಿಳಿವಳಿಕೆ ನೀಡಿ ಅವಳನ್ನು ಸ್ವತಂತ್ರವಾಗಿ ಆಲೋಚಿಸುವಂತೆ ಮಾಡಬೇಕು. ಆಕೆಯನ್ನು ಮೂಢನಂಬಿಕೆಗಳಿಂದ ಪಾರು ಮಾಡಿ ವೈಜ್ಞಾನಿಕ ತಿಳಿವಳಿಕೆ ನೀಡಬೇಕು. ಈ ಕಾರ್ಯಕ್ಕೆ ಸ್ತ್ರೀಶಿಕ್ಷಣ ಅತ್ಯಗತ್ಯ. ಆಗ ಮಾತ್ರ ಗಾಂಧೀಜಿ ಕಂಡ ಕನಸು ನನಸಾಗುತ್ತದೆ. ಸ್ತ್ರೀವಿಮೋಚನ ಚಳುವಳಿಗಳೂ ಅರ್ಥಪೂರ್ಣವಾಗುತ್ತವೆ.

'ಹೊಸ ಚಿಗುರು ಹಳೆ ಬೇರು ಕೂಡಿರಲು ಮರ ಸೊಗಸು' ಎಂಬಂತೆ ಗಾಂಧೀಜಿಯವರ ವಿಚಾರಗಳಲ್ಲಿ ಪೂರ್ವ ಪಶ್ಚಿಮಗಳ ಸಾಮರಸ ವಿದೆ. ಅವು ಇಂದಿಗೂ ಮಹಿಳೆಯರಿಗೆ ಮಾರ್ಗದರ್ಶಕವಾಗಿವೆ. ಪತ್ರಿಕೆಗಳಲ್ಲೇ ಉಳಿದು ಮರೆಯಾಗಿ ಹೋಗುತ್ತಿದ್ದ ಗಾಂಧೀ ವಿಚಾರಗಳನ್ನು ಸಂಕಲನ ಮಾಡಿ ಗಾಂಧೀ ಗ್ರಂಥಮಾಲೆಯವರು ಪುಸ್ತಕರೂಪದಲ್ಲಿ ಪ್ರಕಟಿಸಿ ಸ್ತುತ್ಯಕಾರ್ಯವನ್ನು ಮಾಡಿದ್ದಾರೆ. 'ಮಹಿಳೆಯರು' ಕೃತಿಯ ಭಾಷಾಂತರಕಾರರಲ್ಲಿ ಒಬ್ಬರಾಗಿರುವ ಶ್ರೀ ಜಿ. ವಿ. ನಾರಾಯಣಮೂರ್ತಿಯವರು ಅಭಿನಂದನಾರ್ಹರು.

ಪದಚಿಹ್ನೆ

# ಜಿ.ವಿ.ನಾ. ಅವರ 'ಪುಸ್ತಕ ಸಂಪದ'

**ಬಿ. ಎಸ್. ಗುಂಡೂರಾವ್**

ಕನ್ನಡದಲ್ಲಿ ಗಾಂಧೀ ಸಾಹಿತ್ಯದ ಪರಿಚಯವುಳ್ಳವರಿಗೆ ಆ ಪ್ರಕಾರದ ಪ್ರಮುಖ ಲೇಖಕರ ಪರಿಚಯವೂ ಸಾಮಾನ್ಯವಾಗಿ ಇರುತ್ತದೆ. ಹಾಗೆ ಸ್ಮೃತಿಪಟಲಕ್ಕೆ ತಟ್ಟನೆ ಸುಳಿಯುವ ಹೆಸರುಗಳೆಂದರೆ, ಸರ್ವಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮ, ಜಿ. ವಿ. ನಾರಾಯಣಮೂರ್ತಿ, ಕೆ. ಎಸ್. ನಾರಾಯಣಸ್ವಾಮಿ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ವಾಮನ ಅನಂತ ಹೊದಿಕೆ—ಇತ್ಯಾದಿ ಮುಖ್ಯವಾಗುತ್ತವೆ.

ಶ್ರೀ ಜಿ. ವಿ. ನಾರಾಯಣಮೂರ್ತಿ ಅವರು ಗಾಂಧೀ–ಚಿಂತನ–ಜೀವನ–ದರ್ಶನಗಳನ್ನು ತಮ್ಮದಾಗಿಸಿಕೊಂಡು ಅದರಂತೆ ತಮ್ಮ ಬಾಳು ನಡೆಸಿ, ಅನೇಕ ಯುವಕರಿಗೆ ಸ್ಫೂರ್ತಿ ನೀಡಿದ ಹಿರಿಯರು. ಅವರ ಬಗ್ಗೆ—"ಶ್ರೀ ಜಿ. ವಿ. ನಾರಾಯಣಮೂರ್ತಿ ಗಾಂಧೀ ಸಾಹಿತ್ಯ ಕ್ಷೇತ್ರದಲ್ಲಿ ಅತುಳವಾಗಿ ಕೃಷಿಮಾಡಿರುವ ಸಾಧಕರು. ಯಾವ ಪ್ರಚಾರ ಪ್ರಸಿದ್ಧಿಗಳನ್ನು ಬಯಸದೇ ಮೂವತ್ತೈದು ವರ್ಷಗಳಿಗೂ ಮೀರಿ ತದೇಕ ನಿಷ್ಠೆಯಿಂದ ದುಡಿಯುತ್ತ ಬಂದಿದ್ದಾರೆ. ಸರಳತೆ, ಸಾತ್ತ್ವಿಕತೆ, ಧ್ಯೇಯನಿಷ್ಠೆಗಳು ಅವರ ಜೀವನ ಸ್ಥಾಯೀ ಶ್ರುತಿಗಳಾಗಿವೆ. ಅವರ ಬರಹಗಳಲ್ಲಿ ಓಜಸ್ಸು ತುಳುಕುತ್ತದೆ. ಭಾಷಾಂತರ ಕಲೆಯಲ್ಲಿ ಅವರದು ಅಸಾಧಾರಣ ಸಿದ್ಧಿ. ದಿ|| ಯಾಮುನಾಚಾರ್ಯರ ನೆಚ್ಚಿನ ಸಹೋದ್ಯೋಗಿಯಾಗಿ ಗಾಂಧೀಗ್ರಂಥಮಾಲೆಯ ಇಪ್ಪತ್ತು ಸಂಪುಟಗಳನ್ನು ಸಂಪಾದಿಸಿ, ಭಾಷಾಂತರಿಸಿ ಪ್ರಕಟಿಸುವ ಕಾರ್ಯದಲ್ಲಿ ಅಪಾರಸೇವೆ ಸಲ್ಲಿಸಿದ್ದಾರೆ. ನೂತನ ಪ್ರಯೋಗಗಳನ್ನು ಕ್ರಿಯಾತ್ಮಕ ವಿಚಾರಧಾರೆಗಳನ್ನು ಕನ್ನಡ ಇಂಗ್ಲಿಷ್ ಭಾಷೆಗಳಲ್ಲಿ ಪ್ರಚುರಪಡಿಸಿ ಶಿಕ್ಷಣ ಕ್ಷೇತ್ರದಲ್ಲಿ ವಿಶಿಷ್ಟ ಗೌರವಾದರಗಳನ್ನು ಗಳಿಸಿದ್ದಾರೆ. ವಿನೋಬಾಜಿಯ ಭೂದಾನ ಪಾದಯಾತ್ರೆಯಿಂದ ಹಿಡಿದು ಇದುವರೆವಿಗೂ ಸರ್ವೋದಯ ವಿಚಾರ ಮಾಧ್ಯಮ ಮತ್ತು ಪ್ರತ್ಯಕ್ಷ ಕಾರ್ಯಕ್ರಮಗಳಲ್ಲಿ ತೊಡಗಿ ಸಾರ್ಥಕ ಬಾಳನ್ನು ನಡೆಸಿಕೊಂಡು ಬರುತ್ತಿದ್ದಾರೆ. ಹಿಂದೆ ಕೆಲವು ಕಾಲ ಸೇವಾ ಗ್ರಾಮ ಆಶ್ರಮದಲ್ಲಿದ್ದು ಗಾಂಧೀಜಿಯ ಪರಿಚಯ ಪಡೆದಿದ್ದರು" - ಎನ್ನುವ ಶ್ರೀ ಕೆ. ಎಸ್. ನಾರಾಯಣಸ್ವಾಮಿ ಅವರ ಮಾತು ಯಥಾರ್ಥವನ್ನು ಬಿಂಬಿಸುತ್ತದೆ. ಶ್ರೀ ಜಿ ವಿ.ನಾ, ದೊಡ್ಡ ಚೇತನ. ನೂರು ಸೊಡರುಗಳನ್ನು ಉರಿಸಬಲ್ಲ ಮಹಾ ಜ್ಯೋತಿ.

ಅವರು ಬೃಹದಾಕಾರದ ಗ್ರಂಥಗಳನ್ನು ಅನೇಕ ಬರೆದಿದ್ದಾರೆ. ಅನುವಾದ ಮಾಡಿದ್ದಾರೆ. ಆದರೆ ಅವರ ವಿಶಿಷ್ಟ ಕೊಡುಗೆ ಎಂದರೆ ಈ 'ಪುಸ್ತಕ ಸಂಪದ'

ರಾಷ್ಟ್ರೋತ್ಥಾನ ಪರಿಷತ್‌ನವರು ಮಕ್ಕಳಿಗೆ ರಾಷ್ಟ್ರ ನಿರ್ಮಾಪಕ ಸಾಹಿತ್ಯ ಒದಗಿಸುವ ಮಹಾ ಯೋಜನೆಯೊಂದನ್ನು ಹಾಕಿ, ಮುಗಿಸಿದರಷ್ಟೆ! ಅದರಲ್ಲಿ ಲೇಖಕರಾಗಿ ಅನೇಕ ಹಿರಿಯರು, ಕಿರಿಯರು, ಉದಯೋನ್ಮುಖರು—ಎಲ್ಲರೂ ಸಕ್ರಿಯವಾಗಿ ಪಾಲ್ಗೊಳ್ಳುವಂತೆ ಅವರು ಮಾಡಿದರು. ಈ ಮಾತಿಗೆ (ಕನ್ನಡ) ಶ್ರೀ ಜಿ.ವಿ.ನಾ. ಅವರು ತಮ್ಮ ಆರು ಅಸರ್ಘ್ಯ ರತ್ನಪುಷ್ಪಗಳನ್ನು ಸೇರಿಸಿದಾರೆ. ಅವುಗಳ ಸ್ಥೂಲ ಪರಿಚಯ ಈ ಲೇಖನದ ಉದ್ದೇಶ.

ಈ ಆರು ಪುಸ್ತಿಕೆಗಳೆಂದರೆ (ಪ್ರಕಟಣೆಯ ಅನುಕ್ರಮವನ್ನು ಅನುಸರಿಸಿ)—ನಾರಾಯಣ ಗುರು, ಗಾಂಧೀಜಿ, ಠಕ್ಕರ್ ಬಾಪಾ. ಗೋ. ಕೃ. ಗೋಖಲೆ. ಎನ್. ಎಸ್. ಹರ್ಡೀಕರ್, ಮತ್ತು ಜಯಪ್ರಕಾಶ್ ನಾರಾಯಣ್.

ಈ ಕಿರು ಹೊತ್ತಿಗೆಗಳ ಲೇಖಕರ ಸಾಮರ್ಥ್ಯದ ಅರ್ಥಮಾಡಿಕೊಳ್ಳಲು ಈ ಹೊತ್ತಿಗೆಗಳ ಯೋಜನೆ, ಅಳತೆಯ ಪರಿಚಯವೂ ಅಗತ್ಯ: ಈ ಹೊತ್ತಿಗೆಗಳು ಮಕ್ಕಳನ್ನು ಕುರಿತವು: ಚಿಕ್ಕವು. 1/16 ಡೆಮ್ಮಿ 48 ಪುಟ. ಇದರಲ್ಲಿ ನಾಲ್ಕು ಪುಟಗಳು ಚಿತ್ರಗಳಿಗೆ ಮೀಸಲು. 3 ಪುಟ ವಿವರ ಮುನ್ನುಡಿಗಳಿಗೆ. ಲೇಖಕರಿಗೆ ಸಿಗುವುದು ಸುಮಾರು 40 ಪುಟಗಳಷ್ಟು ಅವಕಾಶ ಮಾತ್ರ. ಈ ಸೀಮಿತ ಅವಕಾಶಕ್ಕೆ ಬರವಣಿಗೆ ಮಕ್ಕಳ ಮಟ್ಟಕ್ಕೆ ಸರಿಹೊಂದಬೇಕು ಎಂಬ ಕಡಿವಾಣ ಬೇರೆ! ಮಹಾ ಗ್ರಂಥಗಳನ್ನು ಬರೆಯುವುದಕ್ಕಿಂತ ಈ ಕಿರುಹೊತ್ತಿಗೆಗಳ ಲೇಖನ ಹೆಚ್ಚು ಮಾನಸಿಕ ಶ್ರಮವನ್ನು ಎಚ್ಚರವನ್ನು ಬೇಡುವ ಕೆಲಸ.

ಈ ಎಲ್ಲ ಇತಿಮಿತಿಗಳನ್ನು ಗಮನಿಸಿಕೊಂಡು, ಶ್ರೀ ಜಿ.ವಿ.ನಾ. ಅವರು ಕುರಿತ ವ್ಯಕ್ತಿಗಳ ವಿಶಾಲ ವ್ಯಕ್ತಿತ್ವಗಳನ್ನು ಗಮನಿಸಿದರೆ, ಅವರ ಸಾಧನೆ ಹಿರಿದು, ಸಾರ್ಥಕ, ಎನ್ನಿಸದೇ ಇರದು. ಈ ಪುಸ್ತಕಗಳನ್ನು ಓದಿದ ನನ್ನ ಮಕ್ಕಳಂತೂ ಸಂತೋಷಪಟ್ಟರು. ಇದು ಮಕ್ಕಳನ್ನು ಮುಟ್ಟುವ, ತಟ್ಟುವ ಬರವಣಿಗೆ. 'ಕಿರಿದರೊಳ್ ಪಿರಿದರ್ಥಮಂ' ತಿಳಿಸುವ ವಾಕ್ಯ ಮಾಣಿಕ್ಯಕೋಶ.

## ನಾರಾಯಣ ಗುರು

'ನಾರಾಯಣ ಗುರು'ವನ್ನು ಕುರಿತು ಪ್ರಾರಂಭಿಸುವಾಗ 'ಗುರು' ಪದದ ವ್ಯಾಪ್ತಿಯನ್ನು, ಗುರು ಪರಂಪರೆ, ಗುರುತತ್ತ್ವ—ಇವುಗಳನ್ನು ಸುಲಭವಾದ ಮಾತುಗಳಲ್ಲಿ ವಿವರಿಸಿದ್ದಾರೆ. ''ಭಾರತೀಯರಾದ ನಮಗೆ 'ಗುರು' ಎನ್ನುವ ಮಾತು ಬಹಳ ಪೂಜ್ಯವಾದುದು. 'ಗುರು' ಎಂದರೆ, ಭಾರವಾದುದು, ಬೆಲೆಯುಳ್ಳದ್ದು, ಗೌರವಕ್ಕೆ ಪಾತ್ರವಾದುದು. ಅಜ್ಞಾನವನ್ನು ನಾಶಮಾಡುವಂಥದು ಎಂಬ ನಾನಾ ಅರ್ಥಗಳುಂಟು. ಪ್ರಪಂಚದ ಬೇರೆ ಬೇರೆ ದೇಶಗಳಲ್ಲಿಯೂ ಇದೇ ಮಾತಿನ ಭಾವ ಒಂದಲ್ಲ ಒಂದು ರೂಪದಲ್ಲಿ ಶಿಕ್ಷಣ ಮತ್ತು ಮತಧರ್ಮಗಳ ಮೂಲಕ ಪರಿಚಯವಿವೆ. ಗುರುತ್ವಕ್ಕೆ,

ಗುರುಭಾವಕ್ಕೆ ಪೂಜ್ಯತೆಯಿದೆ" ಎಂದು ಸುಲಭವಾದ ಮಾತುಗಳಲ್ಲಿ ವಿವರಿಸಿದ್ದಾರೆ. ಅಲ್ಲದೆ ಹುಟ್ಟಿದ ಮಗುವಿಗೆ ತಾಯಿ ಮೊದಲ ಗುರು ಎಂದು ಹೇಳಿ, ಉಳಿದವರು ಯಾವ ಯಾವ ಸ್ತರಗಳಲ್ಲಿ ಗುರುಗಳಾಗುತ್ತಾರೆ ಎಂಬುದನ್ನು ವಿವರಿಸಿ ಅನಂತರ ಕೇರಳದ ಒಂದು ಸ್ಥೂಲ ವಿವರಣೆಯನ್ನು ನೀಡಿ ಕಥಾನಾಯಕನ ಜನ್ಮ, ವಿದ್ಯಾಭ್ಯಾಸ –ಇತ್ಯಾದಿಗಳನ್ನು ಹಂತ ಹಂತವಾಗಿ ವಿವರಿಸಿಕೊಂಡು ಹೋಗುತ್ತಾರೆ.

ಆಗಿನ ಕಾಲದಲ್ಲಿ ನಾರಾಯಣ ಗುರು ಅಸ್ಪೃಶ್ಯತಾ ನಿವಾರಣೆಗೆ, ದೀನದಲಿತರ ಉದ್ಧಾರಕ್ಕೆ ನಡೆಸಿದ ಕಾರ್ಯಗಳು ಮಹಾ ಚೇತನಗಳಾದ ಗಾಂಧೀಜಿ ಮತ್ತು ರವೀಂದ್ರನಾಥ ಠಾಕೂರರನ್ನು ಅವರ ಆಶ್ರಮಕ್ಕೆ ಆಕರ್ಷಿಸಿತು.

ಕೊನೆಯ ಕೆಲವು ಪುಟಗಳಲ್ಲಿ ಗುರುವಿನ ಬೋಧನೆಗಳನ್ನು ಎರಡು ಪುಟಾಣಿ ಕತೆಗಳ ಮೂಲಕ, ಮತ್ತು ಕೆಲವು ಸೂಕ್ತಿಗಳ ಮೂಲಕ ಪರಿಚಯಿಸಿ ಎಳೆಯ ಮನಸ್ಸಿಗೆ ಕುತೂಹಲ (ಇದ್ದವರಿಗೆ) ಕೆರಳಿಸುತ್ತಾರೆ.

**'ಗಾಂಧೀಜಿ'** ಜಿ.ವಿ.ನಾ. ಅವರ ಈ ಆರು ಕೃತಿಗಳಲ್ಲಿ ಅತ್ಯಂತ ಶ್ರೇಷ್ಠ. ಗಾಂಧೀಜಿ ಅವರನ್ನು ಕುರಿತು ದೊಡ್ಡ ಹೊತ್ತಗೆ ಬರೆಯುವುದು ಸುಲಭ. ಅವರ ವಿಶಾಲವಾದ ವ್ಯಕ್ತಿತ್ವವನ್ನು ಈ ಪುಸ್ತಿಕೆಯಲ್ಲಿ ಸಮಗ್ರವಾಗಿ ತರಲಾಗಿದೆ. ಪ್ರತಿ ವಾಕ್ಯವೂ ಸುಸಂಬದ್ಧವಾಗಿ ಸಾರ್ಥಕವಾಗಿದೆ :

"ದಕ್ಷಿಣ ಆಫ್ರಿಕ ಗಾಂಧೀಜಿಯನ್ನು ಲೋಕಪ್ರಸಿದ್ಧ ವ್ಯಕ್ತಿಯನ್ನಾಗಿ ಮಾಡಿತು. ಸತ್ಯಾಗ್ರಹರೂಪದ ಅಹಿಂಸಾ ಹೋರಾಟ ನಡೆಸಿದ ಅವರನ್ನು ಅನೇಕ ಪ್ರಸಿದ್ಧ ಪಾಶ್ಚಾತ್ಯರು ಏಸುಕ್ರಿಸ್ತನ ಅವತಾರವೆಂದೇ ಪರಿಗಣಿಸಿದರು. ದಕ್ಷಿಣ ಆಫ್ರಿಕಾದಲ್ಲಿ ಇಪ್ಪತ್ತೆರಡು ವರ್ಷಕಾಲ ಇದ್ದು ಕಡೆಗೆ ಭಾರತಕ್ಕೆ ಹಿಂದಿರುಗಿದ ಅವರನ್ನು ಪ್ರೇಮಾದರಗಳಿಂದ ಸ್ವಾಗತಿಸಿದ ಜನಕೋಟಿ 'ಮಹಾತ್ಮ' ಎಂದು ಕರೆದು ಗೌರವಿಸಿತು" (ಗಾಂಧೀಜಿ 33) ಈ ಮಾತುಗಳು ಮುಖ್ಯ ವಿಷಯವನ್ನು ಬಿಡದೆ, ಸಂಗ್ರಹವಾಗಿ, ಗ್ರಾಹ್ಯವಾಗಿ ಹೇಳುವ ಅವರ ಪರಿಣತ ರೀತಿಗೆ ಲಕ್ಷ್ಯವಾಗಿ ನಿಲ್ಲಬಲ್ಲವು.

ಗಾಂಧೀಜಿ ಅವರ ಮರಣವನ್ನು ಕುರಿತು ಬರೆಯುವಾಗ ಸಾಮಾನ್ಯವಾಗಿ ಎಲ್ಲರೂ ಸಮಚಿತ್ತವನ್ನು ಕಳೆದುಕೊಂಡು ಭಾವೋದ್ರೇಕದಿಂದ ಹಂತಕನನ್ನು ಕುರಿತು ಬೈಗುಳದ ಮಾತುಗಳನ್ನು ಆಡುತ್ತಾರೆ. ಗಾಂಧಿ ಹತ್ಯೆ ಅಕ್ಷಮ್ಯ. ಅದರೂ ಗೋಡ್ಸೆ ತನ್ನದೇ ಆದ ವಿಚಾರಸರಣಿಯನ್ನು ಹೊಂದಿದ್ದ ಎನ್ನುವುದು ಎಲ್ಲರಿಗೂ ತಿಳಿದ ವಿಷಯ. ಶ್ರೀ ಜಿ ವಿ ನಾ. ಅವರು ಈ ಘಟನೆಯನ್ನು ವಿವರಿಸುವಾಗ ಎಷ್ಟು ಸಮಚಿತ್ತದಿಂದ ನಿರ್ವಹಿಸಿದ್ದಾರೆ ಎನ್ನುವುದು ಅವರ ಪರಿಪಕ್ವಮತಿಗೆ ನಿದರ್ಶನವಾಗುತ್ತದೆ.

"೧೯೪೮ರ ಜನವರಿ ೩೦. ಅವರು ದಿನವೂ ಸಂಜೆ ೫–೩೦ಕ್ಕೆ ಪ್ರಾರ್ಥನಾ ಸಭೆ ನಡೆಸುತ್ತಿದ್ದರು. ಪ್ರಾರ್ಥನೆಯೇ ಅವರ ಸರ್ವಶಕ್ತಿಯಾಗಿತ್ತು. ಆ ಶುಕ್ರವಾರ

ಸಂಜೆಯೂ ಪ್ರಾರ್ಥನಾ ಸಭೆಗೆ ಹೋಗುವ ಹಾದಿಯಲ್ಲಿದ್ದರು. ಗಾಂಧೀಜಿ ಮುಸಲ್ಮಾನರ ಪಕ್ಷಪಾತಿ ಎಂದು ಭಾವಿಸಿದ್ದ ನಾಥೂರಾಂ ವಿನಾಯಕ ಗೋಡ್ಸೆ ಎಂಬಾತ, ಹಿಂದು ಧರ್ಮವನ್ನು ಉಳಿಸುವೆನೆಂಬ ಭ್ರಮೆಯಿಂದ ಅವರನ್ನು ಗುಂಡಿಟ್ಟು ಕೊಂದನು. ಅವನು ಎದುರೆದುರಿಗೆ ನಿಂತು, ತಲೆಬಾಗಿ ನಮಸ್ಕರಿಸಿ, ಮೂರು ಸಲ ಗುಂಡು ಹಾರಿಸಿದನು. ಗೀತಾ ಧರ್ಮದ ಹೃದಯ ಒಡೆಯಿತು. ಗಾಂಧೀಜಿ ಇಲ್ಲವಾದರು." (ಗಾಂಧೀಜಿ ೪೪–೪೫.)

**ಠಕ್ಕರ್‌ಬಾಪಾ :** ಗೋಖಲೆ, ಕರ್ವೆ, ದೇವಧರ್, ಸಿಂಧೆ ಮುಂತಾದವರ ಸೇವಾದರ್ಶಗಳಿಂದಲೂ, ಗಾಂಧೀಜಿ ಅವರ ಅಯಸ್ಕಾಂತ ವ್ಯಕ್ತಿತ್ವದಿಂದಲೂ ಆಕರ್ಷಿತರಾಗಿ, ಇಂಜಿನಿಯರ್ ಹುದ್ದೆಯನ್ನು ತ್ಯಜಿಸಿ ದೀನದಲಿತರ ಸೇವೆಗೆ ತಮ್ಮನ್ನು ಅರ್ಪಿಸಿಕೊಂಡವರು ಅಮೃತಲಾಲ್ ವಿಠ್ಠಲದಾಸ್ ಠಕ್ಕರ್‌ಬಾಪಾ. ಅವರನ್ನು ಕುರಿತ ಈ ಕಿರುಹೊತ್ತಿಗೆಯೂ ಸಹ ಜಿ.ವಿ.ನಾ. ಅವರ ಇತರ ಪುಸ್ತಿಕೆಗಳ ಸಲ್ಲಕ್ಷಣಗಳನ್ನು ಹೊಂದಿದೆ. ಸರ್ವೆಂಟ್ಸ್ ಆಫ್ ಇಂಡಿಯಾ ಸೊಸೈಟಿಯು ಅವರನ್ನು ಬ್ರಿಟಿಷ್ ಗಯಾನಾಕ್ಕೆ ಕಳಿಸಲು ತೀರ್ಮಾನಿಸಿದಾಗ ಒರಿಸ್ಸಾದಲ್ಲಿ ಘೋರಕ್ಷಾಮ (1920). ಇದನ್ನು ತಿಳಿದು ಗಾಂಧೀಜಿ ರೈ॥ಆ॥ ವಿ. ಎಸ್. ಶ್ರೀನಿವಾಸ ಶಾಸ್ತ್ರಿಗಳಿಗೆ ಹೀಗೆ ಬರೆದು ಅವರ ಪ್ರಯಾಣವನ್ನು ನಿಲ್ಲಿಸಿ ಅವರನ್ನು ಒರಿಸ್ಸಾಕ್ಕೇ ಉಳಿಸಿದರಂತೆ.

'ಅಮೃತಲಾಲ್ ಅವರನ್ನು ಬ್ರಿಟಿಷ್ ಗಯಾನಾಕ್ಕೆ ಕಳಿಸಬೇಕೆಂಬ ವಿಷಯದಲ್ಲಿ ನಿಮ್ಮೊಡನೆ ಮಾತನಾಡಬೇಕೆಂದು ಅಪೇಕ್ಷಿಸಿದ್ದೆ. ಅವರು ಬ್ರಿಟಿಷ್ ಗಯಾನಾದಲ್ಲಿ ಸಲ್ಲಿಸಬೇಕಾಗಿರುವ ಕಾರ್ಯವನ್ನು ಈಗ ಒರಿಸ್ಸಾದಲ್ಲಿ ಸಲ್ಲಿಸುತ್ತಿರುವ ಕಾರ್ಯದ ಜೊತೆಗೆ ಹೋಲಿಸಿದರೆ ಅದು ಸಾಟಿ ನಿಲ್ಲದು. ಯಾವನೊಬ್ಬ ಸಾಧಾರಣ ವ್ಯಕ್ತಿಯಾದರೂ ಬ್ರಿಟಿಷ್ ಗಯಾನಾಕ್ಕೆ ಹೋಗಿ ಅಲ್ಲಿನ ಕೆಲಸ ಮಾಡಬಹುದು. ಆದರೆ ಒರಿಸ್ಸಾದ ಕಾರ್ಯವನ್ನು ಬೇರೊಬ್ಬ ವ್ಯಕ್ತಿ ಬಾಪಾರವರಂತೆ ಸಾಮರ್ಥ್ಯದಿಂದ ನಿರ್ವಹಿಸಲಾರ. ಆದುದರಿಂದ ಒರಿಸ್ಸಾ ಕ್ಷಾಮ ಪರಿಹಾರ ಕಾರ್ಯವನ್ನು ಪೂರ್ಣಗೊಳಿಸುವವರೆಗೂ ಅವರನ್ನು ಅಲ್ಲಿಂದ ಬೇರೆ ಕಡೆಗೆ ಕದಲಿಸುವುದಿಲ್ಲವೆಂದು ನಂಬಿದ್ದೇನೆ." (ಠಕ್ಕರ್‌ಬಾಪಾ, 27–28). ಈ ಹಿರಿಯ ಸೇವಾಜೀವಿಯನ್ನು ಸಮಗ್ರವಾಗಿ ಚಿತ್ರಿಸಲಾಗಿದೆ.

**ಗೋಪಾಲಕೃಷ್ಣ ಗೋಖಲೆ :** ಮಕ್ಕಳಿಗೋಸ್ಕರ ಬರೆಯುವ ವಿಧಾನವನ್ನು ತಮ್ಮ ಅನುಭವದಿಂದ ಇವರು ಎಷ್ಟು ಚೆನ್ನಾಗಿ ಕರಗತಮಾಡಿಕೊಂಡಿದ್ದಾರೆ ಎನ್ನುವುದಕ್ಕೆ ಈ ಗ್ರಂಥದ ಆರಂಭವೇ ಸಾಕ್ಷಿ. ಗೋಖಲೆಯವರು ಮಾಧ್ಯಮಿಕ ಶಾಲೆಯಲ್ಲಿದ್ದಾಗ ನಡೆದ ಘಟನೆಯಲ್ಲಿ ಅವರ ಪ್ರಾಮಾಣಿಕತೆ ಎದ್ದು ಕಾಣುತ್ತದೆ. ಕಠಿಣವಾದ ಒಂದು ಗಣಿತ ಸಮಸ್ಯೆಯನ್ನು ಮಾಡಿಕೊಂಡು ಬರಲು ಮೇಷ್ಟ್ರು ಹೇಳಿದ್ದರು.

ಮಾಡಿಕೊಂಡು ಬಂದವನು ಗೋಖಲೆ ಒಬ್ಬನೆ. ಮೇಷ್ಟ್ರಿಗೆ ಖುಷಿಯೋ ಖುಷಿ! ಅವನನ್ನು ಮೊದಲ ಸ್ಥಾನಕ್ಕೆ ಕರೆದರು. ಅವನು ಬರಲೊಲ್ಲ. ಕಣ್ಣಲ್ಲಿ ನೀರು ಸುರಿಸಿದ. ಅನಂತರ ತಿಳಿಯಿತು --ಗೋಖಲೆ ಲೆಕ್ಕವನ್ನು ಸ್ವಂತವಾಗಿ ಮಾಡಿರಲಿಲ್ಲ. ಮೇಲ್ತರಗತಿಯ ಹುಡುಗನೊಬ್ಬನಿಂದ ಹೇಳಿಸಿಕೊಂಡಿದ್ದ. ಈ ಪ್ರಾಮಾಣಿಕತೆಗೆ ಮೇಷ್ಟ್ರು ಮಾರುಹೋದರು. ಈ ಘಟನೆಯಿಂದ ಪ್ರಾರಂಭವಾಗುವ ಪುಸ್ತಿಕೆ ಸ್ವಾರಸ್ಯವಾಗಿ ಮುಂದುವರಿಯುತ್ತದೆ. ಗೋಖಲೆಯವರಿಗೂ. ಗಾಂಧಿಯವರಿಗೂ ಇರುವ ಈ ಪ್ರಾಮಾಣಿಕತೆಯ ಸಾಮ್ಯ ಆಶ್ಚರ್ಯಕರವೇ ಸರಿ! ಈ ಗುಣಸಾಮ್ಯವೇ ಅವರಿಬ್ಬರನ್ನು ಮುಂದೆ ಗುರು–ಶಿಷ್ಯರನ್ನಾಗಿ ಬಂಧಿಸಿರಲೂ ಸಾಕು. ಗೋಖಲೆಯವರ ಗುರು ರಾನಡೆಯವರು. ಅವರಿಂದ ಗೋಖಲೆ ತುಂಬ ಕಠಿಣವಾದ ಶಿಸ್ತಿನ ಪಾಠವನ್ನೆ ಕಲಿತರು. ಅವರಿಬ್ಬರೂ ಪ್ರತಿ ಬುಧವಾರ ಕಲೆತು ರಾಜಕೀಯ ಸಾಮಾಜಿಕ ವಿಷಯಗಳನ್ನು ಚರ್ಚಿಸುವುದು ನಿಶ್ಚಿತ ಕಾರ್ಯಕ್ರಮ. ಒಮ್ಮೆ ಜ್ವರದಿಂದ ಗೋಖಲೆಯವರು ಹೋಗಲಿಲ್ಲ. "ಔಷಧಿ ತಿಂದರೆ ಜ್ವರ ಹೋಗುತ್ತದೆ. ಹೋದ ಬುಧವಾರ ಮತ್ತೆ ಬರುವುದೆ?" ಎಂದು ಛೇಡಿಸಿದರಂತೆ ರಾನಡೆ.

ಜಿ.ಪಿ.ನಾ. ಅವರು ಪುಸ್ತಿಕೆಯ ಮೊದಲು ಉಲ್ಲೇಖಿಸಿರುವ ಗೋಖಲೆಯವರ ಪ್ರಾಮಾಣಿಕತೆ ಅವರ ಜೀವನದ ಆಧಾರ ಶ್ರುತಿಯಾಗಿ ಮುಂದುವರಿಯುವುದನ್ನು ನಾವು ನೋಡಬಹುದು.

**ನಾ. ಸು. ಹರ್ಡೀಕರ್ :** ನಾರಾಯಣ ಸುಬ್ಬರಾವ್ ಹರ್ಡೀಕರ್ ದೇಶ ಸೇವೆಗೆ ತಮ್ಮನ್ನು ಅರ್ಪಿಸಿಕೊಂಡದ್ದೇ ಅಲ್ಲದೇ ಹಿಂದೂಸ್ತಾನೀ ಸೇವಾದಳವನ್ನು ಕಟ್ಟಿ ಬೆಳೆಸಿ ನಡೆಸಿದವರು. ಸೇವಾದಳ ಎಂಬ ಹೆಸರು ಹರ್ಡೀಕರರ ನೆನಪನ್ನು ತನ್ನ ನೆರಳಿನಂತೆ ಜತೆಗೆ ತರುತ್ತದೆ. ಬಡಕುಟುಂಬದಲ್ಲಿ ಹುಟ್ಟಿ, ಚಿಕ್ಕ ವಯಸ್ಸಿನಲ್ಲಿ ತಂದೆತಾಯಿಯ ಆಶ್ರಯವನ್ನು ವಿಧಿವಿಲಾಸದಿಂದ ಕಳೆದುಕೊಂಡು, ಸ್ವಪ್ರಯತ್ನದಿಂದ ಡಾಕ್ಟರಾಗಿ, ಅಮೆರಿಕಾದಲ್ಲಿ ವಿದ್ಯಾಭ್ಯಾಸಕ್ಕೆ ಹೋಗಿದ್ದಾಗ, ಲಾಲಾ ಲಜಪತರಾಯರ ಪ್ರಭಾವದಿಂದ ವಿದ್ಯಾಭ್ಯಾಸ ಬಿಟ್ಟು ದೇಶ ಸೇವೆಗೆ ತಮ್ಮನ್ನು ಅರ್ಪಿಸಿಕೊಂಡವರು ಹರ್ಡೀಕರ್. ಸೇವಾದಳ ಅವರ ಜೀವನದ ಉಸಿರಾಯಿತು. ರಾಜ್ಯಸಭೆಯ ಸದಸ್ಯರಾಗಿ ನೇಮಕ ಪಡೆದಾಗ ಸೇವಾದಳದ ಉಡುಪಿನಲ್ಲಿಯೇ ಸದನದಲ್ಲಿ ಕುಳಿತುಕೊಳ್ಳಲು ಡಾ॥ ರಾಧಾಕೃಷ್ಣನ್‌ರಿಂದ ಅನುಮತಿ ಪಡೆದರು. ಘಟಪ್ರಭಾದಲ್ಲಿ ಅವರು ಸ್ಥಾಪಿಸಿದ "ಆರೋಗ್ಯಧಾಮ" ಅವರ ಕನಸಿನ ನನಸು.

"ರಾಷ್ಟ್ರೀಯ ಸ್ವಯಂ ಸೇವಕರನ್ನು ಸೃಷ್ಟಿಸಿದ ಶಿಲ್ಪಿಗೆ ಸೇವಾಭಾವದಿಂದ ದೀನದಲಿತರ, ರೋಗಪೀಡಿತರ ಸೇವೆ ಸಲ್ಲಿಸುವ ಕಾರ್ಯ ಬದುಕಿನ ಕೊನೆಯ ಕಾರ್ಯವಾದುದು ಬಹು ಸಮಂಜಸವಾದುದು. ಬಾಲ್ಯದ ಅವರ ಇಚ್ಛೆಯನ್ನು ದೇವರು ಈಡೇರಿಸಿಕೊಟ್ಟಿದ್ದ.

1969ರ ಮೇ 7ರಂದು ಅವರಿಗೆ 80 ವರ್ಷ ತುಂಬಿತು. ಅವರ ಮಿತ್ರಬಾಂಧವರೆಲ್ಲ ಸೇರಿ ಅದನ್ನು ಆನಂದದಿಂದ ಆಚರಿಸಿದರು.

1975ರ ಆಗಸ್ಟ್ 26ರಂದು ಬೆಳಿಗ್ಗೆ ಆ ಪುಣ್ಯಜೀವಿಯು ದೇಹಾಂತವಾಯಿತು.

ಹರ್ಡೀಕರರು ಸೇವೆ, ಮಾನವ ಸೇವೆ. ಸಲ್ಲಿಸಿ ಕೃತಕೃತ್ಯರಾಗಿದ್ದರು. ಬಡತನದಲ್ಲಿ ಹುಟ್ಟಿ ಬೆಳೆದ ನಾರಾಯಣ, ಸೇವೆಗೆ ಕಂಕಣ ಕಟ್ಟಿದ್ದ ಆಂಜನೇಯನಂತೆ, ಭೀಷ್ಮನಂತೆ ತಾಯ್ನಾಡಿನ ಅನವರತ ಸೇವೆಗೆ ತಮ್ಮ ಬದುಕನ್ನು ಮುಡಿಪಿಟ್ಟ ಧೀರ, ವೀರ ವ್ಯಕ್ತಿ: ಯುವಜನಕ್ಕೆ ಸದಾ ಆದರ್ಶಪ್ರಾಯ, ಅವರು.'' (ನಾ.ಸು.ಹ. ೪೯).

## ಜಯಪ್ರಕಾಶ್ ನಾರಾಯಣ್ :

ಜೆ. ಪಿ. ಬಗ್ಗೆಯೂ ದೊಡ್ಡ ಪುಸ್ತಕ ಬರೆಯುವುದು ಕಿರುಹೊತ್ತಿಗೆ ಬರೆಯುವುದಕ್ಕಿಂತ ಸುಲಭ. ಈ ಸುಲಭವಲ್ಲದ ಕೆಲಸವಲ್ಲಿ ಯಶಸ್ವಿಯಾಗಿರುವುದು ಜಿ.ವಿ.ನಾ. ಅವರ ಸಾಮರ್ಥ್ಯಕ್ಕೆ ಸಾಕ್ಷಿ. ಈ ಪುಸ್ತಿಕೆಯ ಪ್ರಾರಂಭವೂ ಸಹ ತುಂಬ ನಾಟಕೀಯ. 'ನಲವತ್ತು ದಿನಗಳು ನಿದ್ರೆಯಿಲ್ಲ!' ಎಂದು ಪ್ರಾರಂಭವಾಗುವ ಈ ಭಾಗ ಜೆ. ಪಿ. ಲಾಹೋರ್ ಜೈಲಿನಲ್ಲಿ ಬ್ರಿಟಿಷ್‌ರಿಂದ ಪ್ರಶ್ನೆಗೆ ಗುರಿಯಾಗಿ ನಲವತ್ತು ದಿನ ನಿದ್ರಾರಹಿತರಾಗಿದ್ದುದನ್ನು ವಿವರಿಸುತ್ತದೆ.

''ತಮಗಾಗಿ ಯಾವ ಪದವಿಯನ್ನಾಗಲೀ, ಅಧಿಕಾರವನ್ನಾಗಲೀ ಬಯಸಲಿಲ್ಲ.

ಮನುಷ್ಯ ಎಷ್ಟು ಎತ್ತರಕ್ಕೆ ಬೆಳೆಯಬಹುದು. ಎಷ್ಟು ನಿಸ್ವಾರ್ಥ ಬದುಕನ್ನು ನಡೆಸಬಹುದು ಎಂಬುದನ್ನು ತೋರಿಸುವ ಧೀರ, ಧೀಮಂತ ಬದುಕು ಜಯಪ್ರಕಾಶ ನಾರಾಯಣರದು.'' (ಜ. ಪ್ರ. ನಾ. ೯.)

ಹಜಾರಿಬಾಗ್ ಸೆರೆಮನೆಯಿಂದ ತಪ್ಪಿಸಿಕೊಂಡು ಹೊರಡಲು ನಿರ್ಧರಿಸಿದಾಗ–ಅವರಿಗೆ ಅನೇಕ ದಿನಗಳಿಂದ ಆರೋಗ್ಯ ಸರಿ ಇರಲಿಲ್ಲ. ಸಂಗಡಿಗರು ಕಣ್ಣೀರುತುಂಬಿ–''ನಿಮ್ಮನ್ನು ನೋಡಿದರೆ ಸಂಕಟವಾಗುತ್ತದೆ'' ಎಂದರೆ ಆ ಧೀರ ಚೇತನ ಕೊಟ್ಟ ಉತ್ತರ–''ನನ್ನ ದೇಹದ ನಿತ್ರಾಣ ನೋಡಿ ಮಾತನಾಡುತ್ತಿದ್ದೀರಿ. ದೇಹದ ಶಕ್ತಿ ಒಂದೇ ಶಕ್ತಿಯೆ ? ಒಳಗಿನ ಚೇತನಕ್ಕೆ ಶಕ್ತಿ ಇಲ್ಲವೆ? ಸಂಕಲ್ಪ ಮಾಡಿದ್ದಾಗಿದೆ. (ಅದೇ, ಪು. ೩೦) ಈ ರೀತಿ ತಪ್ಪಿಸಿಕೊಂಡರೆ ಅನೇಕ ತಿಂಗಳು ಕಾಲ ಹೊರಗಡೆ ವೇಷಾಂತರದಿಂದ ಸಂಚರಿಸಿ ಸ್ವಾತಂತ್ರ್ಯದ ಆಂದೋಳನವನ್ನು ನಡೆಸಲು ಸಾಧ್ಯವಾಯಿತು. ಅವರನ್ನು ಬಂಧಿಸಿದವರಿಗೆ ಹತ್ತುಸಾವಿರ ರೂಪಾಯಿ ಬಹುಮಾನ ಘೋಷಿಸಿತು ಸರ್ಕಾರ.

ಸ್ವಾತಂತ್ರ್ಯಾನಂತರ ಜೆ. ಪಿ. ತಮ್ಮನ್ನು ಸರ್ವೋದಯ ಕಾರ್ಯಕ್ಕೆ ಜೀವದಾನ ಮಾಡಿದರು, 1975ರ ನಂತರ ಹರಿಹಂಚಾಗಿ ದಮನಗೊಂಡಿದ್ದ ವಿರೋಧ ಪಕ್ಷವನ್ನು

ಒಂದಾಗಿಸಿ ಪ್ರಚಂಡ ಜನತಾವಿಜಯ ಸಾಧಿಸಿದರು. ಅದೇ ಪಕ್ಷ ತಮ್ಮ ಕಣ್ಣೆದುರಿಗೇ ಒಳಜಗಳದಿಂದ ಛಿದ್ರವಾದುದನ್ನು ಕಂಡರು.

ಈ ವರ್ಣಮಯ ಸಾಹಸೀ ಬಾಳನ್ನು ಜಿ. ವಿ. ನಾ. ಅವರು ಯಶಸ್ವಿಯಾಗಿ ಕನ್ನಡಿಸಿದ್ದಾರೆ.

"ಜೆ. ಪಿ. ಮಂತ್ರಿಯಾಗಬೇಕೆಂದು, ರಾಷ್ಟ್ರಪತಿಯಾಗಬೇಕೆಂದು ಸೂಚನೆಗಳು ಬಂದಾಗ ಒಂದು ಕ್ಷಣವೂ ಅವಕ್ಕೆ ಮನಸ್ಸು ಕೊಡಲಿಲ್ಲ. ಶುಭ್ರಜೀವನದ, ಪ್ರಜೆಗಳಿಗೆ [illegible] ಬಾಳಿನ ಶ್ರೀರಾಮನ ರಾಜ್ಯದ ಆದರ್ಶವನ್ನು ಹೃದಯದಲ್ಲಿ ಸ್ಥಾಪಿಸಿಕೊಂಡ ಗಾಂಧೀಜಿಯ ಹಾದಿಯಲ್ಲಿ ನಡೆದ ಮಹಾನ್ ಪುರುಷ ಜೆ. ಪಿ." (ಅದೇ, ಪು. ೯೯)

ಈ ಆರು ಕಿರು ಪುಸ್ತಕಗಳಲ್ಲಿಯೂ ಶ್ರೀ ನಾರಾಯಣಮೂರ್ತಿಗಳ ಆಳವಾದ ಅಭ್ಯಾಸ, ವಿಚಾರಮಂಥನ, ನಾಯಕವ್ಯಕ್ತಿಯ ಗುಣಗಳ ಮೂಲಶ್ರುತಿಯ ಮೇಲೆ ಒತ್ತುಕೊಟ್ಟು ಹೇಳುವ ಗುಣ ಎದ್ದು ಕಾಣುತ್ತದೆ. 'ಭಾರತ ಭಾರತಿ'ಯಲ್ಲಿ ಬಂದ ಪುಸ್ತಕಗಳಲ್ಲಿ ತಮ್ಮ ಉದ್ದೇಶವನ್ನು ಸಾರ್ಥಕಗೊಳಿಸಿಕೊಂಡಿವೆ ಎಂದು ಹೇಳುವ ಹಾಗಿಲ್ಲ. ಆದರೆ ಈ ಪುಸ್ತಕಗಳು ಮಾತ್ರ ತಮ್ಮ ಉದ್ದೇಶವನ್ನು ಸಾರ್ಥಕಗೊಳಿಸಿಕೊಂಡಿವೆ ಎಂದು ಧಾರಾಳವಾಗಿ ಹೇಳಬಹುದು.

ಈ ಹಿರಿಯ ಚೇತನದ ಬಗ್ಗೆ ಕೆಲವು ಮಾತು ಯೋಚಿಸುವ, ಬರೆಯುವ, ತನ್ಮೂಲಕ ನನ್ನ ಗುರುಋಣವನ್ನು ಸಲ್ಲಿಸುವ ಅವಕಾಶ ನೀಡಿದ ಈ ಗ್ರಂಥದ ಸಂಪಾದಕ ವರ್ಗಕ್ಕೆ ನನ್ನ ನಮನ.

ಪದಚಿಹ್ನೆ

# ಗೀತಾಪತ್ರಗಳು
# ಶ್ರೀಮದ್ಭಗವದ್ಗೀತಾ

ಎಂ. ಸಿ. ಗಂಗಾಧರ

ಶ್ರೀ ಜಿ. ವಿ. ನಾರಾಯಣಮೂರ್ತಿಯವರು ಚಿಕ್ಕನಾಯಕನಹಳ್ಳಿಯ ಪ್ರಮುಖ ಗಾಂಧೀ ಅನುಯಾಯಿ. ಇವರು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ ಗಾಂಧೀಜಿಯವರ ಹಿಂಬಾಲಕರಾಗಿ ಕಾಂಗ್ರೆಸ್‌ನಲ್ಲಿ ಕೆಲಸ ಮಾಡಿರುವ ವ್ಯಕ್ತಿ. ಗಾಂಧೀ ತತ್ತ್ವಗಳು ಇವರ ಮೆಚ್ಚುಗೆಗೆ ಪಾತ್ರವಾಗಿದ್ದವು. ಗಾಂಧೀಜಿಯವರ ಮೇಲೆ ಅತ್ಯಂತ ಪರಿಣಾಮ ಬೀರಿದ ಕೃತಿ "ಭಗವದ್ಗೀತಾ." ಇದರಿಂದಾಗಿ ಗಾಂಧೀ ಅನುಯಾಯಿಯಾದ ಶ್ರೀ ನಾರಾಯಣಮೂರ್ತಿಯವರೂ ಭಗವದ್ಗೀತೆಯ ಬಗ್ಗೆ ಇರುವ ತಮ್ಮ ಒಲವನ್ನು "ಗೀತಾ ಪತ್ರಗಳು" ಮತ್ತು "ಶ್ರೀಮದ್ ಭಗವದ್ಗೀತಾ" ಎಂಬ ಎರಡು ಪುಸ್ತಕದಲ್ಲಿ ತೋರಿಸಿದ್ದಾರೆ.

೧

ಶ್ರೀ ಜಿ. ವಿ. ನಾರಾಯಣಮೂರ್ತಿಯವರ **ಗೀತಾ ಪತ್ರಗಳು** ವಯಸ್ಕರ ಶಿಕ್ಷಣ ಸಂಸ್ಥೆಯಿಂದ ಮುದ್ರಿತವಾಗಿರುವ ಕಿರು ಪುಸ್ತಕ. ಇದರಲ್ಲಿ ಗೀತೆಯಲ್ಲಿ ಅಡಕವಾಗಿರುವ ವಿಷಯದ ನಿರೂಪಣೆಯನ್ನು ಹನ್ನೊಂದು ಚಿಕ್ಕ ಚಿಕ್ಕ ಪತ್ರಗಳಲ್ಲಿ ನಿರೂಪಿಸಲಾಗಿದೆ. ಪತ್ರದ ಶೈಲಿ ಸುಲಭವಾದ ಭಾಷೆಯಲ್ಲಿದೆ. ವಯಸ್ಕರಿಗೋಸ್ಕರ ತಯಾರಿಸಲಾಗುವ ಪುಸ್ತಕಗಳ ನಿಯಮವನ್ನು ಈ ಕಿರು ಹೊತ್ತಿಗೆ ಸರಿಯಾಗಿ ಪಾಲಿಸಿದಂತೆ ಕಂಡುಬರುತ್ತದೆ.

ಮೊದಲೇ ತಿಳಿಸಿರುವಂತೆ ಈ ಕೃತಿಯ ನಿರೂಪಣೆ ಪತ್ರದ ರೀತ್ಯಾ ಸಾಗುತ್ತದೆ. ಪತ್ರವನ್ನು ಲೇಖಕರು ತಮ್ಮ ಕಿರಿಯರಿಗೆ ಬರೆದಿರುವಂತೆ ನಿರೂಪಿಸಿದ್ದಾರೆ. ಪುಸ್ತಕದ ಪ್ರಾರಂಭಿಕ ನಿವೇದನೆಯಲ್ಲಿ ತಿಳಿಸಿರುವಂತೆ ಪತ್ರಗಳನ್ನು ಲೇಖಕರ ಅತ್ಯಂತ ಪ್ರಿಯರಾದ ಚಿರಂಜೀವಿಯೊಬ್ಬರಿಗೆ ಉದ್ದೇಶಿಸಿ ಬರೆಯಲಾಗಿದೆ. ಮೊದಲ ಪತ್ರದಲ್ಲಿ ಓದುಗರಿಗೆ ಜಿಜ್ಞಾಸೆ ಮೂಡುವಂತೆ ಓದುಗ ಲೇಖಕನನ್ನು ಗೀತೆಯ ಬಗ್ಗೆ ತಿಳಿಸುವಂತೆ ಕೇಳಿರುವುದಾಗಿಯೂ ಮತ್ತು ಲೇಖಕ ತಿಳಿಸಿರುವಂತೆಯೂ ನಿರೂಪಿಸಲಾಗಿದೆ. ಮೊದಲು ಗೀತೆಯ ಗಾತ್ರ ಅದರಲ್ಲಿರುವ ಶ್ಲೋಕದ ಸಂಖ್ಯೆ, ಕೃತಿಯ ಕರ್ತೃ ಮುಂತಾದವುಗಳ ಬಗ್ಗೆ ತಿಳಿಸಲಾಗಿದೆ. ಇದರ ಜೊತೆಯಲ್ಲಿಯೇ ಗೀತೆಯ ಪಠನದಿಂದ "ಜೀವನವನ್ನು ಚೊಕ್ಕಮಾಡಿಕೊಳ್ಳಬಹುದು" ಎಂದು ತಿಳಿಸಲಾಗಿದೆ. ಗಾಂಧೀಜಿಯವರ

ಜೀವನದ ಮೇಲೆ ಗೀತೆಯ ಪ್ರಭಾವವನ್ನು ಮುಖ್ಯವಾಗಿ ಒತ್ತಿ ಹೇಳಲಾಗಿದೆ. ಹೀಗೆ ಪ್ರತಿ ಪತ್ರದಲ್ಲಿ ಗೀತೆಯ ಅಧ್ಯಾಯಗಳ ಸರಳ ಹಾಗು ಸುಲಭ ನಿರೂಪಣೆಯನ್ನು ಮಾಡಲಾಗಿದೆ. ಗೀತೆಯ ಪಠಣದಿಂದ ಉಂಟಾಗುವ ಆನಂದವನ್ನು ಸಂತೋಷವನ್ನು "ಸೂರ್ಯೋದಯವಾದ ಕೂಡಲೇ ಕತ್ತಲೆಲ್ಲಾ ಮಾಯವಾಗಿ ಎಲ್ಲೆಲ್ಲಿಯೂ ಬೆಳಕು ತುಂಬುವಂತೆ" ಮುಂತಾದ ಉಪಮೆಗಳಿಂದ ಪ್ರಸ್ಫುಟೀಕರಿಸಲಾಗಿದೆ.

ಎರಡನೆಯ ಪತ್ರದಲ್ಲಿ ಧರ್ಮಕ್ಷೇತ್ರ, ಕುರುಕ್ಷೇತ್ರ ಇವುಗಳ ಅರ್ಥವ್ಯಾಪ್ತಿಯ ವಿವರಣೆ ಇದೆ. ಕುರುಕ್ಷೇತ್ರ ಇಂದಿನ ದೆಹಲಿಯ ಬಳಿ ಇದೆ. ಈ ಕ್ಷೇತ್ರದಲ್ಲಿಯೇ ಕೌರವ ಪಾಂಡವರ ಯುದ್ಧ ಜರುಗಿತು ಇತ್ಯಾದಿ ವಿಷಯದ ಪ್ರಸ್ತಾಪವಿದೆ. ಆದರೆ "ಧರ್ಮಸ್ಥಾಪನೆಗಾಗಿ ಕುರುಕ್ಷೇತ್ರದಲ್ಲಿ ಅವರೆಲ್ಲಾ ಸೇರಿದುದರಿಂದ ಅದಕ್ಕೆ 'ಧರ್ಮಕ್ಷೇತ್ರ' ಎಂಬ ಹೆಸರು ಬಂದಿತು" ಎಂಬ ಲೇಖಕರ ಮಾತು ಅಷ್ಟು ಸಮಂಜಸವಾಗಿ ಕಾಣುವುದಿಲ್ಲ. ಕೌರವ ಪಾಂಡವ ಕಲಹ ಧರ್ಮಸ್ಥಾಪನೆಗಾಗಿ ನಡೆಯಲಿಲ್ಲ, ಆದರೆ ತಮ್ಮ ತಮ್ಮ ಆಸ್ತಿಗಾಗಿ ಎಂಬುದು ಲೋಕಜನಿತ. ಮಹಾಭಾರತ ಯುದ್ಧ ಸದ್ಗುಣ ದುರ್ಗುಣಗಳ ಕಲಹ. ಪಾಂಡವರು ಸದ್ಗುಣವನ್ನು ಸಂಕೇತಿಸಿದರೆ ಕೌರವರು ದುರ್ಗುಣವನ್ನು ಸಂಕೇತಿಸುತ್ತಾರೆ. ನಮ್ಮ ಹೃದಯವೇ ಕುರುಕ್ಷೇತ್ರ ಮುಂತಾದ ಅಭಿಪ್ರಾಯಗಳು ಚೆನ್ನಾಗಿ ಮೂಡಿಬಂದಿವೆ.

ಎರಡನೆಯ ಪತ್ರ ಅರ್ಜುನನಲ್ಲಿ ಇದ್ದ ದುಃಖದ ನಿರೂಪಣೆಯೊಂದಿಗೆ ಮುಗಿದರೆ—ಮೂರನೆಯ ಪತ್ರದಲ್ಲಿ ಆತ್ಮಜ್ಞಾನದ ಬಗ್ಗೆ ತಿಳಿಸಲಾಗಿದೆ. ಆತ್ಮ ಶಾಶ್ವತ, ದೇಹ ನಶ್ವರ ಇತ್ಯಾದಿ ನಿರೂಪಣೆಗಳನ್ನು ಸುಲಭವಾದ ಮತ್ತು ಸರಳವಾದ ಭಾಷೆಯಲ್ಲಿ ತಿಳಿಸಲಾಗಿದೆ. ಇದರೊಂದಿಗೆ ಸ್ಥಿತಪ್ರಜ್ಞ, ಯೋಗಬುದ್ಧಿ ಇತ್ಯಾದಿ ಪ್ರಯೋಗಗಳು ಕಂಡುಬರುತ್ತವೆ. ಈ ಪತ್ರದಲ್ಲಿ ಹೆಚ್ಚು ವಿಷಯದ ನಿರೂಪಣೆಯಿದೆ.

ನಾಲ್ಕನೆಯ ಪತ್ರದಲ್ಲಿ ಕರ್ಮಯೋಗ, ಕರ್ಮಮಯ, ಸಾಂಖ್ಯ, ಸ್ವಧರ್ಮ, ಯಜ್ಞ ಇತ್ಯಾದಿ ವಿಷಯಗಳ ಸರಳ ನಿರೂಪಣೆಯಿದೆ. 'ಕರ್ಮಯೋಗಿ ಜ್ಞಾನಯೋಗಿ' ಮುಂತಾದವುಗಳಿಗೆ ನವೀನ ವ್ಯಕ್ತಿಗಳ ಉದಾಹರಣೆಗಳನ್ನು ಕೊಡಲಾಗಿದೆ. ರಾಮಕೃಷ್ಣ ಪರಮಹಂಸರು ಜ್ಞಾನಯೋಗಿಗಳು, ಮಹಾತ್ಮಾ ಗಾಂಧೀಜಿ ಕರ್ಮಯೋಗಿ ಇತ್ಯಾದಿ. ಇದರಿಂದ ಓದುಗ ಜ್ಞಾನಯೋಗಿ ಮತ್ತು ಕರ್ಮಯೋಗಿಗಳು ಯಾರಾಗಬಹುದು ಮತ್ತು ಹೇಗೆ ಎಂದು ತಿಳಿಯಲು ಉಪಯೋಗವಾಗುತ್ತದೆ.

ಐದನೆಯ ಪತ್ರದಲ್ಲಿ 6, 7, 8 ಅಧ್ಯಾಯಗಳಲ್ಲಿರುವ ಅವ್ಯಕ್ತೋಪಾಸನೆ, ಅಪ್ರಾಕೃತರೂಪ, ಅವತಾರ ಮುಂತಾದ ವಿಷಯಗಳ ಚರ್ಚೆಯಿದೆ. ಆದರೆ ಮುಂದಿನ ಪತ್ರದಲ್ಲಿ 9ರಿಂದ 11 ಅಧ್ಯಾಯಗಳ ವಿಷಯವನ್ನು ವಿಶೇಷವಾಗಿ ತಿಳಿಸದೆ 11ನೇ ಅಧ್ಯಾಯದಲ್ಲಿರುವ ವಿಶ್ವರೂಪ ದರ್ಶನದ ಮೇಲೆ ಪತ್ರದ ನಿರೂಪಣೆಯನ್ನು ಕೇಂದ್ರೀ

ಕರಿಸಲಾಗಿದೆ. ಈ ದರ್ಶನವನ್ನು ಕೊಂಡಾಡುತ್ತ ಲೇಖಕರು "ಜಗತ್ತಿನ ಧರ್ಮ ಸಾಹಿತ್ಯದಲ್ಲಿ ಇಂತಹ ಸನ್ನಿವೇಶ ಇಲ್ಲವೇ ಇಲ್ಲ ಎನ್ನಬೇಕು" ಎಂದಿದ್ದಾರೆ.

ಏಳನೆಯ ಪತ್ರದಲ್ಲಿ ಅಂದಿನ ದಿನದ (23–2–68) ಪರಿಸ್ಥಿತಿಯಾದ ಹಿಂದಿ ತೊಲಗಲಿ ಚಳವಳಿಯ ಬಗ್ಗೆ ತಿಳಿಸುವಂತೆ ನಿರೂಪಿಸಿ ಗೀತೆಯ ಕಡೆಗೆ ಗಮನ ಸೆಳೆಯಲಾಗಿದೆ. ನಿರ್ಗುಣ, ಸಗುಣ ಇವೆರಡು ಪ್ರಕಾರದ ಉಪಾಸನೆಗೆ ರಾಮಾಯಣದ ನಿದರ್ಶನವನ್ನು ಕೊಡಲಾಗಿದೆ.

ಎಂಟನೆಯ ಪತ್ರದಲ್ಲಿ ಗೀತೆಯ "ಕ್ಷೇತ್ರ ಕ್ಷೇತ್ರಜ್ಞ ವಿಭಾಗ ಯೋಗ" ಎಂಬ ಅಧ್ಯಾಯದ ನಿರೂಪಣೆಯಿದೆ. ಇಲ್ಲಿ ಉಪದ್ರಷ್ಟಾ, ಅನುಮಂತಾ, ಭೋಕ್ತಾ, ಭರ್ತಾ ಮುಂತಾದವುಗಳ ನಿರೂಪಣೆಯಿದೆ. ಜ್ಞಾನ, ಜ್ಞೇಯ, ಜ್ಞಾನಗಮ್ಯ ಎಂಬ ವಿಷಯಗಳ ನಿರೂಪಣೆಯೂ ಸಹ ಇದೆ.

ಒಂಬತ್ತನೆಯ ಪತ್ರದಲ್ಲಿ 14ನೇ ಮತ್ತು 15ನೇ ಅಧ್ಯಾಯದ ವಿಷಯವಿದೆ. ಇದು ಗುಣತ್ರಯ ವಿಭಾಗ ಮತ್ತು ಪುರುಷೋತ್ತಮ ವಿಭಾಗ ಎಂಬ ಹೆಸರಿನಿಂದಲೇ ಕರೆಯಲ್ಪಟ್ಟಿದೆ. ಸತ್ವ, ರಜಸ್ಸು ಮತ್ತು ತಮಸ್ಸು ಎಂಬೀ ಮೂರು ಗುಣಗಳ ನಿರೂಪಣ, ಗುಣಾತೀತ ಸ್ಥಿತಿ, ವೈರಾಗ್ಯ ಮುಂತಾದವುಗಳನ್ನು ಉದಾಹರಣೆಯ ಸಹಿತ ಹೇಳಲಾಗಿದೆ. ಈ ಪತ್ರದ ಕೊನೆಯಲ್ಲಿ ಬ್ರಹ್ಮಜ್ಞಾನದ ಬಗ್ಗೆ ಹೇಳಲಾಗಿದೆ.

ಹತ್ತನೆಯ ಪತ್ರದಲ್ಲಿ 16ನೆಯ ಅಧ್ಯಾಯದ ನಿರೂಪಣೆಯಿದೆ. ಮತ್ತು ಗೀತೆಯಲ್ಲಿ ಇರುವ ಗುಣಗಳ ಪರಸ್ಪರ ಘರ್ಷಣೆ ಜಗತ್ತಿನ ಪ್ರಧಾನ ಧರ್ಮಗಳಲೆಲ್ಲಾ ಹೇಳಲ್ಪಟ್ಟಿದೆ ಎಂದು ಉದಾಹರಣೆ ಸಹಿತ ಹೇಳಲಾಗಿದೆ.

ಹನ್ನೊಂದನೆಯ ಪತ್ರದಲ್ಲಿ 'ಮೋಕ್ಷ ಸನ್ಯಾಸಯೋಗ' ಅಥವಾ ಕರ್ಮದ ಬಿಡುಗಡೆಯ ಬಗ್ಗೆ ತಿಳಿಸಿ ಪತ್ರವನ್ನು ಸಮಾಪ್ತಿ ಮಾಡಲಾಗಿದೆ.

ಈ ಲೇಖನದ ಮೊದಲೇ ತಿಳಿಸಿರುವಂತೆ ಈ ಹನ್ನೊಂದು ಪತ್ರಗಳ ಅರ್ಥಾತ್ ಗೀತಾ ಪತ್ರಗಳ ಸಂಗ್ರಹವನ್ನು ವಯಸ್ಕರಿಗಾಗಿ ಅದರ ಶಿಕ್ಷಣ ಸಂಸ್ಥೆ ಮುದ್ರಿಸಿದೆ. ವಯಸ್ಕರಿಗಾಗಿ ವಿವಿಧ ಶಾಖೆಗಳಲ್ಲಿನ ವಿವಿಧ ವಿಚಾರಗಳನ್ನು ತಿಳಿಸುವುದು ಅದರ ಉದ್ದೇಶ. ಇದೇ ಉದ್ದೇಶದಿಂದ ಭಗವದ್ಗೀತೆಯ ಬಗ್ಗೆ ಪತ್ರದ ಮೂಲಕ ತಿಳಿಸುವ ಈ ಕಿರುಹೊತ್ತಿಗೆಯನ್ನು ವಯಸ್ಕರ ಶಿಕ್ಷಣ ಸಂಸ್ಥೆ ಮುದ್ರಿಸಿದೆ. ಭಗವದ್ಗೀತೆಯನ್ನು ಸುಲಭವಾದ ನಿರೂಪಣೆಯೊಂದಿಗೆ ತಿಳಿಸಿ ಹೇಳುವುದು ಕಷ್ಟವಾದ ಕೆಲಸ. ಆದರೂ ಶ್ರೀ ನಾರಾಯಣಮೂರ್ತಿಯವರು ಸರಳವಾದ ನಿರೂಪಣೆಗಳನ್ನು ಕೊಟ್ಟಿದ್ದಾರೆ. ಕೆಲವು ಪದಗಳನ್ನು ಸಾಮಾನ್ಯ ಜನರ ಭಾಷೆಯಿಂದಲೂ, ಕೆಲವನ್ನು ವಿದ್ವತ್‌ಪೂರ್ಣ ಶಾಸ್ತ್ರೀಯ ಭಾಷೆಯಿಂದಲೂ ತೆಗೆದುಕೊಂಡಿದ್ದಾರೆ. ಉದಾಹರಣೆಗೆ– ಪಟ್ಟುಹಿಡಿ, ನಿರಾಶೆ–ಸದಾಶೆ, ದೀನ ಹೀನ, ಉಣಬಡಿಸು, ಇತ್ಯಾದಿ ಪದಗಳನ್ನು

ಸಾಮಾನ್ಯ ಜನರ ಭಾಷೆಯಿಂದಲೂ, ಪಾದಾರವಿಂದ, ಕಮಲಲೋಚನ, ತ್ರಿಕರಣ, ಕೃತಕೃತ್ಯ, ಇತ್ಯಾದಿ ಪದಗಳನ್ನು ವಿದ್ವತ್ಪೂರ್ಣ ಶಾಸ್ತ್ರೀಯ ಭಾಷೆಯಿಂದಲೂ ತೆಗೆದುಕೊಂಡಿದ್ದಾರೆ.

ಆದರೆ ಈ ಕೃತಿಯಲ್ಲಿ ಹೆಚ್ಚಾಗಿ ವಯಸ್ಕರಿಗಷ್ಟೇ ಅಲ್ಲ ಸಾಮಾನ್ಯ ವಿದ್ಯೆಯುಳ್ಳವರಿಗೂ ಅರ್ಥವಾಗದ ಪದಗಳ ಬಳಕೆಯೇ ಹೆಚ್ಚಾಗಿ ಕಂಡುಬರುತ್ತದೆ. ಉದಾಹರಣೆಗೆ– ಬೋಧಪ್ರದವಾದ. ಕುಲಕ್ಷಯ, ಸ್ಥಿರಬುದ್ಧಿ, ಸ್ಥಿತಪ್ರಜ್ಞ, ಅವ್ಯಕ್ತೋಪಾಸನೆ, ಭಾವಗೋಚರ. ವಿಸ್ಮಯಜನಕ. ಸಖ, ಸಮಾಧಿ, ತೇಜೋರಾಶಿ. ತೇಜಃಪುಜ. ಬಂಧುರ. ಆತ್ಮತುಷ್ಟಿ. ಜೀವಕೈವಲ್ಯ, ವ್ಯಕ್ತೋಪಾಸನೆ, ತಾರಕ. ಆಸುರೀ, ತುಮುಲ. ಧರ್ಮಗ್ಲಾನಿ. ಇತ್ಯಾದಿ ಅನೇಕ ಪದಗಳು ವಯಸ್ಕರಿಗೆ ಅರ್ಥವಾಗದೆ ಉಳಿಯುತ್ತವೆ. ಕೆಲವು ಪಾರಿಭಾಷಿಕ ಶಬ್ದಗಳನ್ನು ಅದಷ್ಟು ಸುಲಲಿತ ಭಾಷೆಯಲ್ಲಿ ವಿವರಿಸಲು ಪ್ರಯತ್ನಪಟ್ಟಿರುವುದು ಗಮನಾರ್ಹ. ಉದಾ–"**ಉಪನಿಷತ್ತು** ,ಎಂದರೆ ಗುರುವಿನ ಬಳಿ ಕುಳಿತು ಜ್ಞಾನ ಪಡೆದುಕೊಳ್ಳುವುದು." ಇತ್ಯಾದಿ.

ಕೆಲವೆಡೆ ವಿಷಯದ ಪ್ರತಿಪಾದನೆ ಸರಳ ನಿರೂಪಣೆಯಿಂದ ಕ್ಲಿಷ್ಟವಾದ ನಿರೂಪಣೆಯ ಕಡೆ ಹೋಗಿರುವುದು ಕಂಡುಬರುತ್ತದೆ. ಉದಾ–ನಾಲ್ಕನೆಯ ಪತ್ರದಲ್ಲಿರುವ ಕರ್ಮಯೋಗ ನಿರೂಪಣೆ.

ಹಲವು ಪತ್ರಗಳಲ್ಲಿ (1,2.6 ಇತ್ಯಾದಿ) ಮೂಲ ಗೀತೆಯ ಕೆಲವು ಶ್ಲೋಕಗಳ ಅನುವಾದ ಸರಿಯಾಗಿಲ್ಲ. ಕೆಲವೆಡೆ ಶಬ್ದಾನುವಾದ ಮಾಡಲು ಪ್ರಯತ್ನಿಸಿರುವುದು ಕಂಡುಬಂದರೆ ಕೆಲವೆಡೆ ಭಾವಾನುವಾದ ಮಾಡಿರುವುದು ಕಂಡುಬರುತ್ತದೆ. ಉದಾ– ಒಂದನೆಯ ಪತ್ರದಲ್ಲಿರುವ "ಸರ್ವೋಪನಿಷದೋ......" ಎಂಬ ಶ್ಲೋಕದ ಉತ್ತರ ಪಾದದ "ಅರ್ಜುನನೇ ಮಗು, ಆ ಮಗು ಗೀತಾಮೃತವೆಂಬ ಹಾಲನ್ನು ಪಾನಮಾಡುತ್ತದೆ" ಎಂಬ ಲೇಖಕರ ಅನುವಾದ ಸರಿಯಾದ ಅನುವಾದವಲ್ಲ. ಆದರೆ "ಅರ್ಜುನನೇಕರು (ಉಪನಿಷತ್ತುಗಳು ಹಸು ಎಂದು ಪೂರ್ವಪಾದದಲ್ಲಿ ಸೂಚಿಸಿರುವುದರಿಂದ) ವಾಗಿಯೂ. ಕರೆಯಲ್ಪಟ್ಟ ಮಹತ್ವಪೂರ್ಣ ಗೀತಾಮೃತವನ್ನು ಅನುಭವಿಸತಕ್ಕವರು ವಿದ್ವಾಂಸರು" ಎಂದಿರಬೇಕು. ಈ ಶ್ಲೋಕವು ಗೀತಾಧ್ಯಾನದಲ್ಲಿ ದೊರೆಯುತ್ತದೆ. ಇದೇ ರೀತಿ ಆರನೆಯ ಪತ್ರದಲ್ಲಿ ಗೀತೆಯ "ಯಥಾ ನದೀನಾಂ ಬಹವೋಂಬುವೇಗಃ......" ಎಂಬ ಪದ್ಯದ ಅರ್ಥ ಮೂಲಾರ್ಥಕ್ಕೆ ಹೊಂದುವುದಿಲ್ಲ. ಇದು ಭಾವನುವಾದವೂ ಅಲ್ಲ. ಇದೇ ರೀತಿ ಏಳನೆಯ ಪತ್ರದಲ್ಲಿರುವ "ಶ್ರೇಯೋಹಿ ಜ್ಞಾನ......." ಎಂಬ ಶ್ಲೋಕದ ಅರ್ಥವೂ ಸರಿಯಾಗಿಲ್ಲ. ಇಲ್ಲಿ ಮೂಲಾರ್ಥಕ್ಕೂ ಮತ್ತು ಲೇಖಕರ ಅರ್ಥಕ್ಕೂ ಬಹಳಷ್ಟು ವ್ಯತ್ಯಾಸವಿದೆ.

ಆದರೆ ಇದೇ ರೀತಿಯ ಅನೇಕ ಸಣ್ಣಪುಟ್ಟ ನ್ಯೂನತೆಗಳಿದ್ದರೂ ಸಹ ಲೇಖಕರ ಈ ಕಿರು ಪುಸ್ತಕವು ವಯಸ್ಕರ ಶಿಕ್ಷಣ ಸಂಸ್ಥೆಗೆ ಒಂದು ಕೊಡುಗೆಯಾಗಿದೆ. ಇಲ್ಲಿ

ವಯಸ್ಕರಿಗಾಗಿ ಸುಲಭರೀತಿಯ ಗೀತಾಭಾಷ್ಯವನ್ನು ನಾವು ಪತ್ರದ ಮೂಲಕ ನೋಡು ತ್ತೇವೆ. ಈ ಪುಸ್ತಕವು ವಯಸ್ಕರನ್ನು ಆಕರ್ಷಿಸುವುದರಲ್ಲಿ ಸಂದೇಹವಿಲ್ಲ.

೨

ಶ್ರೀ ಜಿ. ವಿ. ನಾರಾಯಣಮೂರ್ತಿಯವರು **'ಶ್ರೀಮದ್ ಭಗವದ್ಗೀತಾ''** ಮೂಲ ಕೃತಿಯಲ್ಲದಿದ್ದರೂ. ಇದು ಸ್ವಾಮಿ ಚಿದ್ಭವಾನಂದರ ಮೂಲ ಕೃತಿಯ ಪ್ರಸ್ತಾವನೆಯ ಕನ್ನಡ ಅನುವಾದ. ಮುನ್ನುಡಿಯಲ್ಲಿ ಲೇಖಕರೇ ತಿಳಿಸಿರುವಂತೆ ಈ ಪ್ರಸ್ತಾವನೆಯ ವೈಶಿಷ್ಟ್ಯ ಗೀತಾ ಬೋಧನೆಯನ್ನು ಚಿದ್ಭವಾನಂದರು ನೋಡುವ ದೃಷ್ಟಿ. ಶ್ರೀ ನಾರಾಯಣಮೂರ್ತಿಯವರ "ಗೀತಾ ಪತ್ರ"ಗಳಲ್ಲಿನ ಚಮತ್ಕಾರ ಈ ಕೃತಿಯಲ್ಲಿ ಕಂಡುಬರುವುದಿಲ್ಲ. ಇದು ಅವರ ಮೂಲಕೃತಿಯಲ್ಲ, ಅನುವಾದ.

ಕೃತಿಯಲ್ಲಿರುವ ಅಭಿಪ್ರಾಯಗಳು ವಿವಿಧ ಅಭಿಪ್ರಾಯಗಳಿಂದ ಕೂಡಿವೆ. ಕೃಷ್ಣನಬಗೆ ಅರ್ಜುನ ಕೃಷ್ಣರ ಸಂಬಂಧ, ಗೀತೆಯಲ್ಲಿರುವ ಅಭಿಪ್ರಾಯ. ಗೀತೆಯ ಯೋಗ, ಉಪನಿಷತ್ತು ಮತ್ತು ಗೀತೆಯ ಸಂಬಂಧ, ಮಹಾಭಾರತ ಮತ್ತು ಗೀತೆ, ಇತ್ಯಾದಿ ಇನ್ನೂ ಇತರೇ ಅಭಿಪ್ರಾಯಗಳನ್ನು ಹಲವು ಅಧ್ಯಾಯಗಳ ಹೆಸರಿನಲ್ಲಿ ಚರ್ಚಿಸಲಾಗಿದೆ.

ಉಪನಿಷತ್ತುಗಳು, ಬ್ರಹ್ಮಸೂತ್ರಗಳು ಮತ್ತು ಭಗವದ್ಗೀತಾ ಈ ಮೂರು ಗ್ರಂಥಗಳಿಗೆ "ಪ್ರಸ್ಥಾನತ್ರಯ" ಎಂದು ಹೇಳಲಾಗಿದೆ. ಇದೇ ಸಂದರ್ಭದಲ್ಲಿ "ಉಪ ನಿಷತ್ತುಗಳನ್ನು ಗೋವುಗಳಿಗೆ ಹೋಲಿಸಿದರೆ, ಭಗವದ್ಗೀತೆಯು ಅವುಗಳ ಹಾಲಿನಂತೆ. ಯಾರ ಬಳಿಯಲ್ಲಿ ಸಮೃದ್ಧಿಯಾಗಿ ಹಾಲಿರುವುದೋ ಅವರು ಗೋವುಗಳನ್ನು ರಕ್ಷಿಸ ಬೇಕಾದ ಪ್ರಯಾಸ ಪಡಬೇಕಾಗಿಲ್ಲ" ಎಂದು ಹೇಳಿರುವುದು ಸರಿಯೆನ್ನಿಸುವುದಿಲ್ಲ. ಉಪನಿಷತ್ತು ಗೀತೆಯ ಅನೇಕ ವಿಚಾರಗಳಿಗೆ ಸಾಮಗ್ರಿಯನ್ನೊದಗಿಸಿದೆ. ಆದ್ದರಿಂದ ಗೀತೆ ಉಪನಿಷತ್ತುಗಳಿಂದಲೇ ಉದ್ಭೂತವಾಗಿದೆ ಎಂದರೆ ತಪ್ಪಾಗಲಾರದು. ಹೀಗಿರು ವಲ್ಲಿ ಗೀತೆಯ ಮಹತ್ವವನ್ನು ಹೊಗಳುವುದಕ್ಕಾಗಿಯೇ ಉಪನಿಷತ್ತಿನ ಅವಶ್ಯಕತೆ ಇಲ್ಲ ಎಂಬ ಅಭಿಪ್ರಾಯಪಟ್ಟಿರುವುದು ಸರಿಯಲ್ಲ. ಒಂದು ಕೃತಿಯ ಹೊಗಳುವಿಕೆಗಾಗಿ ಮತ್ತೊಂದನ್ನು ತೆಗಳುವುದು ಸರಿಯಲ್ಲ. ಅದಲ್ಲದೆ ಈ ಪ್ರಸಂಗದಲ್ಲಿ ಗೋವು, ಹಾಲು ಎಂದು ಉದಾಹರಿಸಿರುವುದು ಸಮಂಜಸವಾಗಿಲ್ಲ. ಗೋವಿಲ್ಲದೆ ಹಾಲಿಲ್ಲ ಎಂದು ನಾವು ಹೇಳುವುದರ ಮೂಲಕ, ಉಪನಿಷತ್ತುಗಳಿಲ್ಲದೆ ಗೀತೆಯಿಲ್ಲ ಎಂದು ಹೇಳಬೇಕಾಗು ತ್ತದೆ. "ಪ್ರಸ್ಥಾನತ್ರಯದ್ದೇ ಕಡೆಯ ತೀರ್ಪು ಎಂಬ ಅಭಿಪ್ರಾಯ ಪರಂಪರೆಯಿಂದ ಅಂಗೀಕೃತವಾಗಿ ಬಂದಿದೆ" ಎಂಬ ಲೇಖಕರ ವಾಕ್ಯವು, ನ್ಯಾಯ ವೈಶೇಷಿಕರ "ವೈದಿಕಂ ಈಶ್ವರೋಕ್ತತ್ವಾತ್ ಸರ್ವಮಪಿ ಪ್ರಮಾಣಂ" ಎನ್ನುವ ಅಭಿಪ್ರಾಯದಂತೆ ಕಂಡು ಬರುತ್ತದೆ.

ಮುಂದೆ ಗೀತೆ ಮಹಾಭಾರತದ ಒಂದು ಭಾಗ ಎಂದು ಒಪ್ಪಲಾಗಿದೆ. ಮತ್ತು ಪ್ರತ್ಯೇಕ ಮೂಲವನ್ನು ಹುಡುಕುವುದು ನಿರರ್ಥಕವೆಂದು ಹೇಳಲಾಗಿದೆ. "ಈಶ್ವರಕೃಪೆ ಮತ್ತು ಲೌಕಿಕಶಕ್ತಿ" ಎನ್ನುವ ಅಧ್ಯಾಯದಲ್ಲಿ ಅರ್ಜುನ ಕೃಷ್ಣನ ಸಾರಥ್ಯವನ್ನು ಪಡೆದ ಬಗೆಯನ್ನು ಚಿತ್ರಿಸಲಾಗಿದೆ. ಸಮರಸಾಧನೆಯಲ್ಲಿ ಮತ್ತು ಲೌಕಿಕ ಶಕ್ತಿಯಲ್ಲಿ ನಂಬಿಕೆ ಇಟ್ಟವರು ಅದರೊಂದಿಗೆ ನಾಶವಾದರೆಂದೂ ಮತ್ತು ಈಶ್ವರ ಸಂಕಲ್ಪದಲಿ ನಂಬಿಕೆ ಇಟ್ಟಿದ್ದವರು ಇಹ–ಪರಗಳೆರಡನ್ನೂ ಗಳಿಸಿಕೊಂಡರೆಂದೂ ತಿಳಿಸಲಾಗಿದೆ. ಯುದ್ಧದ ಪ್ರಾರಂಭದಲ್ಲಿ ಅರ್ಜುನನಲ್ಲಾದ ಬದಲಾವಣೆಯನ್ನು "ಸಮಸ್ಯೆಗಳಿಂದ ಕೂಡಿದ ಬದುಕು" ಎನ್ನುವ ಅಧ್ಯಾಯದಲ್ಲಿ ಚಿತ್ರಿಸಲಾಗಿದೆ. ಕೃಷ್ಣನ ಬದುಕು ಅವನ ಉಪದೇಶಕ್ಕಿಂತ ಬೇರೆಯಾದುದು ಎಂಬ ಅಭಿಪ್ರಾಯವನ್ನು ಕರ್ತೃ ಅಲ್ಲಗಳೆದಿದ್ದಾರೆ. ಅನೇಕ ಸ್ತ್ರೀಯರನ್ನು ನೈತಿಕಪತನದಿಂದ ವಿಮುಕ್ತಿಗೊಳಿಸಿದನೆಂಬ ಕಾರಣದಿಂದ ಅವನು ಅವರಿಗೆ "ಪತಿ" ಎನಿಸಿದನು ಎಂಬ ಅಭಿಪ್ರಾಯ ಸುಂದರವಾಗಿದೆ. ಜೀವಾತ್ಮನಿಗೂ ಪರಮಾತ್ಮನಿಗೂ ಇರುವ ಸಂಬಂಧವನ್ನು ನರ ನಾರಾಯಣರಲ್ಲಿ ಮತ್ತು ಅರ್ಜುನ ಕೃಷ್ಣರಲ್ಲಿ ಕ್ರಮವಾಗಿ ಆರೋಪಿಸಲಾಗಿದೆ. ಪಶುಪ್ರವೃತ್ತಿಯಿಂದ ಮೇಲೇರಿರುವ ಅರ್ಜುನನಂತಹವರಿಗೆ ಗೀತೆ ಎಂದು ತಿಳಿಸಲಾಗಿದೆ. "ಆತ್ಮದ ಸಿದ್ಧತೆಯಿಲ್ಲದೆ ಬಾಹ್ಯ ಸಮರವನ್ನು ಯಶಸ್ವಿಯಾಗಿ ನಡೆಸಲು ಸಾಧ್ಯವಿಲ್ಲ" ಎಂಬ ಅಭಿಪ್ರಾಯದ ಹಿನ್ನೆಲೆಯಲ್ಲಿ ಗೀತೆಯ ಸಂದೇಶವನ್ನು ರಣರಂಗದಲ್ಲಿ ನೀಡಲು ಆರಿಸಿಕೊಳ್ಳಲಾಗಿದೆ ಎನ್ನುವುದು "ರಣರಂಗದಲ್ಲಿ ಏಕೆ ಬೋಧಿತವಾಗಿದೆ ?" ಎಂಬ ಅಧ್ಯಾಯದಲ್ಲಿನ ಅಭಿಪ್ರಾಯ.

"ಬರೆದಿಟ್ಟವರು ಯಾರು" ಎನ್ನುವ ಅಧ್ಯಾಯದಲ್ಲಿ "ದಿವ್ಯಚೇತನವೊಂದು ಬದುಕಿನ ಪರಮ ಸಂದೇಶವೊತ್ತು ಅವತರಿಸಿದಾಗ, ಪವಿತ್ರ ಋಷಿಯೊಬ್ಬ ಜನ್ಮತಾಳುತ್ತಾನೆ" ಎಂಬ ಅಭಿಪ್ರಾಯವನ್ನು ರಾಮಾಯಣದ ಕರ್ತೃ ವಾಲ್ಮೀಕಿ ಮತ್ತು ಮಹಾಭಾರತದ ಕರ್ತೃ ವ್ಯಾಸರ ಉದಾಹರಣೆಗಳೊಂದಿಗೆ ಕೊಡಲಾಗಿದೆ. ಮೂಲತಃ ಮಹಾಭಾರತ ಮತ್ತು ರಾಮಾಯಣಗಳನ್ನು ಐತಿಹಾಸಿಕವಾಗಿ ನೈಜ ಘಟನೆಗಳೆಂದು ತೀರ್ಮಾನಿಸಿಲ್ಲ. ಆದ್ದರಿಂದ ಇವೆರಡು ಕಾವ್ಯಗಳು ಇಲ್ಲಿ ಬರುವ ಮುಖ್ಯ ಪಾತ್ರಗಳನ್ನು ದಿವ್ಯ ಚೇತನಗಳೆಂದು ಕರೆಯುವುದು ಅಷ್ಟು ಸಮಂಜಸವಾಗಿ ಕಂಡುಬರುವುದಿಲ್ಲ. ದಿವ್ಯ ಚೇತನಗಳ ಜೊತೆಗೆ ಋಷಿಯೊಬ್ಬನ ಜನನ ಅಸಂಗತವಾಗಿ ಕಂಡುಬರುತ್ತದೆ. ಮಹಾಭಾರತದ ಯುದ್ಧ ವಿವರಣೆ ಮತ್ತು ಅಲ್ಲಿ ನಡೆಯುವ ಪ್ರಸಂಗಗಳ ವಿಚಾರವನ್ನು ವ್ಯಾಸರು ವಿವರಣೆಯ ಮೂಲಕ ಕೊಡುತ್ತಾರೆ. ಹಾಗೆ ವಿವರಣೆ ಕೊಡುವಾಗ ಮಧ್ಯದಲ್ಲಿ ಸಂಜಯನನ್ನು ತಂದು ಅವನು ತನ್ನ ದಿವ್ಯ ಚಕ್ಷುವಿನಿಂದ ಎಲ್ಲವನ್ನೂ ಅರಿತು ಧೃತರಾಷ್ಟ್ರನಿಗೆ ಹೇಳಿದಂತೆ ಮಹಾಭಾರತದಲ್ಲಿ ಚಿತ್ರಿಸಲಾಗಿದೆ. ಆದರೆ ನೈಜವಾಗಿ ಓದುಗರಿಗಾಗಿ ಇದು ಬರೆಯಲ್ಪಟ್ಟಿದೆಯೇ ಹೊರತು ಧೃತರಾಷ್ಟ್ರನಿಗಾಗಿ ಈ ಪ್ರಸಂಗವಲ್ಲ. ಆದ್ದರಿಂದ ಇದು ಅವನ ಮೇಲೆ ಪರಿಣಾಮ ಮಾಡಲೇಬೇಕೆಂಬ ನಿಯಮವಿಲ್ಲ. ಇದರಿಂದ ಅವನಲ್ಲಿ ಮಾನಸಿಕವಾದ ಆಘಾತವಿತ್ತು ಎಂಬ ಆರೋಪ ಸರಿಯಲ್ಲ.

"ಸಂಹಾರ ಸಿದ್ಧಾಂತ" ಎನ್ನುವ ಅಧ್ಯಾಯದಲ್ಲಿ ಡಾರ್ವಿನ್ನನ "ಉಳಿವಿಗಾಗಿ ಹೋರಾಟ" (Struggle for existence) ಸಿದ್ಧಾಂತವನ್ನು "ಬದುಕುವು ದೆಂದರೇನೇ ಜೀವನಾಶ" ಎನ್ನುವ ಅಭಿಪ್ರಾಯದಲ್ಲಿ ಮಂಡಿಸಲಾಗಿದೆ.

"ವೈಷಮ್ಯ ಮತ್ತು ನಾಶದ ಗ್ರಂಥ" ಎಂಬ ಅಧ್ಯಾಯದಲ್ಲಿ ಲೇಖಕರೇ ಊಹಿಸಿ ಕೊಟ್ಟಿರುವ ಹಲವು ವಿರೋಧಿಗಳ ಪ್ರಶ್ನೆಗಳಿಗೆ ಸರಿಯಾದ ಉತ್ತರವನ್ನು ನೀಡಲು ಪ್ರಯತ್ನಿಸಿ ಸೋತಿದ್ದಾರೆ. ಗೀತೆ ಪ್ರಮುಖ ಭಾಷೆಗಳಿಗೆ ಮತ್ತು ಅದರ ಜನರಿಗೆ ಸ್ಫೂರ್ತಿಯ ಆಗರವಾಗಿದೆ. ಮತ್ತು ಗೀತೆಯನ್ನು ಅಪೂರ್ಣವಾಗಿ ಅರ್ಥೈಸಿದರೆ ಅದು ಗೀತೆಯ ತಪ್ಪಲ್ಲ ಎಂಬ ಎರಡು ಅಂಶಗಳ ಹೊರತು ಅದರಲ್ಲಿ ಬೇರೇನೂ ಕಂಡು ಬರುವುದಿಲ್ಲ.

ಇಂದ್ರಿಯಗಳಿಗೆ ಸಂಬಂಧಿಸಿದ್ದು ಪ್ರೇಯಸ್ಸೆಂದೂ. ಇಂದ್ರಿಯಾತೀತವಾದ ಅನುಭವ ಶ್ರೇಯಸ್ಸೆಂದೂ. "ಪ್ರೇಯಸ್ಸಿನಿಂದ ಶ್ರೇಯಸ್ಸಿಗೆ ಬದಲಾವಣೆ" ಎಂಬುದರಲ್ಲಿ ತಿಳಿಸಲಾಗಿದೆ. ಇದೇ ಅಧ್ಯಾಯದಲ್ಲಿ ಕೃಷ್ಣನು ಅರ್ಜುನನ ಸುಭದ್ರಾ ಅಪಹರಣದಲ್ಲಿ ಪ್ರತ್ಯಕ್ಷವಾಗಿ ಬೆಂಬಲ ನೀಡಿರುವುದನ್ನು ಕೃತಿಕಾರರು ಸ್ಮರಿಸುತ್ತ "ಹೀಗೆ ಅರ್ಜುನನ ಪ್ರಗತಿಯ ಪ್ರತಿಯೊಂದು ಹೆಜ್ಜೆಯಲ್ಲಿಯೂ ಕೃಷ್ಣನು ಪ್ರತ್ಯಕ್ಷ ವಾಗಿಯೂ ಪರೋಕ್ಷವಾಗಿಯೂ ಅವನ ಹಿಂದೆ ಇರುತ್ತಾನೆ" ಎಂದು ತಿಳಿಸಿದ್ದಾರೆ. ಸ್ವಾಮಿ ಚಿದ್ಭವಾನಂದರ ಅಭಿಪ್ರಾಯದಂತೆ ಕನ್ಯೆಯನ್ನು ಅಪಹರಿಸಿ ಮದುವೆಯಾಗು ವುದು ಪ್ರಗತಿಯ ಪಥದಲ್ಲಿರುವವರ ಚಿಹ್ನೆಯಂತೆ ಕಂಡುಬರುತ್ತದೆ !

ಗೀತೋಪದೇಶವನ್ನು ಕರಗತಮಾಡಿಕೊಂಡವರು ಸಾಕಷ್ಟು ಗಡುಸಾದ ಉಪನಿಷತ್ತುಗಳನ್ನು ಒಳಹೊಕ್ಕು ಪರೀಕ್ಷಿಸಬೇಕಾದ ಅಗತ್ಯವಿಲ್ಲ. ಏಕೆಂದರೆ ಶ್ರೀಕೃಷ್ಣ ಅವರ (ಉಪನಿಷತ್ತುಗಳ) ಸಾರವನ್ನು ಗೀತೆಯಲ್ಲಿ ಭಟ್ಟಿಯಿಳಿಸಿದ್ದಾನೆ ಎಂದು "ಭಗವದ್ಗೀತಾ ಉಪನಿಷತ್ತು" ಎಂಬ ಅಧ್ಯಾಯದಲ್ಲಿ ತಿಳಿಸಲಾಗಿದೆ. ಋಷಿಗಳ ಮೂಲಾ ಧಾರದ ಜ್ಞಾನಕ್ಕೆ ಬ್ರಹ್ಮವಿದ್ಯೆ ಎಂದು ಹೆಸರು ಎಂಬುದು ಲೇಖಕರ ಅಭಿಪ್ರಾಯ.

"ಯೋಗಶಾಸ್ತ್ರ" ಎಂಬುದರಲ್ಲಿ "ತನ್ನ ಕರ್ತವ್ಯದಲ್ಲಿ ಕೌಶಲ್ಯವುಳ್ಳವನಿಗೆ ಯೋಗಿ ಎನ್ನುವರು" ಎಂದು ತಿಳಿಸಲಾಗಿದೆ. ಅರ್ಜುನನ ವಿಷಾದವನ್ನೂ ಯೋಗ ವೆಂದೇ ಕರೆಯಲಾಗಿದೆ. ಹದಿನೆಂಟು ಅಧ್ಯಾಯಗಳಲ್ಲಿರುವ ಯೋಗಗಳನ್ನು ಕರ್ಮ ಯೋಗ. ಭಕ್ತಿಯೋಗ. ಜ್ಞಾನಯೋಗ ಮತ್ತು ರಾಜಯೋಗ ಎಂದು ನಾಲ್ಕಾಗಿ ವಿಂಗಡಿಸಲಾಗಿದೆ. ಮತ್ತು ಅರ್ಜುನ ಕೃಷ್ಣರ ರಥಕ್ಕೆ ಹೂಡಿರುವ ನಾಲ್ಕು ಕುದುರೆಗಳು ಈ ನಾಲ್ಕು ಯೋಗಗಳು ಎಂಬ ಸಂಕೇತಾರ್ಥವನ್ನು ವಿವರಿಸಿದ್ದಾರೆ.

"ಒಂದೇ ವಾಕ್ಯದಲ್ಲಿ ಅನೇಕ ವಿಧದ ಅರ್ಥಗಳು ವ್ಯಕ್ತವಾಗುತ್ತವೆ." ಮತ್ತು "ತತ್ವಗಳನ್ನು ಸ್ಪಷ್ಟಪಡಿಸುತ್ತದೆ" ಎನ್ನುವುದನ್ನು "ಬೋಧನೆಯ ರೀತಿಯಲ್ಲಿ" ತಿಳಿಸಲಾಗಿದೆ.

"ಶ್ರುತಿ ಮತ್ತು ಸ್ಮೃತಿ" ಎಂಬಲ್ಲಿ ಶ್ರುತಿ ಎಂದರೆ ಕೇಳಿದುದೆಂದು, ಸ್ಮೃತಿ ಎಂದರೆ ನೆನೆದುದು ಎಂದು, ಗೀತೆಯಲ್ಲಿ ಶ್ರುತಿ ಸ್ಮೃತಿಗಳಿಗಳೆರಡು ಐಕ್ಯವಾಗಿವೆ ಎಂದು ತಿಳಿಸಲಾಗಿದೆ.

ವ್ಯಾಖ್ಯಾನಗಳಲ್ಲಿ ಶ್ರೇಷ್ಠವಾದುದು ಶ್ರೀಕೃಷ್ಣ ಮತ್ತು ಅವನ ಜೀವನ ಎನ್ನುವುದು ಲೇಖಕರ ಅಭಿಪ್ರಾಯ.

ಆಧ್ಯಾತ್ಮಿಕ ಜ್ಞಾನ ಮತ್ತು ಪಾರಲೌಕಿಕ ಶಕ್ತಿಯಿಂದಾಗಿ ಈ ಗೀತೆಯು ತನ್ನನ್ನು ಸಾರ್ವಲೌಕಿಕ ಧರ್ಮಗ್ರಂಥವಾಗಿ ಮಾಡಿಕೊಂಡಿದೆ ಎಂದು ಲೇಖಕರು ತಿಳಿಸುತ್ತಾರೆ.

"ಶ್ರೀಕೃಷ್ಣನ ಮಾರ್ಗ" ಎಂಬ ಅಧ್ಯಾಯದಲ್ಲಿ ಶ್ರೀ ರಾಮಕೃಷ್ಣಪರಮಹಂಸರು ಶ್ರೀ ಕೃಷ್ಣನ ಮಾರ್ಗವನ್ನು ಅನುಸರಿಸುತ್ತಿದ್ದರೆಂದು ತಿಳಿಸಿರುವುದರಿಂದಲೂ ಮತ್ತು ಅವರ ಜ್ಞಾನದ ಬಗ್ಗೆ ಹೆಚ್ಚು ಹೇಳಿರುವುದರಿಂದಲೂ ಸ್ವಾಮಿ ಚಿದ್ಭವಾನಂದರು ಶ್ರೀ ರಾಮಕೃಷ್ಣಪರಮಹಂಸರ ಅನುಯಾಯಿಗಳೆಂಬಂತೆ ಕಂಡುಬರುತ್ತದೆ.

ಇಲ್ಲಿಯವರೆವಿಗೆ ತಿಳಿಸಿರುವುದು ಮೂಲ ಲೇಖಕರಾದ ಶ್ರೀ ಚಿದ್ಭವಾನಂದರ ಮೂಲ ಕೃತಿಯ ಮುಖ್ಯ ಗುಣ. ಅನುವಾದದ ದೃಷ್ಟಿಯಿಂದ ಈ ಕೃತಿ ಮುಖ್ಯ ಸ್ಥಾನವನ್ನು ಹೊಂದುತ್ತದೆ. ಅನುವಾದಕನ ಜವಾಬ್ದಾರಿ ಲೇಖಕನಿಗಿರುವಷ್ಟೇ ಮುಖ್ಯವಾದುದು. ಶ್ರೀ ಜಿ. ಪಿ. ನಾರಾಯಣಮೂರ್ತಿಯವರು ತಮ್ಮ ಅನುವಾದದಲ್ಲಿ ಹೆಚ್ಚು ಕನ್ನಡ ಪ್ರಯೋಗಗಳನ್ನು ಮಾಡಿ, ಈ ಕೃತಿಯು ನೈಜಕೃತಿಯಾಗಿ ಕನ್ನಡಿಗರಿಗೆ ಕಾಣುವಂತೆ ಪ್ರಯತ್ನಿಸಿದ್ದಾರೆ. ಉದಾಹರಣೆಗೆ—

ಯುದ್ಧಕ್ಕೆ ಕಾಲ್ಕೆರೆದು ನಿಂತವರ ....(ಪು. 8)
ಮೀನಾಮೇಷ ನೋಡಬೇಡ.......(ಪು. 26)
ಒಡೆದು ಬರುವ ಪ್ರಕಾಶ.......(ಪು. 32)

ಇತ್ಯಾದಿ.

ಬೇರೆಯದಾದ ಭಾಷೆಯಲ್ಲಿ ರಚಿಸಲಾದ ಕೃತಿಯ ಸೌಂದರ್ಯಕ್ಕೆ, ಶೈಲಿಗೆ ಧಕ್ಕೆ ಬರದ ರೀತಿ ಭಾಷಾಂತರಿಸುವುದು ಅತಿ ಕಷ್ಟಕರ. ಆದರೆ ಶ್ರೀ ನಾರಾಯಣಮೂರ್ತಿಯವರು ಈ ಪ್ರಯತ್ನದಲ್ಲಿ ಸಫಲರಾಗಿದ್ದಾರೆ. ಮತ್ತು ಕನ್ನಡದ ಜನತೆಗೆ ಮುಖ್ಯವಾದ ಕೃತಿಯನ್ನು ಭಾಷಾಂತರಿಸಿ ನೀಡಿ ಶ್ಲಾಘನೆಗೆ ಪಾತ್ರರಾಗಿದ್ದಾರೆ. ಅಲ್ಲಲ್ಲಿ ಮುದ್ರಾರಾಕ್ಷಸನ ಹಾವಳಿ ಕಂಡುಬಂದರೂ ಇದೊಂದು ಅಪೂರ್ವ ಕೃತಿ.

ಕನ್ನಡದಲ್ಲಿ ಬೆಳಕು ಕಂಡಿರುವ ಗೀತಾಸಂಬಂಧೀ ಸಾಹಿತ್ಯದಲ್ಲಿ ಈ ಎರಡು ಪುಸ್ತಕಗಳ ಮೂಲಕ ಶ್ರೀ ನಾರಾಯಣಮೂರ್ತಿಯವರು ಜ್ಞಾನಪಿಪಾಸುಗಳಿಗೆ ಸಾಕಷ್ಟು ತೃಪ್ತಿಯನ್ನು ನೀಡಿದ್ದಾರೆ.

ಪದಚಿಹ್ನೆ

# ಜಿ.ವಿ.ನಾ.ರವರ ಕಾವ್ಯಧರ್ಮ ಮತ್ತು ಮನೋಧರ್ಮ

**ಎಸ್. ವಿ. ಚಂದ್ರಶೇಖರ್**

ಶ್ರೀ ಜಿ. ವಿ. ನಾ. ಒಬ್ಬ ವ್ಯಕ್ತಿಯಲ್ಲ; ಒಂದು ಶಕ್ತಿ, ಅವರದು ಬಹುಮುಖ ಜೀವನ. ಅವರು ಸ್ವಾತಂತ್ರ್ಯ ಹೋರಾಟಗಾರರು: ರಾಷ್ಟ್ರಪ್ರೇಮಿಗಳು: ದೈವಭಕ್ತರು: ನಿಷ್ಕಾಮಕರ್ಮಿಗಳು : ಗಾಂಧೀತತ್ವ ಪ್ರತಿಪಾದಕರು, ತತ್ವಪಾಲಕರು : ಸರ್ವೋದಯ ಸಾಧಕರು : ಉತ್ತಮ ಉಪಾಧ್ಯಾಯರು : ಪತ್ರಿಕೋದ್ಯಮಿಗಳು : ಸಾಹಿತಿಗಳು ಎಲ್ಲಕ್ಕೂ ಮಿಗಿಲಾಗಿ ಹಿರಿಬಾಳಿನ ಹಿರಿಯ ವ್ಯಕ್ತಿಗಳು. ಅವರ ಸ್ನೇಹ ಅಮರ. ಮಾತು ಮಧುರ : ಅವರೊಂದಿಗೆ ಸಂಭಾಷಣೆ ಸರಸ, ಸಂಪದ್ಭರಿತ : ಚರ್ಚೆ ಮನೋಜ್ಞ. ಅಧ್ಯಾತ್ಮಚಿಂತನೆ ಅವರ ಬಾಳಿನ ಗುಟ್ಟು : ಗೀತಾಪ್ರವಚನ ಅವರ ನಿತ್ಯಜೀವನ. ಸರ್ವವಿಷಯಗಳಲ್ಲೂ ಈಶಸಮರ್ಪಣಭಾವ ಅವರ ಹೃದಯದ ಹಾದಿ. ಭಾವುಕಜೀವಿ: ಭಾವಜೀವಿ.

ಸಾಹಿತ್ಯ ಮಾನವನ ಮನೋಧರ್ಮದ ಪ್ರತಿಬಿಂಬ. ಸಮಾಜದ ಕನ್ನಡಿ. ಅದರಲ್ಲೂ ಅವನ್ನ ಭಾವನೆಗಳು ಉನ್ಮೇಷನಗೊಂಡಾಗ. ಆ ಭಾವನೆಗಳು ಕಾವ್ಯಮಯವಾಗಿ ಹೊರಹೊಮ್ಮುವುದು ಸಹಜ. ಹಾಗೆ ಶ್ರೀ ಜಿ. ವಿ. ನಾ.ರವರು ಸ್ಫುರಣೆಗೊಂಡ ತಮ್ಮ ಕೆಲವು ಭಾವನೆಗಳನ್ನು ಕವನರೂಪದಲ್ಲಿ ಹೊರಗೆಡಹಿದ್ದಾರೆ. ಕೆಲವು ಕವನಗಳು ಅಲ್ಲಲ್ಲಿ ಪ್ರಕಟಗೊಂಡಿವೆ. ಹಲವಾರು ಅವರ ದಿನಚರಿಯ ಹಾಳೆಗಳಲ್ಲಿ ದೊರೆಯುತ್ತವೆ. ಹಾಗೆಯೇ ಅವರ ದಿನಚರಿಯ ಪುಟಗಳಲ್ಲಿ ಅವರ ಹೃದಯ ತುಂಬಿಬಂದ ಭಾವಗಳನ್ನು ಮನಗಾಣಬಹುದಾಗಿದೆ. ಆ ಕೆಲವು ಕವನಗಳಲ್ಲಿ ಅವರ ಜೀವನ ಸೂತ್ರವಾಗಿ, ನಿರಂತರ ಎಳೆಯಾಗಿ ಕಾಣಬರುವ ಅವರ ಮನೋಧರ್ಮವನ್ನು ಅರಿಯುವ ವಿನಮ್ರ ಪ್ರಯತ್ನವನ್ನು ಮಾಡುವುದು ಈ ಲೇಖನದ ಉದ್ದೇಶ.

ಜಿ. ವಿ. ನಾ.ರವರು ತಮ್ಮ ದಿನಚರಿಯಲ್ಲಿ ಕೆಲವು ಹಿರಿಜೀವಿಗಳ ಆಣಿಮುತ್ತುಗಳನ್ನು ಅಲ್ಲಲ್ಲಿ ಗುರುತುಹಾಕಿದ್ದಾರೆ. ಕೆಲವನ್ನು ಪದ್ಯಕ್ಕೆ ಪರಿವರ್ತಿಸಿದ್ದಾರೆ. ಅವುಗಳನ್ನು ಅಭ್ಯಸಿಸಿದರೆ ಅವರ ಸಾತ್ವಿಕ ಜೀವನ ಅರ್ಥವಾಗದಿರದು. ಅವರ ಆಯ್ಕೆ ಅವರ ನಿಷ್ಕಲ್ಮಷ ಜೀವನಕ್ಕೆ ಸಾಕ್ಷಿ. ಅವರ ಅಂತರಾಳವನ್ನು ಅರಿಯುವುದಕ್ಕೆ ಸಾಧನ.

ರಾಬರ್ಟ್‌ಫ್ರಾಸ್ಟನು 'Poetry is the first form of understanding. ಎಂದು ಹೇಳಿದ್ದಾನೆ. ಜಿ.ವಿ.ನಾ.ರವರನ್ನು ಅರ್ಥಮಾಡಿಕೊಳ್ಳಲು ಅವರು ರಚಿಸಿರುವ. ಅನುವಾದ ಮಾಡಿರುವ ಕವನಗಳು ತುಂಬ ಸಹಾಯಕ.

ಚೀನಾದ ತತ್ವಜ್ಞಾನಿ ಕಾನ್‌ಫ್ಯೂಷಿಯಸ್‌ನ ವಾಕ್ಯ ಹೀಗೆ ಉದ್ಧೃತವಾಗಿದೆ.

'ಹೃದಯದಲಿ ಸದ್ಭಾವವಿರೆ
ಶೀಲದಲಿ ಸೌಂದರ್ಯವಿಹುದು
ಶೀಲದಲಿ ಸೌಂದರ್ಯವಿರೆ
ಗೃಹದಲಿ ಸಮರಸತೆಇಹುದು
ಗೃಹದಲಿ ಸಮರಸತೆ ಇರೆ
ರಾಷ್ಟ್ರದಲಿ ಸುವ್ಯವಸ್ಥೆಇಹುದು
ರಾಷ್ಟ್ರದಲಿ ಸುವ್ಯವಸ್ಥೆ ಇರೆ
ವಿಶ್ವದಲಿ ಶಾಂತಿ ನೆಲಸುವುದು.'

ಜಿ.ವಿ.ನಾ.ರವರನ್ನು ಸಮೀಪದಿಂದ ಬಲ್ಲವರಿಗೆ ಈ ಮಾತುಗಳು ಅವರ ಜೀವನದಲ್ಲಿ ಅಕ್ಷರಶಃ ನಿಜ.

ಜಿ. ವಿ. ನಾ. ರವರು ಶರಣರ ಹಾದಿಯನ್ನು ಹಿಡಿದು ನಡೆದವರು. 'ಧೃತಿಗೆಟ್ಟು ಅನ್ಯರ ಬೇಡದಂತೆ. ಮತಿಗೆಟ್ಟು ಪರರ ಹೊಗಳದಂತೆ' ಬಾಳನ್ನು ಅನುಗ್ರಹಿಸು ಎಂದು ಭಗವಂತನನ್ನು ಬೇಡಿದವರು. 'ಸಲೆ ಕೈ ಕೂಲಿಯ ಮಾಡಿದರೆಯೂ ನಿಮ್ಮ ನಿಲುವಿಂಗೆ ಕುದಿವೆನಲ್ಲದೆ ಎನ್ನ ಒಡಲಿಂಗೆ ಕುದಿದೆನಾದರೆ ತಲೆದಂಡ' ಎಂಬ ಶರಣರ ಸೂಳ್ನುಡಿಯನ್ನು ಹೊತ್ತು ಆತ್ಮ ನಿರ್ಧಾರದಿಂದ ಬಾಳು ನಡೆಸಿದವರು. ಅವರಿಗೆ ಅರುವತ್ತು ಮೂರು ತುಂಬಿದ ಸಮಯದಲ್ಲಿ ಬರೆದ 'ಇಂತು ತುಂಬಿತು' ಕವನದಲ್ಲಿ ತಮ್ಮನ್ನು ಕುರಿತು ಹೇಳಿಕೊಂಡಿದ್ದಾರೆ. 'ಮರಳಿ ಬಾರದ ತಾಣದೆಡೆ' ಕವನದಲ್ಲಿ ಕೆಲವು ಸಾಲುಗಳು ಹೀಗಿವೆ.

'ಯಾವ ಚಣಕೋ ಯಾವ ದಿನಕೋ
ಬರುವುದು ನೋಡದದೋ
ಬರುವುದದು ನಿಜ ನಿಜ
ಮಾಡು ಬಾಳನು ತಾಜ
ಇಲ್ಲದೊಡೆ ದುಃಖ ಸಾಜ'

ಹೀಗೆ ಜೀವನ ಸಾರ್ಥಕ್ಯವನ್ನು ತೋರಿದ್ದಾರೆ. ತಮ್ಮ ಬಾಳನ್ನು 'ತಾಜ' ಮಾಡಲು ದೀಕ್ಷೆ ತೊಟ್ಟಿದ್ದಾರೆ.

ಮಾನವನ ಯೋಗ್ಯತೆಯನ್ನು ಪರೀಕ್ಷಿಸುವುದು ಸುಖದ ಸನ್ನಿವೇಶಗಳಲ್ಲ : ಸಂಕಷ್ಟಗಳು ಸಂಭವಿಸಿದಾಗ. ಸಂಘರ್ಷಗಳಿಗೆ ಸಿಲುಕಿದಾಗ. ಆಪತ್ತುಗಳಿಗೆ ತುತ್ತಾದಾಗ ಅವನ ನೈಜಹೃದಯ ವ್ಯಕ್ತವಾಗುತ್ತದೆ. ಅವರು ಅಂತರ್ಮುಖಿಯಾದಾಗ ಅವರಿಂದ ಹೊರಬರುವ ನುಡಿ "Thy will be done." ಅವರ ಬದುಕಿನ ಹಾದಿ ಈ ಮಾತುಗಳಲ್ಲಿ ರೂಪುಗೊಂಡಿದೆ.

"ಸಕಲ ಕಜ್ಜಗಳನೆಸಗು ಕರ್ಮಯೋಗಿಯಂತೆ
ಬಾಳ ಪಥದಲಿ ಮೌನದಿಂ ಗಮಿಸು
ಪಾಪಿಗಳ ಸಂತೈಸಿ ನೆರವಿತ್ತು ಬದುಕು
ದುಃಖ ದುರಂತವಹ ಮನುಜಲೋಕದಲಿ."

ಜಿ. ವಿ. ನಾ. ರವರ ಕವನಗಳಲ್ಲಿ ಏಕಸೂತ್ರರೂಪವಾಗಿ ಕಂಡುಬರುವ ಒಂದು ಗುಣವಿದೆ. ಭಗವಂತನಲ್ಲಿ ಅವರಿಗಿರುವ ಅಚಲ ನಂಬಿಕೆ, ಸಮರ್ಪಣ ಮನೋಭಾವ. ಇದು ಕಾವ್ಯಧರ್ಮಮಾತ್ರವಲ್ಲ, ಜೀವನ ಪಥವೂ ಹೌದು. 'ಕಾಲಾಯ ತಸ್ಮೈ ನಮಃ' ಕವನದಲ್ಲಿ ಅವರ ಅಂತರವಾಣಿ ಈ ರೀತಿ ಇದೆ.

'ನೋಡದೋ ವಿಶ್ವದಾಟ
ಕಾಣದ ಕೈಯ ಆಟ
ಮೊದಲೆಲ್ಲಿ ಕೊನೆಯೆಲ್ಲಿ ಇದಕೆ
ಎಲ್ಲ ಅಧೀನವಿದಕೆ."

ಮತ್ತೊಂದು ಕವನದಲ್ಲಿ,

'ಭಗವಂತನನು ನಂಬಿ
ಅವನ ಆಣತಿಯ ಸಕಲವೆನ್ನುವವಗೆ
ಇನ್ನಾವ ಮಾನವನ ಭೀತಿಯಿದ್ದೀತು'

ಎಂಬುದು ಅವರ ನುಡಿಗಳು. ಶರಾವತಿಯ ಜಲಪಾತ ಎಂತಹವರನ್ನೂ ಮುಗ್ಧಗೊಳಿಸುವಂತಹುದು : ಅದರ ಭವ್ಯತೆ. ರಮ್ಯತೆ ಕವಿ ಹೃದಯವನ್ನು ಸೆರೆಹಿಡಿದು ನಿಲ್ಲಿಸುವಂತಹುದು. ಜಿ.ವಿ.ನಾ.ರವರೂ ಅದರ ಸೌಂದರ್ಯರಾಶಿಗೆ ಮನವನ್ನು ಸೂರೆಗೊಟ್ಟಿದ್ದಾರೆ : ದಿಟ. ಆದರೆ ಪ್ರಕೃತಿಯ ರಮ್ಯತೆಯಲ್ಲೂ ಆಧ್ಯಾತ್ಮಿಕತೆಯನ್ನು ಕಾಣುವುದು ಅವರ ಜೀವನಧರ್ಮ. ಅಂತೆಯೇ ಅವರಿಂದ ಹೊರಹೊಮ್ಮಿರುವ ಈ ಮಾತುಗಳು:

'ಏಕೆ ಪಾತ ನಿನಗೆ
ಯಾವ ಪಾಪ ಮಾಡಿದೆ ?
ಎಂದು ಮೋಕ್ಷ ಕಾಣುವೆ ? ಎಂದು ಕೊನೆಯ ಕಾಣುವೆ ?

ಎಂದು ಸಂಬೋಧಿಸುತ್ತಾ ಕೊನೆಗೆ ಎತ್ತಿರುವ ಉದ್ಗಾರ.

'ಅದರ ಪ್ರೇಮದಪ್ಪುಗೆ
ನಿನ್ನ ಲೀನವಲ್ಲಿಗೆ
ನಾನು ಎಂಬ ನಿನ್ನ ಸೊಲ್ಲಿಗೆ
ಕೊನೆಯು ಬಂದಿತಲ್ಲಿಗೆ."

'ಗುರುವೇ ಹೇ ಪರಮ ಗುರುವೇ' ಕವನದ ಸಾಲುಗಳು ಕೆಲವು ಈ ರೀತಿ ಮೂಡಿ ಬಂದಿವೆ.

'ಜಗದ ಒಳಹೊರಗೆಲ್ಲ ನಿನ್ನ ಮೌನದ ಶಾಂತಿ
ಬಗೆಯ ಬೆಡಗನು ಮೀರಿ ತುಂಬಿಹುದು ಶಾಂತಿ
ಆಗಸದಲ್ಲೆಲ್ಲಾ ಲಾಸ್ಯವದರ ಲೀಲೆ
ಗುರುವೇ ಹೇ ಪರಮ ಗುರುವೇ."

... ... ... .... .... ...

'ಪರಮಪದ, ಪರಮಹಿತ, ಪರಮಶಾಂತಿ

ಅರಸುತಿದೆ ಜೀವ 'ಶಿವ, ಶಿವ' ಎಂದು' ಮೊದಲಾಗಿ ಹಲುಬುತ್ತಾ, 'ನಿನ್ನೊಳಗೆನ್ನ ಸೆಳೆದುಕೋ' ಎಂದು ಬೇಡುವ ಮಾತುಗಳು ಭಕ್ತಿಯಿಂದ, ಭಾವಪರವಶತೆಯಿಂದ ತುಂಬಿ ತುಳುಕುವ ಮಾತುಗಳು. 'ಬಳಲಿತೀ ಮನ ಎಂದು', 'ಎಲ್ಲಿರುವೆ ನೀನೆಂದು', 'ಪ್ರಾರ್ಥನೆ', 'ಯಾವಗಾನವನು ನೀ ಕೇಳಿ', ಎಂಬ ಕವನಗಳಲ್ಲೆಲ್ಲಾ ಬುದ್ಧಿಯ ಹಮ್ಮನ್ನೂ, ಬದುಕಿನ ಬಿಮ್ಮನ್ನೂ ಬದಿಗೊತ್ತಿರುವುದನ್ನೂ, ಭಗವಂತನ ಸ್ಮರಣೆಯಿಂದುಂಟಾಗುವ ಹಿರಿ ಹಿಗ್ಗನ್ನೂ, ಕರುಣೆಯಿಂದ ಎತ್ತಿಕೊಂಡು ರಕ್ಷಿಸಬೇಕೆಂಬ ಆರ್ತಭಾವವನ್ನೂ ನಾವು ಮನಗಾಣಬಹುದು. ಅವರು ಭಾಷಾಂತರಕ್ಕೆ ಆರಿಸಿಕೊಂಡಿರುವ ಕೆಲವು ಕವನಗಳಲ್ಲೂ ಅವರ ಬದುಕಿನ ಮರ್ಮ ವ್ಯಕ್ತವಾಗದಿರದು. ರಾಜಾಜೀ ವಿಶ್ವಶಾಂತಿ ಕೋರಿ ಆಂಗ್ಲ ಭಾಷೆಯಲ್ಲಿ ರಚಿಸಿದ, ಗೀತೆಯೊಂದನ್ನು ಶ್ರೀಮತಿ ಎಂ. ಎಸ್. ಸುಬ್ಬುಲಕ್ಷ್ಮಿರವರು ಸಂಯುಕ್ತ ರಾಷ್ಟ್ರಗಳ 1966ರ ಮಹಾಧಿವೇಶನದಲ್ಲಿ ಹಾಡಿದರು. ರಾಜಾಜಿಯವರ ಈ ಕವನ 'ಕ್ಷಮಿಸಲೀಶನು' ಎಂಬ ಅನುವಾದವನ್ನು ಪಡೆದಿದೆ. ಶಾಂತಿ, ಸಮರಸ, ಐಕ್ಯತೆ ಕೋರುವ ಆ ಭವನದಲ್ಲಿ ನಮ್ಮ ಪಾಪಗಳನ್ನೂ, ದ್ವೇಷಾಸೂಯೆಗಳನ್ನೂ ಪರಮಾತ್ಮನು ಕ್ಷಮಿಸುವುದಿಲ್ಲ ಎಂಬುದು ಕವನ ವಿಷಯ. ಆ ಭಾವವೇ ಜಿ.ವಿ.ನಾ.ರವರನ್ನು ಮನಸೆಳೆದಿರುವ ಅಂಶ.

ಶ್ರೀ ಜಿ.ವಿ.ನಾ.ರವರು ಭಾಷಾಂತರದಲ್ಲಿ ಸಿದ್ಧಹಸ್ತರು. ಅಪ್ಪಾದೊರೆರವರ 'ರಾಜ್ಯಶಾಸ್ತ್ರ', 'ಟಾಲ್‌ಸ್ಟಾಯಿಯ ಪತ್ನಿ', 'ಪ್ರಾಚೀನ ಭಾರತೀಯ ಶಿಕ್ಷಣ' ಮೊದಲಾದ ಉದ್ಗ್ರಂಥಗಳಲ್ಲಿ ಅವರ ಅನುವಾದದ ಪರಿಪಕ್ವತೆಯನ್ನು ಕಾಣಬಹುದು. ಅವು ಸ್ವತಂತ್ರ ಕೃತಿಗಳೆನ್ನುವಷ್ಟು, ಯಾವ ಕೃತ್ರಿಮತೆಯಿಲ್ಲದೆ, ಭಾಷೆಯ ತೊಡಕಿಲ್ಲದೆ ಮೂಡಿಬಂದಿವೆ. ಅವರ ದಿನಚರಿಯಲ್ಲಿ ಕಂಡುಬರುವ ಕೆಲವು ಆಣಿಮುತ್ತುಗಳು ಹೇಗೆ ಕಾವ್ಯಸಿದ್ಧಿಯನ್ನು ಪಡೆದು ಅವರ ಲೇಖನಿಯಲ್ಲಿ ವ್ಯೈವೆತ್ತಿ ನಿಂತಿವೆ ಎಂಬುದಕ್ಕೆ ಒಂದೆರಡು ಉದಾಹರಣೆಗಳನ್ನು ಕೊಡಬಹುದು.

'True vidya is radiant with Simplcity and Seva'.
ಇದು ಜಿ.ವಿ.ನಾ. ಮಾತುಗಳಲ್ಲಿ

'ನಿಜವಿದ್ಯೆಯದು ಶೋಭಿಪುದು
ಸರಳತೆಯಿಂ ಮೇಣ್ ಸೇವೆಯಿಂ.'

'We blame little things in others and over look great things in ourselves.' ಇದರ ಭಾಷಾಂತರ

'ಪರರ ಅಣುವಂದದ ನ್ಯೂನತೆಗಳ ಪಿರಿದಾಗಿ ದೂಷಿಪೆವು
ಎಮ್ಮೊಳಗಿಹ ಗಿರಿಸದೃಶ ನ್ಯೂನತೆಗಳ ಎಂದೂ ಕಣ್ದೆರೆದು ನೋಡೆವು''
ಮತ್ತೊಂದು ಹೀಗಿದೆ

'The soul that loves God despises all things that are less than God'.

'ಪರಮಾತ್ಮನಲಿ ಅನುರಕ್ತ ಆತ್ಮಂಗೆ
ಅದಕಿಂತ ಕಮ್ಮಿಯುಹುದೆಲ್ಲ ತಿರಸ್ಕೃತ್ಯವೆ. !
ಈ ಅನುವಾದದ ಸೊಗಸು ಯಾರನ್ನು ತಾನೆ ತಣಿಸದು.

ಜಿ.ಪಿ.ನಾ.ರವರು ಆದರ್ಶಕ್ಕಾಗಿ ಬದುಕುವವರೆಂದೂ. ಕಾಯಾವಾಚಾಮನಸಾ ಗಾಂಧೀ ತತ್ವಾನುಯಾಯಿಗಳೆಂದೂ ಹೇಳಿದೆ. ಗಾಂಧೀಯುಗದಲ್ಲಿ ಮುಂಚೂಣಿಯ ಲ್ಲಿದ್ದ ಮಹಾ ಸೈನಿಕ. ಸತ್ಯ, ಅಹಿಂಸೆ, ರಾಷ್ಟ್ರಪ್ರೇಮ, ವಿಶ್ವಶಾಂತಿ, ಸರ್ವೋದಯ ಭಾವಗಳು ಜೀವನದ ಹಾಸುಹೊಕ್ಕು. 1927 ಆಗಸ್ಟ್ 1ರಷ್ಟು ಮುಂಚೆಯೇ ಸ್ವಾತಂತ್ರ್ಯ ಚಳುವಳಿಯ ಪ್ರವಾಹದಲ್ಲಿ ಈಜಿದವರು. ಅಂದು ಲೋಕಮಾನ್ಯ ಬಾಲ ಗಂಗಾಧರ ತಿಲಕರವರ ಪುಣ್ಯದಿನ. ವಿದ್ಯಾರ್ಥಿಗಳ ಮೆರವಣಿಗೆಯ ಮುಖಂಡತ್ವ ಇವರದು. ಅದಕ್ಕಾಗಿ ಮಧ್ಯಾಹ್ನ 1-00ರಿಂದ ರಾತ್ರಿ 10-00ರ ವರೆಗೆ ಪೋಲಿಸ್ ಠಾಣೆಯಲ್ಲಿ ಬಂಧನ. ಆ ಘಟನೆಯಿಂದಾಗಿ ಜೀವನದಲ್ಲಿ ಅಗಾಧ ಪ್ರಭಾವ. ರಾಷ್ಟ್ರ ಭಕ್ತರ ಬಗ್ಗೆ ಮೆಚ್ಚುಗೆ ; ಅದರಲ್ಲೂ ಗಾಂಧೀಜಿಯೆಂದರೆ ಪಂಚಪ್ರಾಣ, ಸರ್ವಸಮ ರ್ಪಣ ಮನೋಭಾವ. ಅಂತೆಯೇ ಗಾಂಧೀಜಿಯನ್ನು ಕುರಿತ ಅವರ ಮಾತುಗಳು. 'ಓ ಮಹಾವ್ಯಕ್ತಿ, ಮಹಾಶಕ್ತಿ' ಗಾಂಧೀಜಿಯನ್ನು ಕುರಿತ ಕವನ.

'ಓ ಮಹಾವ್ಯಕ್ತಿ, ಮಹಾಶಕ್ತಿ
ನಿನ್ನ ನೆನಪು ನಮಗೆ ಶಕ್ತಿ
ನಿನ್ನ ಬದುಕು ನಮಗೆ ಯುಕ್ತಿ
ನಿನ್ನ ಮಾತು ಲೋಕಕೆಲ್ಲ ಪಾವನ'—ಎಂದು ಬರೆಯುತ್ತಾ
'ನಿನ್ನ ಪ್ರೇಮ ನಿನ್ನ ಕರುಣೆ
ಮತ್ತೆ ನಮಗೆ ಎಂದು ಬರುವುದೋ.—ಎಂದು ಹಂಬಲಿಸಿದ್ದಾರೆ.
'ನೀ ನಿರುವ ತನಕ ಓ ತಂದೆ' ಎಂಬ ಕವನದಲ್ಲಿ

'ನೀನಿರುವ ತನಕ ಓ ತಂದೆ
ನಮಗಮೃತ ಕವಚವ ತಂದೆ
ನಮಗಾಗಿ ನೀ ದುಡಿದು ಅಮರನಾದೆ.
ನೀನಿರುವ ತನಕ ಓ ತಂದೆ
ನಿನ್ನನರಿಯದಿದ್ದೆವು ನಾವು
ನಿನ್ನನರಿವ ಪರಿ ನಮಗಿಲ್ಲವಿನ್ನು.

ಎಂದು ಬಾಷ್ಪಾಂಜಲಿ ಸಮರ್ಪಿಸಿದ್ದಾರೆ.

ನಾಡನಾಯಕ ನೆಹರೂರವರನ್ನು ಕುರಿತ ಕವನ 'ನೆಹರೂ ನೆನಪಿಗೆ'. ಇದರಲ್ಲಿ ಆ ಧೀರ ಧೀಮಂತ ವ್ಯಕ್ತಿಯ ನಿರ್ಭಯತೆಯ ಸಿಂಹನೋಟವನ್ನೂ, ಚೇತನದ ಸಿರಿವಾರಿಯನ್ನೂ, ಗಂಭೀರನಿಲುವನ್ನೂ ಚಿತ್ರಿಸಿದ್ದಾರೆ.

'ಕಾಯ ಅಳಿಯಿತು ಕಾಲ ಮಿಂಚಿತು
ನಿನ್ನಾತ್ಮವೆಮ್ಮ ರಕ್ಷಿಪುದೆಂದು'

ಎಂದು ನೆಹರೂರವರಿಗೆ ಕವನಕುಸುಮಾಂಜಲಿಯನ್ನು ಅರ್ಪಿಸಿದ್ದಾರೆ.

'ಓ ಭಾರತಪುತ್ರ ವೀರ ನೀನು, ಧೀರ ನೀನು' ಎಂಬುದು ದೇಶಭಕ್ತಿಗೀತೆ. ಈ ಕವನದಲ್ಲಿ ಕವಿ ಕಲಿ ಭಾರತ ಪುತ್ರನಿಗೆ 'ಯುಧ್ಯಸ್ವ ವಿಗತ ಜ್ವರಃ' ಎಂಬ ಘೋಷವನ್ನು ನೆನಪಿಗೆ ತಂದುಕೊಟ್ಟಿದ್ದಾರೆ. ಅವನ ಕರ್ತವ್ಯವನ್ನು ಜ್ಞಾಪಿಸಿದ್ದಾರೆ.

ಜಿ.ಪಿ.ನಾ.ರವರು ಜನಮನೋಭಾವವನ್ನು ಚೆನ್ನಾಗಿ ಅರಿತವರು. 'ಜನನಾಯಕನ ಪತನ' ಎಂಬ ಕವನದಲ್ಲಿ 'ಕಾಲಪುರುಷನ ಸನ್ನೆಗೆ ಸಿಲುಕಿದುದೆಲ್ಲ ಸೊನ್ನೆ' ಎಂದು ಭಾವಿಸಿದ್ದಾರೆ.

ಗುರುವರ್ಯ ತೀ.ನಂ. ಶ್ರೀಯವರ ನಿಧನದಲ್ಲಿ ಅವರ ಕಂಬನಿ ಕಾವ್ಯಕುಂಚದಲ್ಲಿ ಹೀಗೆ ಮಿಡಿದಿದೆ.

'ಸರಸತಿಯ ವರಕುವರ
ಜರೆಯು ಅಡರುವ ಮುನ್ನ
ಮರಣ ಪಾಶವು ಬಂದು
ಬರಸಿಡಿಲಂತೆ ನಿನ್ನನೊಯ್ದಿತೇ !

ಅಕಾಲ ಮರಣಕ್ಕಾಗಿ ಕಳಕಳಿಯಿಂದ ಪರಿತಪಿಸುವ ಹೃದಯ ಈ ಮಾತುಗಳಲ್ಲಿ ಎಷ್ಟು ಸುಸ್ಪಷ್ಟ.

ಜಿ.ವಿ.ನಾ.ರವರು ಉತ್ತುಂಗ ಗುಣಗಳ ಬಗ್ಗೆ ಸದಾ ಆಲೋಚಿಸುತ್ತಿದ್ದರೂ. ಕೆಲವು ವೇಳೆ ಮಾನವನ ಸಹಜ ಸ್ವಭಾವಗಳಿಗೆ ಹೊರತೇನಲ್ಲ. ಎಷ್ಟೋ ವೇಳೆ ಪರಿಸರದ ಕಷಾಯದಿಂದ ನೊಂದಿದ್ದಾರೆ. ಬೇಸರಿಕೆ ಪಟ್ಟಿದ್ದಾರೆ. 'ಯುಗಾದಿ' ಕವನದಲ್ಲಿ ಈ ಮಾತುಗಳು ಬಂದಿವೆ.

'ನೀಚತನ ನಿಲ್ಲಲಿಲ್ಲ
ಖೂಳತನ ಹೋಗಲಿಲ್ಲ
ಮೋಹಮದ ಜಾರಲಿಲ್ಲ
ಕೃಷ್ಣ ಬಂದ, ರಾಮ ಬಂದ
ಬುದ್ಧ ಬಂದ, ಏಸು ಬಂದ
ರಾಮಕೃಷ್ಣ ಗಾಂಧಿ ಬಂದರೂ
ಯಾವ ಯುಗದ ಅಂತವೋ,
ಯಾವ ಯುಗದ ಆದಿಯೋ ?'

ಸುತ್ತಮುತ್ತಲಿನ ಕಲುಷಿತ ವಾತಾವರಣವನ್ನು ನೋಡಿ. ನೊಂದು ಹಾಡಿ ಬರೆದ ಮಾತುಗಳೆನಿಸುತ್ತವೆ. 'ಎಲ್ಲಿ ನಿನ್ನ ನೆಲೆಯು ಹೇಳೊ' ಕವನದಲ್ಲಿ ಕಂಡುಬರುವ ಕೆಲವು ಸಾಲುಗಳು ಆತ್ಮಗತವೆಂದು ಹೇಳಿದರೂ ತಪ್ಪಾಗಲಾರದು.

'ದ್ವಿಜನುಯೆಂದು ಪುಟ್ಟಿ ನೀನು
ದ್ವಿಜದ ತೆರದಿ ಹಾರಿ ಹಾರಿ
ನಿಜದ ನೆಲೆಯುನರಿಯುದೆ'

ಇವು ತಮ್ಮನ್ನೇ ಕುರಿತು ಹೇಳಿಕೊಂಡ ಮಾತುಗಳಲ್ಲವೆ ?

ಅನುಕಂಪ ಮಾನವನ ಗುಣ. ಮಾನವನ ಅತಿ ಪ್ರೀತಿಯ ವಸ್ತು ಅವನ ತಾಯಿ. ತಾಯಿಯ ವಿಯೋಗ ದಾರುಣ ದುಃಖಕ್ಕೆ ಕಾರಣ. ಆ ಅಗಲಿಕೆಯ ಕಹಿ ನೆನಪು ಎಂದೂ ಆರದಂತಹುದು. ಅಂತೆಯೆ ಅವರ ದಿನಚರಿಯಲ್ಲಿ ಬಂದ ಈ ಮಾತು.

"My father ! wouldest come to-day
To give thyself to me ?
My mother !
If I forget thee, will there be life in
my body ?" ಈ ವಾಕ್ಯಗಳನ್ನು ಸ್ಮರಿಸಿದ್ದಾರೆ.

'ಅಮ್ಮನನು ನೆನೆದು' ಕವನದಲ್ಲಿ ಕಂದನ ಆಕ್ರಂದನ ಅನುರಣಿತವಾಗುತ್ತದೆ.

'ನಿನ್ನ ನೆನಪದು ಎನಗೆ
ಬತ್ತಲರಿಯದ ಸ್ಫೂರ್ತಿ
ನಿನ್ನ ನೆನಪದು ಎನಗೆ
ಅಕಲಂಕ ಭಾಗ್ಯ...." ಎಂದು ನೆನೆಯುತ್ತಾ,
'ನೀ ಪೋದ ದಿನದಿಂದ
ತಬ್ಬಲಿಯು ನಾನಾದೆ ತಾಯೆ"

ಎಂದು ದುಃಖಿಸುವ ಮಾತುಗಳಲ್ಲಿ ಓದುಗರ ಮನ ಮಿಡಿಯುತ್ತದೆ. ಇಂತಹ ದುಃಖದ ಸನ್ನಿವೇಶಗಳಲ್ಲೆಲ್ಲಾ ಗೀತಾಪಠಣ ಅವರ ಮನಸ್ಸಿಗೆ ಶಾಂತಿ ಸಮಾಧಾನಗಳನ್ನು ತಂದುಕೊಡುವ ಸಾಧನ.

'ಗಳಿಸು ಪಸುಳೆ ಮುಗ್ಧತೆಯ
ಗಳಿಸು ನೀ ಕೃತಿ ಭಾವ ಶುದ್ಧತೆಯ
ಶರಣು ಶರಣೆನು ಪ್ರಭು ಪದಾಂಬುಜಕೆ'

ಎನ್ನುವ ಮಾತುಗಳಲ್ಲಿ ಭಾವ ಶುದ್ಧತೆಯನ್ನೂ ಅರ್ಪಣ ಮನೋಭಾವವನ್ನೂ ಕಾಣಬಹುದು.

ಸರಳ ಮಾತುಗಳಲ್ಲಿ ತಮ್ಮ ಭಾವಗಳನ್ನು ಅಭಿವ್ಯಕ್ತಿಗೊಳಿಸುವ ಗುಣವಿದೆ. ದೃಶ್ಯಗಳನ್ನು ಕಣ್ಣಿಗೆ ಕಟ್ಟುವಂತೆ ತಿಳಿಸುವ ಸುಘಟಿತೆ ಇದೆ. ಇದೊಂದು ಸ್ಪಷ್ಟ ಚಿತ್ರ

'ಅರಳಿ ನಿಂತಿದೆ ದುಂಡು ಮಲ್ಲಿಗೆ
ನೆರೆಗೆ ಕಂಪನು ಬೀರುತಾ
ಮನಕೆ ಮುದವನು ತುಂಬುತಾ
ಎದೆಗೆ ತಂಪನು ಎರೆಯುತಾ

........................ ....
'ಹಿಮದ ಕಾಂತಿಯ ಅಣಕಮಾಡಿ
ಶಶಿಯ ಸೊಬಗನು ಮೀರಿಸಿ
ದಂತಿ ದಂತದ ಛವಿಯ ನಾಚಿಸಿ
ನಯನ ಮೋಹಕ ರೂಪದಿ.'

ಎಂಬ ಮಾತುಗಳಲ್ಲಿ ಕಾವ್ಯ ಸೌಂದರ್ಯ ತುಂಬಿ ತುಳುಕುತ್ತದೆ. ಪ್ರಕೃತಿಯ ರಮ್ಯ ವರ್ಣನೆಗೂ, ಲಲಿತಪದ ಬಂಧಕ್ಕೂ, ಅವರ 'ಕಾವ್ಯೋದಯ', 'ಓ ಜೀವನ ಯಾತ್ರಿಕನೆ', ಕವನಗಳನ್ನು ಓದಬಹುದು,

ಹೀಗೆ ಬದುಕಿನ ಏರುಪೇರುಗಳಲ್ಲಿ ಸಿಕ್ಕಿ. ಕಡುಕಾರ್ಪಣ್ಯಕ್ಕೆ ಸಿಕ್ಕಾಗಲೂ, ವಿಚಲಿತರಾಗದೆ, ಗೀತೆಯನ್ನೇ ನಂಬಿ, ನಿಷ್ಕಾಮಯೋಗಿಯಾದ ಜಿ.ವಿ.ನಾ.ರವರ ಸಾರ್ಥಕ ಜೀವನದಲ್ಲಿ ಅಲ್ಲೊಮ್ಮೆ ಇಲ್ಲೊಮ್ಮೆ ಬಂದ ಭಾವಬುಗ್ಗೆಗಳ ಸ್ಥೂಲ ಪರಿಚಯ, ಅದವ್ಯ ಭಾವಗಳಿಂದ ಉಕ್ಕಿಬಂದ ಭಾವೋದ್ವೇಗಗಳ ಶಬ್ದ ಚಿತ್ರ. ವಿಷಮ ಸಂದರ್ಭಗಳಲ್ಲೂ, ತಾವೇ ಕಹಿ ಉಂಡು, ತೃಪ್ತಿಯನ್ನೂ ಧನ್ಯತೆಯನ್ನೂ ಪಡೆಯುವ ವ್ಯಕ್ತಿ.

"ಯಾವ ಗಾನವನು ನೀ ಕೇಳಿ
ದೇವ ನೀನೆನ್ನ ಬಳಿಗೆ ಬಂದೆ ಬಂದೆ'

ಎಂದು ತೃಪ್ತಿಪಡುವ ಮನೋಭಾವ. ಹೀಗೆ ತೃಪ್ತಾತ್ಮರಾದ ಶ್ರೀ ಜಿ.ವಿ.ನಾ.ರವರನ್ನು ನೆನೆದಾಗಲೆಲ್ಲ ಗೀತೆಯ ಈ ಶ್ಲೋಕ ನೆನಪಿಗೆ ಬರುತ್ತದೆ.

ಜ್ಞಾನ ವಿಜ್ಞಾನ ತೃಪ್ತಾತ್ಮಾ ಕೂಟಸ್ಥೋ ವಿಜಿತೇಂದ್ರಿಯಃ ।
ಯುಕ್ತ ಇತ್ಯುಚ್ಯತೇ ಯೋಗೀ ಸಮಲೋಷ್ಟಾತ್ಮಕಾಂಚನಃ ॥

ಜ್ಞಾನ ಮತ್ತು ವಿಜ್ಞಾನ ಇವುಗಳಿಂದ ತೃಪ್ತಿಹೊಂದಿದ ಮನಸ್ಸುಳ್ಳವನು, ಕೂಟಸ್ಥನೂ ಜಿತೇಂದ್ರಿಯನೂ, ಮಣ್ಣು ಕಲ್ಲು ಚಿನ್ನ ಇವನ್ನು ಸಮನಾಗಿ ನೋಡುವವನೂ, ಆದ ಯೋಗಿ ಯುಕ್ತನೆಂದು ಕರೆಯಲ್ಪಡುತ್ತಾನೆ.

ಒತ್ತಾಯ ಮಾಡಿದರು; ಸಾಧಿಸುವವರೆಗೆ ಹೋರಾಡಿದರು. ಆಗ, 1973ರಲ್ಲಿ, ಸಾಹಸಿಗಳೂ ಸಾಹಿತಿಗಳೂ ಆಗಿದ್ದ ದೇ. ಜವರೇಗೌಡರು ಈ ಸಲಹೆಗಳನ್ನು ಒಪ್ಪಿ ಕಾರ್ಯವನ್ನು ಗಾಂಧೀಭವನದ ದಕ್ಷ ನಿರ್ದೇಶಕರಾದ ಡಾ॥ ತಿಪ್ಪೇರುದ್ರಸ್ವಾಮಿಗಳಿಗೆ ಒಪ್ಪಿಸಿದರು. ಪ್ರಥಮ ಸಂಪುಟವು 1974ರಲ್ಲಿ ಪ್ರಕಟವಾಯಿತು. ಇದೇ ಸುಮಾರು 530 ಪುಟಗಳಷ್ಟಾಯಿತು.

ಇಂಥ ಶ್ರಮಸಾಧ್ಯವಾದ ಭಾಷಾಂತರ ಕೆಲಸಗಳನ್ನು ನಿರ್ವಹಿಸಬೇಕಾದರೆ ಫಲವಂತರಾದ ಅನುಭವಿಗಳಾದ ಶ್ರದ್ಧಾವಂತರಾದ ಜನ ಬೇಕಲ್ಲವೆ ? ಮೊದಲನೇ ಸಂಪುಟವನ್ನು ಭಾಷಾಂತರಿಸಲು ಗಾಂಧೀ ಭಕ್ತರಲ್ಲಿ ಗಾಂಧೀ ತತ್ವಗಳ ಅನುಯಾಯಿಗಳೂ, ಅನುಷ್ಠಾನಪರರೂ ಆದ ಶ್ರೀ ಜಿ. ಪಿ. ನಾರಾಯಣಮೂರ್ತಿ. ಶ್ರೀ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಹಾಗೂ ಶ್ರೀ ಪ್ರಭುಶಂಕರ ಅವರು ದೊರಕಿದುದು ಒಂದು ಸೌಭಾಗ್ಯವೇ ಸರಿ.

'ಮಹಾತ್ಮ' ಸಂಪುಟದ ಮೊದಲ ಭಾಗದಲ್ಲಿಯ ಕನ್ನಡ ಭಾಷಾಂತರದ ಮೊದಲ ಅಧ್ಯಾಯಗಳನ್ನು ಜಿ. ಪಿ. ನಾರಾಯಣಮೂರ್ತಿಯವರಿಗೆ ಒಪ್ಪಿಸಲಾಯಿತು. 'ಪ್ಲಾಸಿಯಿಂದ ಅಮೃತಸರಕ್ಕೆ' ಎಂಬ ಮೊದಲನೆ ಅಧ್ಯಾಯದಿಂದ 'ಮತ್ತೆ ಲಂಡನ್ನಿಗೆ' ಎಂಬ ಅಧ್ಯಾಯಗಳನ್ನೊಳಗೊಂಡ ಇಪ್ಪತ್ತೊಂದು ಅಧ್ಯಾಯಗಳನ್ನು ಭಾಷಾಂತರಿಸಿದರು. ಇವುಗಳು 161 ಪುಟಗಳಲ್ಲಿ ಅಚ್ಚಾಗಿವೆ.

ಭಾಷಾಂತರ ಮಾಡುವುದು ಒಂದು ಕುಶಲಕಲೆ. ಅದು ಪ್ರಥಮತಃ ರೂಪದ ಪ್ರತಿರೂಪ. ರೂಪದ ಸ್ವರೂಪ ಸ್ವಲ್ಪವೂ ಕುಂದಿಲ್ಲದೆ, ಬಾಡಿಲ್ಲದೆ, ಸೊರಗಿಲ್ಲದೆ ಶಕ್ತಿಯುತವಾಗಿರಬೇಕು. ಇದಲ್ಲದೆ ಅದು ಭಾಷಾಂತರವಾಗುವ ಭಾಷೆಯ ಜಾಯಮಾನಕ್ಕೆ ಹೊಂದಿಕೊಂಡಿರಬೇಕು. ಇದು ಭಾಷಾಂತರಕಾರನ ಆಸೆ, ಓದುಗನ ಆಸೆ. ಭಾಷಾಂತರವು ತನಗೆ ತಾನೇ ಓದಿಸಿಕೊಂಡು ಹೋಗುವ ಜಾಡು ಹಿಡಿಯಬೇಕು. ಶ್ರೀ ಜಿ. ಪಿ ನಾರಾಯಣಮೂರ್ತಿಯವರು ಇದರಲ್ಲಿ ಸತ್ವಉಳ್ಳವರು : ಸರಾಗವಾಗಿ. ಸರಳವಾಗಿ ಸಂದೇಶಸಾರುವವರು. ಉದಾಹರಣೆಗೆ ಅವರು ತಮ್ಮ ಭಾಷಾಂತರದಲ್ಲಿ ಜೋಡಿಸಿರುವ ಪದಗುಚ್ಛಗಳನ್ನು ನೋಡಿ, ಕೆಲವು ಅಧ್ಯಾಯಗಳ ತಲೆಬರಹ ಹೀಗೆ ಅನುವಾದಗೊಂಡಿವೆ "ಉದ್ಯೋಗವಿಲ್ಲದ ನ್ಯಾಯವಾದಿ", "ಬೇಡವಾದ ಫೇಟಕಾರ. "ಕತ್ತಲ ನಾಡಿಗೆ ಮುಂಬೆಳಗು", "ಬಳಿಯರು ಗಾಂಧಿಯನ್ನು ಥಳಿಸಿದುದು". ಇತ್ಯಾದಿ.

ಇದೇ ರೀತಿ ಪ್ರಥಮ ಸಂಪುಟದ ಪ್ರಥಮ ಅಧ್ಯಾಯದ ಪ್ರಥಮ ಪ್ಯಾರದ ಪ್ರಥಮ ಪಂಕ್ತಿಗಳು ಹೀಗಿವೆ.

"ವಿದೇಶಿಯರನ್ನು ಓಡಿಸಲು ಕಡೆಯ ಉಗ್ರ ಪ್ರಯತ್ನವಾದ ೧೮೫೭ರ ಬಂಡಾಯ ಸಂಭವಿಸಿದ ಹನ್ನೆರಡು ವರ್ಷಗಳ ತರುವಾಯ, ಮೋಹನದಾಸ್ ಕರಮಚಂದ್ ಗಾಂಧೀ ಜನಿಸಿದರು. ೧೮೪೯ರಲ್ಲಿ ಲಾರ್ಡ್ ಡಾಲ್‌ಹೌಸಿ ಭಾರತವು,

ನಿರ್ನಾಮಿಸಿದಾಗ, ಬ್ರಿಟಿಷ್ ಆಡಳಿತವು, ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಸಮಗ್ರ ಭಾರತದ ಮೇಲೆ ಸ್ಥಾಪಿತವಾಗಿದ್ದಿತು. ಅದು ಭಾರತದ ಇತಿಹಾಸ ಪಠ್ಯ ಪುಸ್ತಕಗಳಲ್ಲಿ 'ಭಾರತೀಯ ದಂಗೆ' ಎಂಬ ಹೆಸರಿನಿಂದ ಪರಿಚಯವಿರುವ ಬಂಡಾಯ ದಿಂದ ೧೮೫೭ರ ಮೇ ತಿಂಗಳಲ್ಲಿ ಹಠಾತ್ತನೆ ಸವಾಲನ್ನು ಎದುರಿಸಬೇಕಾಗಿತ್ತು. ಆ ಬಂಡಾಯದ ಪರಿಣಾಮವಾಗಿ ಸಂಭವಿಸಿದ ಪ್ರಸಂಗಗಳ ಜೊತೆಗೆ, ರಣಭೂಮಿಯಲ್ಲಿ ಹೋರಾಡುತ್ತಲೇ ಸಾವನ್ನು ಅಪ್ಪಿದ ಝಾನ್ಸಿಲಕ್ಷ್ಮಿಬಾಯಿಯ ಸ್ಫೂರ್ತಿದಾಯಕ ವ್ಯಕ್ತಿತ್ವ ಗಮನಾರ್ಹವಾದುದು."

ಇದು ಕಷ್ಟವಾದ ಒಂದು ವಿಷಯಕ್ಕೆ ಸಂಬಂಧಪಟ್ಟ ಕಠಿಣ ಶಬ್ದಗಳನ್ನೊಳಗೊಂಡ ಮೂಲ ರೂಪದ ಸಂದರ್ಭೋಚಿತ ಭಾಷಾಂತರ.

ಮುಂದೆ ಸರಳವಾದ ಅನುವಾದಕ್ಕೆ ಒಂದು ಉದಾಹರಣೆಯನ್ನು ನೋಡಿ.

"೧೭೫೭ರಲ್ಲಿ ಪ್ಲಾಸೀ ಬಳಿ ನಡೆದ ಕದನದ ತರುವಾಯ ಬ್ರಿಟಿಷ್ ಅಧಿಪತ್ಯದ ತಳಹದಿಯನ್ನು ಸ್ಥಾಪಿಸಲಾಯಿತು. ಭಾರತದ ಆಚೆ, ಹೊರ ದೇಶಗಳಲ್ಲಿ ಔದ್ಯಮಿಕ ಕ್ಷೇತ್ರದಲ್ಲಿ ಸಂಭವಿಸಿದ ಹಲವಾರು ನಿದರ್ಶನಗಳು ಬ್ರಿಟನ್ ದೇಶವನ್ನು ೧೭೬೦ರ ಕ್ಷೇತ್ರದಲ್ಲಿ ಕೈಗಾರಿಕಾ ಕ್ರಾಂತಿಗೆ ಅಣಿಗೊಳಿಸಿದುವು. ಇದು ಯಶಸ್ವಿಯಾಗಲು ವಿಶಾಲವಾದ ಮಾರುಕಟ್ಟೆ ಮತ್ತು ಧನದ ಬಂಡವಾಳ ಅಗತ್ಯವಾಗಿದ್ದವು. ಪರಾಜಿತವಾದ ಭಾರತ ಗೊಣಗುಟ್ಟದೆ ಇವುಗಳನ್ನು ಒದಗಿಸಿತು. ಈಸ್ಟ್ ಇಂಡಿಯಾ ಕಂಪನಿಯು ತನ್ನ ಭಂಡಾರವನ್ನು ತುಂಬಿಕೊಳ್ಳಲು ಬಂಗಾಳವನ್ನು ಕೊಳ್ಳೆ ಹೊಡೆಯಿತು" ಮೇಲಿನ ವಾಕ್ಯಗಳಲ್ಲಿಯ ಅಚ್ಚ ಕನ್ನಡ ಪದಗಳಾದ "ಅಣಿಗೊಳಿಸಿದುವು", "ಗೊಣಗುಟ್ಟದೆ", "ಒದಗಿಸಿತು", "ತುಂಬಿಕೊಳ್ಳಲು", "ಕೊಳ್ಳೆ ಹೊಡೆಯಿತು". ಮುಂತಾದವು. ಬಹಳ ಪರಿಣಾಮಕಾರಿಯಾಗಿ ಉಪಯೋಗಿಸಲ್ಪಟ್ಟಿವೆ. ಇದು ಕನ್ನಡದ ಜಾಯಮಾನ, ಜಾಡು ಅಂತಃಸತ್ವಗಳನ್ನು ಹೊರಗೆಡಹಿದೆ.

ಇದೇ ರೀತಿ ಕೆಲವು ಅಂತಃಸತ್ವವುಳ್ಳ ವಾಕ್ಯಗಳು ಅಲ್ಲಲ್ಲಿವೆ. "ರಾಜಕಾರಣಕ್ಕೆ ಹೊಸ ತಿರುವನ್ನು ಕೊಡಲು ಅನೇಕ ಅಂಶಗಳು ಜತೆಗೂಡಿದ್ದವು." "ಲಾರ್ಡ್ ಕರ್ಜನ್ನನ ಈ ಎಲ್ಲ ಕೃತಿಗಳೂ ಮತ್ತು ವಚನಗಳು ಜನರಲ್ಲಿ ಅಪ್ರಿಯವನ್ನು ವಂಗ ವಿಭಜನೆಯು ಭಾರತದಲ್ಲಿ ಅತ್ಯಂತ ಅತೃಪ್ತಿಯನ್ನು ಹುಟ್ಟಿಸಿತು."

ಈ ಕೆಳಗಿನ ಪ್ಯಾರಾದಲ್ಲಿರುವ ಅನುವಾದ ಸೊಗಸನ್ನು ನೋಡಿ.

"೧೮೯೬ರಲ್ಲಿ ಪ್ಲೇಗು ಜಾಡ್ಯ ಪ್ರಥಮ ಬಾರಿಗೆ ಗೋಚರಿಸಿತು. ಜತೆಗೆ ಅಭಾವ ಸ್ಥಿತಿಯೂ ಹರಡಿತು. ಮುಂದಿನ ವರ್ಷ ಕ್ಷಾಮ, ಪ್ಲೇಗು, ಭೂಕಂಪ ಯುದ್ಧ ಮತ್ತು ದಬ್ಬಾಳಿಕೆ ಇವುಗಳೆಲ್ಲ ಭಾರತವನ್ನು ಆವರಿಸಿದವು. ರಾನಡೆಯವರು ಹೇಳಿದ ಪ್ರಕಾರ ಸಪ್ತಮಾರಿಗಳು ಭಾರತವನ್ನು ಧಾಳಿಮಾಡಿದಂತೆ ಕಂಡು ಬಂದಿತು.....ಸಾವಿನ ಸಂಖ್ಯೆ ಏರಿ ಹೋಯಿತು. ಪರಿಹಾರ ನೀಡುವುದಕ್ಕೂ ಮತ್ತು ಕಂದಾಯ ವಸೂಲಾತಿಯನ್ನು

ನಿಲ್ಲಿಸುವುದಕ್ಕೂ ಸರಕಾರದ ಯಂತ್ರ ಬಹಳ ನಿಧಾನವಾಗಿ ಚಲಿಸುತ್ತಿತ್ತು. ದುಃಖ ಪೀಡಿತ ಜನರಿಗೆ ನೆರವನ್ನು ನೀಡಲು ತಿಲಕ್ ಸ್ವಯಂ ಪ್ರೇರಿತ ಸೇವೆಯನ್ನು ಏರ್ಪಡಿಸಿದರು. ಹಾಗೆಯೇ ಬಡರೈತರಿಂದ ಬಲವಂತವಾಗಿ ಕಂದಾಯ ವಸೂಲಾತಿಯನ್ನು ನಿಲ್ಲಿಸಲು ಪ್ರಯತ್ನಿಸಿದರು. ಅವರು ಕೇಸರಿ ಪತ್ರಿಕೆಯಲ್ಲಿ ಹೀಗೆ ಬರೆದರು: "ಯಾರೂ ಸಾಯಬಾರದೆಂದು ರಾಣಿಯ ಇಚ್ಛೆಯಾಗಿರುವಾಗ, ಎಲ್ಲರೂ ಬದುಕಬೇಕೆಂದು ಗೌರ್ನರ್ ಘೋಷಿಸುತ್ತಿರುವಾಗ, ಆವಶ್ಯಕತೆ ಬಿದ್ದರೆ ರಾಜ್ಯ ಕಾರ್ಯದರ್ಶಿ ಸಾಲವನ್ನು ಎತ್ತಲೂ ಸಿದ್ಧವಿರುವಾಗ, ನೀವು ಅಂಜುಕುಳಿತನ ಮತ್ತು ಹಸಿವಿನಿಂದ ಸಾಯುವಿರಾ ? ಸರಕಾರಕ್ಕೆ ಕೊಡಲು ನಿಮ್ಮಲ್ಲಿ ಹಣವಿದ್ದರೆ ಅಗತ್ಯವಾಗಿ ಕೊಡಿ. ನಿಮ್ಮಲ್ಲಿ ಇಲ್ಲವಾದರೆ ಸರಕಾರದ ಅಧೀನ ಅಧಿಕಾರಿಗಳ ಕೋಪದಿಂದ ಪಾರಾಗಲು ನಿಮ್ಮ ವಸ್ತುಗಳನ್ನು ವಿಕ್ರಯ ಮಾಡುವಿರಾ ? ಸಾವಿನ ಹಿಡಿತದಲ್ಲಿದ್ದಾಗಲೂ ನೀವು ಧೈರ್ಯದಿಂದ ಇರಲಾರಿರಾ ?"

"ಕಷ್ಟಕೋಟಲೆ ಮತ್ತು ದುಃಖ ಘೋರವಾಗಿದ್ದುವು. ಬ್ಯೂಬಾನಿಕ್ ಪ್ಲೇಗು ಬಂದು ಅದನ್ನು ಇನ್ನೂ ಹೆಚ್ಚಿಸಿತು"...

"೧೯೧೭ರ ತರುವಾಯ ಗಾಂಧಿ, ಭಾರತದ ರಾಜಕೀಯ ದಿಗಂತದಲ್ಲಿ ದಿನದಿನಕ್ಕೆ ವೃದ್ಧಿಯಾಗುವ ಮಹತ್ವಪೂರ್ಣ ಶಕ್ತಿಯಾಗಿ ಕಂಡುಬಂದರು".

ಮೊದಲನೇ ಸಂಪುಟದಲ್ಲಿ ಶ್ರೀ ಜಿ. ವಿ. ನಾರಾಯಣಮೂರ್ತಿಯವರು ಅನುವಾದ ಮಾಡಿದ ಮತ್ತೊಂದು ಭಾಗವೂ ಸ್ವಾರಸ್ಯವಾಗಿಯೇ ಅಮೋಘವಾಗಿಯೇ ಬಂದಿದೆ. ನೋಡಿ ! "ಗಾಂಧಿ ಸುಮಾರು ನಾಲ್ಕು ತಿಂಗಳ ಕಾಲ ಲಂಡನ್‌ನಲ್ಲಿದ್ದರು. ಅವರು ಇಂಗ್ಲೆಂಡಿಗೆ ಬರುವುದಕ್ಕೆ ಮುನ್ನ ಜುಲೈ ೧ರಂದು ಮದನ್‌ಲಾಲ್ ಧಿಂಗ್ರಾ ಎಂಬುವವನಿಂದ ಸರ್ ಕರ್ಜನ್ ವೈಲಿಯ ಕೊಲೆಯಾಗಿತ್ತು. ಧಿಂಗ್ರಾ ಪೋಲಿಸರ ವಶದಲ್ಲಿದ್ದಾಗ ಇಂಥ ಕೃತ್ಯ ಮಾಡುವುದು ದೇಶಭಕ್ತನ ಹಕ್ಕು ಎಂದು ಹೇಳಿದ್ದನು. ತರುವಾಯ ಓಲ್ಡ್ ಬೈಲಿಯಲ್ಲಿ ಆಪಾದಿತನ ಸ್ಥಾನದಲ್ಲಿ ನಿಂತು, ತನ್ನ ಮೇಲೆ ಶ್ರೇಷ್ಠ ನ್ಯಾಯಾಧೀಶನಿಗೆ ಶಿಕ್ಷೆ ವಿಧಿಸುವ ಹಕ್ಕಿಲ್ಲವೆಂದು ಧೈರ್ಯವಾಗಿ ನುಡಿದನು "ದೇಶಪ್ರೇಮಿಗಳಿಂದ ಭಾರತೀಯ ಯುವಕರನ್ನು ಅಮಾನುಷ ರೀತಿಯಲ್ಲಿ ಗಲ್ಲಿಗೇರಿಸಿದುದು ಮತ್ತು ಅವರನ್ನು ಗಡೀಪಾರು ಮಾಡಿದುದು ಇವುಗಳಿಗೆಲ್ಲ ಸೇಡು ತೀರಿಸಿಕೊಳ್ಳುವ ಸಲುವಾಗಿ ಆ ದಿನ ಇಂಗ್ಲಿಷ್ ರಕ್ತವನ್ನು ಚೆಲ್ಲಲು ನಾನು ಪ್ರಯತ್ನ ಮಾಡಿದೆ. ಈ ಪ್ರಯತ್ನದಲ್ಲಿ ನಾನು ನನ್ನ ಅಂತಃಸಾಕ್ಷಿಯಲ್ಲದೆ ಬೇರೆ ಯಾರೊಂದಿಗೂ ವಿಚಾರ ಮಾಡಿಲ್ಲ. ನಾನು ನನ್ನ ಕರ್ತವ್ಯದೊಂದಿಗಲ್ಲದೆ ಬೇರೆ ಯಾರೊಂದಿಗೂ ಪಿತೂರಿ ನಡೆಸಿಲ್ಲ. ವಿದೇಶೀಯರ ಈಟಿಯ ಬಲಾತ್ಕಾರಕ್ಕೆ ವಶವಾದ ರಾಷ್ಟ್ರವು ಸದಾ ಯುದ್ಧಸ್ಥಿತಿಯಲ್ಲಿರುತ್ತದೆಂದು ನನ್ನ ನಂಬಿಕೆ ; ಏಕೆಂದರೆ ; ನಿಶಸ್ತ್ರೀಕೃತ ಜನಾಂಗಕ್ಕೆ ಯುದ್ಧವು ಅಸಾಧ್ಯವೆಂಬಂತೆ ಆಗಿರುತ್ತದೆ. ನಾನು ಎಚ್ಚರಕೊಡದೆ ಮೇಲೆರಗಿದೆ; ನನಗೆ ಬಂದೂಕು

ದೊರಕುವಂತಿರಲಿಲ್ಲ. ಆದುದರಿಂದ ನಾನು ನನ್ನ ಪಿಸ್ತೂಲನ್ನು ತೆಗೆದು ಹಾರಿಸಿದೆ. ಹಿಂದೂ ಆದ ನಾನು ನನ್ನ ದೇಶಕ್ಕೆ ಉಂಟಾದ ಅನ್ಯಾಯವನ್ನು ದೈವ ದ್ರೋಹವೆಂದು ಬಗೆದೆ. ನನ್ನ ನಾಡ ದೇವಿಯ ಕೆಲಸ ಶ್ರೀರಾಮನ ಕೆಲಸ. ಆಕೆಯ ಸೇವೆ ಶ್ರೀಕೃಷ್ಣನ ಸೇವೆ. ಅವಳ ಮಗನಾಗಿ ಐಶ್ವರ್ಯದಲ್ಲಿಯೂ ಮೇಧಾಶಕ್ತಿಯಲ್ಲಿಯೂ ಬಡವನಾದ ನನ್ನಂತಹವನಿಗೆ ನನ್ನ ರಕ್ತವಲ್ಲದೆ ಬೇರೆ ಏನನ್ನೂ ಅರ್ಪಿಸಲು ಸಾಧ್ಯವಿಲ್ಲ. ಆದುದರಿಂದ ಅವಳ ವೇದಿಕೆಯ ಮೇಲೆ ಅದನ್ನೇ ಯಜ್ಞರೂಪವಾಗಿ ನೀಡಿದ್ದೇನೆ. ಇಂದು ಭಾರತಕ್ಕೆ ಬೇಕಾದ ಪಾಠವೆಂದರೆ ಪ್ರಾಣವನ್ನರ್ಪಿಸುವುದು ಹೇಗೆಂಬುದು. ನಮ್ಮ ಪ್ರಾಣಾರ್ಪಣೆ ಮಾಡಿಯೇ ಅದನ್ನು ಕಲಿಸಬೇಕು. ಆದ್ದರಿಂದ ನಾನು ಪ್ರಾಣಾರ್ಪಣೆ ಮಾಡುತ್ತೇನೆ. ನಾನು ಹುತಾತ್ಮನಾಗುವುದರಲ್ಲಿ ಅದ್ಭುತ ಶಕ್ತಿ ಅಡಗಿದೆ."

ಧಿಂಗ್ರಾ ನಿರ್ಭೀತನಾಗಿ ತನ್ನ ಹೇಳಿಕೆಯನ್ನು ಪುನರುಚ್ಚರಿಸಿದ : ಮತ್ತು ತನ್ನ ಹೇಳಿಕೆಯನ್ನು ಈ ರೀತಿ ಮುಕ್ತಾಯಗೊಳಿಸಿದ : "ದೇವರಲ್ಲಿ ನನ್ನದೊಂದೇ ಪ್ರಾರ್ಥನೆ : ಇದೇ ಮಾತೆಯಲ್ಲಿ ನಾನು ಪುನರ್ಜನ್ಮ ಪಡೆಯುವಂತಾಗಲಿ : ಈ ಪವಿತ್ರ ಕಾರ್ಯ ಯಶಸ್ವಿಯಾಗಿ ಮಾನವತೆಯ ಒಳಿತಿಗಾಗಿಯೂ ಹಾಗೂ ದೇವರ ಹಿರಿಮೆಯನ್ನು ಸಾರುವುದಕ್ಕೂ ಮಾತೆ ಸ್ವತಂತ್ರಳಾಗಿ ನಿಲ್ಲುವವರೆಗೂ ನಾನು ಪ್ರಾಣಾರ್ಪಣೆ ಮಾಡುತ್ತಿರುವಂತಾಗಲಿ." ಅವನ ಕಡೆಯ ಮಾತುಗಳು "ವಂದೇ ಮಾತರಂ".

ಧಿಂಗ್ರಾನ ಹೇಳಿಕೆ ಗಾಢವಾದ ಪರಿಣಾಮ ಬೀರಿತು. ವಸಾಹತುಗಳ ಅಧೀನ ಕಾರ್ಯದರ್ಶಿಯಾಗಿದ್ದ ವಿನ್‌ಸ್ಟನ್ ಚರ್ಚಿಲ್— "ದೇಶಪ್ರೇಮದ ಹೆಸರಿನಲ್ಲಿ ಮಾಡಿದ ಭಾಷಣಗಳಲ್ಲಿ ಅತ್ಯಂತ ಶ್ರೇಷ್ಠವಾದುದು" ಎಂದು ಉದ್ಗಾರ ತೆಗೆದನು.

ಇದೇ ರೀತಿ ಅಧ್ಯಾಯದ ಕೊನೆಯಲ್ಲಿ ಬರುವ ವಾಕ್ಯಗಳೂ ಪರಿಣಾಮಕಾರಿಯಾದ ಭಾಷಾಂತರವಾಗಿವೆ. ಅವು ಹೀಗಿವೆ.

"ಗಾಂಧಿ ಸ್ಫೂರ್ತಿ ಪಡೆಯಲು ಟಾಲ್‌ಸ್ಟಾಯ್ ಕಡೆಗೆ ನೋಡಿದರು. ಲಂಡನ್‌ನಲ್ಲಿದ್ದಾಗ ಅವರಿಗೆ ತಮ್ಮ ಪ್ರಥಮ ಪತ್ರ ಬರೆದರು. ಆ ಪತ್ರಕ್ಕೆ ಉತ್ತರವಾಗಿ ಟಾಲ್‌ಸ್ಟಾಯ್, ತಮ್ಮ ಭಾರತೀಯ ಶಿಷ್ಯನ ಬಗೆಗೆ ಅತ್ಯಂತ ಕಳಕಳಿಯ ಸಹಾನುಭೂತಿಯನ್ನು ತೋರಿದರು. 'ನಿಮ್ಮ ಅತ್ಯಂತ ಸ್ವಾರಸ್ಯವಾದ ಪತ್ರ ಈಗತಾನೆ ನನಗೆ ತಲುಪಿದೆ. ಅದು ನನಗೆ ಬಹಳ ಹರ್ಷ ಕೊಟ್ಟಿದೆ. ಟ್ರಾನ್ಸ್‌ವಾಲ್‌ನಲ್ಲಿರುವ ನಮ್ಮ ಪ್ರೀತಿಯ ಸೋದರರಿಗೂ ಮತ್ತು ಸಹಕಾರ್ಯಕರ್ತರಿಗೂ ದೇವರ ನೆರವು ದೊರೆಯಲಿ. ಅಲ್ಲಿ ನಡೆದಿರುವ ಹೋರಾಟವಂತೆಯೇ—ಕಠೋರತೆಗೆ ವಿರುದ್ಧವಾಗಿ ಮೃದುತ್ವ, ಹೆಮ್ಮೆ, ಮತ್ತು ಹಿಂಸೆಗಳಿಗೆ ವಿರುದ್ಧವಾಗಿ ಸಾಧುತ್ವ ಮತ್ತು ಪ್ರೇಮ— ಈ ಬಗೆಯ ಹೋರಾಟ. ಇಲ್ಲಿ ನಮ್ಮಲ್ಲಿಯೂ ಪ್ರತಿವರ್ಷ ಹೆಚ್ಚು ಹೆಚ್ಚು ಅನುಭವಕ್ಕೆ

ಬರುತ್ತಿದೆ. ಇದು ವಿಶೇಷವಾಗಿ ಧರ್ಮ ತತ್ವಕ್ಕೂ ಮತ್ತು ಲೌಕಿಕ ತತ್ವಗಳಿಗೂ ನಡುವೆ ನಡೆಯುವ ಅತ್ಯಂತ ಪ್ರಖರವಾದ ಘರ್ಷಣೆಯಲ್ಲಿ - ಸೈನಿಕ ಸೇವೆಯ ನಿರಾಕರಣೆಯಲ್ಲಿ—ಕಂಡುಬರುತ್ತಿದೆ. ಅಂಥ ನಿರಾಕರಣೆಗಳು ಹೆಚ್ಚು ಹೆಚ್ಚು ಸಂಭವಿಸುತ್ತಿವೆ. ನಾನು ನಿಮಗೆ ಸೋದರ ಭಾವದ ಸ್ವಾಗತ ನೀಡುತ್ತೇನೆ. ನಿಮ್ಮೊಂದಿಗೆ ಪತ್ರ ವ್ಯವಹಾರ ನಡೆಸಲು ಹರ್ಷಿಸುತ್ತೇನೆ.'

ನವಂಬರ್ ೧೩ರಂದು (೧೯೦೯) ಗಾಂಧಿ ನಿರಾಶಾಭರಿತರಾಗಿ ಲಂಡನ್ನಿನಿಂದ ದಕ್ಷಿಣ ಆಫ್ರಿಕಾಕ್ಕೆ ತೆರಳಿದರು. ಆದರೆ ಸತ್ಯಾಗ್ರಹ ಸಮರವನ್ನು ಅತ್ಯಂತ ಅಹಿತಕರವಾದರೂ ಕೊನೆಯುವರೆಗೂ ನಡೆಸುವ ಕಠೋರ ನಿರ್ಧಾರವನ್ನು ಅವರು ಕೈಕೊಂಡಿದ್ದರು."

ಎರಡನೇ ಸಂಪುಟದ ಅನುವಾದಕ್ಕೆ ಮುನ್ನುಡಿ ಬರೆಯುತ್ತ ಕುಲಪತಿ ದೇ. ಜವರೇಗೌಡರು ಹೇಳುವ ಮಾತುಗಳಿವು "ಗಾಂಧೀಜಿಯವರ ಲೇಖನ ಭಾಷಣಗಳನ್ನೇ ಹೆಚ್ಚಾಗಿ ಬಳಸಿಕೊಂಡು ರಚನೆಗೊಂಡಿರುವ ಕೃತಿಯಿದು. ಪ್ರತಿಯೊಂದು ಪುಟದಲ್ಲಿಯೂ ಗಾಂಧೀಜಿ ಓದುಗರೊಡನೆ ಸಂಭಾಷಿಸುತ್ತಿರುವಂತೆ ತೋರುತ್ತದೆ. ಅನೇಕ ನುರಿತ ವಿದ್ವಾಂಸರು ಭಾಷಾಂತರ ಮಾಡಿದ್ದರೂ ಈ ಕಾರ್ಯವು ಎಷ್ಟು ಕಷ್ಟಕರವಾದುದೆನ್ನುವ, ಜವಾಬ್ದಾರಿಯುತವಾದುದೆನ್ನುವ ವಿಚಾರ ಈ ಸಂಪುಟಗಳನ್ನೋದಿದವರಿಗೆ ಅರ್ಥವಾಗದಿರದು." ಇದು ಕನ್ನಡ ಭಾಷಾಂತರಕಾರರಿಗೆ ಸಹೃದಯ ವಿಮರ್ಶಕರಾದ ದೇ.ಜ.ಗೌರವರ ಯೋಗ್ಯ ಮೆಚ್ಚುಗೆ. ಅದಕ್ಕೆ ಶ್ರೀ ಜಿ. ವಿ. ನಾರಾಯಣಮೂರ್ತಿಯವರು ಪೂರ್ಣ ಅರ್ಹರು.

ಶ್ರೀ ಜಿ. ವಿ. ನಾರಾಯಣಮೂರ್ತಿಯವರು 'ಮಹಾತ್ಮ' ಗ್ರಂಥದ ಮೂರನೇ ಭಾಗದ ಕೊನೆಯ ಅಧ್ಯಾಯಗಳನ್ನು ಅನುವಾದ ಮಾಡಿದ್ದಾರೆ. ಈ ಸಂಪುಟ ೧೯೭೭ನೇ ಇಸವಿಯ ಕೊನೆ ಭಾಗದಲ್ಲಿ ಪ್ರಕಟವಾಯಿತು. ಕುಲಪತಿಗಳಾದ ಶ್ರೀ ಡಿ. ವಿ. ಅರಸ್ ಅವರು ಮುನ್ನುಡಿ ಬರೆಯುತ್ತ "ಗಾಂಧೀಜಿ ಮಾನವ ಕುಲದ ವಿಮೋಚನೆಗಾಗಿ ನಿರಂತರವಾಗಿ ದುಡಿದ ಮಹಾಪುರುಷರು ಸತ್ಯಶೋಧನೆಗೆ ತಮ್ಮ ಇಡೀ ಬಾಳನ್ನು ಮುಡುಪಿಟ್ಟ ಮಹನೀಯರು. ಗೋಖಲೆಯವರು ಹೇಳಿದಂತೆ "ಗಾಂಧೀಜಿ ಧೂಳಿನಿಂದ ಧೀರರನ್ನು ಸೃಷ್ಟಿಸಿದರು."...ಅವರ ಉಪದೇಶಗಳು ಸ್ಫೂರ್ತಿದಾಯಕವಾಗಿ ಸೇವೆಗೆ ಬದ್ಧಕಂಕಣರಾಗಿರುವಂತೆ ಮಾಡುವ ದಿಸೆಯಲ್ಲಿ, ಕನ್ನಡದಲ್ಲಿ ರಚಿತವಾದ ಈ 'ಮಹಾತ್ಮ' ದಾರಿದೀಪವಾಗಬಲ್ಲುದು." ಭಾಷಾಂತರಕಾರರು ಈ ಸ್ತುತ್ಯ ಕಾರ್ಯವನ್ನು ಸಮರ್ಥರಾಗಿ ನಡೆಸಿಕೊಂಡು ಹೋಗಿದ್ದಾರೆ ಎಂದು ಶ್ಲಾಘಿಸಿದ್ದಾರೆ.

ಮೂರನೇ ಸಂಪುಟದ "ಕಾಂಗ್ರೆಸ್ಸಿನಿಂದ ನಿವೃತ್ತಿ ಎಂಬ ಅಧ್ಯಾಯದ ಕೊನೆಯ ಭಾಗದ ಅನುವಾದ ಹೀಗೆ ಪರಿಣಾಮಕಾರಿಯಾಗಿದೆ."

"ಗಾಂಧಿ ಹೀಗೆ ನುಡಿದರು: "ಇನ್ನು ಮುಂದೆ ಕಾಂಗ್ರೆಸ್‌ನಲ್ಲಿ ನನ್ನ ಆಸಕ್ತಿ ಯೆಂದರೆ ಕಾಂಗ್ರೆಸ್ಸು ಪ್ರತಿನಿಧಿಸುವ ತತ್ವಗಳ ಕಾರ್ಯಾನುಷ್ಠಾನವನ್ನು ದೂರದಿಂದ ವೀಕ್ಷಿಸುವುದು. ನಾವು ನಿಜವಾಗಿ ಸತ್ಯಸಂಧರಾದರೆ ಕಾಂಗ್ರೆಸ್ ಕಾರ್ಯಕ್ರಮದ ಪ್ರಧಾನ ಭಾಗವು ಹೆಚ್ಚು ಹೆಚ್ಚು ಸಾಮಾಜಿಕ, ನೈತಿಕ ಮತ್ತು ಆರ್ಥಿಕ ಆಗಿದೆ ಎಂಬುದನ್ನು ಅಂಗೀಕರಿಸಬೇಕು. ಇದೊಂದು ಪ್ರಭಾವಶಾಲಿ ಕಾರ್ಯಕ್ರಮವಾಗುತ್ತದೆ. ಏಕೆಂದರೆ ಇದು ರಾಜಕಾರಣದೊಂದಿಗೆ ಅನಿವಾರ್ಯ ಸಂಬಂಧ ಹೊಂದಿದೆ; ಅದು ವಿದೇಶೀ ದಾಸ್ಯದಿಂದ ದೇಶದ ಸ್ವಾತಂತ್ರ್ಯವನ್ನು ಪಡೆಯುವುದೇ ಹೊರತು, ವಿದೇಶೀಯ ರೊಂದಿಗೆ ಸ್ನೇಹಸಂಬಂಧವನ್ನು ತ್ಯಜಿಸುವುದಿಲ್ಲ. ಆ ಸ್ನೇಹಭಾವವು ವಿದೇಶೀಜನಾಂಗ ಗಳೊಂದಿಗೆ, ಪೂರ್ಣ ಸಮಾನತೆಯ ಆಧಾರದ ಮೇಲೆ ಸ್ವಪ್ರೇರಣೆಯಿಂದಾದ ಸಂಬಂಧ ವಾಗಿರುತ್ತದೆ. ನಾನೊಂದು ಎಚ್ಚರಿಕೆಯನ್ನೂ ನೀಡಬಯಸುತ್ತೇನೆ. ಖಾದಿ ನಿಯ ಮವೂ ಶ್ರಮಕಾಣಿಕೆಯ ಸದಸ್ಯತ್ವವೂ ತತ್‌ಕ್ಷಣ ಅನುಷ್ಠಾನಕ್ಕೆ ಬರುವುದಿಲ್ಲವೆಂದು ಯಾರೂ ಭಾವಿಸುವುದಿಲ್ಲವೆಂದು ನಾನು ನಂಬಿದ್ದೇನೆ. ಅವು ಅನುಷ್ಠಾನಕ್ಕೆ ಬಂದೇ ಬರುತ್ತವೆ. ಹಿಂದೆ, ಸವಿನಯ ಶಾಸನೋಲ್ಲಂಘನೆಯನ್ನು ಆರಂಭಿಸುವ ಮುನ್ನ, ಇವುಗಳನ್ನು ನಾನು ಒತ್ತಾಯಪಡಿಸಿದೆ. ಇದ್ದ ಉದಾಸೀನತೆಯ ಅಪರಾಧ ನನ್ನದು. ಈ ಉದಾಸೀನತೆಯ ಅಪರಾಧಕ್ಕೆ–ಇದು ಪೂರ್ಣವಾಗಿ ಅರಿವಿಲ್ಲದೆ ಆಗಿದ್ದರೂ— ನಾನು ಕಾಂಗ್ರೆಸ್ಸಿನಿಂದ ನಿವೃತ್ತಿ ಹೊಂದುವುದು. ಇದನ್ನು ಒಂದು ಪ್ರಾಯಶ್ಚಿತ್ತವೆಂದು ಪರಿಗಣಿಸಬೇಕು. ನನ್ನ ಗುರಿ, ಸವಿನಯ ಶಾಸನೋಲ್ಲಂಘನೆ ಮಾಡುವ ಸಾಮರ್ಥ್ಯ ವನ್ನು ವೃದ್ಧಿಪಡಿಸುವುದೇ ಆಗಿದೆ. ಸಂಪೂರ್ಣವಾಗಿ ಸವಿನಯವಾಗಿರುವ ಶಾಸನೋ ಲ್ಲಂಘನೆಯು ಪ್ರತೀಕಾರಭಾವವನ್ನು ಎಂದಿಗೂ ಕೆರಳಿಸಲಾರದು."

ಮೈಸೂರು ವಿಶ್ವವಿದ್ಯಾನಿಲಯವು 'ಮಹಾತ್ಮ' ಗ್ರಂಥದ ಎಲ್ಲ ಭಾಗಗಳನ್ನೂ ಇಲ್ಲಿಯವರೆಗೆ ಪೂರ್ಣ ಅನುವಾದದಲ್ಲಿ ತಂದಿಲ್ಲ. ಅನಾಸಕ್ತಿಯಿಂದಲೋ ಹಣದ ಅಭಾವದಿಂದಲೋ, 'ದಾಕ್ಷಿಣಾತ್ಯರು ನಿಜವಾಗಿಯೂ ಆರಂಭ ಶೂರರು' ಎಂಬ ನಾಣ್ನುಡಿಯನ್ನು ಸುಳ್ಳಾಗಿಸಲಾರದೆಯೋ ಈ ಮಹಾಕಾರ್ಯ ಅಪೂರ್ಣವಾಗಿದೆ. ಪಂಡಿತ ರಿಂದ ತಯಾರಾದ 'ಭಕ್ಷ್ಯ, ಭೋಜ್ಯ, ಬಂದೇ ಬರುತ್ತದೆ. ಇಷ್ಟರಲ್ಲೇ ಬರುತ್ತದೆ ಎಂಬ ಆಶ್ವಾಸನೆ ಸುಳ್ಳಾಗಿದೆ. ಆಸೆಯು ಹುಸಿಯಾಗಿದೆ. ಮಹಾತ್ಮರ ಮಾತು ಕನ್ನಡಿಗರಿಗೆ ಬರಲು ತಡವಾಗಿದೆ. ಈ ಕಾರ್ಯದಲ್ಲಿ ಯಾರಿಗೂ ಆಸಕ್ತಿ ಇಲ್ಲವೇ ಎಂಬ ಸಂದೇಹ ಮೂಡಿದೆ. ಅದೊತ್ತಟ್ಟಿಗಿರಲಿ.

'ಮಹಾತ್ಮ' ಗ್ರಂಥದ ಸಂಪುಟಗಳಲ್ಲದೆ ಶ್ರೀ ಜಿ. ವಿ. ನಾರಾಯಣಮೂರ್ತಿ ಯವರು ಮಹಾತ್ಮಗಾಂಧಿ — ೧೦೦ ವರ್ಷಗಳು ಎಂಬ ಇಂಗ್ಲಿಷ್ ಗ್ರಂಥದ ಕೆಲವು ಅಧ್ಯಾಯಗಳನ್ನು ಅನುವಾದ ಮಾಡಿದ್ದಾರೆ. ಈ ಮೂಲ ಗ್ರಂಥ ವನ್ನು ಗಾಂಧಿ ಶತಮಾನೋತ್ಸವ ರಾಷ್ಟ್ರೀಯ ಸಮಿತಿಯು ಜಕೀರ್ ಹುಸೇನ್‌ರ

ಅಧ್ಯಕ್ಷತೆಯಲ್ಲಿ ತಯಾರಿಸಿತು. ಮೂಲ ಕೃತಿಯ ಸಂಪಾದಕರು ಡಾ॥ ಎಸ್. ರಾಧಾ ಕೃಷ್ಣನ್ ಅವರು. ಇದು ೧೯೬೮ರಲ್ಲಿ ನವದೆಹಲಿಯ ಗಾಂಧಿಪ್ರತಿಷ್ಠಾನದಿಂದ ಪ್ರಕಟಿತವಾದ ೩೨೭ ಪುಟಗಳಷ್ಟು ವಿಸ್ತಾರವಾದ ಗ್ರಂಥ. ಮೈಸೂರು ವಿಶ್ವವಿದ್ಯಾ ನಿಲಯವು ಈ ಗ್ರಂಥವನ್ನು ಗಾಂಧಿಭವನ, ಮಾನಸಗಂಗೋತ್ರಿಯ ಮೂಲಕ ಡಾ॥ ಎಚ್. ತಿಪ್ಪೇರುದ್ರಸ್ವಾಮಿಯವರ ಸಂಪಾದಕತ್ವದಲ್ಲಿ ಅನುವಾದ ಮಾಡಿಸಿತು. ಶ್ರೀ ನಾರಾಯಣಮೂರ್ತಿಯವರು ತಮ್ಮ ಕಾರ್ಯಭಾರವನ್ನು ಬಹು ಸಮರ್ಪಕವಾಗಿ ಮಾಡಿದ್ದಾರೆ.

ಕುಲಪತಿ ಡಿ. ವಿ. ಅರಸ್ ಅವರು ಹೇಳಿರುವಂತೆ ಮಹಾತ್ಮ ಗಾಂಧಿಯವರು ತಮ್ಮ ಜೀವನದಲ್ಲಿ ಸರ್ವೋದಯ ಸಮಾಜ ಕಲ್ಪನೆ ಕಂಡರು. ವಿಕೇಂದ್ರೀಕರಣ, ಸ್ವಾವ ಲಂಬನೆ, ಗ್ರಾಮೋದ್ಯೋಗ, ಮೂಲ ಶಿಕ್ಷಣ, ಪ್ರಕೃತಿ ಚಿಕಿತ್ಸೆ ಮೊದಲಾದವುಗಳನ್ನು ಒಳಗೊಂಡ ಭಾರತ ಸಂಸ್ಕೃತಿಗೆ ವಿಶಿಷ್ಟವಾಗಿ ಹೊಂದಿಕೊಳ್ಳುವ ಸಿದ್ಧಾಂತವನ್ನು ಪ್ರತಿ ಪಾದಿಸಿದರು. ಶ್ರೀ ಜಿ. ವಿ. ನಾರಾಯಣಮೂರ್ತಿಗಳು ಮಹಾತ್ಮ ಗಾಂಧಿಯವರ ನಡೆ, ನುಡಿಗಳನ್ನು ಆಚರಣೆಗೆ ತಂದವರು. ಆದ್ದರಿಂದ ಅವರ ಅನುವಾದಗಳಲ್ಲಿ ಗಾಂಧಿಯ ವರ ಮಾತುಗಳನ್ನು ನಿಷ್ಠಾವಂತರಾಗಿ ಸಂಪೂರ್ಣವಾಗಿ ಅರ್ಥಮಾಡಿಕೊಳ್ಳುವ, ಅದನ್ನು ಬಹಿರಂಗಗೊಳಿಸುವ ಸರಳತೆ ಇದೆ. ಅವರು ಈ ಕಾರ್ಯವನ್ನು ಅತಿ ಶ್ರದ್ಧೆಯಿಂದ ಮಾಡಿದ್ದಾರೆ. ಅಂಥವರ ಸೇವೆ ನಮಗೆ ಮತ್ತಷ್ಟು ಕಾಲ ದೊರಕಲಿ.

ಆಧುನಿಕ ಕನ್ನಡ ಕವಿಕುಲಗುರು ಕುವೆಂಪುರವರು ಒಂದೆಡೆ ಹೇಳಿರುವಂತೆ "ಭಗವಂತ ಭೂಮಿಗೆ ವ್ಯಕ್ತಿರೂಪದಲ್ಲೇ ಅವತರಿಸಬೇಕೆಂದಿಲ್ಲ. ಕೃತಿರೂಪದಲ್ಲೂ ಅವತ ರಿಸಬಹುದು. ಶಾಶ್ವತ ಸತ್ವಗರ್ಭಿತವೂ ಪರಮ ಪುರುಷಾರ್ಥ ಸಾಧಕವೂ ತುಷ್ಟಿ ದಾಯಕವೂ ಜ್ಯೋತಿರ್ಮಯವೂ ಆದ ಕೃತಿಗಳು "ಭಗವದಾವಿರ್ಭಾವಗಳೇ".

"ಭಾಷಾಂತರಗಳ ಕಾರ್ಯ ಲಘುವಾದುದಲ್ಲ, ಅದೂ ಕೂಡ ಸ್ವತಂತ್ರ ಕೃತಿಯಂತೆ ಪ್ರತಿಭಾಮೂಲವಾದುದು. ಉತ್ತಮ ಭಾಷಾಂತರ ಎಲ್ಲೋ ಕೆಲವು ಅಧಿಕಾರಿ ಚೇತನ ಗಳಿಗೆ ಮಾತ್ರ ಸಾಧ್ಯ...ಮೂಲ ಗ್ರಂಥದ ಶಕ್ತಿ ಸೌಂದರ್ಯಗಳಿಗೆ ಹಾನಿ ಗ್ಲಾನಿಗಳೊದಗ ದಂತೆ ಅದರಲ್ಲಿ ವ್ಯಾಪಿಸಿರುವ ಭಾವಾನುಭವಗಳಿಗೆ ಧಕ್ಕೆ ತಟ್ಟದಂತೆ ಅವರ ಸೂಕ್ಷ್ಮತೆ ಮಾರ್ಮಿಕಗಳಿಗೆ ಅಪೋಹವುಂಟಾಗದಂತೆ ಯಶಸ್ವಿಯಾಗಿ ಭಾಷಾಂತರವನ್ನು ನಿರ್ವಹಿಸ ಬೇಕು"

ಈ ಎಲ್ಲ ಮೇಲ್ಪಂಕ್ತಿಯನ್ನು ಶ್ರೀ ಜಿ. ವಿ. ನಾರಾಯಣಮೂರ್ತಿಯವರು ನಿರ್ವ ಹಿಸಿ ಕೃತಕೃತ್ಯರಾಗಿದ್ದಾರೆ. ಕನ್ನಡಿಗರನ್ನು ತಮ್ಮ ಅನುವಾದದ ಸಮ್ಮೋಹನ ಶಕ್ತಿಗೆ ಒಳಮಾಡಿದ್ದಾರೆ. ಕೃತಾರ್ಥ ಜೀವ ಅದು.

ಪದಚಿಹ್ನೆ

# ಧರ್ಮ–ನೀತಿ, ಸಮಾಜ ಧರ್ಮ

**ಕೆ. ಅನಂತರಾಮು**

ಗಾಂಧೀ ಗ್ರಂಥಮಾಲೆಯಲ್ಲಿ 'ಧರ್ಮ–ನೀತಿ' ಎಂಬುದು ಐದನೆಯ ಗ್ರಂಥ. ಇಲ್ಲಿ ನಿರೂಪಿತವಾಗಿರುವ ವಿಷಯಗಳು ಹಲವು ಚಿಕ್ಕ ಚಿಕ್ಕ ಅಧ್ಯಾಯಗಳಲ್ಲಿ ವಿಭಜನೆಗೊಂಡಿದ್ದರೂ ಮುಖ್ಯವಾಗಿ ನಾವು ಧರ್ಮ ಮತ್ತು ನೀತಿ, ಈಶ್ವರಸ್ವರೂಪ, ರಾಮನಾಮ ಎಂಬ ಮೂರು ಅಂಶಗಳು ವಿವೇಚನೆಗೊಂಡಿರುವುದನ್ನು ಕಾಣುತ್ತೇವೆ. ಈ ಗ್ರಂಥದ ವಿವಿಧ ಭಾಗಗಳನ್ನು ಜಿ. ವಿ. ನಾರಾಯಣಮೂರ್ತಿ, ದೇಶಪಾಂಡೆ ಮನೋಹರರಾಯ, ಸಿದ್ದವನಹಳ್ಳಿ ಕೃಷ್ಣಶರ್ಮ ಇವರುಗಳು ಅನುವಾದ ಮಾಡಿದ್ದಾರೆ. 'ನಿವೇದನ' ಎಂಬ ಶೀರ್ಷಿಕೆಯಲ್ಲಿರುವ ಪ್ರಾರಂಭದ ಮಾತುಗಳನ್ನು ಕುವೆಂಪು ಅವರು ಅನುವಾದಿಸಿದ್ದಾರೆ. ಈ ಗ್ರಂಥವನ್ನು ಓದುಗರು ಅರ್ಥಮಾಡಿಕೊಳ್ಳಲು ಅನುಕೂಲವಾಗುವಂತೆ ರಂಗನಾಥ ದಿವಾಕರರು 'ವಿಶೇಷ ದೃಷ್ಟಿ' ಎಂಬ ಶೀರ್ಷಿಕೆಯಲ್ಲಿ ಕೆಲವು ಉಪಯುಕ್ತ ವಿಷಯಗಳನ್ನು ಹೇಳಿದ್ದಾರೆ.

ಈ ಗ್ರಂಥದಲ್ಲಿ ನಡೆದಿರುವ ವಿಷಯಪ್ರತಿಪಾದನೆ ವಿಸ್ತಾರವಾದ ವ್ಯಾಪ್ತಿಯನ್ನುಳ್ಳದ್ದು. ಧರ್ಮ, ನೀತಿ, ದೇವರು–ಈ ಮೊದಲಾದ ವಿಷಯಗಳ ಬಗ್ಗೆ ಗಾಂಧೀಜಿಯವರು ವಿವಿಧ ಸಂದರ್ಭಗಳಲ್ಲಿ ವ್ಯಕ್ತಪಡಿಸಿರುವ ವಿಚಾರಗಳನ್ನು ಇಲ್ಲಿ ಸುಸಂಬದ್ಧವಾದ ರೀತಿಯಲ್ಲಿ ಜೋಡಿಸಿಕೊಡುವ ಪ್ರಯತ್ನ ನಡೆದಿದೆ. ಇದರಿಂದಾಗಿ ವಿಷಯ ಪ್ರತಿಪಾದನೆಯಲ್ಲಿ ಕ್ರಮವಾದ ಬೆಳವಣಿಗೆಯಿಲ್ಲ : ಅಲ್ಲಲ್ಲಿ ಪುನರುಕ್ತಿಗಳೂ ಇವೆ. ಹೀಗಾಗಿ ಗ್ರಂಥದ ಒಟ್ಟು ಸಾರಾಂಶವೇನು ಎಂಬುದನ್ನು ಬಂಧಿಸಿ ಹೇಳಲು ಸಾಧ್ಯವಿಲ್ಲ. ಈ ಮಾತು ಪ್ರಸ್ತುತ ಗ್ರಂಥದ ವೈಶಿಷ್ಟ್ಯವೂ ಹೌದು. ಇಷ್ಟಾದರೂ ಈ ಗ್ರಂಥದ ಮುಖ್ಯವಾದ ವಿಚಾರಧಾರೆಯೇನು ಎಂಬುದನ್ನು ಗಾಂಧೀಜಿಯವರು ನಿರೂಪಿಸಿರುವ ರೀತಿಯಲ್ಲೇ ಸಂಗ್ರಹಿಸಿಕೊಡುವ ಪ್ರಯತ್ನವನ್ನು ಈ ಲೇಖನದಲ್ಲಿ ಮಾಡುತ್ತಿದ್ದೇನೆ.

ಗಾಂಧೀಜಿಯವರು ಸತ್ಯಶೋಧಕರಾಗಿದ್ದು ಅದಕ್ಕೊಂದು ಮಾರ್ಗವನ್ನು ಅವರೇ ಕಂಡುಕೊಂಡರು. ಸತ್ಯದ ಸಮ್ಯಕ್‌ದರ್ಶನವೇ ಆತ್ಮಸಾಕ್ಷಾತ್ಕಾರ : ಅದೇ ಜೀವನದ ಅಂತಿಮ ಗುರಿ ಎಂದು ಅವರು ಭಾವಿಸಿದ್ದರು. ಆ ಪ್ರಯತ್ನದಲ್ಲಿ ಸಾವಿರ ಬಾರಿ ಸೋತರೂ ಶ್ರದ್ಧೆಗೆಡುವ ಸ್ವಭಾವ ಅವರದಾಗಿರಲಿಲ್ಲ. ಭಗವಂತನೇ ಸತ್ಯ ಎಂದು

ನಂಬಿ, ಅಹಿಂಸೆ ಮತ್ತು ಪ್ರೇಮದ ಮೂಲಕ ಅದರ ಸಾಧನೆಗಾಗಿ ತೊಡಗಿದ್ದರು. ಸತ್ಯವನ್ನು ಬಲಿಕೊಟ್ಟು ಭಾರತವು ಸ್ವಾತಂತ್ರ್ಯವನ್ನು ಗಳಿಸುವುದಕ್ಕಿಂತ ಅದು ವಿನಾಶ ಹೊಂದುವುದೇ ಲೇಸೆಂದು ಅವರು ಹೇಳುತ್ತಿದ್ದರು.

**ಧರ್ಮ ಮತ್ತು ನೀತಿ :**

ನಮ್ಮನ್ನು ಅಂತರಂಗದಲ್ಲಿರುವ ಸತ್ಯದೊಡನೆ ಬಿಡಿಸಲಾಗದ ರೀತಿಯಲ್ಲಿ ಐಕ್ಯಗೊಳಿಸುವ, ನಮ್ಮ ನಿಜಸ್ವಭಾವವನ್ನು ಪರಿವರ್ತನೆಗೊಳಿಸುವ, ನಮ್ಮನ್ನು ಸದಾ ಪರಿಶುದ್ಧಗೊಳಿಸುವ ತತ್ವವೇ ಧರ್ಮ. ಧರ್ಮವು ಹೃದಯಕ್ಕೆ ಸಂಬಂಧಪಟ್ಟ ವಿಷಯ. ಬುದ್ಧಿವಂತರೂ, ಸಜ್ಜನರೂ ರಾಗದ್ವೇಷ ವಿಮುಕ್ತರೂ ಆದ ಮಾನವರು ಯಾವುದನ್ನು ಆಚರಿಸುತ್ತಾರೋ : ಯಾವುದು ನಮ್ಮ ಹೃದಯವನ್ನು ಮುಟ್ಟುತ್ತದೋ ಅದೇ ನಿಜವಾದ ಧರ್ಮ. ಧರ್ಮವು ವ್ಯಾವಹಾರಿಕ ಸಂಗತಿಗಳನ್ನು ಪರಿಗಣಿಸಿ. ಅದರಲ್ಲಿನ ಸಮಸ್ಯೆಗಳನ್ನು ಪರಿಹರಿಸಲು ಸಹಾಯಕವಾಗಬೇಕು. ಸತ್ಯ ಮತ್ತು ಪ್ರಾಮಾಣಿಕತೆಗಳಿಗಿಂತ ಹೆಚ್ಚು ಉದಾತ್ತವಾದ ಧರ್ಮ ಬೇರೊಂದಿಲ್ಲ. ನಮಗೆ ಭಗವಂತನ ಸಾಕ್ಷಾತ್ಕಾರ ಹೇಗೆ ಸಾಧ್ಯವಿಲ್ಲವೋ ಹಾಗೆಯೇ ಪರಿಪೂರ್ಣ ಧರ್ಮವನ್ನು ಕೈವಶಪಡಿಸಿಕೊಳ್ಳುವುದು ಸಾಧ್ಯವಿಲ್ಲ.

ಧರ್ಮ ಎಂಬುದು ಹಿಂದು, ಮುಸಲ್ಮಾನ, ಕ್ರೈಸ್ತ, ಯೆಹೂದಿ ಎಂಬಂತೆ ಸಂಕುಚಿತವಾದ ಮತತತ್ವವಲ್ಲ. ಅದು ಕೇವಲ ಬಾಹ್ಯಾಚರಣೆಯಲ್ಲ. ಅದರೆ ಹಿಂದು, ಮುಸಲ್ಮಾನ ಎಂಬುದೂ ಸಹ ನಮ್ಮ ಧರ್ಮದ ಒಂದು ಅಂಗ. ಈ ದೃಷ್ಟಿಯಲ್ಲಿ ವಿವಿಧ ಧರ್ಮಗಳು ಒಂದೇ ತೋಟದಲ್ಲಿ ಬೆಳೆದ ಸುಂದರ ಕುಸುಮಗಳು. ಈ ಮಾನವ ರೂಪಿತ ಧರ್ಮಗಳೆಲ್ಲವೂ ಅಪೂರ್ಣವಾಗಿರುವುದರಿಂದ ಒಂದಕ್ಕಿಂತ ಇನ್ನೊಂದು ಶ್ರೇಷ್ಠ ಎಂದು ಹೇಳುವಂತೆಯೇ ಇಲ್ಲ. ತನ್ನ ಧರ್ಮದಲ್ಲಿ ನಿಷ್ಠೆಯುಳ್ಳವನು ಪರಧರ್ಮವನ್ನು ಕೀಳೆಂದು ಕಾಣಲಾಗದು. ಸಕಲ ಧರ್ಮಗಳ ಆತ್ಮವೂ ಒಂದೇ ; ಅವೆಲ್ಲ ವಿವಿಧ ಆಕಾರಗಳಲ್ಲಿ ಆಚ್ಛಾದಿತವಾಗಿವೆ. ಪರಧರ್ಮ ಸಹಿಷ್ಣುತೆಯನ್ನು ಬೆಳೆಸಿಕೊಳ್ಳುವುದು ಸ್ವಧರ್ಮದ ನಿಜವಾದ ಜ್ಞಾನವನ್ನು ವೃದ್ಧಿಗೊಳಿಸುತ್ತದೆ.

ನೈಜ ಧರ್ಮವೆಂದರೆ ಒಳ್ಳೆಯ ಚಿಂತನೆ ಮತ್ತು ಒಳ್ಳೆಯನಡತೆ. ನೈಜ ದೇಶಪ್ರೇಮಕ್ಕೂ ಒಳ್ಳೆಯ ಚಿಂತನೆ ಮತ್ತು ಒಳ್ಳೆಯನಡತೆ ಎಂದೇ ಅರ್ಥ. ನಾವು ಜೀವನಪರ್ಯಂತ ಭಾರತೀಯರಾಗಿರಬೇಕು. ನಮ ದೇಶದ ಯೋಗಕ್ಷೇಮ ಬೇರೆಯಲ್ಲ, ನಮ್ಮ ಧರ್ಮ ಬೇರೆಯಲ್ಲ.

ನಮಗೆ ಒಪ್ಪುವ ಪಥವೊಂದನ್ನು ಕಂಡುಕೊಂಡು ಅದರಲ್ಲಿ ನಿರ್ಭಯವಾಗಿ ನಡೆಯುವುದೇ ನೀತಿ. ಅನೇಕರು ಹೋದ ಜಾಡಿನಲ್ಲೇ ಹೋಗಬೇಕೆಂಬುದು ನಿಜವಾದ ನೀತಿಯಲ್ಲ. ಪರರಿಗೆ ಉಪಕಾರ ಮಾಡುವುದಕ್ಕೋಸ್ಕರ ನಮ್ಮನ್ನು ಬೆಳೆಸಿಕೊಳ್ಳು

ವುದೇ ದಿಟವಾದ ನೀತಿ. ಧರ್ಮ ಮತ್ತು ನೀತಿ ಪರಸ್ಪರ ಪೂರಕವಾಗಿರುವಂಥವು. ಭೂಮಿಯಲ್ಲಿ ಬಿತ್ತಿದ ಬೀಜಕ್ಕೆ ನೀರು ಹೇಗೋ ಧರ್ಮವು ನೀತಿಗೆ ಹಾಗೆ.

"ನನ್ನ ಧರ್ಮ ಹಿಂದೂ ಧರ್ಮ: ನನಗೆ ಅದು ಮಾನವೀಯ ಧರ್ಮ. ನನಗೆ ಗೊತ್ತಿರುವ ಸಕಲ ಧರ್ಮಗಳ ಸಾರ ಅದರಲ್ಲಿದೆ. ಅನೇಕ ಸಾರಿ ನನ್ನ ಧರ್ಮವನ್ನು ಸತ್ಯದ ಧರ್ಮವೆಂದು ಬಣ್ಣಿಸುತ್ತೇನೆ. ದೇವರೆಂದರೆ ಸತ್ಯ. ನಾವೆಲ್ಲ ಸತ್ಯದ ಕಿಡಿಗಳು. ಸಂತತ ಪ್ರಾರ್ಥನೆಯ ಬಲದಿಂದ ದಿನದಿನವೂ ಅವರ ಹತ್ತಿರ ಹತ್ತಿರಕ್ಕೆ ನಾನು ಸಾಗುತ್ತಿದ್ದೇನೆ. ನಾನೊಬ್ಬ ನಿಷ್ಠಾವಂತ ಹಿಂದೂ ಆದರೂ, ನನ್ನ ನಂಬಿಕೆಯಲ್ಲಿ ಕ್ರೈಸ್ತ, ಇಸ್ಲಾಮ್, ಝರತುಷ್ಟ್ರ ಧರ್ಮಗಳ ಬೋಧೆಗೂ ಜಾಗವಿದೆ" ಎಂದು ಗಾಂಧೀಜಿ ಮೇಲಿಂದಮೇಲೆ ಹೇಳಿದ್ದಾರೆ.

ನಾವು ಮಾಡಲಿರುವ ಕಾರ್ಯದಿಂದ ಅತ್ಯಂತ ಬಡವನೂ ಅತ್ಯಂತ ನಿಸ್ಸಹಾಯಕನೂ ಆದ ಮನುಷ್ಯನಿಗೆ ಏನಾದರೂ ಉಪಯೋಗವಾಗಬೇಕು. ದೀನಸೇವೆಯೇ ಧರ್ಮ. ದೀನದರಿದ್ರರ ರೂಪದಲ್ಲಿಯೇ ನಮಗೆ ದೇವರು ಪ್ರತ್ಯಕ್ಷನಾಗುತ್ತಾನೆ. ಪ್ರತಿಯೊಬ್ಬ ಯೋಗ್ಯ ಸ್ತ್ರೀಪುರುಷನಿಗೂ ಆಹಾರ ಮತ್ತು ಉದ್ಯೋಗ ದೊರೆಯಬೇಕು. ಅದು ದೊರೆಯದಿರುವಲ್ಲಿ ನಾವು ಆನಂದ ಪಡುವುದಕ್ಕೂ, ಚೊಕ್ಕ ಭೋಜನ ಮಾಡುವುದಕ್ಕೂ ನಾಚಿಕೊಳ್ಳಬೇಕು. ಹೊಟ್ಟೆತುಂಬ ಉಂಡವರಿಗೆ ದೇವರನ್ನು ಕುರಿತು ಚರ್ಚೆಮಾಡುವುದು ಮೋಜಿನ ವಿಷಯವಿರಬಹುದು. ನೆಟ್ಟಗೆ ಎರಡು ಹೊತ್ತಿನ ಊಟಕ್ಕೆ ಗತಿಯಿಲ್ಲದವರಿಗೆ ರೊಟ್ಟಿ ತುಪ್ಪವೊಂದೇ ದೇವರ ಅವತಾರ. ಮಾನವದೇಹವಿರುವುದು ಸೇವೆಗಾಗಿಯೇ ಹೊರತು ಭೋಗಲೋಲುಪತೆಗಲ್ಲ. ಸುಖಜೀವನದ ಗುಟ್ಟು ವಿರಕ್ತಿಯಲ್ಲಿ ಅಡಗಿದೆ. ವಿರಕ್ತಿಯೇ ಬಾಳು. ಭೋಗಲೋಲುಪತೆಯೇ ಸಾವು. ವಿರಕ್ತಿಯೆಂದರೆ ಸಂಸಾರವನ್ನು ಬಿಟ್ಟು ಕಾಡಿಗೆ ಹೋಗುವುದಲ್ಲ. ಬದುಕಿನ ಎಲ್ಲ ಕರ್ಮಗಳನ್ನೂ ವಿರಕ್ತಿಯ ಬುದ್ಧಿಯು ಆಳಬೇಕೆಂಬುದು ಅದರ ಅರ್ಥ.

ಪ್ರತಿಯೊಬ್ಬ ಮನುಷ್ಯನೂ ದುಡಿದು ತಿನ್ನಬೇಕು. ಅದೂ ಒಂದು ಬಗೆಯ ತ್ಯಾಗ. ಆಗ ಎಲ್ಲರಿಗೂ ಸಾಕಷ್ಟು ಆಹಾರವೂ ಸಾಕಷ್ಟು ವಿರಾಮವೂ ದೊರೆಯುತ್ತದೆ. ಆಗ ಜನಸಂಖ್ಯೆ ಅತಿಯಾಯಿತೆಂಬ ಕೂಗಾಗಲೀ ರೋಗರುಜಿನವಾಗಲೀ ಇರುವುದಿಲ್ಲ. ನಾವು ಪ್ರೇಮಪೂರ್ಣರಾಗಬೇಕು : ಪ್ರಪಂಚದೊಡನೆ ಮೈತ್ರೀಭಾವವನ್ನು ಬೆಳೆಸಿಕೊಳ್ಳಬೇಕು. ದೇವತತ್ವದಲ್ಲಿ ನಂಬಿಕೆಯಿಟ್ಟರೆ ಎಲ್ಲ ಕಾರ್ಯಗಳೂ ನಮಗೆ ಸಾಧ್ಯವಾಗುತ್ತವೆ. ದೇವರಿಗೆ ಅಂಜಿದಾಗ ನಾವು ಮಾನವರಿಗೆ ಅಂಜುವುದು ತಪ್ಪುತ್ತದೆ. ಆಧ್ಯಾತ್ಮಿಕತೆಗೆ ನಿರ್ಭೀತಿ ಪ್ರಥಮ ಅವಶ್ಯಕತೆ. ಹೇಡಿಗಳು ಎಂದಿಗೂ ನೀತಿವಂತರಾಗುವುದು ಸಾಧ್ಯವಿಲ್ಲ.

ಮನುಷ್ಯನು ಸಸ್ಯಾಹಾರಿಯಾಗಬೇಕು. ಮಾಂಸ, ಮೊಟ್ಟೆಗಳನ್ನು ಅತ ತಿನ್ನಲಾಗದು. ಒಂದು ಕುರಿಮರಿಯ ಜೀವ ಒಬ್ಬ ಮನುಷ್ಯನ ಜೀವಕ್ಕಿಂತ ಕಡಿಮೆ

ಮೌಲ್ಯದ್ದೇನಲ್ಲ. ನಿರಪರಾಧಿನೆತ್ತರಿನಿಂದ ಮಲಿನವಾದ ಯಾವ ವೈಜ್ಞಾನಿಕ ಸಂಶೋಧನೆಗೂ ಬೆಲೆಯಿಲ್ಲ.

ಉಪವಾಸ ಮಾಡುವುದು ನಮ್ಮ ಪ್ರಾಚೀನ ಸಂಪ್ರದಾಯಗಳಲ್ಲೊಂದು. ಅದರಿಂದ ನಮ್ಮ ದೇಹ, ಬುದ್ಧಿ, ಆತ್ಮಗಳು ತೊಳೆಯಲ್ಪಡುತ್ತವೆ. ಗೀತೆಯಲ್ಲಿಯೂ ಅಲ್ಪಾಹಾರವನ್ನು ಹೇಳಲಾಗಿದೆ. ಶರೀರದ ನಿರಾಹಾರದ ಜೊತೆಯಲ್ಲಿ ಇಂದ್ರಿಯಗಳ ನಿರಾಹಾರವೂ ಕೂಡಿಕೊಳ್ಳಬೇಕು. ಗಡದ್ದಾಗಿ ತಿನ್ನುವುದು ದೇವರೆದುರು ಮನುಷ್ಯರೆದುರು ಅಪರಾಧ. ಉಪವಾಸದೊಂದಿಗೆ ಕೂಡಿಕೊಳ್ಳಬೇಕಾದ ಇನ್ನೊಂದು ತತ್ವ ಪ್ರಾರ್ಥನೆ. ಪರಮಾರ್ಥ ಸತ್ಯದಲ್ಲಿ ಐಕ್ಯವಾಗಲು ಆತ್ಮನ ತೀವ್ರ ಹಂಬಲಿಕೆಯೇ ಪ್ರಾರ್ಥನೆ. ಅದು ಧರ್ಮದ ಆತ್ಮ ಮತ್ತು ಸಾರ. ನಮ್ಮ ಅಯೋಗ್ಯತೆಯನ್ನೂ ಅಶಕ್ತಿಯನ್ನೂ ನಾವು ಪ್ರಾರ್ಥನೆಯ ಕಾಲದಲ್ಲಿ ದೇವರ ಮುಂದೆ ಬಿನ್ನೈಸಿಕೊಳ್ಳುತ್ತೇವೆ. ದೇವರು ನಾಮರಹಿತ. ನಮಗೆ ಪ್ರಿಯವೆನಿಸುವ ಯಾವ ನಾಮದಿಂದ ಲಾದರೂ ಅವನನ್ನು ಪ್ರಾರ್ಥಿಸಬಹುದು. ದೇವರು ಅಂತರ್ಯಾಮಿಯೂ, ಸರ್ವಶಕ್ತನೂ. ಸರ್ವಜ್ಞನೂ ಆದ್ದರಿಂದ ನಮ್ಮ ಹೃದಯಾಂತರಾಳದ ಭಾವಗಳನ್ನು ಅವನು ಚೆನ್ನಾಗಿ ಬಲ್ಲ.

ಪ್ರಾರ್ಥನೆ ತುಟಿಗಳಿಂದ ಮಾಡತಕ್ಕದ್ದಲ್ಲ, ಹೃದಯದಿಂದ ಮಾಡತಕ್ಕದ್ದು. ಅದು ಮಾನಸಿಕ ನೆಮ್ಮದಿಯನ್ನು ಒದಗಿಸುತ್ತದೆ. ಪ್ರಾರ್ಥನೆಯು ಮೂಢಶ್ರದ್ಧೆಯಲ್ಲ. ಹೃತ್ಪೂರ್ವಕವಾದ ಪ್ರಾರ್ಥನೆ ನಮ್ಮ ನರಗಳನ್ನು ದೃಢಗೊಳಿಸುತ್ತದೆ, ವಿನಯಭಾವ ವನ್ನು ನಮ್ಮಲ್ಲಿ ವೃದ್ಧಿಗೊಳಿಸುತ್ತದೆ.

ಹುಟ್ಟುತ್ತ ಎಲ್ಲ ಮಾನವರೂ ಸಮಾನರು. ಎಲ್ಲರೊಳಗೂ ಇರುವ ಆತ್ಮವು ಒಂದೇ. ಒಬ್ಬನು ಮೇಲು ಒಬ್ಬನು ಕೀಳೆಂಬ ಭಾವವನ್ನು ಪೋಷಿಸುವುದು ಹೀನಕೃತ್ಯ. ಸಹಮಾನವರಿಗೆ ಸೇವೆಮಾಡುವ ಮನುಷ್ಯನ ಹೃದಯವನ್ನು ಭಗವಂತನು ತನ್ನ ಪೀಠವಾಗಿ ಆರಿಸಿಕೊಳ್ಳುವನು. ದೇವರು ನಮ್ಮನ್ನು ತನ್ನ ಪ್ರತಿಬಿಂಬವಾಗಿ ನಿರ್ಮಿಸಿದ್ದಾನೆ. ಆದ್ದರಿಂದ ಕೆಲವರ ಹಿತವಲ್ಲ; ಬಹುಜನರ ಹಿತವಲ್ಲ: ಸರ್ವರ ಹಿತವೂ ಸಾಧಿತವಾಗಬೇಕು. ಅದೇ ಸರ್ವೋದಯ.

ಸತ್ಯ, ಅಹಿಂಸೆ ಮತ್ತು ಬ್ರಹ್ಮಚರ್ಯ–ಮಾನವನ ಶ್ರೇಷ್ಠವಾದ ಮೂರು ಸದ್ಗುಣಗಳು. ಸಾಧ್ಯವಾದಷ್ಟುಮಟ್ಟಿಗೆ ಸುಳ್ಳಿನ ಹತ್ತಿರ ಹೋಗದಿರುವುದೇ ಸತ್ಯ. ಯಾರನ್ನು ನೋಯಿಸದಿರುವುದೇ ಅಹಿಂಸೆ. ಅಹಿಂಸೆಯನ್ನು ಸ್ವೀಕರಿಸಿದವನಿಗೆ ಶತ್ರುಗಳಿರಲು ಸಾಧ್ಯವೇ ಇಲ್ಲ. ಬ್ರಹ್ಮಚರ್ಯವೆಂದರೆ ಕಾಮಪಿಪಾಸೆಯನ್ನು ಗೆಲ್ಲುವುದು, ಜ್ಞಾನೇಂದ್ರಿಯಗಳ ಮೇಲೆ ಹತೋಟಿಯನ್ನಿಡುವುದು ಎಂದರ್ಥ. ಬ್ರಹ್ಮಚರ್ಯಕ್ಕೆ ಮುಖ್ಯವಾಗಿ ಬೇಕಾದುದು ಆತ್ಮಸಂಯಮ. ಉಪವಾಸ ಮತ್ತು ಪ್ರಾರ್ಥನೆಗಳ ಮೂಲಕ ಆತ್ಮಸಂಯಮವು ಲಭಿಸುತ್ತದೆ,

**ಈಶ್ವರ ಸ್ವರೂಪ :**

ಇಡೀ ವಿಶ್ವವೇ ದೇವರನ್ನು ತಿರಸ್ಕರಿಸಿದರೂ ಅವನು ಇದ್ದೇ ಇರುತ್ತಾನೆ. ದೇವನೊಬ್ಬನೆ. ಅವನು ಅದ್ವಿತೀಯ, ಅಗಾಧ. ಅಜ್ಞೇಯ, ಅಗೋಚರ. ಅವನು ನಮ್ಮ ಈ ಪುಟ್ಟ ಗೋಳದಲ್ಲಿ ಅಲ್ಲದೆ ಇಂತಹ ಲಕ್ಷೋಪಲಕ್ಷ ಗೋಳಗಳನ್ನೂ, ಲೋಕಗಳ ಆಚೆಯ ಲೋಕಗಳನ್ನೂ ಅಪ್ಪಿಕೊಂಡಿದ್ದಾನೆ. ಅಂತೂ ದೇವರೆಂದರೆ ವಿವರಣಾತೀತವಾದ ಏನೋ ಒಂದು. ಅವನು ನಮ್ಮಲ್ಲಿಯೇ ಇದ್ದಾನೆ. ಅವನು ತುಂಬಾ ಕರುಣಾಳು. ನೆಲದಲ್ಲಿ ಹರಿದಾಡುವ ಅಲ್ಪ ಜಂತುಗಳಾದ ನಾವು ಆತನ ಹಿರಿಮೆಯನ್ನೂ ಅಪರಿಮಿತ ಪ್ರೀತಿಯನ್ನೂ ಅನಂತ ಕನಿಕರವನ್ನೂ ಅಳೆಯುವುದು ಸಾಧ್ಯವಿಲ್ಲ. ಪ್ರಪಂಚ ನಶ್ವರವಾದುದು : ಅದರಲ್ಲಿ ಅಡಗಿರುವ ಪರಾತ್ಪರ ಚೇತನ ವೊಂದು ಮಾತ್ರ ಸತ್ಯ. ವಿಗ್ರಹಾರಾಧನೆ ಮಾಡಲೇಬೇಕೆಂದೇನಿಲ್ಲ. ಆದರೆ ದೇವಸ್ಥಾನ ಗಳನ್ನು ಸಂದರ್ಶಿಸಿ ಬಂದಾಗಲೆಲ್ಲಾ ನಾವು ವಿಶುದ್ಧರಾಗಿ ಹೊರಬರುವುದಾದರೆ ಮಾತ್ರ ವಿಗ್ರಹಾರಾಧನೆಗೆ ಮಹತ್ವವುಂಟು. ದೇವರ ವಿಷಯದಲ್ಲಿ ಆತ್ಮಾರ್ಪಣೆಯ ಭಾವವಿರಬೇಕು.

**ರಾಮನಾಮ :**

ರಾಮನಾಮವು ಗಾಂಧೀಜಿಯವರ ಪಾಲಿಗೆ ತಾರಕಮಂತ್ರವಾಗಿತ್ತು. ರಾಮ, ಅಲ್ಲಾ, ದೇವರು ಎಂಬೆಲ್ಲ ಶಬ್ದಗಳೂ ಅವರಿಗೆ ಸಮಾನಾರ್ಥಕಗಳು. ರಾಮನಾಮ ಪತನವು ಅನಾಸಕ್ತಿಯನ್ನು ಕಲಿಸುತ್ತದೆ. ವಿಶೇಷ ಶಕ್ತಿಯನ್ನು ಆತ್ಮಕ್ಕೆ ನೀಡಿ ಪರೀಕ್ಷಾಸಮಯ ಬಂದಾಗ ನಾವು ದಾಯ ತಪ್ಪದಂತೆ ಕಾಪಾಡುತ್ತದೆ. ನಮ್ಮ ಎಲ್ಲ ಕೆಟ್ಟ ಯೋಚನೆಗಳನ್ನೂ ದೂರಮಾಡುತ್ತದೆ. ರಾಮನೆಂದರೆ ಅವನು ದಶರಥಪುತ್ರನಾದ ರಾಮನಲ್ಲ. ಕಾಲಾತೀತನೂ, ನಿರ್ವಿಕಾರನೂ, ನಿಷ್ಕಲಂಕನೂ ಆದ ರಾಮ. ಆ ನಾಮವು ಸರ್ವರೋಗ ನಿವಾರಕವಾದುದು. ನಿಸರ್ಗ ಚಿಕಿತ್ಸಕನ ಬತ್ತಳಿಕೆಯ ದಿವ್ಯವಾದ ಅಸ್ತ್ರವೆಂದರೆ ರಾಮನಾಮ.

ರಾಮನಾಮವು ದೀನದಲಿತರ ಸೇವೆಗೆ ಪ್ರತೀಕವಾದುದು. ರಾಮನಿಗೆ ಪ್ರಿಯವೆನಿಸುವ ಸೇವೆ ಮಾಡದೆ ಬರೀ ನಾಮಸ್ಮರಣೆ ಮಾಡಿದರೆ ಅದು ವ್ಯರ್ಥ. ಯಾವುದೇ ಪ್ರಯತ್ನದಿಂದ ಶುದ್ಧವಾಗದ ಮನಸ್ಸನ್ನು ರಾಮನಾಮವು ಶುದ್ಧಗೊಳಿಸುತ್ತದೆ. ಲಕ್ಷಾಂತರ ಜನ ಹೃತ್ಪೂರ್ವಕವಾಗಿ ರಾಮಧ್ಯಾನ ಮಾಡಿದರೆ ಸಮಾಜವ್ಯಾಧಿ ಎನಿಸಿದ ಹಲವು ಕಲಹಗಳು ದೂರವಾಗಿ ಭೂಲೋಕವು ಸ್ವರ್ಗವಾಗುತ್ತದೆ. ಮಾನವನ ಹೃದಯಮಂದಿರದಲ್ಲಿ ರಾಮನಾಮವು ನೆಲೆಗೊಂಡಾಗ ಅವನಿಗೊಂದು ಬಗೆಯಲ್ಲಿ ಪುನರ್ಜನ್ಮ ಲಭಿಸುತ್ತದೆ. ಅದು ನಿಷ್ಫಲವಾಗಲು ಕಾರಣವೇ ಇಲ್ಲ. ನಿಷ್ಫಲತೆ ಯೆಂದರೆ ಅದು ನಮ್ಮ ಅಶಕ್ಯ.

## ಸಮಾಜ ಧರ್ಮ

ಗಾಂಧೀ ಗ್ರಂಥಮಾಲೆಯಲ್ಲಿ 'ಸಮಾಜಧರ್ಮ' ಎಂಬುದು ಆರನೆಯ ಗ್ರಂಥ. ಇಲ್ಲಿ ನಿರೂಪಿತವಾಗಿರುವ ವಿಷಯಗಳು ಐದು ಅಧ್ಯಾಯಗಳಲ್ಲಿ ಅಡಕವಾಗಿವೆ. ಈ ಗ್ರಂಥದ ವಿವಿಧ ಭಾಗಗಳನ್ನು ಜಿ. ವಿ. ನಾರಾಯಣಮೂರ್ತಿ, ವಿ. ಬಿ. ನಾಯಕ್: ಸಿದ್ದವನಹಳ್ಳಿ ಕೃಷ್ಣಶರ್ಮ ಅವರುಗಳು ಭಾಷಾಂತರಿಸಿದ್ದಾರೆ. 'ಯಥಾದರ್ಶನ' ಎಂಬ ಹೆಸರಿನಲ್ಲಿ ರಂಗನಾಥ ದಿವಾಕರರು ಗ್ರಂಥದ ಮುಖ್ಯವಸ್ತುವಿನ ವಿಶ್ಲೇಷಣೆ ಮಾಡಿದ್ದಾರೆ. ಈ ಹಿಂದಿನ ಸಂಪುಟದಲ್ಲಿರುವ ಕುವೆಂಪು ಅವರು ಅನುವಾದಿಸಿರುವ 'ನಿವೇದನ' ಇಲ್ಲಿಯೂ ಇದೆ. ಗ್ರಂಥದಲ್ಲಿ ನಿರೂಪಣೆಗೊಂಡಿರುವ ವಿಷಯಗಳ ಒಟ್ಟು ಚಿತ್ರವನ್ನು ಕೊಡಲು ಇಲ್ಲಿ ಪ್ರಯತ್ನಿಸಲಾಗಿದೆ.

**ಸಮಾಜದ ಸ್ವರೂಪ :**

ಮಾನವನು ಸಮಾಜಜೀವಿ. ಸಾಮಾಜಿಕ ಪ್ರಗತಿಯ ಆವಶ್ಯಕತೆಗಳಿಗೆ ಅನುಗುಣವಾಗಿ ತನ್ನ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಲು ಕಲಿಯುತ್ತಾ ಅವನು ಇಂದಿನ ಹಂತಕ್ಕೆ ಏರಿದ್ದಾನೆ. ಎಲ್ಲ ಸಮಾಜಗಳೂ ಅಹಿಂಸೆಯ ಆಧಾರದ ಮೇಲೆ ನಿಂತಿರುತ್ತವೆ. ಕಶ್ಮಲರಹಿತ ಅಹಿಂಸಾ ರಾಜ್ಯದಲ್ಲಿ ಮಾತ್ರವೇ ವ್ಯಕ್ತಿಸ್ವಾತಂತ್ರ್ಯಕ್ಕೆ ಅವಕಾಶ ವಿರುತ್ತದೆ. ಸಮಾಜದಲ್ಲಿ ವ್ಯಕ್ತಿಯೇ ಪರಮಗಣ್ಯ. ವ್ಯಕ್ತಿಗೆ ಗಣನೆಯಿಲ್ಲದಿದ್ದರೆ ಸಮಾಜದಲ್ಲಿ ಏನೂ ಉಳಿಯುವುದಿಲ್ಲ. ಮನುಷ್ಯ ತನಗೆ ತಾನೇ ಕಡು ವೈರಿಯೂ ಆಗಬಲ್ಲ. ಅತ್ಯಂತ ಗೆಳೆಯನೂ ಆಗಬಲ್ಲ. ಆದ್ದರಿಂದ ಸ್ವತಂತ್ರನಾಗಿರುವುದೂ, ಗುಲಾಮನಾಗಿರುವುದೂ, ಅವನ ಕೈಲೇ ಇದೆ. ಆಧ್ಯಾತ್ಮಿಕ ದೃಷ್ಟಿಯಿಂದ ಮಾನವ ಸಮಾಜವೊಂದು ನಿರಂತರ ಬೆಳವಣಿಗೆ. ನರಭಕ್ಷಕನಾಗಿದ್ದ ಮನುಷ್ಯ ಕ್ರಮಕ್ರಮವಾಗಿ ನಾಗರಿಕನಾಗಿ ವ್ಯವಸಾಯವನ್ನು ಕಲಿತು ಗ್ರಾಮಗಳನ್ನೂ ಪಟ್ಟಣಗಳನ್ನೂ ಸ್ಥಾಪಿಸಿದನು.

ಗಾಂಧೀಜಿಯವರು ಸಮಾಜಸೇವೆಗೆ ವಿಶೇಷ ಮಹತ್ವ ನೀಡಿದ್ದರು. ಸಾಮಾಜಿಕ ಸೇವೆ ಮೌನವಾಗಿ ಆಚರಿಸಲ್ಪಡಬೇಕು. ಬಲಗೈ ಮಾಡಿದ್ದನ್ನು ಎಡಗೈ ಅರಿಯದಂತೆ ಮಾಡಿದರೆ ಮಾತ್ರವೇ ಅದು ಶ್ರೇಷ್ಠ. ಪಾಶ್ಚಾತ್ಯ ದೇಶಗಳಿಂದ ನಮಗೆ ಬಂದಿರುವ ಆಕರ್ಷಕ ನುಡಿಗಳಿಗೂ, ದುಷ್ಪ್ರೇರಕ ಸೂತ್ರಗಳಿಗೂ, ನಾವು ಭ್ರಾಂತರಾಗ ಬಾರದು.

**ಹಿಂದೂ ಸಮಾಜದ ಧಾರ್ಮಿಕ ಹಿನ್ನೆಲೆ :**

ಹಿಂದೂ ಧರ್ಮವು ಒಂದು ಜೀವಂತ ಪ್ರಾಣಿ. ಅದು ವೃದ್ಧಿನಾಶಗಳಿಗೆ ಅಧೀನ ವಾಗಿದೆ. ಮೂಲದಲ್ಲಿ ಏಕವೂ ಅವಿಭಾಜ್ಯವೂ ಆಗಿದ್ದುದು ಈಗ ಅಸಂಖ್ಯ ಶಾಖೆಗಳುಳ್ಳ ಹೆಮ್ಮರವಾಗಿದೆ. ಗಂಗಾನದಿಯು ಮೂಲದಲ್ಲಿ ನಿರ್ಮಲವಾಗಿದ್ದು, ಹರಿದು ಬರುವಾಗ

ಕೊಳೆಯನ್ನು ಕೂಡಿಸಿಕೊಳ್ಳುವಂತೆ ಹಿಂದೂ ಧರ್ಮವೂ ಬೆಳೆದಂತೆಲ್ಲಾ ಕೊಳೆಯನ್ನು ಕೂಡಿಸಿಕೊಂಡಿದೆ. ಅಹಿಂಸೆಯ ಮೂಲಕ ಸತ್ಯಶೋಧನೆಯೇ ಹಿಂದೂ ಸಮಾಜದ ಮುಖ್ಯ ಲಕ್ಷಣ. ಅದು ಸರ್ವಗ್ರಾಹಿಯಾಗಿರುವುದು ಅದರ ವಿಶೇಷ ಲಕ್ಷಣ. ಹಿಂದು ಧರ್ಮವು ಒಂದು ಸಂಕುಚಿತ ಮತವಲ್ಲ. ಝರತುಷ್ಟ್ರ, ಮೋಸೆಸ್, ಕ್ರಿಸ್ತ, ಮಹಮ್ಮದ್ ನಾನಕ ಮತ್ತು ಇತರ ಪ್ರವಾದಿಗಳ ಉಪದೇಶಗಳನ್ನೆಲ್ಲ ಅದು ಒಳಗೊಂಡಿದೆ. ಹಿಂದುತ್ವವು ಏಕತ್ವವನ್ನೂ ಪುನರ್ಜನ್ಮವನ್ನೂ ಮೋಕ್ಷವನ್ನೂ ನಂಬುತ್ತದೆ. ಇಲ್ಲಿ ಪ್ರತಿಯೊಂದು ಶಾಸ್ತ್ರವನ್ನೂ ಆಚಾರ ನಿಯಮವನ್ನೂ ಅಳೆಯುವ ಒಂದು ಶ್ರೇಷ್ಠವಾದ ಮಾನದಂಡವಿದೆ. ಸತ್ಯವು ಆ ಮಾನದಂಡ. ಸಮಸ್ತ ಜೀವರಾಶಿಯ ಐಕ್ಯವನ್ನು ಹಿಂದೂ ಧರ್ಮವು ಪ್ರತಿಪಾದಿಸುತ್ತದೆ. ಪರಮಾತ್ಮನನ್ನು ಆರಾಧಿಸಲು ಪಶುಯಜ್ಞ ನಡೆಸುವುದು ತಪ್ಪು. ದೇವಸ್ಥಾನಗಳಿಗೆ ಹೋಗುವುದು ತಪ್ಪಲ್ಲ, ಆದರೆ ನಾವು ಶುದ್ಧರಾಗಿಯೂ, ಶ್ರದ್ಧಾವಂತರಾಗಿಯೂ ಅಲ್ಲಿಗೆ ಹೋಗಬೇಕು. ಇತರ ಮತಗಳೊಂದಿಗೆ ಸ್ನೇಹವನ್ನು ಹಿಂದುತ್ವವು ಬೋಧಿಸುತ್ತದೆ. ಗೋರಕ್ಷಣೆಯು ಹಿಂದೂ ಧರ್ಮದ ಮುಖ್ಯಾಂಗವಾಗಿದೆ.

ವರ್ಣವ್ಯವಸ್ಥೆ ಹಿಂದೂ ಧರ್ಮದಲ್ಲಿ ಜಟಿಲವಾದುದಲ್ಲ. ಮೂಲಭೂತ ನೀತಿಗೆ ಅವಿರೋಧಿಯಾಗಿ ಜೀವನ ಸಾಗಿಸಲು ಪರಂಪರೆಯಾಗಿ ಬಂದ ಉದ್ಯೋಗವನ್ನು ಅವಲಂಬಿಸುವುದೇ ವರ್ಣದ ಸರಳ ಅರ್ಥ. ಆದರೆ ಈಗ ಆದರ ಸ್ವರೂಪ ಕೆಟ್ಟು ಮೇಲುಕೀಳೆಂಬ ಭಾವನೆಗಳು ಹಬ್ಬಿವೆ. ಉಗ್ರವಾದ ತಪಶ್ಚರ್ಯೆಯಿಂದ ನಮ್ಮ ಪೂರ್ವಜರು ವರ್ಣನಿಯಮವನ್ನು ಕಂಡುಹಿಡಿದರು. ಅದನ್ನು ಇಂದು ನಾವು ತಿರುಗು ಮುರುಗು ಮಾಡಿದ್ದೇವೆ. ಕರ್ಮತತ್ತ್ವವನ್ನು ನಂಬುವುದರ ಜೊತೆಗೇ ನಾವು ಮಾನವ ಪ್ರಯತ್ನಕ್ಕೂ ಬೆಲೆ ಕೊಡಬೇಕು. ಪುನರ್ಜನ್ಮವನ್ನು ನಂಬುವುದರಲ್ಲಿ ಸತ್ಯಾಂಶವಿದೆ.

**ಹಿಂದೂ ಸಮಾಜದ ಸಮಸ್ಯೆಗಳು :**

ಅಸ್ಪೃಶ್ಯತೆಯು ಹಿಂದೂ ಸಮಾಜದ ಅಸಹಜ ಬೆಳವಣಿಗೆ. ನಾವು ಒಬ್ಬನನ್ನು ಸ್ಪರ್ಶಿಸಲು ನಿರಾಕರಿಸಿದರೆ ಅವನೊಂದಿಗೆ ಎಲ್ಲ ವ್ಯವಹಾರಗಳನ್ನೂ ನಿರಾಕರಿಸಿದಂತಾಗುತ್ತದೆ. ಅವರಿಗೆ ದೇವಾಲಯ ಪ್ರವೇಶವಿಲ್ಲ. ಹೀಗಾಗಿ ಬೇರೆ ಜಾತಿಗಳ ಸಾಮಾಜಿಕ ಜೀವನದ ಫಲ ಅವರಿಗೆ ಇಲ್ಲವಾಗಿದೆ. ಸವರ್ಣ ಹಿಂದೂಗಳು ಇಚ್ಛಾಪೂರ್ವಕವಾಗಿಯೂ, ಅಂತರಂಗನಿರ್ಣಯಪೂರ್ವಕವಾಗಿಯೂ ಅಸ್ಪೃಶ್ಯತೆಯನ್ನು ಕಿತ್ತು ಒಗೆಯಬೇಕು. ಯಾರೊಬ್ಬನನ್ನು ಅಸ್ಪೃಶ್ಯನೆಂದು ಪರಿಗಣಿಸುವುದಕ್ಕೆ ಹಿಂದೂ ಧರ್ಮದಲ್ಲಿ ಯಾವ ಆಧಾರವೂ ಇಲ್ಲ. ಮಾನವನಿರುವ ಸ್ಥಿತಿಗೆ ಕರ್ಮಫಲವು ಕಾರಣವೆಂದು ಅದರ ಭಾರದಡಿಯಲ್ಲಿ ಕುಗ್ಗಿಹೋಗುವುದು ಸರಿಯಲ್ಲ. ಇಂದಿನ ಜಾತಿಪದ್ಧತಿ ವರ್ಣಾಶ್ರಮ ಧರ್ಮಕ್ಕೆ ತೀರಾ ವಿರುದ್ಧವಾಗಿದೆ. ಮತಾಂತರ ಹರಿಜನರಿಗೆ ಪರಿಹಾರವಲ್ಲ. ನಮ್ಮಲ್ಲಿ ಸರಳ ವಿವಾಹವು ಜಾರಿಗೆ ಬರಬೇಕು : ವರದಕ್ಷಿಣೆ ಪಡೆಯುವುದು ಹೃದಯಶೂನ್ಯ

ಪದ್ಧತಿ. ಪರದಾ ಪದ್ಧತಿ, ದೇವದಾಸಿ ಪದ್ಧತಿ, ವೇಶ್ಯಾವೃತ್ತಿ ಈ ಮುಂತಾದುವನ್ನೂ ತೊಡೆದುಹಾಕಬೇಕು.

**ಸಮಾಜದ ಕೆಲವು ಅಹಿತ ವ್ಯಸನಗಳು :**

ಮದ್ಯಪಾನವು ಸಾಮಾಜಿಕ ದುಷ್ಟ ಪದ್ಧತಿಗಳಲ್ಲೊಂದು. ಅದು ಕಳ್ಳತನ ಮತ್ತು ವ್ಯಭಿಚಾರಗಳಿಗಿಂತಲೂ ಹೇಯ. ಅದರಿಂದ ರಾಷ್ಟ್ರವು ಪತನದ ಕಡೆಗೆ ಹೋಗುತ್ತದೆ. ಈ ಮದ್ಯಪಾನವು ಸೈತಾನನ ಸೃಷ್ಟಿ. ಹಿಂದೂ ಧರ್ಮಕ್ಕಾಗಲಿ, ಇಸ್ಲಾಂ ಧರ್ಮಕ್ಕಾಗಲಿ ಅದು ವಿರುದ್ಧವಾದುದು. ಉಷ್ಣಮಯದಲ್ಲಿರುವ ನಮಗೆ ಸೂರ್ಯನೇ ಎಲ್ಲ ಶಾಖವನ್ನೂ ಕೊಡುವುದರಿಂದ ಮದ್ಯಪಾನಕ್ಕೆ (ಪ್ರತ್ಯಕ್ಷ ಅಥವಾ ಅಪ್ರತ್ಯಕ್ಷ) ಯಾವ ಕಾರಣಗಳೂ ನಮಗಿಲ್ಲ. ಹೀಗೆಯೇ ಟೀ, ಕಾಫೀ ಮತ್ತು ಹೊಗೇಸೊಪ್ಪು ಜೀವನಾವಶ್ಯಕ ವಸ್ತುಗಳಲ್ಲ ; ಅವುಗಳನ್ನೂ ತ್ಯಜಿಸಬೇಕು. ಕುದುರೆ ಜೂಜು ಮುಂತಾದ ಬಗೆಬಗೆಯ ದುಷ್ಟ ಕ್ರಿಯೆಗಳನ್ನೂ ತಡೆಗಟ್ಟಬೇಕು.

**ಸಂತತಿ ನಿಯಮನ :**

ಸಂತತಿ ನಿಯಂತ್ರಣದ ಆವಶ್ಯಕತೆಯ ವಿಷಯವಾಗಿ ಭಿನ್ನಾಭಿಪ್ರಾಯಕ್ಕೆ ಅವಕಾಶವೇ ಇಲ್ಲ. ಆದರೆ ಅದರ ಆಚರಣೆಯಲ್ಲಿ ಆತ್ಮಸಂಯಮ ಅತ್ಯಂತ ಶ್ರೇಷ್ಠವಾದ ವಿಧಾನ. ಸ್ತ್ರೀ ಪುರುಷ ಸಂಯೋಗವು ಇಂದ್ರಿಯ ಭೋಗಕ್ಕಲ್ಲ. ಸಂತಾನೋತ್ಪತ್ತಿಗಾಗಿ. ಸಂತಾನೋತ್ಪತ್ತಿಯ ಇಚ್ಛೆ ಇಲ್ಲದಿದ್ದರೆ ಸಂಭೋಗವು ಅಪರಾಧವೇ ಸರಿ. ಸಂತತಿ ನಿಯಂತ್ರಣಕ್ಕೆ ಕೃತಕ ವಿಧಾನಗಳು ಶ್ರೇಷ್ಠವಲ್ಲ. ಅವು ದುರಾಚಾರಕ್ಕೆ ಮುಂಗಡ ಸಂಭಾವನೆ ಕೊಟ್ಟ ಹಾಗೆ. ಕೃತಕ ವಿಧಾನಗಳಲ್ಲಿ ವ್ಯಾಧಿಗಿಂತ ಚಿಕಿತ್ಸೆಯೇ ಹೆಚ್ಚು ಕೆಡಕನ್ನು ತರುತ್ತದೆ ; ಸಮಾಜವು ಸತ್ವಹೀನವಾಗುತ್ತದೆ.

ಪದಚಿನ್ಹೆ

# ಮೂರು ಪುಸ್ತಿಕೆಗಳು[1]

**ಜಿ. ಜಿ. ಮಂಜುನಾಥನ್**

ಸ್ವಾತಂತ್ರ್ಯೋತ್ತರ ಭಾರತದಲ್ಲಿ ಗಾಂಧಿ ಮತ್ತು ಗಾಂಧಿವಾದ ಕುಟಿಲರಾಜಕೀಯದ ಅಸ್ತ್ರವಾಯಿತು. ಸ್ವಾರ್ಥಸಾಧಕರು ಹೊಟ್ಟೆ ಹೊರೆಯುವ ಸಾಧನವಾಯಿತು. ವೇದಿಕೆಯ ಮೇಲೆ ಗಾಂಧಿಪಟಕ್ಕೆ ಹಾರಹಾಕಿ ತಾವೂ ಹಾಕಿಸಿಕೊಂಡು ಜನಪ್ರಿಯತೆಗಳಿಸಿಕೊಳ್ಳಲು ಅವಕಾಶಮಾಡಿ ಕೊಟ್ಟಿತು. ಇಂತಹ ಪರಿಸರ ಮಾಲಿನ್ಯದಲ್ಲಿಯೂ ಗಾಂಧಿ ಮತ್ತು ಗಾಂಧಿವಾದವನ್ನು ತಮ್ಮ ಜೀವನ ಧ್ಯೇಯವನ್ನಾಗಿ ಮಾಡಿಕೊಂಡು ಪ್ರಾಮಾಣಿಕವಾಗಿ ಕರ್ನಾಟಕದಲ್ಲಿ ದುಡಿದವರು ಕೆಲವರಾದರೂ ಇದ್ದಾರೆ. ಅವರಲ್ಲಿ ಹರ್ಡೇಕರ್ ಮಂಜಪ್ಪ, ಎ. ಯಾಮುನಾಚಾರ್ಯ. ಕೊಳಂಬೆ ಪುಟ್ಟಣ್ಣಗೌಡ. ಅಲಿಗೇ ಪುಟ್ಟಯ್ಯ ನಾಯಕ, ಟಿ. ಎಸ್. ನಾರಾಯಣರಾವ್, ನಾ. ಸು. ಹರ್ಡೀಕರ್. ಕಡಿದಾಳ್ ಮಂಜಪ್ಪ ಎಸ್. ಕರಿಯಪ್ಪ, ಜಿ. ವಿ. ನಾರಾಯಣಮೂರ್ತಿ ಮುಂತಾದವರು ಹೆಸರಿಸಬಹುದಾದವರು.

ಜಿ. ವಿ. ನಾರಾಯಣಮೂರ್ತಿ ಮತ್ತು ಕರಿಯಪ್ಪನವರು ಜೊತೆಯಾಗಿ ಕನಕಪುರದಲ್ಲಿ ಅತ್ಯಂತ ಮಹತ್ವಪೂರ್ಣವಾದ ಕೆಲಸವನ್ನು ಗ್ರಾಮಾಂತರ ಶಿಕ್ಷಣಸಂಸ್ಥೆಗಳನ್ನು ಆರಂಭಿಸುವ ಮೂಲಕ ಮಾಡಿದರು. ಕಾರಣಾಂತರಗಳಿಂದ ಇಬ್ಬರೂ ಬೇರೆ ಬೇರೆಯಾದರೂ ತಮ್ಮ ಧ್ಯೇಯವನ್ನು ಬಿಟ್ಟುಕೊಡಲಿಲ್ಲ. ಅವರಿಬ್ಬರೂ ಅದರ ನಿರ್ವಹಣೆಗಾಗಿ ಕಾಯಾ ವಾಚಾ ಮನಸಾ ದುಡಿದರು. ಜಿ.ವಿ.ನಾ.ರವರು ಕರ್ನಾಟಕದಾದ್ಯಂತ ಗಾಂಧೀವಾದದ ಪ್ರಸಾರಕ್ಕೆ ಕಾರಣರಾದರು. ಗಾಂಧಿ ಮತ್ತು ಗಾಂಧಿವಾದವನ್ನು ಕುರಿತಂತೆ ಹಲವಾರು ಗ್ರಂಥಗಳನ್ನು ಬರೆದರು. ಗಾಂಧೀ ಸ್ಮಾರಕ ನಿಧಿಯೋಜನೆಯ ಕನ್ನಡದಲ್ಲಿ ಗಾಂಧೀ ಗ್ರಂಥಮಾಲೆಯಲ್ಲಿ ತಮ್ಮ ಸೇವೆಯನ್ನು ಸಲ್ಲಿಸಿದರು. ನಾರಾಯಣಮೂರ್ತಿಯವರು ಭಾಷಣದಲ್ಲಾಗಲೀ ಬರಹದಲ್ಲಾಗಲೀ ಶಾಸ್ತ್ರೀಯ ವಿವೇಚನೆಗೆ. ಸೂತ್ರಬದ್ಧ ಹಾಗೂ ಸರಳ ನಿರೂಪಣೆಗೆ ಹೆಸರಾದವರು. ಪ್ರಸ್ತುತ ಅವರು ಬರೆದಿರುವ "ಗಾಂಧೀಜಿಯವರ ಸರ್ವಧರ್ಮ ಸಮಭಾವ" (ಮಿಂಚಿನ ಬಳ್ಳಿ ಕಾರ್ಯಾಲಯ. ಧಾರವಾಡ ೧೯೬೯) "ಖಾದಿ ಮತ್ತು ಭಾರತ ಸಮಾಜದ ಬಗೆಗೆ ಗಾಂಧೀಜಿ" (ಖಾದಿ ಮತ್ತು ಗ್ರಾಮೋದ್ಯೋಗ ಸ್ವರ್ಣ ಮಹೋತ್ಸವ ಸಮಿತಿ–ಶಿವಮೊಗ್ಗ ಜಿಲ್ಲೆ. ಶಿವಮೊಗ್ಗ ೧೯೭೩) ಮತ್ತು "ಸಾಧನಪಥ" (೧೯೭೩) ಎನ್ನುವ ಪುಸ್ತಿಕೆಗಳನ್ನು ಕುರಿತು ವಿವೇಚಿಸಲಾಗಿದೆ.

---

1 ಸಾಧನ ಪಥ, ಗಾಂಧೀಜಿಯವರ ಸರ್ವಧರ್ಮ ಸಮಭಾವ, ಖಾದಿ ಮತ್ತು ಭಾರತ ಸಮಾಜದ ಬಗೆಗೆ ಗಾಂಧೀಜಿ.

ಸತ್ಯಾಗ್ರಹ ಆಶ್ರಮದ ನಿವಾಸಿಗಳ ಜೀವನ ನಿಯಮವನ್ನಾಗಿ ಗಾಂಧೀಜಿಯವರು–

ಅಹಿಂಸಾ ಸತ್ಯ ಅಸ್ತೇಯ ಬ್ರಹ್ಮಚರ್ಯ ಅಸಂಗ್ರಹ
ಶರೀರ-ಶ್ರಮ ಅಸ್ವಾದ ಸರ್ವತ್ರ ಭಯವರ್ಜನ ॥
ಸರ್ವಧರ್ಮಸಮಾನತ್ವ ಸ್ವದೇಶೀ ಸ್ಪರ್ಶ ಭಾವನಾ
ಹೀ ಏಕಾದಶ ಸೇವಾನೀ ನಮ್ರತ್ವೇ ವ್ರತನಿಶ್ಚಯೇ ॥

ಎನ್ನುವ ವ್ರತಗಳನ್ನು ಮುಂದಿಟ್ಟರು.

ಈ ಹನ್ನೊಂದು ವ್ರತಗಳಲ್ಲಿ ಸರ್ವಧರ್ಮ ಸಮಾನತ್ವ ಎಂಬುದನ್ನು ಆರಿಸಿಕೊಂಡು ಜಿ. ವಿ. ನಾರಾಯಣಮೂರ್ತಿಯವರು ಗಾಂಧೀಜಿಯವರ ಸರ್ವಧರ್ಮ ಸಮಭಾವ ಎನ್ನುವ ಕೃತಿಯನ್ನು ರಚಿಸಿದರು. ಅದರಲ್ಲಿ ಮಾನವ ಜೀವನದ ಆಧಾರ–ಧರ್ಮ, ಗಾಂಧೀಜಿಯ ಧರ್ಮನಿಷ್ಠೆ, ಗಾಂಧೀಜಿಯ ಧರ್ಮನಿಷ್ಠೆಯ ಹಿನ್ನೆಲೆ ಮತ್ತು ವಿಕಾಸ, ಸರ್ವಧರ್ಮ ಸಮಭಾವ : ಗಾಂಧೀಜೀವನ ವ್ರತ. ಗಾಂಧೀಜೀವನದಲ್ಲಿ ಸರ್ವಧರ್ಮ ಸಮಭಾವದ ವಿಕಾಸ, ವಿಜ್ಞಾನಯುಗದ ಸವಾಲು–ಉತ್ತರ. ಮತ್ತು ಗಾಂಧೀ ಆಶ್ರಮದ ಪ್ರಾತಃ, ಸಾಯಂ ಪ್ರಾರ್ಥನೆಗಳನ್ನು ಕೊಟ್ಟಿದ್ದಾರೆ.

ಮೊದಲನೆಯ ಅಧ್ಯಾಯದಲ್ಲಿ ಧರ್ಮದ ಸ್ವರೂಪವನ್ನು ವಿವರಿಸಿದ್ದಾರೆ. ಎಲ್ಲ ಧರ್ಮಗಳಿಗೂ ಮಾನವೀಅಂಶಕ್ಕಿಂತ ದೈವೀಅಂಶವೇ ಪ್ರಧಾನವಾದುದು ಎನ್ನುವುದು ಇವರ ನಿಲುವು. ಇದನ್ನು ಪ್ರತಿಪಾದಿಸುವಲ್ಲಿ ದೇವರ ಕಲ್ಪನೆಯು ಸಾಮಾಜಿಕ ಸ್ತರಗಳಲ್ಲಿ ಹೇಗೆ ಭಿನ್ನಭಿನ್ನವಾಗಿರುತ್ತದೆ ಎನ್ನುವುದನ್ನು ನಿರೂಪಿಸಿದ್ದಾರೆ. ಧರ್ಮವನ್ನು ವಿವರಿಸುವಲ್ಲಿ ಭಾಷಾ ಸ್ವರೂಪವನ್ನು ಸಾಮತಿಯಾಗಿ ಕೊಟ್ಟಿದ್ದಾರೆ. ರತ್ನಹಾರದಲ್ಲಿ ಸೂತ್ರರೂಪದ ದಾರದಂತೆ ದೈವೀ ಅಂಶ ಎಂದು ಧರ್ಮದ ಸ್ವರೂಪವನ್ನು ಬುದ್ಧಿಗ್ರಾಹ್ಯವನ್ನಾಗಿ ಮಾಡಿದ್ದಾರೆ. ಗಾಂಧೀಜಿಯ ಧರ್ಮನಿಷ್ಠೆ ಎನ್ನುವ ಅಧ್ಯಾಯದಲ್ಲಿ ಗಾಂಧೀಜಿಯ ಬದುಕು ತೆರೆದ ಪುಸ್ತಕವಾಯಿತು ಎಂದು ತಿಳಿಸಿ ಗಾಂಧೀಜಿಯ ವಿಚಾರಧಾರೆಯನ್ನು ವ್ಯಾಖ್ಯಾನಿಸುವ ಮೂಲಕ ಗಾಂಧೀಜಿಯವರ ಸತ್ಯಶೋಧನೆಯ ಇತಿಹಾಸವನ್ನು ನಿರೂಪಿಸಿದ್ದಾರೆ. "ಗಾಂಧೀಜಿಯ ಪರಮ ಸಾಧನೆ. ಸಿದ್ಧಿಗಾಗಿ ಹೆಣಗಾಟಗಳು ಭಾರತಕ್ಕೆ ಅಷ್ಟೇ ಅಲ್ಲ. ಹಿಂದೂ ಧರ್ಮಕ್ಕೆ ಅಷ್ಟೇ ಅಲ್ಲ ಜಗತ್ತಿನ ಎಲ್ಲ ರಾಷ್ಟ್ರಗಳ ಮೇಲೂ ಭಿನ್ನ ಭಿನ್ನ ಮತಧರ್ಮಗಳ ಮೇಲೂ ತನ್ನ ತೀಕ್ಷ್ಣ ಪ್ರಭಾವ ಬೀರಿವೆ" ಎನ್ನುವ ಅಂಶವನ್ನು ಎತ್ತಿ ಹಿಡಿದಿದ್ದಾರೆ. ಗಾಂಧೀಜಿಯ ಧರ್ಮನಿಷ್ಠೆಯ ಹಿನ್ನೆಲೆ ಮತ್ತು ವಿಕಾಸ ಎನ್ನುವ ಅಧ್ಯಾಯದಲ್ಲಿ ಬಾಲಕ ಗಾಂಧೀಜಿಯ ಮೇಲೆ ಅವರ ಕೌಟುಂಬಿಕ ಪರಿಸರ ಬೀರಿದ ಹಿನ್ನೆಲೆಯಿದೆ. ತಾಯಿಯ ಸಾತ್ವಿಕತೆ, ದಾದಿ ರಂಭಾ ಕಲಿಸಿದ ರಾಮಭಕ್ತಿ, "ಜ್ಞಾನಿಗಳುಂ ಕೇಡಿಗುಂ ಸಂತಸದಿ ಶುಭವನೆಸಗುವರು' ಎನ್ನುವ ಭಾವನೆಯ ಗುಜರಾತೀ ಭಾಷೆಯ ಒಂದು ನೀತಿ ಪದ್ಯ ಸರ್ ಎಡ್ವಿನ್ ಆರ್ನಾಲ್ಡರ 'ಸಾಂಗ್ ಸೆಲೆಸ್ಟಿಯಲ್' ಎನ್ನುವ ಭಗವದ್ಗೀತೆಯ ಆಂಗ್ಲ ಭಾಷಾಂತರ. ಕ್ರೈಸ್ತ

ಮಹಮ್ಮದೀಯ ಪವಿತ್ರ ಗ್ರಂಥಗಳು, ಸ್ವಾಮಿ ವಿವೇಕಾನಂದರ ರಾಜಯೋಗ ಮತ್ತು ಪಾತಂಜಲಿ ಯೋಗ ಸೂತ್ರ ಮುಂತಾದವುಗಳ ಅಧ್ಯಯನದಿಂದ ಗಾಂಧೀಜಿಯ ಮನಸ್ಸು ವಿಶಾಲವಾಯಿತು. ಪರಧರ್ಮ ಸಹಿಷ್ಣುತೆ ಅವರಲ್ಲಿ ಮನೆಮಾಡಿತು. "ಹಿಂದೂ ಧರ್ಮದವ ಉತ್ತಮ ಹಿಂದೂವಾಗಬೇಕು. ಮುಸಲ್ಮಾನ ಉತ್ತಮ ಮುಸಲ್ಮಾನನಾಗಬೇಕು. ಕ್ರೈಸ್ತ ಉತ್ತಮ ಕ್ರೈಸ್ತನಾಗಬೇಕು" ಎನ್ನುವ ನಿಲುವಿಗೆ ಬಂದರು.

ಸರ್ವಧರ್ಮ ಸಮಭಾವ ಗಾಂಧೀ ಜೀವನ ವ್ರತವಾಯಿತು. ಗಾಂಧೀಜಿಯ ಹನ್ನೊಂದು ವ್ರತಗಳಲ್ಲಿ ಸರ್ವಧರ್ಮ ಸಮಭಾವವೂ ಎಡೆಪಡೆಯಿತು. ಈ ಬಗ್ಗೆ ಅವರು ಹೇಳಿರುವ ಮಾತುಗಳು ಗಮನಾರ್ಹವಾಗಿವೆ. "ಸರ್ವಧರ್ಮಗಳಲ್ಲಿ ಸಮಭಾವ ಬಂದರೆ, ನಮ್ಮ ದಿವ್ಯ ಚಕ್ಷು ಅರಳುತ್ತದೆ. ಧರ್ಮಾಂಧತೆ–ದಿವ್ಯದರ್ಶನಗಳಲ್ಲಿ ಉತ್ತರ–ದಕ್ಷಿಣದಷ್ಟು ಅಂತರ. ಧರ್ಮಜ್ಞಾನವಾದರೆ ಈ ಅಂತರಾಯ ಅಳಿದು ಸಮಭಾವ ಹುಟ್ಟುತ್ತದೆ. ಈ ಸಮಭಾವವನ್ನು ವಿಕಾಸಗೊಳಿಸಿದರೆ ನಾವು ನಮ್ಮ ಧರ್ಮವನ್ನು ಹೆಚ್ಚು ಅರಿಯಬಲ್ಲೆವು."

ಕ್ರಿಯಾತ್ಮಕವಾಗಿ ಗಾಂಧೀಜಿ ಈ ನಿಟ್ಟಿನಲ್ಲಿ ನಡೆದುದರ ಫಲವಾಗಿ ಕ್ರೈಸ್ತರು, ಮುಸಲ್ಮಾನರು, ಭಾರತೀಯರ ಭಿನ್ನ ಭಿನ್ನ ಜಾತಿ ಪಂಗಡಗಳವರು ಅವರ ಆತ್ಮೀಯ ಅನುವರ್ತಿಗಳಾದರು. ೧೯೧೦ರಲ್ಲಿ ದಕ್ಷಿಣ ಆಫ್ರಿಕಾದಲ್ಲಿ 'ಫೀನಿಕ್ಸ್' ಆಶ್ರಮ ರೂಪುಗೊಂಡಿತು. ಸಬರಮತಿ ಆಶ್ರಮದಲ್ಲಿ ಜೈನರು, ಬರ್ಮೀಯರು, ಯಹೂದ್ಯರು, ಸಿಂಹಳರು, ಮುಸ್ಲಿಮರು, ಪಾರಸೀಗಳು, ಐರೋಪ್ಯರು, ಅಮೇರಿಕದವರು ಹೀಗೆ ನಾನಾ ಜನಾಂಗದ ನಾನಾ ಧರ್ಮಗಳ ಜನರು ಇದ್ದರು. ಗಾಂಧೀಜಿಯವರ ಆಶ್ರಮದ ಪ್ರಾರ್ಥನೆ ಸರ್ವಧರ್ಮ ಸಮಭಾವವನ್ನು ಆಧರಿಸಿದ್ದಿತು.

ವಿಜ್ಞಾನಯುಗದ ಸವಾಲು–ಉತ್ತರ ಎನ್ನುವ ಕಡೆಯ ಅಧ್ಯಾಯದಲ್ಲಿ ಕನ್‌ಫ್ಯೂಷಿಯಸ್ "ಲಾ–ಓತ್ಸೆ, ಬುದ್ಧ, ಏಸು, ಮೋಸಸ್, ಜರತುಷ್ಟ್ರ, ಮೊಹಮ್ಮದ್, ಸಾಕ್ರೆಟಿಸ್ ಇವರೆಲ್ಲರ ಕುಲಕ್ಕೆ ಸೇರಿದವರು ಗಾಂಧೀಜಿ" ಎಂದು ಹೇಳಿದ್ದಾರೆ. ವಿಜ್ಞಾನ ಯುಗದ ಸವಾಲಾಗಿ ಬಂದ ಐಹಿಕ ಸುಖ ಮತ್ತು ಸ್ವಾರ್ಥಗಳಿಗೆ ಗಾಂಧೀಜಿ ಆಚರಿಸಿ ತೋರಿಸಿ ಹೋದ ಧರ್ಮಪಥ ಸರ್ವಧರ್ಮ ಸಮನ್ವಯಭಾವವೇ ಪರಿಹಾರವೆಂದು ಸೂಚಿಸಿದ್ದಾರೆ.

ಜಿ.ವಿ.ನಾ.ರವರು ಇಡೀ ಗ್ರಂಥದಲ್ಲಿ ಗಾಂಧೀಜಿಯವರ ಅನಿಸಿಕೆಗಳಿಗೆ ಪೂರಕ ಸಾಮಗ್ರಿಯನ್ನು ಒದಗಿಸಿಕೊಂಡು ಅತ್ಯುತ್ತಮ ವ್ಯಾಖ್ಯಾನವನ್ನು ನೀಡಿದ್ದಾರೆ. ಗಾಂಧೀಜಿ ಬದುಕಿದ್ದಾಗಲೇ ಧರ್ಮಾಂಧರಿಗೆ ಬಲಿಯಾದದ್ದು ಲೋಕಕ್ಕೆಲ್ಲ ತಿಳಿದ ಸಂಗತಿ. ಅದಾದ ಮೂವತ್ತು ವರ್ಷಗಳ ಅನಂತರವೂ ಪರಿಸ್ಥಿತಿ ಬದಲಾಯಿಸಿಲ್ಲದಿರುವುದು ಭಾರತದ ದೌರ್ಭಾಗ್ಯ. ಒಂದು ಧರ್ಮ ಮತ್ತೊಂದು ಧರ್ಮದ ಮೇಲೆ ಆಕ್ರಮಣ

ನಡೆಸುವುದು ಇತಿಹಾಸದಲ್ಲಿ ನಡೆದ ಸಂಗತಿ. ಅದು ಅತ್ತ ಹೋಗಲಿ ಎಂದರೆ ಇಂದಿಗೂ ಹಿಂದೂಧರ್ಮದವರೇ ಒಂದು ವರ್ಗದ ಮೇಲೆ ಮತ್ತೊಂದು ವರ್ಗ ಧಾಳಿ ನಡೆಸುವುದು ಅಕ್ಷಮ್ಯ ಅಪರಾಧ. ವಿಲ್ಲಿಪುರಂ, ಬೆಲ್ಚಿ ಸಂಗತಿಗಳು ನಮ್ಮ ಸಮಕಾಲೀನ ಕಪ್ಪು ಗುರುತುಗಳು.

ಇಂತಹ ಪರಿಸ್ಥಿತಿಯಲ್ಲಿ ಗಾಂಧೀಜಿಯವರ ಸರ್ವಧರ್ಮ ಸಮಭಾವದಂತಹ ಕೃತಿಗಳನ್ನು ಜನತೆ ಓದಬೇಕು. ಕಣ್ಣಿಗೆ ಕಟ್ಟಿರುವ ಕತ್ತಲನ್ನು ಕಳೆಯಬೇಕು.

ಖಾದಿ ಮತ್ತು ಭಾರತ ಸಮಾಜದ ಬಗೆಗೆ ಗಾಂಧೀಜಿ ಎನ್ನುವ ಪುಸ್ತಕದಲ್ಲಿ ಜಿ.ವಿ.ನಾ.ರವರು ಖಾದೀ ಬಗೆಗೆ ಚಿಂತನೆ, ಖಾದೀ ಧಾರಣೆ, ಖಾದೀ ಸತ್ವದ ಅರ್ಥಗ್ರಹಣ, ಕಾರ್ಯಾನುಷ್ಠಾನದ ಅವಶ್ಯಕತೆಯನ್ನು ಸಾರುವ ಮೂವತ್ತು ಉಪಯುಕ್ತ ವಿಚಾರಗಳನ್ನು ಆರಿಸಿಕೊಟ್ಟಿದ್ದಾರೆ.

ಖಾದಿ ಅರ್ಥಶಾಸ್ತ್ರ ಗಾಂಧೀಜಿಯವರ ಕೊಡುಗೆ. ಯಂತ್ರೋದ್ಯಮದ ವಿರುದ್ಧ ಗಾಂಧಿಯವರು ಹೋರಾಡಿದರು. ಯಂತ್ರಗಳು ಮಾನವಶ್ರಮವನ್ನು ಕಡಿಮೆ ಮಾಡುತ್ತವೆ. ವ್ಯಕ್ತಿಯ ಅನ್ನವನ್ನು ಕಿತ್ತುಕೊಳ್ಳುತ್ತವೆ. ಸಂಪತ್ತು ಒಂದೆಡೆ ಕೇಂದ್ರೀಕರಿಸಲು ಸಹಾಯ ಮಾಡುತ್ತವೆ. ಆದುದರಿಂದ ನಾನು ಯಂತ್ರೋದ್ಯಮವನ್ನು ವಿರೋಧಿಸುತ್ತೇನೆ ಎಂದರು. ಚರಕ ಯಂತ್ರದ ಬೆಳವಣಿಗೆಯ ಮೇಲೆ ಹತೋಟಿಯನ್ನು ಇಟ್ಟು ಹುಚ್ಚಿದ್ದು ಬೆಳೆಯದಂತೆ ಮಾಡಬಯಸುತ್ತದೆ ಎನ್ನುವುದು ಗಾಂಧೀಜಿಯವರ ಅಭಿಪ್ರಾಯ. ಖಾದೀ ಅಥವಾ ಚರಕಾ ಯಾವುದೇ ಉದ್ಯಮದೊಂದಿಗೆ ಪೈಪೋಟಿ ಮಾಡದೆ ವರ್ಷದ ಆರುತಿಂಗಳ ಕಾಲದ ನಿರುದ್ಯೋಗವನ್ನು ನಿರ್ಮೂಲನ ಮಾಡುತ್ತದೆ. ವ್ಯವಸಾಯಕ್ಕೆ ಅದೊಂದು ಪೂರಕ ಕಸಬು ಎಂದು ಹೇಳಿದರು. ಖಾದೀ ಶಾಸ್ತ್ರದ ಪ್ರಕಾರ ಉತ್ಪಾದನೆ ಮತ್ತು ಬಳಕೆ, ಇವುಗಳು ವಿಕೇಂದ್ರೀಕೃತವಾಗಬೇಕು. ಖಾದೀ ಎಲ್ಲೆಲ್ಲಿ ಉತ್ಪನ್ನವಾದರೂ, ಅದು ಅಲ್ಲಲ್ಲೇ ಬಹಳ ಮಟ್ಟಿಗೆ ಬಳಕೆಗೂ ಬರಬೇಕು.

ಜಿ. ವಿ. ನಾರವರ ಅಭಿಪ್ರಾಯದಂತೆ "ಬಾಪೂ ಖಾದಿ ಬಗೆಗೆ ಹೊಂದಿದ್ದ ಕಲ್ಪನೆ ಸ್ವದೇಶೀ ತತ್ವದ ಒಂದು ಭಾಗ ; ಪ್ರಧಾನ ಭಾಗ. ಅದು ಮಾನವನ ಅರ್ಥ ಜೀವನದ, ಅದಕ್ಕೆ ಅನುಗುಣವಾದ ಕರ್ತವ್ಯದ ವ್ಯಕ್ತಸ್ವರೂಪ ; ಆರ್ಥಿಕ ಮತ್ತು ಔದ್ಯೋಗಿಕ ವ್ಯವಸ್ಥೆ, ಸರ್ವಸಮಾನತೆಗೆ ನೆರವಾಗುವಂತೆ ಸಂಪತ್ತಿನ ವಿಕೇಂದ್ರೀಕರಣ ಇವುಗಳ ಪ್ರತೀಕ ; ಶಾಂತಿ ಸಮೃದ್ಧಿಗಳ, ಅಹಿಂಸಾ ಪ್ರಧಾನ ಸಮಾಜದ ವ್ಯಕ್ತಿಯ ಸಂಕೇತ."

ಗಾಂಧೀಜಿಯ ಅನಿಸಿಕೆಗಳು ಅವರೊಡನೆಯೇ ಹೊರಟುಹೋಗಿವೆ. ಖಾದೀ ಮತ್ತು ಗ್ರಾಮೋದ್ಯೋಗ ಮಂಡಲಗಳು ಅವ್ಯವಹಾರಕ್ಕೆ ಪಕ್ಕಾಗಿವೆ. ಅವರು

ಕಲ್ಪಿಸಿದ ರಾಮರಾಜ್ಯ ಪಲ್ಲಟವಾಗಿ ಸೈತಾನನ ರಾಜ್ಯ ತಲೆಯೆತ್ತಿದೆ. ಇದರಿಂದ ಮುಕ್ತಿ ಹೊಂದಲು ಗಾಂಧೀ ಮಾರ್ಗದ ವಿನಃ ಬೇರೆ ದಾರಿಯೇ ಇಲ್ಲ. ಆದುದರಿಂದ ಈ ಪುಸ್ತಕ ಇಂದಿಗೂ ಸ್ವಾಗತಾರ್ಹ.

'ಸಾಧನಪಥ' ವ್ಯಕ್ತಿಯ ಆತ್ಮೋನ್ನತಿಯನ್ನು ಕುರಿತ ಗ್ರಂಥ. "ಜೀವನದ ಧರ್ಮಕ್ಷೇತ್ರವಾದ ಕುರುಕ್ಷೇತ್ರದಲ್ಲಿ ಬಟ್ಟೆಯರಿಯದೆ ತೊಳಲುವ ಜೀವಿಗಳೆಲ್ಲ ಅರ್ಜುನ ರೂಪಿಗಳೇ. ಒಂದು ಗಳಿಗೆ ಕಣ್ಮುಚ್ಚಿ, ಅಂತರಾತ್ಮನ ಕಡೆಗೆ ಮನೋಬುದ್ಧಿಗಳನ್ನು ಸರಿಸಿದರೆ, ಎಲ್ಲರಿಗೂ ಅವರವರ ಸಾಧನ ಪಥ ಶಂಕೆಗೆಡೆಯಿಲ್ಲದಂತೆ ಗೋಚರಿಸೀತು" ಎನ್ನುವ ನಂಬುಗೆಯಿಂದ ಈ ಕೃತಿಯನ್ನು ಪ್ರಾರಂಭಿಸಿರುವ ಜಿ. ವಿ. ನಾರಾಯಣ ಮೂರ್ತಿಯವರು ಆರಂಭದಲ್ಲಿ ಸಾಧಕ ಯಾರು ಎಂದು ಪ್ರಶ್ನೆ ಹಾಕಿಕೊಂಡು ಸಾಧಕನ ಸಮೀಚೀನಲಕ್ಷಣಗಳನ್ನು ವಿನಯ, ಗುರುವಿಗೆ ವಿಧೇಯತೆ, ಸೇವಾಬುದ್ಧಿಯೆಂದು ಗುರುತಿಸಿದ್ದಾರೆ. ಸಾಧಕನು ಕಾಣುವ ದಿವ್ಯ ಬೆಳಕು ಸತ್ಸಂಗ, ಧ್ಯಾನ, ಪ್ರೇಮಭರಿತ ಸೇವೆಗಳಿಂದ ಸಾಧ್ಯ. ಹಾಗೆ ಸಾಧಕನಾದಾಗ "ಸಾಧಕನ ಜೀವನ ಭಗವಂತನ ಆನಂದದ ಅಭಿವ್ಯಕ್ತಿಗೆ ಸಾಧನವಾಗುತ್ತದೆ. ಅವನ ಕೈಯಿ ಕೊಳಲಾಗುತ್ತದೆ. ಜೀವನದಲ್ಲಿ ದಿವ್ಯ ಬೆಳಕು ಜನಿಸುತ್ತದೆ. ಅದು ಧರಿಸಿ, ಭರಿಸುವ ಶಕ್ತಿಯಾಗುತ್ತದೆ." ಸಾಧಕನ ಆಹಾರ, ನಿದ್ರೆ, ಮಾತು, ಧ್ಯಾನ, ಬ್ರಹ್ಮಚರ್ಯ, ಪ್ರಾರ್ಥನೆ, ಎಲ್ಲರೊಡನೆ ನಡೆದುಕೊಳ್ಳಬೇಕಾದ ರೀತಿ, ಶರೀರ, ಮನಸ್ಸು, ಬುದ್ಧಿ ಮತ್ತು ಆತ್ಮ ಭಗವಂತನಿಗೆ ನಿವೇದಿತವಾಗಬೇಕಾದುದು. ಸರ್ವಂ ಖಲ್ವಿದಂ ಬ್ರಹ್ಮ, ವಾಸುದೇವಃ ಸರ್ವಮಿತಿ, ಈಶಾವಾಸ್ಯಮಿದಂ ಸರ್ವಂ ಎನ್ನುವ ಭಾವನೆ ಬೆಳೆಯಬೇಕಾದದ್ದು, ಸಾಧಕನ ಕೃತಕೃತ್ಯತೆಯ ವಿವರಗಳು ಆ ಬಗೆಯ ೧೬ ವಿಚಾರಗಳನ್ನು ಪಟ್ಟಿಮಾಡಿದ್ದಾರೆ. ಈ ಎಲ್ಲವೂ ಏಣಿಯ ಮೆಟ್ಟಿಲುಗಳಿದ್ದಂತೆ ಸಾಧಕನಿಗೆ ಸಹಾಯ ಮಾಡುತ್ತವೆ. ಸಾಧಕ ಸತ್ಯಸಾಕ್ಷಾತ್ಕಾರ ಹೊಂದುವ ಮೂರು ಹಂತಗಳು ಎಂದರೆ ಭಗವಂತನ ಇಚ್ಛೆಯೇ ಪರಮವಾದುದೆಂದು ಅಂಗೀಕರಿಸಬೇಕು, ಸಾಧಕ ಸದಾ ಸನ್ಮಾರ್ಗದಲ್ಲಿ ಗಮಿಸಬೇಕು, ಎಲ್ಲವೂ ಭಗವಂತನ ಅಂಶ, ಎಲ್ಲದರಲ್ಲಿಯೂ ಭಗವಂತನ ಲೀಲೆಯೇ ಎಂಬ ಅರಿವು ಮೂಡಬೇಕು. ಸಾಧಕನಿಗೆ ಆತ್ಮ ವಿಕಾಸವೇ ಗುರಿ ಎನ್ನುವಲ್ಲಿ "ಭಗವಂತನಲ್ಲಿ ಐಕ್ಯತೆ ಸಾಧಿಸಬೇಕೆಂಬ ಮಹದಾಶಯ ಕರಗತವಾಗಬೇಕಾದರೆ ಅದು ಆತ್ಮಬೋಧದಿಂದ ಮಾತ್ರ ಸಾಧ್ಯ...ಜ್ಞಾನವೆಷ್ಟೇ ಇರಲಿ, ಶಕ್ತಿ ಎಷ್ಟೇ ಇರಲಿ, ಸೌಜನ್ಯವೆಷ್ಟೇ ಇರಲಿ ಅದೊಂದು ಹೊರುವ ಹೊರೆಯಾಗಿರಬಾರದು...ಜ್ಞಾನ, ಅರಿವು ನಿಜಕ್ಕೂ ಉಪಯುಕ್ತವಾಗಬೇಕಾದರೆ, ಖ್ಯಾತಿಯಿಂದ, ಕೀರ್ತಿಶನಿಯಿಂದ ದೂರವಿರಬೇಕು. ಇದು ಆತ್ಮವಿಕಾಸದ ಗುರಿ" ಎಂದಿದ್ದಾರೆ. ಸಾಧಕನ ಜೀವನದ ನಿತ್ಯನಿರಂತರ ಚೈತನ್ಯ–ಸತ್ಯ, ಸಾಧಕನ ಬಾಳಿಗೆ [illegible] ಶರಣಂ ಮಮ, ಧರ್ಮ ಗ್ರಂಥಗಳ ಸಾರ-ಸಾಧನಾ ಜೀವಿಯ ಸಾಧನ, ಏಕಾಂತದ [illegible]. ಸಾಧಕನ ಭೂಷಣ, ಸಾಧಕನ ಅನುಭಾವ, ಸಾಧಕನ ಉದ್ಧಾರದ

ಮಾರ್ಗ–ಸಹನೆ, ತಾಳ್ಮೆ, ಸಾಧಕನ ಸಿದ್ಧಿ–ಭಯಮುಕ್ತಿ, ಸಾಧಕನ ಜೀವನದ ಸವಿ ಎನ್ನುವ ಅಧ್ಯಾಯಗಳಲ್ಲಿ ಮುಂದುವರಿಯುತ್ತದೆ.

ಈ ಗ್ರಂಥದ ಉದ್ದಕ್ಕೂ ದೃಷ್ಟಾಂತಗಳನ್ನು ಕೊಡುತ್ತ, ಸಾಧಕರ ಜೀವನವನ್ನು ನಿರೂಪಿಸುತ್ತ, ತರ್ಕಬದ್ಧ ವಿಚಾರಸರಣಿಯಲ್ಲಿ ಮಂಡಿಸುತ್ತಾ ಹೋಗುತ್ತಾರೆ. ಜಿ. ವಿ. ನಾ. ರವರ ನಿರೂಪಣಾ ವೈಖರಿಯಲ್ಲಿ ಓದುಗ ತಲ್ಲೀನನಾಗುತ್ತಾನೆ. ಏನೇ ಅಭಿಪ್ರಾಯ ಭೇದಗಳಿಗೆ ಅವಕಾಶವಿದ್ದರೂ ಅದನ್ನೆಲ್ಲ ಒಳಗೊಂಡು ಅವುಗಳಿಗೆ ಸೂಕ್ತರೀತಿಯ ಉತ್ತರವನ್ನು ಕೊಡುತ್ತಾ ಹೋಗುತ್ತಾರೆ ಜಿ. ವಿ. ನಾರವರು. 'ಸಾಧಕನ ಜೀವನ ಕೆಲವು ಪ್ರಶ್ನೋತ್ತರಗಳು' ಎನ್ನುವ ಭಾಗ ಇದಕ್ಕೆ ಸಾಕ್ಷಿ. ''ಆತ್ಮಶಕ್ತಿಯೊಂದೇ ನಾಗರಿಕತೆಗೆ ಸತ್ತ್ವನೀಡಿ ಪೋಷಿಸೀತು'' ಎನ್ನುವ ಮಾತನ್ನು ಓದುಗ ಒಪ್ಪುತ್ತಾನೆ.

ಇಂದಿನ ಸಮಾಜದ ನೈತಿಕ ಅಧಃಪತನವನ್ನು ಕಂಡವರಿಗೆ 'ಸಾಧನಪಥ' ಎನ್ನುವ ಜಿ.ವಿ.ನಾರವರ ಈ ಪುಸ್ತಕ ಒಂದು ದಾರಿದೀಪ. ಇಂತಹ ಸಾದನಪಥದಲ್ಲಿ ಯಶಸ್ವಿಯಾಗಿ ನಡೆದ ಜಿ.ವಿ.ನಾರಾಯಣಮೂರ್ತಿಯವರು ನೂರುಕಾಲ ಬದುಕಲಿ ಎಂದು ಭಗವಂತನಲ್ಲಿ ಪ್ರಾರ್ಥನೆ.

ಪರೀಕ್ಷೆ

# ಜಿ. ವಿ. ನಾರಾಯಣಮೂರ್ತಿ ಅವರ ಭಾಷಾಂತರಗಳು

**ಪ್ರಧಾನ್ ಗುರುದತ್ತ**

ಶ್ರೀ ಜಿ. ವಿ. ನಾರಾಯಣಮೂರ್ತಿಯವರು ಪೂರ್ಣವಾಗಿ ಅಥವಾ ಭಾಗಶಃ ಭಾಷಾಂತರಿಸಿರುವ ಒಂಬತ್ತು ಗ್ರಂಥಗಳು ನನ್ನ ಗಮನಕ್ಕೆ ಬಂದಿವೆ. ಇವುಗಳಲ್ಲಿ ಆರು ಗಾಂಧೀ ಸ್ಮಾರಕ ನಿಧಿಗಾಗಿ ಅವರು ಬೇರೆ ಬೇರೆ ಕಾಲಗಳಲ್ಲಿ ಭಾಷಾಂತರಿಸಿರುವಂಥವು. ಅವು ಯಾವುವೆಂದರೆ 'ಧರ್ಮ-ನೀತಿ' (1958), 'ಸಮಾಜಧರ್ಮ' (1959), 'ಪತ್ರಗುಚ್ಛ'-೨(1960), 'ಮಹಿಳೆಯರು' (1960), 'ಪತ್ರಗುಚ್ಛ-೩' (1961), 'ಸತ್ಯಾಗ್ರಹ'(1970). ಇವೆಲ್ಲ ಗಾಂಧೀಜಿಯವರ ಬರೆಹಗಳ ಕನ್ನಡ ಆವೃತ್ತಿಗಳು. 'ಮಹಾತ್ಮಾ ಗಾಂಧೀ' (1963) ತಮ್ಮ ಸ್ವಂತ ಇಚ್ಛೆ ಮತ್ತು ಪ್ರಯತ್ನಗಳಿಂದ ಉಷಾಸಾಹಿತ್ಯ ಮಾಲೆಯ ಮೂಲಕ ಅವರು ಹೊರತಂದಿರುವ ಜೀವನ ಚರಿತ್ರೆ. ಇದು ಬಿ. ಆರ್. ನಂದ ಅವರ ಸುಪ್ರಸಿದ್ಧ ಆಂಗ್ಲ ಕೃತಿಯ ಕನ್ನಡ ರೂಪ. 'ರಾಜ್ಯಶಾಸ್ತ್ರ ಸಾರ' (1971) ಮತ್ತು 'ಭಾರತೀಯ ಇತಿಹಾಸ ಸಮೀಕ್ಷೆ' (1975) ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಗಾಗಿ ಅವರು ಮಾಡಿಕೊಟ್ಟಿರುವ ಭಾಷಾಂತರಗಳು. ಇವು ಕ್ರಮಶಃ ಎ. ಅಪ್ಪಾದೊರೈ ಹಾಗೂ ಕೆ. ಎಂ. ಪಣಿಕ್ಕರ್ ಅವರ ಪ್ರಸಿದ್ಧ ಗ್ರಂಥಗಳ ಕನ್ನಡ ಆವೃತ್ತಿಗಳು. ಇವುಗಳೇ ಅಲ್ಲದೆ ಕರ್ನಾಟಕ ವಿಶ್ವವಿದ್ಯಾನಿಲಯಕ್ಕಾಗಿ ಅವರು ಮತ್ತೊಂದು ಗ್ರಂಥವನ್ನು ಭಾಷಾಂತರಿಸಿದ್ದಾರೆಂದು ಕೇಳಿದ್ದೇನೆ.

* * *

'ಗಾಂಧೀ ಗ್ರಂಥಮಾಲೆ'ಯ ಅಂಗವಾಗಿ ಹೊರ ಬಂದಿರುವ 'ಧರ್ಮ-ನೀತಿ'ಗ್ರಂಥದಲ್ಲಿ ದೇಶಪಾಂಡೆ ಮನೋಹರರಾಯರು ಹಾಗೂ ಸಿದ್ದವನಹಳ್ಳಿ ಕೃಷ್ಣಶರ್ಮರು ಇವರ ಸಹ ಭಾಷಾಂತರಕಾರರಾಗಿದ್ದಾರೆ, 'ಸಮಾಜಧರ್ಮ' ಗ್ರಂಥದಲ್ಲಿ ಸಿದ್ದವನಹಳ್ಳಿ ಕೃಷ್ಣಶರ್ಮ ಹಾಗೂ ವಿ. ಬಿ. ನಾಯಕ್ ಅವರೂ 'ಪತ್ರಗುಚ್ಛ'-೩ ಹಾಗೂ ಮಹಿಳೆಯರು ಗ್ರಂಥಗಳಲ್ಲಿ ಸಿದ್ದವನಹಳ್ಳಿ ಕೃಷ್ಣಶರ್ಮರೂ ಇವರ ಸಹ ಭಾಷಾಂತರಕಾರರಾಗಿದ್ದಾರೆ. 'ಧರ್ಮ-ನೀತಿ' ಗ್ರಂಥವಲ್ಲಿ 'ಧರ್ಮ-ನೀತಿ' ವಿಭಾಗದ ಮೊದಲ ಹನ್ನೆರಡು ಅಧ್ಯಾಯಗಳನ್ನೂ ಮತ್ತು 'ರಾಮ ನಾಮ' ಎಂಬ ಭಾಗವನ್ನೂ ನಾರಾಯಣಮೂರ್ತಿಯವರು ಕನ್ನಡಿಸಿಕೊಟ್ಟಿದ್ದು, ''ಈ ಭಾಗಗಳನ್ನು ಪ್ರೊ. ಎಸ್. ವಿ. ರಂಗಣ್ಣನವರು ಪರಿಷ್ಕರಿಸಿಕೊಟ್ಟಿದ್ದಾರೆ'' ಎಂದು ಪ್ರಧಾನ ಸಂಪಾದಕರು ದಾಖಲಿಸಿದ್ದಾರೆ. 'ಸಮಾಜಧರ್ಮ'ದಲ್ಲಿ ಸಮಾಜದ ಸ್ವರೂಪ. 'ಹಿಂದೂಸಮಾಜದ ಸಮಸ್ಯೆಗಳು', 'ಸಮಾಜದ ಕೆಲವು ಅನಿಷ್ಟ ವ್ಯಸನಗಳು' ಎಂಬ ೧, ೩, ೪ ಮತ್ತು ೫ನೆಯ ಭಾಗಗಳನ್ನೂ, ಉಪಸಂಹಾರ ಭಾಗವನ್ನೂ ಮೂರ್ತಿಯವರು ಕನ್ನಡಿಸಿ ಕೊಟ್ಟಿದ್ದಾರೆ, 'ಪತ್ರಗುಚ್ಛ -೩'

ಗ್ರಂಥದಲ್ಲಿನ ೧ರಿಂದ ೯ರ ವರೆಗಿನ ಭಾಗಗಳನ್ನೂ 'ಮಹಿಳೆಯರು' ಗ್ರಂಥದಲ್ಲಿನ ಮೊದಲ ಎರಡು ಭಾಗಗಳನ್ನೂ ಮೂರ್ತಿಯವರು ಕನ್ನಡಿಸಿದ್ದಾರೆ. 'ಪತ್ರಗುಚ್ಛ, -೨' ಮತ್ತು 'ಸತ್ಯಾಗ್ರಹ' ಸಂಪೂರ್ಣವಾಗಿ ಮೂರ್ತಿಯವರ ಭಾಷಾಂತರಗಳು.

'ಧರ್ಮ–ನೀತಿ' ಮುಖ್ಯವಾಗಿ 'ಯಂಗ್ ಇಂಡಿಯಾ.' 'ಹರಿಜನ', 'ನೀತಿಧರ್ಮ,' 'ಮಂಗಳ ಪ್ರಭಾತ', 'ಆತ್ಮಕಥೆ'ಯಂಥ ಆಕರಗಳಿಂದ, 'ಪ್ರಾರ್ಥನಾ ಪ್ರವಚನ,' 'ಪ್ರಾರ್ಥನೋತ್ತರ ಭಾಷಣಗಳು,' 'ಭಾಷಣಗಳೂ ಬರಹಗಳೂ', 'ಸರ್ವೋದಯ,' 'ಆಶ್ರಮ ನಿಯಮಗಳ ಅನುಷ್ಠಾನ' (ಪರಿಶಿಷ್ಟ), 'ಆರೋಗ್ಯಮಾರ್ಗದರ್ಶಿನಿ' 'ಮಹದೇವ ದೇಸಾಯಿ ದಿನಚರಿ', 'ಸತ್ಯಾಗ್ರಹ ಕರಪತ್ರ' ಹಾಗೂ 'ಸಬರಮತಿ ಅಂತರರಾಷ್ಟ್ರೀಯ ಧರ್ಮಗಳ ಸಮ್ಮೇಳನ ವರದಿ'ಯಂಥ ಇತರ ಆಕರಗಳಿಂದ ಆಯ್ದ ಸಣ್ಣ ದೊಡ್ಡ ತುಣುಕುಗಳ ಕನ್ನಡೀಕರಣ. ಇದರ 'ರಾಮನಾಮ' ವಿಭಾಗವೂ ಇದೇ ಬಗೆಯ ಸಂಕಲನ. ಇವರಲ್ಲಿ 'ಯಂಗ್ ಇಂಡಿಯಾ' ಮತ್ತು 'ಹರಿಜನ' ಪತ್ರಿಕೆಗಳಿಂದ ಆಯ್ದ ಭಾಗಗಳೇ ಹೆಚ್ಚಾಗಿವೆ. ಜೊತೆಗೆ 'ನವಜೀವನ,' 'ಬ್ರಹ್ಮಚರ್ಯವೋ ಕಾಮ ಸಾಧನೆಯೋ, ಪುಸ್ತಕದ ಮುನ್ನುಡಿ, 'ಪತ್ರಿಕಾವರದಿ' ಮುಂಬೈ, ಪೂನಾ, ನವದೆಹಲಿ, ಮಸ್ಸೋರಿ, ಸೇವಾಗ್ರಾಮ, ಉರುಳಿ, ಸಿಮ್ಲಾ ಮೊದಲಾದ ಕಡೆ ನಡೆದ ಗಾಂಧೀಜಿಯವರ 'ಪ್ರಾರ್ಥನೋತ್ತರ ಪ್ರವಚನಗಳು' ಹಾಗೂ ಎರವಾಡಾ (ದೋ. ಯರವಡಾ) ದಿಂದ ಬರೆದ ಎರಡು ಪತ್ರಗಳು ಹಾಗೂ ಒಂದು ಪ್ರಶ್ನೋತ್ತರದ ಸಂದರ್ಭದಂಥ ಇತರ ಆಕರಗಳಿಂದ ಆಯ್ದ ತುಣುಕುಗಳೂ ಇವೆ.

'ಸಮಾಜಧರ್ಮ'ವೂ ಇದೇ ಬಗೆಯ ಸಂಕಲನ ಗ್ರಂಥ. ಮೇಲೆ ಹೇಳಿದಂಥ ಆಕರಗಳ ಜೊತೆಗೆ ಇದರಲ್ಲಿ 'ಮಹಾತ್ಮರ ಮನೋರಂಗ,' 'ಮಹಾತ್ಮ ಗಾಂಧಿಯವರ ಭಾಷಣಗಳು ಮತ್ತು ಲೇಖನಗಳು,' 'ಮಹಾತ್ಮಾ ಗಾಂಧೀ, ಪ್ರಬಂಧಗಳು ಮತ್ತು ಚಿಂತನೆಗಳು' 'ಅಮೃತ್ ಬಜಾರ್ ಪತ್ರಿಕೆ'ದಂಥ ಗ್ರಂಥಗಳಿಂದ ಹಾಗೂ ಪತ್ರಿಕೆಗಳಿಂದ ಉದ್ಧರಿಸಿದ ಭಾಗಗಳಿವೆ. 'ಪತ್ರಗುಚ್ಛ–೩' ಗ್ರಂಥದಲ್ಲಿನ ೧ ಹಾಗೂ ೪ ಮತ್ತು ೫ನೆಯ ಭಾಗದಲ್ಲಿನ ಪತ್ರಗಳನ್ನು ಕ್ರಮಶಃ ವಾಲ್‌ಜಿ ಗೋವಿಂದಜೀ ದೇಸಾಯಿಯವರ 'Selected letters–First Series' (ಆರಿಸಿದ ಪತ್ರಗಳು–ಮೊದಲನೆಯ ತಂಡ) ಹಾಗೂ ಮಹಾದೇವ ದೇಸಾಯಿಯವರ 'ದಿನಚರಿ'ಯಿಂದ ಆರಿಸಿಕೊಳ್ಳಲಾಗಿದೆ. ಉಳಿದ ಆರು ಭಾಗಗಳಿಗೆ ಆಕರಗಳನ್ನು ಸೂಚಿಸಿಲ್ಲ. ವಿವಿಧ ಮೂಲಗಳಿಂದ ಅವುಗಳನ್ನು ಸಂಗ್ರಹಿಸಿರುವುದೇ ಬಹುಶಃ ಇವಕ್ಕೆ ಕಾರಣವಾಗಿರಬಹುದು. ಆಶ್ಚರ್ಯವೆಂದರೆ 'ನಿವೇದನ' ಭಾಗದಲ್ಲಿನ ಮುಪ್ಪತ್ತು ಉಲ್ಲೇಖಗಳಿಗೆ ಆಕರಗಳನ್ನು ಸೂಚಿಸಿರುವ ಸಂಪಾದಕರು ಈ ಆರು ಭಾಗಗಳಿಗೆ (ಹಾಗೂ ಕೊನೆಯದಕ್ಕೂ) ಆಕರಗಳನ್ನು ಸೂಚಿಸದಿರುವುದು. ಈ ಸಂಕಲನದ ಒಂದು ವೈಶಿಷ್ಟ್ಯವೆಂದರೆ, ಇವುಗಳಲ್ಲಿ ಅನೇಕ ಪತ್ರಗಳ ಹಿನ್ನೆಲೆಯನ್ನು ಸೂಚಿಸಿರುವುದು ಹಾಗೂ ಕೆಲವೊಂದು ಸಂದರ್ಭ ಸಂಗತಿ

ಹಾಗೂ ವ್ಯಕ್ತಿಗಳ ಬಗೆಗೆ ಟಿಪ್ಪಣಿಗಳನ್ನು ಕೊಟ್ಟಿರುವುದು. ಕನ್ನಡಿಗರ ದೃಷ್ಟಿಯಿಂದ ಮಹತ್ತ್ವದ ಪತ್ರಗಳೆಂದರೆ. ತಮ್ಮ ಆರೋಗ್ಯ ಸುಧಾರಣೆಗೆಂದು ಗಾಂಧೀಜಿಯವರು ನಂದೀಬೆಟ್ಟದಲ್ಲಿ ತಂಗಿದ್ದಾಗ ಬರೆದ ಪತ್ರ ಹಾಗೂ 'ಕುಮಾರಾ ಪಾರ್ಕ್'ನಿಂದ ಬರೆದ ಪತ್ರಗಳು ಹಾಗೂ ಕರ್ನಾಟಕದ ಗಾಂಧೀವಾದಿಗಳಲ್ಲಿ ಅಗ್ರಗಣ್ಯರಾದ ರಂಗನಾಥ ರಾವು ಚಂದ್ರ ದಿವಾಕರ ಅವರಿಗೆ ಬರೆದ ಪತ್ರಗಳು (ಕ್ರಮಶಃ ೮ ಮತ್ತು ೯ನೆಯ ಭಾಗಗಳು)

'ಮಹಿಳೆಯರು' ಗ್ರಂಥ 'ಪತ್ರಗುಚ್ಛ–೩'ರಲ್ಲಿಯ ಕೊರತೆಯನ್ನು ದೂರಮಾಡಿ ಕೊಂಡಿದೆ. ಇದರಲ್ಲಿನ ೧೨೧ ಸಣ್ಣ ದೊಡ್ಡ ತುಣುಕುಗಳಿಗೆ 'ಯಂಗ್–ಇಂಡಿಯಾ' ಮತ್ತು 'ಹರಿಜನ' ಪತ್ರಿಕೆಗಳು ಪ್ರಮುಖ ಮೂಲವಾಗಿದ್ದರೆ, ಬೊಂಬಾಯಿಯ ಭಗಿನೀ ಸಮಾಜದಲ್ಲಿ ಮಾಡಿದ್ದ ಭಾಷಣಗಳು ಹಾಗೂ 'ಸಿಂಹಳದಲ್ಲಿ ಗಾಂಧೀಜಿ ಯೊಂದಿಗೆ' ವರದಿಗಳು ಇತರ ಉಪಮೂಲಗಳಾಗಿವೆ.

'ಪತ್ರಗುಚ್ಛ–೨'ರಲ್ಲಿ ವಸ್ತು ವಿಷಯ ಮೂಲ ಸೂಚಿಯ ಕೊರತೆ ನಮಗೆ ಎದುರಾಗುತ್ತದೆ. ಆದರೆ 'ಸತ್ಯಾಗ್ರಹ'ದಲ್ಲಿ ಇಂಥ ಲೋಪಕ್ಕೆ ಎಡೆ ದೊರೆತಿಲ್ಲ. ಯಂಗ್ ಇಂಡಿಯಾ ಮತ್ತು 'ಹರಿಜನ' ಪತ್ರಿಕೆಗಳ ಜೊತೆಗೆ, 'ಗಾಂಧೀಜಿಯವರ ಲೇಖನ ಗಳು ಭಾಷಣಗಳು' 'ಎರವಾಡ ಮಂದಿರ', 'India's case for swaraj' 'ದಕ್ಷಿಣ ಆಫ್ರಿಕಾದಲ್ಲಿ ಸತ್ಯಾಗ್ರಹ.' 'A pilgrimage for peace.' 'ಮಹಾತ್ಮ ಗಾಂಧಿಯವರ ಭಾಷಣಗಳು ಮತ್ತು ಬರಹಗಳು' 'ಹಿಂದ್ ಸ್ವರಾಜ್.' ಇಂಡಿಯನ್ ಒಪೀನಿಯನ್,' 'ಆತ್ಮಕಥೆ,' ತೆಂಡೂಲ್ಕರ್ ಅವರ 'ಮಹಾತ್ಮ' ಸಂಪುಟಗಳು ಮೊದ ಲಾದ ಮೂಲಗಳಿಂದ ವಿಷಯ ಸಂಗ್ರಹ ಮಾಡಲಾಗಿದೆ.

* * *

ಇಂಥ ಗ್ರಂಥಗಳನ್ನು ಕನ್ನಡಿಗರಿಗೆ ಒದಗಿಸಿಕೊಡುವ ಸಂದರ್ಭದಲ್ಲಿ 'ಗಾಂಧೀ ಸ್ಮಾರಕ ನಿಧಿ' ಇರಿಸಿಕೊಂಡಿದ್ದ ಉದ್ದೇಶವೇನೆಂಬುದನ್ನು, ಈ ಮಾಲೆಯ ಅಧ್ಯಕ್ಷರು ಹೀಗೆವಿವರಿಸಿದ್ದಾರೆ. "ಗಾಂಧೀಜಿಯವರ ಪ್ರಧಾನವಾದಅಭಿಪ್ರಾಯಗಳನ್ನು ಸಮಂಜಸ ವಾದ ರೀತಿಯಲ್ಲಿ ಕೂಡಿಸಿ ಮುಖ್ಯವಾದ ಶೀರ್ಷಿಕೆಗಳಲ್ಲಿ ಅವನ್ನು ಅಳವಡಿಸಿ ಕನ್ನಡಿಸಿ ಪ್ರಕಟಮಾಡುವುದಾಗಿದೆ... ಕೆಲವು ಗ್ರಂಥಗಳು ಗಾಂಧೀಜಿ ಅವರ ಅಭಿಪ್ರಾಯಗಳನ್ನು 'ಯಂಗ್ ಇಂಡಿಯಾ' ಮತ್ತು ಹರಿಜನ' ಪತ್ರಿಕೆಗಳಿಂದ ಆಯ್ದ ಲೇಖನಗಳ ಸಂಕಲನ ಗಳಾಗಿವೆ......**ಗಾಂಧೀಜಿಯವರ ಸರಳ ಮತ್ತು ರಸವತ್ತಾದ ಬರಹಗಳನ್ನು ಭಾಷಾಂತರಿಸುವುದು ಎಷ್ಟು ಕಷ್ಟವೆಂಬುದನ್ನು ಹೇಳಬೇಕಾಗಿಲ್ಲ. ಆದರೂ ಈ ಅನುವಾದಕರು ಗಾಂಧೀಜಿಯವರ ಮನೋಗತವನ್ನು ಅರಿತವರು ಆಗಿ ರುವುದರಿಂದ ಈ ಅನುವಾದಗಳು ಜನಪ್ರಿಯವಾಗಬಲ್ಲವೆಂದು ಆಶಿಸ ಲಾಗಿದೆ,"**

ಈ ಗ್ರಂಥಗಳು ಹೀಗೆ ಬಹು ಆಕರಗಳಿಂದ ಸಂಕಲಿತವಾಗಿರುವುದರಿಂದ ಆ ಎಲ್ಲ ಆಕರಗಳನ್ನು ಸಂಗ್ರಹಿಸಿ, ಭಾಷಾಂತರದ ದೃಷ್ಟಿಯಿಂದ ಅಭ್ಯಸಿಸುವುದು ಕಷ್ಟ ಸಾಧ್ಯ ವಾದ ಕೆಲಸ. ಭಾರತ ಸರ್ಕಾರದ ವತಿಯಿಂದ ಪ್ರಕಟವಾಗಿರುವ ಗಾಂಧೀಜಿಯವರ **'collected works'**ನ ಸಂಪುಟಗಳ ಸಂಖ್ಯೆ ಹಾಗೂ ಗಾಂಧೀ ಸ್ಮಾರಕ ನಿಧಿಯ ವರು ಕೊಟ್ಟಿರುವ ಅನುಕ್ರಮ ಸಂಖ್ಯೆಗಳು ಬೇರೆಬೇರೆಯಾಗಿರುವುದರಿಂದ, ಈ ಮೂಲಗಳನ್ನು ಅಲ್ಲಿ ಅರಸುವುದೂ ಸಾಧ್ಯವಾಗಲಿಲ್ಲ. ಹೀಗಾಗಿ, ಈ ಸಂಪುಟಗಳ ಭಾಷಾಂತರದ ಯಶಸ್ಸು ಅಥವಾ ಸಮಸ್ಯೆಗಳ ಅರಿವಿಗೆ ಅವುಗಳ ಓದಿಸಿಕೊಳ್ಳುವಿಕೆ ಯನ್ನೂ, ಆಯ್ದ ಒಂದೆರಡು ಭಾಗಗಳ ಅನುವಾದದ ಮಾದರಿ ಪರೀಕ್ಷಣ ವಿಧಾನವನ್ನು ಇಲ್ಲಿ ಆಶ್ರಯಿಸಬೇಕಾಗಿ ಬಂದಿದೆ.

ಈಗಾಗಲೇ ಸೂಚಿಸಿರುವಂತೆ, 'ಧರ್ಮ ನೀತಿ' ಗ್ರಂಥದ ಎರಡು ಭಾಗಗಳನ್ನು ಪ್ರೊ.ಎಸ್. ವಿ. ರಂಗಣ್ಣನವರು ಪರಿಷ್ಕರಿಸಿದ್ದಾರೆ. ಮೂರ್ತಿಯವರ ಉಳಿದ ಯಾವ ಭಾಷಾಂತರವೂ ಈ ಬಗೆಯ ಪರಿಷ್ಕರಣಸೌಲಭ್ಯವನ್ನು ಪಡೆದುತಿಲ್ಲ. ಆದರೆ, ಭಾಷಾಂತ ರದ ಗುಣಗಳಲ್ಲಿ ಒಂದಾದ 'ಓದಿಸಿಕೊಳ್ಳುವಿಕೆ'ಯಲ್ಲಿ ಅವರ ಭಾಷಾಂತರಗಳು ಬಹು ಮಟ್ಟಿನ ಯಶಸ್ಸುಗಳಿಸುತ್ತವೆಂಬುದು ಮೊದಲಿಗೇ ನಮ್ಮ ಅನುಭವಕ್ಕೆ ಬರುವ ಸಂಗತಿ. ಉದಾಹರಣೆಗೆ, ಅವರ ಮೊದಲ ಪ್ರಕಟಿತ ಭಾಷಾಂತರವಾದ 'ಧರ್ಮ-ನೀತಿ'ಯಲ್ಲಿನ ಈ ಭಾಗವನ್ನಾಗಲೀ–

> "ಇತರರನ್ನು ಮತಾಂತರಗೊಳಿಸಲು ನಾನು ಪ್ರಯತ್ನಗೈಯುವುದಿಲ್ಲ. ಅಷ್ಟೇ ಅಲ್ಲದೆ ನನ್ನ ಧರ್ಮವನ್ನು ಯಾರಾದರೂ ಅವಲಂಬಿಸಬೇಕೆಂದು ರಹಸ್ಯವಾಗಿ ಕೂಡ ಪ್ರಾರ್ಥಿಸುವುದಿಲ್ಲ. ನನ್ನ ಪಾಲಿಗೆ ನನ್ನ ಪತ್ನಿ ಪ್ರಪಂಚದಲ್ಲೆಲ್ಲ ಅತ್ಯಂತ ಸುಂದರಿಯಾಗಿರುವಂತೆ, ಅಹಿಂಸಾ ಸಂದೇಶದೊಡನೆ ಕೂಡಿರುವ ಹಿಂದೂ ಧರ್ಮವು ನನಗೆ ಅತ್ಯಂತ ವೈಭವದ ಧರ್ಮವೆನ್ನಿಸಿದೆ." (ಪು. ೩೦-೩೧)

ಅಥವಾ, 'ಸಮಾಜಧರ್ಮ'ದಲ್ಲಿನ ಈ ಭಾಗವನ್ನಾಗಲೀ–

> "ಹಿಂದೂ ಧರ್ಮವನ್ನು ಬಿಟ್ಟು, ಇಸ್ಲಾಂ ಅಥವಾ ಕ್ರೈಸ್ತಮತಕ್ಕೆ ಒಟ್ಟೊಟ್ಟಾಗಿ ಮತಾಂತರ ಹೊಂದುವುದು ಹರಿಜನರಿಗೆ ಸೂಚಿಸಲಾದ ಪರಿಹಾರಗಳಲ್ಲಿ ಒಂದು. ಒಂದು ಮತವನ್ನು ತ್ಯಜಿಸುವುದರಿಂದ ಐಹಿಕ ಉನ್ನತಿ ಆಗುವುದಾದರೆ ನಿಸ್ಸಂದೇಹವಾಗಿ ನಾನು ಅದನ್ನು ಸಲಹೆ ಮಾಡೇನು. ಆದರೆ ಮತವು ಹೃದಯಕ್ಕೆ ಸಂಬಂಧಪಟ್ಟುದು....ಆದುದರಿಂದ ಮತಾಂತರ ಯಾವ ರೀತಿಯಲ್ಲೂ ಒಂದು ಪರಿಹಾರವಲ್ಲವೆಂದು ನನ್ನ ಅಭಿಪ್ರಾಯ... ...ಹಿಂದೂ ಧರ್ಮವನ್ನು ತ್ಯಜಿಸುವೆವೆಂದು ಬೆದರಿಕೆಹಾಕುವವರು ತಮ್ಮ ಧರ್ಮದ್ರೋಹಿಗಳೆಂದು ನನ್ನ ಅಭಿಪ್ರಾಯ (೧೯೦-೯೧), ಅಥವಾ 'ಪತ್ರಗುಚ್ಛ-೨'ರಲ್ಲಿ ಬರುವ ಗಾಂಧೀಜಿಯವರ ಈ ಅನಿಸಿಕೆಯನ್ನಾಗಲೀ–

"ಯಾರೇ ಆಗಲಿ ೧೨೫ ವರ್ಷಗಳ ವರೆಗೆ ಬದುಕಿ ಕರ್ಮಮಾಡಲು ಆಶಿಸಬೇಕು. ಆದರೆ, ಬಾಳು–ಸಾವುಗಳಿಗೆ ಭಗವಂತನೊಬ್ಬನೇ ಪ್ರಭು" (೧೯೫)
ಅಥವಾ ಮಹಿಳೆಯರಿಗೆ ನೈಜ ಪ್ರೇಮದ ಸ್ವರೂಪವನ್ನು ನಿರೂಪಿಸುವ, 'ಮಹಿಳೆಯರು' ಗ್ರಂಥದಲ್ಲಿನ ಈ ಉತ್ತರವಾಗಲೀ–

"ನನ್ನ ಆದರ್ಶ ಸತಿ ಸೀತೆ, ಆದರ್ಶ ಪತಿ ರಾಮಚಂದ್ರ. ಆದರೆ ಸೀತೆ ರಾಮನಿಗೆ ಗುಲಾಮಳಾಗಿರಲಿಲ್ಲ; ಅಥವಾ ಒಬ್ಬರು ಮತ್ತೊಬ್ಬರಿಗೆ ಪರಸ್ಪರ ಗುಲಾಮರಾಗಿದ್ದರು. ರಾಮ ಸೀತೆಗೆ ಯಾವಾಗಲೂ ದಾಕ್ಷಿಣ್ಯಪರನಾಗಿದ್ದನು. ನೈಜಪ್ರೇಮವಿರುವೆಡೆ ಇಂಥ ಪ್ರಶ್ನೆಯೇ ಉದ್ಭವಿಸದು. ಎಲ್ಲಿ ನೈಜಪ್ರೇಮವಿಲ್ಲವೋ ಅಲ್ಲಿ ಐಕ್ಯತೆ ಎಂದೂ ಇರುವುದಿಲ್ಲ." (ಪು. ೫೯)

ಅಥವಾ ಹಂಟರ್ ಸಮಿತಿಯ ಮುಂದೆ ಗಾಂಧೀಜಿ ಸಾಕ್ಷ್ಯ ನೀಡಿದ ಸಂದರ್ಭದಲ್ಲಿ ನಡೆದ ಪ್ರಶ್ನೋತ್ತರಗಳು 'ಸತ್ಯಾಗ್ರಹ' ಗ್ರಂಥದಲ್ಲಿ ಹೀಗೆ ಮೂಡಿರುವುದನ್ನಾಗಲೀ–

"ಲಾರ್ಡ್‌ಹಂಟರ್ : ಶ್ರೀ ಗಾಂಧಿಯವರೇ, ನೀವು ಸತ್ಯಾಗ್ರಹ ಚಳುವಳಿಯ ಕರ್ತರೆಂದು ನಾನು ಭಾವಿಸುತ್ತೇನೆ.

ಗಾಂಧೀ : ಹೌದು ಸ್ವಾಮಿ.

ಲಾ. ಹಂ : ಅದನ್ನು ಸಂಗ್ರಹವಾಗಿ ವಿವರಿಸುವಿರಾ ?

ಗಾಂ : ಅದು ಹಿಂಸಾ ವಿಧಾನಗಳನ್ನು ತ್ಯಜಿಸುವ ಚಳುವಳಿ. ಪೂರ್ಣವಾಗಿ ಸತ್ಯದ ಆಧಾರದ ಮೇಲೆ ನಿಂತಿದೆ. ಕೌಟುಂಬಿಕ ಧರ್ಮವನ್ನು ರಾಜಕೀಯ ಕ್ಷೇತ್ರದಲ್ಲಿ ವಿಸ್ತರಣ ಮಾಡುವ ರೀತಿಯೇ ಆಗಿದೆ. ಈ ಚಳುವಳಿಯೇ ಭಾರತದಾದ್ಯಂತ ಹರಡುತ್ತಿರುವ ಹಿಂಸಾಶಕ್ತಿಯನ್ನು ಅನ್ಯಾಯ ಪರಿಹಾರಕ್ಕಾಗಿ ನಾಶಗೊಳಿಸಬಲ್ಲದೆಂದು ನನ್ನ ಅನುಭವಜನ್ಯ ನಿರ್ಧಾರ" (ಪು. ೧೪೯–೫೦).

—ಕಂಡಾಗ, ಕನ್ನಡದಲ್ಲಿ ಗಾಂಧೀಜಿಯವರ ಚಿಂತನೆಗಳು ಸಹಜವಾಗಿ ಮೂಡಿವೆ ಎಂಬ ಅನುಭವ ನಮಗೆ ಉಂಟಾಗದಿರದು. ಅಂದರೆ ಈ ಎಲ್ಲ ಕೃತಿಗಳೂ ಬಹುಮಟ್ಟಿಗೆ ಓದಿಸಿಕೊಳ್ಳುಕೆವಿಯ ಪರೀಕ್ಷೆಯಲ್ಲಿ ಯಶಸ್ವಿಯಾಗಿ ಉತ್ತೀರ್ಣವಾಗುತ್ತವೆ.

ಆದರೆ, ಯಾವುದೇ ಭಾಷಾಂತರದ ವಿಷಯದಲ್ಲಿ ಓದಿಸಿಕೊಳ್ಳುವಿಕೆ ಒಂದು ಗುಣ ಮಾತ್ರ; ಕನಿಷ್ಠತಮವಾಗಿ ಓದುಗರು ನಿರೀಕ್ಷಿಸುವ ಒಂದು ಅಂಶ ಮಾತ್ರ, ಹೀಗಾಗಿ, ಮೂಲದ ಇತರ ಗುಣಗಳನ್ನು ಭಾಷಾಂತರಗಳು ಎಷ್ಟರಮಟ್ಟಿಗೆಆತ್ಮೀಕರಿಸಿಕೊಂಡಿವೆ ಎಷ್ಟರ ಮಟ್ಟಿಗೆ ಮೂಲಕ್ಕೆ ಅವು ವಿಧೇಯವಾಗಿವೆ. ವಿಧೇಯವಾಗಿದ್ದೂ ಎಷ್ಟರ ಮಟ್ಟಿನ ಸಹಜತೆಯನ್ನು ಅವು ಮೆರೆದಿವೆ ಎಂಬ ಸಂಗತಿಗಳ ಒರೆಗಲ್ಲಿನಲ್ಲಿ ಅವನ್ನು ಪರೀಕ್ಷಿಸುವುದು ಅಗತ್ಯವಾಗುತ್ತದೆ.

ಈ ಮೊದಲೇ ವಿವರಿಸಿರುವಕಾರಣಗಳಿಂದಾಗಿ, ಮಾದರಿ ಪರೀಕ್ಷಣ ವಿಧಾನವನ್ನು ಆಶ್ರಯಿಸಿ ಈ ಭಾಷಾಂತರಗಳ ಯಶಸ್ಸನ್ನು ಅಂದಾಜುಮಾಡುವ ಸಲುವಾಗಿ 'ಸತ್ಯಾಗ್ರಹ' ಸಂಪುಟದಲ್ಲಿನ ಒಂದೆರಡು ಪ್ರಸಂಗಗಳನ್ನು ಆಯ್ದುಕೊಂಡಿದೆ. ಈ ಆಯ್ಕೆಯೂ ಅನುದ್ದಿಷ್ಟ ಅಥವಾ ಯಾದೃಚ್ಛಿಕವಾದುದು—ಅಂದರೆ, ಈ ಪುಸ್ತಕಗಳನ್ನು ತೆರೆದಾಗ ತಾನಾಗಿಯೇ ಕಣ್ಣಿಗೆ ಬಿದ್ದ ಸಂದರ್ಭಗಳನ್ನು ಹೋಲಿಸಿ ನೋಡುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

'Satyagraha' ಡೆಮಿ ೧/೮ ಆಕಾರದ 387 ಪುಟಗಳ ವರೆಗೆ ವಿಸ್ತರಿಸಿಕೊಂಡಿರುವ ಗ್ರಂಥ. ಇದರ ಕನ್ನಡ ಆವೃತ್ತಿ ಕ್ರೌನ್ ೧/೮ ಆಕಾರದ ೩೮೪ ಪುಟಗಳನ್ನೊಳಗೊಂಡಿರುವ ಪುಸ್ತಕ. ಹೀಗಾಗಿ, ಇದು ಒಂದು ಸಂಕ್ಷಿಪ್ತ ಆವೃತ್ತಿ ಎಂಬುದು ಸ್ಪಷ್ಟವಾಗುತ್ತದೆ. ಆದರೆ, ಎಲ್ಲ ಪ್ರಸಂಗಗಳ ಸಂಕ್ಷಿಪ್ತರೂಪ ಇಲ್ಲಿಲ್ಲ. ಆಯ್ದ ಕೆಲವು ಪ್ರಸಂಗಗಳ ಸಂಕ್ಷಿಪ್ತ ಆವೃತ್ತಿ ಮಾತ್ರ ಇಲ್ಲಿ ದೊರೆಯುತ್ತದೆ. ಇದರಲ್ಲಿ ಅನುವಾದಿಸಿರುವುದಕ್ಕಿಂತ ಬಿಟ್ಟಿರುವ ಭಾಗವೇ ಹೆಚ್ಚು. ಉದಾಹರಣೆಗೆ, ಉಪ್ಪಿನ ಸತ್ಯಾಗ್ರಹ ಮೂಲದಲ್ಲಿ 70 ಪುಟಗಳಿದ್ದರೆ, ಕನ್ನಡದಲ್ಲಿ ಕಿರಿಯ ಆಕಾರದ ಸುಮಾರು 37 ಪುಟಗಳಿಗೆ ಇಳಿದಿದೆ. ಈ ವಿಚಾರ ಹಾಗಿರಲಿ. ಅನುವಾದ ಹೇಗೆ ಆಗಿದೆ ಎಂಬುದನ್ನೀಗ ಪರಿಶೀಲಿಸೋಣ.

ಮೊದಲಿಗೆ ಎದ್ದುಕಾಣುವ ಸಂಗತಿಯೊಂದಿದೆ. ಮೂಲದಲ್ಲಿ ಸಂಪಾದಕರ ಟಿಪ್ಪಣಿಯ ರೂಪದಲ್ಲಿ ಬಂದಿರುವ ಭಾಗ ಇಲ್ಲಿಯೂ ಸಂಕ್ಷೇಪವಾಗಿ ಆವರಣದಲ್ಲಿ ಕಾಣಿಸಿಕೊಳ್ಳುತ್ತದೆ. ಉದಾಹರಣೆಗೆ, ಉಪ್ಪಿನ ಸತ್ಯಾಗ್ರಹಕ್ಕೆ ಮೊದಲಿನ ಟಿಪ್ಪಣಿ ಮೂಲದಲ್ಲಿ ಹೀಗಿದೆ:

> "Gandiji launched civil dis-obedience in 1930 to rectify some of the evils of British rule, and symbolically singled out the salt Laws for violati on. He regarded there laws as inquitous as they taxed salt which was the only f lavouring to a boweful of rice or other grain which the poorest in the land could afford" (ಪು. 220)

ಇದರ ಅನುವಾದ ಹೀಗಿದೆ:

> "(ಬ್ರಿಟಿಷ್ ಆಡಳಿತದ ಕೆಲವು ಅನ್ಯಾಯಗಳನ್ನು ಸರಿಪಡಿಸುವುದಕ್ಕೋಸ್ಕರ ೧೯೩೦ರಲ್ಲಿ ಗಾಂಧೀಜಿ ಸವಿನಯ ಶಾಸನಭಂಗ ಚಳುವಳಿಯೊಂದನ್ನು ಆರಂಭಿಸಿದರು. ಸಾಂಕೇತಿಕವಾಗಿ ಉಪ್ಪಿನ ಕಾನೂನುಗಳನ್ನು ಭಂಗಮಾಡಲು ಆರಿಸಿಕೊಂಡರು.)" (ಪು. ೧೯೬)

ಅಂದರೆ, ಇಲ್ಲಿ ಮೊದಲ ವಾಕ್ಯದ ಅಭಿಪ್ರಾಯವನ್ನು ಸರಳವಾದ ಮಾತುಗಳಲ್ಲಿ ನಿರೂಪಿಸಿ, ಎರಡನೆಯ ವಾಕ್ಯವನ್ನು ಇಡಿಯಾಗಿ ಕೈಬಿಡಲಾಗಿದೆ. ಆದರೆ, ಅನುವಾದಿಸಿರುವ ಮಾತುಗಳನ್ನು ಆವರಣದಲ್ಲಿ ತೋರಿಸಿರುವುದರಿಂದ ಅವು ಸಂಪಾದಕರ ಮಾತುಗಳೆಂಬ ಗ್ರಹಿಕೆ ಸಾಧ್ಯವಾಗುತ್ತದೆ.

ಆದರೆ, ಖೇಡಾ ಮತ್ತು ಬಾರ್ಡೋಲಿ ಸತ್ಯಾಗ್ರಹಗಳನ್ನು ಕುರಿತ ವಿಭಾಗದಲ್ಲಿ, ಸಂಪಾದಕರ ಟಿಪ್ಪಣಿಯಾಗಿ ಬಂದಿರುವ ಸುಮಾರು ೧೯ ಪಂಕ್ತಿಗಳ ಟಿಪ್ಪಣಿ ಇಡಿಯಾಗಿ ಕಾಣೆಯಾಗಿದೆ. ಅಷ್ಟೇ ಅಲ್ಲ, ಆ ಇಡೀ ಪ್ರಕರಣದಲ್ಲಿ ಎಲ್ಲಿಯೂ ಕಾಣಿಸದಿರುವ ಒಂದು ಪ್ಯಾರ ಬಂದು ಸೇರಿಕೊಂಡಿದೆ:

> "ಉಸಿರಾಡಲು ಕೂಡ ನನಗೆ ಬಿಡುವು ಕಾದಿರಲಿಲ್ಲ. ಅಹಮದಾಬಾದಿನ ಗಿರಣಿ ಕೆಲಸಗಾರರ ಸಂಪು ಮುಗಿದುದೇ ತಡ ಖೇಡಾ ಸತ್ಯಾಗ್ರಹಕ್ಕೆ ಧುಮುಕಬೇಕಾಯಿತು" (ಪು. ೧೩೦).

ಅಂತೆಯೇ, 'ಈರುಳ್ಳಿ ಕಳ್ಳ' ವಿಭಾಗದಲ್ಲಿನ ಈ ಮಾತುಗಳು.'

> "ಚಂಪಾರಣ್ಯ ಭಾರತದ ಒಂದು ಮೂಲೆಯಲ್ಲಿತ್ತು. ಅಲ್ಲದೆ ಚಳುವಳಿಯಿಂದ ಪತ್ರಿಕೆಗಳವರನ್ನು ದೂರವಾಗಿಯೇ ಇಟ್ಟಿದ್ದೆವು. ಆದುದರಿಂದ ಹೊರಗಿನ ಪ್ರೇಕ್ಷಕರನ್ನು ಅದು ಸೆಳೆಯಲಿಲ್ಲ. ಖೇಡಾ ಚಳುವಳಿಯ ವಿಷಯ ಹಾಗಾಗಲಿಲ್ಲ, **ಘಟನೆಗಳು** ದಿನದಿನವೂ ಪತ್ರಿಕೆಗಳಲ್ಲಿ **ವರದಿಯಾಗುತ್ತಿತ್ತು**" (ಪು. ೧೩೨).

ಇವೆಲ್ಲವನ್ನೂ ಬಹುಶಃ 'ಆತ್ಮಕಥೆ'ಯಿಂದ ಉದ್ಧರಿಸಿಕೊಂಡಿರಬೇಕು. ಇಷ್ಟಾಗಿಯೂ ಇವು ಗಾಂಧೀಜಿಯವರ ಮಾತುಗಳೇ ಆಗಿರುವುದರಿಂದ ಅನುಚಿತವೇನೇನೂ ತೋರುವುದಿಲ್ಲ.

ಅನುವಾದದ ದೃಷ್ಟಿಯಿಂದ ಪರಿಶೀಲಿಸಿದಾಗ ಅಲ್ಲಲ್ಲಿ ಕೆಲವು ಶಬ್ದಗಳನ್ನು, ಶಬ್ದಪುಂಜಗಳನ್ನು ಕೈಬಿಟ್ಟಿರುವುದು ನಮ್ಮ ಗಮನಕ್ಕೆ ಬರುತ್ತದೆ. ಈ ಬಗೆಯ ಲೋಪಗಳು ಅಷ್ಟೇನೂ ಉಚಿತವೆಂದು ತೋರುವುದಿಲ್ಲ. ಉದಾಹರಣೆಗೆ ಈ ಪ್ರಸಂಗವನ್ನು ನೋಡಿ:

ಮೂಲ : "......let the Government take whatever legal steps it may think fit." (ಪು. 205)

ಅನು. "......ಸರಕಾರ ತನಗೆ ತೋಚಿದ ಕಾನೂನಿನ ಕ್ರಮವನ್ನು ನಡೆಸಲಿ" (ಪು. ೧೩೨).

ಇಲ್ಲಿ 'fit' (ಉಚಿತ) ಎಂಬ ಶಬ್ದಕ್ಕೆ ಇರುವ ಮಹತ್ವವನ್ನು ಅನುವಾದಕರು ಗಮನಿಸಿದಂತೆ ತೋರುವುದಿಲ್ಲ. ಜೊತೆಗೆ 'ತೋಚಿದ' ಎಂಬ ಮಾತು 'think fit' (ಉಚಿತವೆಂದು ಭಾವಿಸಿದ) ಎಂಬ ಆಲೋಚನೆಯೊಂದಿಗೆ ಹೊಂದಿಯೂ ಸಾಗುವುದಿಲ್ಲ.

ಈ ಕೆಳಗಿನ ನಿದರ್ಶನದಲ್ಲಿಯಂತೂ ಉಪವಾಕ್ಯದ ಅನೇಕ ಅಂಶಗಳು ಸಾರಾ ಸಗಟಾಗಿ ಮಾಯವಾಗಿಬಿಟ್ಟವೆ. ಇಂಥ ಲೋಪಕ್ಕೆ ಸಮರ್ಥನೆಯನ್ನು ಒದಗಿಸುವುದೂ ಕಷ್ಟ. ಏಕೆಂದರೆ ಸಾರರೂಪವಾಗಿಯಾದರೂ ಆ ಆಶಯ ಅನುವಾದವಲ್ಲಿ ಅಡಕಗೊಂಡಿಲ್ಲ. ಆ ಪ್ರಸಂಗ ಹೀಗಿದೆ:

ಮೂಲ : "Should the Government, however, agree to susped collection of the second instal ment of the assessment throughout the district, such among us as are in a posi tion to pay up the wholeor the balance of the revenue that may be due" (ಪು. 206).

ಅನು : ಸರಕಾರ ಕಂದಾಯದ ಕಂತನ್ನು ಪಡೆಯದೆ ಕೂಡಲೇ ನಿಲ್ಲಿಸಿದರೆ ನಮ್ಮಲ್ಲಿ ಯಾರು ಕೊಡಲು ಸಮರ್ಥರೋ ಅವರು ಪೂರಾ ಕಂದಾಯವನ್ನೋ ಅಥವಾ ಉಳಿದಿರುವುದನ್ನೋ ಕೊಟ್ಟಾರು." (ಪು. ೧೩೨)

ಹೀಗಾಗಿ, ಈ ಬಗೆಯ ಲೋಪಗಳು ಕೊಂಚ ಅತೃಪ್ತಿಯನ್ನು ಉಂಟುಮಾಡಬಹುದು.

ಈ ಅನುವಾದದ ಗಮನಾರ್ಹ ಲಕ್ಷಣವೆಂದರೆ, ಸಾಧಾರಣ ಓದುಗರನ್ನು ದೃಷ್ಟಿಯಲ್ಲಿರಿಸಿಕೊಂಡಿರುವುದರಿಂದ, ಅನುವಾದದ ಭಾಷೆಯನ್ನು ಉದ್ದೇಶಪೂರ್ವಕವಾಗಿಯೇ ಸರಳಗೊಳಿಸಿರುವುದು. ಉದಾಹರಣೆಗೆ ಈ ಪ್ರಸಂಗವನ್ನು ನೋಡಬಹುದು:

ಮೂಲ : "The Gujaratis were deeply interested in the fight, which was for them a novel exeperi ment. They were ready to pour riches for the success of the cause. It was not easy for them to see that satyagraha could not be conducted simply by means of money." (ಪು. 206)

ಅನು : ಗುಜರಾತಿಗಳಿಗೆ ಇದೊಂದು ಹೊಸ ಪ್ರಯೋಗ. ಇದರಲ್ಲಿ ಬಹಳ ಆಸಕ್ತಿವಹಿಸಿದರು. ಇದರ ಗೆಲುವಿಗಾಗಿ ತಮ್ಮ ಐಶ್ವರ್ಯವನ್ನೆಲ್ಲ ಒಡ್ಡಲು ಸಿದ್ಧರಾದರು. ಬರೀ ಹಣದಿಂದಲೇ ಸತ್ಯಾಗ್ರಹ ನಡೆಸುವುದು ಸಾಧ್ಯವಲ್ಲವೆಂಬುದನ್ನು ಅರಿತುಕೊಳ್ಳಲು ಅವರಿಗೆ ಸುಲಭವಾಗಿರಲಿಲ್ಲ." (ಪು. ೧೩೨)

ಆದರೂ ಇನ್ನೂ ಸ್ವಲ್ಪ ಭಾಷಿಕ ಪರಿಷ್ಕರಣ ಸಾಧ್ಯವಿತ್ತು ಹಾಗೂ ಅಗತ್ಯವಾಗಿತ್ತು ಎಂಬ ಅನುಭವ ಆಗದೆ ಇರದು. "ಘಟನೆಗಳು...ಪರದಿಯಾಗುತ್ತಿತ್ತು" (ಪು. ೧೩೨) ಎಂಬುದು ಹಾಗೂ ಮೇಲಿನ ನಿದರ್ಶನದಲ್ಲಿನ 'ಸಿದ್ಧರಾದರು' ಎಂಬುದು ಇದಕ್ಕೆ ಉದಾಹರಣೆ. ಮೊದಲನೆಯದರಲ್ಲಿ ವ್ಯಾಕರಣ ಸಾಂಗತ್ಯ ಇಲ್ಲವಾದರೆ, ಎರಡನೆಯದರಲ್ಲಿ 'ಕಾಲದೋಷ'ವೂ ಘಟಿಸುತ್ತದೆ.

ಇಷ್ಟಾಗಿಯೂ, ಒಟ್ಟಿನಲ್ಲಿ ಈ ಗಾಂಧೀಸಾಹಿತ್ಯದ ಅನುವಾದ ಸಹ್ಯವಾಗಿರುವಂತೆ ತೋರುತ್ತದೆ.

* * *

## ಮಹಾತ್ಮಾ ಗಾಂಧೀ

ಬಿ. ಆರ್. ನಂದ ಅವರ 'ಮಹಾತ್ಮಾ ಗಾಂಧೀ' ಗ್ರಂಥದ ಅನುವಾದ ಗಾಂಧೀ ಗ್ರಂಥಮಾಲೆಯ ಮೇಲಿನ ಆರು ಗ್ರಂಥಗಳ ಗ್ರಂಥಭಾಗಗಳ ಅನುವಾದಕ್ಕಿಂತ ಭಿನ್ನವಾದುದು. ಆ ಗ್ರಂಥಗಳ ಶೈಲಿ ಬಹುಮಟ್ಟಿಗೆ ಸರಳವೂ ನೇರವೂ ಆದ ಪತ್ರಿಕಾ ಶೈಲಿ. ಅಲ್ಲಿ ಶೈಲಿಯ ಬೆಡಗು ಬಿನ್ನಾಣ ವೈವಿಧ್ಯಗಳು ಅಷ್ಟಾಗಿ ವಿಜೃಂಭಿಸುವುದಿಲ್ಲ. ಹೀಗಾಗಿ, ಅಲ್ಲಿಯ ಭಾಷಾಂತರ ಈ ಸಂಬಂಧವಾದ ಸಮಸ್ಯೆಗಳಿಂದ ಅಷ್ಟರಮಟ್ಟಿಗೆ ಮುಕ್ತವಾಗಿದೆಯೆಂದೇ ಹೇಳಬೇಕು. ಆದರೆ ನಂದ ಅವರ ಕೃತಿ ಗಾಂಧೀಜಿಯವರನ್ನು ಕುರಿತ ಜೀವನ ಚರಿತ್ರೆಗಳಲ್ಲಿ ತೆಂಡುಲ್ಕರ್ ಅವರ 'ಮಹಾತ್ಮಾ' ಹಾಗೂ ಪ್ಯಾರೇಲಾಲ್ ಅವರ 'ದಿ ಲಾಸ್ಟ್ ಫೇಸ್'ನಂತೆಯೇ ತುಂಬ ಪ್ರಸಿದ್ಧಿಯನ್ನು ಪಡೆದಿರುವಂಥದು. ವಿಷಯದ ಗಾಂಭೀರ್ಯಕ್ಕೆ ತಕ್ಕದಾಗಿರುವ ಅವರ ಭಾಷೆಯ ಬಿಗುವು, ಶೈಲಿಯ ಸೊಬಗು ಹಾಗೂ ಸಾಹಿತ್ಯಿಕ ಸೌಷ್ಠವಕ್ಕೆ ಓದುಗರು ಮಾರುಹೋಗದಿರಲು ಸಾಧ್ಯವೇ ಆಗುವುದಿಲ್ಲ. ಇಂಥ ಉತ್ತಮ ಕೃತಿಯೊಂದು ಸರ್ವಾಂಗಸುಂದರವಾಗಿ ಬೇರೊಂದು ಭಾಷೆಯಲ್ಲಿ ಅವತರಿಸುವುದು ಆ ಭಾಷೆಯ ಓದುಗರ ಪುಣ್ಯವಿಶೇಷವೇ ಸರಿ.

ಈ ಹಿನ್ನೆಲೆಯಲ್ಲಿ ಮೂರ್ತಿಯವರ ಅನುವಾದ ಹೇಗೆ ಬಂದಿದೆ ಎಂಬುದನ್ನು ನಾವೀಗ ಪರಿಶೀಲಿಸಬಹುದು. ಮೂರ್ತಿಯವರು 'ಮಹಾತ್ಮಾ ಗಾಂಧೀ'ಯಂಥ ಕೃತಿಯೊಂದನ್ನು ಭಾಷಾಂತರಕ್ಕೆ ಆಯ್ದುಕೊಳ್ಳುವ ಮುಂಚೆ ಗಾಂಧೀಜಿಯವರ ಮಾರ್ಗದರ್ಶನದಲ್ಲಿ ಮುನ್ನಡೆಯುವಂಥ ಗಾಂಧೀವಾದಿಗಳಾಗಿದ್ದುದು ಮಾತ್ರವಲ್ಲದೆ, ಗಾಂಧೀಜಿಯವರ ಅಭಿಪ್ರಾಯ, ಆಲೋಚನೆ, ಚಿಂತನಮಂಥನಗಳನ್ನೆಲ್ಲ ಮೈಗೂಡಿಸಿಕೊಂಡಿದ್ದು, ಅವುಗಳ ಪ್ರತೀಕವಾಗಿದ್ದಂಥ ಅವರ ಕೆಲವು ಕೃತಿಗಳ ಅನುವಾದ ಕಾರ್ಯದಲ್ಲಿಯೂ ತಮ್ಮನ್ನು ತೊಡಗಿಸಿಕೊಂಡವರು. ಆದ್ದರಿಂದ ಇಂಥ ಕೃತಿಯೊಂದರ ಅನುವಾದಕ್ಕೆ ಅಗತ್ಯವಾದ ಮನೋಧರ್ಮ ಅವರಲ್ಲಿತ್ತು ಎಂಬುದನ್ನು ನಾವು ಶಂಕಿಸಬೇಕಾಗಿಲ್ಲ. ಇಷ್ಟಾಗಿಯೂ ಅವರು ವೃತ್ತಿಪರ ಅಥವಾ ವೃತ್ತಿನಿರತ ಭಾಷಾಂತರಕಾರರಲ್ಲ; ಸ್ಫೂರ್ತಿ

ಯಿಂದ ಭಾಷಾಂತರಕಾರ್ಯವನ್ನು ಸಾಗಿಸುವಂಥವರು ಎಂಬುದು ನಮಗೆ ಮೊದಲಿಗೇ ಅನುಭವಕ್ಕೆ ಬರುವ ಸಂಗತಿ. ಹೀಗಾಗಿ, ಅಭಿವ್ಯಕ್ತಿಯ ಎಲ್ಲ ಘಟಕಗಳಕಡೆ ಅವರ ಗಮನ ಹರಿಯದೆ, ಅಭಿಪ್ರಾಯ ನಿರೂಪಣೆಯತ್ತಲೇ ತಮ್ಮ ಗಮನವನ್ನು ಕೇಂದ್ರೀಕರಿಸುತ್ತಾರೆ ಎಂಬ ಅನುಭವ ಉಂಟಾಗುತ್ತದೆ.

ಉದಾಹರಣೆಗೆ, ಈ ಪ್ರಸಂಗವನ್ನು ನೋಡಿ. ಶತಮಾನಗಳ ಜಡತೆಯನ್ನು ಬಡಿದೆಬ್ಬಿಸಿ ಕಾರ್ಯೋನ್ಮುಖವಾಗಿಸಿದ ಗಾಂಧೀಜಿಯವರ ಪವಾಡವನ್ನು ವರ್ಣಿಸುತ್ತ ನಂದ ಹೀಗೆನ್ನುತ್ತಾರೆ :

> "The **prospect** of 'Swaraj within a year' **shattered** bonds of centuries ; the **hyprosis** of fear had been broken" (ಪು. 215).

ಇದನ್ನು ಮೂರ್ತಿಯವರು ಹೀಗೆ ಭಾಷಾಂತರಿಸುತ್ತಾರೆ :

> "ಒಂದೇ ವರ್ಷದಲ್ಲಿ ಸ್ವರಾಜ್ಯ ಎಂಬ **ಕರೆ** ಶತಮಾನಗಳ ಬಂಧನವನ್ನು **ಶಿಥಿಲಗೊಳಿಸಿತು ;** ಭಯದ **ಮಾಯೆ** ಹರಿಯಿತು " (ಪು. ೨೨೧)

ಶತಮಾನಗಳ ಬಂಧನವನ್ನು ಛಿದ್ರಗೊಳಿಸಿದ್ದು 'ಒಂದೇ ವರ್ಷದಲ್ಲಿ ಸ್ವರಾಜ್ಯ' ಎಂಬ 'ಕರೆ'ಯಲ್ಲ; ಸ್ವರಾಜ್ಯ ನಮ್ಮದಾಗಬಹುದೆಂಬ ಆಲೋಚನೆ, ಅದರ 'ಸಂಭವನೀಯತೆ' ; ಅಂತೆಯೇ, ಬ್ರಿಟಿಷರ ಆಡಳಿತದಲ್ಲಿ ಜನತೆ ಯಾವ 'ವಶ್ಯಸುಪ್ತಿ'ಗೆ ಒಳಗಾಗಿತ್ತೋ, ಅದನ್ನು ಈ ಸಂಭವನೀಯತೆ ನಿಷ್ಕ್ರಿಯಗೊಳಿಸಿ, ಜನರಿಗೆ ಸ್ವಾತಂತ್ರ್ಯ ಪ್ರಜ್ಞೆ ಮತ್ತೆ ಮೂಡುವಂತೆ ಮಾಡಿತು. ಹೀಗಾಗಿ, ಯಥಾವತ್ತಾದ ಭಾಷಾಂತರದಲ್ಲಿ 'prospect'ಗೆ ಪರ್ಯಾಯವಾಗಿ 'ಕರೆ' ಎಂಬ ಶಬ್ದವಾಗಲೀ, 'hyprosis'ಗೆ ಪರ್ಯಾಯವಾಗಿ 'ಮಾಯೆ'ಯಾಗಲೀ ಕಾಣಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಸ್ವಲ್ಪ ಮಟ್ಟಿನ ರಾಜಿಯ ಮನೋಭಾವದಿಂದ ಅಥವಾ ದೂರಸಮೀಕರಣದಿಂದ 'ಮಾಯೆ' ಹಾಗೂ 'ವಶ್ಯಸುಪ್ತಿ'ಗಳು ಒಟ್ಟಿನಲ್ಲಿ ಒಂದು ಅಚೇತನ ಸ್ಥಿತಿಯನ್ನು ಸೂಚಿಸುತ್ತವೆ ಹಾಗೂ ಆ 'ಸಂಭವನೀಯತೆ'ಯೂ ಗಾಂಧೀಜಿಯವರ 'ಕರೆ'ಯ ಪರಿಣಾಮವೇ ಆದ್ದರಿಂದ ಒಟ್ಟಿನಲ್ಲಿ ಈ ಉಕ್ತಿಯ ಅಭಿಪ್ರಾಯವನ್ನು ಅನುವಾದಕರು ಏನೋ ಒಂದು ರೀತಿಯಲ್ಲಿ ಸೆರೆಹಿಡಿದಿದ್ದಾರೆ ಎಂದಿರಿಸಿಕೊಳ್ಳಬಹುದು. ಅಂತೆಯೇ,

"1921 was a year of awakening for India" (ಪು. 215) ಎಂಬುದು "ಭಾರತದಲ್ಲಿ ಜಾಗೃತಿಯ ಕಾಲ ೧೯೨೧" (ಪು. ೨೨೧) ಎಂದು ಕಾಣಿಸಿಕೊಂಡಾಗ ಮೂಲದ ಒತ್ತು ಮಾಯವಾಗಿದೆಯಾದರೂ ಅಭಿಪ್ರಾಯ ಬದಲಾಗಿಲ್ಲವೆಂಬುದಾಗಿ ಸಮಾಧಾನಪಡಬಹುದು.

ಆದರೆ, ಮೂಲದ

"The non-co-operation movement **gathered momentum on the crest of rising enthusiasm**. (ಪು. 215) ಎಂಬ ಉಕ್ತಿ.

"ಅಸಹಕಾರ ಚಳುವಳಿಯು ಪ್ರಚಂಡ ಉತ್ಸಾಹದಿಂದ ಮೇಲಕ್ಕೇರಿತು" (ಪು. ೨೨೧) ಎಂದು ಕನ್ನಡೀಕೃತವಾದಾಗ ಮೂಲದ ಸುಂದರವಾದ ಕಲ್ಪನೆ ಹಾರಿ ಹೋಯಿತಲ್ಲ ಎಂಬ ಅಸಮಾಧಾನ ಉಂಟಾಗುತ್ತದೆ. ಅನುವಾದಕರು ಸ್ವಲ್ಪ ಹೆಚ್ಚು ಶ್ರಮವಹಿಸಿ 'crest' ಎನ್ನುವುದನ್ನು ಆಲಂಕಾರಿಕವಾಗಿ ಹೇಗೆ ಬಳಸಲಾಗುತ್ತದೆಂಬುದನ್ನು ಕಂಡುಕೊಳ್ಳಲು ಕೋಶದ ನೆರವನ್ನಾದರೂ ಪಡೆದುಕೊಂಡಿದ್ದರೆ ಈ ಉಕ್ತಿಯ ಅನುವಾದ ಬೇರೆಯೇ ಆಗುತ್ತಿತ್ತು ಎನ್ನಿಸುತ್ತದೆ. ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲಿಷ್–ಕನ್ನಡ ನಿಘಂಟು 'crest' ಶಬ್ದದ ವಿಶೇಷಾರ್ಥವನ್ನು ಹೀಗೆ ಸೂಚಿಸಿದೆ : "(ತರಂಗಗಳ ವಿಷಯದಲ್ಲಿ) ಶಿಖರವಾಗಿ ಏಳು, ಏರು" (ಪು. 248). ಈ ಕಲ್ಪನೆ ಸ್ಪಷ್ಟವಾಗಿದ್ದರೆ ಕಡಲಿನ ಉಬ್ಬರದ ಚಿತ್ರ ಮೂಡಿ. ಉಕ್ಕೇರುತ್ತಿದ್ದ ಉತ್ಸಾಹದ ಅಲೆಯ ಉಬ್ಬರದಲ್ಲಿ ಅಸಹಕಾರ ಆಂದೋಳನ ಹೇಗೆ ತನ್ನ ವೇಗವನ್ನು ತೀವ್ರತೆಯನ್ನು ಕ್ಷಣ ಕ್ಷಣವೂ ಹೆಚ್ಚಿಸಿಕೊಳ್ಳುತ್ತ ಹೋಯಿತು ಎಂಬುದು ಮನವರಿಕೆಯಾಗುತ್ತಿತ್ತು ; ಅನುವಾದವೂ ಬೇರೆಯೇ ಆಗುತ್ತಿತ್ತು. ಅಭಿಪ್ರಾಯ ನಿರೂಪಣೆಯಷ್ಟೇ ಅನುವಾದಕರ ಹೊಣೆಯಲ್ಲವಷ್ಟೆ?

ಈ ಅಸಮಾಧಾನ ಹೆಚ್ಚುವುದಕ್ಕೆ ಕಾರಣವಾಗುವ ಸಂಗತಿಯೆಂದರೆ ಈ ಅಭಿಪ್ರಾಯ ನಿರೂಪಣ ವಿಧಾನ ಅನುವಾದಕರು ಎಲ್ಲೋ ಒಮ್ಮೆ ಕ್ವಚಿತ್ತಾಗಿ ಆಶ್ರಯಿಸುವ ವಿಧಾನವಾಗಿರದೆ ಬಹುಮಟ್ಟಿಗೆ ಸಾರ್ವತ್ರಿಕವಾಗಿ ಅವರು ಅನುಸರಿಸುವ ವಿಧಾನವೋ ಎಂಬಂತೆ ತೋರುವುದು. ಉದಾಹರಣೆಗೆ,

> "Gandhiji's **call** for courage and sacrifice **lifted** politics from the **doldrums** in which they had **drifted** for decades." (ಪು. 215)
>
> ಎಂಬುದು ಕನ್ನಡದಲ್ಲಿ ಕಾಣಿಸಿಕೊಂಡಿರುವುದು ಹೀಗೆ :
>
> "ದಶಕಗಳ ಕಾಲ **ಏನೋ ರೀತಿ ಸಾಗುತ್ತಿದ್ದ** ಭಾರತದ ರಾಜಕೀಯ **ಗಾಂಧೀ ಕಹಳೆಯ ಕೂಗಾದ ಸ್ಥೈರ್ಯ ಮತ್ತು ತ್ಯಾಗಗಳಿಂದ ಉದಾತ್ತತೆ ಹೊಂದಿತು.**" (ಪು. ೨೨೧)

ಈ ಸಂದರ್ಭದಲ್ಲಿ ಅತ್ಯಂತ ಮುಖ್ಯವಾದ ಶಬ್ದಗಳು 'call', 'lifted', 'drifted' ಮತ್ತು 'doldrums'. ಇವುಗಳಲ್ಲಿ ಯಾವ ಶಬ್ದವನ್ನೂ ಸರಿಯಾದ ಅರ್ಥದಲ್ಲಿ ಸ್ವೀಕರಿಸದೆ ಇರುವುದು ಇಲ್ಲಿ ಎದ್ದುಕಾಣುವ ಸಂಗತಿ. 'call' ಎಂಬುದಕ್ಕೆ

ಇಲ್ಲಿ 'ಕಹಳೆಯ ಕೂಗು' ಎಂದೂ, 'lifted' ಎಂಬುದಕ್ಕೆ 'ಉದಾತ್ತತೆ ಹೊಂದಿತು' ಎಂದೂ, 'doldrums' ಎಂಬುದಕ್ಕೆ 'ಏನೋ ರೀತಿ' ಎಂದೂ ಹೇಳಲಾಗಿದೆ, ಮೊದಲ ಉದಾಹರಣೆಯಲ್ಲಿ ನಾವಾಗಲೇ ನೋಡಿರುವಂತೆ 'prospect' ಎಂಬುದಕ್ಕೆ 'ಕರೆ' ಎಂಬ ಪರ್ಯಾಯವನ್ನು ಬಳಸಲಾಗಿದೆ. ಆ 'ಕರೆ' ಶಬ್ದ ಇಲ್ಲಿ ಅತ್ಯಂತ ಉಚಿತ ವಾಗುತ್ತಿತ್ತು. 'doldrums' ಎಂದರೆ 'ಏನೋ ರೀತಿ' ಅಲ್ಲ; 'ಗೊತ್ತು ಗುರಿ ಇಲ್ಲನೆ ಗಾಳಿ ಬೀಸಿದತ್ತ ನಿಧಾನವಾಗಿ ಸರಿಯುವುದು' ಎಂದು ಅರ್ಥ. ಮೈಸೂರು ವಿಶ್ವವಿದ್ಯಾನಿಲಯದ 'ಇಂಕನಿ' ಈ ಅರ್ಥವನ್ನು ಹೀಗೆ ನಿರೂಪಿಸಿದೆ : "ಶಾಂತತೆ, ಸ್ತಬ್ಧತೆ; ವಿಷುವದ್ವೃತ್ತದ ಬಳಿ ಪದೇಪದೇ ದಿಕ್ಕು ಬದಲಾಯಿಸಿ ಬೀಸುವ ಸಸು ಗಾಳಿಯ ಶಾಂತವಾದ ಪ್ರದೇಶ.' (ಪು. 320). 'lifted' ಎಂಬುದಕ್ಕೆ 'ಉದ್ಧರಿಸಿದರು' ಅಥವಾ ಮೇಲಕ್ಕೆತ್ತಿದರು ಎಂಬುದನ್ನೂ 'drifted ಎಂಬುದಕ್ಕೆ' ಕೊಚ್ಚಿಕೊಂಡು ಹೋಗು' ಎಂಬುದನ್ನು ಬಳಸಬೇಕಾಗಿತ್ತು. ಜೊತೆಗೆ, ಮೂಲವಾಕ್ಯದಲ್ಲಿ 'ಗಾಂಧೀಜಿಯ ಕರೆ' ಕರ್ತೃವಾಗಿ 'ರಾಜಕೀಯ' ಕರ್ಮವಾಗಿ ಇದೆ. ಆದರೆ ಅನುವಾದದಲ್ಲಿ ರಾಜಕೀಯವೇ ಕರ್ತೃವಾಗಿದೆ. ಅಷ್ಟೇ ಅಲ್ಲ, ಅದು 'ಉದಾತ್ತತೆ'ಯನ್ನೂ ಪಡೆದುಕೊಂಡಿದೆ. ಇಲ್ಲಿ ಆಗಿರುವ ಮತ್ತೊಂದು ದೋಷವೆಂದರೆ ಧೈರ್ಯ, ತ್ಯಾಗಗಳಿಗೆ ಗಾಂಧೀಜಿ ಕರೆ ನೀಡುವ ಬದಲು, 'ಸ್ಥೈರ್ಯ ಮತ್ತು ತ್ಯಾಗಗಳು' ಅವರ 'ಕಹಳೆಯ ಕೂಗಾ'ಗಿ ಪರಿಣಮಿಸಿರು ವುದು. ಅನುವಾದಕ್ಕೆ ಯಾವ ಸಮಸ್ಯೆಯನ್ನೂ ಒಡ್ಡದಿರುವ ಒಂದು ವಾಕ್ಯ ಇಷ್ಟೊಂದು ಕೆಟ್ಟ ರೀತಿಯಲ್ಲಿ ಕಾಣಿಸಿಕೊಂಡಿರುವುದು ಯಾರನ್ನೇ ಆದರೂ ಬೆಚ್ಚಿಸು ತ್ತದೆ.

ಮೇಲಿನ ಉದಾಹರಣೆಯಲ್ಲಿ ಗಮನಿಸಬೇಕಾದ ಇನ್ನೊಂದು ಅಂಶವೂ ಇದೆ. ಮೂಲದ 'politics' ಅನುವಾದದಲ್ಲಿ 'ಭಾರತದ ರಾಜಕೀಯ' ವಾಗಿದೆ, ಇದೇನೂ ಅಂಥ ಗುರುತರವಾದ ದೋಷವಲ್ಲ. ಆದರೆ, ಇದಕ್ಕೆ ವಿರುದ್ಧವಾಗಿ ಮೂಲದಲ್ಲಿ ಇರುವುದನ್ನೇ ಬಿಡುವುದು ನಿಜಕ್ಕೂ ದೋಷವಾಗುತ್ತದೆ. ಉದಾಹರಣೆಗೆ ಈ ಪ್ರಸಂಗ ವನ್ನು ನೋಡಿ :

> ಮೂಲ : "Whether the old methods of fighting violent out breaks would supress satyagraha or strengthen it." (ಪು. 215)
>
> ಅನು : "ಹಿಂಸಾ ವಿಧಾನಗಳಿಂದ ಸತ್ಯಾಗ್ರಹ ಚಳುವಳಿ ದಮನವಾದೀತೋ ಶಕ್ತಿಗೂಡೀತೋ ಎಂದು ಸಂಶಯಗ್ರಸ್ತವಾಯಿತು." (ಪು. ೨೨೧)

ಸ್ವಾತಂತ್ರ್ಯದ ಆಂದೋಳನವನ್ನು ಬ್ರಿಟಿಷರು ಹಿಂಸಾ ವಿಧಾನಗಳಿಂದಲೇ ನಿಗ್ರಹಿ ಸಲು ಪ್ರಯತ್ನಿಸಿದರೆಂಬುದು ನಿಜವಾದರೂ, ಭಾಷಾಂತರಕಾರನಿಗೆ 'old' ಎಂಬುದಕ್ಕೆ

ಬದಲಾಗಿ 'ಹಿಂಸೆ' ಎಂಬ ಮಾತನ್ನು ಬಳಸುವ ಸ್ವಾತಂತ್ರ್ಯವಿಲ್ಲ. ಜೊತೆಗೆ ಈ ಕ್ರಮ ಯಾವ ಸಂಗತಿಯ ವಿಷಯದಲ್ಲಿ ಅನ್ವಯವಾಗತಕ್ಕದ್ದು ಎಂಬುದು 'of fighting violent out breaks' ಎಂಬ ಮಾತಿನಲ್ಲಿ ಸ್ಪಷ್ಟವಾಗಿದೆ. ಆದರೆ, ಹಿಂಸಾತ್ಮಕ ಗಲಭೆಗಳನ್ನು ಹತ್ತಿಕ್ಕುವ ವಿಷಯಕ್ಕೆ ಸಂಬಂಧಿಸಿದ ವಿಧಾನ ಅದು ಎಂಬುದು ಅನುವಾದದಲ್ಲಿ ಇಡಿಯಾಗಿ ಕಾಣೆಯಾಗಿ ಬಿಟ್ಟಿದೆ. ಹೀಗಾಗಿ, ಅನುವಾದಕರ ಅನುವಾದ ವಿಧಾನ ಬಗೆಬಗೆಯಾದ ದೋಷಗಳಿಗೆ ಎಡೆಗೊಡುತ್ತ ಹೋಗಿದೆ.

ಅಭಿಪ್ರಾಯ ನಿರೂಪಣೆಯ ಈ ವಿಧಾನದ ಇನ್ನೊಂದು ಅತಿರೇಕವನ್ನೂ ಈ ಅನುವಾದದಲ್ಲಿ ನಾವು ಕಾಣಬಹುದಾಗಿದೆ. ಮೂಲದಲ್ಲಿ ಒಂದು ಸಂದರ್ಭ ಹೀಗೆ ಬಂದಿದೆ :

ಮೂಲ : "For Gandhi this was a period of incessant activity. which taxed him almost to the limits of his endurance." (ಪು. 215)

ಅನು : "ಗಾಂಧೀಗೆ ಇದೊಂದು **ವಿಶ್ರಾಂತಿಯೇ ಇಲ್ಲದ** ಕಾಲವಾಗಿತ್ತು. ಅವರ **ತಾಳ್ಮೆ ಮಹಾಪರೀಕ್ಷೆಗೆ ಗುರಿಯಾಗಿತ್ತು.**" (ಪು. ೨೨೧)

"ಬಿಡುವಿಲ್ಲದ ಚಟುವಟಿಕೆಗಳ ಅವಧಿ" ಎಂಬುದರ ಆಶಯ "ವಿಶ್ರಾಂತಿಯೇ ಇಲ್ಲದ ಕಾಲವೇ ಆಗಿರಬಹುದಾದರೂ ಮೂಲದಲ್ಲಿಲ್ಲದ ಮಾತುಗಳ ಮೂಲಕ ಆಶಯವನ್ನು ನಿರೂಪಿಸುವ ಅಧಿಕಾರ ಭಾಷಾಂತರಕಾರನಿಗೆ ಇಲ್ಲ. (ಅಷ್ಟೇ ಅಲ್ಲ. ಹಾಗೆ ಮಾಡುವುದು 'ಅನಧಿಕೃತ ಚೇಷ್ಟೆ'ಯೂ ಆಗಿ ಪರಿಣಮಿಸುತ್ತದೆ.) ಸಂವೇದನಾ ಶೀಲನಾದ ಲೇಖಕ ತುಂಬ ಎಚ್ಚರಿಕೆಯಿಂದ ಮಾತುಗಳನ್ನು ಬಳಸಿರುತ್ತಾನೆ. ಅನುವಾದಕನೂ ಇದನ್ನು ಎಚ್ಚರಿಕೆಯಿಂದ ಗಮನಿಸಬೇಕು. 'ತಾಳ್ಮೆ' ಎಂಬುದು 'patience'ಗೆ ಸಂವಾದಿಯಾದ ಮಾತು ಹಾಗೂ ಇದು ಮಾನಸಿಕ ಸಂಬಂಧವನ್ನುಳ್ಳದ್ದು. ಇದಕ್ಕೆ ವಿರುದ್ಧವಾಗಿ 'endurance' ಎಂಬುದು ಸಾಮಾನ್ಯವಾಗಿ ದೈಹಿಕ ಸಂಬಂಧಿಯಾದುದು. ಒಂದರ ಜಾಗದಲ್ಲಿ ಮತ್ತೊಂದನ್ನು ಬಳಸುವುದು ಇಂಥ ಕಾರಣಗಳಿಂದ ಅನುಚಿತವಾಗುತ್ತದೆ, ಪ್ರಶ್ನಾರ್ಹವೂ ಆಗುತ್ತದೆ. ಈ ಸಂದರ್ಭ ಅವರ ತಾಳ್ಮೆಯ ಮಹಾ ಪರೀಕ್ಷೆಗೆ ಸಂಬಂಧಿಸಿದ್ದಲ್ಲ ; ಅವರ ದೇಹದ ತಡೆದುಕೊಳ್ಳುವ ಸಾಮರ್ಥ್ಯಕ್ಕೆ ಸಂಬಂಧಿಸಿದ್ದು ಎಂಬುದು ಸ್ಪಷ್ಟವಾಗಿಯೇ ಇದೆ.

ಈ ವಿಧಾನದ ಮತ್ತೊಂದು ಅಪಾಯಕ್ಕೂ 'ಮಹಾತ್ಮಾಗಾಂಧೀ' ನಿದರ್ಶನವನ್ನು ಒದಗಿಸಿದೆ. ಉದಾಹರಣೆಗೆ ಈ ವಾಕ್ಯವನ್ನು ನೋಡಿ :

"1891 ರಲ್ಲಿ ಗಾಂಧೀ ಇಂಗ್ಲೆಂಡಿನಿಂದ ಹಿಂದಿರುಗಿಬಂದಾಗ, ಆ ಯುವಕ ಬ್ಯಾರಿಸ್ಟರ್ ತನ್ನ ಜೀವನವಿಧಾನವನ್ನು **ಆಧುನಿಕ ರೀತಿಯಲ್ಲಿ ಏರ್ಪಡಿಸಿಕೊಳ್ಳುವರೆಂದು ನಿರೀಕ್ಷಿಸಲಾಗಿದ್ದಿತು.**" (ಪು. ೬೫)

ಈ ವಾಕ್ಯವನ್ನು ಓದಿದಾಗ ಈ ನಿರೀಕ್ಷೆಯಂತೆಯೇ ನಡೆಯಿತೇ ಅಥವಾ ನಿರೀಕ್ಷೆ ಹುಸಿಯಾಯಿತೇ ಎಂಬ ಸಂದಿಗ್ಧಕ್ಕೆ ವಾಚಕ ತುತ್ತಾಗುತ್ತಾನೆ. ಸಹಜವಾಗಿ ಪರಿಭಾವಿಸಬಹುದಾಗಿರುವ ಅಭಿಪ್ರಾಯ ಎರಡನೆಯದು. ಆದರೆ ಮೂಲದಲ್ಲಿ ಇರುವುದೇ ಬೇರೆ :

"when Gandhiji returned from England in 1891, he began, as indeed was expected of a young barrister in India, to 'modernize' his mode of living." (ಪು. 73)

"ಭಾರತದಲ್ಲಿನ ತರುಣ ಬ್ಯಾರಿಸ್ಟರನ ವಿಷಯದಲ್ಲಿ ನಿರೀಕ್ಷಿಸಲಾಗಿದ್ದಂತೆಯೇ ಗಾಂಧೀಜಿ 1891 ರಲ್ಲಿ ಇಂಗ್ಲೆಂಡಿನಿಂದ ಹಿಂದಿರುಗಿದಾಗ ತಮ್ಮ ಜೀವನ ವಿಧಾನವನ್ನು ಆಧುನಿಕಗೊಳಿಸ ತೊಡಗಿದರು" ಎಂಬ ಅಭಿಪ್ರಾಯ ಹೇಗೆ ವಿಕೃತ ಗೊಂಡಿದೆ ಎಂಬುದಕ್ಕೆ ಹೆಚ್ಚಿನ ವ್ಯಾಖ್ಯಾನ ಅಗತ್ಯವೇನಿಲ್ಲ.

ಈ ಕೃತಿಯ ಅನುವಾದದಲ್ಲಿ ಕಂಡು ಬಂದಿರುವ ಇನ್ನು ಕೆಲವು ದೋಷಗಳನ್ನು ಇಲ್ಲಿ ಸೂಚಿಸಬಹುದಾಗಿದೆ : (i) ಅಸೂಕ್ತ ಪರ್ಯಾಯಗಳ ಆಯ್ಕೆ, (ii) ಅಸಂಗತ ಅನ್ವಯ ಹಾಗೂ (iii) ಇಂಗ್ಲಿಷ್ ಭಾಷಾ ಸ್ವಾರಸ್ಯದ ಬಗೆಗಿನ ಅಲಕ್ಷ್ಯ ಎಂದು ಇವನ್ನು ವರ್ಗೀಕರಿಸಬಹುದಾಗಿದೆ.

**ಅಸೂಕ್ತ ಪರ್ಯಾಯಗಳ ಆಯ್ಕೆ :** ಅಭಿಪ್ರಾಯ ನಿರೂಪಣ ವಿಧಾನವನ್ನು ಆಶ್ರಯಿಸಿ ಅನುವಾದಿಸ ಹೊರಡುವ ಅವರ ಕ್ರಮದ ಪರಿಶೀಲನೆಯ ಅಂಗವಾಗಿ ಕೊಟ್ಟಿರುವ ನಿದರ್ಶನಗಳಲ್ಲಿಯೇ ಅಸೂಕ್ತ ಪರ್ಯಾಯಗಳ ಆಯ್ಕೆಯ ಅನೇಕ ಪ್ರಸಂಗಗಳು ನಮ್ಮ ಗಮನಕ್ಕೆ ಬರುತ್ತವೆ. ಆದರೆ, ಹಾಗೆ ಮಾಡದೆ. ಯಥಾವತ್ತಾಗಿ ಮೂಲದ ಪ್ರತಿಯೊಂದು ಅಂಶವನ್ನೂ ಅನುವಾದದಲ್ಲಿ ಅಳವಡಿಸಿಕೊಳ್ಳುವ ಪ್ರಯತ್ನ ಮಾಡಿರುವಾಗಲೂ ಸೂಕ್ತ ಪರ್ಯಾಯಗಳ ಕಡೆಗೆ ಅವರು ಅಷ್ಟಾಗಿ ಗಮನಕೊಡದಿರುವುದು ಆಶ್ಚರ್ಯವನ್ನುಂಟುಮಾಡುತ್ತದೆ. ಉದಾಹರಣೆಗೆ ಈ ಪ್ರಸಂಗವನ್ನು ನೋಡಿ :

ಮೂಲ : The splendid memories gathered round the Indian Empire blinded him to the changes that had come about since the days of clive Wellington; Lawrence and Kipling." (ಪು. 383-4)

ಅನು : "ಭಾರತ ಚಕ್ರಾಧಿಪತ್ಯದ ಬಗೆಗೆ ಅವರ ಭವ್ಯಕಲ್ಪನೆಯು ಛಾವು, ಕ್ಲೈವ್, ವೆಲ್ಲಿಂಗ್‌ಟನ್, ಲಾರೆನ್ಸ್ ಮತ್ತು ಕಿಪ್ಲಿಂಗ್ ಇವರ ಕಾಲಕ್ಕೆ ಆದ ಬದಲಾವಣೆ ಯನ್ನು ಅವರು ಮರೆಯುವಂತೆ ಮಾಡಿದ್ದಿತು." (ಪು. 406)

ನೆನಪುಗಳಿಗೂ (memories) 'ಕಲ್ಪನೆಯ ಭಾವ'ಕ್ಕೂ ಸಮೀಪ ಸಂಬಂಧ ಇಲ್ಲವೆನ್ನುವುದನ್ನು ಬಿಡಿಸಿಹೇಳಬೇಕಾಗಿಲ್ಲ. ಅಂತೆಯೇ 'ಕುರುಡಾಗುವುದು' (ಅಥವಾ ಕಣ್ಣು ಮುಚ್ಚಿಕೊಳ್ಳುವುದು) ಹಾಗೂ 'ಮರೆಯುವುದು' ಸಂಪೂರ್ಣವಾಗಿ ವಿರುದ್ಧ ಚಿತ್ರಗಳಲ್ಲವೆ ? ಭಾಷಾಂತರಕಾರ ಇಷ್ಟರ ಮಟ್ಟಿನ ಸ್ವಾತಂತ್ರ್ಯ ವಹಿಸಬಹುದೆ ಎಂದು ಮತ್ತೆ ಪ್ರಶ್ನಿಸಬೇಕಾಗುತ್ತದೆ.

**ಅಸಂಗತ ಅನ್ವಯ** : ಉಕ್ತಿಯ ವಿವಿಧ ಘಟಕಗಳ ನಡುವಣ ಪಾರಸ್ಪರಿಕ ಸಂಬಂಧವೇನೆಂಬುದನ್ನು ಸರಿಯಾಗಿ ಗಮನಿಸದೆ ಅಥವಾ ಅವುಗಳ ಪೂರ್ವಾಪರ ಅನ್ವಯವೇನೆಂಬುದನ್ನು ಸರಿಯಾಗಿ ಗುರುತಿಸದೆ ಹೋದಲ್ಲಿ ಭಾಷಾಂತರ ದಾರಿತಪ್ಪಿ ಹೋಗಬಹುದು. ಈಗಾಗಲೇ ಅಂಥ ನಿದರ್ಶನವೊಂದನ್ನು ಅಭಿಪ್ರಾಯ ನಿರೂಪಣ ವಿಧಾನದ ಅಪಾಯದ ಚರ್ಚೆಯಲ್ಲಿ ಉದ್ಧರಿಸಿದ್ದೇನೆ. ("When Gandhiji returned… ……'modernize' his mode of living.") ಯಥಾವತ್ತಾಗಿ ಅನುವಾದಿಸಲು ಪ್ರಯತ್ನಿಸಿದ ಸಂದರ್ಭದಲ್ಲಿಯೂ ಈ ಅನುವಾದಕರು ಇಂಥ ಅಸಂಗತ ಅನ್ವಯಗಳಿಗೆ ಎಡೆಗೊಡುತ್ತಾರೆ. ಉದಾಹರಣೆಗೆ ಈ ಪ್ರಸಂಗವನ್ನು ನೋಡಿ :

> ಮೂಲ : "When his wife and two children accompanied him to Natal, they had to change into the parsi dress which, next to the European, was considered the most 'modern.'' (ಪು. 73)
>
> ಅನು : ಹೆಂಡತಿ ಮತ್ತು ಎರಡು ಮಕ್ಕಳು ನೆಟಾಲಿಗೆ **ಹೋದಾಗ, ಅತ್ಯಂತ ನಾಗರಿಕವೆನಿಸಿದ್ದ ಐರೋಪ್ಯ ಉಡುಗೆಗೆ ಸಮವೆನಿಸಿದ್ದ ಪಾರ್ಸೀ ಉಡುಪನ್ನು** ಅವರು ಧರಿಸಿಹೋಗಬೇಕಾಯಿತು.' (ಪು. 65)

ಮೂಲದ ಅಭಿಪ್ರಾಯದಲ್ಲಿ ಐರೋಪ್ಯ ಉಡುಗೆ ತೊಡುಗೆ ಅತ್ಯಂತ ಆಧುನಿಕವಾದದ್ದು, ಪಾರ್ಸೀ ಉಡುಪು ಅದಕ್ಕೆ ಅನಂತರದ ಸ್ಥಾನವನ್ನು ಗಳಿಸಿಕೊಂಡಿರುವಂಥದು. ಆದರೆ ಅನುವಾದದಲ್ಲಿ ಇವೆರಡೂ 'ಸಮ' ವಾಗಿ ಬಿಟ್ಟಿವೆ. ಉಪವಾಕ್ಯದಲ್ಲಿ ಅಳವಟ್ಟಿರುವ 'next to the European' ಎಂಬ ಅಂಶವನ್ನು ಸರಿಯಾಗಿ ಗಮನಿಸದ ಇರುವುದೇ ಇದಕ್ಕೆ ಕಾರಣ. ಈ ಅನುವಾದದಲ್ಲಿ 'accompanied' ಎಂಬ ಮುಖ್ಯ ಪದ ಬಿಟ್ಟು ಹೋಗಿರುವುದು ಹಾಗೂ 'ಆಧುನಿಕ' ಹಾಗೂ 'ನಾಗರಿಕ'ಗಳ ನಡುವಿನ ಭೇದಭಾವ ಇಲ್ಲದೆ ಹೋಗಿರುವುದು ಎದ್ದು ಕಾಣುವ ಇತರ ದೋಷಗಳು. 'ಆಧುನಿಕ' ವಲ್ಲದ ಉಡುಪೆಲ್ಲ 'ಅನಾಗರಿಕ'ವಾಗುತ್ತದೆಯೇ ಎಂದು ಪ್ರಶ್ನಿಸಿಕೊಂಡರೆ, ಈ ಸಮೀಕರಣದ ಅಸಾಂಗತ್ಯ ಮುಖಕ್ಕೆ ರಾಚುತ್ತದೆ.

**ಇಂಗ್ಲಿಷ್ ಭಾಷಾಸ್ವಾರಸ್ಯದ ಬಗೆಗಿನ ಅಲಕ್ಷ್ಯ** : ಮೂಲದ ಬಗೆಗೆ ಅನುವಾದಕರು ತೋರಬೇಕಾದ ಕಾಳಜಿಯನ್ನು ಈ ಅನುವಾದಕರು ತೋರಿಲ್ಲವೆಂಬುದಕ್ಕೆ

ಉದ್ದಕ್ಕೂ ನಿದರ್ಶನಗಳು ದೊರೆಯುತ್ತವೆ. ಇಂಗ್ಲಿಷ್ ಭಾಷೆಯ ಮರ್ಯಾದೆಯನ್ನು, ಅದರ ಜಾಯಮಾನವನ್ನು, ಅದರ ಅಭಿವ್ಯಕ್ತಿಯ ಬಾಗು ಬಳುಕು ಸ್ವಾರಸ್ಯಗಳನ್ನು, ಉಕ್ತಿ-ಅನುಕ್ತಿಗಳ ಹಾಗೂ ಅಧ್ಯಾಹಾರಗಳ ಸೊಗಸನ್ನು ಸೂಕ್ಷ್ಮವಾಗಿ ಗಮನಿಸದೆ ಹೋದರೆ, ಅನುವಾದ ಪೇಲವವಾಗಿ ಬಿಡುತ್ತದೆ : ಅನಪೇಕ್ಷಿತ ಅರ್ಥಗಳನ್ನು ಧ್ವನಿಸಿ ಬಿಡುತ್ತದೆ : ವಿರುದ್ಧಾಭಿಪ್ರಾಯಗಳನ್ನು ಮೂಡಿಸಿ ಬಿಡುತ್ತದೆ. ಆದ್ದರಿಂದ ಮೂಲಲೇಖಕ ಬಳಸಿರುವ ಮಾತುಗಳನ್ನು ಎಚ್ಚರದಿಂದ ಗಮನಿಸಬೇಕಾಗುತ್ತದೆ. ಹೀಗೆ ಮಾಡದಿರುವ ಅನೇಕ ನಿದರ್ಶನಗಳು ಈ ಅನುವಾದದಲ್ಲಿ ಕಾಣದೊರೆಯುತ್ತವೆ. ಉದಾಹರಣೆಗೆ ಈ ಪ್ರಸಂಗವನ್ನು ನೋಡಿ :

> ಮೂಲ : "...he...preferred squeezing himself into the captains cabin to the indignity of travelling on deck" (ಪು. 73)
>
> ಅನು : "...ಹಡಗಿನ ಮೇಲ್ಭಾಗದಲ್ಲಿ ಪ್ರಯಾಣಮಾಡುವ **ಅಪಮಾನವನ್ನು ಸಹಿಸದೆ,** ನಾವಿಕನ ಕೋಣೆಯಲ್ಲಿ ಸೇರಿಕೊಂಡು ಪ್ರಯಾಣ ಮಾಡಿದರು.

ಮೊದಲ ದರ್ಜೆಯಲ್ಲಿ ಪ್ರಯಾಣ ಮಾಡಲು ಅವಕಾಶದೊರೆಯದೆ ಇದ್ದುದರಿಂದ, ಆಗ ಗಾಂಧೀಜಿಯವರಿಗೆ ಇದ್ದ ಮಾರ್ಗಗಳು ಎರಡು ; ಒಂದು, ಹಡಗಿನ ಅಟ್ಟದಲ್ಲಿ ಕುಳಿತು ಪ್ರಯಾಣಮಾಡುವುದು. ಎರಡು, ನೌಕೆಯ ಮುಖಸ್ಥ ಕೋಣೆಯಲ್ಲಿ ಹಾಗೂ ಹೀಗೂ ತೂರಿಕೊಂಡು ಪ್ರಯಾಣ ಮಾಡುವುದು. ಇವುಗಳಲ್ಲಿ ಮೊದಲನೆಯದು ಜನ ಉಪೇಕ್ಷೆ ಅಥವಾ ತಿರಸ್ಕಾರದ ದೃಷ್ಟಿಯಿಂದ ನೋಡುತ್ತಿದ್ದಂಥದು. ಗಾಂಧೀಜಿ ಇವುಗಳಲ್ಲಿ ಎರಡನೆಯದನ್ನೇ ಆಯ್ದುಕೊಂಡರು ಎಂಬುದನ್ನು 'prefe-rred...to' ಎಂಬ ಮಾತುಗಳು ಸೂಚಿಸುತ್ತವೆ. ಆದರೆ, ಅನುವಾದದಲ್ಲಿ ಈ ಆಯ್ಕೆಯ ಪ್ರಶ್ನೆಯೇ ಇಲ್ಲವಾಗಿದೆ. ಇದು ಸರಿಯಾಗಿ ಅನುವಾದಿತವಾಗಿದ್ದರೆ ಕನಿಷ್ಠಪಕ್ಷ "ಹಡಗಿನ ಮೇಲ್ಭಾಗದಲ್ಲಿ ಪ್ರಯಾಣ ಮಾಡುವ ಅಪಮಾನಕ್ಕಿಂತ, ನಾವಿಕನ ಕೋಣೆಯಲ್ಲಿ ಸೇರಿಕೊಂಡು ಪ್ರಯಾಣಮಾಡುವುದೇ ಅವರಿಗೆ ಇಷ್ಟವಾಯಿತು." ಎಂದಾದರೂ ಇರಬೇಕಾಗಿತ್ತು.

ಅಧ್ಯಾಹಾರದ ಸೊಗಸಿನ ಒಂದು ನಿದರ್ಶನವನ್ನು ನೋಡಿ :

> "....the concrete example of a successful experiment in non- violence would be necessary. Will India furnish it ? He hopes so." (ಪು. 319)

ಕೊನೆಯ ವಾಕ್ಯದ ಕೊನೆಯ ಶಬ್ದ 'so' ತುಂಬ ಅರ್ಥಪೂರ್ಣವಾದುದು. ಇಡೀ ಒಂದು ಉಪವಾಕ್ಯವನ್ನೇ ಅದು ಒಳಗೊಳ್ಳುತ್ತದೆ-ಈ ಪ್ರಸಂಗದಲ್ಲಿ 'that it will

furnish such an example' ಎಂಬ ಆಶಯ ಅದರಿಂದ ವ್ಯಕ್ತವಾಗುತ್ತದೆ. ಕನ್ನಡ ಅನುವಾದದಲ್ಲಿಯೂ ಇದು ಇಷ್ಟೇ ಸೂಚ್ಯವಾಗಿ, ಅರ್ಥಪೂರ್ಣವಾಗಿ ಬರ ಬೇಕಾದರೆ. ಆ ಅಂಥ ಹಾಗೆ ಎಂಬಂಥ ಮಾತು ಬರುವುದು ಅಗತ್ಯವಾಗುತ್ತದೆ–"ಆ (ಅಂಥ) ಭರವಸೆ ಅವರಿಗಿತ್ತು" ಅಥವಾ "ಹಾಗೆ ಆದೀತೆಂದು ಅವರು ನಿರೀಕ್ಷಿಸಿದರು" ಎಂಬಂತೆ. ಆದರೆ, ಹಾಗಿಲ್ಲದೆ

"ಅಹಿಂಸೆಯ ಯಶಸ್ವೀ ಪ್ರಯೋಗದ ಒಂದು **ಪ್ರತ್ಯಕ್ಷ** ನಿದರ್ಶನ ಆವಶ್ಯಕ. ಭಾರತ ಅದನ್ನು **ತೋರಿಸೀತೆ** ? ಅವರ ಭರವಸೆಯದು." (ಪು. 336)

ಎಂದು ಈ ಪ್ರಸಂಗ ಕನ್ನಡದಲ್ಲಿ ಕಾಣಿಸಿಕೊಂಡರೆ, ಮೂಲದ ಒತ್ತು ಮಾಯ ವಾಗುತ್ತದೆ. ಅಭಿವ್ಯಕ್ತಿಯ ಶಕ್ತಿ ಅಷ್ಟರ ಮಟ್ಟಿಗೆ ಕುಂಠಿತವಾಗುತ್ತದೆ. ಕನ್ನಡ ಅನು ವಾದದಲ್ಲಿ, ಅದರಲ್ಲಿಯೂ ಕೊನೆಯಲ್ಲಿನ ಸರ್ವನಾಮವನ್ನು ಸೇರಿಸಿ ಸಂಧಿಮಾಡಿ ಬಿಟ್ಟಿರುವುದರಿಂದ ಈ ಒತ್ತು ಸಹಜವಾಗಿ ಸ್ಫುರಿಸದೆ ಬಲವಂತದಿಂದ ಎಳೆದು ತರ ಬಹುದಾದ ಅಂಶವಾಗುತ್ತದೆ. ಹಾಗಾಗುವುದು ಅನಗತ್ಯ ; ಭಾಷೆಯ ಸೂಕ್ಷ್ಮತೆಯ ಕಡೆ ನಮ್ಮ ಕಣ್ಣು ಹರಿದರೆ, ಸುಲಭವಾಗಿ ಇಂಥ ಅಂಶಗಳನ್ನು ಆತ್ಮೀಕರಿಸಿಕೊಳ್ಳಬಹುದು ಎಂಬುದಷ್ಟೇ ನನ್ನ ಅಭಿಪ್ರಾಯ.

ಕೊನೆಯದಾಗಿ ಈ ಕೃತಿಯ ಅನುವಾದದ ಬಗೆಗೆ ಇನ್ನೊಂದು ಮಾತು ಹೇಳ ಬೇಕು. "೫೫೭ ಡೆಮಿ 1/8 ಆಕಾರದ ಪುಟಗಳನ್ನು ಆಕ್ರಮಿಸಿಕೊಂಡಿರುವ ಈ ಸುದೀರ್ಘ ಜೀವನ ಚರಿತ್ರೆಯ ಅನುವಾದದಲ್ಲಿ ಗುಣಾಂಶಗಳು ಏನೂ ಇಲ್ಲವೇ ಇಲ್ಲವೆ ?" ಎಂಬ ಪ್ರಶ್ನೆಯೂ ಏಳಬಹುದು. ಇದೇ ಆಸೆಯಿಂದಲೇ ಹಲವಾರು ಪುಟಗಳನ್ನು ನಾನು ತೌಲನಿಕವಾಗಿ ಅಭ್ಯಸಿಸಿದೆ. ಮೂಲವನ್ನು ಬದಿಗಿಟ್ಟು ಓದಿದಾಗ, ಆ ಮಹಾತ್ಮನ ಚರಿತ್ರೆಯ ಗುರುತ್ವ ಮಹತ್ವಗಳೇ ಕಾರಣವಾಗಿ ಕಥಾವಾಹಿನಿ ನಮ್ಮನ್ನು ಎಳೆದುಕೊಂಡು ಹೋಗುತ್ತದೆ. ಅಂಥ ಅಡೆತಡೆಗಳೇನೂ ಇಲ್ಲದೆ ಇದು ಸರಾಗವಾಗಿ ಓದಿಸಿಕೊಳ್ಳುತ್ತದೆ. ಆದರೆ ಈ ಓದಿಸಿಕೊಳ್ಳುವಿಕೆಯ ಗುಣ ಜಾರುನೆಲ ಎಂಬುದು ತೌಲನಿಕ ಅಭ್ಯಾಸದಲ್ಲಿ ಹೆಜ್ಜೆ ಹೆಜ್ಜೆಗೂ ನಮ್ಮನ್ನು ಕಾಡುತ್ತದೆ. ಮೂಲದ ಅತಿ ದೂರದ ಪ್ರತಿಧ್ವನಿ ಇದಾಗಿದ್ದು, ಮೂಲದ ಆ ಧ್ವನಿಯ ತೀಕ್ಷ್ಣತೆ ಮಾಧುರ್ಯ ಗಳೆಲ್ಲ ನಿಶ್ಶೇಷವಾಗುತ್ತ ಬರುತ್ತಿವೆ ಎಂಬ ಅನುಭವ ಉಂಟಾಗುತ್ತದೆ ; ಹೃದಯದಲ್ಲಿ ನಿರಾಶೆ ತುಂಬಿಕೊಳ್ಳುತ್ತದೆ. ಅನುವಾದಕಾರ್ಯದ ಸಾಹಸಕ್ಕಾಗಿ ಅವರನ್ನು ಅಭಿನಂದಿಸ ಬೇಕಾದರೂ, ಅದರಲ್ಲಿನ ಅವರ ಸೋಲಿಗಾಗಿ ವ್ಯಥೆಪಡಬೇಕಾಗುತ್ತದೆ.

* * *

'ರಾಜ್ಯಶಾಸ್ತ್ರಸಾರ' ಮತ್ತು 'ಭಾರತೀಯ ಇತಿಹಾಸ ಸಮೀಕ್ಷೆ' ಬೇರೆ ಬಗೆಯ ಅನುವಾದಗಳು— ಏಕೆಂದರೆ, ಇವು ಶಾಸ್ತ್ರಗ್ರಂಥಗಳ ಅನುವಾದಗಳು. ಇಲ್ಲಿನ ಅಗತ್ಯ

ಮತ್ತು ನಿರೀಕ್ಷೆಗಳೂ ಭಿನ್ನವಾಗಿರುತ್ತವೆ; ಭಾಷಾಂತರಕಾರನ ಅರ್ಹತೆ–ಅನುಭವಗಳೂ ಹೆಚ್ಚಿನ ಮಟ್ಟದವಾಗಿರಬೇಕಾಗುತ್ತವೆ.

ಉಳಿದ ಪ್ರಕಾರಗಳ ಭಾಷಾಂತರದ ಸಂದರ್ಭದಲ್ಲಿ ಭಾಷಾಂತರಕಾರನಿಗೆ ಮೂಲ ಹಾಗೂ ಉದ್ದಿಷ್ಟ (ಅಂದರೆ ಅನುವಾದದ) ಭಾಷೆಗಳ ಮೇಲಿನ ಪ್ರಭುತ್ವವಷ್ಟೇ ಸಾಕಾದರೆ, ಶಾಸ್ತ್ರಗ್ರಂಥಗಳ ಅನುವಾದದ ಸಂದರ್ಭದಲ್ಲಿ ವಿಷಯದ ಮೇಲಿನ ಪ್ರಭುತ್ವವು ಅತ್ಯಗತ್ಯವಾಗುತ್ತದೆ. ಇವುಗಳಲ್ಲಿ ಯಾವುದೊಂದು ಇಲ್ಲವಾದರೂ, ಅನುವಾದ ನರಳುತ್ತದೆ. ಉದಾಹರಣೆಯೊಂದನ್ನು ಕೊಡಬಹುದಾದರೆ, ಇದು ಈಜಲು ನೀರಿಗೆ ಬಿದ್ದಂತೆ. ಈಜಲು ಬಾರದೆ ಹೋದರೆ ಮುಳುಗಿ ಸಾಯುವುದು ನಿಶ್ಚಿತ. ಈಜಲು ಬಂದರೂ, ಕೈಕಾಲು ಕಟ್ಟಿ ಹಾಕಿ ನೀರಿಗೆ ಎಸೆದಾಗ ವ್ಯಕ್ತಿ ಸಾಯುವುದು ಖಂಡಿತ. ಭಾಷೆಗಳ ಮೇಲಿನ ಪ್ರಭುತ್ವ ಈಜುವ ವಿದ್ಯೆ ಇದ್ದಂತೆ ; ವಿಷಯದ ಮೇಲಿನ ಪ್ರಭುತ್ವ ಬಂಧನ–ರಾಹಿತ್ಯದಂತೆ. ಹೀಗಾಗಿ, ಇಂಥ ಭಾಷಾಂತರಗಳನ್ನು ಕೈಗೊಳ್ಳಬೇಕಾದರೆ, ಈ ಎರಡೂ ವಿಷಯಗಳಲ್ಲಿನ ಪ್ರಭುತ್ವ ಅನಿವಾರ್ಯವಾಗುತ್ತದೆ

ಜೊತೆಗೆ, ಶಾಸ್ತ್ರಗ್ರಂಥಗಳ ಅನುವಾದದಲ್ಲಿ ಇನ್ನೆರಡು ವಿಶಿಷ್ಟ ಸಮಸ್ಯೆಗಳು ಎದುರಾಗುತ್ತವೆ. ಒಂದು : ಪಾರಿಭಾಷಿಕ ಪದಗಳಿಗೆ ಸಂಬಂಧಿಸಿದ್ದು : ಇನ್ನೊಂದು : ಆಯಾವಿಷಯಕ್ಕೆ ವಿಾಸಲಾದ ಶೈಲಿಗೆ ಸಂಬಂಧಿಸಿದ್ದು. ಹೀಗಾಗಿ, ನಿಷ್ಕೃಷ್ಟ ಅರ್ಥದಲ್ಲಿ ಪದಗಳನ್ನು ಬಳಸುವ, ಒಂದು ಅರ್ಥಛಾಯೆಗೆ ಒಂದು ಶಬ್ದವನ್ನು ನಿಗದಿಗೊಳಿಸುವ. ಅಗತ್ಯಾನುಗುಣವಾಗಿ ಅರ್ಥಪೂರ್ಣವಾದ ಸಂವಾದಿ ಶಬ್ದಗಳನ್ನು ಟಂಕಿಸುವ ಹೊಣೆ ಯನ್ನು ನಿರ್ವಹಿಸುವಂತೆಯೇ, ಆಯಾ ಶಾಸ್ತ್ರಕ್ಕೆ ಅನುಗುಣವಾದ ಶೈಲಿಗೆ ಹೊಂದು ವಂತೆ ಭಾಷಾ-ಶೈಲಿಗಳನ್ನು ಕಸಿಮಾಡುವ, ಆದರೆ ಉದ್ದಿಷ್ಟ ಭಾಷೆಯ ಜಾಯ ಮಾನಕ್ಕೆ ಅಸಹಜವಾಗದಂತೆ ಅವನ್ನು ಅಳವಡಿಸುವ ಜಾಣ್ಮೆಯನ್ನೂ, ತೋರಬೇಕಾಗು ತ್ತದೆ. ಭಾಷಾ-ಶೈಲಿಗಳು ಇಂಥ ಉಪಯೋಗಕ್ಕೆ ಈಗಾಗಲೇ ಬಂದಿದ್ದರೆ, ಭಾಷಾಂತರ ಕಾರನಿಗೆ ಪಾರಿಭಾಷಿಕ ಪದ ಮತ್ತು ಶಾಸ್ತ್ರನಿಷ್ಠ ಶೈಲಿಗಳ ದೃಷ್ಟಿಯಿಂದ ಸ್ವಲ್ಪ ವಾದರೂ ನೆರವು ದೊರೆಯುತ್ತದೆ. ಇಷ್ಟಾಗಿಯೂ ತನಗೆ ಸಮರ್ಪಕವೆಂದು ತೋರದ ಪಾರಿಭಾಷಿಕ ಪದಗಳಿಗೆ ಪರ್ಯಾಯ ಪದಗಳನ್ನು ಟಂಕಿಸಿಕೊಳ್ಳುವ ಸಹಜತೆಗೆ ಮತ್ತಷ್ಟು ಸಮೋಪದ ಶೈಲಿಯನ್ನು ರೂಪಿಸುವ ಹೊಣೆಗಾರಿಕೆ ಅವನಿಗೆ ಇದ್ದೇ ಇರುತ್ತದೆ. ಹೀಗಾಗಿ ಈ ಹಿನ್ನೆಲೆಯಲ್ಲಿ ಶಾಸ್ತ್ರಗ್ರಂಥಗಳ ಅನುವಾದದ ಪರಿಶೀಲನೆ ನಡೆಯಬೇಕಾಗುತ್ತದೆ. ಈ ದೃಷ್ಟಿಯಲ್ಲಿ ಮೂರ್ತಿಯವರ ಈ ಕ್ಷೇತ್ರದಲ್ಲಿನ ಅನು ವಾದಗಳ ಇತಿಮಿತಿಗಳನ್ನು ಗುರುತಿಸುವ ಪ್ರಯತ್ನವನ್ನು ಮಾಡಲಾಗಿದೆ.

## ರಾಜ್ಯಶಾಸ್ತ್ರ ಸಾರ

ಅಪ್ಪಾದೊರೈ ಅವರ 'Substance of politics' ಗ್ರಂಥದ ಅನುವಾದ

ವನ್ನು ಪೂರ್ತಿಯವರು ಕೈಗೊಳ್ಳುವ ಹೊತ್ತಿಗೆ ಕೆಲವು ರಾಜ್ಯಶಾಸ್ತ್ರ ಗ್ರಂಥಗಳೂ ಮಾನವಿಕ ಶಾಸ್ತ್ರಗಳ ಶಬ್ದಕೋಶದ ಸಂಪುಟಗಳೂ ಪ್ರಕಟವಾಗಿದ್ದುವು ಎಂಬುದು ಮೊದಲಿಗೇ ನಾವು ಗಮನಿಸಬೇಕಾದ ಸಂಗತಿ. ಅಂದರೆ, ಪಾರಿಭಾಷಿಕ ಪದಗಳು ಹಾಗೂ ಶಾಸ್ತ್ರನಿಷ್ಠ ಶೈಲಿಯ ದೃಷ್ಟಿಯಿಂದ ಆರಂಭಿಕ ಕಾರ್ಯಗಳು ನಡೆದಿದ್ದುವು ; ಅವರೇ ಮೊದಲಿಗರಾಗಿ ಹೆಣಗಬೇಕಾದ ಅಗತ್ಯವಿರಲಿಲ್ಲ.

ಆದರೂ, ವಿಶೇಷಚರ್ಚೆಗೆ ತೊಡಗದೆ, ಪಾರಿಭಾಷಿಕ ಪದಗಳ ಬಗ್ಗೆ ಅವರು ಸಾಕಷ್ಟು ಎಚ್ಚರವಹಿಸಿಲ್ಲವೆಂಬುದನ್ನು ನಿದರ್ಶಿಸಲು ಕೆಲವು ಉದಾಹರಣೆಗಳನ್ನು ಮಾತ್ರ ಇಲ್ಲಿ ಕೊಡುತ್ತಿದ್ದೇನೆ :

1. Primitive Society = ಅನಾದಿ ಕಾಲದ ಸಮಾಜ (ಪು. ೩೩)
2. group = ಸಮುದಾಯ (ಪು. ೩೪)
3. Social organisation = ಸಾಮುದಾಯಿಕ ವ್ಯವಸ್ಥೆ (ಪು. ೩೫)

(ಇವುಗಳ ಸರಿಯಾದ ಪರ್ಯಾಯ : 'ಆದಿಮ ಸಮಾಜ', 'ಸಮೂಹ, ಸಾಮಾಜಿಕ ಸಂಘಟನೆ')

ಭಾಷಾಂತರದ ದೃಷ್ಟಿಯಿಂದ ಇದು ಇನ್ನೂ ನಿರಾಶೆಯನ್ನೂ ವಿಷಾದವನ್ನೂ ಉಂಟುಮಾಡುವ ಕೃತಿ. ಭಾಷಾಂತರದ ಬಗೆಬಗೆಯಾದ ದೋಷಗಳಿಗೆ ಇದರಲ್ಲಿ ನಿದರ್ಶನಗಳು ಹೇರಳವಾಗಿ ದೊರೆಯುವಂತಾಗಿ ಬಿಟ್ಟಿರುವುದು ನಿಜಕ್ಕೂ ದುರದೃಷ್ಟಕರವಾದ ಸಂಗತಿ. [ನನ್ನ ತಿಳಿವಿಗೆ (ಹಾಗೂ ಸಾಮಾನ್ಯ ಓದುಗರ ಅರಿವಿಗೆ) ಸುಲಭವಾಗಿ ನಿಲುಕಬಹುದಾಗಿರುವಂಥ ಪಿತೃ ಪ್ರಧಾನ ಹಾಗೂ ಮಾತೃ ಪ್ರಧಾನ ಕುಟುಂಬ ವ್ಯವಸ್ಥೆಗಳ ಬಗೆಗಿನ ನಿರೂಪಣೆಯನ್ನು ಕುರಿತ] ಎರಡೇ ಎರಡು ಪುಟಗಳನ್ನು ಪರಿಶೀಲಿಸಿದಾಗ ಕಂಡು ಬಂದ ದೋಷಗಳನ್ನು ಇಲ್ಲಿ ವರ್ಗೀಕರಿಸಿದ್ದೇನೆ. ಅವುಗಳನ್ನು ಹೀಗೆ ಪಟ್ಟಿ ಮಾಡಬಹುದು : (i) ಪರ್ಯಾಯ ದೋಷಗಳು. (ii) ಅಸ್ಪಷ್ಟ ಕಲ್ಪನೆಗಳು (iii) ಅಭಿಪ್ರಾಯ ವಿಕೃತಿಗಳು : (iv) ಲೋಪಗಳು ಮತ್ತು (v) ಅನಾಹುತಗಳು.

**ಪರ್ಯಾಯ ದೋಷಗಳು**:— ಸಾಕಷ್ಟು ಸ್ವಾರ್ಥಪರ ಆಲೋಚನೆಗಳಿಲ್ಲದೆ, ಆಯಾ ಸಂದರ್ಭಗಳಲ್ಲಿ ತೋಚಿದ ಪರ್ಯಾಯಗಳನ್ನು ಹಾಕುತ್ತ ಹೋಗುವುದರಿಂದ ಅನುವಾದದ ಗುಣಮಟ್ಟ ಹೇಗೆ ಹಾಳಾಗಬಹುದೆಂಬುದಕ್ಕೆ 'ರಾಜ್ಯ ಶಾಸ್ತ್ರಸಾರ' ಅನೇಕ ಉದಾಹರಣೆಗಳನ್ನು ಒದಗಿಸುತ್ತದೆ. ಅನೇಕ ವೇಳೆ ಇಂಥ ಪರ್ಯಾಯಗಳು ಅಪಾರ್ಥವನ್ನುಂಟು ಮಾಡುತ್ತವೆ. ಉದಾಹರಣೆಗೆ ಇದನ್ನು ನೋಡಿ:

**ಮೂಲ** : "This theory has its strongest supporter in sir Henry Maine..." (ಪು. 36)

**ಅನು** : "ಈ ಸಿದ್ಧಾಂತದ **ಅತ್ಯಂತ ಪ್ರಸಿದ್ಧ ಪ್ರತಿಪಾದನಕಾರ ಸರ್ ಹೆನ್ರಿ ಮೈನ್**" (ಪು. ೩೩)

'Strong' ಎಂಬುದಕ್ಕೆ 'ಪ್ರಸಿದ್ಧ' ಎಂಬ ಪರ್ಯಾಯವನ್ನು ಭಾಷಾಂತರವೊಂದರಲ್ಲಿ ನಾನು ಕಂಡಿರುವುದು ಇದೇ ಮೊದಲು. ಈ ಅನುವಾದ 'ಸಮರ್ಥಕ'ನಿಗೂ ಪ್ರತಿಪಾದಕನಿಗೂ ನಡುವೆ ಇರುವ ಭೇದವನ್ನೇ ತೊಡೆದು ಹಾಕಿಬಿಡುತ್ತದೆ.

ಪರ್ಯಾಯಗಳ ಈ ಯಾದೃಚ್ಛಿಕತೆಗೆ ಅಂದರೆ ಅವು ಏಷ್ಟು ಬೇಕಾಬಿಟ್ಟಿಯಾಗಬಹುದೆಂಬುದಕ್ಕೆ ಈ ಪ್ರಸಂಗ ಉತ್ತಮ ನಿದರ್ಶನವಾಗಬಹುದು:

**ಮೂಲ** : Maine derives his evidence from three sources from accounts by contemporary observers of civilisations less advanced than their own, from the records which particular races have kept of their own history." (ಪು. ೩೬)

**ಅನು** : ಮೈನ್ ತನ್ನ ಸಿದ್ಧಾಂತಕ್ಕೆ ಮೂರು ಮೂಲಗಳಿಂದ ಸಾಕ್ಷಿ **ಕೋರುತ್ತಾನೆ**. ತಮ್ಮ ನಾಗರಿಕತೆಗಳಿಗಿಂತಲೂ ಹಿಂದುಳಿದ ನಾಗರಿಕತೆಗಳು **ವೀಕ್ಷಿಸಿ ಉಲ್ಲೇಖನ ಮಾಡಿರುವವರ** ಬರಹಗಳು· **ಕೆಲವು** ಜನಾಂಗಗಳು ತಮ್ಮ ಇತಿಹಾಸದ ಬಗೆಗೆ **ಬಿಟ್ಟು ಹೋಗಿರುವ** ದಾಖಲೆಗಳು......" (ಪು. ೩೩)

'derive' (ಪಡೆ,... ಸಂಗ್ರಹಿಸು, ಶೇಖರಿಸು-ದ್ಯೋ. ವಿ.ವಿ. ಇಂಕನಿ. ಪು 287) ಎಂಬುದಕ್ಕೆ 'ಕೋರು' ಎಂದು ಅರ್ಥವಾಗಬಹುದಾದರೆ 'kept' ಎಂಬುದು 'left' ಎಂದೂ ಆಗಬಹುದು; 'particular' ಎಂಬುದಕ್ಕೆ 'some' ಸಮಾನಾರ್ಥಕವೂ ಆಗಬಹುದು. ಇತ್ತ 'observers'ಎಂಬುದನ್ನು 'ವೀಕ್ಷಿಸಿ ಉಲ್ಲೇಖನ ಮಾಡಿರುವವರು' ಎಂದು ವಿಸ್ತರಿಸುವ ಅಗತ್ಯವಾದರೂ ಏನು? 'ವೀಕ್ಷಿಸು' ಶಬ್ದವನ್ನು ಕಲ್ಪಿಸಿಕೊಂಡವರಿಗೆ 'ವೀಕ್ಷಕ' ಶಬ್ದವನ್ನು ನಿಷ್ಪನ್ನಗೊಳಿಸಿಕೊಳ್ಳುವುದು ಅಸಾಧ್ಯವಾದ ಮಾತಾಗಬೇಕೆ ? ಇಂಥ ವ್ಯರ್ಥ ವಿಸ್ತರಣಗಳಲ್ಲಿ ಕಾಲ ಕಳೆಯುವಾಗ ಇಲ್ಲಿ ಆಗಿರುವಂತೆ 'contemporary' ಯಂಥ ಮುಖ್ಯ ಶಬ್ದವು ಕಣ್ತಪ್ಪಿಸಿದರ ಆಶ್ಚರ್ಯವಿಲ್ಲವಷ್ಟೆ?

**ಅಸ್ಪಷ್ಟ ಕಲ್ಪನೆಗಳು**: ಮೂಲವನ್ನು ಸ್ಪಷ್ಟವಾಗಿ ಗ್ರಹಿಸದೆ ಹೋದಾಗ, ಮೂಲವನ್ನು ತದ್ವಿರುದ್ಧವಾಗಿ ಅರ್ಥಮಾಡಿಕೊಂಡಾಗ, ಮೂಲ ಸರಿಯಾಗಿ ಅರ್ಥವಾಗದಿದ್ದರೂ ಅರ್ಥವಾಗಿರುವುದಾಗಿ ಭ್ರಮಿಸಿಕೊಂಡು ಭಾಷಾಂತರಿಸತೊಡಗಿದಾಗ ಉದ್ದಿಷ್ಟಭಾಷೆಯಲ್ಲೂ ಮೂಲದ ಕಲ್ಪನೆ ಅಸ್ಪಷ್ಟವಾಗಿ ಮೂಡಬಹುದು. ಅಂಥ

ಮೂಲವನ್ನಾದರೂ ನೋಡಿ ಅವನು ವಿಷಯವನ್ನು ಸ್ಪಷ್ಟವಾಗಿ ಅರಿಯಬಹುದು ಆದರೆ ಉದ್ದಿಷ್ಟ ಅಸ್ಪಷ್ಟತೆ ಸೂಕ್ಷ್ಮವಾಚಕನ ಗಮನಕ್ಕೆ ಬಾರದೆ ಇರದು. ಅಂಥ ಸಂದರ್ಭದಲ್ಲಿ ಭಾಷೆಯು ವಾಕ್ಯರಚನೆ ಸರಿಯಾಗಿದ್ದಾಗ, ಭಾಷಾಂತರಕಾರನಿಗೆ ಅಸ್ಪಷ್ಟವಾಗಿರುವ ವಿಚಾರ ಇಂಥವಾಚಕನ ಕಣ್ಣಿನ್ನೂ ತಪ್ಪಿಸುವುದು. ಇಂಥ ಒಂದು ನಿದರ್ಶನವನ್ನು ನೋಡಿ

**ಮೂಲ**: "Briefly, the state is an extension of the family,the head of the state being the father, the people his children." (ಪು. 36)

**ಅನು** : "ಸಂಗ್ರಹವಾಗಿ ಹೇಳುವುದಾದರೆ, ಕುಟುಂಬದ ವಿಸ್ತರಣೆಯೇ ರಾಜ್ಯ. **ಕುಟುಂಬ ರಾಜ್ಯದ ಅಧಿಪತಿ ತಂದೆ, ಪಿತೃ; ಅವನ ಮಕ್ಕಳೇ ಪ್ರಜೆಗಳು.**" (ಪು. ೩೪)

ಈ ಅನುವಾದದಲ್ಲಿ ಅಭಿಪ್ರಾಯ ತಿರುಗು ಮುರುಗಾಗಿದೆ. "ರಾಜ್ಯರೂಪದ ಕುಟುಂಬದಲ್ಲಿ, ರಾಜ್ಯದ ಅಧಿಪತಿ ತಂದೆಯಿದ್ದಂತೆ. ಪ್ರಜೆಗಳು ಮಕ್ಕಳಿದ್ದಂತೆ" ಎಂಬ ಅಭಿಪ್ರಾಯ ಅನುವಾದಕರ ಅಜ್ಞಾನಕ್ಕೆ ಆಹುತಿಯಾಗಿ ಅಗೋಚರವಾಗಿದೆ ಎಂಬುದಕ್ಕೆ ಹೆಚ್ಚಿನ ವ್ಯಾಖ್ಯಾನ ಅಗತ್ಯವಿಲ್ಲ. ಮೂಲವನ್ನು ಸರಿಯಾಗಿ ಅರ್ಥೈಸಿಕೊಳ್ಳದೆ, ಅಸ್ಪಷ್ಟವಾಗಿ(?) ಮನಸ್ಸಿನ್ನೇ ಕಲ್ಪಿಸಿಕೊಂಡು 'ಕುಟುಂಬ ರಾಜ್ಯ'ವೆಂಬ ಕಲ್ಪನೆಯೊಡನೆ ಮುಂದುವರಿದದ್ದೇ ಈ ದೋಷಸಂತಾನಗಳಿಗೆ ಎಡೆಗೊಟ್ಟಿದೆ.

**ಅಭಿಪ್ರಾಯ ವಿಕೃತಿಗಳು :** ಇದು ಅಸ್ಪಷ್ಟ ಕಲ್ಪನೆಯಿಂದ, ಅಲಕ್ಷ್ಯದಿಂದ, ಅಜ್ಞಾನದಿಂದ ಉಂಟಾಗುವ ದೋಷಗಳಲ್ಲಿ ಒಂದು. ಮೊದಲ ಎರಡು ಬಗೆಯ ವಿಕೃತಿಗಳಿಗೆ ಈ ಅನುವಾದದಲ್ಲಿ ನಿದರ್ಶನ ದೊರೆತಿದೆ. ಉದಾಹರಣೆಗೆ ಈ ಪ್ರಸಂಗವನ್ನು ನೋಡಿ :

ಮೂಲ : "it must be emphasised that the patriarchal society, which, according to this theory, was the foundation of modern state, was characterized by three features: " (ಪು. 36)

**ಅನು** : "ಆಧುನಿಕ ರಾಜ್ಯದ ಮೂಲ, ಈ ಸಿದ್ಧಾಂತದ ಪ್ರಕಾರವಾಗಿ, ಪಿತೃಸತ್ತಾತ್ಮಕ ಸಮಾಜವೆನ್ನುವುದಕ್ಕೆ ಮೂರು ಪ್ರಧಾನ ಲಕ್ಷಣಗಳಿವೆ." (ಪು. ೩೪)

ಮೊದಲನೆಯದಾಗಿ, ಈ ವಾಕ್ಯರಚನೆಯೇ ವಿಲಕ್ಷಣವಾಗಿದೆ. ಎರಡನೆಯದಾಗಿ, ಈಗಿರುವಂತೆ ಅದು 'ಲಕ್ಷಣ' ಎಂಬುದು 'ಕಾರಣ' ಎಂಬ ಅರ್ಥದಲ್ಲಿ ಬಳಕೆಯಾಗಿರ

ಬೇಕೆಂದು ಭ್ರಮಿಸುವಂತೆ ಮಾಡುತ್ತದೆ. ಈ ಎಲ್ಲ ಕಾರಣಗಳಿಂದಾಗಿ, ಮೂಲದ ಅಭಿಪ್ರಾಯವೇನೆಂಬುದು ಸರಿಯಾಗಿ ತಿಳಿಯದೆ ಹೋಗುತ್ತದೆ ಅಥವಾ ಅದನ್ನು ನಾವು ತಪ್ಪಾಗಿ ಗ್ರಹಿಸುವಂತೆ ಮಾಡುತ್ತದೆ. "ಈ ಸಿದ್ಧಾಂತದ ಪ್ರಕಾರ ಆಧುನಿಕ ರಾಜ್ಯಕ್ಕೆ ತಳಹದಿಯಾಗಿರುವುದು ಪಿತೃಪ್ರಧಾನ ಸಮಾಜ. ಈ ಸಮಾಜಕ್ಕೆ ಮೂರು ವಿಶಿಷ್ಟ ಲಕ್ಷಣಗಳಿವೆ" ಎಂಬ ಅಭಿಪ್ರಾಯವನ್ನು ಭಾಷಾಂತರಿತವಾಕ್ಯದಿಂದ ಹೊರಡಿಸುವುದು ಶ್ರಮಸಾಧ್ಯವೇ ಸರಿ. ಈ ಎಲ್ಲ ಗೊಂದಲಗಳಲ್ಲಿ 'ಇವನ್ನು ಒತ್ತಿ ಹೇಳಬೇಕು' ಎಂಬ ಪದಪುಂಜ ತಪ್ಪಿಸಿಕೊಂಡರೆ ಆಶ್ಚರ್ಯವೇನೂ ಇಲ್ಲ.

ಒಂದೇ ಒಂದು ಶಬ್ದವನ್ನು ಬಿಟ್ಟರೂ ಅಭಿಪ್ರಾಯ ಹೇಗೆ ಸಂಪೂರ್ಣವಾಗಿ ವಿಕೃತಗೊಳ್ಳಬಹುದು ಎಂಬುದಕ್ಕೆ ಈ ಕೆಳಗಿನ ಪ್ರಸಂಗ ನಿದರ್ಶನವನ್ನು ಒದಗಿಸುತ್ತದೆ :

**ಮೂಲ :** "........The patriarchal society has been the foundation of Later institutions every where." (ಪು. 37)

**ಅನು :** "....ಈ ಪಿತೃಸತ್ತಾತ್ಮಕ ಸಮಾಜವೇ ಎಲ್ಲೆಲ್ಲಿಯೂ ಸ್ಥಾಪಿತವಾದ **ಇತರ** ಸಂಸ್ಥೆಗಳಿಗೂ ಕಾರಣವೆಂದು ಹೇಳುವುದು." (ಪು. ೩೪)

'ಲೇಟರ್' ಎಂಬ ಶಬ್ದದ ಮೂಲಕ ಮೂಲದಲ್ಲಿ ಸೂಚಿತವಾಗಿರುವ ಕಾಲ ಪರಿಜ್ಞಾನ ಅನುವಾದದಲ್ಲಿ ಅದೃಶ್ಯವಾಗಿ ಇತರ ಸಂಸ್ಥೆಗಳನ್ನೆಲ್ಲ ಒಳಗೊಳ್ಳುವಂತಾಗಿದೆ. ಅನುವಾದ ಬೇರೇನನ್ನಾದರೂ ಮಾಡಲಿ ಇಂಥ 'ಪವಾಡ' ವನ್ನು ಮಾತ್ರ ಮಾಡಬಾರದು.

ಶಾಸ್ತ್ರ ಸಂಬಂಧವಾದ ವಿವೇಚನೆಗಳಲ್ಲಿ ಇತರ ಶಾಸ್ತ್ರಗಳ ಪರಿಕಲ್ಪನೆಗಳು ಬಂದು ಸೇರಿಕೊಳ್ಳುವುದುಂಟು. ಆ ಪರಿಕಲ್ಪನೆಗಳು ಕ್ಲಿಷ್ಟವಾಗಿದ್ದಲ್ಲಿ ಹಾಗೂ ಅಂಥ ಪರಿಕಲ್ಪನೆಗಳನ್ನು ಸ್ಪಷ್ಟಪಡಿಸಿಕೊಳ್ಳುವ ಸಾಧನ—ಸೌಲಭ್ಯ—ಅವಕಾಶಗಳು ದೊರೆಯದೆ ಇದ್ದಲ್ಲಿ, ತನಗೆ ತಿಳಿದಮಟ್ಟಿಗೆ ಅವನ್ನು ನಿರೂಪಿಸುವಲ್ಲಿ ಭಾಷಾಂತರಕಾರ ಎಡವಿದರೆ, ಆಗ ಅದು ಕ್ಷಮ್ಯವೂ ಆಗಬಹುದು. ಆದರೆ ತೀರ ಸರಳವೂ, ಮೂಲಭೂತವೂ ಆದ ಪರಿಕಲ್ಪನೆಯನ್ನು ಸರಿಯಾಗಿ ಗ್ರಹಿಸದೆ, ತಪ್ಪಾಗಿ ಅಥವಾ ಬೇರೆ ರೀತಿಯಲ್ಲಿ ನಿರೂಪಿಸಿದರೆ ಆಗ ಅದು ಆಕ್ಷೇಪಾರ್ಹವಾಗುತ್ತದೆ. ಅಂಥ ಒಂದು ನಿದರ್ಶನವೂ ಇಲ್ಲಿದೆ :

**ಮೂಲ :** "There has been a parallel development, but the patriarchal line is thicker and longer." (38)

**ಅನು** : "ಎರಡೂ ಸಮಾನಾಂತರವಾಗಿ ಬೆಳೆದಿವೆ. ಆದರೆ ಪಿತೃಸತ್ತಾತ್ಮಕ ಸಿದ್ಧಾಂತದ **ವಾಹಿನಿ** ಗಾತ್ರವಾಗಿಯೂ ದೀರ್ಘವಾಗಿಯೂ ಹರಿದಿದೆ. (ಪುಟ. ೩೫)

ಇಲ್ಲಿ ಅಡಕವಾಗಿರುವುದು ಸಮಾನಾಂತರವಾಗಿ ಸಾಗುವ ಎರಡು ಸರಳ ರೇಖೆಗಳ ಕಲ್ಪನೆ. ಇವುಗಳಲ್ಲಿ ಒಂದು ತೆಳುವಾಗಿ ಸ್ವಲ್ಪದೂರ ಸಾಗಿದೆ. ಇನ್ನೊಂದು ಕಣ್ಣಿಗೆ ಎದ್ದು ಕಾಣುವಂತೆ ದಪ್ಪನಾಗಿ ಹಾಗೂ ಮತ್ತಷ್ಟು ದೂರಸಾಗಿದೆ. ಮಾತೃಪ್ರಧಾನ ಹಾಗೂ ಪಿತೃಪ್ರಧಾನ ಕುಟುಂಬ ವ್ಯವಸ್ಥೆಗಳನ್ನು ಈ ಬಗೆಯಲ್ಲಿ ವ್ಯಾಖ್ಯಾನಿಸಿದರೆ, ಪಿತೃಪ್ರಧಾನ ಕುಟುಂಬವ್ಯವಸ್ಥೆ ಆ ದಪ್ಪ ಹಾಗೂ ಬಹುದೂರ ಸಾಗಿರುವ ರೇಖೆಯನ್ನು ಹೋಲುತ್ತಿದೆ ಎಂಬುದು ಮೂಲಲೇಖಕರ ಆಶಯ. ಇದಕ್ಕೆ ಬದಲಾಗಿ ಅನುವಾದದಲ್ಲಿ 'ವಾಹಿನಿ'ಯೊಂದು ಹರಿದಿದೆ. ಮೂಲ ಚಿತ್ರವೇ ಇದರಿಂದ ಬದಲಾಗಿದೆ. ಇನ್ನೊಂದು ವ್ಯವಸ್ಥೆ ಬತ್ತಿ ಹೋಯಿತೇನೋ ಎಂಬ ತಪ್ಪು ಕಲ್ಪನೆಗೂ ಎಡೆಮೊರೆಯುವಂತಾಗಿದೆ.

**ಲೋಪಗಳು** : ಒಂದೆರಡು ಶಬ್ದಗಳನ್ನು ಅಥವಾ ಶಬ್ದ ಪುಂಜಗಳನ್ನು ಅಥವಾ ಉಪವಾಕ್ಯಗಳನ್ನು ತಿಳಿದೋ ತಿಳಿಯದೆಯೋ ಕಣ್ತಪ್ಪಿನಿಂದಾಗಿಯೋ ಭಾಷಾಂತರಿಸದೆ ಬಿಟ್ಟು ಬಿಟ್ಟಿರುವ ಪ್ರಸಂಗಗಳು ಈಗಾಗಲೇ, ಮೇಲೆ ಕಾಣಿಸಿರುವ ನಿದರ್ಶನಗಳಲ್ಲಿ ನಮ್ಮ ಗಮನಕ್ಕೆ ಬಂದಿವೆ. ಆದರೆ ಮೂಲದ 37 ನೆಯ ಪುಟದಲ್ಲಿ ಬರುವ ಈ ಇಡೀ ಪ್ಯಾರಾ ಅನುವಾದದಲ್ಲಿ ಕಾಣೆಯಾಗಿದೆ.

> "The the ory has the merit, however, that as an explanation of the origin of the state it emphasises one essential element in the making of the state, viz kniship."

ಪ್ರಕರಣದ ಸಮಾರೋಪದ ರೂಪದಲ್ಲಿ ಬಂದಿರುವ ಈ ಪ್ಯಾರ ಭಾಷಾಂತರದಲ್ಲಿ ಇಲ್ಲವಾಗಿರುವುದರಿಂದ ವಿಚಾರಧಾರೆ ಇದ್ದಕ್ಕಿದ್ದಂತೆ ತುಂಡಾಗುತ್ತದೆ. ಗುಣದೋಷಗಳ ವಿವೇಚನೆಯ ಸಂದರ್ಭದಲ್ಲಿ ಗುಣೋಲ್ಲೇಖದ ಈ ಭಾಗವೇ ಬಿಟ್ಟು ಹೋಗುವುದು ಅನಪೇಕ್ಷಿತವಾದ ಸಂಗತಿ. ಹೀಗಾಗಿ, ಈ ಬಗೆಯ ಲೋಪ ಗುರುತರವಾಗಿ ಪರಿಣಮಿಸುತ್ತದೆ.

**ಅನಾಹುತಗಳು** : ಅಸಮರ್ಪಕ ಅರಿವಿನಿಂದ ಅನೇಕವೇಳೆ ಎಂಥ ಅನಾಹುತಗಳು ಆಗಬಹುದೆಂಬುದಕ್ಕೆ ಒಂದೆರಡು ನಿದರ್ಶನಗಳೂ ಇಲ್ಲಿಯೇ ದೊರೆತದ್ದು ನನಗೆ ತುಂಬ ವಿಷಾದವನ್ನು ಉಂಟು ಮಾಡಿತು. ಸಾಮಾನ್ಯ ವಿವೇಕದ, ಕ್ಷಣಮಾತ್ರದ ಪ್ರಯತ್ನದಿಂದ ದೂರವಾಗಬಹುದಾಗಿದ್ದ ದುರಂತ ಇದು ಎಂಬುದು ನನ್ನ ವಿಷಾದವನ್ನು ಮತ್ತಷ್ಟು ಹೆಚ್ಚಿಸಿತು. ಆ ಪ್ರಸಂಗ ಅಥವಾ ಪ್ರಸಂಗಗಳು ಹೀಗಿವೆ :

(i) **ಮೂಲ :** "An aggregation of tribes makes the state." (ಪುಟ. 36)

**ಅನು :** "ಕುಲಗಳಲ್ಲಿ **ಅಧಿಕಾರಕ್ಕಾಗಿ ಪರಸ್ಪರ ದಾಳಿ ನಡೆದರೆ,** ಅದು ರಾಜ್ಯವಾಯಿತು." (ಪುಟ, ೩೩)

(ii) **ಮೂಲ :** "The aggregation of Families forms the gens or House. The aggregation of Houses makes the Tribe. The aggregation of tribes constitutes the commonwealth." (ಪು, ೩೪)

**ಅನು :** "ಕುಟುಂಬಗಳ **ದಾಳಿಯಾದರೆ** ಒಂದು ಮನೆತನವಾಯಿತು (Gens) ಮನೆತನಗಳ **ದಾಳಿ** ಬುಡಕಟ್ಟಾಯಿತು. ಬುಡಕಟ್ಟುಗಳ **ದಾಳಿ** ರಾಜ್ಯವಾಯಿತು"

ಇದು 'aggregation' ಶಬ್ದವನ್ನು 'agression' ಎಂದು ಭಾವಿಸಿ ಕೊಂಡು ಅನುವಾದಕರು ಎಸಗಿರುವ ಮಹಾಪ್ರಮಾದ. ಹಾಗೆ ಭಾವಿಸಿಕೊಂಡರೂ, ಕನಿಷ್ಠಪಕ್ಷ ಆ ಶಬ್ದಕ್ಕೆ ಆ ಬಗೆಯ ಅರ್ಥವೇನಾದರೂ ಇದೆಯೇ ಎಂದು ಒಂದು ಕ್ಷಣ ಯಾವುದೇ ಒಂದು ಕೋಶವನ್ನು ಪರಿಶೀಲಿಸಿದ್ದರೂ ಈ ಅನಾಹುತ ಆಗುತ್ತಿರಲಿಲ್ಲ. ಕೋಶವನ್ನೇ ನೋಡಬೇಕಾದ ಅಗತ್ಯವೂ ಇರಲಿಲ್ಲ. ಸಾಮಾನ್ಯ ವಿವೇಕವೂ ಈ ಸಂದರ್ಭದಲ್ಲಿ ಅನುವಾದಕರಿಗೆ 'ಕೈಕೊಟ್ಟಿದೆ' ಕುಲಗಳಲ್ಲಿ **'ದಾಳಿನಡೆದರೆ'** ಅದು ಹೇಗೆ ರಾಜ್ಯವಾದೀತು ಅಥವಾ 'ಕುಟುಂಬಗಳ **ದಾಳಿಯಾದರೆ** ಒಂದು ಮನೆತನ ಹೇಗಾದೀತು ಎಂದಾದರೂ ಯೋಚಿಸಿದ್ದರೆ, ಈ ಅಕ್ಷಮ್ಯ ಅಪರಾದ ಘಟಿಸುತ್ತಿರಲಿಲ್ಲ. ಭಾಷಾಂತರದಲ್ಲಿ ಅರಿವು ಮತ್ತು ಸಾಮಾನ್ಯ ವಿವೇಕ ಜಾಗೃತವಾಗಿರದಿದ್ದರೆ ಎಂಥ ದುರಂತ ಸಂಭವಿಸುವುದೆಂಬುದಕ್ಕೆ ಇದೊಂದು ಭಯಂಕರ ನಿದರ್ಶನವಾಗಿ ಬಿಟ್ಟಿದ್ದು ನಿಜಕ್ಕೂ ವಿಷಾದದ ಸಂಗತಿ.

ತಾವು ಆಯ್ದುಕೊಂಡ ಪರ್ಯಾಯಗಳನ್ನು ಬಳಸುವಾಗ ಅವುಗಳಿಗೆ ಇರಬಹುದಾದ ಅರ್ಥವೇನೆಂಬುದನ್ನು ಆಲೋಚಿಸುವ ಗೊಡವೆಗೂ ಹೋಗುವುದಿಲ್ಲ. ಉದಾಹರಣೆಗೆ, 'ಇಜ್ಜೋಡು' ಪದವನ್ನು ನೋಡೋಣ ಇದಕ್ಕೆ 'ಹೊಂದಿಕೆ ಇಲ್ಲದ ಜೊತೆ' ಎಂದು ಕೋಶ ಅರ್ಥ ನೀಡುತ್ತದೆ. ನಿತ್ಯದ ಬಳಕೆಯಲ್ಲಿಯೂ ಈ ಶಬ್ದ ಇದೇ ಅರ್ಥದಲ್ಲಿ ಬಳಕೆಯಲ್ಲಿದೆ. ಆದರೆ ಈ ಅನುವಾದಕರ ದೃಷ್ಟಿಯಲ್ಲಿ ಮಾತ್ರ ಇದಕ್ಕೆ ಬೇರೆಯದೇ ಆದ ಅರ್ಥವಿರುವಂತೆ ತೋರುತ್ತದೆ. ಏಕೆಂದರೆ,

"The battle of plassey (1757) brought in its

> wake...... a system of dyarchy in Bengal, ie, a system of dual control by the company and the Nawab of Bengal" (ಪು. 482) ಎಂಬುದನ್ನು, ಪ್ಲಾಸಿ ಕದನದ(1757) ತರುವಾಯ ......ಬಂಗಾಳದಲ್ಲಿ ಕಂಪೆನಿಯೂ ಮತ್ತು ಬಂಗಾಳದ ನವಾಬನೂ **ಇಜ್ಜೋಡಿ** ಅಧಿಕಾರ ಪದ್ಧತಿಯಲ್ಲಿ ರಾಜ್ಯವಾಳತೊಡಗಿದರು" (ಪು. 377)

ಮೂಲವಾಕ್ಯದಲ್ಲಿ ಬಂದಿರುವ 'dyarchy' ಎಂಬ ಪಾರಿಭಾಷಿಕ ಪದದ ಅರ್ಥ ವೇನೆಂಬುದನ್ನು ಮುಂದಿನ ವಿವರಣಾತ್ಮಕ ಉಪವಾಕ್ಯ ಸಂದೇಹಕ್ಕೆ ಎಡೆ ಇಲ್ಲದಂತೆ 'dual control' ಎಂದು ವಿವರಿಸಿದೆ. ಇಷ್ಟರ ಆಧಾರದ ಮೇಲೆಯೇ ಇದನ್ನು ಸರಿಯಾಗಿ ಅನುವಾದಿಸಿ ಕೊಳ್ಳಬಹುದಾಗಿತ್ತು. ಹಾಗೂ ಆಗದೆ ಹೋಗಿದ್ದರೆ, ಕನಿಷ್ಠ ಪಕ್ಷ ಮೈಸೂರು ವಿಶ್ವವಿದ್ಯಾನಿಲಯದ 'ಇಂಕನಿ'ಯನ್ನು ನೋಡಿದ್ದರೆ. ಅದು 'ದ್ವಿಪ್ರಭುತ್ವ' ಎಂಬ ಉಚಿತ ಪರ್ಯಾಯವನ್ನು ಸೂಚಿಸುತ್ತಿತ್ತು (ಪು. 295) ಕನಿಷ್ಠ ತಮವಾದ ಈ ಯಾವ ಶ್ರಮವನ್ನೂ ಅನುವಾದಕರು ಕೈಗೊಳ್ಳದೆ ಹೋಗಿರುವುದರಿಂದ ಇಲ್ಲಿ ಇಂಥ ಅಸಂಗತಿ ಏರ್ಪಟ್ಟಿದೆ.

ಕೊನೆಯದಾಗಿ, ಈ ಭಾಷಾಂತರದ ಬಗ್ಗೆ ಇಷ್ಟು ಹೇಳಬಹುದು. ಇದರಲ್ಲಿ ಮೂಲದ ಸಾರವೂ ಅನುವಾದಕರ ಅರಿವಿಗ ಸಿಕ್ಕಿಲ್ಲ. ಅತ್ಯಂತ ನಿರ್ಲಕ್ಷ್ಯದಿಂದ, ಬೇಜ ವಾಬ್ದಾರಿಯಿಂದ ಬೇಕಾಬಿಟ್ಟಿಯಾಗಿ ಮಾಡಿರುವ ಭಾಷಾಂತರ ಇದು. ಬಹುಶಃ ಭಾಷಾಂತರದ ಎಲ್ಲ ಬಗೆಯ ದೋಷಗಳಿಗೂ ಇದೊಂದೇ ಕೃತಿ ವೈವಿಧ್ಯ ಪೂರ್ಣವಾದ ಸಮೃದ್ಧವಾದ ನಿದರ್ಶನಗಳನ್ನು ಒದಗಿಸಬಲ್ಲದು. ಒಂದು ಮಾತಿನಲ್ಲಿ ಹೇಳಬೇಕೆಂದರೆ, ಇದು ಕನ್ನಡ ಜನತೆಗೆ ಮಾಡಿದ ಉಪಕಾರವಲ್ಲ, ಅಪಚಾರ.

## ಭಾರತೀಯ ಇತಿಹಾಸ ಸಮೀಕ್ಷೆ

'Sabstance of politics' ನೊಂದಿಗೆ ಹೋಲಿಸಿ ನೋಡಿದರೆ ಪಣಿಕ್ಕರ್ ಅವರ 'A Survey of Indian History' ಯ ಅನುವಾದ ಸರಳವಾದುದು, ಸುಲಭವಾದುದು. ಒಂದು ಅರ್ಥದಲ್ಲಿ ಇದೂ ಶಾಸ್ತ್ರೀಯ ಗ್ರಂಥವೇ ಆದರೂ ಇತರ ಶಾಸ್ತ್ರೀಯ ಗ್ರಂಥಗಳ ಅನುವಾದದಲ್ಲಿ ಎದುರಾಗುವಷ್ಟು ಪ್ರಮಾಣದಲ್ಲಿ ಸಮಸ್ಯೆಗಳು ನಮ್ಮನ್ನು ಕಾಡುವುದಿಲ್ಲ. ಹಲವಾರು ಇತಿಹಾಸಜ್ಞರು ಸ್ವತಃ ಕನ್ನಡದಲ್ಲಿಯೇ ಭಾರ ತೀಯ ಇತಿಹಾಸಗಳನ್ನು ರಚಿಸಿರುವುದರಿಂದ, ಪ್ರಸಿದ್ಧವಾದ ಹಲವು ಆಕರಗ್ರಂಥಗಳು ಕನ್ನಡದಲ್ಲಿಯೂ ಲಭ್ಯವಾಗಿರುವುದರಿಂದ, ನಾವಾಗಿ ಸೃಷ್ಟಿಸಿಕೊಳ್ಳದ ಹೊರತು, ವಿಷ ಯಕ್ಕೆ ಸಂಬಂಧಿಸಿದಂತೆ ಯಾವುದೇ ತಪ್ಪು ಕಲ್ಪನೆಗಳಿಗೆ, ಗೊಂದಲಕ್ಕೆ ಅವಕಾಶವಿಲ್ಲ; ಪಾರಿಭಾಷಿಕ ಪದಗಳ ಹಾಗೂ ವಿಷಯನಿಷ್ಠ ಶೈಲಿಯ ಗೋಜುಗಂಟುಗಳಾಗಲೀ ಇಲ್ಲ.

ಜೊತೆಗೆ ಪಣಿಕ್ಕರ್ ಅವರಷ್ಟು ಸುಂದರವಾಗಿ ಕಾವ್ಯಮಯವಾಗಿ ಚೇತೋಹಾರಿಯಾಗಿ ಸಂಕ್ಷಿಪ್ತವಾಗಿ ಸ್ಪಷ್ಟವಾಗಿ ಸಾಧಾರವಾಗಿ ವಿಷಯ ನಿರೂಪಣೆ ಮಾಡಬಲ್ಲರು ವಿರಳ. ಇಂಥ ಗ್ರಂಥವೊಂದರ ಅನುವಾದ ಸಹಜವಾಗಿಯೇ ಆದರ್ಶಪ್ರಾಯವಾಗಿ ಮೂಡ ಬೇಕು. ಆದರೆ ನಮ್ಮ ದುರ್ದೈವದಿಂದ ಹಾಗೆ ಆಗಿಲ್ಲ.

ಮೂರ್ತಿಯವರ ಅನುವಾದ ವಿಧಾನವೇ-ಅಂದರೆ, ಅಭಿಪ್ರಾಯವನ್ನು ನಿರೂಪಿ ಸಿದರೆ ಆಯಿತು ಎಂಬ ಭ್ರಾಮಕ ಕಲ್ಪನೆ, ಭಾಷಾಂತರಕಾರ ಎಷ್ಟು ಬಗೆಯಲ್ಲಿ ಶ್ರಮಿಸ ಬೇಕಾಗುತ್ತದೆ ಎಂಬುದರ ಬಗೆಗಿನ ಕಲ್ಪನೆಯೂ ಇಲ್ಲದಿರುವುದು, ಉದ್ದೇಶಪೂರ್ವಕ ವೆನ್ನಲಾಗದಿದ್ದರೂ ಭಾಷಾಂತರಕಾರನ ಜವಾಬ್ದಾರಿಯ ಬಗೆಗಿನ ಅಲಕ್ಷ್ಯ ಇವುಗಳೇ– ಈ ಭಾಷಾಂತರವೂ ಹದಗೆಟ್ಟು ಹೋಗಲು ಕಾರಣವಾಗಿದೆ. ಎದ್ದುಕಾಣುವ ಕೆಲವು ತೀವ್ರ ಬಗೆಯ ದೋಷಗಳನ್ನು ಮುಂದೆ ನಿರೂಪಿಸಲಾಗಿದೆ.

(i) **ಯಾದೃಚ್ಛಿಕ ಅರ್ಥಗಳು:** ಖಚಿತವಾದ ಅರ್ಥವೇ ಇಲ್ಲವೇನೋ ಎಂಬಂತೆ ಮಾತುಗಳ ಬಳಕೆಯಾಗಿರುವುದು ಈ ಅನುವಾದದಲ್ಲಿ ಎದ್ದುಕಾಣುವ ಸಂಗತಿ, ಉದಾಹರಣಾರ್ಥವಾಗಿ ಈ ಕೆಲವು ಶಬ್ದಗಳನ್ನು ನೋಡಬಹುದು.

1. considered=ಪ್ರತೀತಿ ಇದೆ(177), ಪ್ರಸಿದ್ಧವಾಗಿದೆ (178)
2. associated =ತಿಳಿದುಬರುತ್ತದೆ(177)
3. prosperity =ಅಭಿವೃದ್ಧಿ (178)
4. style and splendour=ವೈಭವಯುತ ಜೀವನ ಶೈಲಿ (ಪು. 178)
5. land mark=ಪ್ರಧಾನ ಹಂತ (ಪು. 377), ಹೆಗ್ಗುರುತು (ಪು. 376)

(ii) **ಪಾರಿಭಾಷಿಕ ಅಸಮರ್ಪಕತೆ:** ಪಾರಿಭಾಷಿಕ ಶಬ್ದಗಳನ್ನು ರೂಪಿಸಿ ಕೊಳ್ಳುವ ಅವರವಿಧಾನಕ್ಕೆ ನಿದರ್ಶನವಾಗಿ ಈ ಕೆಲವು ಶಬ್ದಗಳನ್ನು ನೋಡಬಹುದು :

1. Military state=ಸೈನ್ಯದ ಆಧಾರದ ಮೇಲೆ ನಿಂತಿದ್ದ ರಾಷ್ಟ್ರ (ಪು. 177)
2. Commercial=ವ್ಯಾಪಾರ (177) ('ವಾಣಿಜ್ಯ' ಎಂಬುದು ಸೂಕ್ತ ಪರ್ಯಾಯ)
3. Classical work=ಅಭಿಜಾತ ಕೃತಿ (ಪು. 177) (ಈ ಪ್ರಸಂಗದಲ್ಲಿ 'ಮಹಾಕೃತಿ' ಎಂಬ ಅರ್ಥವನ್ನು ಇಟ್ಟುಕೊಳ್ಳಬೇಕು.)
4. State=ರಾಜ್ಯ (36) ಒಕ್ಕೂಟ (386)

(iii) **ಅಸಂವಾದಿ ನುಡಿಗಟ್ಟುಗಳು :** ನುಡಿಗಟ್ಟುಗಳನ್ನು, ಶಬ್ದಪುಂಜಗಳನ್ನು ಅವರು ಅನುವಾದಿಸಿಕೊಳ್ಳುವುದು ಹೀಗೆ:

1. Fully alive to=ನಂಬಿದ್ದರು (178)
2. Eclipsing the fame=ಕೀರ್ತಿಯನ್ನು ಮೀರಿಸು (ಪು. 178)
3. For over a hundred and forty years=ಸುಮಾರು ನೂರ್ನೈವತ್ತು ವರ್ಷಗಳ ಕಾಲ (ಪು. 179)

(iv) **ಅಂಕಿತನಾಮಗಳ ಬಗೆಗಿನ ಅಲಕ್ಷ್ಯ** : ಅಂಕಿತನಾಮಗಳ ವಿಷಯದಲ್ಲಿ ಅಭಾರತೀಯನೂ ತೋರಲಾರದಷ್ಟು ಅಲಕ್ಷ್ಯವನ್ನು ತೋರಿದ್ದಾರೆಂಬುದು ನಮ್ಮನ್ನು ಬೆಚ್ಚಿಸದೆ ಇರದು. ಇಲ್ಲಿ ಅಂಥ ಕೆಲವು ಉದಾಹರಣೆಗಳನ್ನು ಉಲ್ಲೇಖಿಸಿದೆ ;

1. ಪೆದ್ದಣ. (ಪು. 178)–ಸರಿಯಾದ ರೂಪ 'ಪೆದ್ದನ'
2. ಪರಾಸರ (ಪು. )– ,, 'ಪರಾಶರ'
3. ಅಮುಕ್ತ ಮಾಲ್ಯದ್ಯ (ಪು. 178)– ,, 'ಆಮುಕ್ತ ಮಾಲ್ಯದ'
4 ಮಧುರ ವಿಜಯ (ಪು. ) ,, 'ಮಧುರಾವಿಜಯಂ'
5. ಇಷುಧಾಪನ್ (ಪು. ೨೧೮) ,, 'ಎಳುತ್ತಚ್ಚನ್'

(v) **ಪರಿಷ್ಕರಣಾಭಾವ** : ಅನುವಾದವನ್ನು ಪರಿಷ್ಕರಿಸುವ ಕ್ರಮವೇ ಇವರಲ್ಲಿ ಇಲ್ಲವೇನೋ ಎಂಬ ಅನುಮಾನವೂ ಮೂಡುತ್ತದೆ. ಉದಾಹರಣೆಗೆ ಈ ಪ್ರಸಂಗವನ್ನು ನೋಡಿ :

**ಮೂಲ** ; "Madhava vidyaranya is traditionally associ ited with the founding of the empire itself" (ಪು. 145)

**ಅನು : ಸಂಪ್ರದಾಯದ ಪ್ರಕಾರ ಪ್ರಚಲಿತವಿರುವಂತೆ** "ಮಾಧವ ವಿದ್ಯಾರಣ್ಯರ ಹೆಸರು ಸ್ವತಃ ಈ ಸಾಮ್ರಾಜ್ಯದ ಸ್ಥಾಪನೆಯೊಡನೆ **ಸಾಂಪ್ರದಾಯಿಕನಾಗಿ** ಸೇರಿಕೊಂಡಿದೆ" (ಪು. 177)

ರೋಗಗ್ರಸ್ತವಾದಂತೆ. ಜೀವಂತಶವವಾದಂತೆ ಆಗಿಬಿಟ್ಟಿರುವುದೂ ಉಂಟು : ಅನೌಚಿತ್ಯಕ್ಕೆ ಎಡೆಗೊಡುವುದುಂಟು. ಉದಾಹರಣೆಗೆ ಈ ಪ್ರಸಂಗಗಳನ್ನು ನೋಡಿ :

(i) **ಮೂಲ** : Krishnadevaraya as stated before, was himself a scholar, and writer." (ಪು. 145)

**ಅನು : "ಕೃಷ್ಣದೇವರಾಯನೇ ಹಿಂದೆ ಹೇಳಿದಂತೆ.** ಪಂಡಿತ ಹಾಗೂ "ಗ್ರಂಥಕರ್ತನಾಗಿದ್ದನು." **(ಪು. 177)**

ಉಪವಾಕ್ಯಗಳನ್ನು ಉಚಿತ ರೀತಿಯಲ್ಲಿ ವರ್ಗಾಯಿಸಿಕೊಂಡು. ಲೇಖನ ಚಿಹ್ನೆಗಳನ್ನು ಅರ್ಥಪೂರ್ಣ ರೀತಿಯಲ್ಲಿ ಬಳಸಿಕೊಂಡು ಬರೆಯದೆ ಹೋದಲ್ಲಿ ಇಂಥ ಅನೌಚಿತ್ಯಕ್ಕೆ

ಅನಿವಾರ್ಯವಾಗಿ ಎಡೆದೊರೆಯುತ್ತದೆ. ಅನುವಾದವನ್ನು ಓದಿದಾಗ ಲೇಖಕರ ಆಶಯಕ್ಕೆ ವಿರುದ್ಧವಾದ ಅಭಿಪ್ರಾಯವೂ ಮೂಡುವಂತಾಗುತ್ತದೆ. "ಕೃಷ್ಣದೇವ ರಾಯನೇ ಹಿಂದೆ "ತನ್ನ ಬಗ್ಗೆ ಹೇಳಿಕೊಂಡಿದ್ದಾನೆಯೋ ? ಅಥವಾ ಇನ್ನಾರ ಬಗೆಗಾದರೂ ಹಿಂದೆ ಹೇಳಿದ್ದಾನೆಯೆ ಎಂದು ಪ್ರಶ್ನಿಸಲು ಕನ್ನಡವಾಕ್ಯ ಅವಕಾಶ ಮಾಡಿಕೊಡುತ್ತದೆ. ಮೂಲದಲ್ಲಿ ಇಲ್ಲದ ಗೊಂದಲವನ್ನು ಅನುವಾದ ಸೃಷ್ಟಿಸಿ ದಂತಾಗಿದೆ. ಮತ್ತೊಮ್ಮೆ ಈ ವಾಕ್ಯದ ಕಡೆಗೆ ಅನುವಾದಕರು ಗಮನ ಹರಿಸಿದ್ದರೆ, ಈ ದೋಷವನ್ನು ಸುಲಭವಾಗಿ ನಿವಾರಿಸಬಹುದಾಗಿತ್ತಲ್ಲವೆ ?

(ii) **ಮೂಲ** : This great prosperity which amazed foreign observers was reflected in the style and splendour" (ಪು. 146)

**ಅನು** : **"ಈ ಅಗಾಧ ಅಭಿವೃದ್ಧಿಯನ್ನು ಕಂಡು ಬೆರಗಾದ ವಿದೇಶೀ ವೀಕ್ಷಕರು ಅದನ್ನು......ವೈಭವಯುತ ಜೀವನಶೈಲಿಯಲ್ಲೂ ಕಂಡರು" (ಪು. 178)**

ಮನಬಂದಂತೆ ಮೂಲವಾಕ್ಯದ ಘಟಕಗಳನ್ನು ಅನ್ವಯಿಸಿಕೊಂಡುಬಿಟ್ಟಿರುವುದ ರಿಂದ ಮೂಲದ ಪ್ರಧಾನವಾಕ್ಯ ಅಸ್ತವ್ಯಸ್ತಗೊಂಡಿದೆ; ಅದರ ಅರ್ಥವಂತಿಕೆಯೂ ಬದಲಾಗಿದೆ. "ವಿದೇಶೀ ವೀಕ್ಷಕರನ್ನು ಬೆರಗುಗೊಳಿಸಿದ **ಈ ಮಹಾ ಏಳಿಗೆ** (ಅಥವಾ ಉಚ್ಛ್ರಾಯಸ್ಥಿತಿ) ರಾಜರುಗಳ ಹಾಗೂ ಶ್ರೀಮಂತರ ಜೀವನದ ಶೈಲಿಯಲ್ಲಿ, ವೈಭವದಲ್ಲಿ **ಪ್ರತಿಫಲಿಸುತ್ತಿತ್ತು**" ಎಂಬ ಮೂಲದ ಆಶಯ ಇಲ್ಲಿ ಬೇರೆಯೇ ಆದ ರೂಪವನ್ನು, ಅರ್ಥವಂತಿಕೆಯನ್ನು ಪಡೆದುಕೊಂಡಿದೆ. ಆಶಯದಲ್ಲೂ ರಚನೆಯಲ್ಲೂ ಅನುವಾದ ಮೂಲಕ್ಕೆ ಸಂವಾದಿಯಾಗುವುದು ಸಾಧ್ಯವಿರುವಾಗ ಹಾಗೆ ಮಾಡದೆ ಇರುವುದೂ ಕರ್ತವ್ಯಲೋಪವಾಗುತ್ತದೆ: ಅನುವಾದ ಮೂಲದ ಪ್ರತಿಬಿಂಬವಾಗುವ ಅವಕಾಶವೂ ತಪ್ಪಿಹೋಗುತ್ತದೆ.

ಮೂಲದ ಸುಂದರವಾದ ಕಲ್ಪನೆ ನುಚ್ಚುನೂರಾಗಿ ಹೋಗುವ ಈ ಪ್ರಸಂಗ ವಂತೂ ಅನುವಾದಗಳ ಬಗೆಗೆ ನಾವು ನಂಬಿಕೆಯನ್ನೇ ಕಳೆದುಕೊಳ್ಳುವಂತೆ ಮಾಡುತ್ತದೆ.

(iii) **ಮೂಲ** : "........Carried on continuous war with fluctuating success against vijayanagar." (ಪು. 146)
**ಅನು** : **"ವಿಜಯನಗರದ ಮೇಲೆ ಅವಿಚ್ಛಿನ್ನವಾಗಿ ಯುದ್ಧ ನಡೆಸುತ್ತಾ ಮುಂದುವರಿಯಿತು."**

ದೀರ್ಘಕಾಲ ನಡೆದ ಯುದ್ಧದಲ್ಲಿ ಜಯಲಕ್ಷ್ಮಿ ಒಮ್ಮೆ ಇವರನ್ನು ಒಮ್ಮೆ ಅವರನ್ನು ಒಲಿಯುತ್ತ ಇದ್ದಳೆಂಬುದನ್ನು 'ಯಶಸ್ಸಿನ ಚಾಂಚಲ್ಯ'ವೆಂಬ (Fluctu-

ating success) ನುಡಿಗಟ್ಟಿನಲ್ಲಿ ಮೂಲ ಲೇಖಕರು ಅದೆಷ್ಟು ಪ್ರಭಾವಶಾಲಿ ರೀತಿಯಲ್ಲಿ ಅಡಗಿಸಿದ್ದಾರೆ ! ಅನುವಾದದಲ್ಲಿ ಈ ಕಲ್ಪನೆಯ ಸುಳಿವೂ ಇಲ್ಲ. ಅಷ್ಟೇ ಅಲ್ಲ ಅವಿಚ್ಛಿನ್ನವಾಗಿ ಯುದ್ಧ ಮುಂದುವರಿದು, ಜಯಾಪಜಯಗಳ ತಾತ್ಕಾಲಿಕ ಇತ್ಯರ್ಥ ಗಳೂ ಆಗಲಿಲ್ಲವೆಂಬ ಅಸಂಭವ ಕಲ್ಪನೆಯತ್ತ ಇದು ನಮ್ಮನ್ನು ಎಳೆದೊಯ್ಯುತ್ತದೆ. ಮೂಲದ ಕಲ್ಪನೆಯನ್ನು ನಾಮಾವಶೇಷಗೊಳಿಸುವುದು ಹಾಗೂ ಅಸಂಭವ ಕಲ್ಪನೆಗೆ ಎಡೆಗೊಡುವುದು–ಹೀಗೆ ಇಬ್ಬಗೆಯ ದೌರ್ಜನ್ಯಕ್ಕೆ ಈ ಬಗೆಯ ಅನುವಾದಗಳು ದಾರಿ ಮಾಡಿಕೊಡುತ್ತವೆ.

(vi) **ಇತಿಹಾಸ ವಿಪರ್ಯಾಸ :** ಇತಿಹಾಸಗ್ರಂಥವೊಂದರ ಅನುವಾದದಲ್ಲಿ ಅನುವಾದಕ ಎಸಗಬಹುದಾದ ಮಹಾಪರಾಧವೆಂದರೆ ಅಲ್ಲಿಯ ಐತಿಹಾಸಿಕ ತಥ್ಯಗಳು ವಿಪರ್ಯಸ್ತವಾಗುವಂತೆ ಮಾಡುವುದು. ದುರದೃಷ್ಟವಶಾತ್ ಈ ಅನುವಾದದಲ್ಲಿ ಇಂಥ ಕೆಲವು ನಿದರ್ಶನಗಳೂ ದೊರೆಯುತ್ತವೆ. ಉದಾಹರಣೆಗೆ.

**ಮೂಲ** : "The growth of later vaishnavism is closely connected with the Vijayanagar Kings". (ಪು. 145)

**ಅನು** : "ವಿಜಯನಗರದ ಅರಸರು **ವೈಷ್ಣವ ಧರ್ಮದ** ಬೆಳವಣಿಗೆ ಬಗೆಗೆ ಗಾಢ ಸಂಬಂಧ ಹೊಂದಿದ್ದರು" (ಪು. 177)

ಕನ್ನಡ ಅನುವಾದದಲ್ಲಿ 'Later' ಎಂಬ ಶಬ್ದ ಬಿಟ್ಟುಹೋಗಿರುವುದು, ವೈಷ್ಣವ ಧರ್ಮ ವಿಕಾಸದ ಇತಿಹಾಸದ ದೃಷ್ಟಿಯಿಂದ ಎಷ್ಟು ಅಸಂಗತವಾದುದೆಂಬುದನ್ನು ವಿವರಿಸಿ ಹೇಳಬೇಕಾದ ಅಗತ್ಯವಿಲ್ಲ.

ಈ ಬಗೆಯ ದೋಷ ಎಲ್ಲೋ ಒಮ್ಮೆ ಕಣ್ತಪ್ಪಿನಿಂದ ಘಟಿಸಿರುವುದಲ್ಲ. ಮತ್ತೆಮತ್ತೆ ಇದೇ ಬಗೆಯ ದೋಷಗಳು ಎದುರಾಗುವುದು ಅನುವಾದಕರ ಅಸಡ್ಡೆ ಯನ್ನೇ ಬಟ್ಟಬಯಲುಮಾಡಿ ತೋರುತ್ತದೆ. ಉದಾಹರಣೆಗೆ. ಮೇಲಿನ ವಾಕ್ಯದ ಅನಂತರ ದಲ್ಲಿ, ಕೆಲವೇ ಶಬ್ದಗಳ ಅಂತರದಲ್ಲಿ ನಮಗೆ ಎದುರಾಗುವ ಈ ನಿದರ್ಶನವನ್ನು ನೋಡಿ :

**ಮೂಲ** : "........Sayana,........is the last great commentators on the veda." (ಪು. 145)

**ಅನು** : "ಸಾಯಣನು ವೇದಗಳಿಗೆ **ಮಹಾಭಾಷ್ಯ ಬರೆದವರಲ್ಲಿ ಕಡೆಯ ವನು"** (ಪು. 177).

"ಮಹಾನ್ ಭಾಷ್ಯಕಾರರಲ್ಲಿ ಕಡೆಯವನು" ಎಂಬುದಕ್ಕೂ "ಮಹಾಭಾಷ್ಯ ಬರೆದವರಲ್ಲಿ ಕಡೆಯವನು" ಎಂಬುದಕ್ಕೂ ಅಜಗಜಾಂತರ ಅರ್ಥವ್ಯತ್ಯಾಸವಿದೆ. ವೇದ

ಗಳಿಗೆ ಭಾಷ್ಯ ಬರೆದವರು ಅನೇಕರಿರುವಾಗ, ಅವರಲ್ಲಿ 'ಮಹಾನ್' ಎಂದು ಪರಿಗಣಿತ ರಾಗುವವರ ಸಂಖ್ಯೆ ಸೀಮಿತವಾಗಿಯೇ ಇರುತ್ತದೆ. ಅಂಥ 'ಮಹಾವ್ಯಕ್ತಿ'ಗಳಲ್ಲಿ ಸಾಯಣ ಕಡೆಯವನು ಎಂಬುದೂ ಮೂಲದ ಆಶಯ. ಆದರೆ **ಅನುವಾದದ ಪ್ರಕಾರ, 'ಮಹಾಭಾಷ್ಯ' ಬರೆದ ಅನೇಕರಲ್ಲಿ** ಸಾಯಣ ಕಡೆಯವನಾಗುತ್ತಾನೆ. ವ್ಯಕ್ತಿಗೆ ಅನ್ವಯವಾಗುವ ವಿಶೇಷಣವನ್ನು ಕೃತಿಗೆ ಅನ್ವಯಿಸಿದ್ದರಿಂದ ಆಗಿರುವ ದೋಷ ಇದು (**ಸ್ಪಷ್ಟವಾಗಿಯೇ** 'Commentary' ಎಂಬ ಮಾತು ಅಲ್ಲಿ ಇಲ್ಲ.) ಸ್ವಲ್ಪ ಎಚ್ಚರ ತಪ್ಪಿದರೂ ಅರ್ಥವಿಕೃತಿ ಹೇಗೆ ಏರ್ಪಡಬಹುದೆಂಬುದಕ್ಕೆ ಇದೊಂದು ನಿದರ್ಶನ.

ಇನ್ನೊಂದು ಪ್ರಸಂಗವಂತೂ ವಿವೇಕದೂರ ಅನೌಚಿತ್ಯದ ಪ್ರತೀಕವಾಗಿಬಿಟ್ಟಿದೆ, ಅದರ ಮೂಲ ಹೀಗಿದೆ :

"........It was ....the proclaimed successor of the orthodox doctrine of the Hindu empire."

ಇದರ ಅನುವಾದ ಹೀಗಾಗಿದೆ :

" **ಅದು** ........ ಹಿಂದೂ ಸಾಮ್ರಾಜ್ಯದ ಪರಂಪರಾಗತ ಸಿದ್ಧಾಂತದ ಉತ್ತರಾಧಿಕಾರಿಯೆಂದು **ಘೋಷಿಸಿದ್ದಿತು.**"

ಇದರಿಂದಾಗಿ "ವಿಜಯನಗರ ಸಾಮ್ರಾಜ್ಯ ಹಿಂದೂ ಸಾಮ್ರಾಜ್ಯದ ಪರಂಪರಾಗತ ಸಿದ್ಧಾಂತದ ಉತ್ತರಾಧಿಕಾರಿಯಾಗುವ" ಬದಲು, ಇಲ್ಲಿ ಅದು ಇನ್ಯಾರನ್ನೋ (ಯಾರು ಎಂಬುದು ಇಲ್ಲಿ ಅಧ್ಯಾಹಾರವಾಗಿದೆ!) ಉತ್ತರಾಧಿಕಾರಿಯೆಂದು ಘೋಷಿಸುತ್ತಿದೆ. ಹಾಗಿಲ್ಲವೆಂದು ವಾದಿಸಿದರೂ, ತಾನೇ ಉತ್ತರಾಧಿಕಾರಿಯೆಂದು ಘೋಷಿಸಿಕೊಳ್ಳುವುದಕ್ಕೂ, ತಾನು ಉತ್ತರಾಧಿಕಾರಿಯೆಂದು ಘೋಷಿಸಲ್ಪಡುವುದಕ್ಕೂ ವ್ಯತ್ಯಾಸವಿದೆ ಎಂಬುದನ್ನಾದರೂ ಒಪ್ಪಬೇಕಷ್ಟೆ ?

ಮತ್ತೊಂದು ಪ್ರಸಂಗವೂ ಇಂಥದೇ ಅನೌಚಿತ್ಯದ ನಿದರ್ಶನವಾಗಿದೆ. ಬಹಮನಿ ರಾಜ್ಯಗಳು ಪರ್ಷಿಯಾದಿಂದ ಸೈನಿಕ ಅಧಿಕಾರಿಗಳನ್ನು ತಂದು ತುಂಬಿಕೊಳ್ಳುವ ನೀತಿಯನ್ನು ಅನುಸರಿಸಿದ ಒನ್ನೆಲೆಯಲ್ಲಿ ಸ್ಥಳೀಯರು ಅಸಮಾಧಾನಗೊಳ್ಳಲು ಎಡೆ ದೊರೆಯಿತು ಎಂಬುದನ್ನು ನಿರೂಪಿಸುವಾಗ, ಈ ನೀತಿಯಿಂದಾದ ಒಂದೇ ಒಂದು ಪ್ರಯೋಜನವೆಂದರೆ ಈ ರಾಜ್ಯಗಳ ಇಸ್ಲಾಮೀ ಸ್ವರೂಪ ಉಳಿದುಕೊಂಡುಬಂದದ್ದು ಎಂಬ ಆಶಯವನ್ನು ಪಣಿಕ್ಕರ್ ಮೂಲದಲ್ಲಿ ಹೀಗೆ ನಿರೂಪಿಸಿದ್ದಾರೆ :

"The policy was successful in so far as it maintained the Islamic character of the state." (ಪು. 147)

ಇದನ್ನು ಹೀಗೆ ಅನುವಾದಿಸಲಾಗಿದೆ :

"ಈ ನೀತಿಯು ರಾಜ್ಯ ಇಸ್ಲಾಮೀ ಸ್ವರೂಪವನ್ನು ಉಳಿಸಿಕೊಂಡಿರುವತನಕ ಯಶಸ್ವಿಯಾಗಿದ್ದಿತು." (ಪು. 179)

ಇದರಿಂದಾಗಿ, ವಸ್ತುಸ್ಥಿತಿಯು ಅಣಕ ಏರ್ಪಟ್ಟಿದೆ. "ಇಸ್ಲಾಮಿ ಸ್ವರೂಪವನ್ನು ಉಳಿಸಿಕೊಳ್ಳುವಲ್ಲಿ ಯಶಸ್ವಿಯಾಯಿತು" ಎಂಬುದು "ಇಸ್ಲಾಮಿ ಸ್ವರೂಪ ಇರುವ ತನಕ ಯಶಸ್ವಿಯಾಯಿತು" ಎಂಬುದಕ್ಕಿಂತ ಹೆಚ್ಚಿನ ವಿಪರ್ಯಾಸವನ್ನು ಕಲ್ಪಿಸಿಕೊಳ್ಳುವುದು ಸಾಧ್ಯವೆ ? 'as long as'ಗೂ 'in so far as'ಗೂ ಇರುವ ವ್ಯತ್ಯಾಸವೂ ಅನುವಾದಕರಿಗೆ ಗೋಚರಿಸದೆ ಹೋದದ್ದು ನಿಜಕ್ಕೂ ದುರ್ದೈವದ ಸಂಗತಿ.

ಇಲ್ಲಿ ಉದ್ಧರಿಸಿರುವ ಉದಾಹರಣೆಗಳ ಬಗೆಗಿನ ಉಲ್ಲೇಖಗಳು ಸ್ಪಷ್ಟಪಡಿಸುವಂತೆ, ಕೇವಲ ಎರಡು ಪುಟಗಳಲ್ಲಿ ಈ ಎಲ್ಲ ದೋಷಗಳೂ ಮನೆಮಾಡಿಕೊಂಡಿವೆ. ಈ ಎರಡು ಪುಟಗಳನ್ನು ಉದ್ದೇಶಪೂರ್ವಕವಾಗಿ ಆರಿಸಿಲ್ಲ ; ಮಧ್ಯದಲ್ಲಿ ತೆಗೆದೊಡನೆ ಆಕಸ್ಮಿಕವಾಗಿ ತೆರೆದುಕೊಂಡ ಪುಟಗಳನ್ನು ಹೋಲಿಸಿನೋಡಿದಾಗ ಕಂಡು ಬಂದ ಕೆಲವು ದೋಷಗಳಿವು. ಇವುಗಳನ್ನು ನೋಡಿದಾಗ ವಿಷಾದವಾಯಿತು. ದಿಗ್ಭ್ರಮೆಯೂ ಆಯಿತು ; ಕನಿಕರವೂ ಮೂಡಿತು – ಸುಲಭವಾಗಿ, ಸಾಮಾನ್ಯವಾಗಿ ದೊರೆಯುವ ಇಂಥ ಅವಕಾಶವನ್ನು ಅನುವಾದಕರು ಸದುಪಯೋಗಪಡಿಸಿಕೊಳ್ಳಲಾರದೆ ಹೋದರಲ್ಲ ಎಂದು ವಿಷಾದ ; ದೋಷಸಮೃದ್ಧಿಯನ್ನು ಕಂಡು ದಿಗ್ಭ್ರಮೆ : ಅತ್ಯಂತ ಸೀಮಿತ ಸಾಧನ-ಸೌಲಭ್ಯಗಳನ್ನು ಹೊಂದಿರುವ ಕನ್ನಡಿಗರು ಉತ್ಕೃಷ್ಟ ಗ್ರಂಥವೊಂದರ ಉತ್ತಮ ಅನುವಾದವನ್ನು ಪಡೆಯುವ ಭಾಗ್ಯದಿಂದ ಮತ್ತೊಮ್ಮೆ ವಂಚಿತರಾದರಲ್ಲ ಎಂದು ಕನಿಕರ. ಒಟ್ಟಿನಲ್ಲಿ ಇದೊಂದು ಅತ್ಯಂತ ನಿರಾಶಾದಾಯಕ ಅನುವಾದ.

ಒಟ್ಟಿನಲ್ಲಿ, ಒಂಬತ್ತು ಗ್ರಂಥಗಳಿಗೆ ಸಂಬಂಧಿಸಿದಂತೆ ಸುಮಾರು 2000 ಪುಟಗಳಿಗೂ ಹೆಚ್ಚು ಮಾಹಿತಿಯನ್ನು ಭಾಷಾಂತರಿಸಿರುವ ಶ್ರೀ ಮೂರ್ತಿಯವರ ಅನುವಾದಗಳಲ್ಲಿ ಸ್ವಲ್ಪಮಟ್ಟಿಗೆ ಸಹನೀಯವಾಗಿರುವುವು ಗಾಂಧೀಸ್ಮಾರಕ ನಿಧಿಗಾಗಿ ಅವರು ಮಾಡಿರುವ ಅನುವಾದಗಳು; 'ಮಹಾತ್ಮಾಗಾಂಧಿ' ಸೂಕ್ಷ್ಮಸಂವೇದನಾಶೀಲನಾಗಿರುವ ಓದುಗನಿಗೆ ನಿರಾಶೆಯನ್ನುಂಟುಮಾಡುವಂಥ ಅನುವಾದ : 'ರಾಜ್ಯಶಾಸ್ತ್ರಸಾರ' ಮತ್ತು 'ಭಾರತೀಯ ಇತಿಹಾಸ ಸಮೀಕ್ಷೆ' ಮುಖ್ಯವಾಗಿ ವಿದ್ಯಾರ್ಥಿಗಳಿಗಾಗಿ ಮಾಡಿಸಲಾಗಿರುವ ಅನುವಾದಗಳಾಗಿರುವುದರಿಂದ, ಅವರು ತುಂಬ ಎಚ್ಚರಿಕೆಯಿಂದ ಸ್ವೀಕರಿಸಬೇಕಾಗಿರುವ ಅಪಾಯಕಾರಿ ಅನುವಾದಗಳು.

ಪದಚಿಹ್ನೆ

# ಕನ್ನಡದಲ್ಲಿ ಗಾಂಧೀ ಗ್ರಂಥಮಾಲೆ.

**ನ. ಭದ್ರಯ್ಯ**

ಕನ್ನಡಿಗರಿಗೆ ಹಾಗೂ ಕರ್ನಾಟಕಕ್ಕೆ ಬಹು ಮಹತ್ವದ ಗಾಂಧೀ ವಿಚಾರ ಪರಿಚಯ ಮಾಡಿಕೊಡಲು ಗಾಂಧೀ ಗ್ರಂಥಮಾಲೆಯೊಂದನ್ನು ಕನ್ನಡದಲ್ಲಿ ಪ್ರಕಟಿಸಲು ಗಾಂಧೀ ಸ್ಮಾರಕನಿಧಿ ನಿರ್ಧಾರಗೊಂಡಿತು. 1958ರಲ್ಲಿ ಈ ಸಾಹಿತ್ಯ ರಚನೆಯ ಯೋಜನೆಗೆ ಒಂದು ಸಂಪಾದಕ ಮಂಡಲಿ ರಚನೆಯಾಯಿತು. ಈ ಸಮಿತಿ ಯೋಜನೆ ಒಂದನ್ನು ತಯಾರುಮಾಡಿತು. ಅದರಂತೆ ಇಪ್ಪತ್ತು ಸಂಪುಟಗಳಲ್ಲಿ ಗಾಂಧೀಸಾಹಿತ್ಯ ರಚನೆಯಾಗಬೇಕಾಗಿತ್ತು. ಆ ಯೋಜನೆಯಂತೆ ಕಾರ್ಯ ಆಗುಮಾಡಿ ಪೂರ್ಣಗೊಳಿಸುವ ಜವಾಬ್ದಾರಿ ವಹಿಸಿಕೊಳ್ಳುವವರು ಬೇಕಾಗಿತ್ತು. ಸಮಿತಿ ಸೇರಿ ಆ ಕರ್ತವ್ಯ ನಡೆಸಲು ಅರ್ಹರಾದವನ್ನು ಯೋಜಿಸಿತು. ಯೋಚಿಸಿ ಚಿಂತಿಸಿ ವ್ಯಕ್ತಿಗಳನ್ನು ಸೂಚಿಸಿ ಅವರ ವಿಷಯದಲ್ಲಿ ವಿಚಾರ ವಿನಿಮಯ ಮಾಡಿತು. ಗಾಂಧೀತತ್ವದಲ್ಲಿ ಪ್ರತಿಯೊಬ್ಬರ ಭಾವನೆ ಆಸಕ್ತಿಗಳನ್ನು ವಿಮರ್ಶಿಸಿತು. ಕೊನೆಗೆ ಈಗ ದಿವಂಗತರಾಗಿರುವ ಪ್ರಾಧ್ಯಾಪಕ ಎಂ. ಯಾಮುನಾಚಾರ್ಯರನ್ನು ಪ್ರಧಾನ ಸಂಪಾದಕರಾಗಿರಲು ಮತ್ತು ಶ್ರೀ ಜಿ. ವಿ ನಾರಾಯಣ ಮೂರ್ತಿಯವರನ್ನು ಪ್ರಧಾನ ಸಹ ಸಂಪಾದಕರಾಗಿರಲು ಪ್ರಾರ್ಥಿಸಿತು. ಇವರಿಬ್ಬರೂ ಗಾಂಧೀವಾದಿಗಳಾಗಿದ್ದು ಅಂತಹ ಸಾಹಿತ್ಯ ರಚನೆ ಅವರಿಗೆ ಪ್ರಿಯವಾಗಿದ್ದುದರಿಂದ ಜವಾಬ್ದಾರಿ ಹೊತ್ತು ನಿರ್ವಹಿಸಲು ಕಾರ್ಯ ಕೈಗೊಂಡಿತು, ಇನ್ನೂ ಕೆಲವು ಗಾಂಧೀವಾದಿಗಳು ಇವರೊಡನೆ ಸಹ ಸಂಪಾದಕರಾಗಿದ್ದು ಸೇವೆ ಸಲ್ಲಿಸಿದರು.

ಅಪಾರವಾದ ಸೂತ್ರದಂತಿರುವ ಗಾಂಧೀ ಸಾಹಿತ್ಯ ಈ ಇಪ್ಪತ್ತು ಭಾಗಗಳಲ್ಲಿ ತರಲು ಸಾಧ್ಯವಾದುದನ್ನು ಆಯ್ಕೆಮಾಡುವುದೇ ಕಷ್ಟ. ಆಯ್ಕೆ ಆದುದನ್ನು ಸಮಂಜಸವಾಗಿ ಜೋಡಿಸುವುದು ಇನ್ನೂ ಕಷ್ಟ. ಅದರಲ್ಲೂ ಆಯ್ಕೆಯಾದ ಭಾಗಗಳನ್ನು ಮೂಲದ ಅಭಿಪ್ರಾಯ ಕೆಡದಂತೆ ಭಾಷಾಂತರಿಸುವುದು ಬಹುಕಷ್ಟ. ಆದರೆ ಈ ಕೆಲಸದಲ್ಲಿ ನಾರಾಯಣಮೂರ್ತಿಯವರ ಸೇವೆ ಅಪಾರವಾದದ್ದು. ಸ್ತುತ್ಯರ್ಹವಾದದ್ದು. ಆ ಸೇವೆಯಲ್ಲಿ ಅವರಿಗಿದ್ದ ನಿಷ್ಠೆ ಜಾಣ್ಮೆ ಪ್ರೀತಿ–ಆ ಸಂಯಮ ಶಕ್ತಿ ಇರುವ ಜನ ಅಪರೂಪ.

ಇಪ್ಪತ್ತು ಸಂಚಿಕೆಗಳಲ್ಲಿ ಹೊರಬಂದ ಗಾಂಧೀ ಸಾಹಿತ್ಯಮಾಲೆ ಜನಪ್ರಿಯವಾದುದು. ಆ ಸಾಹಿತ್ಯ ಕನ್ನಡಿಗರಿಗೆ ದೊರಕಿರುವ ಒಂದು ಸಂಪತ್ತು. ಗಾಂಧೀ ಸಾಹಿತ್ಯದ ತಿರುಳನ್ನು ವ್ಯಾಪಕವಾಗಿ ಸರಳವಾಗಿ ಜನಪ್ರಿಯವಾಗಿ ಈ ಇಪ್ಪತ್ತು ಸಂಚಿಕೆಗಳಲ್ಲಿ ತರಲಾಗಿದೆ. ಅಪಾರವಾದ ಆ ಸಾಹಿತ್ಯದಲ್ಲಿ ಇರುವುದೆಲ್ಲ ಮುಖ್ಯವೇ. ಆದರೂ ಈ ಮಾಲೆಯಲ್ಲಿ ತರಬಹುದಾದಷ್ಟನ್ನು ಆರಿಸುವುದೆಂದರೆ ಕಷ್ಟವೇ. ಹೇಗೂ ಬಂದ

ಭಾಗಗಳಲ್ಲಿ ಆಗಲೇ ಇತರರಿಂದ ಭಾಷಾಂತರಗೊಂಡಿದ್ದ ಭಾಗಗಳನ್ನು ಬಿಟ್ಟರೂ ಮಿಕ್ಕವುಗಳನ್ನು ವಿಂಗಡಿಸಿ ಆ ಇಪ್ಪತ್ತು ಭಾಗಗಳಲ್ಲಿ ಕ್ರಮವಾಗಿ ಜೋಡಿಸಿ ಭಾಷಾಂತರಿಸುವ ಕೆಲಸದ ಹೆಚ್ಚು ಭಾಗ ನಾರಾಯಣಮೂರ್ತಿಯವರು ನಿರ್ವಹಿಸಿದರು. ಈ ಎಲ್ಲ ಕೆಲಸವೂ ಅಚ್ಚುಕಟ್ಟಾಗಿ ನಡೆದು ಐವತ್ತೆರಡು ತಿಂಗಳಲ್ಲಿ ಇಪ್ಪತ್ತು ಭಾಗಗಳಲ್ಲಿ ಗಾಂಧೀ ಸಾಹಿತ್ಯದ ಸಾರ ಕನ್ನಡದಲ್ಲಿ ಹೊರಬಂತು. ಇಷ್ಟಾಗಲು ಯಾಮುನಾಚಾರ್ಯರ ಮತ್ತು ನಾರಾಯಣಮೂರ್ತಿಯವರ ದುಡಿತ ಸೇವೆ ಸ್ತುತ್ಯರ್ಹವಾದುದು ಅಮೋಘವಾದುದು. ಶ್ರೀ ನಾರಾಯಣಮೂರ್ತಿಯವರು ಈ ನಾಲ್ಕುಕಾಲು ವರ್ಷವೂ ಮೈಸೂರಲ್ಲಿದ್ದುಕೊಂಡು ಆ ಕೆಲಸದಲ್ಲಿ ತೊಡಗಿದ್ದರು. ಅವರ ಕನ್ನಡ ಸಾಹಿತ್ಯ ಅದರಲ್ಲೂ ಗಾಂಧೀಸಾಹಿತ್ಯ ಸೇವೆಗಾಗಿ ಕನ್ನಡಿಗರು ಋಣಿಗಳು.

ಪರಿಸರ

## ಚಿಕ್ಕನಾಯಕನಹಳ್ಳಿ

# ಐತಿಹಾಸಿಕ ಸಮೀಕ್ಷೆ

ಬಿ. ಕೆ. ಗುರುರಾಜರಾವ್

ಕರ್ನಾಟಕ ರಾಜ್ಯದ ತುಮಕೂರು ಜಿಲ್ಲೆಯ ಪಶ್ಚಿಮ ಭಾಗದಲ್ಲಿರುವ ತಾಲ್ಲೂಕು. ಹಾಗಲವಾಡಿ ಪಾಳೇಗಾರರ ಮನೆತನಕ್ಕೆ ಸೇರಿದ ಚಿಕ್ಕನಾಯಕನ ಹೆಸರಿಂದ ಈ ಊರಿನ ಹೆಸರು ಹುಟ್ಟಿಕೊಂಡಿತಾದರೂ. ಈ ಪ್ರದೇಶದ ಇತಿಹಾಸ ಅನಾದಿಕಾಲದವರೆಗೂ ವಿಸ್ತರಿಸುತ್ತದೆ.

ಚಿಕ್ಕನಾಯಕನ ಹಳ್ಳಿಯ ಪರಿಸರದಲ್ಲಿ ಪ್ರಾಚೀನತಮವಾದ ಇತಿಹಾಸಪೂರ್ವ ಯುಗದ ಆದಿಶಿಲಾಯುಗ ಮತ್ತು ಮಧ್ಯಶಿಲಾಯುಗ ಕಾಲಗಳಿಗೆ ಸೇರುವ ಕಲ್ಲಿನ ಆಯುಧಗಳು ದೊರಕಿವೆ. ಹಳೆಯ ಮೈಸೂರು ಸರ್ಕಾರದ ಭೂಗರ್ಭ ವಿಜ್ಞಾನ ಇಲಾಖೆಯ ಅಧಿಕಾರಿಯಾದ ಸಂಪತ್ತ್ಯೆಂಗಾರ್ ಈಗಿನ ತಿಪಟೂರು ತಾಲ್ಲೂಕಿಗೆ ಸೇರಿದ ಬಾಣಸಂದ್ರ ಬೆಟ್ಟಸಾಲಿನ ಬುಡದಲ್ಲಿ ಬಿಳಿಗೆರೆಯಿಂದ ದಕ್ಷಿಣಕ್ಕೆ ಒಂದು ಮೈಲು ದೂರದಲ್ಲಿ ಸುತ್ತಿಗೆಯಂಥ ಆಯುಧಗಳೊಂದಿಗೆ ಬಾಗಿದ ಗರಗಸದಂಥ ಆಯುಧಗಳು, ಬಾಣದ ಮೊನೆಗಳು, ಕೊರೆಯುಳಿಗಳು, ಕವಣೆಕಲ್ಲು ಮುಂತಾದ ಮಧ್ಯಶಿಲಾಯುಗದ ಕಲ್ಲಿನಾಯುಧಗಳನ್ನು ಸಂಗ್ರಹಿಸಿದ್ದರು. ಈ ಆಯುಧಗಳ ಆಧಾರದ ಮೇಲೆ ಆ ನೆಲೆ ಶಿಲಾಯುಗ ಕಾಲದಲ್ಲಿ ಬೇಟೆಗಾರ–ಆಹಾರ ಸಂಗ್ರಾಹಕರ ವಸತಿಯಿದ್ದ ಪ್ರಾಚೀನ ಜನ ವಸತಿಯೆಂದು ನಿರ್ಧರಿಸಿದರು. ಅದೇ ಬಾಣಸಂದ್ರಬೆಟ್ಟಸಾಲಿನ ತಪ್ಪಲಿನಲ್ಲಿ ಸ್ವಲ್ಪ ದೂರದಲ್ಲಿರುವ ಕಿಬ್ಬನಹಳ್ಳಿ ನೆಲೆಯಲ್ಲಿ (ಬಾಣಸಂದ್ರ ಗ್ರಾಮದಿಂದ 2½ ಮೈಲು ದೂರದಲ್ಲಿ) ಬೆಂಗಳೂರಿನ ಸೆಂಟ್ರಲ್ ಕಾಲೇಜಿನ ಭೂಗರ್ಭ ವಿಜ್ಞಾನ ವಿಭಾಗದ ಪ್ರಾಧ್ಯಾಪಕರಾದ ಎಲ್. ರಾಮರಾಯರು ಬಹುಸಂಖ್ಯೆಯ ಆದಿಶಿಲಾಯುಗಕ್ಕೆ ಮತ್ತು ಮಧ್ಯಶಿಲಾಯುಗಕ್ಕೆ ಸೇರಿದ ಕಲ್ಲಿನಾಯುಧಗಳನ್ನು ಸಂಗ್ರಹಿಸಿದರು. ಆ ನೆಲೆಯ ಪರಿಸರ ಆದಿಮಾನವನ ವಸತಿಗೆ ಬಹಳ ಸಮರ್ಪಕವಾಗಿತ್ತೆಂದು ಅವರು ನಿರೂಪಿಸಿದ್ದಾರೆ; ಅತ್ಯವಶ್ಯಕವಾದ ಸತತವಾಗಿ ದೊರಕುವ ನೀರಿನ ಸೆಲೆ, ಆಯುಧ ತಯಾರಿಕೆಗೆ ಸೂಕ್ತವಾದ ಬೆಣಚುಕಲ್ಲು ಆ ಪ್ರದೇಶದಲ್ಲಿ ಸಿಕ್ಕುತ್ತಿದ್ದುದೆಂದು ಅವರು ತೋರಿಸಿಕೊಟ್ಟಿದ್ದಾರೆ. ಅಲ್ಲಿ ದೊರಕುವ ಆಯುಧಗಳಲ್ಲಿ ಬಿರುಗಲ್ಲಿನಿಂದ ತಯಾರಿಸಿದ ಕೈಗೊಡಲಿಗಳು, ವೈವಿಧ್ಯಮಯವಾದ ಸೀಳುಕತ್ತಿಗಳು, ಕೊಕ್ಕೆಯಂತೆ ಬಾಗಿದ ಮೊನೆಯುಳ್ಳ ಆಯುಧಗಳು, ವಿವಿಧ ರೀತಿಯ ಹೆರೆಯುವ ಆಯುಧಗಳು ಮತ್ತು ಬಿರುಗಲ್ಲಿನ ಆಯುಧಗಳು ಸೇರಿವೆ. ಡಾ॥ ಎಂ. ಶೇಷಾದ್ರಿಯವರು ಆ ನೆಲೆಯ ಆಯುಧಗಳನ್ನು ಕೂಲಂಕಷವಾಗಿ ವಿಶ್ಲೇಷಿಸಿದ್ದಾರೆ. ಅವರ ರೀತ್ಯಾ ಆ ನೆಲೆಯ ಆಯುಧ ವಿಧಗಳು ಮತ್ತು ಸಾಂಸ್ಕೃತಿಕ ವೈವಿಧ್ಯ ಮಹತ್ವಪೂರ್ಣವಾದವು ಮತ್ತು ಭಾರತದ ಶಿಲಾಯುಗ

ಸಂಸ್ಕೃತಿಗಳ ನಕ್ಷೆಯಲ್ಲಿ ವಿಶಿಷ್ಟ ಸ್ಥಾನ ಪಡೆದವೂ ಆಗಿವೆ. ಅಲ್ಲಿ ಸಿಕ್ಕಿರುವ ಕೊಕ್ಕೆಯಂತೆ ಬಾಗಿದ ಮೊನೆಯ ಆಯುಧಗಳು ದಕ್ಷಿಣ ಭಾರತ ಶಿಲಾಯುಗ ಆಯುಧಗಳಲ್ಲಿ ಅಪೂರ್ವವಾಗಿದ್ದು ಆ ಬಗ್ಗೆ ಹೆಚ್ಚಿನ ಸಂಶೋಧನೆಗಳ ಅವಶ್ಯಕತೆಯನ್ನು ಸೂಚಿಸುತ್ತದೆ.

ಅನಂತರಕಾಲದ ಅಂದರೆ ಸೂಕ್ಷ್ಮಶಿಲಾಯುಗ ಮತ್ತು ನವಶಿಲಾಯುಗ ಕಾಲದ ಸಂಸ್ಕೃತಿಗಳ ಅವಶೇಷಗಳು ಈವರೆಗೆ ಕಂಡುಬಂದಿಲ್ಲ; ಇದಕ್ಕೆ ಬಹುಶಃ ಆ ಪ್ರದೇಶದಲ್ಲಿ ಹೆಚ್ಚಿನ ಪ್ರಾದೇಶಿಕ ಅನ್ವೇಷಣಾ ಕಾರ್ಯ ನಡೆಯದಿರುವುದು ಕಾರಣವಾಗಿರಬಹುದು. ಈಚೆಗೆ ತಿಪಟೂರು ಬಳಿ ನವಶಿಲಾಯುಗ ಕಾಲಕ್ಕೆ ಸೇರಬಹುದಾದ ಒಂದು ಬೂದಿ ಗುತ್ತವನ್ನು ಕಂಡುದಾಗಿ ದಿನಪತ್ರಿಕೆಗಳಲ್ಲಿ ಸುದ್ದಿ ಪ್ರಕಟವಾಗಿದ್ದರೂ ಅದರ ಬಗೆಗೆ ಸರಿಯಾದ ಮಾಹಿತಿಗಳು ದೊರಕಿಲ್ಲ.

ಕಬ್ಬಿಣ ಯುಗಕ್ಕೆ ಸೇರಿದ ಪ್ರಾಗೈತಿಹಾಸಿಕ ಬೃಹತ್ ಶಿಲಾಯುಗದ ಅವಶೇಷಗಳು ಇದೇ ಬೆಟ್ಟಗಳ ಸಾಲಿನಲ್ಲಿ ಚಿಕ್ಕನಾಯಕನ ಹಳ್ಳಿಯ ಬಳಿ ಕಾಣಬಂದಿವೆ. ಅಲ್ಲಿರುವ ಕೇರಳ ಕಟ್ಟೆಯ ಬಳಿ ಬೆಟ್ಟಗಳ ತಪ್ಪಲಿನಲ್ಲಿ ಹಲವಾರು ಸಮಾಧಿಗಳನ್ನು ಎಚ್. ಕೆ. ಸ್ಲೇಟರ್ ವರದಿ ಮಾಡಿದ್ದಾರೆ. ಗ್ರಾನೈಟ್ ಚಪ್ಪಡಿಗಳಿಂದ ರಚಿಸಿದ ಶಿಲಾ ತೊಟ್ಟಿಗಳಿರುವ ಈ ಸಮಾಧಿಗಳು ಬಹುಮಟ್ಟಿಗೆ ಹಾಳುಬಿದ್ದಿವೆ. ಅಲ್ಲಿಂದ ಸುಮಾರು ಅರ್ಧ ಮೈಲು ದೂರದಲ್ಲಿರುವ ಮತ್ತೊಂದು ನೆಲೆಯಲ್ಲಿ ಅಂಥ ಸಮಾಧಿಗಳು ಉತ್ತಮ ಸ್ಥಿತಿಯಲ್ಲಿವೆ.

ರಾಮಾಯಣ, ಮಹಾಭಾರತಗಳ ಕಾಲದಲ್ಲಿ ಈ ಪ್ರದೇಶ ಪ್ರಾಮುಖ್ಯವಾಗಿದ್ದಂತೆ ತಿಳಿದುಬರುತ್ತದೆ. ಇಲ್ಲಿಯ ಕಡಬದ ಬಳಿ ಶ್ರೀಲಂಕೆಯಿಂದ ಹಿಂದಿರುಗುತ್ತಿದ್ದ ಶ್ರೀರಾಮ ಅಲ್ಲಿ ಹರಿಯುತ್ತಿದ್ದ ಹೊಳೆಗೆ ಒಂದು ಅಡ್ಡಕಟ್ಟೆಯನ್ನು ನಿರ್ಮಿಸಿದನೆಂಬ ಐತಿಹ್ಯವಿದೆ. ತುರುವೇಕೆರೆಯ ಬಳಿ ಇರುವ ಸಂಪಿಗೆ ಆ ಕಾಲದ ಚಂಪಕಾನಗರವೆಂದು ಹಂಸಧ್ವಜ ಮಹಾರಾಜನ ಮಗ ಸುಧನ್ವನ ರಾಜಧಾನಿಯಾಗಿತ್ತೆಂದು ಹೇಳಲಾಗಿದೆ.

ಐತಿಹಾಸಿಕಯುಗದಲ್ಲಿ ನಮಗೆ ಮೊದಲಿಗೆ ಗಂಗರಾಜರ ಕಾಲಕ್ಕೆ ಸೇರಿದ ಶಾಸನಗಳು ಈ ಪ್ರದೇಶದಲ್ಲಿ ಕಂಡುಬರುತ್ತವೆ. ಆ ಮುಂಚಿನ ಸಂಗತಿಗಳೇನೂ ತಿಳಿದುಬಂದಿಲ್ಲ. ಇಲ್ಲಿ ದೊರಕಿದ ಪ್ರಾಚೀನತಮ ಶಾಸನವೆಂದರೆ ಗಂಗರಾಜರ ಕ್ರಿ.ಶ. 400ರ ಸುಮಾರಿನ ತಾಮ್ರಶಾಸನ. ಅದರ ರೀತ್ಯಾ ಮಾಧವವರ್ಮನೆಂಬ ದೊರೆ (ಕಿರಿಯ ಅಥವ ಇಮ್ಮಡಿ ಮಾಧವ) ಬೋಧಿಸತ್ವನೆಂಬ ಬೌದ್ಧ ವಿದ್ವಾಂಸನಿಗೆ ಭೂದಾನ ನೀಡಿದನು. ಕ್ರಿ.ಶ. 545ರ ಮತ್ತೊಂದು ತಾಮ್ರಶಾಸನ ವಿವಿಧ ಗಂಗರಾಜರ ಬಿರುದುಗಳನ್ನು ಮತ್ತು ವಂಶಾವಳಿಯನ್ನು ತಿಳಿಸುತ್ತದೆ. ನವ ಕಾಮ ದೊರೆಯ ಕಾಲದ ಹೆಬ್ಬೂರು ತಾಮ್ರಪಟಗಳು 'ಶಬ್ದಾವತಾರ'ದ ಕರ್ತೃವಾದ ಪೂಜ್ಯಪಾದರ ಶಿಕ್ಷಣದಿಂದ [illegible] ಸನ್ಮಾರ್ಗಕ್ಕೆ ಸೀಮಿತನಾದ ಗಂಗರಸ ದುರ್ವಿನೀತನ ವಿಷಯವನ್ನು ಪ್ರಸ್ತಾಪಿಸುತ್ತವೆ. ಅದೇ ವಂಶದ ದೊರೆ ಶ್ರೀಪುರುಷನ ಕಾಲದ (725-788) ಅನೇಕ ವೀರಗಲ್ಲುಗಳು

ಗಂಗ–ರಾಷ್ಟ್ರಕೂಟ ರಾಜರ ನಡುವಣ ಕದನಗಳ ಬಗ್ಗೆ ತಿಳಿಸುತ್ತವೆ. ಈ ಶಾಸನಗಳಲ್ಲಿ ನಿರ್ದಿಷ್ಟಕಾಲ ಸೂಚನೆಯಿಲ್ಲದಿದ್ದಾಗೂ ಆ ಕಾಳಗಗಳು ಗಂಗ ಶ್ರೀಪುರುಷ ಮತ್ತು ರಾಷ್ಟ್ರಕೂಟ ಒಂದನೇ ಕೃಷ್ಣನ (756–773) ನಡುವೆ ನಡೆದವು ಆಗಿರಬಹುದು. ಇವುಗಳಲ್ಲೊಂದು ಗುಬ್ಬಿಯ ಬಳಿಯಿರುವ ಬಾಗೂರು (ಬಾಗೆಯೂರು) ಎಂಬಲ್ಲಿ ನಡೆಯಿತು. ಮುಮ್ಮಡಿ ಮಾರಸಿಂಹನ ಕಾಲದ (960–974) 972ರ ಒಂದು ಶಾಸನ ಆತನನ್ನು ನೊಳಂಬ ಕುಲಾಂತಕನೆಂದು ವರ್ಣಿಸಿರುವುದರಿಂದ ನೊಳಂಬರ ಮೇಲಿನ ಗಂಗರ ವಿಜಯವನ್ನು ಸೂಚಿಸುತ್ತದೆ.

ರಾಷ್ಟ್ರಕೂಟ ದೊರೆಗಳ ಒಂದು ಶಾಸನ ಗುಬ್ಬಿಯ ಬಳಿಯಿರುವ ಕಡಬದಲ್ಲಿ ಸಿಕ್ಕಿದ್ದು, ಅದರಲ್ಲಿ ಒಂದನೇ ಕೃಷ್ಣ ಎಲ್ಲೋರಾದಲ್ಲಿ ನಿರ್ಮಿಸಿದ ಕೈಲಾಸ ದೇವಾಲಯದ ಬಗ್ಗೆ ತಿಳಿಸುತ್ತಾದ್ದರಿಂದ ರಾಷ್ಟ್ರಕೂಟರ ಆಳಿಕೆ ಆ ಕಾಲದಲ್ಲಿ (ಕ್ರಿ.ಶ. 781) ಹರಡಿದ್ದುದನ್ನು ತಿಳಿಸುತ್ತವೆ; ಆಗ ರಾಷ್ಟ್ರಕೂಟರ ಪ್ರಾಂತಾಧಿಕಾರಿಯಾಗಿದ್ದ ಚಿಕ್ಕರಾಜ ಗಂಗದೊರೆ ಶಿವಮಾರನನ್ನು ಸೆರೆಹಿಡಿದು ಗಂಗಮಂಡಲದ ಮೇಲೆ ಅಧಿಕಾರ ಪಡೆದಿದ್ದನು. ಇಮ್ಮಡಿ ಕೃಷ್ಣನ ಕಾಲದ (903) ಒಂದು ಶಾಸನ ರಾಷ್ಟ್ರಕೂಟ ದಳಪತಿ ಪ್ರಚಂಡ ದಂಡನಾಯಕ ದಾಮಯ್ಯನು ಬೆಂಗಳೂರು ಜಿಲ್ಲೆಯ ನೆಲಮಂಗಲ ತಾಲ್ಲೂಕಿನ ಮಣ್ಣೆ ನಗರದಿಂದ ಗಂಗ ಮಂಡಲವನ್ನು ಆಳುತ್ತಿದ್ದನೆಂದು ತಿಳಿಸುತ್ತದೆಯಾದ್ದರಿಂದ ಆಗಲೂ ಈ ಪ್ರದೇಶ ರಾಷ್ಟ್ರಸಾಮ್ರಾಜ್ಯದ ಭಾಗವಾಗಿತ್ತು.

ಕಲ್ಯಾಣಚಾಲುಕ್ಯರ ಕಾಲದ (ಕ್ರಿ.ಶ. 973–1189) ಹಲವಾರು ಶಾಸನಗಳು ಚಿಕ್ಕನಾಯಕನಹಳ್ಳಿ - ತಿಪಟೂರು ಪ್ರದೇಶದಲ್ಲಿ ಸಿಕ್ಕಿವೆ. ಅವುಗಳಲ್ಲಿ ಸಾಮ್ರಾಟರಾದ ಚಾಲುಕ್ಯದೊರೆಗಳ ಉಲ್ಲೇಖವಿದ್ದರೂ, ಪ್ರಾಂತೀಯ ನಾಯಕರ ವಿಷಯಗಳನ್ನಷ್ಟೇ ಹೆಚ್ಚಾಗಿ ಅವು ಪ್ರಸ್ತಾಪಿಸುತ್ತವೆ. ಬಹುಮಟ್ಟಿಗೆ ಈ ಶಾಸನಗಳು ಚಿಕ್ಕನಾಯಕನಹಳ್ಳಿಯ ಸುತ್ತಮುತ್ತಲಿರುವುದರಿಂದ ಈ ಕಾಲದಲ್ಲಿ ಚಿಕ್ಕನಾಯಕನಹಳ್ಳಿಯ ಪ್ರದೇಶ ಪ್ರಾಮುಖ್ಯ ಪಡೆದಿತ್ತೆಂದು ಹೇಳಬಹುದು. ಚೋಳರು ಕ್ರಿ.ಶ. 1000 ದಿಂದ 1070ರ ವರೆಗೆ ಈ ಪ್ರದೇಶದಲ್ಲಿ ಪ್ರಬಲರಾಗಿ ಕಲ್ಯಾಣ ಚಾಲುಕ್ಯರೊಂದಿಗೆ ಹೋರಾಟದಲ್ಲಿ ನಿರತರಾಗಿದ್ದರು. ಅನಂತರ ಕಾಲದಲ್ಲಿ ಚಾಲುಕ್ಯ ಸಾಮಂತರಾಗಿದ್ದ ಹೊಯ್ಸಳರು ಚೋಳರನ್ನು ಹೊಡೆದಟ್ಟಿದರಲ್ಲದೆ ಹೆಚ್ಚು ಕಡಿಮೆ ಸ್ವತಂತ್ರರಾಗಿ ಹೆಸರಿಗೆ ಚಾಲುಕ್ಯರ ಪ್ರಭುತ್ವವನ್ನು ಒಪ್ಪಿಕೊಂಡು ಈ ಪ್ರದೇಶದಲ್ಲಿ ತಮ್ಮ ಪ್ರಭುತ್ವವನ್ನು ಸ್ಥಾಪಿಸಿದರು ಮತ್ತು 1340ರ ವರೆಗೂ ಈ ಸ್ಥಿತಿ ಮುಂದುವರಿಯಿತು.

ಹೊಯ್ಸಳ ಶಾಸನಗಳಲ್ಲಿ 1078ರ ನೃಪಕಾಮ ಶಾಸನವೇ ಪ್ರಾಚೀನವಾದದ್ದು. ತದನಂತರ ವಿಷ್ಣುವರ್ಧನನ ಕಾಲದಿಂದ (1100–1152) ಹಲವಾರು ಶಾಸನಗಳು ಈ ಪ್ರದೇಶದಲ್ಲಿ ಕಾಣಬರುತ್ತವೆ: ಅವುಗಳಿಂದ ವಿಷ್ಣುವರ್ಧನ 1116ರಲ್ಲಿ ಚೋಳರನ್ನು ಸೋಲಿಸಿ ತಲಕಾಡನ್ನು ವಶಪಡಿಸಿಕೊಂಡಾಗ ಈ ಪ್ರದೇಶವನ್ನೊಳಗೊಂಡಂತೆ

ಇಡೀ ಗಂಗವಾಡಿ–96000 ಪ್ರಾಂತ್ಯ ಅವನ ವಶವಾಯಿತು. ಕ್ರಿ.ಶ. 1151ರ ಒಂದು ಶಾಸನ ಕೈದಾಳದ ಸುತ್ತಮುತ್ತ ಅಧಿಕಾರ ನಡೆಸುತ್ತಿದ್ದ ರಾಷ್ಟ್ರಕೂಟರ ವಂಶಸ್ಥನಾದ ಗುಳಿಬಾಚಿನಾಯಕ ಎಂಬ ಸಾಮಂತನ ಬಗ್ಗೆ ತಿಳಿಸುತ್ತ ಅವನು ಬೌದ್ಧ, ಜೈನ, ಶೈವ ಮತ್ತು ವೈಷ್ಣವ ಧರ್ಮಗಳಿಗೆ ಆಶ್ರಯ ನೀಡಿದ್ದನೆಂದು ಹೇಳಿದೆ. ಅವನು ಕಟ್ಟಿಸಿದ ಕೆಲವು ದೇವಾಲಯಗಳನ್ನು ಕೈದಾಳದಲ್ಲಿ ಇಂದಿಗೂ ಕಾಣಬಹುದು: ಮತ್ತೆ ಅಲ್ಲಿ ಎರಡು ದೊಡ್ಡ ಸರೋವರಗಳನ್ನು – ಭೀಮಸಮುದ್ರ ಮತ್ತು ಅನಲಸಮುದ್ರ ಗಳನ್ನು ಕಟ್ಟಿಸಿದನು. ಇಮ್ಮಡಿ ಬಲ್ಲಾಳನ ಆಳ್ವಿಕೆಯ ಮೊದಲ ವರ್ಷದಿಂದ (1173) ಈ ಪ್ರದೇಶದಲ್ಲಿ ಅನೇಕ ಶಾಸನಗಳು ದೊರಕಿವೆ. ಈ ಶಾಸನಗಳು ಬಲ್ಲಾಳನು ಉಚ್ಚಂಗಿಯ ಪಾಂಡ್ಯರನ್ನು ಸೋಲಿಸಿ, ಆ ದುರ್ಗವನ್ನು ವಶಪಡಿಸಿಕೊಂಡ ಮತ್ತಿತರ ಯುದ್ಧ ವಿಜಯಗಳನ್ನು ನಿರೂಪಿಸುತ್ತವೆ. ಚಿಕ್ಕನಾಯಕನ ಹಳ್ಳಿಯ ಪರಿಸರದಲ್ಲಿ ಈ ಶಾಸನಗಳಿರುವುದರಿಂದ ಈ ಪ್ರದೇಶ ಬಲ್ಲಾಳ ಚಕ್ರವರ್ತಿಯ ರಾಜ್ಯದಲ್ಲಿ ಪ್ರಮುಖ ಸ್ಥಾನ ಪಡೆದಿತ್ತೆಂದು ನಾವು ಭಾವಿಸಬಹುದಾಗಿದೆ. 1205ರ ಬಲ್ಲಾಳನ ಮತ್ತೊಂದು ಶಾಸನ ಅವನ ದಳಪತಿಯಾದ ಮಾಧವ ದಂಡಾಧಿಪನು ಭೀಮರಥಿಯವರೆಗೆ ತನ್ನ ಅಧಿಕಾರವನ್ನು ವಿಸ್ತರಿಸಿದುದಾಗಿ ತಿಳಿಸುತ್ತದೆ. ಇಮ್ಮಡಿ ನರಸಿಂಹನ ಕಾಲದ (12.0–1238) ಕೆಲವು ಶಾಸನಗಳು ಈ ಪ್ರದೇಶದಲ್ಲಿ ಕಂಡುಬಂದಿವೆ. ಅವುಗಳಲ್ಲಿ 1226ರ ಒಂದು ಶಾಸನ ಇಲ್ಲಿಯ ನಾಗಣ್ಣನೆಂಬುವನು ಪ್ರಧಾನ ರಾಣಿ ಪದ್ಮಲಾ ಮಹಾದೇವಿಯ ನರ್ಮಸಚಿವನಾಗಿದ್ದನೆಂದು ತಿಳಿಸುತ್ತದೆ. 1229ರ ಮತ್ತೊಂದು ಶಾಸನ ನರಸಿಂಹನು ಕಾಂಚೀಪುರದಿಂದ ರಾಜ್ಯಭಾರ ಮಾಡುತ್ತಿದ್ದನೆಂದು ತಿಳಿಸುತ್ತದೆ. 1233ರ ಇನ್ನೊಂದು ಶಾಸನದ ಪ್ರಕಾರ ಅವನ ದಳಪತಿಗಳಾದ ಅಪ್ಪಣ್ಣ ಮತ್ತು ಗೋಪಯ್ಯ ಎಂಬುವರು ಕಾಡವ ದೊರೆಯನ್ನು ಸೋಲಿಸಿ ಸೆರೆಯಲ್ಲಿದ್ದ ಚೋಳರಾಜ ನನ್ನು ಬಂಧಮುಕ್ತಗೊಳಿಸಿ ಮತ್ತೆ ಅವನನ್ನು ಚೋಳ ಸಿಂಹಾಸನದ ಮೇಲೆ ಪ್ರತಿ ಷ್ಠಾಪಿಸಿದರು. ಇದು ಮುಮ್ಮಡಿ ರಾಜರಾಜ ಚೋಳನ ಸೆರೆ ಮತ್ತು ಹೊಯ್ಸಳ ಚಕ್ರವರ್ತಿ ನರಸಿಂಹ ಅವನನ್ನು ರಕ್ಷಿಸಿ ಚೋಳರಾಜ್ಯ ಪ್ರತಿಷ್ಠಾಪನಾಚಾರ್ಯನೆಂದು ಬಿರುದು ಪಡೆದ ಘಟನೆಯನ್ನು ಪ್ರಸ್ತಾಪಿಸುತ್ತದೆ. 1238ರ ಇಲ್ಲಿನ ಮತ್ತೊಂದು ಶಾಸನ ಮಹಾವಡ್ಡ ವ್ಯವಹಾರಿ ಮತ್ತು ನಿಟ್ಟೂರಿನ ಪಟ್ಟಣಸ್ವಾಮಿಯಾಗಿದ್ದ ಒಬ್ಬ ವರ್ತಕ (ಹೆಸರು ದೊರಕಿಲ್ಲ) ಹಿರಿಯಕೆರೆಯ ಅಚ್ಚುಕಟ್ಟಿನ ಜಮೀನುಗಳನ್ನು ಸಂಪಿಗೆಯ (ಪ್ರಾಚೀನ ಚಂಪಕಾನಗರ) ಮಲ್ಲಿಕಾರ್ಜುನದೇವರಿಗೆ ದತ್ತಿ ಬಿಟ್ಟ ಸಂಗತಿಯನ್ನು ತಿಳಿಸುತ್ತದೆ. ಹೊಯ್ಸಳ ಸೋಮೇಶ್ವರನ ಕೆಲವು ಶಾಸನಗಳು ಈ ಪ್ರದೇಶದಲ್ಲಿ ಸಿಕ್ಕಿದ್ದರೂ ಅವುಗಳಿಂದ ಹೆಚ್ಚಿನ ಮಾಹಿತಿಗಳೇನೂ ತಿಳಿಯುವುದಿಲ್ಲ. ಆದರೆ ಅವನ ಕಾಲದಲ್ಲೂ ಈ ಪ್ರದೇಶ ಹೊಯ್ಸಳ ಸಾಮ್ರಾಜ್ಯದ ಅಂಗವಾಗಿತ್ತೆಂದು ಖಚಿತವಾಗು ತ್ತದೆ. ಮುಮ್ಮಡಿ ನರಸಿಂಹನ ಕಾಲದ (1253–1292) ಕೆಲವು ಶಾಸನಗಳು ಈ ಪ್ರದೇಶದಲ್ಲಿ ದೊರಕಿವೆ: ಅವುಗಳಲ್ಲೊಂದಾದ 1259ರ ಶಾಸನದಲ್ಲಿ ನರಸಿಂಹನನ್ನು

ಪಾಂಡ್ಯವಂಶಾಧಾರನೆಂದು ಹೊಗಳಲಾಗಿದೆ. 1261 ಚಿಕ್ಕನಾಯಕನಹಳ್ಳಿಯ ಶಾಸನದಿಂದ ನರಸಿಂಹ ಚಕ್ರವರ್ತಿಯು ಸೋಮೇಶ ಮತ್ತು ಬಿಜ್ಜಳಿಯರ ಮಗನೆಂದು ತಿಳಿದು ಬರುತ್ತದೆ; ಈ ಶಾಸನದ ಪ್ರಕಾರ, ಅಸಂದಿನಾಡಿನಲ್ಲಿದ್ದ ಸೆಟ್ಟಿಕೆರೆ ಮತ್ತು ಸುತ್ತಮುತ್ತಲ ಗ್ರಾಮಗಳನ್ನು ನರಸಿಂಹನ ಮಂತ್ರಿ ನಾಚರಸನ ಪುತ್ರ ಗೋಪಾಲ ದಣಾಯಕನು ಭರಿತ ಪ್ರಕಾಶಪುರವೆಂಬ ಅಗ್ರಹಾರವನ್ನಾಗಿ ಸ್ಥಾಪಿಸಿದನೆಂದು ತಿಳಿದು ಬರುತ್ತದೆ. 1263ರ ತಿಪಟೂರಿನ ಶಾಸನ ಸಂಧಿ ವಿಗ್ರಹಿ ಸೋವಣ ದಣಾಯಕ ರಾಜನಿಂದ ತುರುವೇಕೆರೆಯನ್ನು ದತ್ತಿಯಾಗಿ ಪಡೆದು ಸರ್ವಜ್ಞ ವಿಜಯನಾರಸಿಂಹಪುರವೆಂಬ ಅಗ್ರಹಾರವನ್ನು ಸ್ಥಾಪಿಸಿದ ಸಂಗತಿಯನ್ನು ತಿಳಿಸುತ್ತದೆ.

ಸೋಮೇಶ್ವರನನಂತರ ಹೊಯ್ಸಳ ಸಾಮ್ರಾಜ್ಯ ಇಬ್ಭಾಗವಾದಾಗ ವೀರ ರಾಮನಾಥನಿಗೆ ಸೇರಿದ್ದ ತಮಿಳು ಪ್ರದೇಶಗಳು ಮತ್ತು ಕೋಲಾರ ಪ್ರಾಂತ್ಯಗಳೊಂದಿಗೆ ತುಮಕೂರು, ಗುಬ್ಬಿ, ಕುಣಿಗಲ್ ಮತ್ತು ಬಹುಶಃ ಚಿಕ್ಕನಾಯಕನಹಳ್ಳಿ ಪ್ರದೇಶಗಳೂ ಸೇರಿದ್ದುವೆಂಬ ಸಂಗತಿ ರಾಮನಾಥನ ಶಾಸನಗಳಿಂದ ತಿಳಿದು ಬರುತ್ತದೆ. ಆ ಶಾಸನಗಳು ರಾಮನಾಥನ ಮಂತ್ರಿಗಳು ನೀಡಿದ ಕೆಲವಾರು ದಾನ ದತ್ತಿಗಳ ಬಗ್ಗೆ ಪ್ರಸ್ತಾಪಿಸುತ್ತವೆ. ಹೊಯ್ಸಳ ದೊರೆಗಳಲ್ಲಿ ಕೊನೆಯ ಪ್ರಮುಖ ದೊರೆಯಾದ ಮುಮ್ಮಡಿ ಬಲ್ಲಾಳನ ಕಾಲದ (1291-1342) ಅನೇಕ ಶಾಸನಗಳು ಚಿಕ್ಕನಾಯಕನಹಳ್ಳಿಯ ಪರಿಸರದಲ್ಲಿ ಸಿಕ್ಕಿರುವುದರಿಂದ ಆಗಲೂ ಈ ಪ್ರದೇಶ ರಾಜ್ಯದಲ್ಲಿ ಮಹತ್ವಸ್ಥಾನ ಪಡೆದಿತ್ತೆಂದು ಊಹಿಸಲಾಗಿದೆ. 1318ರ ಚಿಕ್ಕನಾಯಕನಹಳ್ಳಿಯ ಶಾಸನ ಮಾಲಿಕ್ ಕಾಫೂರನ ನೇತೃತ್ವದಲ್ಲಿ ದಾಳಿಮಾಡಿದ ಮುಸ್ಲಿಮರ ಸೈನ್ಯದಿಂದ ಸೋತನಂತರ ತನ್ನ ರಾಜಧಾನಿಯನ್ನು ಅರುಣ ಸಮುದ್ರಕ್ಕೆ (ಈಗಿನ ತಿರುವಣ್ಣಾಮಲೆ) ಬದಲಾಯಿಸಿದುದನ್ನು ಸೂಚಿಸುತ್ತದೆ. 1325 ರ ತಿಪಟೂರು ಶಾಸನ ಮತ್ತೆ ಬಲ್ಲಾಳ ದೋರಸಮುದ್ರದಿಂದ ರಾಜ್ಯಭಾರ ಮಾಡುತ್ತಿದ್ದುದನ್ನು ತಿಳಿಸುತ್ತದೆ. 1331 ರ ಗುಬ್ಬಿಶಾಸನದಿಂದ ದೋರಸಮುದ್ರ ಅಂತಿಮವಾಗಿ ಹಾಳಾದನಂತರ ಬಲ್ಲಾಳ ವಿರೂಪಾಕ್ಷ ಜಿಲ್ಲೆಯ ಹೊಸದುರ್ಗದಿಂದ ಆಳುತ್ತಿದ್ದನೆಂದು ತಿಳಿಸುತ್ತದೆ. ಕಾಕತೀಯ ದೊರೆ ಪ್ರತಾಪರುದ್ರನ (ಇಮ್ಮಡಿ?) ಒಂದು ಶಾಸನ ತುಮಕೂರಿನ ಬಳಿ ಸಿಕ್ಕಿದ್ದು, ಅದು ಅರಸನು ಶಿವಗಂಗೆಗೆ ಭೇಟಿ ನೀಡಿ ಹಲವು ದಾನಧರ್ಮಗಳನ್ನು ಮಾಡಿ ಅನಂತಪುರವೆಂಬ ಅಗ್ರಹಾರವನ್ನಾಗಿ ಸ್ಥಾಪಿಸಿದ ಸಂಗತಿಯನ್ನು ತಿಳಿಸುತ್ತದೆ.

ವಿಜಯನಗರ ರಾಜ್ಯ ಸ್ಥಾಪನೆಯ ಕಾಲದಲ್ಲಿ ಈ ಪ್ರದೇಶ ಹಲವಾರು ಸಣ್ಣ ಪುಟ್ಟ ಪಾಳೇಗಾರರ ಕೈಕೆಳಗಿತ್ತು. 1346ರಲ್ಲಿ ಹರಿಹರ ಚಕ್ರವರ್ತಿಯ ಕಾಲದಲ್ಲಿ ಬುಕ್ಕರಾಯನು ಈ ಪ್ರದೇಶವನ್ನು ಗೆದ್ದು ಆ ಸಾಮ್ರಾಜ್ಯಕ್ಕೆ ಸೇರಿಸಿದನು. ಈ ಪ್ರದೇಶದಲ್ಲಿ ಸಿಕ್ಕಿರುವ ವಿಜಯನಗರ ಶಾಸನಗಳಲ್ಲಿ ತಿಪಟೂರಿನ ಬಳಿಯ ಮುರುಕುಶಾಸನವೇ ಹಳೆಯದು. ಸಂಗಮ ಮತ್ತು ಸಾಳುವ ವಂಶಗಳ ಕಾಲದಲ್ಲಿ ಈ ಪ್ರದೇಶ

ವಿಜಯನಗರ ಸಾಮ್ರಾಜ್ಯಕ್ಕೆ ಸೇರಿದ್ದ ಸಂಗತಿ ಖಚಿತವಾದರೂ ಅದರ ಬಗ್ಗೆ ಹೆಚ್ಚಿನ ಮಾಹಿತಿಗಳೇನೂ ದೊರಕಿಲ್ಲ. ತುಳುವವಂಶದ ಕಾಲದಲ್ಲಿ ತುಮಕೂರು ಮುಖ್ಯ ಪಟ್ಟಣವಾಗಿದ್ದ 'ಕೊರನಾಡು' ಎಂಬ ಪ್ರಾಂತ್ಯ ಅಸ್ತಿತ್ವಕ್ಕೆ ಬಂದು ಚಿಕ್ಕನಾಯಕನಹಳ್ಳಿಯು ನೆರೆಹೊರೆ ಆ ಪ್ರಾಂತ್ಯಕ್ಕೆ ಸೇರಿತ್ತು. ಕೃಷ್ಣದೇವರಾಯ, ಅಚ್ಯುತರಾಯ ಮತ್ತು ಸದಾಶಿವರಾಯರ ಕಾಲದಲ್ಲಿ ಸಹ ಇದೇ ಪರಿಸ್ಥಿತಿ ಮುಂದುವರಿಯಿತು. ಆ ಕಾಲದ ಅನೇಕ ಶಾಸನಗಳಿಂದ ರಾಜರ ಮತ್ತು ಅಧಿಕಾರಿಗಳು ದಾನ–ದತ್ತಿಗಳನ್ನು ನೀಡಿದ ಮಾಹಿತಿಗಳ ಹೊರತು ಹೆಚ್ಚಿನದೇನೂ ತಿಳಿದುಬರುವುದಿಲ್ಲ. ಆದರೆ ಆ ಕಾಲದಲ್ಲಿ ಅಸ್ತಿತ್ವಕ್ಕೆ ಬಂದ ಹಲವಾರು ಪ್ರಾದೇಶಿಕ ಪಾಳೆಯಗಾರರಲ್ಲಿ ಹಾಗಲವಾಡಿ ನಾಯಕರ ಮನೆತನ ಚಿಕ್ಕನಾಯಕನಹಳ್ಳಿಯ ಪ್ರದೇಶದಲ್ಲಿ ಪ್ರಾಬಲ್ಯ ಪಡೆಯಿತು.

ಹಾಗಲವಾಡಿ ನಾಯಕ ಮನೆತನದವರು ಚಿಕ್ಕನಾಯಕನಹಳ್ಳಿ ಪ್ರದೇಶವನ್ನು ಕ್ರಿ.ಶ. 1478ರಿಂದ 1776ರ ವರೆಗೆ ಅಂದರೆ ಮುನ್ನೂರು ವರ್ಷಗಳ ಕಾಲ ಆಳುತ್ತಿದ್ದರು. ಹಿರಿಮಾದನಾಯಕನೆಂಬುವನಿಂದ ಸ್ಥಾಪಿತವಾದ ಈ ಮನೆತನದ ಎರಡನೆಯವನೇ ಸಾಲಿನಾಯಕ. ಶೂರನೂ, ಸಾಹಸಿಯೂ ಆದ ಸಾಲಿನಾಯಕನ ಕಾಲದಲ್ಲಿ (1503–1544) ರಾಜ್ಯ ವಿಸ್ತಾರಗೊಂಡಿತ್ತು. ಚಿಕ್ಕನಾಯಕನಹಳ್ಳಿಯ 1699ರ ಒಂದು ಶಾಸನ ಅವನ ಸಾಹಸಗಳನ್ನು ವರ್ಣಿಸಿದೆ : ಆ ಶಾಸನದಲ್ಲಿ ಅವರ ವಂಶಾವಳಿಯ ಕೆಲವು ವಿವರಗಳು ದೊರಕಿವೆ. ಸಾಲಿನಾಯಕ, ಅವನ ಮಗ ಸಂಗಪ್ಪನಾಯಕ, ತರುವಾಯ ಅವನ ಮಗ ಬಸವಪ್ಪನಾಯಕ ಮತ್ತು ಬಸವಪ್ಪನಾಯಕನ ಮಗ ಬಾಡು ತಿಮ್ಮಪ್ಪನಾಯಕರ ಹೆಸರುಗಳು ಅದರಲ್ಲಿ ಕಂಡುಬರುತ್ತವೆ. ಕಂದಿಕೆರೆ, ಸೆಟ್ಟಿಕೆರೆ ಪ್ರದೇಶಗಳನ್ನು ಗೆದ್ದು ರಾಜ್ಯ ವಿಸ್ತಾರ ಮಾಡಿದನಂತರ, ಸಾಲಿನಾಯಕ ತಾನು ಗೆದ್ದ ಪ್ರದೇಶಗಳನ್ನು ತನಗೆ ಬಿಟ್ಟುಕೊಡುವಂತೆ ಒಪ್ಪಂದ ಮಾಡಿಕೊಂಡು ಪೆನುಗೊಂಡೆಯ ಸೈನ್ಯದ ಪರವಾಗಿ ಹೋರಾಡಿದನು. ಮೊದಮೊದಲಿಗೆ ಜಯಗಳಿಸಿದರೂ, ಅನಂತರ ಒಂದು ಕದನದಲ್ಲಿ ಅಪಜಯವನ್ನು ಅನುಭವಿಸಿದಾಗ ಆವರೆಗಿನ ಜಯಗಳಿಂದ ಗಳಿಸಿದ್ದ ಸಂಪತ್ತಿನೊಂದಿಗೆ ತನ್ನ ರಾಜಧಾನಿಗೆ ಹಿಂದಿರುಗಿದನು. ಅವನ ತಮ್ಮನಾದ ಚಿಕ್ಕನಾಯಕನು ಈ ಕದನಗಳಲ್ಲಿ ಅಣ್ಣನಿಗೆ ಬಹಳ ಸಹಾಯ ಮಾಡಿದ್ದನು. ಆದುದರಿಂದ ಅವನಿಂದ ಸ್ಥಾಪಿತವಾದ ಊರಿಗೆ ಚಿಕ್ಕನಾಯಕನಹಳ್ಳಿಯೆಂದು ಹೆಸರಿಡಲಾಯಿತು. ಆ ವೇಳೆಗೆ ಹೊನ್ನವಳ್ಳಿ, ತುರುವೇಕೆರೆ ಮತ್ತು ನೊಣವಿನಕೆರೆ ಸಾಲಿನಾಯಕನ ರಾಜ್ಯಕ್ಕೆ ಸೇರಿದ್ದುವು. ಅವನ ಮೊಮ್ಮಗ ಮುದಿಯಪ್ಪನಾಯಕ–1 ತನ್ನ ರಾಜ್ಯವನ್ನು ವಿಸ್ತರಿಸಿದನು. ಆ ವಂಶದ 9ನೇ ದೊರೆ ಇಮ್ಮಡಿ ಮುದಿಯಪ್ಪನಾಯಕನಿಗೆ ರಾಜರ್ಷಿಯೆಂದು ಹೆಸರಾಗಿತ್ತು : ಅವನು ಸ್ವಲ್ಪ ಕಾಲ ರಾಜ್ಯವಾಳಿದನಂತರ ಸಿಂಹಾಸನ ತ್ಯಾಗ ಮಾಡಿ ಧಾರ್ಮಿಕಜೀವನದಲ್ಲಿ ನಿರತನಾದನು. ಅವನ ಮಗ ಮುದ್ದುವೀರಪ್ಪನಾಯಕ

(1740-1753) ಮುಸಲ್ಮಾನ್ ದಳಪತಿಗಳಾದ ಸಲಾಬತ್‌ಜಂಗ್ ಮತ್ತು ದಿಲಾವರ್‌ಖಾನ್ ಎಂಬವರ ಆಕ್ರಮಣವನ್ನೆದುರಿಸಿ ಅವರನ್ನು ಹೊಡೆದಟ್ಟಿದುದರಿಂದ ಅವನಿಗೆ ''ಜಂಗ್ ಬಹದ್ದೂರ್'' ಎಂದು ಬಿರುದಾಯಿತು. ಆ ಮನೆತನದ 12ನೇ ನಾಯಕ ಚನ್ನಬಸವಪ್ಪನಾಯಕನನ್ನು ಮೈಸೂರಿನ ಹೈದರಾಲಿಯು ಸೆರೆಹಿಡಿದು ಶ್ರೀರಂಗಪಟ್ಟಣಕ್ಕೆ ಸಾಗಿಸಿದನು. ಇವರೊಂದಿಗೆ ಹಾಗಲವಾಡಿಯ ಪಾಳೆಯಪಟ್ಟು ಮೈಸೂರು ರಾಜ್ಯದೊಂದಿಗೆ ಪೂರ್ಣವಾಗಿ ಲೀನವಾಗಿ ಹೋಯಿತು.

ಅದಕ್ಕೂ ಮೊದಲೇ ಅಂದರೆ 1673ರ ವೇಳೆಗೆ ದೇವರಾಜ ಒಡೆಯರ ಕಾಲದಲ್ಲಿ ಚಿಕ್ಕನಾಯಕನಹಳ್ಳಿ ಮೈಸೂರು ರಾಜ್ಯದ ಉತ್ತರದ ಗಡಿಯಾಗಿತ್ತೆಂದು ಹಯವದನ ರಾಯರ ಮೈಸೂರು ಚರಿತ್ರೆಯಲ್ಲಿ ತಿಳಿಸಲಾಗಿದೆ. ಮತ್ತೆ ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಈ ಪ್ರದೇಶದಲ್ಲಿ ಅನೇಕ ಶಾಸನಗಳು ಸಿಕ್ಕಿವೆ; ಅವುಗಳಿಂದ ಆ ಪ್ರದೇಶದ ಮೇಲೆ ಚಿಕ್ಕದೇವರಾಜರು ನಡೆಸಿದ ದಾಳಿಗಳ ಮಾಹಿತಿಗಳು ಸಿಕ್ಕುತ್ತವೆ. ಇಷ್ಟಾದರೂ ಅವರ ತರುವಾಯ ಹಾಗಲವಾಡಿಯ ನಾಯಕರು ಹೆಚ್ಚು ಕಡಿಮೆ ಸ್ವತಂತ್ರರಾಗಿ ಮುಂದುವರಿದರೆಂದು ಕಾಣುತ್ತದೆ, ಅಂತಿಮವಾಗಿ 1776ರಲ್ಲಿ ಹೈದರನ ಆಕ್ರಮಣದಿಂದ ಮೈಸೂರು ರಾಜ್ಯದೊಂದಿಗೆ ಸೇರಿಹೋಯಿತು. ಟಿಪ್ಪುವಿನ ವಿರುದ್ಧ ಹೋರಾಡುತ್ತಿದ್ದ ಬ್ರಿಟಿಷ್ ಸೈನ್ಯದೊಡನೆ ಸೇರಲು ಹೋಗುತ್ತಿದ್ದ ಪರಶುರಾಮ ಬೌಪನ ಮರಾಠ ಸೈನ್ಯ ಹಾದಿಯಲ್ಲಿ ಈ ಊರನ್ನು ಕೊಳ್ಳೆಹೊಡೆಯಿತೆಂದು ತಿಳಿದುಬರುತ್ತದೆ.

ಅರ್ವಾಚೀನ ಕರ್ನಾಟಕ ರಾಜ್ಯದಲ್ಲಿ ತುಮಕೂರು ಜಿಲ್ಲೆಗೆ ಸೇರಿದ ಒಂದು ತಾಲ್ಲೂಕು ಮುಖ್ಯಸ್ಥಳವಾದ ಚಿಕ್ಕನಾಯಕನಹಳ್ಳಿಯಲ್ಲಿ ಪೌರಸಭೆಯಿದೆ. ಮತ್ತು ಈ ಪ್ರದೇಶದಲ್ಲಿ ಅಡಕೆ, ತೆಂಗು ಸಮೃದ್ಧವಾಗಿ ಬೆಳೆಯುವುದರಿಂದ ಇದು ವ್ಯಾಪಾರ ಕೇಂದ್ರವೂ ಆಗಿದೆ. ಇಲ್ಲಿನ ಕೊಬ್ಬರಿ ವ್ಯಾಪಾರವೆಷ್ಟು ಪ್ರಸಿದ್ಧವಾಗಿದೆಯೆಂಬುದನ್ನು ಒಂದು ಗಾದೆಯಿಂದ ತಿಳಿಯಬಹುದಾಗಿದೆ : ''ಚಿಕ್ಕನಾಯಕನ ಹಳ್ಳಿಯ ಬೆಳ್ಳಿಬಟ್ಟಲು'' (ಕೊಬ್ಬರಿ ಚಿಪ್ಪಿನ ಅರ್ಧಭಾಗ).

ಪ ರಿ ಸ ರ

## ಚಿಕ್ಕನಾಯಕನಹಳ್ಳಿ

# ಪಾಳೇಗಾರರು

**ಎ. ವಿ. ವೆಂಕಟರತ್ನಂ**

ಕರ್ನಾಟಕದ ಪ್ರತಿಯೊಂದು ಜಿಲ್ಲೆಯೂ ತನ್ನ ಸಾಂಸ್ಕೃತಿಕ ಇತಿಹಾಸಕ್ಕೆ ಪ್ರಸಿದ್ಧವಾಗಿದೆ. ಅಂತಹುವರಲ್ಲಿ ತುಮಕೂರು ಗಮನಾರ್ಹವಾದ ಜಿಲ್ಲೆ. ಚಿಕ್ಕನಾಯಕನಹಳ್ಳಿ ಜಿಲ್ಲಾ ಕೇಂದ್ರದಿಂದ ಪಶ್ಚಿಮಕ್ಕಿದೆ. ಮೊದಲಿನಿಂದಲೂ ಐತಿಹಾಸಿಕವಾಗಿ ಪ್ರಸಿದ್ಧವಾಗಿರುವ ಸ್ಥಳ. ಇದಕ್ಕೆ ಪಾಳೇಗಾರನೊಬ್ಬನಿಂದ ಈ ಹೆಸರು ಬಂದಿತ್ತಾದರೂ, ಅದಕ್ಕೂ ಪೂರ್ವದಲ್ಲೂ ಈ ಪ್ರದೇಶ ಸಾಕಷ್ಟು ಚಟುವಟಿಕೆಗಳನ್ನು ಹೊಂದಿರುವ ಪ್ರದೇಶವಾಗಿತ್ತು. ಇಲ್ಲಿ ಆದಿಶಿಲಾಯುಗ ಹಾಗೂ ಮಧ್ಯ ಶಿಲಾಯುಗಕ್ಕೆ ಸೇರಿದ ಅನೇಕ ಅವಶೇಷಗಳು ದೊರೆಕಿವೆ. ಚಿಕ್ಕನಾಯಕನಹಳ್ಳಿ ತಾಲ್ಲೋಕಿನಲ್ಲಿರುವ 'ಕಬ್ಬನಹಳ್ಳಿ' ಆದಿಮಾನವನನೆಲೆಯಾಗಿತ್ತು. ಎಲ್. ರಾಮರಾಯರು, ಡಾ. ಎಂ. ಶೇಷಾದ್ರಿ, ಹೆಚ್. ಕೆ. ಸ್ಲೇಟರ್, ಮುಂತಾದವರು ಈ ಪ್ರದೇಶದಲ್ಲಿ ಸಾಕಷ್ಟು ಸಂಶೋಧನೆ ನಡೆಸಿದ್ದಾರೆ. ರಾಮಾಯಣ, ಮಹಾಭಾರತ ಕಾಲದಲ್ಲಿ ಈ ಪ್ರದೇಶ ಸಾಕಷ್ಟು ಪ್ರಾಮುಖ್ಯತೆ ಪಡೆದ ಸ್ಥಳವಾಗಿತ್ತು.

ಐತಿಹಾಸಿಕ ಯುಗದಲ್ಲಿ ಗಂಗ ಶಾಸನಗಳು ಕಾಣಬರುತ್ತವೆ. ಅನಂತರ ರಾಷ್ಟ್ರಕೂಟ ಆಳ್ವಿಕೆಗೆ ಈ ಪ್ರದೇಶ ಒಳಗೊಂಡಿದ್ದಂತೆ ಕಾಣಬರುತ್ತದೆ. ಕಲ್ಯಾಣಿ ಚಾಲುಕ್ಯರ ಕಾಲದ ಶಾಸನಗಳು ದೊರಕಿವೆ. ಹೊಯ್ಸಳರ ಅನೇಕ ಶಾಸನಗಳು ಅವರ ಆಡಳಿತ ಪದ್ಧತಿ, ಧಾರ್ಮಿಕಜೀವನ, ಕಲೆ ಮುಂತಾದವುಗಳ ಬಗ್ಗೆ ಉಪಯುಕ್ತ ಮಾಹಿತಿ ಕೊಡುತ್ತವೆ. ಈ ಪ್ರದೇಶದ ಸ್ವಲ್ಪ ಭಾಗವನ್ನು ವಿಜಯನಗರದ ಅರಸರು ಸ್ವಾಧೀನಪಡಿಸಿಕೊಂಡಿದ್ದರು.

**ಹೆಸರು ;**

ಈ ಆಳ್ವಿಕೆಯ ನಂತರ ಈ ಪ್ರದೇಶದಲ್ಲಿ ಕಾಣಬರುವ ಮನೆತನವೇ 'ಹಾಗಲವಾಡಿ ಪಾಳೇಗಾರರು. : ವಾಸ್ತವವಾಗಿ ಈ ಮನೆತನಕ್ಕೆ 'ಚಿಕ್ಕನಾಯಕನಹಳ್ಳಿ ಪಾಳೇಗಾರರು' ಎಂದಿರಬೇಕಾಗಿತ್ತು. ಅಂಧ್ರ ಪ್ರದೇಶದಿಂದ ಇವರು ಬಂದಿದ್ದಾದರೂ ಚಿಕ್ಕನಾಯಕನಹಳ್ಳಿಗೆ ಮೊದಲಿಗೆ ಬಂದರು. ಈ ಮನೆತನದ ಐದನೆಯ ದೊರೆ ಇಮ್ಮಡಿ ಭೈರಪ್ಪ ನಾಯಕನ ಕಾಲದಲ್ಲಿ (1650–1678) ರಣದುಲ್ಲಾಖಾನ್ ಧಾಳಿಗೆ ಹೆದರಿ. ಚಿಕ್ಕನಾಗನಹಳ್ಳಿಯಿಂದ ಹಾಗಲವಾಡಿಗೆ ರಾಜಧಾನಿ ಬದಲಾಯಿಸಿದರು. ಪ್ರಾರಂಭದಲ್ಲಿ ಸುಮಾರು ನೂರೈವತ್ತು ವರ್ಷಗಳ ಕಾಲ ಈ ಪ್ರಾಂತ್ಯದಿಂದಲೇ ಆಳ್ವಿಕೆಯನ್ನು ನಡೆಸಿದರು. ಒಂಬತ್ತನೆಯ ದೊರೆ ಮುದಿಯಪ್ಪನಾಯಕ ಹಾಗೂ ಇತರ ದೊರೆಗಳು ತೋರಿಸಿದ ಪರಾಕ್ರಮದಿಂದ ಮುಂದಿನ ದೊರೆಗಳು 'ಹಾಗಲವಾಡಿ ಪಾಳೇಗಾರ'ರೆಂದು

ಖ್ಯಾತರಾದರು. ಹಾಗಲವಾಡಿಯಿಂದ ಆಳಿದ ದೊರೆಗಳು ತುಮಕೂರು ಜಿಲ್ಲೆಯ ಬಹು ಪಟ್ಟಿನ ಪ್ರದೇಶವನ್ನು ಆಕ್ರಮಿಸಿಕೊಂಡರೂ ಸಾಕಷ್ಟು ವೈಭವದಿಂದ ಆಳ್ವಿಕೆ ನಡೆಸಿದರು. ಹೀಗಾಗಿ ಇವರ ಹೆಸರಿನ ಮುಂದೆ 'ಹಾಗಲವಾಡಿ' ಎಂಬ ಹೆಸರು ಸೇರಿತ್ತು. ವಾಸ್ತವವಾಗಿ ಈ ಜನ ಚಿಕ್ಕನಾಯಕನಹಳ್ಳಿ ಪ್ರದೇಶದವರು. ಏರಿಮಾದನಾಯಕನಿಂದಲೂ ಅವರು ಈ ಪ್ರದೇಶದ ನಾಯಕರು. ಚಿಕ್ಕನಾಯಕನಹಳ್ಳಿ ಪಾಳೇಗಾರರು ಚಿಕ್ಕನಾಯಕನ ಹಳ್ಳಿ ಗುಬ್ಬಿ, ತುರುವೇಕೆರೆ, ತಿಪಟೂರು, ಒಳಗೊಂಡಂತೆ ಪ್ರಾಂತ್ಯಗಳನ್ನು ಹೊಂದಿದ್ದರು.

**ಆಧಾರ :**

ಚಿಕ್ಕನಾಯಕನಹಳ್ಳಿ ಪಾಳೇಗಾರರ ಇತಿಹಾಸ ಅಧ್ಯಯನಕ್ಕೆ ಆಧಾರಗಳ ಕೊರತೆ ಇದೆ. ಕೆಲವೇ ಶಾಸನಗಳು ಮಾತ್ರ ದೊರಕಿವೆ. E.C. 12 ತುಮಕೂರು ಜಿಲ್ಲೆಯ ಶಾಸನ ಸಂಪುಟ ಹಾಗೂ ನೀಲಕಂಠಶಾಸ್ತ್ರಿ ಅವರು ಸಂಗ್ರಹಿಸಿರುವ ತುಮಕೂರು ಜಿಲ್ಲಾ ಶಾಸನ ಅನುಬಂಧ (1958) ತುಂಬಾ ಉಪಯುಕ್ತವಾಗಿದೆ. ಅದರಲ್ಲಿ ಮೂರು ಶಾಸನ ಗಳು ಮಾತ್ರ ಪ್ರಕಟವಾಗಿದೆ. ಪಾಳೇಗಾರರ ವಂಶೀಯರಾದ ದಿವಂಗತ ಬಸವಲಿಂಗ ರಾಜರ ಕೈಫಿತ್ತು[1] ಪ್ರಮುಖವಾಗಿದೆ. ಸೋಸಲೆ ರೇವಣಾರಾಧ್ಯ ಹಾಗೂ ಸೋಮ ಶೇಖರ ಶಿವಯೋಗಿಗಳ ಕೃತಿಗಳು ಅಲ್ಪಸ್ವಲ್ಪ ಪ್ರಯೋಜನ ಕೊಡುತ್ತವೆ. B.L. Rice ಅವರು 'Mysore and Coorg from Inscriptions'. Mysore gazetter: by C. Hayavadana Rao ಮತ್ತು Mysore Archaeological Reports - 1918. ಆರ್. ನರಸಿಂಹ ಚಾರ್ಯ ಅವರ 'ಕವಿ ಚರಿತ್ರೆ' ಸಂಪುಟಗಳು ಪ್ರಮುಖ ಗ್ರಂಥಸ್ಥ ಆಧಾರಗಳಾಗಿವೆ. ಇವುಗಳ ಜೊತೆ ಶ್ರೀ ಅಭಿಶಂಕರ ಅವರು ಸಂಪಾದಿಸಿರುವ "Tumkur district gazetter" ಕೂಡ ಉಪಯುಕ್ತವೆನಿಸಿದೆ ಇದರು 1931 ರಲ್ಲಿ ಪ್ರಕಟವಾಗಿರುವ ಎಂ. ಎಸ್. ಪುಟ್ಟಣ್ಣನವರ 'ಹಾಗಲವಾಡಿ ಪಾಳೇಗಾರರು' ಮೊದಲ ಸಮಗ್ರ ಕೃತಿ. ಕಿರಿದಾದ ಗ್ರಂಥವಾದರೂ ಎಲ್ಲಾ ರಾಜರ ಚಟುವಟಿಕೆಯ ಬಗ್ಗೆ ಮೊದಲ ದಾಖಲೆ ಯಾಗಿದೆ, ಈ ಗ್ರಂಥದ ದೋಷವೆಂದರೆ ರಾಜರ ಕಾಲಾನುಕ್ರಮಣಿಕೆಯನ್ನು ಸರಿಯಾಗಿ ನಿರ್ಧರಿಸ ದಿರುವುದು. ಪ್ರಾಯಶಃ ಇದಕ್ಕೆ ಅವರಿಗೆ ದೊರಕಿರುವ ಆಧಾರದ ದೋಷ ವಿರುವುದು ಆದರೂ ಗ್ರಂಥ ಮೊದಲ ಭಾರಿಗೆ 'ಹಾಗಲವಾಡಿಪಾಳೇಗಾರ'ರನ್ನು ಚೆನ್ನಾಗಿ ಪರಿಚಯ ಮಾಡಿಕೊಡುತ್ತದೆ.

**ಮೂಲ :**

ಚಿಕ್ಕನಾಯಕನಹಳ್ಳಿ ಪಾಳೇಗಾರ ಮೂಲವು ಇತರ ಪಾಳೇಗಾರರಂತೆ ಸಾಕಷ್ಟು

---

1. ಇದನ್ನು ಎಂ. ಎಸ್. ಪುಟ್ಟಣ್ಣ ಅವರು ನೋಡಿದ್ದಾರೆ.

ವಾದಗ್ರಸ್ತವಾಗಿದೆ. ಈ ಮನೆತನದ ಇಡೀ ಚರಿತ್ರೆ ಪವಾಡಗಳಿಂದ ತುಂಬಿಹೋಗಿದೆ. ಇವರ ಪ್ರಾರಂಭದ ಸ್ಥಿತಿ, ಸ್ಥಳ ಹಾಗೂ ಮತ ಸಾಕಷ್ಟು ವಾದ ವಿವಾದಗಳಿಗೆ ಸಿಲುಕಿದೆ. ಬಿ. ಎಲ್. ರೈಸ್, ಎಂ. ಎಸ್. ಪುಟ್ಟಣ್ಣ. ಮುಂತಾದವರು ಇವರು ಆಂಧ್ರ ಪ್ರದೇಶ ದಿಂದ ಬಂದವರೆಂದು ಬರೆಯುತ್ತಾರೆ. ಸೋಸಲೆ ರೇವಣಾರಾಧ್ಯ ಈ ಮನೆತನದ ದೊರೆ ಮುದಿಯಪ್ಪನಾಯಕನ ಅಪೇಕ್ಷೆಯಂತೆ 'ಶಿವಮಹಿಮ್ನಸ್ತೋತ್ರ'ಕ್ಕೆ ಕನ್ನಡದಲ್ಲಿ ಟೀಕೆಯೊಂದನ್ನು ಬರೆದಿದ್ದಾನೆ. ಅವನು ಕೃತಿಯ ಆಧಾರದ ಮೇಲೆ ಕೆಲವು ವಿದ್ವಾಂಸರು 'ಆದಿಯಿಂದಲೂ ಈ ರಾಜಮನೆತನವೂ ವೀರಶೈವ ಮನೆತನವಾಗಿತ್ತು' ಎಂದಿದ್ದಾರೆ.

ಚಿಕ್ಕನಾಯಕನಹಳ್ಳಿ ಪಾಳೇಗಾರ ಮೂಲಪುರುಷ ಎರಿಮಾದನಾಯಕ ತುಮ್ಮಳ ಸಂಸ್ಥಾನದಿಂದ ಈ ಪ್ರಾಂತ್ಯಕ್ಕೆ 1524 ರಲ್ಲಿ ಬಂದನು[1] ದಾರಿ ಮಧ್ಯೆ 'ಆನೆಸಿದ್ದರಿ' ಎಂಬ ಸ್ಥಳದೊಳು ಇದ್ದು ತಮ್ಮ ಮನೆ ದೇವರನ್ನು ಆರಾಧಿಸಿ, ಅಲ್ಲಿಯೇ ಇದ್ದ ಲಕ್ಷ್ಮೀನರಸಯ್ಯನೆಂಬ ಬ್ರಾಹ್ಮಣನೊಡನೆ ಈ ಪ್ರಾಂತ್ಯಕ್ಕೆ ಬಂದನು 'ಚಿನ್ನತುಮ್ಮಳು' ಎಂಬುದು ಅನಂತರಪುರಜಿಲ್ಲೆ ಅದವಾನಿ ತಾಲ್ಲೋಕ್‌ಗೆ ಸೇರಿದೆ. ಅದು ಆಂಧ್ರಪ್ರದೇಶದ ಭಾಗ. ಎರಿಮಾದನಾಯಕ ದಾರಿ ಮಧ್ಯದಲ್ಲಿ ಸಂದರ್ಶಿಸಿದ 'ಆನೆಸಿದ್ದರಿ'ಯ ಬಗ್ಗೆ ಚಿತ್ರದುರ್ಗ ಪಾಳೇಗಾರರ ಇತಿಹಾಸದಲ್ಲಿ ಮಾಹಿತಿ ದೊರಕುತ್ತದೆ. ದಳವಾಯಿ ಮುದ್ದಣ್ಣನಾಯಕನ ಚಿತ್ರದುರ್ಗದ ದೊರೆ ಲಿಂಗಣ್ಣನಾಯಕನ ಕಾಲದಲ್ಲಿ 'ಆನೆಸಿದ್ದರಿ ಕೋಟೆ' ದುರಸ್ತಿಮಾಡಿಸಿದ ಉಲ್ಲೇಖವು ಹಿರಿಯೂರು ತಾಲ್ಲೂಕಿನ ಶಾಸನವೊಂದರಲ್ಲಿ ದೊರಕುತ್ತದೆ. ಪ್ರಾಯಶಃ ಹಿರಿಯೂರು, ಹೊಸದುರ್ಗ, ಹುಲಿಯೂರು ಮಾರ್ಗವಾಗಿ ಎರಿಮಾದನಾಯಕ ಚಿಕ್ಕನಾಯಕನಹಳ್ಳಿಗೆ ಬಂದಿರಬಹುದು.

ಇವರು ಶಾಸನಗಳಲ್ಲಿ ತಮ್ಮನ್ನು 'ಗೋವ್ರಳಗೋತ್ರ' ಎಂದು ಕರೆದುಕೊಂಡಿದ್ದಾರೆ. ಈ ವಂಶದ ಪಾಳೇಗಾರನಿಗೆ ಹೆಸರಿನಾಚೆ 'ಐಯ್ಯನವರು' ಎಂದು ಹೇಳುತ್ತಿದ್ದರು. ಮುಂಬೈ-ಕರ್ನಾಟಕದ ನಾಯಕ ಜನಾಂಗದಲ್ಲಿ 'ಗೋರ್ಲ' ಎಂಬ ಗೋತ್ರ ಕಂಡುಬರುತ್ತದೆ. ಆದುದರಿಂದ ಶಾಸನದಲ್ಲಿ ಹೇಳಿರುವ 'ಗೋವ್ರಳ' ಗೋತ್ರ ಮತ್ತು 'ಗೋರ್ಲ' ಜನಾಂಗದವರಿಗೆ ಆಂತರಿಕ ಸಂಬಂಧವಿರಬಹುದು. ಗೋವ್ರಳ ಗೋತ್ರವೆಂದರೆ ಪರೋಕ್ಷವಾಗಿ ಗೋಪಾಲಕವೆಂದೂ ಕರೆದುಕೊಂಡಿರುವ ಲಕ್ಷಣವೆಂದೂ ಎಂ. ವಿ. ಚಿತ್ರಲಿಂಗಯ್ಯನವರು ಅಭಿಪ್ರಾಯಪಡುತ್ತಾರೆ.

ತಿಪಟೂರು ತಾಲ್ಲೋಕಿನ (102) ಶಾಸನ 'ಚಿಕ್ಕನಾಯಕನಹಳ್ಳಿ ಪಾಳೇಗಾರರು'

---

1 ಎಂ. ಎಸ್. ಪುಟ್ಟಣ್ಣನವರು : ತುಮ್ಮಳ ಸಂಸ್ಥಾನವಾದ ಈ ದೇಶಕ್ಕೆ ಶಾಲಿವಾಹನ ಶಕ 1400, (ಕ್ರಿ.ಶ. 1478) ಪರಾಭವ ಸಂವತ್ಸರದಲ್ಲಿ ಎರಿಮಾದನಾಯಕ ಬಂದನು' ಎನ್ನುತ್ತಾರೆ. (ಪುಟ. 3) ಕಿ.ಶ್ರ. 1478 ತುಮ್ಮಳ ಸಂಸ್ಥಾನದಿಂದ ಎರಿಮಾದ ನಾಯಕ ಬಂದನ್ನು (ಪುಟ. 34) ಎಂದು ಹೇಳುತ್ತಾರೆ.

ತಮ್ಮ ಸಂಸ್ಥಾನವನ್ನು 'ಹೊಯ್ಸಳ ಸೀಮೆ' ಎಂದು ಕರೆದುಕೊಂಡಿದ್ದಾರೆ. ಅದು ಘನಗಿರಿನಗರಕ್ಕೆ ಪಶ್ಚಿಮಕ್ಕಿದೆಯೆಂದೂ ಹೇಳುತ್ತಾರೆ. ಪ್ರಾಯಶಃ ಹೊಯ್ಸಳರ 'ಮಹಾಸಾಮಂತ'ರನಂತರ ಈ ಪಾಳೇಗಾರರು ಅಧಿಕಾರಕ್ಕೆ ಬಂದರು. ಅವರು ಸ್ಥಳೀಯರೆಂದು ಹೇಳುವ ವಾದವಿದೆ. ವಿಜಯನಗರ ಸಾಮ್ರಾಜ್ಯದ ಪ್ರಾರಂಭದಲ್ಲಿ ಸ್ಥಳೀಯ ನಾಯಕನೊಬ್ಬ ತನ್ನ ಸ್ವಸಾಮರ್ಥ್ಯದಿಂದ ರೂಪಿಸಿದ ಪಾಳೇಪಟ್ಟು ಇದು.

ಈ ಪಾಳೇಗಾರರು ಪ್ರಾರಂಭದಲ್ಲಿ ವಿಷ್ಣುಭಕ್ತರಾಗಿದ್ದರೂ, ಜಾತಿಯಲ್ಲಿ ಬೇಡರಾಗಿದ್ದರು. [ಪುಳಿಂದಕುಲೋದ್ಭವ] ಮೂರನೆಯ ದೊರೆ ಭೈರವನಾಯಕ (1580–1610)ನ ಕಾಲದಲ್ಲಿ ಸಿದ್ದೇಶ್ವರ ಸ್ವಾಮಿಗಳಿಂದಾಗಿ ವೀರಶೈವರಾದರು. ಆ ಹೊತ್ತಿಗಾಗಲೇ ಕೆಳದಿಸಂಸ್ಥಾನ 'ವೀರಶೈವ ಧರ್ಮಪ್ರಸಾರ'ವನ್ನು ಕೈಗೆತ್ತಿಕೊಂಡಿತ್ತು. ಚಿತ್ರದುರ್ಗ, ತರೀಕೆರೆಯವರನ್ನು ಇತ್ತ ತಿರುಗಿಸುವ ಪ್ರಯತ್ನ ನಡೆದಿತ್ತು. ಹೀಗಾಗಿ ಅನೇಕ ಜಂಗಮರು ಮತಪ್ರಸಾರದ ಉದ್ದೇಶದಿಂದ ಸಂಚಾರ ಹೊರಟಿದ್ದರು. ಅಂತಹವರ ಪ್ರಭಾವವೇ ಇವರ ಹೊಸಧರ್ಮಕ್ಕೆ ಕಾರಣವಿರಬಹುದು.

**ಆಳಿದ ನಾಯಕರುಗಳು**

ಚಿಕ್ಕನಾಯಕನಹಳ್ಳಿ ಪಾಳೇಗಾರರು ಈ ಸಂಸ್ಥಾನವನ್ನು 1524 ರಿಂದ 1776ರ ವರೆಗೆ[1] ಅಂದರೆ ಇನ್ನೂರೈವತ್ತು ವರ್ಷಗಳ ಕಾಲ, ಹದಿನೂರು ದೊರೆಗಳ ಮೂಲಕ ಆಳಿದರು.

ಹೊಯ್ಸಳಸಾಮ್ರಾಜ್ಯದ ಪತನಾನಂತರ ಕರ್ನಾಟಕದಲ್ಲಿ ಅನೇಕ ಸಣ್ಣಪುಟ್ಟ ಪಾಳೇಪಟ್ಟುಗಳು ತಲೆ ಎತ್ತಿದವು. ಮುಂದೆ ವಿಜಯನಗರ ಸಾಮ್ರಾಜ್ಯ ಉದಯವಾದರೂ ಅನೇಕ ಕಾರಣಗಳಿಂದ ಅವರು ಈ ಪಾಳೇಪಟ್ಟನ್ನು ಒಂದುಗೂಡಿಸಲಿಲ್ಲ. ಕೆಳದಿ, ಮಾಗಡಿ, ಚೆನ್ನಪಟ್ಟಣ, ಚಿತ್ರದುರ್ಗ, ಶಿರಾ, ತರೀಕೆರೆ, ಚಿಕ್ಕನಾಯಕನಹಳ್ಳಿ ಮೊದಲಾದ ಪಾಳೇಗಾರರು ವಿಜಯನಗರ ಸಾಮ್ರಾಜ್ಯದ ಅಮರ ನಾಯಕರಾಗಿ ಅಧಿಕಾರ ನಡೆಸುತ್ತಿದ್ದರು. ಇವರು ಅನೇಕ ವೇಳೆ ತಮ್ಮಲ್ಲೇ ಪರಸ್ಪರ ಕಚ್ಚಾಡಿ ದುರ್ಬಲರಾಗುತ್ತಿದ್ದರು. ಇವರು ಏನಾದರೂ ಪ್ರಾಬಲ್ಯ ಹೊಂದಿದರೆಂಬ ಸೂಚನೆ ಕಂಡುಬಂದಾಗ, ವಿಜಯನಗರದ ಚಕ್ರವರ್ತಿಗಳು ರಾಜಧಾನಿಗೆ ಕರೆಸಿ, ಸೆರೆ ಹಾಕುತ್ತಿದ್ದರು. ಚಿತ್ರದುರ್ಗ, ಕೆಳದಿ, ಮಾಗಡಿ ಪಾಳೇಗಾರರು ಇಂತಹ ಸ್ಥಿತಿ ಅನುಭವಿಸಿದ್ದುದುಂಟು. ಚಿಕ್ಕನಾಯಕನಹಳ್ಳಿ ಪಾಳೇಗಾರರಿಗೆ ಅಂತಹ ಸ್ಥಿತಿ ಬರಲಿಲ್ಲ. ಆದರೆ ಬಿಜಾಪುರದ ಸೇನಾನಿ 'ರಣದುಲ್ಲಾಖಾನ್'ನ ದಂಡೆಯಾತ್ರೆ ಈ ಸಾಮ್ರಾಜ್ಯಕ್ಕೆ ಸಾಕಷ್ಟು ಆಘಾತವುಂಟುಮಾಡಿತ್ತು. 1565ರ ರಕ್ಕಸ ತಂಗಡಿ ಕಾಳಗ ಈ ಪಾಳೇಪಟ್ಟಿನ ನೈತಿಕ ಶಕ್ತಿ ಹಾಳುಮಾಡಿತ್ತು. ಹೈದರಾಲಿ ಕ್ರಿ.ಶ. 1776ರಲ್ಲಿ ಇದನ್ನು ರಾಜ್ಯದ ಒಂದು

---

1 ಎಂ. ಎಸ್. ಪುಟ್ಟಣ್ಣನವರು: ಕ್ರಿ.ಶ. 1478 ರಿಂದ 1776ರ ವರೆಗೆ ಅಂದರೆ ಮುನ್ನೂರು ವರ್ಷ ಈ ಪಾಳೇ ಪಟ್ಟು ಇತ್ತು ಎನ್ನುತ್ತಾರೆ.

ಎಂದು ಬರೆಯುತ್ತಾರೆ. ಐದನೆಯ ಪುಟದಲ್ಲಿ "ಇವನು ದೇಶವನ್ನು ಸಾಲಿಗೆ ಜೈಸುತ್ತಾ ಬಂದನಾದ ಕಾರಣ ಇವನಿಗೆ ಸಾಲಿನಾಯಕನೆಂಬ ಹೆಸರು ಬಂತಂತೆ" ಎನ್ನುತ್ತಾರೆ. ಈ ನಾಯಕನಿಗೆ ಈ ಹೆಸರು ಇಟ್ಟ ಹೆಸರೋ ಅಥವಾ ಗಳಿಸಿದ ಹೆಸರೋ ಎಂಬುದು ಸರಿಯಾಗಿ ತಿಳಿಯದು. ಅಭಿಶಂಕರ ಅವರು ಸಹ 'ಸಾಲುಸಾಲು ಮೇಲಿನ ವಿಜಯ ದಿಂದ ಈತನಿಗೆ ಸಾಲಿನಾಯಕ ಎಂಬ ಹೆಸರು ಬಂತೆಂದು' ಹೇಳುತ್ತಾರೆ.

ಡಾ. ದೇ. ಜವರೇಗೌಡ ಅವರು 'ಸಾಲಿನಾಯಕ ಎಂಬುದು ಸೋಲಿಗಜಾತಿ ಸೂಚಕ'ವಾದ ಹೆಸರೆಂದೂ ಕರೆಯುತ್ತಾರೆ. "ಸಾಲಿನಾಯಕ" ಎಂಬುದು ತೆಲುಗು ಮೂಲರೂಪದ ಹೆಸರೆಂದು. ತೆಲುಗಿನಲ್ಲಿ 'ಸಾಲು' ಎಂದರೆ 'ಸಾಕಪ್ಪ' ಎನ್ನುವ ಅರ್ಥ ವಿದೆ,' ಎನ್ನುತ್ತಾರೆ ಎಂ. ವಿ. ಚಿತ್ರಲಿಂಗಯ್ಯನವರು. ಇನ್ನೊಂದು ವಿಚಾರ. ಸಾಲಿ ನಾಯಕ ಕೃಷ್ಣದೇವರಾಯನ ನಂತರ ಪೆನುಗೊಂಡೆಯ ಚಕ್ರವರ್ತಿಗಳಿಗೆ ಯುದ್ಧದಲ್ಲಿ ಸಹಾಯ ಮಾಡಿದನೆಂದೂ ಪುಟ್ಟಣ್ಣ ಬರೆಯುತ್ತಾರೆ. ಅಂದರೆ ರಕ್ಕಸ ತಂಗಡಿಯ ಯುದ್ಧದಲ್ಲಿ ಸಾಲಿನಾಯಕ ಪೆನುಗೊಂಡೆಯ ಚಕ್ರವರ್ತಿಗಳಿಗೆ ಸಹಾಯ ಮಾಡಿರ ಬಹುದೇ? ಅಂದಮೇಲೆ ಸಾಲಿನಾಯಕನಿಗೆ ಪುಟ್ಟಣ್ಣನವರು ಕೊಟ್ಟಿರುವ ಕಾಲಾನು ಕ್ರಮಣಿಕೆಯಲ್ಲಿ ಬದಲಾವಣೆ ಮಾಡಬೇಕಾಗುತ್ತದೆ.

ಸಾಲಿನಾಯಕನಿಗೆ ಸಿದ್ದೇಶ್ವರ ಸ್ವಾಮಿಯವರು ಪ್ರಸನ್ನರಾಗಿದ್ದರು. 'ಎರೆಕಟ್ಟೆ' ಅಥವಾ 'ಯರಕಟ್ಟೆ' (ಚಿಕ್ಕನಾಯಕನಹಳ್ಳಿ ತಾಲ್ಲೋಕಿನಲ್ಲಿದೆ) ಎಂಬ ಗ್ರಾಮವನ್ನು ಸ್ಥಾಪಿಸಿ ಈತ ಅಲ್ಲಿರುತ್ತಿದ್ದ. ಈ ಗ್ರಾಮಕ್ಕೆ ಈ ಪಾಳೇಗಾರರು ತಳವಾರರಾಗಿದ್ದ ರೆಂದು ಬಿ. ಎಲ್. ರೈಸ್ ಹೇಳುತ್ತಾರೆ.

**ಸಾಲಿನಾಯಕ ಚಿಕ್ಕನಾಯಕನಹಳ್ಳಿ ಸ್ಥಾಪಕನೇ ?**

ಸಾಲಿನಾಯಕನ ಕಾಲ ಈ ಪಾಳೆಯಗಾರರ ಆಳ್ವಿಕೆ ಕಾಲದಲ್ಲಿ ತುಂಬಾ ಮಹತ್ವ ಪೂರ್ಣವಾದುದು. ರಾಜ್ಯವಿಸ್ತರಣೆ ಹಾಗೂ ಹೊಸನಗರದ ಸ್ಥಾಪನೆ, ಈತನ ಕಾಲದಲ್ಲಿ ವಿಶೇಷವಾಗಿ ಕಾಣಬರುತ್ತದೆ. 'ಎರಕಟ್ಟೆ' ಗ್ರಾಮವನ್ನು ಈತನೇ ನಿರ್ಮಿಸಿದ. ಈತನಿಗೆ 'ಚಿಕ್ಕನಾಯಕ'ನೆಂಬ ತಮ್ಮನಿದ್ದನಂತೆ. ಆತ ಅನೇಕ ಯುದ್ಧಗಳಲ್ಲಿ ಈತನಿಗೆ ಅಪೂರ್ವ ವಾದ ಸಹಾಯ ಮಾಡಿದನಂತೆ. ಆತನ ಹೆಸರಿನಲ್ಲಿ 'ಚಿಕ್ಕನಾಯಕನಹಳ್ಳಿ' ಸ್ಥಾಪಿಸ ಲಾಯಿತೆಂದೂ ರೈಸ್, ಹಾಗೂ ಪುಟ್ಟಣ್ಣನವರು ಅಭಿಪ್ರಾಯಪಡುತ್ತಾರೆ.

ಶಾಸನಗಳು ಚಿಕ್ಕನಾಯಕನಹಳ್ಳಿ ಸ್ಥಾಪನೆಯನ್ನು ಮುದಿಯಪ್ಪನಾಯಕನ ಹೆಸರಿಗೆ ಸೇರಿಸುವುದೂ ಉಂಟು. ತಿಪಟೂರು ತಾಲ್ಲೋಕಿನ 1625ರ ಸಂಸ್ಕೃತ ಶಾಸನ ವೊಂದರ ಸಾರಾಂಶ ಹೀಗಿದೆ. "ಮುದಿಯಪ್ಪನಾಯಕ ಹಟ್ಟಿದಲ್ಲಿ ಮಠ ಕಟ್ಟಿಸಿದ. ಗುರು ಬಸವ ರಾಜದೇವರಿಗೆ ಭೂದಾನ ನೀಡಿದ. ಈ ನಾಯಕ ವಿದ್ಯಾಪಕ್ಷಪಾತಿ. ಸೋಸಲೆ ರೇವಣಾರಾಧ್ಯರಿಂದ ಕನ್ನಡದಲ್ಲಿ ಮಹಿಮ್ನಸ್ತವ ಬರೆಸಿದ. ಈ ರೀತಿ ನಾಯಕರನ್ನು

ನಾಯಕನ ಆಶ್ರಯದಲ್ಲಿದ್ದವ ಈತ ಚಿಕ್ಕನಾಯಕನಹಳ್ಳಿಪುರ ಸ್ಥಾಪಕ" (ಚಿಕ್ಕನಾಯಕ ಪೂರ್ವಕೃತ್ವವ ಮುದಿನಾಯಕಭೂಭುಜಃ) ಸೋಸಲೆರೇವಣಾರಾಧ್ಯ ಅವರ ಕೃತಿಯ ಅಂತ್ಯದಲ್ಲಿ "ಚಿಕ್ಕನಾಯಕಪೂರ್ವಕೃತಃ ಮುದಿನಾಯಕಭೂಭುಜಃ" ಎಂಬ ಮಾತು ಬರುತ್ತದೆ.

ಎಂ.ಎ.ಆರ್. 1918ರಲ್ಲಿ ಆರ್. ನರಸಿಂಹಾಚಾರ್ಯರು ಸಹ ಮುದಿಯಪ್ಪ ನಾಯಕನೇ 'ಚಿಕ್ಕನಾಯಕನಹಳ್ಳಿ ಪುರಸ್ಥಾಪಕ' ಎನ್ನುತ್ತಾರೆ. ಶಾಸನಗಳು ಮುದಿಯಪ್ಪನಾಯಕನಿಗೆ ಚಿಕ್ಕನಾಯಕನಹಳ್ಳಿ ಪುರಸ್ಥಾಪನೆಯ ಬಗ್ಗೆ ಹೇಳಿದರೂ ವಾಸ್ತವವಾಗಿ ಸಾಲಿನಾಯಕನೇ ಚಿಕ್ಕನಾಯಕನಹಳ್ಳಿ ಸ್ಥಾಪಕ ಎನ್ನಬಹುದು. ಶಾಸನಗಳು ಮುದಿಯಪ್ಪನಾಯಕನನ್ನು "ಚಿಕ್ಕನಾಯಕಹಳ್ಳಿ ಪುರದ ಒಡೆಯ "ಎಂದಿರಬಹುದು.

ಒಟ್ಟಾರೆ ಸಾಲಿನಾಯಕ ಚಿಕ್ಕನಾಯಕನಹಳ್ಳಿ ಪಾಳೇಗಾರರಲ್ಲಿ ಅತ್ಯಂತ ಪ್ರಮುಖನಾದವ, ಸಂಸ್ಥಾನವನ್ನು ವಿಸ್ತರಿಸಿದ. ಅನಂತರ ಅನೇಕ ಹೊಸಗ್ರಾಮಗಳನ್ನು ನಿರ್ಮಿಸಿದ. ಒಟ್ಟಿನಲ್ಲಿ ಈತನೊಬ್ಬ "ಕ್ರಿಯಾಶೀಲ ಪಾಳೇಗಾರ"

ಸಾಲಿನಾಯಕನ ನಂತರ ಆತನ ಮಗ ಭೈರವನಾಯಕ ಅಥವಾ ಭೈರಪ್ಪನಾಯಕ[1] (1580-1610) ಅಧಿಕಾರಕ್ಕೆ ಬಂದನು. 1965ರಲ್ಲಿ ಮಾನಸ ಗಂಗೋತ್ರಿ ವಸ್ತು ಪ್ರದರ್ಶನವೊಂದರಲ್ಲಿ ಶ್ರೀನಿವಾಸ್ ಅವರು ತಮ್ಮ ವಂಶಕ್ಕೆ ಸಂಬಂಧಪಟ್ಟ ದಾಖಲೆಯೊಂದನ್ನು ಪ್ರದರ್ಶನಕ್ಕಿಟ್ಟಿದ್ದರು. ಅದರಲ್ಲಿ ಸಾಲಿನಾಯಕನ ಮಗ ಭೈರಪ್ಪ ನಾಯಕನೆಂದೂ ತಿಳಿದು ಬರುತ್ತದೆ.

ಈತ ಸಾಕಷ್ಟು ಪ್ರಸಿದ್ಧನೂರೆ. ತಂದೆಯಂತೆ ವೀರಪುರುಷ, ಧರ್ಮಾಭಿಮಾನಿ. ಪ್ರಾರಂಭದಲ್ಲಿ ತನ್ನ ಪರಾಕ್ರಮದಿಂದ 'ಸೆಟ್ಟಿಗೆರೆ' ಗ್ರಾಮವನ್ನು ವಶಪಡಿಕೊಂಡನು. ಅದರ ಪಕ್ಕದಲ್ಲೇ ಈತ 'ಚಿಕ್ಕನಾಗನಹಳ್ಳಿ' ಎಂಬ ಗ್ರಾಮವನ್ನು ಕಟ್ಟಿಸಿದನು. ಇದರ ಸ್ಥಾಪನೆಗೆ ಎಲ್ಲ ಶುಭಕಾರ್ಯದ ಹಿಂದೆಯೂ ಇರುವಂತೆ ದಂತ ಕತೆಯೊಂದಿದೆ. (ಮೊಲ ಬೇಟೆ ನಾಯಿಯನ್ನು ಅಟ್ಟಿಸಿಕೊಂಡು ಹೋಗುವುದು) ಮೊದಲು ಈ ಪ್ರದೇಶದಲ್ಲಿ (ಚಿಕ್ಕನಾಗನಹಳ್ಳಿ) 'ದೊಡ್ಡನಾಗ' ಮತ್ತು 'ಚಿಕ್ಕನಾಗ' ಎಂಬ ಸಹೋದರರಿದ್ದರು ಮಗ್ಗ ಹಾಕಿಕೊಂಡು ಜೀವನ ನಿರ್ವಹಿಸುತ್ತಿದ್ದರು. ಭೈರವನಾಯಕ ಅವರನ್ನು ಬಿಡಿಸಿ, ಈ ಪ್ರದೇಶ ತೆಗೆದುಕೊಂಡರು. ಅದಕ್ಕೆ ಅವರ ಹೆಸರಿಟ್ಟನು. ಅಲ್ಲಿ ಕೋಟೆ, ಕೊತ್ತಳ, ಅಗ್ನೇರಿ, ಚಂದ್ರಶಾಲೆ, ಚಾವಡಿ ಮೊದಲಾದ್ದೆಲ್ಲವನ್ನು ಕಟ್ಟಿಸಿ ಭೈರವನಾಯಕನು ಚಿಕ್ಕನಾಗನಹಳ್ಳಿಯನ್ನು ತನ್ನ ಸಂಸ್ಥಾನದ ಮುಖ್ಯಪಟ್ಟಣವನ್ನಾಗಿ ಮಾಡಿಕೊಂಡನು. ಅನಂತರ ಕಂದಿಕೆರೆಯಲ್ಲಿ ಕೋಟೆಯನ್ನು ಕಟ್ಟಿಸಿ ಊರನ್ನು ಸ್ಥಾಪನೆ ಮಾಡಿ ಅಲ್ಲಿಂದ ಮುಂದಕ್ಕೆ ಹೊನ್ನವಳ್ಳಿ, ತುರುವೇಕೆರೆ, ನುಗ್ಗೇಹಳ್ಳಿ

1. ಎಂ. ಎಸ್. ಪುಟ್ಟಣ್ಣನವರ. ಪ್ರಕಾರ 1544–1578

ಮೊದಲಾದವುಗಳನ್ನು ಯುದ್ಧಮಾಡಿ ಜೈಸಿಕೊಂಡು ಚಿಕ್ಕನಾಗನಹಳ್ಳಿಯಲ್ಲಿ ರಾಜ್ಯಭಾರ ಮಾಡಿ ಕೊಂಡಿರುತ್ತಿದ್ದನು.

ಈತನ ಕಾಲದಲ್ಲಿ ವರ್ತಕನೊಬ್ಬನಿಗೆ ಆದ ಕನಸಿನ ಫಲವಾಗಿ ಸಿದ್ಧರಾಮೇಶ್ವರ ದೇವಸ್ಥಾನ ಕಟ್ಟಲ್ಪಟ್ಟಿತು. ಇಲ್ಲೂ ಪವಾಡದ ಅಂಶವಿದೆ.

**ಪಾಳೇಗಾರರ ಮತಾಂತರ:**

ಭೈರಪ್ಪನಾಯಕನ ಕಾಲದಲ್ಲಿ ನಡೆದ ಪ್ರಮುಖ ಘಟನೆಯೆಂದರೆ ಪಾಳೇಗಾರರ ಮತಾಂತರ. ಸಾಮಾನ್ಯವಾಗಿ ಬಹುಪಾಲು ಪಾಳೇಗಾರರು ಪ್ರಾರಂಭದಲ್ಲಿ ವೈಷ್ಣವ ಜಾತಿಗೆ ಸೇರಿರುತ್ತಿದ್ದರು. ಅವರುಗಳು ಪ್ರಸಿದ್ಧರಾದ ಮೇಲೆ ಸನ್ಯಾಸಿಗಳು, ಯತಿಗಳು, ಜಂಗಮರು ಪ್ರಭಾವಬೀರಿ ತಮ್ಮ ಮತಕ್ಕೆ ಸೆಳೆದುಕೊಳ್ಳುತ್ತಿದ್ದರು. ಆದರೆ ಬಹುಮಟ್ಟಿಗೆ ಪಾಳೆಯಗಾರರೆಲ್ಲಾ ಸರ್ವಧರ್ಮಸಹಿಷ್ಣುತಾವಾದಿಗಳಾಗಿದ್ದರು. ಈ ಮನೆತನದ ಮೂಲಪುರುಷ ಎರಿಮಾದನಾಯಕ ಲಕ್ಷ್ಮೀನರಸಯ್ಯನೆಂಬ ಬ್ರಾಹ್ಮಣ ಶಿಷ್ಯನಾದ. ಅವನ ಅರ್ಚನೆಯಲ್ಲಿದ್ದ ಶ್ರೀಲಕ್ಷ್ಮೀನಾರಾಯಣಮೂರ್ತಿ ಸಾಲಿಗ್ರಾಮದ ಭಕ್ತನಾದ.

ಮೂರನೆಯದೊರೆ ಭೈರವನಾಯಕ ಆತ್ಮರಾಮೇಶ್ವರನೆಂಬ ಸಿದ್ಧೇಶ್ವರಸ್ವಾಮಿ ಯೆಂಬ ಮಾದಿಜಂಗಮರ ಶಿಷ್ಯನಾದ. ಈತ ಸಿದ್ಧೇಶ್ವರಸ್ವಾಮಿ ಶಿಷ್ಯನಾಗಲು ಆ ಜಂಗಮರು ದೊರೆಗೆ ಪುತ್ರಸಂತಾನ ಕರುಣಿಸಿದ್ದೇ ಕಾರಣವೆಂದೂ ಹೇಳಲಾಗಿದೆ. ಮಗು ಹುಟ್ಟಿದ ತಕ್ಷಣವೇ ಲಿಂಗಧಾರಣೆ ನಡೆಸಲಾಯಿತ್ತೆಂದೂ ಹೇಳಲಾಗಿದೆ. (ಇಲ್ಲೂ ಪವಾಡದ ಕತೆಯೊಂದಿದೆ).

ಭೈರಪ್ಪನಾಯಕನ ಕಾಲವೂ ರಾಜ್ಯವಿಸ್ತರಣೆಗೆ ಸಾಕಷ್ಟು ಸಹಾಯ ಮಾಡಿ ಕೊಟ್ಟಿದೆ. 'ಚಿಕ್ಕನಾಗನಹಳ್ಳಿ' ಎಂಬ ಗ್ರಾಮಸ್ಥಾಪನೆ. ತುರುವೇಕೆರೆ ಮೊದಲಾದ ಪ್ರಾಂತ್ಯಗಳ ಸ್ವಾಧೀನ. ವೀರಶೈವ ಮತಾಂತರ ಈ-ದೊರೆಯ ಆಳ್ವಿಕೆಯಲ್ಲಿ ಜರುಗಿದ ಪ್ರಮುಖ ಘಟನೆಗಳು.

ಭೈರಪ್ಪನಾಯಕನ ನಂತರ ಆತನ ಮಗ ಒಂದನೆಯ ಹಿರೇ'ಮುದಿಯಪ್ಪನಾಯಕ' ಪಟ್ಟಕ್ಕೆ ಬರುತ್ತಾನೆ. ಚಿಕ್ಕನಾಯಕನಹಳ್ಳಿ ಪಾಳೇಗಾರರಲ್ಲಿ ಇಬ್ಬರು ಮುದಿಯಪ್ಪ ನಾಯಕರು ಬರುತ್ತಾರೆ. ಮೊದಲನೆಯವನು ಹಿರೇ ಮುದಿಯಪ್ಪನಾಯಕ.[1] (1610–1650) ಎರಡನೆಯವ 9ನೆಯ ದೊರೆ ಮುದಿಯಪ್ಪನಾಯಕ. (1720–40) ಒಂಬತ್ತನೆಯ ದೊರೆಯ ಬಗ್ಗೆ ಎಲ್ಲರಿಂದಲೂ ವಿಶೇಷವಾದ ಪ್ರಶಂಸೆ ಕೇಳಿಬರುತ್ತದೆ. ವಾಸ್ತವವಾಗಿ ಶಾಸನಾಧಾರಗಳ ಪ್ರಕಾರ ಹಿರೇ ಮುದಿಯಪ್ಪನಾಯಕನೇ ಬಹಳ ಔದಾರ್ಯಪೂರ್ಣ ವ್ಯಕ್ತಿತ್ವವುಳ್ಳ ದೊರೆ. ಪುಟ್ಟಣ್ಣನವರು ಈತನ ಕಾಲವನ್ನು

1 ಎಂ. ಎಸ್. ಪುಟ್ಟಣ್ಣನವರರಾ ಪ್ರಕಾರ1568–1618

ಯಿಂದಲ್ಲದೆ ಶ್ರೀ ಮನ್ಮಹಾನಾಯಕಾಚಾರ್ಯಪೈಗಳದೇಶ[1] ಯಿರಕಟ್ಟಿ[2] ಶಾಸನಾಂಕರಾದ ಪುಳಿಂದ ಕುಲೋದ್ಭವ ಗೋವಲಗೋತ್ರದ ಸಾಂಬನಾಯಕ[3]ಪ್ಪನವರ ಪುತ್ರರಾದ ಭೈರಪ್ಪನಾಯಕರಿಂದಾ...ಶಾಲಿವಾಹನ ಶಕವರ್ಷ ೧೫೧೨ನೆಯ ವಿಕೃತ ಚೈತ್ರ ಶು ೧೫ ಚಂದ್ರಗ್ರಹಣ ಪುಣ್ಯಕಾಲವಿರಲು . ಧಾರಾಗ್ರಪೂತವಾಗಿ ನಮಗೆ ಬಂದ ಚಳವುರದನಗದ್ದೆ.

ಭೈರಪ್ಪನಾಯಕ ಕೈಯಿನವರ ಪುತ್ರರಾದ ತೊಡಿಯಪ್ಪನಾಯಕರು (ಮುದಿಯಪ್ಪನಾಯಕ) ೧೫೪೮ನೆಯ ನಂದನ ಸಂವತ್ಸರದ ಮಾಘ ಶುದ್ಧ ೧೪ರಲ್ಲು ಶಿವರಾತ್ರಿ ಪುಣ್ಯಕಾಲದಲ್ಲು ಧಾರಾಗ್ರಪೂತವಾಗೆ. ನಮಗೆ ಬಂದ ಜಿನದೇವನ ಗದ್ದೆ.

ಮೇಲಿನ ದಾನಪತ್ರದ ಪ್ರಕಾರ ಚಿಕ್ಕನಾಯಕನಹಳ್ಳಿ ಪಾಳೇಗಾರರ ಕಾಲಾನುಕ್ರಮಣಿಕೆ ಬದಲಾಗುತ್ತದೆ.

ಎರಿಮಾದನಾಯಕ 1524 ರಿಂದ 1554
|
ಸಾಂಬನಾಯಕ 1554 ರಿಂದ 1580
|
ಭೈರಪ್ಪನಾಯಕ 1580 ರಿಂದ 1610
|
ತೊಡಿಯಪ್ಪನಾಯಕ (ಮುದಿಯಪ್ಪನಾಯಕ) 1610 ರಿಂದ 1650.

ದೊರಕಿರುವ ಮೂರು ಲಿಖಿತ ಆಧಾರಗಳಿಂದ ನಾಲ್ಕನೆಯ ದೊರೆ ಹಿರೇ ಮುದಿಯಪ್ಪನಾಯಕನೇ ವಿದ್ಯಾಪಕ್ಷಪಾತಿ. ಸಾಹಿತಿ. ಅಭಿಮಾನಿ. ಧರ್ಮಧುರಂಧರ ಎನ್ನಬಹುದು.

ಈತ ಸಾಕಷ್ಟು ಪರಾಕ್ರಮಶಾಲಿಯೂ ಹೌದು. ಹಾಗಲದಹಳ್ಳಿ ಕರಿಯಪ್ಪನಾಯಕನನ್ನು. ಹೊಸಕೆರೆಯ ಭೋಜನಾಯಕನನ್ನು, ಅರಸೀಕಟ್ಟೆಯ ಸಣ್ಣಲಿಂಗನಾಯಕನನ್ನು ಸೋಲಿಸಿ ವಿಶಾಲ ಭೂಪ್ರದೇಶ ಪಡೆದನು. ಅಲ್ಲದೆ 'ಗೊಂಡನಕೆರೆ' ಪ್ರಾಂತ್ಯವನ್ನು ವಶಪಡಿಸಿಕೊಂಡನು. ಮುದಿಯಪ್ಪನಾಯಕನ ಕಾಲಕ್ಕೆ ಈ ಪಾಳೆಯಪಟ್ಟು ಒಂದು ಲಕ್ಷ ಸೀಮೆಯದಾಗಿತ್ತು. ಹಾಗಲದಹಳ್ಳಿಯಲ್ಲಿ ದೊಡ್ಡ ಕೋಟೆಯೊಂದನ್ನು ಕಟ್ಟಿಸಿ. ಅದರ ಮೇಲೆ ತನ್ನ ಬಾವುಟಗಳನ್ನು ಹಾಕಿಸಿದನು. ದೊಡ್ಡ ಫಿರಂಗಿ ಮಾಡಿಸಿ ಅದಕ್ಕೆ 'ಹುಚ್ಚಲಿಂಗರಾಮೇಶ್ವರ' ಎಂದು ಹೆಸರಿಟ್ಟನು. ದೊಡ್ಡ ಕೋಟೆ ಕೊತ್ತಲಗಳ ನಿರ್ಮಾಣ ದೊಡ್ಡ ಫಿರಂಗಿ. ಯುದ್ಧ ಸಾಧನಗಳು. ಉತ್ತಮ ಕೃತಿರಚನೆ. ಸಾಧುಸಂತರಿಗೆ ಆಶ್ರಯ, ವೀರಶೈವ ಮತಪ್ರಸಾರ—ಇವು ಈತನ ಕಾಲದಲ್ಲಿ ಜರುಗಿದ ಪ್ರಮುಖ

---

1 ಪೈಗಳ> ಹಾಗಲ> ಹಾಯಿಗಲ> ಹಾಗಲ್ + ವಾಡಿ ಡಾ.ಬಿ. ಚನ್ನಲಿಂಗಯ್ಯನವರ ಪ್ರಕಾರ

2 ಸಾಲಿನಾಯಕ ಕಟ್ಟಿಸಿದ 'ಎರಕಟ್ಟೆ' ಗ್ರಾಮವಿದು.

3 ಸಾಂಬನಾಯಕ-ಸಾಲಿನಾಯಕನ ಮತ್ತೊಂದು ಹೆಸರಿರಬಹುದೇ?

ಘಟನೆಗಳು. ಈತ ಒಟ್ಟು ನಲವತ್ತು ವರುಷ ಆಳ್ವಿಕೆ ನಡೆಸಿದ. ಈತ 'ಚಿಕ್ಕನಾಗನಹಳ್ಳಿ' ಯನ್ನೇ ಪ್ರಮುಖ ಕೇಂದ್ರವನ್ನಾಗಿ ಮಾಡಿಕೊಂಡ.

ಹಿರೇ ಮುದಿಯಪ್ಪನನಂತರ ಆತನ ಮಗ ಇಮ್ಮಡಿ ಭೈರಪ್ಪನಾಯಕ[1] (1650-1678) ಪಟ್ಟಕ್ಕೆ ಬಂದ. ಈತ ಚಿಕ್ಕನಾಯಕನಹಳ್ಳಿಯನ್ನೇ ಮುಖ್ಯ ಕೇಂದ್ರವನ್ನಾಗಿ ಮಾಡಿಕೊಂಡಿದ್ದನು.

## ರಾಜಧಾನಿಯ ಬದಲಾವಣೆ

2ನೆಯ ಭೈರಪ್ಪನಾಯಕನ ಕಾಲವೂ ಚಿಕ್ಕನಾಯಕನಹಳ್ಳಿ ಪಾಳೇಗಾರರ ಆಳ್ವಿಕೆಯಲ್ಲಿ ಅತ್ಯಂತ ಗೊಂದಲಮಯವಾಯಿತು. ನಿರಂತರ ಧಾಳಿಯಿಂದ ಸಂಸ್ಥಾನ ಅಪಾರ ಸಂಕಷ್ಟಕ್ಕೆ ಈಡಾಯಿತು. ಸಂಸ್ಥಾನದ ಬಹು ಭಾಗ ಶತ್ರುಗಳ ಕೈವಶವಾಯಿತು. ಆದರೂ ಸಮಯೋಚಿತವಾದ ಬುದ್ಧಿಯಿಂದಾಗಿ ಅವರು ತಮ್ಮ ಪ್ರದೇಶವನ್ನು ರಕ್ಷಿಸಿಕೊಂಡರು.

ಕ್ರಿ.ಶ 1646ರಲ್ಲಿ ರಣಧೀರಕಂಠೀರವ ನರಸರಾಜ ಒಡೆಯರ್ ಅವರು ಭೈರಪ್ಪನಾಯಕನಿಂದ ತುರುಗಳನ್ನು ಹಾಗೂ ಕದಬ ಮತ್ತು ದಣ್ಣಾಯಕನಪುರ ಪ್ರಾಂತ್ಯಗಳನ್ನು ವಶಪಡಿಸಿಕೊಂಡರು. ಚಿಕ್ಕನಾಯಕನಹಳ್ಳಿ ಸ್ವಲ್ಪ ಭಾಗ ಮೊದಲಬಾರಿಗೆ ಮೈಸೂರು ಒಡೆಯರಿಗೆ ಸೇರಿತು.

ರಣಧೀರ ಕಂಠೀರವ ನರಸರಾಜ ಒಡೆಯರು (1638-59) ತಮ್ಮ ಆಳ್ವಿಕೆಯ ಕೊನೆಯಲ್ಲಿ ರಣದುಲ್ಲಾಖಾನ್‌ನನ್ನು ಸೋಲಿಸಿದರು. ಆತ ಹಿಂದಿರುಗುತ್ತಿದ್ದಾಗ ಚಿಕ್ಕನಾಯಕನಹಳ್ಳಿ ಪ್ರಾಂತ್ಯದ ಮೇಲೆ ಯುದ್ಧ ಹೂಡಿದನು. ಭೈರಪ್ಪನಾಯಕ ತನ್ನ ಜೀವಿತದ ಕೊನೆಯಲ್ಲಿ ಮತ್ತೊಂದು ಬಾರಿ ರಣದುಲ್ಲಾಖಾನ್ ಧಾಳಿ ಎದುರಿಸಬೇಕಾಯಿತು. ಈ ಸಂದರ್ಭದಲ್ಲೇ ಭೈರಪ್ಪನಾಯಕ ಚಿಕ್ಕನಾಯಕನಹಳ್ಳಿಯಿಂದ ಹಾಗಲವಾಡಿಗೆ ರಾಜಧಾನಿ ಬದಲಾವಣೆ ಮಾಡಿದನು. 1675ರಲ್ಲಿ ಚಿಕ್ಕದೇವರಾಜ ಒಡೆಯರ್ ಅವರು ರಣದುಲ್ಲಾಖಾನ್‌ನನ್ನು ಸೋಲಿಸಿ, ಚಿಕ್ಕನಾಯಕನಹಳ್ಳಿ ಪ್ರಾಂತ್ಯಕ್ಕೆ ಸೇರಿದ್ದ ಕಂದಿಕೆರೆ, ಹೊನ್ನವಳ್ಳಿ, ಕೇತಸಮುದ್ರ ಮೊದಲಾದವುಗಳನ್ನು ವಶಪಡಿಸಿಕೊಂಡರು.[2]

ಆರನೆಯ ದೊರೆ **ಚನ್ನಬಸಪ್ಪನಾಯಕ**[3] (1678-93) ಏಳನೆಯ ದೊರೆ **ರಾಮಪ್ಪನಾಯಕ**[4] (1693-1701) ಮತ್ತು ಎಂಟನೆಯ ದೊರೆ ಇಮ್ಮಡಿ **ಚನ್ನಬಸಪ್ಪನಾಯಕ** (1701-1720)ರ ಆಳ್ವಿಕೆ ಅಂತಹ ಪ್ರಸಿದ್ಧಿ ಪಡೆದಿರಲಿಲ್ಲ. ಆದರೆ ಚನ್ನಬಸಪ್ಪನಾಯಕನ ಆಳ್ವಿಕೆ ಕಾಲದಲ್ಲಿ 'ಹರತಿ' ಕೋಟೆಗಾಗಿ ಚಿತ್ರದುರ್ಗದ ಪಾಳೇಗಾರರೊಡನೆ ಯುದ್ಧ ನಡೆಯಿತು.

---

1 ಎಂ. ಎಸ್. ಪುಟ್ಟಣ್ಣನವರ ಪ್ರಕಾರ ಕ್ರಿ.ಶ. 1618 ರಿಂದ 1646

2. ಕರ್ನಾಟಕ ಇತಿಹಾಸ ದರ್ಶನ. ಡಾ. ಎಂ. ವಿ. ಕೃಷ್ಣರಾವ್. ಜಿ. ಕೇಶವಭಟ್ಟ, ಪುಟ. 534

3. ಎಂ. ಎಸ್ ಪುಟ್ಟಣ್ಣ ಪ್ರಕಾರ : ಚನ್ನಬಸಪ್ಪನಾಯಕ. 1646ರಿಂದ1671

4. ಎಂ. ಎಸ್. ಪುಟ್ಟಣ್ಣ ಪ್ರಕಾರ : ರಾಮಪ್ಪನಾಯಕ. 1671-1701

**ಕೀರ್ತಿಶೇಷ ಇಮ್ಮಡಿ ಮುದಿಯಪ್ಪನಾಯಕ (1720-40)**

ಚಿಕ್ಕನಾಯಕನಹಳ್ಳಿ ಪಾಳೇಗಾರರಲ್ಲಿ ಅತ್ಯಂತ ಪ್ರಸಿದ್ಧ ದೊರೆ. ಈತ ತನ್ನ ಸಾಮ್ರಾಜ್ಯ ವಿಸ್ತರಣೆಯಿಂದ ಪ್ರಸಿದ್ಧನಾಗಲಿಲ್ಲ. ತನ್ನ ಉತ್ತಮ ಮಾನವೀಯ ಗುಣಗಳಿಂದ ಕಿರಿಯಪಾಳೇಗಾರನಾದರೂ ಹಿರಿಯಸ್ಥಾನ ಪಡೆದಿದ್ದಾನೆ. ಈತನಿಗೆ ಪ್ರಾರಂಭದಿಂದಲೂ ಸಾಹಿತ್ಯ, ಕಲೆ, ತತ್ವಶಾಸ್ತ್ರಗಳಲ್ಲಿ ತುಂಬಾ ಆಸಕ್ತಿ. ಭಟ್ಟರು, ಭಾಗವತರು ಮೊದಲಾದವರಿಗೆ ಉಂಬಳಿ ಗ್ರಾಮಗಳನ್ನು ಕೊಟ್ಟಿದ್ದಾನೆ. ಕಾಶೀ ಕ್ಷೇತ್ರದಲ್ಲಿ ಧರ್ಮ ಸತ್ರಗಳನ್ನು ನಿರ್ಮಿಸಿದ್ದಾನೆ. ಈತನಿಗೆ ಮುದ್ದವೀರಸ್ವಾಮಿಗಳು (ಕಾಶಿಯಿಂದ ಬಂದವರು) ಹಾಗೂ ಸೋಮಶೇಖರ ಶಿವಯೋಗಿಗಳು ಎಂಬ ಗುರುಗಳಿದ್ದರು. ಸೋಮಶೇಖರ ಶಿವಯೋಗಿಗಳು ವಚನ ಸಾಹಿತ್ಯದ ಬಗ್ಗೆ ಹತ್ತು ಗ್ರಂಥಗಳನ್ನು ರಚಿಸಿದ್ದಾರೆ. ಮುದಿಯಪ್ಪನಾಯಕ ಸಂಸ್ಕೃತದ 'ಕರ್ಣ ರಸಾಯನ' ಮಹಾಕಾವ್ಯಕ್ಕೆ ವ್ಯಾಖ್ಯಾನವೊಂದನ್ನು ಬರೆಸಿದ್ದಾನೆ. ತನ್ನ ಅಧ್ಯಯನಕ್ಕಾಗಿ ಈತ 'ಉಡುತಡಿಮಹಾದೇವಿಯಕ್ಕನ ರಗಳೆ'ಯ ಪ್ರತಿ ಮಾಡಿಸಿ ಇಟ್ಟುಕೊಂಡಿದ್ದನೆಂದೂ ತಿಳಿದು ಬಂದಿದೆ.

ಸಂಗೀತಗಾರರಿಗೆ ತನ್ನ ರಾಜ್ಯದಲ್ಲೇ ಆಶ್ರಯ ಕೊಟ್ಟಿದ್ದನು. ಸಕಲ ಜನರಿಗೂ ಜಂಗಮರಿಗೂ ಅನುಕೂಲವಾಗಲೆಂದು ಮರದ ತೋಪು, ಹಾಗೂ ಕುಡಿಯುವ ನೀರಿನ ಸೌಲಭ್ಯವನ್ನು ಒದಗಿಸಿಕೊಟ್ಟನು. ಅವನ ಉದಾರತೆ ಜನಗಳಿಗೆ ಮಾತ್ರವಲ್ಲದೆ ಪಶುವರ್ಗಕ್ಕೂ ಸಂದಾಯವಾಗಿತ್ತು. ಅವನು ಅಪರಾಧಿಗಳನ್ನು ನೋಡುತ್ತಿದ್ದ ರೀತಿಯನ್ನು ಎಂ. ಎಸ್. ಪುಟ್ಟಣ್ಣ ಈ ರೀತಿ ಬರೆಯುತ್ತಾರೆ. "ಈ ರಾಜ್ಯದಲ್ಲಿ ತಪ್ಪು ಮಾಡಿ ಬಂದೀಖಾನೆಯಲ್ಲಿ ಹಾಕಲ್ಪಟ್ಟವರಿಗೆ ಎಮ್ಮೆ ಮೊಸರು, ದಪ್ಪಕ್ಕಿ ಅನ್ನ ಊಟಕೊಡುವಂತೆಯೂ. ಅವರ ಹಾಸಿಗೆಗೂ ಹೊದಿಕೆಗೂ ಎರಡು ಕಂಬಳಿ ಕೊಡುವಂತೆಯೂ ಅಂಥಾ ಬಂದೀಖಾನರ ವಾಯಿದೆ ತೀರಿದ ಬಳಿಕ ಆ ಜನರನ್ನು ಮಂತ್ರಿಯವರು ರೂಬುರೂಬು ಕರೆಯಿಸಿ ವಿವೇಕ ಹೇಳಿ ಬಿಡುಗಡೆ ಮಾಡುವಂತೆ ಅಪ್ಪಣೆ ಮಾಡಿದ್ದನು". ಕೆಲವರ್ಷಗಳನಂತರ ಅಧಿಕಾರ ತ್ಯಾಗ ಮಾಡಿ ವಾನಪ್ರಸ್ಥಾಶ್ರಮವನ್ನು ಆಶ್ರಯಿಸಿ, ವಲ್ಕಲಲಾಂಛನಯುಕ್ತನಾಗಿ, ವೈರಾಗ್ಯದಿಂದ ದೇಶಾಟನ ಮಾಡುತ್ತಾ ಲೋಕಕ್ಕೆ ನೀತಿಬೋಧನೆಯನ್ನು ಧರ್ಮಬೋಧನೆಯನ್ನು ಮಾಡುತ್ತಾ ದೇಶ ಯಾತ್ರೆಗೆ ಹೊರಟು ಹೋದನು. ಪುರಾಣಪುರುಷ ಜನಕ ಮಹಾರಾಜನಂತೆ ಮುದಿಯಪ್ಪನಾಯಕನೂ ಕೂಡ ರಾಜರ್ಷಿಯೂ ಹೌದು. ಸತ್ವಗುಣದಲ್ಲಿ ಮುದಿಯಪ್ಪನಾಯಕ ಅನೇಕ ಪರಿಮಿತಿಯೊಡನೆ ಪ್ರಾಚೀನ ದೊರೆಗಳಾದ ಅಶೋಕ, ನೃಪತುಂಗರನ್ನು ಜ್ಞಾಪಕಕ್ಕೆ ತರಿಸುತ್ತಾನೆ. ಸತ್ಯಸಂಧನಾಗಿ, ಮಾನವೀಯ ಗುಣಗಳುಳ್ಳವನಾಗಿ, ವಿವೇಕಶಾಲಿಯಾಗಿ ಆಳಿದ ರಾಜನೆಂದೂ ಮುದಿಯಪ್ಪ ನಾಯಕನನ್ನು ಕರೆಯಬಹುದು,

ಹತ್ತನೆಯದೊರೆ 'ಮುದ್ದವೀರಪ್ಪನಾಯಕ' (1740-53) ತನ್ನ ಜಾಣ್ಮೆ, ಬಲಕ್ಕಾಗಿ ಪ್ರಸಿದ್ಧನಾಗಿದ್ದಾನೆ. ಈತನ ಕಾಲದಲ್ಲಿ ಈ ಸಂಸ್ಥಾನದ ಮೇಲೆ ಮೊಗಲರ ಧಾಳಿಯಾಯಿತು. ಪ್ರಾರಂಭದಲ್ಲೇ ಮುದ್ದವೀರಪ್ಪನಾಯಕ ಕಪ್ಪಕಾಣಿಕೆ ಕೊಟ್ಟು ಸಂಧಾನ ಮಾಡಿಕೊಳ್ಳಲು ಪ್ರಯತ್ನಿಸಿದನು. ಆದರೆ ಮೊಗಲರ ಸಲಾಬತ್ ಜಂಗನು ಮೋಸದಿಂದ, ಹಾಗಲವಾಡಿ ಪ್ರಾಂತ್ಯವನ್ನೇ ವಶಪಡಿಸಿಕೊಂಡನು. ಆದರೆ ಮುದ್ದವೀರಪ್ಪ ತನ್ನ ನಿಷ್ಠಾವಂತ ಅಧಿಕಾರಿಗಳೊಡನೆ ಮತ್ತೊಮ್ಮೆ ಯುದ್ಧಮಾಡಿ, ಆ ಪ್ರತಿನಿಧಿಯನ್ನು ಸೋಲಿಸಿ ಕರಾರುಮಾಡಿಕೊಂಡನು. ಆತನು 'ರಾಜಾಜಂಗ್ ಬಹಾದೂರ್' ಎಂಬ ಬಿರುದುಗಳಿಸಿದನು.

**ಸಂಸ್ಥಾನದ ಅಂತ್ಯ**

ಹನ್ನೊಂದನೆಯ ದೊರೆ ಪ್ರಸನ್ನರಾಮನಾಯಕ (1753ರಿಂದ 1756)ನ ಕಾಲದಲ್ಲಿ ಹೈದರನ ಕಣ್ಣು ಈ ಸಂಸ್ಥಾನದ ಮೇಲೆಬಿತ್ತು. ಆತನ ಮಗ ಇಮ್ಮಡಿಚೆನ್ನಬಸವನಾಯಕನನ್ನು ಶ್ರೀರಂಗಪಟ್ಟಣಕ್ಕೆ ಕರೆಯಿಸಿ, ಐವತ್ತುಸಾವಿರ ರೂಪಾಯಿ ಕೊಡುವಂತೆ ಹೈದರ್ ಒತ್ತಾಯಮಾಡಿದ. ಅತ ಹಣಕೊಡಲು ಅಸಮರ್ಥನಾದಾಗ ಹೈದರ್ ಸೆರೆ ಹಾಕಿದ. ಅಲ್ಲಿಯೇ ಚೆನ್ನಬಸವನಾಯಕ ಮರಣ ಹೊಂದಿದ. 'ತಾರೀಖೆ–ಸಲ್ತನತೆ ಖುದಾದಾದ್' ಎಂಬ ಹೆಸರಿನಲ್ಲಿ ಶ್ರೀರಂಗಪಟ್ಟಣದ ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಚರಿತ್ರೆಯನ್ನೊಳಗೊಂಡ ಉರ್ದುಗ್ರಂಥದಲ್ಲಿ ಅದರ ಲೇಖಕರಾದ ಜನಾಬ್ ಮಹಮೂದ್‌ಖಾನ್ ಬೆಂಗಳೂರೀ ಎಂಬುವವರು ಚಿಕ್ಕನಾಯಕನಹಳ್ಳಿ ಪಾಳೆಗಾರರ ಪತನದ ಬಗೆಗೆ ಕೆಲವು ಅಸತ್ಯವಾದ ವಿಷಯಗಳನ್ನು ಬರೆದಿಟ್ಟಿದ್ದಾರೆ. ಚಿಕ್ಕನಾಯಕನಹಳ್ಳಿ ಪಾಳೇಪಟ್ಟಿನ ಕೊನೆಯದೊರೆಯಾದ ಚೆನ್ನಬಸವನಾಯಕನು ಅಫೀಮುಸೇವನೆ ಮಾಡುವುದರಲ್ಲಿ ಬಹಳ ಪ್ರವೀಣನಾಗಿದ್ದನಂತೆ. ಅಫೀಮಿನ ಗುಂಗಿನಲ್ಲಿ ಆತನು ಹೈದರಲಿಯ ಕೈಸೆರೆಯಾದಾಗ, ತನ್ನ ರಾಣಿಯನ್ನು ಬೇಕಾದರೂ ಹಿಡಿದುಕೊಂಡು ಹೋಗು, ಆದರೆ ನನ್ನ ಅಫೀಮಿನ ಡಬ್ಬವನ್ನು ಕೊಂಡೊಯ್ಯಬೇಡವೆಂದು ಗೋಗರೆದನಂತೆ. ಹೈದರನು ಅವನ ಮೂರ್ಖತನಕ್ಕೆ ನಕ್ಕು ಅವನನ್ನು ಶ್ರೀರಂಗಪಟ್ಟಣಕ್ಕೆ ಕರೆತಂದುದಲ್ಲದೆ ಅವನ ರಾಜ್ಯವನ್ನೆಲ್ಲಾ ಬೊಕ್ಕಸ ಸಮೇತ ವಶಪಡಿಸಿಕೊಂಡನಂತೆ. ಈ ಸುದ್ದಿಯು ಎಷ್ಟು ನಿಜವೋ ಗೊತ್ತಿಲ್ಲ. ಹದಿಮೂರನೆಯದೊರೆ ಮುಮ್ಮಡಿ ಮುದಿಯಪ್ಪನಾಯಕ ಪಟ್ಟಕ್ಕೆ ಬರುವ ಮೊದಲೇ ಹೈದರಾಲಿ, ಈ ಸಂಸ್ಥಾನದ ಬಹುಭಾಗವನ್ನು ತನ್ನ ರಾಜಧಾನಿಗೆ ಸೇರಿಸಿಕೊಂಡಿದ್ದನು. ಈತನ ಜೀವನಕ್ಕೆ ಭೋಗನಂದ್ಯ, ಶಿವಪುರ, ಯಕ್ಕಲಕಟ್ಟೆ ಗ್ರಾಮಗಳನ್ನು ಜಹಗೀರಾಗಿ ಕೊಟ್ಟನು. ಆದರೆ ಮುದಿಯಪ್ಪನಾಯಕ ಜಿಗುಪ್ಸೆ ಹೊಂದಿ ಕಾಶಿಗೆ ಹೋದನೆಂದೂ ಹೇಳಲಾಗುತ್ತದೆ. ಒಟ್ಟಿನಲ್ಲಿ ಇಲ್ಲಿಗೆ ಚಿಕ್ಕನಾಯಕನಹಳ್ಳಿ ಪಾಳೇಗಾರರ ಆಳ್ವಿಕೆ ಮುಕ್ತಾಯಗೊಳ್ಳುತ್ತದೆ, ಇದು ಮೈಸೂರು ಸಂಸ್ಥಾನದ ಒಂದು ಭಾಗವಾಗಿ ಮಾರ್ಪಡುತ್ತದೆ.

## ಕೊನೆಯ ಮಾತು:

ಚಿಕ್ಕನಾಯಕನಹಳ್ಳಿ ಪಾಳೇಗಾರರಲ್ಲಿ ಹದಿಮೂರು ದೊರೆಗಳು ಎರಡೂವರೆ ಶತಮಾನಗಳಷ್ಟು ದೀರ್ಘಕಾಲ ಆಳ್ವಿಕೆ ನಡೆಸಿದರು. ತಮ್ಮ ಉಚ್ಛ್ರಾಯ ಸ್ಥಿತಿಯಲ್ಲಿ ಅವರು ತುಮಕೂರು ಜಿಲ್ಲೆಯ ನಾಲ್ಕು ತಾಲ್ಲೋಕ್‌ಗಳ ಮೇಲೆ ತಮ್ಮ ಅಧಿಕಾರ ಸ್ಥಾಪಿಸಿದ್ದರು. ಬಹಳ ಮಟ್ಟಿಗೆ ಸಣ್ಣ ಸಂಸ್ಥಾನದವರು. ಆದರೆ ಗುಣಾತಿಶಯಗಳಿಂದ ಶ್ರೇಷ್ಠ ದೊರೆಗಳಾಗಿದ್ದಾರೆ. ತಮ್ಮ ಸಂಸ್ಥಾನದ ಪ್ರತಿಯೊಂದು ಗ್ರಾಮದಲ್ಲೂ ಆಂಜನೇಯ, ಈಶ್ವರ, ವೆಂಕಟರಮಣಗುಡಿಗಳಿರುವಂತೆ ನೋಡಿಕೊಂಡರು ಉದಾ: ಚಿ. ನಾ ಹಳ್ಳಿಯಲ್ಲಿ ಆಂಜನೇಯ. ವೆಂಕಟರಮಣ, ಚೌಕ ಮಠ ಇವರಕಾಲದಲ್ಲಿ ನಿರ್ಮಾಣವಾದವು. ೯ ನೆಯ ದೊರೆ ಮುದಿಯಪ್ಪನಾಯ ಕ ಹಟ್ಟಿಗೆಗುಡ್ಡದ ಮಲ್ಲಿಕಾರ್ಜುನ. ಹಾಗೂ ಶೆಟ್ಟಿಕೆರೆಯಲ್ಲಿ ಒಂದುಸಾವಿರ ಲಿಂಕಣದಕಲ್ಲುಮಂಠ ಕಟ್ಟಿಸಿದ. ಇಲ್ಲದೆ ಜನೋಪಯೋಗಕ್ಕಾಗಿ ಅನೇಕ ಕೆರೆ ಕಟ್ಟೆಗಳನ್ನು ನಿರ್ಮಿಸಿದರು. ಮುದಿಯಪ್ಪನಾಯಕನ ರಾಜ್ಯಭಾರ ಕ್ರಮ ಯಾವ ಹಿರಿಯದೊರೆಗೂ ಕಡಿಮೆ ಇಲ್ಲವೆಂದ ಹೇಳಬಹುದು. ಅವರ ಅನೇಕ ದಾನ ಶಾಸನಗಳು ಪಾಳೇಗಾರರ ಔದಾರ್ಯವನ್ನು ಬಿತ್ತರಿಸುತ್ತವೆ. ಇದೇ ವಂಶತನದಲ್ಲಿ ಸಂಸ್ಥಾನದ ಅಧಿಕಾರಕ್ಕಾಗಿ ಯಾವುದೇ ಕಲಹ ನಡೆದಂತೆ ಕಾಣಬರುವುದಿಲ್ಲ. ಮುದಿಯಪ್ಪ ನಾಯಕರಂತಹ ಸತ್-ಪುರುಷರ ಆಳ್ವಿಕೆಯಿಂದಾಗಿ ಈ ವಂಶದ ಕೀರ್ತಿ ಪ್ರಸರಣಕ್ಕೆ ಸಹಾಯಕವಾಗಿದೆ. ಇವರ ಆಳ್ವಿಕೆಯ ಜನಸಾಮಾನ್ಯ ಸಂತೃಪ್ತಿಯ ಮನೋಭಾವ ಕಾಣ ಬರುತಿತ್ತು. ವಿಶೇಷವಾದ ಯುದ್ಧ ಚಟುವಟಿಕೆಗಳಿಲ್ಲದ ಕಾರಣ ಸಂಸ್ಥಾನದ ಆರ್ಥಿಕ ಸ್ಥಿತಿ ಉತ್ತಮವಾಗಿತ್ತೆನ್ನಬಹುದು. ಪಾಳೆಯಗಾರರೆಲ್ಲಾ ಬಹುಮಟ್ಟಿಗೆ ವೀರಶೈವ ಮತಾವಲಂಬಿಗಳಾದರೂ, ಸರ್ವಧರ್ಮಸಹಿಷ್ಣುತಾವಾದಿಗಳಾಗಿದ್ದರು. ಅವರ 'ಸರ್ವ ಧರ್ಮ ಸಮನ್ವಯತತ್ವ' ಪ್ರಶಂಸಾರ್ಹ. ಚಿಕ್ಕನಾಯಕನಹಳ್ಳಿ ಪಾಳೇಗಾರರಿಗೆ ಆಚಾರ್ಯ ಶ್ರೀ ಸಂ ಪ್ರೀ ಮಂಠದವರು ಮಂತ್ರಿಗಳಾಗಿದ್ದರು. ವಿಜಯನಗರದ ದೊರೆಗಳು ವ್ಯಾಪಕವಾದ ಕಾರ್ಯಕ್ರಮಗಳ ಮೂಲಕ ಸ್ತ್ರೀಯರ ಮಾನರಕ್ಷಣೆ, ಸಂಪತ್ತಿನ ರಕ್ಷಣೆ, ವಿದೇಶಿ ಆಕ್ರಮಣದ ತಡೆಗಟ್ಟುವಿಕೆ ಮುಂತಾದವುಗಳನ್ನು ನೋಡಿಕೊಳ್ಳುತ್ತಿದ್ದರು. ಚಿಕ್ಕನಾಯಕನಹಳ್ಳಿ ಪಾಳೇಗಾರರು ತಮ್ಮ ಪರಿಮಿತಿಯಲ್ಲಿ ಆ ಕಾರ್ಯಮಾಡಿದ್ದಾರೆ, ಸ್ಥಳೀಯಜನರ ಮಾನ-ಧನಗಳನ್ನು ಕಾಪಾಡಿದ್ದಾರೆ. ವಿಜಯನಗರದರಸರ ಪರಂಪರೆಯನ್ನು ಮುಂದುವರಿಸಿಕೊಂಡು ಹೋಗಿದ್ದಾರೆ. ಸ್ಥಳೀಯ ನಾಯಕರಾಗಿ, ಅಲ್ಲಿನ ಆರ್ಥಿಕಾಭಿವೃದ್ಧಿಗೆ, ಸಾಂಸ್ಕೃತಿಕ ವಿಕಾಸಕ್ಕೆ ಕಾರಣರಾಗಿದ್ದಾರೆ. ಚಿಕ್ಕನಾಯಕನಹಳ್ಳಿ ಪಾಳೇಗಾರರ ಬಹುಮಟ್ಟಿಗೆ ಜನೋಪಕಾರಿ ನಾಯಕರುಗಳೆಂದು ಕರೆಯಬಹುದು.

## ಚಿಕ್ಕನಾಯಕನಹಳ್ಳಿ ಪಾಳೇಗಾರರ ಕಾಲಾನುಕ್ರಮಣಿಕೆ

| | ಆಳಿದ ಪಾಳೇಗಾರರು. | ಎಂ. ಎಸ್. ಪುಟ್ಟಣ್ಣನವರ ಕಾಲ. | | ಈಗ ಕೊಟ್ಟಿರುವ ಕಾಲ. | |
|---|---|---|---|---|---|
| 1) | ಎರಿಮಾದನಾಯಕ | ಕ್ರಿ. ಶ 1478 ರಿಂದ | 1508 | ಕ್ರಿ. ಶ. 1524 ರಿಂದ | 1554 |
| 2) | ಸಾಲಿನಾಯಕ(ಸಾಂಬನಾಯಕ) | ಕ್ರಿ. ಶ. 1508 | 1544 | ಕ್ರಿ. ಶ. 1554 | 1580 |
| 3) | ಭೈರವನಾಯಕ | ಕ್ರಿ. ಶ. 1544 | 1578 | ಕ್ರಿ. ಶ. 1580 | 1610 |
| 4) | ಹಿರೇಮುದಿಯಪ್ಪನಾಯಕ | ಕ್ರಿ. ಶ. 1578 | 1618 | ಕ್ರಿ. ಶ. 1610 | 1650 |
| 5) | ಇಮ್ಮಡಿ ಭೈರಪ್ಪನಾಯಕ | ಕ್ರಿ. ಶ. 1618 | 1646 | ಕ್ರಿ. ಶ. 1650 | 1678 |
| 6) | ಚನ್ನಬಸವನಾಯಕ | ಕ್ರಿ. ಶ. 1646 | 1671 | ಕ್ರಿ. ಶ. 1678 | 1693 |
| 7) | ರಾಮನಾಯಕ | ಕ್ರಿ. ಶ. 1671 | 1701 | ಕ್ರಿ. ಶ. 1693 | 1701 |
| 8) | ಚನ್ನಬಸವನಾಯಕ | ಕ್ರಿ. ಶ. 1701 | 1720 | ಕ್ರಿ. ಶ. 1701 | 1720 |
| 9) | ಇಮ್ಮಡಿ ಮುದಿಯಪ್ಪನಾಯಕ | ಕ್ರಿ. ಶ. 1720 | 1740 | ಕ್ರಿ. ಶ. 1720 | 1740 |
| 10) | ಮುಪ್ಪ ಹಿರಪ್ಪನಾಯಕ (ರಾಜಾಜಂಗಬಹದೂರ್) | ಕ್ರಿ. ಶ. 1740 | 1753 | ಕ್ರಿ. ಶ. 1740 | 1753 |
| 11) | ಪ್ರಸನ್ನರಾಮನಾಯಕ | ಕ್ರಿ. ಶ. 1753 | 1756 | ಕ್ರಿ. ಶ. 1753 | 1756 |
| 12) | ಇಮ್ಮಡಿ ಚನ್ನಬಸವನಾಯಕ | ಕ್ರಿ. ಶ. 1756 | 1775 | ಕ್ರಿ. ಶ. 1756 | 1775 |
| 13) | ಮುಮ್ಮಡಿ ಮುದಿಯಪ್ಪನಾಯಕ | ಕ್ರಿ. ಶ. 1775 | 1776 | ಕ್ರಿ. ಶ. 1775 | 1776 |

**ಸೂ:** ಆಧಾರಗಳಿಂದಾಗಿ ಮೊದಲ ಏಳು ದೊರೆಗಳ ಕಾಲವನ್ನು ಪರಿಷ್ಕೃತ ಮಾಡಿದ್ದೇನೆ. ಆಧಾರಗಳಿಲ್ಲದಿರುವುದಕ್ಕೆ ಎಂ. ಎಸ್. ಪುಟ್ಟಣ್ಣನವರು ಸೂಚಿಸಿದ ಕಾಲವನ್ನೇ ಕೊಟ್ಟಿದ್ದೇನೆ.

# ಅನುಬಂಧ

E. C. XII. ಎಫಿಗ್ರಾಫಿಯ ಕರ್ನಾಟಿಕ. (P. 237-38) C. K. 38.
ಜೋಡಿತಿರುಮಲಾಪುರ ಲಕ್ಷೀನಾರಾಯಣ ಶಾಸ್ತ್ರಿಗಳಲ್ಲಿದ್ದ ತಾಮ್ರಶಾಸನ.
ವಿಜಯನಗರ ವೆಂಕಟಪತಿರಾಯನಿಂದ ಸ್ವೀಕಾರ

1. ಸಾಲಿ ನಾಯಕ
2. ಸಂಗಪ್ಪ
3. ಚನ್ನಬಸವ
4. ಮುದಿಯಪ್ಪ

1. ನಮಸ್ತುಂಗಶಿರಶ್ಚುಂಬಿ ಚಂದ್ರ ಚಾಮರಚಾರವೇತ್ರೈಲೋ
2. ಕ್ಯನಗರಾರಂಭ ಮೂಲಸ್ತಂಭಾಯ ಶಂಭವೇ ॥ ಪರೇಲ್ಲಿಲಾ
3. ವರಾಹಸ್ಯ ದಂಷ್ಟ್ರಾದಂಡ (:) ಸ್ಸಪಾತುವ : ॥ ಹೇಮಾದ್ರಿ ಕಲಶಾ
4. ಯತ್ರ ಧಾತ್ರೀಛತ್ರಶ್ರಿಯಂದಧೌ ॥ ಸ್ವಸ್ತಿಶ್ರೀ ವಿಜಯಾಭ್ಯುದಯ
5. ಶಾಲಿವಾಹನ ಶಕವರುಷಂಗಳು ೧೬೫೧ನೆಯ ವರ್ತಮಾ
6. ನಕ್ಕೆ ಸಲ್ಲುವ ಸೌಮ್ಯನಾಮಂ ಸಂವತ್ಸರದ ಚೈತ್ರ ಶುದ್ಧ ೧ ಸೌ
7. ಮ್ಯವಾಸರದಲ್ಲಿ ಶ್ರೀಮದ್ರಾ ಜಾಧಿರಾಜ ರಾಜ ಪರಮೇ
8. ಶ್ವರವೀರಪ್ರತಾಪಶ್ರೀ ವೀರ ವೆಂಕಟಪತಿ ಮಹಾರಾ
9. ಯರೈಯ್ಯನವರೂ । ಸ್ಥಿರ ಸಾಂಬ್ರಾಜ್ಯವಾಳುತಿಪ್ಪ ಕಾಲದಲ್ಲಿ
10. ಅಮರನಾಯಕತನಕ್ಕೆ ಪ್ರತಿಪಾಲಿಸಿ ಕೊಟ್ಟಂಥ ಹೊಸ
11. ಆದೇಶವಯರೆಯ ಕಟ್ಟೆಯ ಶಾಸನಾಂಕಗಾದಗೋಉಲ
12. ಗೋತ್ರದ ಸಾಲಿನಾಯಕರ ಸಂಗಪ್ಪನಾಯಕರ ಪೌತ್ರರಾ
13. ದಚೆಂನ ಬಸವಪ್ಪನಾಯಕರ ಪುತ್ರರಾದ । ಮುದಿಯ
14. ಪ್ಪನಾಯಕರೈಯ್ಯನವರೂ । ಭಾರದ್ವಾಜಗೋತ್ರದ ಆ
15. ಪಸ್ತಂಬಸೂತ್ರದಯಜುಶ್ಯಾಖಾಧ್ಯಾಯಿಗಳಾದ । ಯುದ್ಧ
16. ನಪೂಡಿಪೆರಣೆ (ಯ) ತಿಂಮ್ಮೈಯ್ಯನ ಪೌತ್ರನಾದಚೆಂನೈಯ್ಯ
17. ನಪುತ್ರನಾದ ರಾಮೈಯ್ಯಗೆತ್ರಿಪುರುಕ್ಷೋದ್ದೇಶವಾಗಿಚಿರ
18. ಶಿಕೊಟ್ಟದಾನಶಾಸನದಪಟ್ಟೇಕ್ರಮವೆಂತೆಂದರೆ । ನಾ
19. ಉ ಆಳುವಂಥಾ ರಾಜ್ಯದಲಿ ಹಾಗಲವಾಡಿಸ್ಥಳಕ್ಕೆಸಲು
20. ವ ಅಣೆಹಳಿಗ್ರಾಮವನ್ನು ಸಹಿರಣ್ಯೋದಕದಾನಧಾರಪೂ
21. ರ್ವಕವಾಗಿಗೋವಿಲ ಗೋತ್ರದ ಸಾಲಿನಾಯಕರ ಸಂಗಪ್ಪ ನಾಯಕ
22. ರ ಪೌತ್ರರಾದ ಚೆಂನ್ನ ಬಸವಪ್ಪ ನಾಯಕರಪುತ್ರರಾದಮುದಿ
23. ಯಪ್ಪನಾಯಕರೈಯ್ಯನವರೂ । ಭಾರದ್ವಾಜಗೋತ್ರದ ಆಪಸ್ತಂಬ

24. ಸೂತ್ರದಯಜುಶ್ಶಾಖಾಧ್ಯಾಯಿಗಳಾದಯುದ್ದನಪೂಡಿಪೆರಣೆ
25. ಯತಿಮ್ಮೈಯ್ಯನ ಪೌತ್ರನಾದಚೆನ್ನೈಯ್ಯನ ಪುತ್ರನಾದರಾ
26. ಮೈಯ್ಯಗೆತ್ರಿಕರಣಪೂರ್ವಕವಾಗಿಯಗ್ರಾಮವನ್ನು
27. ಕೊಟ್ಟೆವಾಗಿ ಅನುಭವಿಸಿಕೊಂಡುಬಾಹದೆಂದು
28. ಗೋಬಿಲಗೋತ್ರದಸಾಲಿನಾಯಕರಸಂಗಪ್ಪನಾಯ
29. ಕರ ಪೌತ್ರರಾದಚೆಂನಬಸವಪ್ಪನಾಯಕರ ಪು
30. ತ್ರರಾದ ಮುದಿಯಪ್ಪನಾಯಕರೈಯ್ಯನವ
31. ರೂ । ಭಾರದ್ವಾಜಗೋತ್ರದ ಆಪಸ್ತಂಭ ಸೂತ್ರದ
32. ಯಜುಶ್ಶಾಖಾಧ್ಯಾಯಿಗಳಾದ ಯುದ್ದನ ಪೂಡಿ
33. ಪೆರಣೆಯತಿಂಮೈಯ್ಯನ ಪಾತ್ರನಾದ ಚೆನ್ನೈ
34. ಯ್ಯನಪುತ್ರನಾದರಾಮೈಯ್ಯಗೆ ಅಣೆಹಳಿ
35. ಗ್ರಾಮವನ್ನು ಪುತ್ರಪೌತ್ರ ಪಾರಂಪರ್ಯವಾಗಿ
36. ಆಚಂದ್ರಾರ್ಕಸ್ಥಾಯಿಯಾಗಿ ಸುಖದಲಿ ಅನು
37. ಭವಿಸಿಕೊಂಡು ಬರುವದೆಂದು ಆಗ್ರಾಮದಲ್ಲಿ
38. ಇದ್ದ ನಿಧಿನಿಕ್ಷೇಪಕಾಷಾರಂಭ ನೀರಾರಂಭ ಸಂ
39. ಕ ಸಿದ್ಧಾಯ । ಮನೆಮಟ ಸಹವಾಗಿ ಶಿವಾರ್ಪಿತ
40. ಮಾಡಿಕೊಟ್ಟದಾನ ಶಾಸನ ॥ ಗ್ರಂಥ । ಸ್ವದತ್ತಾದ್ವಿಗು
41. ಣಂಪುಣ್ಯಂ । ಪರದತ್ತಾನುಪಾಲನಂ । ಪರದತ್ತಾಪ
42. ಹಾರೇಣ । ಸ್ವದತ್ತಂ ನಿಷ್ಫಲಂಭವೇತು । ಸ್ವದತ್ತಾಪುತ್ರಿಕಾ
43. ಧಾತ್ರೀ ಪಿತೃದತ್ತಾ ಸಹೋದರೀ ॥ ಅನ್ಯದತ್ತಾಃಮಾತಾಚ
44. ದತ್ತಾಂಭೂಮಿಂಪರಿತ್ಯಜೇತು ॥ ಅನಿತ್ರ ಜಾಂದ್ರಾದಸಿಲೋಃ
45. ನಲಶ್ಚದ್ಯೌ ಭೂರ್ಮಿರಾಪ್ರೋಹೃದಯಂ ಯಮಶ್ಚ ।
46. ಅಹಶ್ಚರಾತ್ರಿಶ್ಚಉಭೇಚ ಸಂಧ್ಯೌ । ದರ್ಮಶ್ಚಜಾನಂ
47. ತಿನರಸ್ಯಕೃತ್ಯಂ ॥ ಅಣೆಹಳ್ಳಿತೋಟಿನಲ್ಲಿನೂತನವಾಗಿ ಮಠ
48. ಕಟ್ಟಲಾಗಿ ಲಿಂಗಮುದ್ರೆಕಲ್ಲ ನಡಸಿದ ಬಗ್ಗೆ ಸಿನ್ನ ಹಳಿ ಭೂಮಿಯಲ್ಲಿ
49. ಕೆಲಉಭೂಮಿ ತೆಗದು ಕೊಂಡ ಬದಲಿಗೆ ನಾಗಲಪಾಡಿ ಕೆರೆತುಂಬಿ
50. ಜೀರಿಗೆಮಂಡಗದ್ದೆಗೈಯ್ಯಲ್ಲಿ ಸಿನ್ನ ಹಳ್ಳಿ ಭೂಮಿಯಲ್ಲಿ
51. ಮಂದುಯಿಂಡುಗಗದ್ದೆಗೆ ಸೀರ ಅಪ್ಪಣೆ ಪಾಲಿಸಿಯಿದೇವೆ ॥
52. ಶ್ರೀ ರಾಮೇಶ್ವರ

**ಚಿಕ್ಕನಾಯಕನ ಹಳ್ಳಿ ಹೋಬಳಿ ಜೋಗಿ ಹಳ್ಳಿಯ ದಳವಾಯಿ ಮಠದಲ್ಲಿ**

1. ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರಹೇ ತವೇ ತ್ರೈ

2, ಲೋಕ್ಯನಗರಾಂಭ ಮೂಲಸ್ತಂಭಯ ಶಂಭವೇ ॥
3. ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿವಾಹನ ಶಕ ವರ್ಷ ೧೫೪೪
4. ನೆಯ ದುಂದುಭಿ ಸಂವತ್ಸರದ ಮಾಘ ಬ 14 ರಲ್ಲೂ ಶ್ರೀ–
5, ಮದ್ರಜಾರಾಜ ರಾಜಪರಮೇಶ್ವರ ಶ್ರೀ ವೀರ ಪ್ರತಾಪ
6. ಶ್ರೀ ವೀರ ರಾಮ ದೇವರಾಯ ಗನಗಿರಿ ನಗರದಲ್ಲಿ
7. ಸಿಂಹ್ಮಾಸನ ರೂಢರಾಗಿ ಪೃಥ್ವಿಯನಾಳುತಿರಲು ಘನಗಿ
8. ರಿ ನಗರಕ್ಕೆ ಪಶ್ಚಿಮ ಭಾಗದಲ್ಲಿ ಯಿಪ ಪ್ಯ ಸಳದ ಶೀಮೆ
9, ..........ದಂಥಾ ಚಿಕ್ಕನಾಯಕನ ಹಳ್ಳಿಯೆಂಬ ಪಟ್ಟಣದಲ್ಲಿ ಮುದಿ
10. ಯಪ್ಪ ನಾಯಕೇಂದ್ರನು ರಾಜ್ಯವನಾಳುತ್ತಾಯಿರಲು ಆತಂಗೆ ದಕ್ಷಿ
11. ಣದೋರ್ದಂಡ ವಾದ ವೀರ ಮಹೇಶ್ವರಾರಾಧಕನಾದ ಶೀಲವಂತ
ದಳವಾಯಿ
12. ಪರಮ...ಪ್ಪ.... ಮಠ ಕೆರೆ ತೋಟಯ ಮಾಡಿಸಿ ಶೀಮಂತು
ಸಜನಶು
13. ಧಶಿವಾಚಾರ ಸಂಪನ್ನರಾದ ದೇವಾ ಪ್ರಥ್ನೀ ಮಹಾಮ ಪತ್ರಿನೊಳಗಾ
14. ದ ನಂದೀಶ್ವರ ಸ್ವಾಮಿಗಳಿಗೆ ವಿಭೂತಿ ಮಂತಾಗಿ ಶರಣ ಮಾಡಿದೆ ಉಕ
15. ಧರ್ಮವ ಆಳುಪವೆ ನಡಸ್ಸವ ಪುಣ್ಯಾತ್ಮರಾದಂಥಾ ಅರಸುಗಳಿಗೆ ಧನ
16. ಕನಕ ವಸ್ತ್ರ ವಾಹನ ಪುತ್ರ ಸಂಥಾನ ಮೊದಲಾದ ಸಕಲ ಭೋಗಂ
17. ಗಳನೂ ಮಹಾದೇವ ಕೊಟ್ಟು ರಕ್ಷಿಸುವ ಯಿದ ನಡೆಸದೆ ಆಳುವ
18. ಶಾಸನದ ಕಲ್ಲಕಿತ್ತರೆ ಲಿಪಿಯ ಕೆಡಸಿದರೆ ತೋಟ ಮಠ ಕೆರೆಯ
19. ಅಪಹರಿಸಿ ತೆಕೊಂಡಂಥಾ ಪಾಪಿಗಳು ದೇವಲೋಕ ಮರ್ತ್ಯಲೋಕ
20. ಕೆ ಹೊರಗು ಅವರು ಸೂರ್ಯ ಚಂದ್ರರು ಉಳ ಪರ್ಯಂತದಲೂ
21. ರ ಉರವ ನರಕದಲಿಯೇ ಬಿದ್ದು ಯಿರುವರು ಯಿೂ ಮಠದಲ್ಲಿ ಸಮಸ್ತ ಪ
22. ದಾರ್ಥವನು ಶಿವಾರ್ಪಣವ ಮಾಡುವಂಥಾ ಸತ್ಪುರುಷ ಮಾಹೇಶ್ವರರೇ
ಯಿರು
23, ವರು ಅನಾರ್ಜಿತವ ಮಾಡಿ ಕೆಡಸುವಂಥಾ ಲಂಡಪುಂಡರು ಯಿದ್ದರೆ ವೀರ
24. ಮಹೇಶ್ವರರು ಪ್ರೇರಕರು ಭಕ್ತರು ವಿಚಾರಿಸಿಕೊಂಡು ಅಂಥಾ ಲಂ
25. ಡು ಪುಂಡರ ತೆಗೆದು ಸತ್ಪುರುಷರ ಯಿರುಸುವದು ।
ಸ್ವದತ್ತಾದುಹಿತಾಧಾ
26. ಶ್ರೀ ಪಿತೃದತ್ತಾ ಸಹೋದರೀ । ಅನ್ಯದತ್ತಾಸ್ವಯಂ ಮಾತಾ
ಭೂಮಿಂದ
27. ತ್ತಾಂ ಸಮಾಪ ರೇತ ॥ ಅಕ್ಷಯ ಸಂವತ್ಸದಲು
28. ಶ್ರೀಮಂತು ಮುದಿಯಪ್ಪನಾಯಕರು ದಳವಾ

29. ಯಿ ಶೀಲವಂತ ಪರಮಪ್ಪನ ವಿರಕ್ತ ಮಠಕೆ ಭೋಗಸ
30. ಮುದ್ರವ ಶರಣ ಮಾಡಿದೆ ಉಯಿ ಧರ್ಮವ ಆಳು
31. ಪದೆ ನಡೆಸಿದಂಥ ಪುಣ್ಯಾತ್ಮರಾದ ಅರಸುಗಳಿಗೆ
32. ಧನಧಾನ್ಯ ಕನಕ ವಸ್ತು ವಾಹನ ಪುತ್ರಿ ಸಂತಾನವೂ
33. ಮಲಾದ ಸಕಲ ಭೋಗಂಗಳನು ಮಹಾದೇವ ಕೊಟ್ಟು ರಕ್ಷಿಸು
34. ಮಯಿದ ನಡಸದೆ ಅಳುಪಿ ಅಪಹರಸಿದಂಥಾ
35. ಪಾಪಿಗಳು ದೇವಲೋಕ ಮರ್ತ್ಯ ಲೋಕಕೆ ಹೊರಗೂ ಅವರು ಸೂರ್ಯ
36. ಚಂದ್ರರು ಉಳಪರಿಯಂತ್ರ । ದಲು ನರಕದಲ್ಲಿಯೇ ಬಿ
37. ದ್ದು ಹುಳುವಿನ ಕೊಂಡದಲ್ಲಿ ಯಿದರೂ
38. ದಳವಾಯಿಯ ಶೀಲವಂಥ ವಿರಕ್ತ
39. ಪರಮಪ್ಪನ ಮಠದಲ್ಲಿ ವೀರಮಹೇಶ್ವರರು ಯಿರಾಬೇಕೊ
40. ಯಿದು ಮುದಿಯಪ್ಪನಾಯಕನ ಬೆಯಿರಪ್ಪನಾಯಕನ
41. ವೊಪ್ಪಿತದ ಶಾಸನ

## 102

ಕಬ್ಬನಹಳ್ಳಿ ಹೋಬಳಿ ಪಟ್ಟಣದಲ್ಲಿರುವ ಬಸ್ತಿಗೆ ಸೇರಿದ ಹಿತ್ತಲಲ್ಲಿರುವುದು.

1. ಶ್ರೀಮತು ಗುರುಬಸ
2. ಮರಾಜದೇವರಿಗೆ
3. ಮುದಿಯಪ್ಪನಾಯಕ
4. ಕ ಭಕ್ತಯಿಂ ಪಟಣ
5. ದಲಿ ಮಟಪ ಕೊಟ.
6. ಸ್ತ್ರ ಉದಮಯ
7. ಲಿ ಹೊಲಮಂಬ
8. ಸಮ್ಮಯನಕೆ
9. ಜೀ ಒಂದೆ ಗದ್ದೆ

**ಚಿಕ್ಕನಾಯಕನಹಳ್ಳಿ**

# ರಾಜರ್ಷಿ ಧರ್ಮಪ್ರಭು ಮುದಿಯಪ್ಪನಾಯಕ

**ಎಂ. ಎಸ್. ಬಸವರಾಜಯ್ಯ.**

ಚಿಕ್ಕಸಂಸ್ಥಾನದ ಪ್ರಭುವೆನಿಸಿ ವಿರಾಜಿಸಿದರೂ ಗುಣಾಂಶದಿಂದ ರಾಜರ್ಷಿಯೆನಿಸಿ ಧರ್ಮಪ್ರಭುವೆನಿಸಿ ತನ್ನ ರಾಜ್ಯವನ್ನೂ ಧರ್ಮ ಸಂಸ್ಥಾನವೆನ್ನಿಸಿ ಆ ಅಶೋಕ ಮಹಾರಾಜನ ಪಟ್ಟಕ್ಕೆ ಬಂದ ಮಹಾನುಭಾವನೇ ತುಮಕೂರು ಜಿಲ್ಲೆಯ ಹಾಗಲವಾಡಿ ಸಂಸ್ಥಾನದ ಇಮ್ಮಡಿ ಮುದಿಯಪ್ಪ ಮಹಾರಾಜನು.

ಪ್ರಸ್ತುತ ಈ ಧರ್ಮ ಪ್ರಭುವೆನಿಸಿರುವ ಹಾಗಲವಾಡಿ ಸಂಸ್ಥಾನದ ರಾಜಯೋಗಿ ಇಮ್ಮಡಿ ಮುದಿಯಪ್ಪ ಮಹಾರಾಜನ ಪರಿಚಯವನ್ನು ದಿ॥ಎಂ.ಎಸ್. ಷಟ್ಪಣ್ಣನವರು ಬರೆದಿರುವ 'ಹಾಗಲವಾಡಿ ಪಾಳಯಗಾರರು' ಎಂಬ ಗ್ರಂಥ ಮತ್ತು ಮಹಾಕವಿ ಷಡಕ್ಷರ ದೇವನ ಕವಿಕರ್ಣರಸಾಯನಮಹಾಕಾವ್ಯಕ್ಕೆ ವ್ಯಾಖ್ಯಾನ ರಚಿಸಿರುವ ಪೆಂಗನ ಸುಧಿಯ ಟೀಕೆ ಇವುಗಳಿಂದ ತೌಲನಿಕವಾಗಿ ಕನ್ನಡಿಗರ ಮುಂದೆ ನಿಲ್ಲುವಂತೆ ಚಿತ್ರಿಸುವುದೊಂದೇ ಈ ಲೇಖನದ ಧ್ಯೇಯೋದ್ದೇಶವಾಗಿದೆ.

## ಹಾಗಲವಾಡಿರಾಜ ಮನೆತನದ ಚರಿತ್ರೆಯ ಸಿಂಹಾವಲೋಕನ

ಈ ಧರ್ಮ ಪ್ರಭು ಮುದಿಯ ಮಹೀಪಾಲನ ಚರಿತ್ರೆ ನಿರೂಪಣೆಗೂ ಮೊದಲು ಈ ರಾಜ ಮನೆತನದ ಚರಿತ್ರೆಯನ್ನು ಸಿಂಹಾವಲೋಕನ ಮಾಡುವುದು ಉಚಿತವೆನಿಸುತ್ತದೆ. ಈ ರಾಜಮನೆತನದವರೆಲ್ಲರೂ 'ಹಾಗಲವಾಡಿ ಸಂಸ್ಥಾನದವರೆಂದೇ' ಪ್ರಖ್ಯಾತರಾಗಿರುವರು. ಈ ಪಾಳೆಯಗಾರರಿಗೆ ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿಯೇ ಮೊತ್ತಮೊದಲ ರಾಜಧಾನಿಯೆನಿಸಿದರೂ ಬರಬರುತ್ತಾ ಹಾಗಲವಾಡಿಯೇ ಪ್ರಧಾನರಾಜಧಾನಿಯಾಯಿತು. ಚಿಕ್ಕನಾಯಕನಹಳ್ಳಿ ಮತ್ತು ಎರೆಕಟ್ಟೆ (ಯರಘಟ್ಟ) ಗಳು ಈ ಹಾಗಲವಾಡಿ ಸಂಸ್ಥಾನದ ಉಪರಾಜಧಾನಿಗಳಾದವು: ಪೆಸರಾಂತ ಈ ರಾಜ ವಂಶವಲ್ಲಿ—೧. ಎರಿಮಾದನಾಯಕ ಕ್ರಿ.ಶ. ೧೪೭೮–೧೫೦೮ (೩೦ ವರ್ಷ ಆಳ್ವಿಕೆ). ೨. ಸಾಲ ನಾಯಕ ೧೫೦೮–೧೫೪೪. (೩೬). ೩. ಭೈರವನಾಯಕ ೧೫೪೪–೧೫೭೮ (೩೪). ೪. ಹಿರಿಯ ಮುದಿಯಪ್ಪನಾಯಕ ೧೫೭೮–೧೬೧೮ (೪೦). ೫. ಇಮ್ಮಡಿ ಭೈರಪ್ಪನಾಯಕ ೧೬೧೮–೧೬೪೬ (೨೮). ೬. ಚನ್ನಬಸಪ್ಪನಾಯಕ ೧೬೪೬–೧೬೭೧ (೨೫). ೭. ರಾಮಪ್ಪನಾಯಕ ೧೬೭೧–೧೭೦೧ (೩೦). ೮. ಚನ್ನಬಸಪ್ಪನಾಯಕ

---

ಎ. ಸೂ. ಕ್ರಿ. ಶ. 1625 ತಿಪಟೂರು ತಾಲ್ಲೋಕಿನ ಶಾಸನ (ಎಂ.ಎ ಆರ್. 1918 ಪು 17) ಹಾಗೂ ಇತರ ಆಧಾರಗಳು ಐದನೆಯ ದೊರೆ ಹಿರೇ ಮುದಿಯಪ್ಪನಾಯಕನ ವ್ಯಕ್ತಿತ್ವದ ಬಗ್ಗೆ ಸ್ಪಷ್ಟ ಚಿತ್ರ ನೀಡುವುದರಿಂದ, ಒಂಬತ್ತನೆಯ ದೊರೆ ಎರಡನೆಯ ಮುದಿಯಪ್ಪನಾಯಕನ ವಿಚಾರದಲ್ಲಿ ಪುನರ್ ವಿಮರ್ಶೆ ನಡೆಯಬೇಕಾಗಿದೆ.

೧೭೦೧-೧೭೨೦ (೧೯), ಇಮ್ಮಡಿ ಮದಿಯಪ್ಪನಾಯಕ ೧೭೨೦-೧೭೪೦ (೨೦). ೧೦. ಮದ್ದವೀರಪ್ಪನಾಯಕ ೧೭೪೦-೧೭೫೩ (೧೩). ೧೧. ಪ್ರಸನ್ನರಾಮಪ್ಪ ನಾಯಕ ೧೭೫೩ – ೧೭೫೬(೩). ೧೨. ಮುಮ್ಮಡಿ ಚನ್ನಬಸಪ್ಪನಾಯಕ ೧೭೫೬-೧೭೭೫(೧೯). ೧೩. ಮುಮ್ಮಡಿ ಮದಿಯಪ್ಪನಾಯಕ ೧೭೭೫-೧೭೭೬(೧). ಹೀಗೆ ಒಟ್ಟು ಹದಿಮೂರು ಜನ ರಾಜರು ಕ್ರಿ.ಶ. ೧೪೭೮ ರಿಂದ ೧೭೭೬ರ ವರೆಗೆ ೩೦೦ ವರ್ಷ ಗಳ ಕಾಲ ರಾಜ್ಯಭಾರ ಮಾಡಿರುವರು.

ಇಂತಿಷ್ಟು ಮಹಿತ ಇಮ್ಮಡಿಮದಿಯಮಹೀಪಾಲನ ಮನೆತನದ ಚರಿತ್ರೆಯ ಸಿಂಹಾವಲೋಕನ.

ಆದಿಯಿಂದಲೂ ಈ ರಾಜಮನೆತನವು ವೀರಶೈವಮನೆತನವಾಗಿದ್ದರೂ 'ಪ್ರಭು-ಒಡೆಯ-ಮಹಾರಾಜ' ಈ ಪದಗಳಿಗೆ ಪರ್ಯಾಯವಾಗಿ 'ನಾಯಕ' ಪದಭೂಷಿತರಾದ ಮಾತ್ರಕ್ಕೇ ನಾಯಕ ಜಾತಿ (Cast of Nayakas) ಅಥವಾ ನಾಯಕ ಜಾತಿ ಪ್ರಭೇದವಾದ 'ತಳವಾರ' ರೆಂದು ನಾಮಸಾಮ್ಯದಿಂದ ಭ್ರಮಿಸಿ ಲೂಯಿರೈಸ್ ಮುಂತಾದ ಚರಿತ್ರಕಾರರು ತಪ್ಪು ಮಾಡಿರುವರು. ಮುಂದಿನವರೂ ಇದನ್ನೇ ಅನು ಸರಿಸಿರುವರು. ಅಸ್ತು. ಈ ವಂಶದ ಪಾಳೆಯಗಾರರೆಲ್ಲರಿಗೂ ಅವರವರ ಹೆಸರಿನಾಚೆ 'ಐಮ್ಮನವರು' ಎಂದು ಹೇಳುತ್ತಿದ್ದ ಪರಿಪಾಟಿಯಿತ್ತು.

## ಮದಿಯಪ್ಪ ರಾಜತ್ರಯರಲ್ಲಿ ರಾಜರ್ಷಿ ಧರ್ಮಪ್ರಭು ಮದಿಯ ಮಹೀಪಾಲವಿಮರ್ಶೆ :—

ಈ ಹದಿಮೂರು ಜನ ರಾಜರಲ್ಲಿ ನಾಲ್ಕನೆಯ ದೊರೆಯಾದ ಹಿರಿಯ ಮದಿ ಯಪ್ಪನಾಯಕ (ಕ್ರಿ.ಶ. ೧೬೭೬-೧೬೮೬), ಒಂಬತ್ತನೆಯ ದೊರೆಯಾದ ಇಮ್ಮಡಿ ಮದಿಯಪ್ಪನಾಯಕ (೧೭೨೦-೪೦) ಹದಿಮೂರನೆಯ ದೊರೆಯಾದ ಮುಮ್ಮಡಿ ಮದಿಯಪ್ಪನಾಯಕ (೧೭೭೫-೭೬) ಹೀಗೆ ಒಂದೇ ಹೆಸರಿನ ಮೂವರು ರಾಜ್ಯಭಾರ ಮಾಡಿರುವರು.

ಈ ಮದಿಯಪ್ಪ ರಾಜತ್ರಯರಲ್ಲಿ ಮೊದಲನೆಯವನೂ ಹದಿಮೂರನೆಯವನೂ ಕೇವಲ ಉತ್ತಮ ದೊರೆಗಳೆನಿಸಿದವರು ಅಷ್ಟೆ. ಇವರೀರ್ವರೂ ಸಾಹಿತಿಗಳೇನಲ್ಲ. ಇವರಿಗೆ ಸಾಹಿತ್ಯಾಭಿರುಚಿಯಿತ್ತೆಂಬುದಕ್ಕೂ ಪ್ರಮಾಣಗಳಿಲ್ಲ.

ಇನ್ನು ಒಂಬತ್ತನೆಯವನಾದ ಇಮ್ಮಡಿ ಮದಿಯಪ್ಪ ದೊರೆಯು ಮಾತ್ರ ಸ್ವತಃ ಸಾಹಿತ್ಯಾಭಿರುಚಿಯುಳ್ಳವನಾಗಿ ವಿಬುಧಜನ ಪ್ರೋತ್ಸಾಹಕನಾಗಿ ಸ್ವಯಂ ಸಾಹಿತಿಯೂ ಆಗಿದ್ದನು. ಈತನು ಸ್ವತಃ ಕನ್ನಡದಲ್ಲಿ ಕಾಲಜ್ಞಾನಾದಿ ಬೋಧಕಗಳಾದ ಏಳುನೂರು ತತ್ವಪದ (ಹಾಡು) ಗಳನ್ನು ರಚಿಸಿರುವುದಾಗಿ ತಿಳಿದುಬರುತ್ತದೆ.

ಈ ಇಮ್ಮಡಿ ಮದಿಯ ಮಹೀಪಾಲನು ವಿಬುಧನು ಹಾಗೂ ಮಹಿತನು. ಯೋಗಸಾರ ವಿಚಾರದನು, ಶಿವಾನುಭವ ಸಂಪನ್ನನು ಎಂದು ಕವಿಕರ್ಣರಸಾಯನ ಮಹಾ

ಕಾವ್ಯದ ವ್ಯಾಖ್ಯಾನದ ಪೀಠಿಕೆಯಲ್ಲಿ ವ್ಯಾಖ್ಯಾಕಾರನಾದ ವಂಗನಸುಧಿಯು ವಿಸ್ತಾರವಾಗಿ ಸ್ಪಷ್ಟಪಡಿಸಿರುವನು.

ಮೈಸೂರು ಜಿಲ್ಲೆಯ ಸೋಸಲೆಯ ರೇವಣಾರಾಧ್ಯರಿಂದ ಪುಷ್ಪದಂತ ವಿರಚಿತವಾದ ಪ್ರಾಚೀನತಮವಾದ 'ಶಿವಮಹಿಮ್ನಸ್ತೋತ್ರಕ್ಕೆ' 'ಮಹಿಮ್ನಃಪ್ರದೀಪಿಕಾ' ಎಂಬ ಕನ್ನಡಟೀಕೆಯೊಂದನ್ನು ಈ ದೊರೆಯೇ ಬರೆಯಿಸಿರುವನು. ಈ ಅಂಶವು ಆ ಕನ್ನಡಟೀಕೆಯ ಅಂತ್ಯದಲ್ಲಿ ಸಂಸ್ಕೃತದಲ್ಲಿ ಬರೆದಿರುವ

**ಚಿಕನಾಯಕಪೂಷ್ಕರ್ತುಃ । ಮುದಿನಾಯಕಭೂಭುಜಃ ।**
**ಮಹೇ ಟೀಕಾ ॥ ಕಾರಿತೇಯಂ । ಸೋಮಶೇಖರಯೋಗಿನಾ ॥**

ಎಂಬ ಶ್ಲೋಕದಿಂದ ಚಿಕ್ಕನಾಯಕಪಟ್ಟಣ(ಚಿಕ್ಕನಾಯಕನಹಳ್ಳಿ)ದೊಡೆಯನಾದ ಮುದಿಯಪ್ಪನಾಯಕ ಮಹರಾಜನಿಗಾಗಿ ಆತನ ಗುರುಗಳಾದ ಸೋಮಶೇಖರಯೋಗಿಗಳ ಪ್ರೇರಣೆಯಿಂದ ಈ ಟೀಕೆಯು ತನ್ನಿಂದ ರಚಿಸಲ್ಪಟ್ಟಿರುವುದಾಗಿದೆ ಎಂದು ಸೋಸಲೆಯ ರೇವಣಾರಾಧ್ಯರೇ ಸ್ವತಃ ತಿಳಿಸಿರುವರು. ಈ ಉಲ್ಲೇಖದಿಂದ ಕಾಶಿಯಿಂದ ಕರೆತಂದ 'ಮುದ್ದುವೀರಮಹಾಸ್ವಾಮಿ'ಗಳಲ್ಲದೇ ಈ ದೊರೆಗೆ ಸೋಮಶೇಖರ ಶಿವಯೋಗಿಗಳೂ ಗುರುಗಳಾಗಿದ್ದರೆಂದೂ ವಿದಿತವಾಗುತ್ತವೆ. ಈ ಗುರುಗಳೀರ್ವರೂ ಈ ದೊರೆಯ ಜ್ಞಾನಗುರು-ಶಿಕ್ಷಾಗುರುಗಳು. ಹಾಗಲವಾಡಿಯ ಕೋರೀಮಠ (ಇಂದಿನ ಶೆಡ್ಲೆಹಳ್ಳಿಸಂಸ್ಥಾನ) ಅಧೀಶರೇ ಈ ರಾಜಮನೆತನದ ರಾಜಗುರುಗಳು ಹಾಗೂ ದೀಕ್ಷಾಗುರುಗಳು. ಈ ಸೋಮಶೇಖರ ಶಿವಯೋಗಿಗಳೂ ಸಹ ಮಹಾಶಾಸ್ತ್ರತರು. ಶ್ರೇಷ್ಠ ಶಿವಾನುಭವಿಗಳು ಎನ್ನಲು ಇವರು ಬರೆದಿರುವ ೧. ಅಕ್ಕಗಳ ಸೃಷ್ಟಿಗುರುವಚನಟೀಕೆ ೨, ಅಲ್ಲಮಪ್ರಭುದೇವರ ಸೃಷ್ಟಿಯ ವಚನಟೀಕೆ. ೩. ಜಕ್ಕಣಾರ್ಯರ ಏಕೋತ್ತರಶತಸ್ಥಲ ಟೀಕೆ. ೪. ಚನ್ನಬಸವೇಶ್ವರರ ಕರಣಹಸಿಗೆ ಟೀಕೆ. ೫. ಪಂಚೀಕರಣದ ಪದಟೀಕೆ. ೬. ಮಂತ್ರಗೋಪ್ಯದಟೀಕೆ. ೭. ಸಿದ್ಧಲಿಂಗೇಶ್ವರರ ಷಟ್ಸ್ಥಲಜ್ಞಾನಸಾರಾಮೃತವಚನಟೀಕೆ. ೮. ಬಸವೇಶ್ವರ ಷಟ್ಸ್ಥಲವಚನ ಟೀಕೆ. ೯. ಚನ್ನಬಸವೇಶ್ವರನ ಮಿಶ್ರಾರ್ಪಣ ಟೀಕೆ. ಹಾಗೂ ತಾವು ಬರೆದಿರುವ ತಮ್ಮ ೧೦. 'ಗುರುಮೀಳಿಗೆ'ಗಳೇ ಸಾಕ್ಷಿಗಳಾಗಿರುತ್ತವೆ.

ಅಲ್ಲದೆ ಈ ಇಮ್ಮಡಿ ಮುದಿಯಪ್ಪ ಮಹಾರಾಜನು ತಾಪಸ ಜನಮಾನ್ಯಪುಣ್ಯಚರಿತನೂ ವಿಬುಧಜನವಿಖ್ಯಾತ ಕೀರ್ತಿಭಾಜನನೂ ಇಳಾಪತಿಪೂಜಿತ ಪಾದಪಂಕಜನೂ ಕನ್ನಡನಾಡಿನ ಚಂಪೂಯುಗ ಪ್ರವರ್ತಕ ಪಂಪನಂತೆ ಮತ್ತೆ ತನ್ನ ಕೃತಿಗಳಿಂದ ಕನ್ನಡ ಚಂಪೂಯುಗೋದ್ಧಾರಕನೂ ದನುಗೂರು ರೇಣುಕ ಮಹಾಪೀಠದ ಪಟ್ಟಾಧ್ಯಕ್ಷನೂ ಉಭಯಭಾಷಾಕವಿತಾಪ್ರಗಲ್ಭನೂ ಆದ ಷಡಕ್ಷರಿದೇವ ದೇಶಿಕನು ಪ್ರಸನ್ನ (ತಿಳಿಯದ)ವಾದ ದೇವವಾಣಿಯಲ್ಲಿ ಬರೆದಿರುವ ಭಾವಬಂಧುರ ಪದಗುಂಫಿತವೂ ರಮಣೀಯಾರ್ಥ ಪ್ರತಿಪಾದಕವೂ ವಿಬುಧಜನ ಶ್ಲಾಘನೀಯವೂ ಭಕ್ತಿರಸಪರಿಪೂರಿತವೂ ನಾನಾಮೃತ ರಸಮಧುರಿಮವೂ ಆದ 'ಕವಿಕರ್ಣರಸಾಯನ ಮಹಾಕಾವ್ಯಕ್ಕೆ' [illegible]

ಯಲ್ಲಿ ವೇಗನಸಂಧೀ' ಎಂಬ ವಿದ್ವಾಂಸನಿಂದ 'ಸಂಘೋದಯಾ' ಎಂಬ ಸಂಸ್ಕೃತವ್ಯಾಖ್ಯಾನವನ್ನು ಸಹ ಬರೆಸಿರುವನು. ಅಲ್ಲದೆ ಇದೇ ವಿಬುಧನಿಂದ 'ಶಿವಾನಂದಲಹರಿಗೂ' ಸಹ ಸಂಸ್ಕೃತವ್ಯಾಖ್ಯಾನವನ್ನು ಮಾಡಿಸಿರುವನು.

ಹೀಗೆ ಮುದಿಯಪ್ಪರಾಜತ್ರಯರಲ್ಲಿ ಈ ಇಮ್ಮಡಿ ಮುದಿಯ ಮಹೀಪಾಲನು ಮಾತ್ರ ವಿಬುಧಜನ ಪ್ರೋತ್ಸಾಹಕನೂ ಸ್ವಯಂಸಾಹಿತಿಯೂ ಮಹಿತನೂ ಆಗಿರುವನು,

## ತುಲನಾತ್ಮಕ ಪರಿಚಯ

ಡಾ. ಎಂ. ಎಸ್. ಪುಟ್ಟಣ್ಣನವರ 'ಹಾಗಲವಾಡಿಪಾಳೆಯಗಾರರು' ಎಂಬ ಗ್ರಂಥದಿಂದ ಇಮ್ಮಡಿ ಮುದಿಯಪ್ಪನಾಯಕ ಮಹಾರಾಜನ ಪರಿಚಯವು ಹೀಗೆ ಸಿದ್ಧವಾಗುತ್ತದೆ.

"ಹಾಗಲವಾಡಿ ಸಂಸ್ಥಾನವು ಧರ್ಮಸಂಸ್ಥಾನವೆಂದು ಕಾಶೀ – ರಾಮೇಶ್ವರದವರೆಗೂ ಪ್ರಖ್ಯಾತಿಯಾಗಿತ್ತು[1]."

"ಈ ದೊರೆಯು ಒಳ್ಳೇ ವಿದ್ಯಾವಂತನಾಗಿ ಪಾಪಭೀತನಾಗಿದ್ದನು. ಮತ್ತು ಎಲ್ಲರೂ ತಮ್ಮ ತಮ್ಮ ಧರ್ಮವನ್ನನುಸರಿಸಿ ನೀತಿಮಾರ್ಗದಲ್ಲಿ ನಡೆಯಬೇಕೆಂಬುವುದೇ ಈ ದೊರೆಯ ಮುಖ್ಯೋದ್ದೇಶವಾಗಿತ್ತು. ಈ ಪಾಳೆಯಗಾರರ ವಂಶಾವಳಿ ಚರಿತ್ರೆಯಲ್ಲಿ ಈ ಮುದಿಯಪ್ಪನಾಯಕನನ್ನು ಕುರಿತು ಬರೆದಿರುವ ಅಂಶವನ್ನು ಪದಪದಶಃ ಮೊದಲು ಬರೆಯುತ್ತೇನೆ. ಶಾ. ಶ, ೧೬೪೨ನೇ ಕೀಲಕನಾಮಸಂ ॥ ನಿಜ ವೈಶಾಖ ಶುದ್ಧ ೧೦ ದಿವಸ (ಕ್ರಿ.ಶ.೧೭೨೦) ಮುದಿಯಪ್ಪನಾಯಕನಿಗೆ ಪಟ್ಟಾಭಿಷೇಕವಾಯಿತು. ಇವರಿಗೆ ಮುದ್ದವೀರನಾಯಕರು, ಪ್ರಸನ್ನರಾಮಪ್ಪನಾಯಕರು ಎಂಬುದಾಗಿ ಈರ್ವರು ಪುತ್ರರಾದರು. ಈ ಮುದಿಯಪ್ಪನಾಯಕ ಭೂಪಾಲಕರು ಕೆಲವು ಜನರಿಗೆ ಎಂದರೆ ಭಟ್ಟರು, ಭಾಗವತರು, ಅಮ್ಮಾಲೆಜೆಂಡಿನವರು ಮೊದಲಾದ ವಿದ್ವಾಂಸರುಗಳಿಗೆ (ಆಯಾ ವಿದ್ಯೆಯಲ್ಲಿ ನಿಪುಣರಾದವರಿಗೆ) ಉಂಬಳಿ ಗ್ರಾಮಗಳನ್ನು ಕೊಟ್ಟು ಸಕಲಧರ್ಮದಲ್ಲಿಯೂ ರಾಜ್ಯಪರಿಪಾಲನೆಯನ್ನು ಮಾಡುತ್ತಾ, ಕಾಶೀ–ಕ್ಷೇತ್ರದಲ್ಲಿ ಧರ್ಮಸತ್ರಗಳನ್ನಿಡಿಸಿ, ಸಕಲ ಶಾಸ್ತ್ರನಿಪುಣರಾಗಿ ವೀರಶೈವಾಚಾರದಲ್ಲಿ ಬಹು ನಿಷ್ಠರಾಗಿ. ಇಹಲೋಕ ಶಾಶ್ವತವಲ್ಲವೆಂದು ನಿಷ್ಕರ್ಷೆಮಾಡಿಕೊಂಡು ಇದ್ದರು. ಪರಲೋಕಸಾಧನೆಗೋಸ್ಕರ ಮಹಾಜ್ಞಾನಿಗಳಾದ ಮುದ್ದುವೀರಸ್ವಾಮಿಗಳೆಂಬ ಜಂಗಮ ಶ್ರೇಷ್ಠರನ್ನು ಕಾಶೀಕ್ಷೇತ್ರದಿಂದ ಕರೆಯಿಸಿ ಇವರಿಂದ ತತ್ತ್ವಜ್ಞಾನೋಪದೇಶವನ್ನು ತೆಗೆದುಕೊಂಡು ಸಕಲ ಸಾಮ್ರಾಜ್ಯಯುಕ್ತವಾದ ರಾಜ್ಯಭಾರವನ್ನು ತ್ಯಜಿಸಿ ಜೀವನ್ಮುಕ್ತಿ. ಮುಂದೆ ನಡೆಯುವ ಕಾಲಸೂಚನೆ ಇವೇ ಮೊದಲಾದ ಏಳುನೂರು ತತ್ತ್ವ ಗ್ರಂಥಗಳನ್ನು (ಹಾಡುಗಳನ್ನು) ಸ್ವತಃ ಮಾಡಿ, ತಮ್ಮ ದೇಶದೊಳಗೆ ಎಲ್ಲಾ ಜನರೂ ಜೀವನ್ಮುಕ್ತರಾಗಬೇಕೆಂದು ಯೋಚಿಸಿ, ಅನೇಕ ಜ್ಞಾನಿ

---

1. ಪುಟ ೨೬.

ಗಳನ್ನಿಟ್ಟು ಅವರು ತಮ್ಮ ದೇಶದೊಳಗೆಲ್ಲಾ ಸಂಚಾರಮಾಡುತ್ತಾ ಸರ್ವಜನರಿಗೂ ತತ್ತ್ವ ವಿಚಾರವನ್ನು ಉಪದೇಶಿಸುತ್ತಾ ಇರುವಂತೆ ನೇಮಕವಾಡಿದರು. ಮತ್ತು ಅನೇಕಸಂಗೀತ ಗಾರರನ್ನು ಇಟ್ಟು ತಮ್ಮ ದೇಶದೊಳಗೆಲ್ಲಾ ಸಂಗೀತವಿದ್ಯೆಯನ್ನು ಬಹಳವಾಗಿ ಹೆಚ್ಚಿಸಿ. ತಮ್ಮ ರಾಜ್ಯವನ್ನೆಲ್ಲಾ ಉತ್ತಮಸ್ಥಿತಿಗೆ ತಂದು, ಸರ್ವಜೀವದಯಾಪರರಾಗಿಯೂ ಸರ್ವ ಪ್ರಾಣಿಗಳೂ ಒಂದೇ ಎಂಬ ಭಾವದಿಂದಲೂ ಅಬಲರನ್ನು ಭಾಗ್ಯವಂತರನ್ನಾಗಿ ಮಾಡುತ್ತಾ, ಜಂಗಮರಿಗೂ ಬ್ರಾಹ್ಮಣರಿಗೂ ಬಹು ಉದಾರವಾದ ಆಶ್ರಯವನ್ನು ಕೊಟ್ಟು, ಬಿಸಿಲಿನ ತಾಪದಿಂದ ಜನಗಳು ನೋಯದಂತೆ ತಮ್ಮ ದೇಶದೊಳಗೆಲ್ಲಾ ಅನೇಕ ತೋಪುಗಳನ್ನೂ, ನೀರಿನ ಆಶ್ರಯವೇ ಮೊದಲಾದ ಅನೇಕ ಸೌಕರ್ಯಗಳನ್ನೂ ಕಲ್ಪಿಸಿ ದರು. ಈ ರಾಜ್ಯದಲ್ಲಿ ತಪ್ಪುಮಾಡಿ ಬಂದೀಖಾನೆಯಲ್ಲಿ ಹಾಕಲ್ಪಟ್ಟವರಿಗೆ ಎಷ್ಟು ಮೊಸರು ದಪ್ಪಕ್ಕಿಅನ್ನ ಊಟಕ್ಕೆ ಕೊಡುವಂತೆಯೂ, ಅವರ ಹಾಸಿಗೆಗೂ, ಹೊದಿಕೆಗೂ ಎರಡು ಕಂಬಳಿಯನ್ನು ಕೊಡುವಂತೆಯೂ, ಅಂಥಾ ಬಂದೀವಾಸರ ವಾಯಿದೇ ತೀರಿದ ಬಳಿಕ ಆ ಜನರನ್ನು ಮಂತ್ರಿಯವರು, ರೂಬು ರೂಬು ಕರೆಯಿಸಿ ಅವರಿಗೆ ವಿವೇಕವನ್ನು ಹೇಳಿ ಬಿಡುಗಡೆ ಮಾಡುವಂತೆಯೂ ಅಪ್ಪಣೆ ಮಾಡಿ, ಜನಗಳಿಗೆ ಯಾವ ಬಾಧೆಯೂ ಇಲ್ಲದಂತೆ ರಾಜ್ಯಪರಿಪಾಲನೆ ಮಾಡುತ್ತಿದ್ದರು.[1]''

''ಈ ಮುದಿಯಪ್ಪ ನಾಯಕನು ವಿಶೇಷವಾದ ವಿತರಣೆಯಿಂದ ರಾಜ್ಯಭಾರ ಮಾಡುತ್ತಾ ಕೆಲವು ಸಿದ್ಧಪುರುಷರ ಸಹವಾಸದಲ್ಲಿರುತಾ ತನ್ನ ತಪಸ್ಸು ಸಿದ್ಧಿಯಾದ ಕೂಡಲೆ ತನ್ನ ಸಕಲ ಸಾಮ್ರಾಜ್ಯವನ್ನೂ ತ್ಯಜಿಸಿ, ಸನ್ಯಾಸವನ್ನು ವಹಿಸಿ, ವಲ್ಕಲಲಾಂಛನ ಯುಕ್ತನಾಗಿ, ವೈರಾಗ್ಯದಿಂದ ದೇಶಾಟನ ಮಾಡುತ್ತಾ ಲೋಕಕ್ಕೆ ನೀತಿಬೋಧೆಯನ್ನೂ ಧರ್ಮಬೋಧೆಯನ್ನೂ ಮಾಡುತ್ತಾ ದೇಶಯಾತ್ರೆಗೆ ಹೊರಟುಹೋದನು. ಈತನ ಆಳಿಕೆಯು ಕ್ರಿ.ಶ. ೧೭೪೦ಕ್ಕೆ ತೀರಿತು.[2]''

''ಮುದಿಯಪ್ಪನಾಯಕನು ದೊರೆತನ ಮಾಡುತ್ತಿದ್ದಾಗ ಆತನಿಗೆ ವೈರಾಗ್ಯ ಹುಟ್ಟಿ ತನ್ನ ಪದವಿಯನ್ನು ತ್ಯಜಿಸಿ ತನ್ನ ಜ್ಯೇಷ್ಠಪುತ್ರನಾದ ಮುದ್ದುವೀರಪ್ಪ ನಾಯಕ ನಿಗೆ ಕ್ರಿ.ಶ. ೧೭೪೦ನೇ ವಿಭವ ಸಂ। ಕಾರ್ತೀಕ ಶು. ೫ ದಿವಸ ಪಟ್ಟಾಭಿಷೇಕಮಾಡಿ ರಾಜಕುಮಾರನಾದ ಚಿಕ್ಕದೊರೆಗೂ ಮಂತ್ರಿ ಮತ್ತು ದಳವಾಯಿ ಮುಂತಾದ ದೊಡ್ಡ ಅಧಿಕಾರಿಗಳಿಗೂ 'ಸುಧರ್ಮದೊಡನೆ ರಾಜ್ಯಭಾರ ಮಾಡಬೇಕೆಂದು' ಅಪ್ಪಣೆ ಮಾಡಿ ತಪಸ್ಸಿಗೆ ಹೊರಟುಹೋದನು.[3]''

''ಒಂಬತ್ತನೆಯ ತಲೆಯವನಾದ ಇಮ್ಮಡಿ ಮುದಿಯಪ್ಪನಾಯಕನು ತುಂಬಾ ಸದ್ಗುಣಶೀಲನಾಗಿ ರಾಜಋಷಿ ಎಂದು ಹೊಗಳಿಸಿಕೊಳ್ಳುತ್ತಾ ಸತ್ಯದಿಂದ ಪ್ರಭುತ್ವಮಾಡಿ ಸನ್ಯಾಸವನ್ನು ತೆಗೆದುಕೊಂಡು ತಪಸ್ಸಿಗಾಗಿ ಹೊರಟು ಹೋದನು. ಪ್ರಭುಗಳು

---

1 ಪುಟ ೧೮, ೧೯. 2 ಪುಟ ೨೦ 3 ಪುಟ ೨೩.

ಎನ್ನಿಸಿಕೊಂಡವರ ಗುಂಪಿನಲ್ಲಿ ಇಂಥಾ ಪುಣ್ಯಾತ್ಮರು ದೊರೆಯುವುದು ಕೋಟಿಗೆ ಒಂದು ಇದೆಯೋ ಇಲ್ಲವೋ ಹೇಳಲಾಗದು.[1]"

"ಈ ಇಮ್ಮಡಿ ಮುದಿಯಪ್ಪನಾಯಕನ ಕೀರ್ತಿಯು ಕೊಂಡಾಡುವುದಕ್ಕೆ ಅರ್ಹವಾದ್ದು. ಈ ದೊರೆಯು ಕೇವಲ ಪಾಪಭೀರುವಾಗಿ ಪ್ರಾಣಿಮಾತ್ರಕ್ಕೆ ಹಿಂಸೆಯನ್ನು ಮಾಡುವುದು ದೊಡ್ಡ ಪಾತಕವೆಂದು ಜ್ಞಾನಿಗಳ ಸಹವಾಸವನ್ನು ಹಿಡಿದು ಐಹಿಕಸುಖವನ್ನೆಲ್ಲಾ ತ್ಯಜಿಸಿ ತಪಸ್ಸಿಗಾಗಿ ಕಾಡಿಗೆ ಹೋದನು.[2]"

ಹೊರಗೆ ಒಳ್ಳೆಯವರಂತೆ ನಟಿಸುತ್ತಾ ಒಳಗೆ ದುಷ್ಟರಾಗಿ ನೀಚಗುಣಾಶ್ರಿತರಾಗಿ ಪ್ರಜಾದ್ರವ್ಯಾಪಹಾರಮಾಡುತ್ತಾ ಚಮತ್ಕಾರದಿಂದ ರಾಜ್ಯಭಾರ ಮಾಡುವ ರಾಜರುಗಳೇ ಅನಂತ.

"ಆದರೆ ಈ ಮುದಿಯಪ್ಪನಾಯಕನಲ್ಲಿ ಇಂಥಾ ರಾಜ್ಯಭಾರ ಚಮತ್ಕೃತಿಗಳಾಗಲಿ ದೌಷ್ಟ್ಯಗಳಾಗಲಿ ಯಾವುದೂ ಇರಲಿಲ್ಲ. ಕಾರ್ಯತಃ ಯೋಗಸಿದ್ಧಿ ಮಾಡಿಕೊಂಡು ಪರಲೋಕ ಸಾಧನೆಗೆ ಬೇಕಾದ ಸಲಕರಣೆಗಳನ್ನು ಸಿದ್ಧಪಡಿಸಿಕೊಂಡನು. ಇಂಥಾ ಸತ್ಪಾತ್ರಗಳಿಗೆ ಮಹಾ ಪದವಿ ಬರುವುದೇ ಕಷ್ಟ.

'ನಳ, ಮಾಂಧಾತ, ಶ್ರೀರಾಮ, ಯುಧಿಷ್ಠಿರ ಮುಂತಾದ ಧರ್ಮಯೋಗಿಗಳ ಜೊತೆಗೆ ಈ ಮುದಿಯಪ್ಪನಾಯಕನೂ ಸೇರತಕ್ಕವನಾಗಿದ್ದಾನೆ. ಈ ಬಗೆಯ ರಾಜಯೋಗಿಗಳು ದೊರೆಯುವುದು ದುಸ್ತರ.[3]"

**"ಮೊದಲು ಪೂರ್ವಿಕರು ಮಾಡಿದ್ದ ಧರ್ಮಸಂಸ್ಥೆಯನ್ನು ನಾಶಮಾಡಿದರೆ, ಅಂಥಾ ಅಧರ್ಮಕ್ಕೆ ಬೇರೆ ಯಾವ ಹೆಸರಿದೆಯೋ, ಇಂಥಾ ಧರ್ಮಕುಠಾರಿಗಳು ಯಾವ ಗತಿಯನ್ನು ಹೊಂದಬೇಕೋ ಗೊತ್ತಿಲ್ಲ. ಈ ರೀತಿಯಾದ ಚರ್ಯೆಗಳು ಸ್ವಚ್ಛಂದವಾಗಿ ಆಚರಣೆಗೆ ಬಂದಿರುವ ಕಾಲದಲ್ಲಿ ಜೀವಿಸಿಕೊಂಡಿರುವ ನಮ್ಮ ಪಾಪವು ಈ ಮುದಿಯಪ್ಪನಾಯಕನೇ ಮೊದಲಾದ ಮಹಾಪುರುಷರ ನಾಮೋಚ್ಚಾರಣೆಯಿಂದ ನಶಿಸಬೇಕು.[4]"**

ಇಷ್ಟು ಈ ಧರ್ಮಪ್ರಭುವಿನ ಬಗೆಗೆ 'ಹಾಗಲವಾಡಿ ಪಾಳೆಯಗಾರರು' ಎಂಬ ಗ್ರಂಥದಿಂದ ತಿಳಿದುಬರುವ ವಿಚಾರಗಳು.

ಇನ್ನು **'ಕವಿಕರ್ಣರಸಾಯನದ ವ್ಯಾಖ್ಯಾನದ ಪೀಠಿಕೆಯಿಂದ'** ಈ ಮಹಿಮನ ಬಗೆಗೆ ತಿಳಿದುಬರುವ ವಿಚಾರಗಳನ್ನು ನೋಡೋಣ :—

ಇವರಿಗೆ ಸುಲಭವಾದಂತಹ ಮಹಾಶಿವಪೂಜಾಫಲದಿಂದಾಗಿ ಪಡೆದ ಮಾನ್ಯತೆ ಮಹಿಮೆ ಕೀರ್ತಿಗಳನ್ನುಳ್ಳವನಾಗಿ ಶ್ರೀ ನಾಲಿರಾಜಕುಲವಾರಿಧಿ ಪೂರ್ಣಚಂದ್ರಮನಾಗಿ ವಿರಾಜಿಸುತ್ತಿದ್ದನು ಚನ್ನಬಸವ ಕ್ಷಿತಿಪಾಲಮೌಳಿಯು. (ವ್ಯಾಖ್ಯಾನ ಪೀಠಿಕಾಪದ್ಯ–೩).

---

1 ಉಪೋದ್ಘಾತ ಪುಟ xii 2 ಪುಟ ೨೮. 3 ಪುಟ ೨೧, ೨೨. 4 ಪುಟ ೨೨.

ಈ ಚನ್ನಬಸವಕ್ಷಿತಿಪಾಲವಮೌಲಿಯು ಮಹಾಪ್ರತಾಪಶಾಲಿ (ಪ. ೪.) ಈತನ ಪುತ್ರನೇ ಮುದಿಯಪ್ಪಮಹಾರಾಜನು. ಈ ಮುದಿಯ ಮಹೀಪಾಲನು ಭೂಲೋಕ ದಲ್ಲವತರಿಸಿದ ದೇವೇಂದ್ರನೆಂಬಂತೆ ಮಹಾಪ್ರತಾಪಶಾಲಿಯಾಗಿ ಯೋಗಕಳಾವಿಶಾರದ ನಾಗಿ ಸದಾ ಶಿವಾನುಭವ (ಶಿವಯೋಗಾನುಸಂಧಾನ) ಸಂಪನ್ನನಾಗಿ ಮಹಾಜ್ಞಾನಿಯೆನಿಸಿ ಎರೆಕಟ್ಟೆ (ಯರೆಘಟ್ಟ)ಯಲ್ಲಿ ರಾಜ್ಯಭಾರ ಮಾಡುತ್ತಾ ವಿಖ್ಯಾತನಾಗಿ ವಿರಾಜಿಸುತ್ತಿದ್ದನು (ಪ. ೫). ಲೋಕದಲ್ಲಿ ಕವಿದ ಗಾಢಾಂಧಕಾರವನ್ನು ಹೋಗಲಾಡಿಸುವ ಸಾಮರ್ಥ್ಯವುಳ್ಳ ಸೂರ್ಯನಿಗೆ ಮಿಂಚುಹುಳುಗಳು ಎಂದಿಗಾದರೂ ಸಾಟಿಯಾಗ ಬಲ್ಲುವೇ ? ಅಂತೆಯೇ ಲೋಕದಲ್ಲಿ ಪ್ರಭುಗಳೆಂದು ಹೇಳಿಕೊಂಡು ಮೆರೆವ ಅನೇಕ ಜನ ರಾಜರುಗಳಿದ್ದರೂ ಆ ರಾಜರು ಈ ಮುದಿಯಪ್ಪಮಹಾರಾಜನಿಗೆ ಸಮನಾಗ ಬಲ್ಲರೇ ? (ಪ. ೬). ದಾನಾದಿ ಸದ್ಗುಣಸಂಪತ್ತಿನಿಂದ ಮಂಡಿತನಾಗಿ ದುಷ್ಟಶಿಕ್ಷಕನಾಗಿ ಆಳ್ವಿಕೆ ಮಾಡುತ್ತಿದ್ದನಾದ ಕಾರಣ ಈ ಮುದಿಯಮಹೀಪಾಲನ ಕೀರ್ತಿಯು ದಿಗಂತ ವ್ಯಾಪಿಯಾಗಿದ್ದಿತು (ಪ. ೭). ಪರಸ್ಪರ ವಿರುದ್ಧಗಳಾದ ವೀರಗುಣ ಹಾಗೂ ಶಾಂತಿ ಗುಣಗಳನ್ನು ಸಮನ್ವಯ ಮಾಡಿಕೊಂಡು ಈ ಮುದಿಯಮಹೀಪಾಲನು ಸ್ವಭುಜಬಲ ಪರಾಕ್ರಮವೆಂಬ ಪ್ರಖರಸೂರ್ಯನ ತೇಜಸ್ಸಿನಿಂದಲೂ ಶ್ರೀ ಮದ್ವೀರಮಹಾಗುರುವಿನ ಅನುಗ್ರಹದಿಂದುಂಟಾದ ತನ್ನ ಆತ್ಮತೇಜಸ್ಸಿನಿಂದಲೂ ಬಾಹ್ಯಾಭ್ಯಂತರ ಶತ್ರುಗಳೆನಿಸಿದ ದುರ್ಜಯ ವೈರಿವರ್ಗವನ್ನೂ, ಅಜೇಯ ಕಾಮಾದ್ಯರಿಷಡ್ವರ್ಗವನ್ನೂ ಜಯಿಸಿ ನಿರಾತಂಕವಾಗಿ ರಾಜ್ಯಭಾರಮಾಡುತ್ತಿದ್ದನು. (ಪ. ೮). ಹೀಗೆ ಸದ್ಗುಣಸಂಪನ್ನನೂ ಕೃಪಾಳುವೂ ಆದ ಈ ಮುದಿಯಮಹೀಪಾಲನು ಷಡಕ್ಷರೀಶ್ವರ ಕವಿಯಿಂದ ವಿರಚಿತ ವಾದ ಕವಿಕರ್ಣರಸಾಯನವೆಂಬ ಮಹಾಕಾವ್ಯವನ್ನು ವಿದ್ವಜ್ಜನರಿಂದ ಲಾಲಿಸಿ, ಈ ಮಹಾಕಾವ್ಯಕ್ಕೆ ಸಂಸ್ಕೃತವ್ಯಾಖ್ಯಾನವನ್ನು ಮಾಡುವುದಾಗಬೇಕೆಂದು ವಿದ್ವತ್ಸಭೆಯಲ್ಲಿ ಅಮೂಲ್ಯಗಳಾದ ವಸ್ತ್ರವಾಹನಾಭರಣಾದಿಗಳನ್ನಿತ್ತು ಸನ್ಮಾನಿಸಿ, ಪ್ರೋತ್ಸಾಹಪಿತ್ತನು (ಪ. ೯). ಹೀಗೆ ವಿದ್ವಜ್ಜನ ಪರಿಪಾಲಕನೂ ಸ್ವಯಂ ಉತ್ತಮಕವಿತ್ವಾ ರಚಿಸುವಲ್ಲಿ ಪ್ರೌಢನೂ, ಸಂತರ ಸಹವಾಸವುಳ್ಳವನೂ ಧೀರನೂ ಉದಾರನೂ ವಿದ್ವತ್ಪರಿಷತ್ತಿನಿಂದ ಕೊಂಡಾಡಲ್ಪಡುವವನೂ ಮಹಾಜ್ಞಾನಿಯೂ ಆದಂತಹ ಈ ಮುದಿಯ ಮಹೀಪಾಲ ನಿಂದ ಪ್ರೋತ್ಸಾಹಿತನಾಗಿ, ನವಾಮೃತರಸಮಧುರವಾದ ಕವಿಕರ್ಣರಸಾಯನವೆಂಬೀ ಸತ್ಕಾವ್ಯಕ್ಕೆ 'ಸುಧೋದಯಾ' ಎಂಬ ವ್ಯಾಖ್ಯಾನವನ್ನು ತಾನು ಮಾಡುತ್ತಿರುವುದಾಗಿ (ಪ. ೧೦, ೧೧) ಈ ಮಹಿತ್‌ಮುದಿಯಪ್ಪರಾಜನ ಬಗೆಗೆ ವ್ಯಾಖ್ಯಾಕಾರನು ವಿಶದವಾಗಿ ಪೀಠಿಕೆಯಲ್ಲಿ ತಿಳಿಸಿರುವನಲ್ಲದೆ ಸರ್ಗಾಂತವ್ಯಾಖ್ಯಾನದ ಗದ್ಯಭಾಗದಲ್ಲಿ ಸಂಕ್ಷಿಪ್ತವಾಗಿಯೂ ಉಲ್ಲೇಖಿಸಿರುವನು.

ದಿ॥ ಎಂ. ಎಸ್. ಪುಟ್ಟಣ್ಣನವರು 'ಹಾಗಲವಾಡಿ ಪಾಳೆಯಗಾರರು' ಎಂಬ ಗ್ರಂಥದಲ್ಲಿ ಈ ಪಾಳಯಗಾರರ ವಂಶಾವಳಿ ಚರಿತ್ರೆಯ ಆಧಾರದಿಂದ ಬರೆದಿರುವ ಈ

ಧರ್ಮಪ್ರಭು ರಾಜರ್ಷಿಮುದಿಯ ಮಹೀಪಾಲನ ಸಮಸ್ತ ವಿಚಾರಗಳೂ ಕವಿಕರ್ಣ ರಸಾಯನ ವ್ಯಾಖ್ಯಾಕಾರನಾದ ವೆಂಗನಪಂಡಿತನು ತಿಳಿಸಿರುವ ವಿಚಾರಗಳೂ ಸಹ ಸಂವಾದಿಗಳಾಗಿದ್ದು ಪರಸ್ಪರಪೂರಕಗಳಾಗಿ, ಸಮರ್ಥಕಗಳಾಗಿರುವುದಲ್ಲದೆ ನೈಜವಾದ ಚರಿತ್ರಾಂಶಗಳಾಗಿರುತ್ತವೆ ಎಂಬುದು ಕನ್ನಡಿಗರ ಮನಕ್ಕೆ ಬಂದಲ್ಲಿ ಈ ಲೇಖನವು ಸಾರ್ಥಕ. ಲೇಖಕನು ಧನ್ಯ.

ಈ ಧರ್ಮಪ್ರಭುವಿಗೆ ಬರೆದು ಸಮರ್ಪಿಸಿರುವ ಒಂದು ದೊಡ್ಡ ಓಲೆಗರಿಯ ಕಟ್ಟಿನ ಕೊನೆಯಲ್ಲಿರುವ– "ಕ್ರೋಧಸಂವತ್ಸರ ಭಾದ್ರಪದ ಶುದ್ಧ ೧೨ರಲ್ಲು ಮುದಿಯಪ್ಪನಾಯಕರ ಬಂಟಗವಿಯ ಹಾಪಯ್ಯನ ಸುಪುತ್ರ ಕೃಷ್ಣಯ್ಯನು ಬರದು ಸಮರ್ಪಿಸಿದ ಪುಣ್ಯಪುರಾತರ ಶಾಸ್ತ್ರದ ಪುಸ್ತಕ। ಹಂಪೆಯ ಹರೀಶ್ವರದೇವರು ವಿರಚಿಸಿದ ನೂರಿಪ್ಪತ್ತು ಪುಣ್ಯರಗಳೆಯು ಸಂಪೂರ್ಣಂ ಮಂಗಳಮಹಾ ಶ್ರೀ ಶ್ರೀ ಶ್ರೀ। ಬರಹವ ಕಲಿಸಿದ ಮಲ್ಲಪ್ಪಯ್ಯನ ಪಾದಕ್ಕೆ ಶರಣು ಶರಣು॥" ಎಂಬೀ ಬರವಣಿಗೆಯು ಈ ಧರ್ಮ ಪ್ರಭುವಿನಲ್ಲಿದ್ದ ಧರ್ಮಸತ್ಕ್ರಿಯೆಯನ್ನೂ ಧರ್ಮಸಂಸ್ಥಾನದ ಜನಸಾಮಾನ್ಯರಲ್ಲಿಯೂ ಇದ್ದ ಉತ್ತಮ ಸಂಸ್ಕಾರವನ್ನು ಪ್ರತಿಬಿಂಬಿಸುವ ಕನ್ನಡಿಯೆನಿಸಿದೆ.

ಕೇವಲ 'ಬರಹವ ಕಲಿಸಿದವರ ಪಾದಕ್ಕೇ ಭಕ್ತಿಯಿಂದ ಕೃತಜ್ಞತೆಯಿಂದ ಶರಣು ಶರಣು' ಎನ್ನುವ ಸಂಸ್ಕಾರವಿರಬೇಕಾದರೆ, ಇನ್ನು ಸಂಪೂರ್ಣವಿದ್ಯೆ ಕಲಿಸಿದವರ ಪಾದಕ್ಕೆ ಮತ್ತೆಷ್ಟು ಭಕ್ತಿಯಿಂದ ಮಣಿದು ಗೌರವ ತೋರಿಸುತ್ತಿದ್ದಿರಬೇಕೆಂಬುದನ್ನು ನೆನೆದು ನಾವು ಧನ್ಯರಾಗಬೇಕಾಗಿದೆ, ಸಂಸ್ಕಾರಿಗಳಾಗಬೇಕಾಗಿದೆ. ಮುದಿಯಪ್ಪನಾಯಕನ ಬಂಟನೂ ಆದರ್ಶಮಾನವನೇ ಸರಿ.

ಇಂತಹ ಮಹಾನುಭಾವನಾದ ಧರ್ಮಪ್ರಭುವನ್ನು ಪಡೆದ ಲೋಕವೇ ಧನ್ಯವಾದುದು. ಇಂತಪ್ಪ ಮಹಾನುಭಾವನಿಂದ ಮಂಡಿತವಾದ ಚಿಕ್ಕನಾಯಕನಹಳ್ಳಿಯೇ ಪುಣ್ಯಭೂಮಿ. ಇಂತಹ ಧರ್ಮ ಸಂಸ್ಥಾನದಲ್ಲಿ ಉದಯಿಸಿದವರೆಲ್ಲರೂ ಪುಣ್ಯಭಾಜನರೇ ಸರಿ.

ಇದು ಧರ್ಮಸಂಸ್ಥಾನಾಧಿಪತಿಯಾದ ಧರ್ಮಪ್ರಭು ರಾಜರ್ಷಿಮುದಿಯಪ್ಪನಾಯಕನ ತೌಲನಿಕ ಪರಿಚಯ.

---

**ಟಿಪ್ಪಣಿ** :—1975ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚ್ಯ ವಿದ್ಯಾ ಸಂಶೋಧನಾಲಯದಲ್ಲಿ 121ನೇ ಗ್ರಂಥಮಾಲೆಯಾಗಿ ಇದೇ ಲೇಖಕನಿಂದ ಸಂಪಾದಿತವಾಗಿ ಪ್ರಕಟವಾಗಿರುವ ಕವಿಕರ್ಣರಸಾಯನದ ಪ್ರಸ್ತಾವನೆ ಮತ್ತು ಎಂ.ಎಸ್.ಪುಟ್ಟಣ್ಣನವರ ಹಾಗಲವಾಡಿ ಪಾಳೆಯಗಾರರು (1931) ಎಂಬ ಗ್ರಂಥಗಳಲ್ಲಿ ಹೆಚ್ಚಿನ ವಿಚಾರಗಳಿಗೆ ಅವಲೋಕಿಸುವುದು.

# ಮೈಸೂರು ಒಡೆಯರ ಕಾಲದಲ್ಲಿ

ಎಂ. ವಿ. ಶ್ರೀನಿವಾಸ್

ಹದಿನಾರು ಹದಿನೇಳನೆಯ ಶತಮಾನಗಳಲ್ಲಿ ಕರ್ನಾಟಕದಲ್ಲಿ ದಕ್ಷಿಣ ಭಾರತದ ರಾಜಕೀಯ ಇತಿಹಾಸದಲ್ಲಿ ಮಹತ್ವದ ಬದಲಾವಣೆಗಳು ಕಂಡು ಬಂದವು. ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿಯೂ ಆ ಸಾಮ್ರಾಜ್ಯದ ಪತನಾನಂತರವೂ ದಕ್ಷಿಣದಲ್ಲಿ ಅನೇಕ ಸಣ್ಣ ಪಾಳೆಯಪಟ್ಟುಗಳು ಹುಟ್ಟಿಕೊಂಡವು. ಅನೇಕ ಪಾಳೆಯಗಾರರು ಸುಭದ್ರವಾದ ರಾಜ್ಯಗಳನ್ನು ಕಟ್ಟಿ ವ್ಯವಸ್ಥೆಯಿಂದ ಆಳಿದರು. ಬಹುಮಂದಿ ಪಾಳೆಯಗಾರರು, ಅಂತಃಕಲಹಗಳಲ್ಲಿಯೂ ತೊಡಗಿ ಬಹುಬೇಗ ಇತಿಹಾಸದಿಂದ ಕಣ್ಮರೆಯಾದರು. ವಿಜಯನಗರ ಪತನಾನಂತರ ಅದಕ್ಕೆ ಅಧೀನವಾಗಿದ್ದ ಪಾಳೆಯಪಟ್ಟುಗಳು ಸ್ವತಂತ್ರವಾದರೂ ಅವ್ಯಾಹತವಾಗಿ ನಡೆಯುತ್ತಿದ್ದ ಅಂತರ್ಯುದ್ಧಗಳಲ್ಲಿ ಕೆಲವು ಬಲಿಷ್ಠ ಪಾಳೆಯಪಟ್ಟುಗಳು ಒಳ್ಳೆಯ ಆಡಳಿತಪದ್ಧತಿಯನ್ನು ಸ್ಥಾಪಿಸಿ ಶಾಂತಿ ಭದ್ರತೆ ನೆಲೆಸಲು ಕಾರಣರಾದುವು.

ವಿಜಯನಗರವನಂತರ ಪ್ರಾಬಲ್ಯಕ್ಕೆ ಬಂದ ಬಿಜಾಪುರದ ಷಾಹಿ ಅರಸರು ಇನ್ನೊಂದು ಮೈಸೂರಿನ ಒಡೆಯರು ಕ್ರಮಕ್ರಮವಾಗಿ ಸಣ್ಣಪುಟ್ಟ ಪಾಳೆಯಪಟ್ಟುಗಳನ್ನು ಗುಡಿಸಿಹಾಕಿ ವಿಸ್ತಾರವಾದ ರಾಜ್ಯಗಳನ್ನು ಕಟ್ಟಿದರು.

ಪ್ರಕೃತಿ ಸಂಪತ್ತಿನಿಂದ ಕೂಡಿದ್ದ ಚಿಕ್ಕನಾಯಕನಹಳ್ಳಿ ಪ್ರದೇಶವು ಮೈಸೂರು ಒಡೆಯರ ಗಮನವನ್ನು ಸೆಳೆಯಿತು. ಈ ಅರಸರು ಚಿಕ್ಕನಾಯಕನಹಳ್ಳಿ ಪ್ರದೇಶವನ್ನು ಸ್ವಾಧೀನಪಡಿಸಿಕೊಂಡರೂ 17-18ನೆಯ ಶತಮಾನಗಳಲ್ಲಿ ಕರ್ನಾಟದಲ್ಲಿ ನಡೆದ ರಾಜಕೀಯ ವಿದ್ಯಮಾನಗಳ ಪರಿಣಾಮವಾಗಿ ಚಿಕ್ಕನಾಯಕನಹಳ್ಳಿ ಪ್ರದೇಶವು ಹಲವಾರು ಬಾರಿ ಕೈಬದಲಾವಣೆಯಾಗಿ ಕಾಲ್ಚೆಂಡಿನಂತೆ ಒಂದು ರಾಜ್ಯದ ಆಡಳಿತದಿಂದ ಮತ್ತೊಂದು ರಾಜ್ಯಕ್ಕೆ ಕ್ಷಿಪ್ರವಾಗಿ ಗೊಂದಲವಾಗುವಷ್ಟು ಮಟ್ಟಿಗೆ ಕೈ ಬದಲಾಯಿಸಿತು. ಹೀಗಾಗಿ ವಿಜಯನಗರದ ದೋಬ್ ಪ್ರದೇಶದಂತೆ ಫಲವತ್ತಾದ ಭೂಮಿಯನ್ನೊಳಗೊಂಡ ಚಿಕ್ಕನಾಯಕನಹಳ್ಳಿ ಪ್ರದೇಶವು ಒಡೆಯರು, ಇಕ್ಕೇರಿನಾಯಕರು, ಬಿಜಾಪುರದ ಸುಲ್ತಾನರು ಇವರ ವಶಕ್ಕೆ ಒಳಗಾಗಿ ಕಡೆಗೆ ಮೈಸೂರು ರಾಜ್ಯದಲ್ಲಿ ಸೇರಿ ಹೋಯಿತು.

1631ರಲ್ಲಿಯೇ ಮೈಸೂರಿನ ಚಾಮರಾಜ ಒಡೆಯರು ಚಿಕ್ಕನಾಯಕನಹಳ್ಳಿಯ ಮೇಲೆರಗಿ ಹೋಗಿ ಅಲ್ಲಿನ ದಳವಾಯಿ ಗುರುವಣ್ಣನನ್ನು ಕೊಂದು ಅಲ್ಲಿನ ನಾಯಕ ಶರಣಾಗತನಾಗುವಂತೆ ಮಾಡಿದರು. ಅದರಂತೆ ಪಾಳೆಯಗಾರನು ಚಾಮರಾಜ ಒಡೆಯರಿಗೆ ಶರಣಾಗತನಾಗಿ ಧನಕನಕ ವಸ್ತ್ರ ಹಾಗೂ ರಾಮಲಿಂಗ ಎಂಬ ಆನೆಯನ್ನು ಕಾಣಿಕೆ

ಯಾಗಿ ಕೊಟ್ಟು ಒಪ್ಪಂದವನ್ನು ಮಾಡಿಕೊಂಡನು. ಈ ರೀತಿ ದುರ್ಬಲರಾಗಿದ್ದ ಹಾಗಲವಾಡಿ ಪಾಳೆಯಗಾರರನ್ನು ಬದಿಗೊತ್ತಿ ಅಂದಿನ ಪ್ರಬಲ ರಾಜ್ಯಗಳು ತಮ್ಮ ವಿಸ್ತರಣೆಯನ್ನು ಕೈಗೊಂಡು ಈ ಪ್ರದೇಶವನ್ನು ಆಕ್ರಮಿಸಲು ಮುಂದೆ ಬಂದವು ಇದೇ ಸಮಯದಲ್ಲಿಯೇ ಬಿಜಾಪುರದ ಸಮರ್ಥ ಧಳಪತಿ ರಣದುಲ್ಲಾಖಾನ್ ದಕ್ಷಿಣಕ್ಕೆ ದಂಡೆತ್ತಿ ಬಂದು ಮೈಸೂರಿನ ಅನೇಕ ಪಾಳೆಯಗಾರರನ್ನು ಸೋಲಿಸಿ ತನ್ನ ಪ್ರಾಬಲ್ಯ ವನ್ನು ಸ್ಥಾಪಿಸಿದನು. 1639-40ರಲ್ಲಿ ಅವನು ಚಿಕ್ಕನಾಯಕನಹಳ್ಳಿಯ ಮೇಲೆರಗಿ ದಾಗ ಹಾಗಲವಾಡಿಯ ಮನೆತನದ ಭೈರಪ್ಪ ಅವನನ್ನು ಎದುರಿಸುವಷ್ಟು ಸಮರ್ಥ ನಾಗಿರಲಿಲ್ಲ ಖಾನನ ಸೈನ್ಯವು ಭೈರಪ್ಪನನ್ನು ಸುಲಭವಾಗಿ ಸೋಲಿಸಿತು. ಈ ರೀತಿ ಯುದ್ಧದಲ್ಲಿ ಸೋತ ಭೈರಪ್ಪನು ಹಾಗಲವಾಡಿಗೆ ಹೋಗಿ ನೆಲೆಸಿದ. ಚಿಕ್ಕನಾಯಕನ ಹಳ್ಳಿ ಬಿಜಾಪುರದ ಅಧೀನಕ್ಕೊಳಗಾಯಿತು. 17ನೆಯ ಶತಮಾನದ ಮಧ್ಯಭಾಗದ ವರೆಗೂ ಅದು ಬಿಜಾಪುರದವರ ಅಧೀನದಲ್ಲಿಯೇ ಇದ್ದಿತು. ಅದಾದ ಕೆಲವು ವರ್ಷ ಗಳಲ್ಲಿ ಮತ್ತೊಮ್ಮೆ ಮೈಸೂರು ದೊರೆಗಳು ಚಿಕ್ಕನಾಯಕನಹಳ್ಳಿಯನ್ನು ತಮ್ಮವಶಕ್ಕೆ ತೆಗೆದುಕೊಂಡರು. ಕ್ರಿ.ಶ. 1662ರಲ್ಲಿ ಇಕ್ಕೇರಿಯ ಪಾಳೆಯಗಾರ ಚಿಕ್ಕನಾಯಕನ ಹಳ್ಳಿಯ ಮೇಲೆ ಮುತ್ತಿಗೆ ಹಾಕಿ ಮೈಸೂರಿನವರಿಂದ ಅದನ್ನು ಕಸಿದುಕೊಂಡ. ಆದರೆ ಮಾರನೇವರ್ಷವೇ ಮೈಸೂರಿನ ದಳವಾಯಿ ನಂಜರಾಜಯ್ಯ ಅದನ್ನು ಗೆದ್ದುಕೊಂಡ. ಇದಾದನಂತರ ಮತ್ತೊಮ್ಮೆ ಬಿಜಾಪುರದವರು ಈ ಭಾಗವನ್ನು ಸ್ವಾಧೀನಪಡಿಸಿ ಕೊಂಡಂತೆ ಕಾಣುತ್ತದೆ. ಏಕೆಂದರೆ ರಣದುಲ್ಲಾಖಾನನ ಸಂಬಂಧಿಗಳಾದ ಜಹಾಂಗೀರ್ ಖಾನ್ ಮತ್ತು ಹುಸೇನ್‌ಖಾನ್ ಚಿಕ್ಕನಾಯಕಹಳ್ಳಿಯ ಮೇಲೆ ತಮ್ಮ ಆಳ್ವಿಕೆಯನ್ನು ಸ್ಥಾಪಿಸಿದ್ದರು.

ಮೈಸೂರಿನ ದೇವರಾಜ ಒಡೆಯರ್ ವಿಜಯನಗರ ಸಾಮ್ರಾಜ್ಯದ ಉತ್ತರಾಧಿಕಾರಿ ಯಾಗಿ (1673) ದಕ್ಷಿಣದ ಹಲವಾರು ಪ್ರದೇಶಗಳನ್ನು ಆಳತೊಡಗಿದ. ಅವನ ರಾಜ್ಯಕ್ಕೆ ಚಿಕ್ಕನಾಯಕನಹಳ್ಳಿಯು ಉತ್ತರದ ಗಡಿಯಾಗಿದ್ದಿತು ದೇವರಾಜ ಒಡೆಯರು ಉತ್ತರ ದಲ್ಲಿ ಚಿಕ್ಕನಾಯಕಹಳ್ಳಿಯಿಂದ ದಕ್ಷಿಣದಲ್ಲಿ ಧಾರಾಪುರದವರೆಗಿನ ರಾಜ್ಯವನ್ನು ಆಳುತ್ತಿ ದ್ದರು. ಚಿಕ್ಕನಾಯಕನಹಳ್ಳಿಯಿಂದ ಹಿಡಿದು ಧಾರಾಪುರದವರೆಗೆ ಈ ದೊರೆ ಅನೇಕ ಅನ್ನಸತ್ರಗಳನ್ನು ಕಟ್ಟಿಸಿದ್ದರೆಂಬುದು ಶಾಸನಗಳಿಂದ ತಿಳಿದು ಬರುತ್ತದೆ.

ಕ್ರಿ.ಶ. 1675ರಲ್ಲಿ ಮೈಸೂರಿನ ಪ್ರಸಿದ್ಧ ದೊರೆ ಚಿಕ್ಕದೇವರಾಜ ಒಡೆಯರು ಚಿಕ್ಕ ನಾಯಕನಹಳ್ಳಿ ಪ್ರದೇಶವನ್ನು ಗೆದ್ದುಕೊಂಡರು. ಈ ವರ್ಷ ಮೈಸೂರಿನ ಇತಿಹಾಸ ದಲ್ಲಿ ಒಂದು ಪರ್ವಕಾಲವಾಗಿದ್ದಿತು. ಕರ್ನಾಟಕದಲ್ಲಿ ಈ ಸಮರ್ಥದೊರೆ ಎಲ್ಲ ಪ್ರತಿಸ್ಪರ್ಧಿಗಳನ್ನು ಯಶಸ್ವಿಯಾಗಿ ಸೋಲಿಸಿ ತಮ್ಮ ಪ್ರಾಬಲ್ಯವನ್ನು ಸಂಪಾದಿಸಿ ಸ್ಥಾಪಿಸಿದರು. "ಕರ್ಣಾಟಕ ಸಾಮ್ರಾಜ್ಯ ಸಿಂಹಾಸನಮಧಾರಧೀ" ಎಂಬ ಹೆಸರನ್ನು ಸಂಪಾದಿಸಿಕೊಂಡರು. ಆದರೆ ಆಗತಾನೇ ಮೈಸೂರಿನ ಹಿರಿಮೆಯನ್ನು ಸ್ಥಾಪಿಸಲು

ಹೊರಟಿದ್ದ ಚಿಕ್ಕದೇವರಾಜ ಒಡೆಯರು ಏಕಕಾಲದಲ್ಲಿ ಹಲವಾರು ಶತ್ರುಗಳನ್ನು ಎದುರಿಸಬೇಕಾಯಿತು. ಮರಾಠರು ಸಾಂಬಾಜಿ ಮೈಸೂರಿನ ಹಲವಾರು ಭಾಗಗಳ ಮೇಲೆ ಧಾಳಿ ನಡೆಸಿದರು. 1682–1686ರಲ್ಲಿ ನಡೆದ ಮುತ್ತಿಗೆಯಲ್ಲಿ ಚಿಕ್ಕನಾಯಕನಹಳ್ಳಿ ಮರಾಠರ ವಶವಾಯಿತು. ಸಾಹಸಿ ಚಿಕ್ಕದೇವರಾಜ ಒಡೆಯರು ಎಡೆಬಿಡದೆ ಪ್ರಯತ್ನ ನಡೆಸಿ 1687ರಲ್ಲಿ ಏಕೋಜಿಯಿಂದ ಚಿಕ್ಕನಾಯಕನಹಳ್ಳಿ ಕಂಡೀಕೆರೆಗಳನ್ನು ಕಿತ್ತುಕೊಂಡರು. ಇದೊಂದು ಒಡೆಯರ ಗಮನಾರ್ಹವಾದ ಸಾಧನೆ. ಈ ವಿಜಯದಿಂದ ಮರಾಠರ ಪ್ರಾಬಲ್ಯವು ಕುಂದಿತಲ್ಲದೆ ಮೊಘಲರ ವಿರುದ್ಧ ಮೈಸೂರು ಒಡೆಯರ ಕೈಮೇಲಾಗಲು ಇದರಿಂದ ಸಾಧ್ಯವಾಯಿತು. ಇಲ್ಲಿಗೆ ಚಿಕ್ಕನಾಯಕನಹಳ್ಳಿ ಪ್ರದೇಶವು ಹಲವು ರಾಜರ ಆಕ್ರಮಣಗಳಿಗೆ ಬಲಿಯಾಗಿ ಹಲವಾರು ದೊರೆಗಳ ಅಧೀನಕ್ಕೆ ಒಳಪಡುವುದು ತಪ್ಪಿ ಅಂದಿನಿಂದ ಸ್ಥಿರವಾಗಿ ಮೈಸೂರು ರಾಜ್ಯದಲ್ಲಿ ನೆಲೆಸಿತು.

17ನೆಯ ಶತಮಾನದ ಅಂತ್ಯದಲ್ಲಿ ಮೈಸೂರಿನ ದೊರೆಗಳಾಗಿದ್ದ ಚಿಕ್ಕದೇವರಾಜ ಒಡೆಯರು ಸಮರ್ಥರೂ, ನಿಪುಣರೂ ಆದ ಆಡಳಿತಗಾರರಾಗಿದ್ದರು. ಇವರು ದಕ್ಷಿಣ ಭಾರತದ ಹಲವಾರು ದೇಶಗಳನ್ನು ಗೆದ್ದು ವಿಸ್ತಾರವಾದ ರಾಜ್ಯವನ್ನು ಕಟ್ಟಿದ್ದಲ್ಲದೆ ತಮ್ಮ ವಿಶಾಲವಾದ ರಾಜ್ಯದಲ್ಲಿ ಉತ್ತಮವಾದ ಆಡಳಿತ ಪದ್ಧತಿಯನ್ನು ಸ್ಥಾಪಿಸಿದರು. ಚಿಕ್ಕದೇವರಾಜ ಒಡೆಯರು ಕಂದಾಯದ ಕಾನೂನುಗಳನ್ನು ಕ್ರೋಢೀಕರಿಸಿದರು. ಕೇಂದ್ರಾಡಳಿತವನ್ನು ಹದಿನೆಂಟು ಇಲಾಖೆಗಳನ್ನಾಗಿ ವಿಭಾಗಿಸಿದರು. ರಾಜ್ಯಕ್ಕೆಲ್ಲಾ ಅಂಚೆವ್ಯವಸ್ಥೆಯನ್ನು ಏರ್ಪಡಿಸಿದರು. ವ್ಯವಸಾಯ ವ್ಯಾಪಾರಕ್ಕೆ ಪ್ರೋತ್ಸಾಹ ನೀಡಿದರು. ಹಿಂದಿನಿಂದ ಬಂದಿದ್ದ ರಾಜ್ಯವನ್ನೆಲ್ಲಾ ಒಟ್ಟುಗೂಡಿಸಿ ಮೈಸೂರು ಸಂಸ್ಥಾನವನ್ನು 84 ಗಡಿಗಳನ್ನಾಗಿ ವಿಂಗಡಿಸಿದರು. ಸಣ್ಣ ಸಣ್ಣ ಗ್ರಾಮಗಳನ್ನು ದೊಡ್ಡ ಗ್ರಾಮಗಳಿಗೆ ಸೇರಿಸಿ ಹೋಬಳಿಗಳನ್ನು ನಿರ್ಮಿಸಿದರು. ಪ್ರತಿಯೊಂದು ಗಡಿಗೆ ಒಬ್ಬ ಸುಬೇದಾರ ಚಿಕ್ಕ ಪಾರುಪತ್ಯೆಗಾರ ಒಬ್ಬ ಗುಮಾಸ್ತೆಯವರು, ರಾಯಸದವರು, ದಫೇದಾರ. ಮುಂತಾದ ಅಧಿಕಾರಿಗಳನ್ನು ನೇಮಿಸಿದರು. ಚಿಕ್ಕನಾಯಕನಹಳ್ಳಿ ಮೈಸೂರು ರಾಜ್ಯದ ಉತ್ತರಗಡಿಯಲ್ಲಿದ್ದು ಮೈಸೂರು ರಾಜ್ಯದ ದಕ್ಷ ಆಡಳಿತದ ಒಂದು ಭಾಗವಾಗಿದ್ದಿತು. ಒಡೆಯರ ಕಾಲದ ಆಡಳಿತವು ದಕ್ಷತೆಯಿಂದ ಕೂಡಿದ್ದರೂ ಆಗಿನ ಕಾಲದ ನ್ಯಾಯಪದ್ಧತಿಯು ಮೂಢನಂಬಿಕೆ ಕಂದಾಚಾರದ ಮೇಲೆ ಅವಲಂಬಿಸಿದ್ದಿತು. ಅದು ಮಾಮೂಲು ಅಂದರೆ ಹಿಂದಿನ ಪದ್ಧತಿಯಂತೆ ನ್ಯಾಯವನ್ನು ತೀರ್ಮಾನಿಸ ಲಾಗುತ್ತಿದ್ದಿತು. ಚಿಕ್ಕದೇವರಾಜ ಒಡೆಯರ ಕಾಲದ ನ್ಯಾಯವಿತರಣೆಯ ವ್ಯವಸ್ಥೆಯಲ್ಲಿ ಕಾಸಿದ ತುಪ್ಪದಲ್ಲಿ ಕೈಯನ್ನು ಇಟ್ಟು ಪ್ರಮಾಣ ಮಾಡುವುದು ಮೊದಲಾದ ಪದ್ಧತಿಗಳನ್ನು ಅನುಸರಿಸುತ್ತಿದ್ದರು.

1೭ನೆಯ ಶತಮಾನದ ಮತ್ತೊಂದು ಸ್ವಾರಸ್ಯಕರವಾದ ಸಂಗತಿ ಎಂದರೆ ಚಿಕ್ಕನಾಯಕನಹಳ್ಳಿ ಪ್ರದೇಶದಲ್ಲಿ ಒಬ್ಬ ಮುಸಲ್ಮಾನ ಶ್ರೀಮಂತನೊಬ್ಬನು ಒಂದು ಅಗ್ರ

ಹಾರವನ್ನು ಸ್ಥಾಪಿಸಿ ಶೈಕ್ಷಣಿಕ ಬೆಳವಣಿಗೆಗೆ ಕಾರಣನಾದನು. 1763ರಲ್ಲಿ ಸೈಯದ್ ಯಾಕೋಬು ಬುಕಾರಿ ಎಂಬ ಉತ್ತರ ಭಾರತದಿಂದ ಬಂದಿದ್ದ ಮಹಮ್ಮದೀಯ ವರ್ತಕನೊಬ್ಬನು, ಮೈಸೂರು ಕೃಷ್ಣರಾಜ ಒಡೆಯರು ಆಳುತ್ತಿದ್ದಾಗ 608¼ ಗದ್ಯಾಣವನ್ನು ಕೊಟ್ಟು ಕುಂಡಿಕೆರೆ ಸ್ಥಳ ಬೆಳವಾಡಿ ಗ್ರಾಮವನ್ನು ಕೊಂಡುಕೊಂಡು ಅರಿವ ಶತಾದ್ರಿಪತಿ ಅಗ್ರಹಾರಕ್ಕೆ ದಾನ ಮಾಡಿದನು. ಇದು ಮಹಮ್ಮದೀಯರು ಅನೇಕ ವೇಳೆ ಶೈಕ್ಷಣಿಕ, ಸಾಂಸ್ಕೃತಿಕ, ಅಭಿವೃದ್ಧಿ ಕಾರ್ಯಗಳಲ್ಲಿ ನೆರವಾಗುತ್ತಿದ್ದರು ಎಂಬುದನ್ನು ಸೂಚಿಸುವ ಒಂದು ಮುಖ್ಯ ನಿದರ್ಶನವಾಗಿದೆ.

ಹದಿನೆಂಟನೆಯ ಶತಮಾನದಲ್ಲಿ ಹೈದರ್ಆಲಿ ಮತ್ತು ಟೀಪುವಿನ ಆಳ್ವಿಕೆಯಲ್ಲಿ ಮೈಸೂರು ಹಲವಾರು ಬಾರಿ ಮರಾಠರ ಧಾಳಿಗೆ ತುತ್ತಾಗಿದ್ದಿತು. ಮರಾಠರು 1799 ಶ್ರೀರಂಗಪಟ್ಟಣಕ್ಕೆ ಹೋಗುವ ಮಾರ್ಗದಲ್ಲಿ ಈ ಊರನ್ನು ಲೂಟಿ ಮಾಡಿದರು. ಚಿಕ್ಕನಾಯಕನಹಳ್ಳಿಗೆ ಬಲವಾದ ಮಣ್ಣಿನ ಕೋಟೆಯಿದ್ದಿತು. ಕೋಟೆಯ ಮಧ್ಯೆ ಚಚ್ಚೌಕವಾದ ಎತ್ತರವಾದ ಶಿಬಿರವೊಂದಿದ್ದಿತು. ಇದರ ಮೇಲಿಂದ ನೋಡುತ್ತಿದ್ದು ಯಾರಾದರೂ ಧಾಳಿಕೋರರು ಬಂದರೆ ಊರಿನ ಜನರಿಗೆ ಎಚ್ಚರಿಕೆ ಕೊಡಲಾಗುತ್ತಿತ್ತು. ಮರಾಠರ ಆಗಮನವನ್ನು ಮೊದಲೇ ತಿಳಿದ ಊರಿನ ನಾಯಕರು ತಮ್ಮ ಬೆಲೆಯುಳ್ಳ ಒಡವೆ ವಸ್ತುಗಳನ್ನು ಗೋಪ್ಯವಾಗಿ ಬಚ್ಚಿಟ್ಟಿದ್ದರು. ಮರಾಠರಿಗೆ ಏನೂ ಸಿಗಲಿಲ್ಲ. ಆದರೆ ಪರಶುರಾಮ ಭಾವು ಶ್ರೀರಂಗಪಟ್ಟಣದ ಯುದ್ಧ ಮುಗಿಸಿಕೊಂಡು ಹಿಂದಿರುಗುವಾಗ ಚಿಕ್ಕನಾಯಕನ ಹಳ್ಳಿಗೆ ಮುತ್ತಿಗೆ ಹಾಕಿದ. ಏನಾದರೂ ಮಾಡಿ ಅಲ್ಲಿಂದ ಆಸ್ತಿಪಾಸ್ತಿ ಕೊಳ್ಳೆ ಹೊಡೆಯಲೇಬೇಕೆಂದು ಮರಾಠರು ತೀರ್ಮಾನಿಸಿದರು. ಅನೇಕ ಜನರ ಸ್ನೇಹವನ್ನು ಸಂಪಾದಿಸಿಕೊಂಡರು. ಬ್ರಾಹ್ಮಣರಿಗೆ ದಕ್ಷಿಣೆಗಳನ್ನು ಕೊಟ್ಟು ಪರಿಚಯ ಮಾಡಿಕೊಂಡರು. ಹೀಗೆ ವಂಚನೆಯಿಂದ ಅಲ್ಲಿನ ಮುಖಂಡರನ್ನೆಲ್ಲ ತಮ್ಮ ಬಳಿ ಬರಮಾಡಿಕೊಂಡು ಅವರನ್ನು ಬಂಧಿಸಿ ಹಿಂಸಿಸಿ ಹಣ ಬಚ್ಚಿಟ್ಟ ಜಾಗವನ್ನು ಪತ್ತೆಹಚ್ಚಿ ಅದನ್ನು ಪಡೆದುಕೊಂಡು ಹಿಂದಿರುಗಿದರು. ಈ ಘಟನೆ ಹದಿನೆಂಟನೆಯ ಶತಮಾನದಲ್ಲಿ ಮೈಸೂರು ರಾಜ್ಯದ ಗಡಿಗಳಲ್ಲಿದ್ದ ಅಭದ್ರ ಪರಿಸ್ಥಿತಿಯನ್ನು ಸೂಚಿಸುತ್ತದೆ.

ಟೀಪುವಿನ ಆಳ್ವಿಕೆ ಕೊನೆಗೊಂಡು ಮತ್ತೊಮ್ಮೆ ಮೈಸೂರು ದೊರೆಗಳ ಆಡಳಿತ ಪ್ರಾರಂಭವಾದ ಮೇಲೂ ಚಿಕ್ಕನಾಯಕನಹಳ್ಳಿ ಭಾಗದಲ್ಲಿ ಪೂರ್ಣ, ಶಾಂತಿ, ನೆಮ್ಮದಿ ನೆಲಸಲಿಲ್ಲ. ಮುಮ್ಮಡಿಕೃಷ್ಣರಾಜ ಒಡೆಯರ ಆಳ್ವಿಕೆಯಲ್ಲಿ ರಾಜ್ಯದಲ್ಲಿ ನಡೆದ ಗಲಭೆಗಳ ಬಿಸಿ ಈ ಪ್ರದೇಶಕ್ಕೂ ತಟ್ಟಿತು. ಬ್ರಿಟಿಷ್ ಕಮಿಷನರುಗಳ ಕಾಲದಲ್ಲಿ ರಾಜ್ಯದಲ್ಲಿದ್ದ ಅರಾಜಕತೆ ಅವ್ಯವಸ್ಥೆ ತೊಲಗಿ ಅನೇಕ ಸುಧಾರಣೆಗಳು ಜಾರಿಗೆ ಬಂದವು. ಚಿಕ್ಕನಾಯಕನ ಹಳ್ಳಿ ಪ್ರದೇಶವೂ ಅಂದಿನ ಆರ್ಥಿಕ ಸಾಮಾಜಿಕ ಸುಧಾರಣೆಗಳಿಂದ ಪ್ರಯೋಜನ ಪಡೆದು ಪ್ರಗತಿಯ ಹಾದಿಯಲ್ಲಿ ಮುನ್ನಡೆಯಿತು.

ಪ
ರಿ
ಸ
ರ

**ಚಿಕ್ಕನಾಯಕನಹಳ್ಳಿ**

# ಸ್ವಾತಂತ್ರ್ಯ ಸಂಗ್ರಾಮದಲ್ಲಿ

**ಹಾಗಲವಾಡಿ ಶಿವಲಿಂಗಯ್ಯ**

"ನಾಡು ನನ್ನದು ಎಂದು ಅಭಿಮಾನ ಪಡದ ವ್ಯಕ್ತಿಯ ಹೃದಯ ಸುಡುಗಾಡು" ಎಂದು ಅರ್ಥ ಬರುವ ಮಾತೊಂದನ್ನು ಶ್ರೀ ಕುವೆಂಪು ಒಂದು ಕಡೆ ಆಡಿದ್ದಾರೆ. ತಾನು ಹುಟ್ಟಿ ಬೆಳೆದ ನೆಲದ ಬಗ್ಗೆ ಗೌರವ ತಳೆಯುವುದು ಪ್ರತಿಯೊಬ್ಬರ ಪವಿತ್ರ ಕರ್ತವ್ಯ ಅಷ್ಟೇ ಅಲ್ಲ ; ತಾಯ್ನಾಡಿಗೆ ಧಕ್ಕೆ ಒದಗಿದ ಸಂದರ್ಭದಲ್ಲಿ ಜೀವನದ ಹಂಗು ತೊರೆದು ಹೋರಾಡುವ ಹೊಣೆಯೂ ವ್ಯಕ್ತಿಯ ಪಾಲಿಗೆ ಸೇರಿದೆ. ಭರತ ಖಂಡದ ಇತಿಹಾಸ ದಲ್ಲಿ ಒಂದು ರೋಚಕ ಅಧ್ಯಾಯವಾಗಿ ಬಂದಿರುವ ಸ್ವಾತಂತ್ರ್ಯಸಂಗ್ರಾಮ ಜನತೆಯಲ್ಲಿ ಜನ್ಮಭೂಮಿಯ ಬಗ್ಗೆ ಅಭಿಮಾನವನ್ನು ಹೊಡೆದೆಬ್ಬಿಸಿದ, ಛಲವನ್ನು ಉದ್ದೀಪಿಸಿದ ಒಂದು ಅಪೂರ್ವ ಸಂದರ್ಭ. ಸ್ವಾತಂತ್ರ್ಯಗಳಿಕೆಯ ಹೋರಾಟದಲ್ಲಿ ಪರಸ್ಪರ ಭಿನ್ನಾಭಿ ಪ್ರಾಯಗಳನ್ನು ದೂರಮಾಡಿ, ಸಮಷ್ಟಿಯ ಹಿತಕ್ಕಾಗಿ ದಿಟ್ಟತನದಿಂದ ಸೆಟೆದು ನಿಂತ ವ್ಯಕ್ತಿ, ಸಂಘ. ಸಂಸ್ಥೆ—ಈ ಒಂದೊಂದೂ ತಾಯ್ನಾಡಿಗೆ ತನ್ನ ಪಾಲಿನ ಸೇವೆಯನ್ನು ಸಲ್ಲಿಸಿ ಕೃತಾರ್ಥವಾಯಿತು. ಪ್ರಸ್ತುತ ಚಿಕ್ಕನಾಯಕನಹಳ್ಳಿಯಲ್ಲಿ ಆಗ ನಡೆದ ಕೆಲವು ಘಟನೆಗಳ, ಸತ್ಯಾಗ್ರಹಿಗಳ ಕಿರು ಪರಿಚಯವನ್ನು ಇಲ್ಲಿ ಕೊಟ್ಟಿದೆ.

ಅಸಂಖ್ಯಾತ ತ್ಯಾಗ ಜೀವಿಗಳ ಬಲಿದಾನದ ಫಲವಾಗಿ ಗಳಿಸಿದ ಸ್ವಾತಂತ್ರ್ಯದ ಬೆಲೆ ಅಮೂಲ್ಯವಾದುದು. ಅದನ್ನು ಗಳಿಸುವಲ್ಲಿ ನಡೆದ ಒಂದೊಂದು ಘಟನೆಯೂ ರೋಮಾಂಚಕಾರಿ. ಪರಕೀಯರ ಆಳ್ವಿಕೆಯ ವಿರುದ್ಧ ನಡೆದ ಆ ಅಪೂರ್ವ ಹೋರಾಟ ದಲ್ಲಿ ಪುರುಷರಷ್ಟೇ ಮಹಿಳೆಯರೂ ಸೆಣೆಸಿದ್ದಾರೆ. ಜೀವದ ಹಂಗು ತೊರೆದು ಹೋರಾಡಿದ್ದಾರೆ. ಭಾರತ ಸ್ವಾತಂತ್ರ್ಯಸಂಗ್ರಾಮಕ್ಕೆ ಮುಂಚೆಯೇ ಪ್ರಪ್ರಥಮವಾಗಿ ಇಡೀ ದೇಶಕ್ಕೆ ನಾಂದಿಯಾಗಿ ಬ್ರಿಟಿಷರ ವಿರುದ್ಧ ಹೋರಾಡಿ ಸ್ವಾತಂತ್ರ್ಯ ಸಂಗ್ರಾಮದ ಕಿಡಿ ಹೊತ್ತಿಸಿದ ಕೀರ್ತಿ ಕರ್ನಾಟಕದ್ದು. 1824ರಷ್ಟು ಹಿಂದೆಯೇ ಬ್ರಿಟಿಷ್ ಸಾಮ್ರಾಜ್ಯಶಾಹಿಯ ವಿರುದ್ಧ ಹೋರಾಡಿದ ಕೀರ್ತಿ ಕಿತ್ತೂರು ರಾಣಿ ಚನ್ನಮ್ಮಾಜಿಗೆ ಸಲ್ಲುತ್ತದೆ.

1936ರಲ್ಲಿ ಭಾರತ ಸ್ವಾತಂತ್ರ್ಯ ಚಳುವಳಿ ಉತ್ತರ ಭಾರತಕ್ಕೇ ಸೀಮಿತವಾ ಗಿದ್ದು, ಗಾಂಧೀಜಿಯವರಿಂದಲೇ ರಾಮರಾಜ್ಯದವೆಂದು ಹೇಳಿಸಿಕೊಂಡಿದ್ದು, ದಕ್ಷಿಣದಲ್ಲಿ ದೇಶೀಯ ಸಂಸ್ಥಾನಗಳಲ್ಲಿ ಒಂದಾಗಿದ್ದ ಮೈಸೂರು ಸಂಸ್ಥಾನಕ್ಕೆ ಸಾಕಷ್ಟು ಪ್ರಭಾವ ಬೀರದೇ ಇದ್ದ ಸಂದರ್ಭದಲ್ಲಿ ಶ್ರೀ ಟಿ. ಸಿದ್ದಲಿಂಗಯ್ಯ, ತಗಡೂರು ರಾಮಚಂದ್ರ ರಾವ್, ವೀರಕೇಸರಿ ಸೀತಾರಾಮರಾವ್ ಮುಂತಾದ ಮಹನೀಯರುಗಳಿಂದ "ಮೈಸೂರು ಕಾಂಗ್ರೆಸ್ ಬೋರ್ಡ್" ಸ್ಥಾಪನೆಯಾಗಿ ಶ್ರೀಗಳಾದ ಹೆಚ್. ಸಿದ್ದಯ್ಯ

ಹೆಚ್. ಸಿ. ದಾಸಪ್ಪ, ಎಸ್. ಚನ್ನಯ್ಯ, ಯಶೋಧರಾ ದಾಸಪ್ಪ, ಮರಿಯಪ್ಪ, ಬಳ್ಳಾರಿ ಸಿದ್ದಮ್ಮ, ಡಿ. ಸಾಕಮ್ಮ ಮುಂತಾದವರುಗಳಿಂದ ಸಾಕಷ್ಟು ಪ್ರೋತ್ಸಾಹ ಬೆಳವಣಿಗೆ ಗಳನ್ನು ಹೊಂದಿ ಜಿಲ್ಲೆಗಳಿಗೆ ವ್ಯಾಪಿಸುತ್ತಾ. ಅದುವರೆಪಿಗೂ ಕೇವಲ ಬೆಂಗಳೂರು, ಮೈಸೂರು ನಗರಗಳಿಗೆ ಸೀಮಿತವಾಗಿದ್ದ ಚಟುವಟಿಕೆಗಳು ತುಮಕೂರು ಜಿಲ್ಲೆಗೂ ವ್ಯಾಪಿಸಿದುವು. ತುಮಕೂರು ಜಿಲ್ಲೆಯ ಅಂದಿನ ಮುಖಂಡರುಗಳಾದ ತಾಳ್ಕೆರೆ ಸುಬ್ರ ಹ್ಮಣ್ಯಂ, ಕೆ. ರಂಗಯ್ಯಂಗಾರ್, ಎಂ. ವಿ. ರಾಮರಾವ್, ಬ್ರಹ್ಮಯ್ಯ, ಜೋಗಿಸಿದ್ದಯ್ಯ, ಮುಂತಾದ ಮಹಾಶಯರುಗಳ ಶ್ರಮ, ತ್ಯಾಗ, ರಾಷ್ಟ್ರೀಯ ಮನೋಭಾವ ಸ್ಮರಣೀಯ; ಈ ಮಹನೀಯರ ಜೊತೆಗೆ ವರ್ತಕರುಗಳ ಆರ್ಥಿಕ ಸಹಾಯ, ಹೋಟೆಲ್‌ಮಾಲಿಕರು ಗಳ ಹಿನ್ನೆಲೆಯ ಪ್ರೋತ್ಸಾಹ ಹಾಗೂ ಅಸಂಖ್ಯಾತ ರಾಷ್ಟ್ರಪ್ರೇಮಿಗಳ ಅದಮ್ಯ ಸೇವಾ ನಿಷ್ಠೆ. ಇವುಗಳ ಫಲವಾಗಿ ಜಿಲ್ಲೆಯಲ್ಲಿ ಸಾಕಷ್ಟು ಖ್ಯಾತಿ ಹೊಂದಿ ಸ್ವಾತಂತ್ರ್ಯ ಹೋರಾಟದ ಕಿಚ್ಚಿನ ದಳ್ಳುರಿ ತಾಲ್ಲೂಕು ಕೇಂದ್ರಗಳಿಗೂ ಹಬ್ಬಿತು. ತುಮಕೂರಿನಲ್ಲಿ ವಕೀಲಿ ವೃತ್ತಿ ಕೈಗೊಂಡಿದ್ದ ಶ್ರೀರಂಗಯ್ಯಂಗಾರ್. ಟಿ. ಸುಬ್ರಹ್ಮಣ್ಯಂ ಇವರುಗಳು ಚಿಕ್ಕನಾಯಕನಹಳ್ಳಿ ತಾಲ್ಲೂಕಿನಿಂದ ಬಂದ ತಮ್ಮ ಕಕ್ಷಿದಾರರಿಗೆ ಸ್ವಾತಂತ್ರ್ಯ ಹೋರಾಟದ ಬಗ್ಗೆ ತಿಳುವಳಿಕೆ ಕೊಟ್ಟು ಅವರಲ್ಲಿ ಜಾಗೃತಿಯನ್ನುಂಟುಮಾಡಿದರು. ತತ್ಪರಿಣಾಮವಾಗಿ ಚಿಕ್ಕನಾಯಕನಹಳ್ಳಿಯ ಅನೇಕ ಮುಖಂಡರುಗಳು ರಾಷ್ಟ್ರವ್ಯಾಪಿ ಚಳುವಳಿಯಲ್ಲಿ ಭಾಗವಹಿಸಿ ಕಾರ್ಯಕ್ರಮಗಳನ್ನು ಕೈಗೊಂಡರು.

ಚಿಕ್ಕನಾಯಕನಹಳ್ಳಿ ಸ್ವಾತಂತ್ರ್ಯ ಹೋರಾಟ 1937ರಿಂದ ಪ್ರಾರಂಭವಾಯಿ ತಾದರೂ, ಈ ಹಿಂದೆಯೇ ರಾಷ್ಟ್ರ ಚಳುವಳಿಯಲ್ಲಿ ಕೆಲವು ಮಹನೀಯರುಗಳು ಭಾಗ ವಹಿಸಿ ಗಣನೀಯ ಸೇವೆ ಸಲ್ಲಿಸಿರುವುದು ಕಂಡುಬರುತ್ತದೆ. 1930-31ರಲ್ಲಿ ಶ್ರೀ ಜಿ. ವಿ. ನಾರಾಯಣಮೂರ್ತಿಯವರು ಇಂಟರ್‌ಮೀಡಿಯೇಟ್ ಕಾಲೇಜು ವ್ಯಾಸಂಗ ಮಾಡುತ್ತಿದ್ದ ಸಮಯದಲ್ಲಿ ರಾಷ್ಟ್ರಾದ್ಯಂತ ಪಾನನಿಷೇಧಕಾರ್ಯಕ್ರಮ ಸೇಂದಿ ಅಂಗಡಿ ಗಳ ಮುಂದೆ ಪಿಕೆಟಿಂಗ್, ವಿದೇಶೀ ವಸ್ತ್ರದಹನ ನಡೆದಿತ್ತು. ತುಮಕೂರಿನಲ್ಲಿ ಶ್ರೀ ಟಿ. ಸುಬ್ರಹ್ಮಣ್ಯಂರವರ ನೇತೃತ್ವದಲ್ಲಿ ಒಂದು ದಿನ ಸಂಜೆ ಸೇಂದಿ ಅಂಗಡಿ ಮುಂದೆ ಪಿಕೆಟಿಂಗ್ ಮಾಡುತ್ತಿದ್ದಾಗ, ಪೋಲೀಸಿನವರ ದೌರ್ಜನ್ಯದ ಫಲವಾಗಿ ಶ್ರೀ ಜಿ. ವಿ ನಾರಾಯಣಮೂರ್ತಿಯವರು ತಮ್ಮ ನಾಯಕರ ಜೊತೆ ಪೋಲೀಸರ ಲಾಟಿಏಟಿನ ಸವಿಯನ್ನುಂಡರು. 1936ರಲ್ಲಿ ಶ್ರೀ ಎಸ್. ಕರಿಯಪ್ಪನವರ ಜೊತೆ ಸೇರಿ ಕನಕಪುರ ದಲ್ಲಿ 'ದಯಾನಂದ ವಸತಿ ವಿದ್ಯಾಲಯ'ವನ್ನು ಸ್ಥಾಪಿಸಿ ಸಂಸ್ಥೆಯ ಶ್ರೇಯೋಭಿವೃದ್ಧಿ ಗಾಗಿ ಶ್ರಮಿಸಿದರು. ಗಾಂಧೀಜಿಯವರ ಮೂಲಶಿಕ್ಷಣವನ್ನು ಅನುಷ್ಠಾನಕ್ಕೆ ತಂದರು, ಕೈಕಾಗದ ತಯಾರಿಕೆ. ಜೇನುಸಾಕಾಣಿಕೆ ನೂಲುವುದು. ತರಕಾರಿ ಬೆಳೆಯುವುದು ಮತ್ತು ಅಡಿಗೆ ಕೆಲಸ–ಇಷ್ಟೆಲ್ಲವೂ ಅಧ್ಯಾಪಕ ವಿದ್ಯಾರ್ಥಿಗಳಿಂದ ನಿಯೋಜಿತ ರೀತಿಯಲ್ಲಿ ನಡೆಯುತ್ತಿದ್ದವು. ಕೆ. ಸುಬ್ಬರಾಯರು ಈ ವಸತಿ ವಿದ್ಯಾಲಯದ ಅಧ್ಯಕ್ಷರಾಗಿದ್ದುದ

ರಿಂದ ಚಳುವಳಿಯ ಎಲ್ಲ ಗುಪ್ತಚಟುವಟಿಕೆಗಳೂ ಸಂಸ್ಥೆಯ ವತಿಯಿಂದಲೇ ನಡೆಯುತ್ತ ದೆಂದು ಆಪಾದಿಸಿದ ಸರ್ಕಾರ ಪ್ರಸ್ತುತ ಸಂಸ್ಥೆಯ ಮೇಲೆ ನಿಗಾ ಇಟ್ಟಿತು. ಇದೇ ಸಂದರ್ಭದಲ್ಲಿ ಶ್ರೀ ಕರಿಯಪ್ಪನವರ ಜೊತೆ ಜಿ. ವಿ. ನಾರಾಯಣಮೂರ್ತಿಯವರ ಬಂಧನವೂ ನಡೆಯಿತು. ಧೀಮಂತ ಸ್ವಾತಂತ್ರ್ಯ ಹೋರಾಟಗಾರ ಎಂ. ಎಸ್. ಹನುಮಂತ ರಾಯರು ದಿವಂಗತ ಮಾಲಿ ಮರಿಯಪ್ಪನವರ ನೇತೃತ್ವದಲ್ಲಿ, ಶಿರಾ ತಾಲ್ಲೂಕು ತುರುವನೂರು ಅರಣ್ಯ ಸತ್ಯಾಗ್ರಹದಲ್ಲಿ ಭಾಗವಹಿಸಿ ಬಂಧನಕ್ಕೊಳಗಾಗಿ ಕಾರಾ ಗೃಹ ಶಿಕ್ಷೆ ಅನುಭವಿಸಿದರು. 1937ರಲ್ಲಿ ಬೊಂಬಾಯಿ ನಗರದ ಮೇಯರ್, ಹಾಗೂ ಅಖಿಲಭಾರತ ಕಾಂಗ್ರೆಸ್ ಕಾರ್ಯಕಾರಿ ಮಂಡಲಿಯ ಸದಸ್ಯರೂ ಆಗಿದ್ದ ಶ್ರೀ ನಾರಿಮನ್ ರವರು ರಾಜ್ಯದ ಹಲವು ಕಡೆ ಸಂಚಾರಮಾಡಿ ಕಾಂಗ್ರೆಸ್‌ನ ಸಂದೇಶವನ್ನೂ. ಸ್ವಾತಂತ್ರ್ಯ ಹೋರಾಟದ ರೀತಿಗಳನ್ನೂ ಜನತೆಗೆ ತಿಳಿಸಿ ಚಳುವಳಿಯ ಬಗ್ಗೆ ಜಾಗೃತಿಯನ್ನುಂಟು ಮಾಡಿದರು. ಶ್ರೀ ಜಿ. ವಿ. ನಾರಾಯಣಮೂರ್ತಿಯವರಿಗೆ ಆ ಕಾಲದ ಪ್ರಭಾವಿ ವ್ಯಕ್ತಿಗಳಲ್ಲಿ ಇವರೊಬ್ಬರು.

1937ರಲ್ಲಿ ಶ್ರೀ ಹೆಚ್. ಸಿದ್ದಯ್ಯನವರನ್ನು ಚಿಕ್ಕನಾಯಕನಹಳ್ಳಿಗೆ ಬರಮಾಡಿ ಕೊಂಡು ತಾಲ್ಲೂಕ್ ಕಾಂಗ್ರೆಸ್ ಸಂಸ್ಥೆ ಸ್ಥಾಪಿಸಿದ ಕೀರ್ತಿ ಶ್ರೀ ಜಿ. ವಿ. ನಾರಾಯಣ ಮೂರ್ತಿ, ಎಂ. ಎಸ್. ಹನುಮಂತರಾವ್, ದಿ॥ ಎಸ್. ಮರುಡಯ್ಯನವರು, ದಿ॥ ಸಿ. ಹೆಚ್. ಲಿಂಗದೇವರು ರವರು ಮತ್ತು ಶ್ರೀ ಪಿ. ಎಸ್ ಮಲಿಯಪ್ಪನವರಿಗೆ ಸಲ್ಲುತ್ತದೆ. ಅಂದು ಚಿಕ್ಕನಾಯಕನಹಳ್ಳಿಯ ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸದಲ್ಲಿ ಅವಿಸ್ಮರಣೀಯದಿನ. ಊರಿನ ನಾಲ್ಕು ಬೀದಿಗಳಲ್ಲಿ ಅಭೂತಪೂರ್ವ ಮೆರವಣಿಗೆ ನಡೆಸ ಲಾಯಿತು. ಚಿಕ್ಕನಾಯಕನಹಳ್ಳಿಯ ತಾಲ್ಲೂಕಿನ ಜನತೆಗೆ ಸ್ವಾತಂತ್ರ್ಯದ ಕಿಡಿಯನ್ನು ಹೊತ್ತಿಸಿದ ಮಹಾಸುದಿನ. ಮಹಾತ್ಮಗಾಂಧಿಯವರ ಅಮರವಾಣಿಯನ್ನು ಜನತೆಯ ಹೃದಯದಲ್ಲಿ ಬಿತ್ತಿದ ಸುದಿನ. ಮಹಾತ್ಮಗಾಂಧಿ ಜನತೆಯ ಹೃದಯದ ಒಳಹೊಕ್ಕು ಒಂದು ಮಹಾಚೇತನವಾದರು. ಪಂಡಿತರಿಂದ ಪಾಮರರವರೆಗೆ, ಬಡವಬಲ್ಲಿದರೆನ್ನದೆ ಎಲ್ಲರ ಹೃದಯದಲ್ಲೂ ಮಹಾತ್ಮಗಾಂಧೀಜೀಯವರ ಆದರ್ಶಸ್ವಾತಂತ್ರ್ಯ ಪ್ರೇಮ ಶಾಶ್ವತವಾಗಿ ನೆಲೆಸಿದವು.

1937ರಿಂದೀಚೆಗೆ ಪ್ರತಿವರ್ಷ ಗಾಂಧೀಜಿಯವರ ಹುಟ್ಟುಹಬ್ಬವಾದ ಗಾಂಧೀ ಜಯಂತಿಯನ್ನು ವಿಜೃಂಭಣೆಯಿಂದ ಆಚರಿಸುತ್ತಾ ಬಂದರು. ಊರಿನ ನಾಲ್ಕೂ ಬೀದಿಗಳಲ್ಲಿ ಗಾಂಧೀಜಿಯವರ ಫೋಟೋ ಮೆರವಣಿಗೆಯಲ್ಲಿ ಒಯ್ಯುತ್ತಿದ್ದರು. 'ಮಹಾತ್ಮಗಾಂಧೀ ಕಿ ಜೈ' ಎನ್ನುವ ಉದ್ಘೋಷಣೆ ಮುಗಿಲುಮುಟ್ಟುತ್ತಿತ್ತು. ದೇಶ ಪ್ರೇಮಗೀತೆಗಳು, ಜನರ ಹೃದಯವನ್ನು ತಟ್ಟಿ ಹೋರಾಟದ ಸ್ಫೂರ್ತಿಯನ್ನು ಉದ್ದೀಪನಗೊಳಿಸುತ್ತಿದ್ದವು. ಜನತೆ ದೇಶದ ಹೋರಾಟದ ಬಗ್ಗೆ ಮಂತ್ರ ಮುಗ್ಧರಾ ಗಿದ್ದರು. 1939ರ ನಂತರ ಸ್ವಾತಂತ್ರ್ಯ ಹೋರಾಟ ಬಹುಬಿರುಸಿನಿಂದ ಸಾಗುತ್ತಿತ್ತು.

ತಾಲ್ಲೂಕ್ ಕಛೇರಿ ಮುಂದೆ ಪಿಕೆಟಿಂಗ್, ಪಾನನಿರೋಧ ಚಳುವಳಿ, ಈಚಲಮರ ಕಡಿಯುವುದು– ಇತ್ಯಾದಿ ಕಾರ್ಯಕ್ರಮಗಳಿಂದ ಜನ ಉತ್ತೇಜನಗೊಂಡರು.

1940–41ರಿಂದ ಮುಂದೆ ತಾಲ್ಲೂಕ್ ಕಾಂಗ್ರೆಸ್ ಸಂಸ್ಥೆ ಅಸಂಖ್ಯಾತ ಕಾರ್ಯಕರ್ತರನ್ನು ಪಡೆದು ಅದಮ್ಯ ಉತ್ಸಾಹದಿಂದ ತಾಲ್ಲೂಕಿನಾದ್ಯಂತ ಕಾರ್ಯಕ್ರಮಗಳನ್ನು ಏರ್ಪಡಿಸುತ್ತಿತ್ತು. ಎಂ. ಎಸ್. ಹನುಮಂತರಾವ್ ಜಿ. ವಿ. ನಾರಾಯಣಮೂರ್ತಿಯವರು ಪಿ. ಎಸ್ ಮಲಿಯಪ್ಪನವರು ದಿ॥ ಎನ್. ಮುರುಡಯ್ಯನವರು ದಿ॥ ಸಿ. ಹೆಚ್. ಲಿಂಗದೇವರುರವರು. ದಿ॥ ಸಿ. ಎಸ್. ತಮ್ಮಯ್ಯನವರು ಮತ್ತು ಎಸ್. ಟಿ. ವೆಂಕಟೇಗೌಡರು. ಇವರುಗಳ ಮುಖಂಡತ್ವದಲ್ಲಿ ಕಾಂಗ್ರೆಸ್ ಸಂಸ್ಥೆ ಒಂದು ಹೊಸ ಸ್ಫೂರ್ತಿ ಪಡೆಯಿತು. ದಿ॥ ಲಿಂಗದೇವರು ಮತ್ತು ಎಸ್. ಟಿ. ವೆಂಕಟೇಗೌಡರು ವಂಶ ಪಾರಂಪರ್ಯವಾಗಿ ಬಂದಿದ್ದ ಪಟೇಲಿ ವೃತ್ತಿಯನ್ನು ಬಿಟ್ಟು ಹೋರಾಟದಲ್ಲಿ ಭಾಗವಹಿಸಿದರು. ದಿ॥ ಸಿ. ಹೆಚ್. ಲಿಂಗದೇವರುರವರು ಆಗ ಪ್ರಜಾ ಪ್ರತಿನಿಧಿಸಭೆ ಸದಸ್ಯರಾಗಿದ್ದರು. ಅವರ ಗಂಭೀರ ವ್ಯಕ್ತಿತ್ವ ಜನಾನುರಾಗತ್ವ ಮತ್ತು ನಿರಹಂಕಾರ ನಡವಳಿಕೆ, ಜನತೆಯನ್ನು ಆಕರ್ಷಿಸಿದವು. ದಿ॥ ಎಸ್. ಮುರುಡಯ್ಯನವರ ಅತುಲ ಉತ್ಸಾಹ ಕೆಚ್ಚೆದೆ. ಬಂದೂಕಿನ ಗುಂಡಿಗೂ ಹೆದರದ ಅವರ ಧೈರ್ಯ ತಾಲ್ಲೂಕಿನ ಜನತೆಗೆ ಸ್ಫೂರ್ತಿ ಕೊಡುತ್ತಿತ್ತು. ಅವರಿಗೆ ಜನತೆ 'ಸರ್ದಾರ್' ಎಂಬ ಬಿರುದನ್ನು ಕೊಟ್ಟಿತ್ತು. ಸ್ವಾತಂತ್ರ್ಯ ಚಳುವಳಿಯಲ್ಲಿ ಶ್ರೀಯುತರ ಸೇವೆ ಅಪಾರ. ಶ್ರೀ ಪಿ. ಎಸ್. ಮಲಿಯಪ್ಪನವರು ಕಾಂಗ್ರೆಸ್ ಸಂಸ್ಥೆ ಕಾರ್ಯದರ್ಶಿಗಳಾಗಿ ಊರಿನ ಪುರಸಭೆ ಅಧ್ಯಕ್ಷರಾಗಿಯೂ ಸೇವೆಸಲ್ಲಿಸಿದ್ದಾರೆ. ಶ್ರೀಯುತರ ವಾಣಿ ಜನತೆಯಲ್ಲಿ ಜಾಗೃತಿಯನ್ನುಂಟು ಮಾಡುತ್ತಿತ್ತು. ರಾಜ್ಯದ ರಾಜಕೀಯ ಮುಖಂಡರುಗಳೂ ಅಧಿಕಾರಿಗಳೂ ಶ್ರೀಯುತರ ಮನೆಯಲ್ಲಿ ಆತಿಥ್ಯ ಪಡೆದು ಹೋಗುತ್ತಿದ್ದುದು ಇವರ ಪ್ರಭಾವೀ ವ್ಯಕ್ತಿತ್ವದ ಪ್ರತೀಕವಾಗಿದೆ. ಸ್ವಾತಂತ್ರ್ಯ ಚಳುವಳಿಯಲ್ಲಿ ಇವರ ಸೇವೆ ಸ್ಮರಣೀಯ.

ಶ್ರೀ ಜಿ. ವಿ. ನಾರಾಯಣಮೂರ್ತಿ ಮತ್ತು ಎಂ. ಎಸ್. ಹನುಮಂತರಾವ್ ರವರು ಸೇರಿ ಒಂದು ಕೈಬರಹದ ಪತ್ರಿಕೆ ಹೊರಡಿಸಿ ಅದಕ್ಕೆ 'ಅಗ್ನಿಕುಂಡ' ಎಂಬ ಹೆಸರನ್ನಿಟ್ಟು ಹೋರಾಟದ ಬಗ್ಗೆ ಮಾಹಿತಿಗಳನ್ನು ಪ್ರಚಾರಮಾಡುತ್ತಿದ್ದರು. ಕೆಲವು ವೇಳೆ ಸೈಕ್ಲೋಸ್ಟೈಲ್ ಮಾಡಿ ಪತ್ರಿಕೆಗಳನ್ನು ಹಂಚುತ್ತಿದ್ದರು. 1942ರ ಆಗಸ್ಟ್ ಕ್ರಾಂತಿಯ ಕಾಲಕ್ಕೆ ಎಂ. ಎಸ್. ಹನುಮಂತರಾವ್ ಮತ್ತು ಅವರ ಸ್ನೇಹಿತರು ಸೇರಿ ಅಂಚೆ ತಂತಿಗಳನ್ನು ಕತ್ತರಿಸುವ ಸಾಹಸಕ್ಕೆ ಕೈಹಾಕಿದ್ದರು. ಇದೇ ಸಂದರ್ಭದಲ್ಲಿ ಶ್ರೀ ಸಿ. ಎಸ್. ನಾಗಣ್ಣ ಸಿ. ಎಲ್. ಕಳಸಯ್ಯ, ಚಿಕ್ಕಣ್ಣ, ವೆಂಕಟರಾಮಯ್ಯ, ಎಸ್. ಲಿಂಗಯ್ಯ, ಬೆಂಗಳೂರು ತಿಮ್ಮಯ್ಯ ಮುಂತಾದವರ ಸೇವೆ ಸ್ಮರಣೀಯ. ಯುವಕರಲ್ಲಿ ಸಿ. ಎಸ್. ನಾರಾಯಣರಾವ್, ಸಿ. ವಿ. ಹುಚ್ಚಣ್ಣ, ಬಾಡಿಗಾರ್ಡ್ ಕೃಷ್ಣರಾವ್ ಮತ್ತು ಕುಪ್ಪೂರು ಗೋಪಾಲರಾವ್ ಇವರುಗಳ ಸೇವೆ ಅಪಾರ. ಸಿ. ಎಸ್. ನಾರಾಯಣರಾವ್

ಸತ್ಯಾಗ್ರಹದ ಅನೇಕ ಚಟುವಟಿಕೆಗಳಲ್ಲಿ ಭಾಗವಹಿಸಿ ಗಣನೀಯ ಸೇವೆಸಲ್ಲಿಸಿದ್ದಾರೆ. ಬಾಡಿಗಾರ್ಡ್ ಕೃಷ್ಣರಾವ್ ರವರು ತಾಲ್ಲೂಕಿನ ಒಳಗೂ ಹೊರಗೂ ಹೋರಾಡಿದ್ದಾರೆ. ಬೆಂಗಳೂರು ಆರ್ಯ ವಿದ್ಯಾಶಾಲೆಯಲ್ಲಿ ವ್ಯಾಸಂಗಮಾಡುತ್ತಿದ್ದಾಗ ಗುಂಡಿನೇಟು ತಿಂದಿದ್ದಾರೆ. ಬೆಂಗಳೂರು ಆರ್ಕಾಟ ಶ್ರೀನಿವಾಸಾಚಾರ್ ರಸ್ತೆಯ ಪೋಸ್ಟಾಫೀಸ್ ಸುಟ್ಟ ಕೀರ್ತಿಯ ಸಿಂಹಪಾಲು ಇವರಿಗೆ ಸಲ್ಲುತ್ತದೆ. ಭೂಗತರಾಗಿ ಅನೇಕ ಮಹತ್ವ ಪೂರ್ವ ಕಾರ್ಯಕ್ರಮಗಳನ್ನು ಕೈಗೊಂಡು ಬ್ರಿಟಿಷ್ ಸಾಮ್ರಾಜ್ಯಶಾಹಿ ವಿರುದ್ಧ ಹೋರಾಡಿದ್ದಾರೆ. ಶ್ರೀ ಕುಪ್ಪೂರು ಗೋಪಾಲ್‌ರಾವ್‌ರವರು ಶಾಲಾಕಾಲೇಜುಗಳಲ್ಲಿ ವ್ಯಾಸಂಗಮಾಡುತ್ತಿದ್ದ ಕಾಲದಲ್ಲಿ ಕ್ರಾಂತಿಕಾರಕ ಚಟುವಟಿಕೆಗಳಲ್ಲಿ ಭಾಗವಹಿಸಿದ್ದಾರೆ. ತಿಪಟೂರಿನಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದಾಗ, ವಿದ್ಯಾರ್ಥಿ ಕಾಂಗ್ರೆಸ್ ಸಂಘಟಿಸಿ ಅದರ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ. 1947ರ ಚಳುವಳಿಯಲ್ಲಿ ಚಿಕ್ಕನಾಯ್ಕನ ಹಳ್ಳಿಯಲ್ಲಿದ್ದು ಹೋರಾಡಿದ್ದಾರೆ.

ಅಂದಿನ ಯುವಜನ ಪೀಳಿಗೆಯ ಒಂದು ದೊಡ್ಡಪಡೆಯೇ ಇದ್ದಿತು. ಹಿರಿಯರು ಇವರನ್ನು 'ಯಮಳರು' ಎಂದು ಕರೆಯುತ್ತಿದ್ದರು. ಸಿ. ಎಸ್. ನಾರಾಯಣರಾವ್, ಸಿ. ಎ. ಹುಚ್ಚಣ್ಣ, ಶ್ರೀಪಾದಯ್ಯ, ಟೈಲರ್ ಎಶಿರಾಜು, ಶ್ರೀನಿವಾಸ, ಹುಲುಗಯ್ಯ ದೇವಾಂಗದ ನಾಗೇಶಯ್ಯ, ಸಣ್ಣಮುರುಡಯ್ಯ, ಮುರುಡಯ್ಯನವರ ಬಸವಣ್ಣ, ಬಾಡಿಗಾರ್ಡ್ ಕೃಷ್ಣರಾವ್, ಕುಪ್ಪೂರು ಗೋಪಾಲ್ ಮುಂತಾದ ಅನೇಕ ಮಂದಿ ತರುಣರ ಸೇವೆ ಸ್ಮರಣೀಯ ಈ ಯುವಕರ ಮುಖ್ಯಕೆಲಸಗಳೆಂದರೆ ಟೆಲಿಗ್ರಾಫ್ ತಂತಿಗಳನ್ನು ಕತ್ತರಿಸುವುದು, ಸೇಂದಿಲಾರಿಗಳ ಪೆಂಟಿ(ಬಿರುಟೆ) ಕೀಳುವುದು, ಹಾಗೂ ಪೋಲೀಸರ ಚಲನವಲಗಳ ಬಗ್ಗೆ ಹಿರಿಯರಿಗೆ ಮಾಹಿತಿ ಒದಗಿಸುವುದೇ ಆಗಿತ್ತು. ಸೇಂದಿ ತುಂಬಿದ ಲಾರಿಗಳು ಇವರ ಕಣ್ಣಿಗೆ ಬಿದ್ದರೆ ಸಾಕು, ಹಿಂದಿನಿಂದ ಹೋಗಿ ಲಾರಿಯ ಪೆಂಟಿಗಳನ್ನು ಕಿತ್ತು ಟೈರುಗಳನ್ನು ಕತ್ತರಿಸಿ ಪರಾರಿಯಾಗುತ್ತಿದ್ದರು. ಸೇಂದಿ ಯೆಲ್ಲಾ ಚೆಲ್ಲಿ ರಸ್ತೆ ತುಂಬಾ ಹರಿದು, ಆ ಸುತ್ತಮುತ್ತಲ ಪ್ರದೇಶವೆಲ್ಲಾ ವಾಸನೆ ಯಿಂದ ಕೂಡಿರುತ್ತಿತ್ತು. ಈ ಯುವಕರು ತೋರಿಸಿದ ಎರಡು ಸಾಹಸಗಳು ಉಲ್ಲೇಖನೀಯ.

ಒಂದು ಸಾರಿ ಸೇಂದಿ ಹೊತ್ತು ತರುತ್ತಿದ್ದ ಲಾರಿಯನ್ನು ಮೆಣಸಿನ ಕಾಯಿ, ಸಿದ್ಧಪ್ಪನ ತೋಪಿನ ಹತ್ತಿರ ತಡೆದು ನಿಲ್ಲಿಸಿದರು. ಈ ಉತ್ಸಾಹೀ ಯುವಕ ಸತ್ಯಾ ಗ್ರಹಿಗಳು. ಲಾರಿ ಟೈರುಗಳನ್ನು ಕತ್ತರಿಸುವುದು ಹಾಗೂ ಸೇಂದಿ ತುಂಬಿದ ಲಾರಿಯ ಪೆಂಟಿ ಕೀಳುವುದು ಅಂದಿನ ಉದ್ದಿಶ್ಯವಾಗಿತ್ತು. ಅದಕ್ಕಾಗಿ ರಸ್ತೆಗೆ ಅಡ್ಡಲಾಗಿ ದೊಡ್ಡ ದೊಡ್ಡ ಕಲ್ಲುಬಂಡೆಗಳನ್ನು ಉರುಳಿಸಿದರು. ಮುಳ್ಳುಗಳನ್ನು ಕಡಿದು ತಂದು ರಸ್ತೆಗೆ ಹಾಕಿದರು. ರಸ್ತೆಪಕ್ಕದಲ್ಲಿ ಇದ್ದ ಒಂದು ದೊಡ್ಡ ಕಲ್ಲುಬಂಡೆಯನ್ನು ಉರುಳಿಸಿದ ರಭಸಕ್ಕೆ ಅದರ ತಳದಲ್ಲೆಲ್ಲೋ ಇದ್ದ ಒಂದು ಭಯಂಕರ ನಾಗರ ಹಾವು ಜಪ್ಪಿ

ಹೋಗಿತ್ತು. ಘನತರಕಾರ್ಯದ ಉತ್ಸಾಹದಲ್ಲಿ ಇದ್ದ ಈ ಬಿಸಿರಕ್ತದ ಯುವಕರಿಗೆ ಇದಾವುದರ ಪರಿವೆಯೂ ಇರಲಿಲ್ಲ. ಅಷ್ಟರಲ್ಲಿ ಲಾರಿ ಬಂದುನಿಂತಿತು. ಯುವಕರು ಅದ್ದ ಗಟ್ಟಿದರು. ವಿಚಾರ ಹೇಗೋ ಪೋಲೀಸರಿಗೆ ತಿಳಿದು ಪೋಲೀಸ್ ವ್ಯಾನೂಬಂತು. ಯುವಕರು ಲಾರಿ ಚಾಲಕನನ್ನು ಕೀಟಲೆ ಮಾಡಲು ಶುರುಮಾಡಿದರು. ಚಾಲಕ ನಾದರೋ ಒರಟು ಸ್ವಭಾವದ ಕಟ್ಟುಮಸ್ತಾದ ವ್ಯಕ್ತಿ. ಅವನ ಹತ್ತಿರ ಒಂದು ಪಿಸ್ತೂಲು ಇತ್ತು. ಚಾಲಕ ಪಿಸ್ತೂಲು ಹಿಡಿದು ನಿಂತಿದ್ದಾನೆ. ಪೋಲೀಸಿನವರು ಲಾರಿ ಹಿಡಿದು ನಿಂತಿದ್ದಾರೆ. ಇದಾವುದಕ್ಕೂ ಜಗ್ಗುವಂತಿಲ್ಲ ಈ ತರುಣ ಉತ್ಸಾಹಿ ಸತ್ಯಾಗ್ರಹಿಗಳ ಪಡೆ. ಪೋಲೀಸರ ಮತ್ತು ಚಾಲಕನ ಕಣ್ಣು ತಪ್ಪಿಸಿ ಒಬ್ಬ ಯುವಕ ಓಡಿಹೋದ ಹೋಗಿ ಲಾರಿ ಬೆಂಕಿ ಕೆತ್ತಿ ಅಲ್ಲಿಂದ ಪರಾರಿಯಾದನು. ಮತ್ತೊಬ್ಬ ಟೈರನ್ನು ಕತ್ತರಿಸಿ ಚಕ್ರದ ಗಾಳಿಬಿಟ್ಟು ನುಸುಳಿಕೊಂಡನು. ಪೋಲೀಸಿನವರು ಇನ್ನೇನು ಯುವಕರ ಮೇಲೆ ದೌರ್ಜನ್ಯವೆಸಗಬೇಕೆನ್ನುವಷ್ಟರಲ್ಲಿ ಜಿ. ವಿ. ನಾರಾಯಣಮೂರ್ತಿ ಯವರಿಗೆ ವಿಚಾರ ತಿಳಿದು ಉರಿಬಿಸಿಲಿನಲ್ಲಿ ಓಡೋಡಿಬಂದು ಪೋಲೀಸಿನವರಿಗೆ ಸಮಾಧಾನ ಹೇಳಿ ಆಗಬಹುದಿದ್ದ ಅನಾಹುತವನ್ನು ತಪ್ಪಿಸಿದರು.

ಇಷ್ಟೆಲ್ಲಾ ಆದ ಮೇಲೆ ಈ ಉತ್ಸಾಹೀ ತರುಣರು ಜಯಕಾರ ಮಾಡುತ್ತಾ ಮನೆಗೆ ಹಿಂತಿರುಗಿ ಬರುತ್ತಿದ್ದಾಗ ಪೋಲೀಸರು ಇವರನ್ನು ಹಿಂಬಾಲಿಸಿದರು. ಅತ್ಯುಳ ಉತ್ಸಾಹದಭರದಲ್ಲಿದ್ದ ಈ ಯುವಕರು ಪೋಲೀಸಿನವರನ್ನು ಚುಡಾಯಿಸಲು ಪ್ರಾರಂಭಿಸಿದರು. ಅಷ್ಟರಲ್ಲಿ ಒಬ್ಬ ಉತ್ಸಾಹಿತರುಣ ಪೋಲೀಸ್ ದಫೇದಾರನ ಟೋಪಿಯನ್ನು ಕಿತ್ತುಹಿಸಿದನು. ಇದೆಲ್ಲ ಪೂರ್ವಯೋಜಿತವೋ ಎಂಬಂತೆ ಇನ್ನೊಬ್ಬ ಉತ್ಸಾಹಿ ಪೆಟ್ರೋಲ್ ತಂದನು. ಮತ್ತೊಬ್ಬ ಬೆಂಕಿಕಡ್ಡಿ ತಂದನು. ಎಲ್ಲರೂ ನೋಡು ನೋಡುತ್ತಿದ್ದಂತೆಯೇ ಬೆಂಕಿ ಇಟ್ಟರು. ಕ್ಷಣ ಮಾತ್ರದಲ್ಲಿ ಟೋಪಿ ಉರಿದು ಭಸ್ಮವಾಯಿತು. ಅದುವರೆವಿಗೂ ಇದ್ದ ಪೋಲೀಸರ ತಾಳ್ಮೆ ಅಳಿದು ಇವರ ಮೇಲೆ ದೌರ್ಜನ್ಯಕ್ಕೆ ನುಗ್ಗುವಷ್ಟರಲ್ಲಿ ಅಲ್ಲಿಂದ ಎಲ್ಲರೂ ಪರಾರಿ.

1942ರಲ್ಲಿ ಮತ್ತೊಂದು ಪ್ರಸಂಗ ನಡೆಯಿತು. 1942ರ ಕ್ವಿಟ್ ಇಂಡಿಯಾ ಚಳುವಳಿಯ ಸಂದರ್ಭ. ತುಮಕೂರು ಕಾಲೇಜಿನಲ್ಲಿ ವ್ಯಾಸಂಗಮಾಡುತ್ತಿದ್ದ ವಿದ್ಯಾರ್ಥಿಗಳು ಹಲವು ಗುಂಪುಗಳಾಗಿ ತಾಲ್ಲೋಕ್ ಕೇಂದ್ರಗಳಿಗೆ ಬಂದು ಕ್ವಿಟ್ ಇಂಡಿಯಾ ಚಳುವಳಿ ಬಗ್ಗೆ ಜಾಗೃತಿ ಹಾಗೂ ಸರಕಾರದ ಯುದ್ಧೋದ್ಯಮಕ್ಕೆ ಯಾವುದೇ ವಿಧವಾದ ನೆರವು ನೀಡಬಾರದೆಂದು ತಿಳುವಳಿಕೆ ನೀಡುತ್ತಿದ್ದರು. ತುಮಕೂರಿನಿಂದ ಹೊರಟ ಗುಂಪು ಚಿ. ನಾ. ಹಳ್ಳಿ ತಾಲ್ಲೂಕಿಗೂ ಬಂತು, ಅದರ ನಾಯಕತ್ವವನ್ನು ಇದೇ ತಾಲ್ಲೂಕಿನವರಾಗಿದ್ದ ಎ. ಜಿ. ಮರಿಯಪ್ಪನವರು ವಹಿಸಿದ್ದರು. ನೇರವಾಗಿ ಈ ಯುವಕರು ಶ್ರೀ ಟಿ. ಬಿ. ನಾರಪ್ಪನ ಮನೆಗೆ ಹೋಗಿ ಆತಿಥ್ಯ ಪಡೆದರು. ಪೋಲೀಸಿನವರು ಈ ಗುಂಪಿನ ಮೇಲೆ ನಿಗಾ ಇಟ್ಟಿದ್ದರು. ವಿಷಯ ತಿಳಿದು ಕಾವಲು ಪಡೆಯ ಪೋಲೀಸ್

ವ್ಯಾನು ಇವರನ್ನು ಹಿಂಬಾಲಿಸಿತು. ಆದರೆ ಕಣ್ಣು ಮುಚ್ಚಿ ತೆರೆಯುವುದರಲ್ಲಿ ಎಲ್ಲ ಹುಡುಗರೂ ಮಂಗಮಾಯ. ಪೋಲೀಸಿನವರು ಅಪರ ತಪಾಸಣೆಯಲ್ಲಿ ತೊಡಗಿದರು. ಅಷ್ಟರಲ್ಲಿ ವಿದ್ಯಾರ್ಥಿಗಳು ಸೆಟ್ಟೀಕೆರೆಯಲ್ಲಿ ವಿಧ್ವಂಸಕ ಕೃತ್ಯಗಳಲ್ಲಿ ತೊಡಗಿರುವರೆಂಬ ಸುದ್ದಿ ಮುಟ್ಟಿ ಕಾವಲು ಪಡೆಯ ವ್ಯಾನು ಸೆಟ್ಟೀಕೆರೆ ಕಡೆ ಹೊರಟಿತು. ಆ ವೇಳೆಗಾಗಲೇ ಪೋಲೀಸಿನವರು ಈ ವಿದ್ಯಾರ್ಥಿಗಳನ್ನು ಹಿಡಿಯಲು ಬರುತ್ತಿದ್ದಾರೆಂಬ ಸುದ್ದಿ ಹಬ್ಬಿ ಸಾಲುಹಳ್ಳಿಯ ಜನರು ಒಟ್ಟಾಗಿ ಕಲೆತು ಸೆಟ್ಟೀಕೆರೆ ಈಚೆ ಇರುವ 'ಮಹಾನವಮಿ' ಮಂಟಪದ ಬಳಿ ರಸ್ತೆಗೆ ಅಡ್ಡವಾಗಿ ನಿಂತರು. ನೂರಾರು ಮಂದಿ ರೈತರು ರಸ್ತೆ ಉದ್ದಕ್ಕೂ ನಿಂತಿದ್ದರು. ಆ ಸಮಯಕ್ಕಾಗಲೇ ರೈತರು ವಿದ್ಯಾರ್ಥಿಗಳನ್ನು ಕುರಿದೊಪ್ಪ ದನದ ಕೊಟ್ಟಿಗೆ ಹಾಗೂ ಹುಲ್ಲುಮೆದೆಗಳ ಅಡಿಯಲ್ಲಿ ಅಡಗಿಸಿದ್ದರು. ವ್ಯಾನು ಬಂದು ಆ ಜನಸ್ತೋಮದ ಮಧ್ಯೆ ನಿಂತಿತು. ಅಷ್ಟರಲ್ಲಿ ವಿಷಯ ತಿಳಿದ ಜಿ. ವಿ. ನಾ. ಮತ್ತು ಎಂ. ಎಸ್. ಹನುಮಂತರಾವ್ ರವರು ಬಂದು ಸೇರಿದರು. ಅದೇನನ್ನಿಸಿತೋ ಆ ಪೋಲೀಸರಿಗೆ ಇದ್ದಕ್ಕಿದ್ದಂತೆ ವ್ಯಾನ್ ಹತ್ತಿ ಹಿಂತಿರುಗಿದರು.

ತಾಲ್ಲೂಕಿನ ಜನತೆಯಲ್ಲಿ ರಾಷ್ಟ್ರೀಯ ಪ್ರಜ್ಞೆ ಸೇವಾಮನೋಭಾವ ಮೂಡಿಸುವ ಗುರುತರ ದೃಷ್ಟಿಯಿಂದ ಜಿ.ವಿ.ನಾ. ದಿ.ಸಿ.ಹೆಚ್. ಲಿಂಗದೇವರು ದೇಶೀಯ ವಿದ್ಯಾಪೀಠ ಸಾರ್ವಜನಿಕ ಶಿಕ್ಷಣ ಸಂಸ್ಥೆಯನ್ನು 1942ರಲ್ಲಿ ಸ್ಥಾಪಿಸಿದರು. ಸ್ವಾತಂತ್ರ್ಯ ಚಳುವಳಿಯಲ್ಲಿ ದೇಶೀಯ ವಿದ್ಯಾಪೀಠದ ಪಾತ್ರ ಮಹತ್ತರವಾದುದು. ತಾಲ್ಲೂಕಿನ ಎಲ್ಲ ಕಡೆಯಿಂದ ವಿದ್ಯಾರ್ಥಿಗಳು ವಿದ್ಯಾರ್ಜನೆಗೆ ಬಂದು ಸೇರಿದರು. ಸೇವಾದಳ ಕವಾಯಿತು, ರಾಷ್ಟ್ರಗೀತೆಗಳ ಅಭ್ಯಾಸ ಇವು ವಿದ್ಯಾರ್ಜನೆಯ ಒಂದು ಭಾಗವಾದುವು. ಇದರ ಜೊತೆಗೆ ಊರಿನ ಯುವಕರಿಗೂ ಸೇವಾದಳ ಕವಾಯಿತು. ರಾಷ್ಟ್ರಗೀತೆಗಳ ಅಭ್ಯಾಸ. ಪ್ರಭಾತ್ ಫೇರಿ, ಗಾಂಧೀ ಜಯಂತಿ ಸಪ್ತಾಹ ಇತ್ಯಾದಿ ಕಾರ್ಯಕ್ರಮಗಳ ಬಗ್ಗೆ ತರಪೇತಿ ನೀಡಲಾಯಿತು. ದೇಶೀಯ ವಿದ್ಯಾಪೀಠ ಅಸಂಖ್ಯಾತ ರಾಷ್ಟ್ರಪ್ರೇಮಿ ವಿದ್ಯಾರ್ಥಿಗಳನ್ನು ದೇಶಕ್ಕೆ ನೀಡಿದೆ. ಅಂದಿನ ಯುವಕರಿಗೆ ದೇಶೀಯ ವಿದ್ಯಾಪೀಠವೇ ಚಳುವಳಿಯ ಕಾರ್ಯಕ್ರಮದ ಕೇಂದ್ರವಾಗಿತ್ತು. ಯುವಕರಲ್ಲಿ ರಾಷ್ಟ್ರಸೇವಾಮನೋಭಾವವನ್ನು ಮೂಡಿಸಿ ದೇಶದ ಸರ್ವತೋಮುಖ ಏಳಿಗೆಗೆ ಶ್ರಮಿಸುವ ಶ್ರದ್ಧಾವಂತ ನಿಷ್ಠಾವಂತ ಅಧ್ಯಾಪಕರ ಕೊರತೆಯದ್ದು ಒಂದು ಸಮಯೋಗ. ಆ ಕಾಲದಲ್ಲಿ ಸಹಕಾರಿ ಇಲಾಖೆಯಲ್ಲಿ ಇನ್‌ಸ್ಪೆಕ್ಟರ್ ನೌಕರಿಯಲ್ಲಿದ್ದ ಶ್ರೀ ಟಿ. ತ. ಈಶ್ವರನ್‌ರವರು ಆ ಕೆಲಸಕ್ಕೆ ರಾಜೀನಾಮೆಯಿತ್ತು ದೇಶೀಯ ವಿದ್ಯಾಪೀಠದಲ್ಲಿ ಅಧ್ಯಾಪಕ ವೃತ್ತಿ ಕೈಗೊಂಡರು. ಅದರ ಮುಂದಿನ ವರ್ಷ ಶ್ರೀ ಟಿ. ನ. ಕೃಷ್ಣರಾಯರು ಅಧ್ಯಾಪಕರಾಗಿ ಬಂದು ಖಾದಿ ಪ್ರಚಾರ, ಹಿಂದಿ ಪ್ರಚಾರ, ಸ್ವಯಂಸೇವಕದಳದ ಕವಾಯಿತು, ಮುಂತಾದ ಜನೋಪಯೋಗಿ ಕಾರ್ಯಕ್ರಮಗಳನ್ನು ಬಹುಶ್ರದ್ಧೆಯಿಂದ ಸೇವಾ ಮನೋಭಾವದಿಂದ ಕಂಕಣಬದ್ಧರಾಗಿ ನೀಡಿದರು. 1947ರ ಜವಾಬ್ದಾರಿ ಸರಕಾರದ ಚಳುವಳಿಯಲ್ಲಿ ಶ್ರೀ ಟಿ. ತ. ಈಶ್ವರನ್ ಮತ್ತು ಟಿ. ನ. ಕೃಷ್ಣರಾವ್ ಇಬ್ಬರೂ ಬಂಧಿತರಾಗಿ ಶಿಕ್ಷೆ ಅನುಭವಿಸಿದರು.

ಶ್ರೀ ಕೆ. ಎಸ್. ರಾಮಚಂದ್ರರಾವ್‌ರವರ ಹೋಟಲ್ ಮೇಲೆ ರಾಷ್ಟ್ರಧ್ವಜ ಸದಾ ಕಾಲ ಹಾರಾಡುತ್ತಿತ್ತು. 1946ರಲ್ಲಿ ಇಲ್ಲಿಯ ಒಬ್ಬ ಸಬ್‌ಇನ್‌ಸ್ಪೆಕ್ಟ್‌ರ್ ಮುಸ್ಲಿಂ ಜಾತಿಯವರಾಗಿದ್ದು ಹೊಟೆಲ್ ಮೇಲಿನ ರಾಷ್ಟ್ರಧ್ವಜವನ್ನು ಪೋಲೀಸ್ ಕುಮ್ಮಕ್ಕಿನಿಂದ ಕೆಳಗಿಳಿಸಿದರು, ಇದರಿಂದ ಊರಿನಲ್ಲಿ ಪ್ರಕ್ಷುಬ್ಧ ವಾತಾವರಣ ಏರ್ಪಟ್ಟಿತು. " ಪೋಲೀಸ್ ಸಬ್‌ಇನ್‌ಸ್ಪೆಕ್ಟರ್‌ರಿಂದ ರಾಷ್ಟ್ರಧ್ವಜಕ್ಕೆ ಅಪಮಾನ " ಎಂಬ ಶೀರ್ಷಿಕೆ ಪ್ರಮುಖ ಪತ್ರಿಕೆಗಳ ಮುಖಪುಟದಲ್ಲಿ ಪ್ರಕಟವಾಯಿತು. ಅಸೆಂಬ್ಲಿಯಲ್ಲಿ ಇದರ ಬಗ್ಗೆ ಬಿಸಿಬಿಸಿ ಚರ್ಚೆಯಾಗಿ ಇಡೀ ರಾಜ್ಯದ ಜನತೆಯ ಗಮನವನ್ನು ಸೆಳೆಯಿತು. ಶ್ರೀಯುತರು ಕೈಗೊಂಡ "ಅರಮನೆ ಸತ್ಯಾಗ್ರಹದ ಹೋರಾಟದ ಕಥೆ, ಒಂದು ಕರುಣ ಕಥೆ."

1947ರಲ್ಲಿ ನಮ್ಮ ದೇಶ ಪಾರತಂತ್ರ್ಯದಿಂದ ಬಿಡುಗಡೆಯಾದ ಮೇಲೆ ಎಲ್ಲಾ ದೇಶೀಯ ಸಂಸ್ಥಾನಗಳಲ್ಲೂ ಸ್ವಾತಂತ್ರ್ಯದ ಇಚ್ಛೆ ಬಲವಾಗಿ ಶ್ರೀ ಕೆ.ಸಿ. ರೆಡ್ಡಿಯವರು ಮೈಸೂರು ಕಾಂಗ್ರೆಸ್ ಅಧ್ಯಕ್ಷರಾದ ಮೇಲೆ ರಾಜ್ಯಾದ್ಯಂತ ಸಂಚರಿಸಿ 'ಜವಾಬ್ದಾರೀ ಸರಕಾರ ದಿನಾಚರಣೆ' ಮತ್ತು ಸತ್ಯಾಗ್ರಹವನ್ನು ಕೈಗೊಳ್ಳಬೇಕೆಂದು ಆದೇಶ ನೀಡಿದರು. ಅದೇ ತಿಂಗಳು ಕೆ. ಸಿ. ರೆಡ್ಡಿಯವರು ಚಿಕ್ಕನಾಯಕನಹಳ್ಳಿಗೂ ಬಂದು ಚಳುವಳಿಯನ್ನು ಕೈಗೊಳ್ಳಬೇಕೆಂದು ಜನತೆಯಲ್ಲಿ ಮನವಿ ಮಾಡಿಕೊಂಡರು. ಶ್ರೀಯುತರ ಜೊತೆ ಬಂದಿದ್ದ ದಿ. ತಾಳ್ಕೆರೆ ಸುಬ್ರಹ್ಮಣ್ಯಂರವರು ಅಂದು ಮಾಡಿದ ಭಾಷಣ ಚಿರಸ್ಮರಣೀಯ.

ಸೆಪ್ಟೆಂಬರ್ ಒಂದನೇ ತಾರೀಖು ಸಾರ್ವತ್ರಿಕ ಹರತಾಳದಿಂದ ಕಛೇರಿ ಮುಂದೆ ಸತ್ಯಾಗ್ರಹ ಪ್ರಾರಂಭವಾಯಿತು. ಅಂದು ತಾಲ್ಲೂಕಿನಾದ್ಯಂತ ಎಲ್ಲ ಕಡೆಗಳಿಂದ ಸಹಸ್ರ ಸಹಸ್ರಸಂಖ್ಯೆಯಲ್ಲಿ ಸತ್ಯಾಗ್ರಹಿಗಳು ನೆರೆದಿದ್ದರು. ಊರಿನ ಜನ ಸ್ತ್ರೀಪುರುಷರಾದಿಯಾಗಿ ಬೇಧಭಾವಗಳನ್ನು ಮರೆತು ಸತ್ಯಾಗ್ರಹಿಗಳಿಗೆ ಕುಡಿಯಲು ಎಳನೀರು, ಮಜ್ಜಿಗೆ, ಪರಬತ್ತು, ತಿನ್ನಲು ತಿಂಡಿ ಊಟಗಳನ್ನು ಒದಗಿಸುತ್ತಿದ್ದರು. ಊರಿಗೇ ಊರೇ ಸತ್ಯಾಗ್ರಹದ ಭರದಲ್ಲಿ ಮೈಮರೆತಿತ್ತು. ಅಂದೇ ರಾಜ್ಯ ಮಟ್ಟದಲ್ಲಿ ಎಲ್ಲಾ ಮುಖಂಡರ ಬಂಧನವಾಗಿತ್ತು. ಅಸಂಖ್ಯಾತ ಜನಸ್ತೋಮ ಅಂದು ತಾಲ್ಲೂಕ್ ಕಛೇರಿಗೆ ಮುತ್ತಿಗೆ ಹಾಕಿತ್ತು. ಕಛೇರಿಯ ಮುಂದೆ ಧರಣಿ ಕುಳಿತು ಅಧಿಕಾರಿಗಳನ್ನು ಒಳಕ್ಕೂ ಹೊರಕ್ಕೂ ಬಿಡದಂತೆ ಸರ್ಪಕಾವಲಿನ ವ್ಯವಸ್ಥೆಯಾಗಿತ್ತು. ಕಛೇರಿಯ ಸುತ್ತಲೂ ಯುವಕರನ್ನೊಳಗೊಂಡ ಸ್ತ್ರೀಪುರಷರಾದಿಯಾಗಿ ಎಲ್ಲಾ ಸತ್ಯಾಗ್ರಹಿಗಳೂ ಕಛೇರಿ ಬಾಗಿಲಿನಿಂದ ಸುತ್ತುವರೆದು ಸಾಲಾಗಿ ಮಲಗಿದ್ದರು. ಇದು ಒಂದು ರೀತಿಯ ಭದ್ರ ಕೋಟೆಯಂತೆ ತೋರುತ್ತಿತ್ತು. ಬೆಳಿಗ್ಗೆ 8ರಿಂದ ಸಂಜೆ 5 ರವರೆಗೆ ಧರಣಿ ನಡೆಯುತ್ತಿತ್ತು. ಬೆಳಿಗ್ಗೆ ಪ್ರಾರ್ಥನೆಯಿಂದ ಆರಂಭ ಸಂಜೆ ಪ್ರಾರ್ಥನೆಯಿಂದ ಮುಕ್ತಾಯ. ಯಾವಾಗಲೂ ಚಳುವಳಿ ಶಾಂತಿ ಮತ್ತು ಶಿಸ್ತಿನಿಂದ ನಡೆಯುತ್ತಿತ್ತು.

ಅಂದು ಸೇಂದಿ ಅಂಗಡಿಗಳಲ್ಲಿ ವ್ಯಾಪಾರ ಸ್ಥಗಿತ ಗೊಂಡಿತ್ತು. ಕಛೇರಿ ಕೆಲಸ ನಿಂತಿತು. ಸಪ್ಟೆಂಬರ್ 3ನೇ ತಾರೀಖು ಉಪಾಧ್ಯಾಯರ ಸಂಬಳದ ದಿನ. 3ನೇ ತಾರೀಖು ತಾಲ್ಲೂಕಿನ ಎಲ್ಲಾ ಉಪಾಧ್ಯಾಯರೂ ಸಂಬಳಕ್ಕೆ ಕಛೇರಿಗೆ ಬಂದಿದ್ದಾರೆ, ಕಛೇರಿಯು ಕೆಲಸ ನಿರ್ವಹಿಸುತ್ತಿಲ್ಲವಾದ್ದರಿಂದ ಅಧ್ಯಾಪಕರುಗಳಿಗೆ ಸಂಬಳವಿಲ್ಲ. ಮತ್ತೆ ಬರಲು ತೊಂದರೆ ಅಧ್ಯಾಪಕರೆಲ್ಲ ಒಟ್ಟುಗೂಡಿ ಜಿ. ವಿ. ನಾ. ಮತ್ತು ಇತರೆ ಮುಖಂಡರನ್ನು ಕಂಡು ತಮ್ಮ ತೊಂದರೆಯನ್ನು ತೋಡಿಕೊಂಡರು. ಅಧ್ಯಾಪಕರಿಗೆ ಅನುಕೂಲ ವಾಗಲೆಂದು ಅಂದು ಮಧ್ಯಾಹ್ನ ಕಛೇರಿಕೆಲಸಕ್ಕೆ ಆವಕಾಶ ಕೊಟ್ಟು ಸತ್ಯಾಗ್ರಹವನ್ನು ಅರ್ಧದಿನದ ಮಟ್ಟಿಗೆ ನಿಲ್ಲಿಸಲಾಯಿತು, ಆದರೆ ಮಾರನೆಯ ದಿನವೇ ಮತ್ತೆ ಹರತಾಳ ಪ್ರಾರಂಭವಾಯಿತು.

ಸೆಪ್ಟಂಬರ್ 6ರಂದು ಪೋಲೀಸ್ ವಿಧಿ 45 ಜಾರಿಗೆ ಬಂದಿತು. ಸಭೆ ಸೇರು ವಂತಿಲ್ಲ. ಯಾವ ಮುನ್ಸೂಚನೆಯೂ ಇಲ್ಲದೆ ಯಾವ ಗಳಿಗೆಯಲ್ಲಿ ಯಾರನ್ನೂ ಬೇಕಾದರೂ ಬಂಧಿಸಬಹುದಾಗಿತ್ತು. ಆ ಸಂದರ್ಭದಲ್ಲಿ ಯುವಕರ ಪಾತ್ರಸ್ಮರಣೀಯ. ಪೋಲೀಸರ ಚಲನವಲನಗಳನ್ನು ತಿಳಿದು ಹಿರಿಯರಿಗೆ ವರದಿಮಾಡುತ್ತಿದ್ದರು. ಸರದಿ ಪ್ರಕಾರ ಶಾಸನ ಭಂಗಮಾಡಿ ಬಂಧಿತರಾಗಬೇಕೆಂದು ಒಂದು ಪಟ್ಟಿಯೇ ಸಿದ್ಧವಾಯಿತು. ಸರದಿ ಪ್ರಕಾರ ಶ್ರೀ ಜಿ. ವಿ. ನಾ. ಎಸ್. ಮುರುಡಯ್ಯನವರು ಸಿ.ಎಸ್. ನಾಗಣ್ಣನವರು ಡಿ. ಸಿ. ಹೆಚ್. ಲಿಂಗದೇವರು, ಎಂ. ಎಸ್. ಹನುಮಂತರಾವ್ ಮತ್ತು ಲಲಿತಾ ಪಂಡಿತರು ಮುಂತಾದವರು ಬಂಧಿತರಾಗಿ ಶಿಕ್ಷೆಗೊಳಗಾದರು.

ಚಳುವಳಿ ಮತ್ತಷ್ಟು ಭರದಿಂದ ಸಾಗಿತ್ತು. ಕಛೇರಿ ಮುಂದೆ ಪಿಕೆಟಿಂಗ್ ಹರತಾಳ, ಪಾನನಿಷೇಧ ಸತ್ಯಾಗ್ರಹ, ಸೇಂದಿ ಅಂಗಡಿಗಳ ಮುಂದೆ ಪಿಕೆಟಿಂಗ್, ಈಚಲ ಮರ ಕಡಿಯುವುದು ಹಾಗೂ ತಾಲ್ಲೂಕ್‌ಕಛೇರಿ ಮುಂದೆ ಇದ್ದ ಗಂಧದ ಮರ ಕಡಿಯುವುದು ಇತ್ಯಾದಿ ಕಾರ್ಯಕ್ರಮಗಳಿಂದ ಚಳುವಳಿ ಮುನ್ನುಗ್ಗಿತು. ಗಂಧದ ಮರ ಕಡಿಯುವ ಸಾಹಸಕ್ಕೆ ಕೈಹಾಕಿ ಅನೇಕ ಮಂದಿ ಯುವಕರು ಶಿಕ್ಷೆಗೊಳಗಾದರು. ಕು. ಅನ್ನಪೂರ್ಣಮ್ಮ ಎಂಬ ಧೀರೆ ರಾಷ್ಟ್ರಧ್ವಜವನ್ನು ಕಛೇರಿಯ ಮೇಲೆ ಹಾರಿಸುವ ದಿಟ್ಟಸಾಹಸವನ್ನು ತೋರಿಸಿದುದು ಹೆಮ್ಮೆಯ ವಿಷಯ. ಶ್ರೀಮತಿಯರಾದ ಗೌರಮ್ಮ ನಾಗಮ್ಮ ಭಾಗಮ್ಮ ಹಾಗೂ ಗಂಗಾದೇವಿ ಇತ್ಯಾದಿ ಮಹಿಳೆಯರು ಅತ್ಯಂತ ಉತ್ಸಾಹ ದಿಂದ ಸತ್ಯಾಗ್ರಹಗಳಲ್ಲಿ ಭಾಗವಹಿಸುತ್ತಿದ್ದುದು ಸ್ಮರಣೀಯ.

ಶ್ರೀ ಪಿ. ಎಸ್. ಮುಲಿಯಪ್ಪನವರು ಮತ್ತು ಮುಲಿಯಮ್ಮನವರು ಸರದಿ ಪ್ರಕಾರ ಶಾಸನ ಭಂಗಮಾಡಿ ಬಂಧಿತರಾಗಬೇಕಿತ್ತು. ಆದರೆ ಯಾರನ್ನೂ ಬಂಧಿಸ ಕೂಡದೆಂದ ಆದೇಶ ಪೋಲೀಸರಿಗೆ ಮೇಲಿನವರಿಂದ ಬಂದಿದ್ದರಿಂದ ಅವರ ಬಂಧನ ನಡೆಯಲಿಲ್ಲ. ಆ ಸಂದರ್ಭದಲ್ಲಿ ಚಿಕ್ಕನಾಯಕನಹಳ್ಳಿ ಟೌನಿನ ಮತ್ತು ತಾಲ್ಲೂಕಿನ

ಅನೇಕ ಮಹನೀಯರ ಸೇವೆ ಸ್ತುತ್ಯವಾದುದು. ಅವರಲ್ಲಿ ಕೆಲವರ ಹೆಸರುಗಳನ್ನು ಇಲ್ಲಿ ಸ್ಮರಿಸಲಾಗಿದೆ.

ಜೆ. ಸಿ. ಪುರದ ವೆಂಕಟೇಗೌಡರು, ಗಂಗಣ್ಣ, ಶೆಟ್ಟೀಕೆರೆ ಗಂಗಣ್ಣ, ಭೈರಪ್ಪ ಮಲ್ಲಿಗೊಂಡನಹಳ್ಳಿ ಗಂಗಣ್ಣ, ಬೆಳ್ಳಾರದ ಗಂಗಣ್ಣ, ಸಾಲ್ಕಟ್ಟೆ ನಾರಾಯಣ ಸ್ವಾಮಿನಾಯ್ಡು, ಬೇಗೂರಿ ಚನ್ನಪ್ಪ, ಮೇಲನಹಳ್ಳಿ ಗಂಧಯ್ಯ, ಮಾರಸಂದ್ರದ ಶಿವಣ್ಣ, ಬೆಳಗುಲಿ ಬಿ. ಆರ್. ಹೊನ್ನಪ್ಪ. ಸಿದ್ದಲಿಂಗಮೂರ್ತಿ. ಎ. ಹೆಚ್. ಸಿದ್ದಪ್ಪ. ಬಿ. ವೆಂಕಟ ರಾವ್. ಜಿ. ಆರ್. ಹೊನ್ನಪ್ಪ, ಸಿದ್ಧಲಿಂಗಮಠ, ಸಿ. ಆರ್. ಆದಿನಾರಾಯಣರಾವ್. ತರಬೇನಹಳ್ಳಿ ಕೆ. ಆರ್. ಬಸಪ್ಪ ಚಿಕ್ಕಣ್ಣ, ಬುಕ್ಕನಾಳದ ಗಂಗಾಚಾರಿ. ಗವಿರಂಗಯ್ಯ, ನವಿಲೆಯ ಹನುಮಂತಪ್ಪ, ಹನುಮಂತರಾವ್, ಕೊಡಲಾಗರ ಶಂಕರಲಿಂಗಪ್ಪ, ಕೃಷ್ಣಮೂರ್ತಿ, ಬೆಣಕನಕಟ್ಟೆ ಶಂಕರಲಿಂಗಪ್ಪ, ಸಿ. ಜಿ. ಗೋವಿಂದಪ್ಪ. ಎ. ಆರ್. ಮರುಳಸಿದ್ಧಯ್ಯ ಪಾಲಾಕ್ಷಪ್ಪ, ರಾಮಯ್ಯ, ಹೆಚ್. ಎಮ್. ರಾಮಚಂದ್ರ, ಶ್ರೀನಿವಾಸ ಮೂರ್ತಿ. ಎಂ. ರಾಮಯ್ಯ ಶೆಟ್ಟಿ. ರಂಗ. ಬುಕ್ಕನಾಳ್ ರಂಗಾಚಾರಿ, ಸಂಜೀವಯ್ಯ ಸಿ. ಎನ್ ಶ್ರೀನಿವಾಸಯ್ಯ. ತಿಮ್ಮಯ್ಯ. ಟೈಲರ್ ಕಾಶ್ವರಯ್ಯ. ಅಣ್ಣಯ್ಯ, ಸಿ. ಎ. ಹುಚ್ಚಣ್ಣ, ಬಿ. ಎಸ್. ಅಣ್ಣಯ್ಯ, ಹೆಚ್. ಜಿ. ನಾರಾಯಣರಾವ್, ಬ್ಯಾಲಕೆರೆ ಕೃಷ್ಣ ಮೂರ್ತಿ, ಜೋಡಿದಾರ್ ನಂಜುಂಡಶಾಸ್ತ್ರಿ. ಹೆಚ್. ಹನುಮಂತರಾವ್, ಗೋವಿಂದ ರಾವ್. ಅನಂತಯ್ಯ (ಮಿತ್ರ) ಇನ್ನೂ ಮುಂತಾದ ಅನೇಕ ಮಹನೀಯರ ಸೇವೆ ಅಪಾರ. ಇದೇ ಕಾಲದಲ್ಲಿ ಪೋಲೀಸ್ ಅಧಿಕಾರಿಗಳಾಗಿದ್ದ ರಾಮಯ್ಯ, ಜೆಟ್ಟಿ ಶಿವಣ್ಣ, ಮುದ್ದಪ್ಪ ಮತ್ತು ಶ್ರೀ ಅಯ್ಯಂಗಾರ್ ಇವರುಗಳ ಹಾಗೂ ಹೋರಾಟಗಾರರ ಮಧ್ಯೆ ಇದ್ದ ಸೌಹಾರ್ದ ಸದ್ಭಾವನೆಗಳಿಂದ ಯಾವ ವಿಧವಾದ ಪ್ರಾಣಹಾನಿಯಾಗಲಿ ಅಹಿತಕರ ಘಟನೆಗಳಾಗಲಿ ಸಂಭವಿಸಲಿಲ್ಲ.

ತಾಲ್ಲೂಕಿನ ಚಳುವಳಿಯ ಕೀರ್ತಿಯ ಸಿಂಹಪಾಲು ಶ್ರೀಗಳಾದ ಜಿ. ವಿ. ನಾರಾಯಣಮೂರ್ತಿ. ಎಂ.ಎಸ್. ಹನುಮಂತರಾವ್. ಎಸ್. ಮರುಡಯ್ಯ. ಪಿ.ಎಸ್. ಮಲಿಯಪ್ಪ ಮತ್ತು ಬಿ. ಸಿ. ಹೆಚ್. ಲಿಂಗದೇವರು ಇವರುಗಳಿಗೆ ಸಲ್ಲುತ್ತದೆ. ಯುವಕರಲ್ಲಿ ಶ್ರೀಗಳಾದ ಸಿ. ಎಸ್. ನಾರಾಯಣರಾವ್, ಸಿ. ಎ. ಹುಚ್ಚಣ್ಣ. ಬಾಡಿಗಾರ್ಡ್ ಕೃಷ್ಣರಾವ್. ಕುಪ್ಪೂರು ಗೋಪಾಲರಾವ್ ಇವರಿಗೆ ಸಲ್ಲುತ್ತದೆ.

ಹೀಗೆ ಸ್ವಾತಂತ್ರ್ಯ ಸಂಗ್ರಾಮದ ಮಹಾ ಅಧ್ಯಾಯದಲ್ಲಿ ಚಿಕ್ಕನಾಯಕನ ಹಳ್ಳಿಯೂ ತನ್ನ ಒಂದೆರಡು ಸಾಲುಗಳನ್ನು ಸೇರಿಸಿ ಧನ್ಯವಾಯಿತು. ಹುಟ್ಟಿದ ನೆಲಕ್ಕೆ ಕೆಟ್ಟದ್ದು ಸಂಭವಿಸಿದಾಗ ಒಟ್ಟಾಗಿ ನಿಂತು ನೆಲದ ಋಣವನ್ನು ತೀರಿಸಿತು. ಆ ದಿನಗಳ ನೆನಪೇ ಇಷ್ಟೊಂದು ರೋಚಕವಾಗಿರುವಾಗ ಅಂದಿನ ವಾಸ್ತವ ಘಟನೆಗಳಲ್ಲಿ ಪಾಲುಗೊಂಡವರ ನರನಾಡಿಗಳಲ್ಲಿ ಪ್ರವಹಿಸುತ್ತಿದ್ದ ದೇಶಪ್ರೇಮದ ಬಿಸಿಯು ಎಂತಹುದು ಎಂಬುದನ್ನು ನಾವು ಊಹಿಸಿಕೊಳ್ಳಬಹುದು.

## ಚಿಕ್ಕನಾಯಕನಹಳ್ಳಿ

# ಶಾಸನಗಳು

**ಶಿವಲಂಕ ಶ್ರೀರಾಮಚಂದ್ರಮೂರ್ತಿ**

ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿ ತಾಲ್ಲೂಕಿನಿಂದ ನೂರಕ್ಕಿಂತ ಹೆಚ್ಚು ಶಾಸನಗಳು ಈವರೆಗೆ ಎಪಿಗ್ರಾಫಿಯಾ ಕರ್ನಾಟಿಕಾ ಎಂಬ ಶಾಸನ ಸಂಪುಟಗಳಲ್ಲಿ ಪ್ರಕಟಿತವಾಗಿವೆ (ಸಂಪುಟ ೧೨ ಮತ್ತು ೧೫). ಅವುಗಳು ಗಂಗರ ರಾಷ್ಟ್ರಕೂಟರ ಕಲ್ಯಾಣಿ ಚಾಳುಕ್ಯರ, ಹೊಯ್ಸಳರ ಮತ್ತು ವಿಜಯನಗರದ ಮಹಿತಸದವರಿಗೆ ಸೇರಿದ ಶಾಸನಗಳಾಗಿವೆ. ಈ ಶಾಸನಗಳು ಕನ್ನಡ ಹಾಗೂ ಸಂಸ್ಕೃತ ಭಾಷೆಗಳಲ್ಲಿ ರಚಿತವಾಗಿವೆ ಇವುಗಳಲ್ಲಿ ಕೆಲವು ಮುಖ್ಯ ಶಾಸನಗಳನ್ನು ಕಾಲಾನುಕ್ರಮವಾಗಿ ಪರಿಶೀಲಿಸುವ.

ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಶಾಸನಗಳಲ್ಲಿ ಕಾಲ ನಮೂದಿಸಿರುವ ಶಾಸನಗಳನ್ನು ಗಣನೆಗೆ ತೆಗೆದುಕೊಂಡರೆ ಅವುಗಳ ಪೈಕಿ ಹೊಯ್ಸಳ ವಿಷ್ಣುವರ್ಧನನ ಕಾಲಕ್ಕೆ ಸೇರಿದ ಬ್ಯಾಲಕೆರೆ ಗ್ರಾಮದ ಶಾಸನವು[1] ಪ್ರಾಚೀನವಾದುದೆಂದು ಹೇಳಬಹುದು. ಶಕ ೧೦೪೫ನೆಯ ಸಂವತ್ಸರದ ಈ ಶಾಸನ, ಹುಳಿಉರಬಲ್ಲಿಯನಾಯಕನು ಗೋಗ್ರಹಣ ಮಾಡಿದಾಗ ಬ್ಯಾಲಕೆಱೆಯ ಬಾಚಗೌಡ ಮತ್ತಿತರರು ಗೋವುಗಳನ್ನು ರಕ್ಷಿಸಿ ಸುರಲೋಕ ಸೇರಿದರೆಂದು ತಿಳಿಸುತ್ತದೆ. ಶಾಸನದಲ್ಲಿ ಬೆಲಕೆಱೆ ಎಂದು ಹೇಳಲ್ಪಟ್ಟ ಗ್ರಾಮವೇ, ಈಗಿನ ಬ್ಯಾಲಕೆರೆ ಗ್ರಾಮ.

ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಶಾಸನಗಳಲ್ಲಿ. ೧೨ನೆಯ ಶತಮಾನದ ಶಾಸನಗಳ ಪೈಕಿ ಹಲವು ಹೊಯ್ಸಳರ ಶಾಸನಗಳು. ಈ ಶಾಸನಗಳಲ್ಲಿ ಅವರ ಸಾಮಂತರಾದ ಹುಲಿಯರೆ ರಾಜರನ್ನು ಕುರಿತು ಸಾಕಷ್ಟು ವಿವರಗಳು ಲಭಿಸುತ್ತವೆ. ಈ ವಂಶದ ರಾಜರುಗಳು ಪರಾಕ್ರಮವಂತರಾಗಿದ್ದು ತಮ್ಮ ಒಡೆಯರಿಗೆ ಯುದ್ಧಗಳಲ್ಲಿ ಸಹಾಯಕರಾಗಿದ್ದರು. ಈ ರಾಜರ ಜನ್ಮ ಸ್ಥಾನವಾದ ಹುಲಿಯರೆ ಈಗಿನ ಹುಳಿಯೂರು ಗ್ರಾಮ. ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಹುಳಿಯೂರು ಗ್ರಾಮದಲ್ಲಿರುವ ರಂಗನಾಥಸ್ವಾಮಿ ದೇವಸ್ಥಾನದ ಶುಕನಾಸಿಯ ಬಲಗಡೆ ಇರುವ ಸಿಂಹ ಪೀಠದಲ್ಲಿ ಬರೆದಿರುವ ಶಾಸನ[2]ದಿಂದ ಹುಲಿಯರೆಯ ಸಾಮಂತ ಗೋವಿದೇವನ ಪತ್ನಿಯಾದ ಶ್ರೀಯಾದೇವಿಯೆಂಬುವಳು ಒಂದು ಪ್ರತಿಮೆಯನ್ನು ಮಾಡಿಸಿದಳೆಂದು ತಿಳಿದು ಬರುತ್ತದೆ. ಈ ಶಾಸನ ಜಿನಶಾಸನವಾಗಿರುವುದರಿಂದ ಶ್ರಿಯಾದೇವಿ ಮಾಡಿಸಿದ ಪ್ರತಿಮೆ, ಆ ಧರ್ಮಕ್ಕೆ ಸೇರಿರುವ ದೇವರದೆಂಬುದು ಖಚಿತ. ಆದರೆ ಈಗ ಆ ಸಿಂಹ ಪೀಠದ ಮೇಲೆ ವಿಷ್ಣುದೇವರ ಉತ್ಸವ ವಿಗ್ರಹವಿದೆ.[3] ಸಾಮಂತ ಗೋವಿದೇವ ಹೊಯ್ಸಳ ವಂಶದ ಮೊದಲನೆಯ ನರಸಿಂಹನ ಸಾಮಂತ ರಾಜನಾಗಿದ್ದನೆಂದೂ, ಅವನು ತನ್ನ ಪತ್ನಿ ಮಘಾದೇವಿನಾಯಕಿಯ ಸ್ಮರಣಾರ್ಥವಾಗಿ ಸುಂದರವಾದ ಪಾರ್ಶ್ವನಾಥನ

ಬಸದಿಯೊಂದನ್ನು ಹೆಗ್ಗೆರೆ ಗ್ರಾಮದಲ್ಲಿ ನಿರ್ಮಿಸಿದನೆಂಬೂ, ಕ್ರಿ. ಶ. ೧೧೬೦ನೆಯ ಸಂವತ್ಸರದ ಹೆಗ್ಗೆರೆ ಗ್ರಾಮದ ಶಾಸನದಿಂದ[4] ತಿಳಿದು ಬರುತ್ತದೆ. ಆದರೆ ಸಾಮಂತ ಗೋವಿದೇವನು ಮಾಹೇಶ್ವರ, ಬೌದ್ಧ, ವೈಷ್ಣವಾರ್ಹತ. ಚತುಸ್ಸಮಯ ಸಮುದ್ಧರಣನೆಂದು ಶಾಸನಗಳು ಬಣ್ಣಿಸುತ್ತವೆ.[5]

ಕಂಪನಹಳ್ಳಿ ಶಾಸನ (ಕ್ರಿ.ಶ. ೧೧೬೯) ಮಗರೆನಾಡು–300ರನ್ನಾಳುತ್ತಿದ್ದ ಹುಲಿಯುರೆಯ ಸಾಮಂತರಾಜರ ಬಗ್ಗೆ ಸಾಕಷ್ಟು ವಿವರಗಳನ್ನು ನೀಡುತ್ತದೆ.[6] ಈ ಶಾಸನದಲ್ಲಿ ಹೇಳಿರುವ ವಿವರಗಳು ಹೀಗಿವೆ. ಚಾಳುಕ್ಯ ಭೂವಲ್ಲಭದೇವನು, ಕಳ್ಯಾಣಪುರದಿಂದ ಸಪ್ತಾರ್ಧಲಕ್ಷದೇಶವನ್ನು ಪರಿಪಾಲಿಸುತ್ತಿದ್ದಾಗ, ಅವನ ಸಾಮಂತ ತ್ರಿಭುವನಮಲ್ಲ, ವೀರಗಂಗ, ಹೊಯ್ಸಳ ಪ್ರತಾಪ ನರಸಿಂಹದೇವನು ದೋರಸಮುದ್ರದಿಂದ ಗಂಗವಾಡಿ 96,000 ವನ್ನಾಳುತ್ತಿದ್ದನು. ನರಸಿಂಹದೇವನ ಸಾಮಂತನಾದ ಬಿಟ್ಟಿದೇವನು ಹೂಳಿಯುರ ವೃತ್ತಿಯನ್ನಾಳುತ್ತಿದ್ದನು. ಈ ಶಾಸನದಲ್ಲಿರುವ ವಿವರಗಳನ್ನಾಧರಿಸಿ ಬಿಟ್ಟಿದೇವನ ವಂಶಾನು ಕ್ರಮಣಿಕೆಯನ್ನು ಈ ಕೆಳಕಂಡಂತೆ ರಚಿಸಬಹುದು.




ಬಿಟ್ಟಿದೇವನ ತಂದೆಯಾದ 'ಚಟ್ಟ' ಮಹಾಪರಾಕ್ರಮವಂತ. ಚಟ್ಟ ತನ್ನ ಒಡೆಯನಾದ ವಿಷ್ಣುವರ್ಧನನ ಸಮಕ್ಷಮದಲ್ಲಿ ಪಾಂಡ್ಯ ರಾಜನನ್ನು ಅಪಾರ ಸೇನೆಯೊಂದಿಗೆ ಸೋಲಿಸಿ ಅವನ ಗಜಯೂಥವನ್ನು ವಿಷ್ಣುವರ್ಧನಿಗೆ ಒಪ್ಪಿಸಿದನು. ಕದಂಬ ಮಣ್ಡಳಿಕ ತೈಲನೃಪಾಲನ ಗರುಡ ಮಸಣಂಗನನ್ನು ಸೋಲಿಸಿ ಅವನ ತುರಂಗ ಸಮೂಹವನ್ನು ತನ್ನ ಪ್ರಭುವಿಗೆ ಸಮರ್ಪಿಸಿದನು. ಇಲ್ಲಿ (''ಕದಂಬ'' ಎನ್ನುವುದಕ್ಕೆ ''ಕಡಂಬ'' ಶಬ್ದವನ್ನು ಬಳಸಿರುವುದು ಕುತೂಹಲಕಾರಿಯಾಗಿದೆ). ಬಿಟ್ಟಿದೇವನ ಚಿಕ್ಕಪ್ಪ ಸಾಮಂತ ಗೋವಿದೇವನು ಕೂಡ ಮಹಾಪರಾಕ್ರಮಶಾಲಿ. ಚಂಗಾಳುವನೇರಿದ ಆನೆಯ ಮುಖದ ಮೇಲೆ ತನ್ನ ಕುಂತದಿಂದ ಗೋವಿದೇವನು ಮಾಡಿದ ಗಾಯಗಳು ಅವನು ತನ್ನ ಶೌರ್ಯದ ಬಗ್ಗೆ ಬರೆದಿಟ್ಟ ಶಾಸನ ಲಿಪಿಯಂತಿದೆಯಂತೆ. (ಚಂಗಾಳುವನೇರಿದ

ಮಾತಂಗದ ಮೊಗದೂಡ್ಡಿನಲ್ಲಿ ಸಬಳದಮಸೆಗಳು ಪಿಂಗದ ಪೋಲ್ತೆಸದಿಜ್ಜುವು ಸಂಗತ
ಗುಣ ಗೋವಿಯಿಜಿದ ಶಾಸನ ಲಿಪಿಯಂ॥)

ವೋಟುಕೆರೆ ಗ್ರಾಮದ ಶಾಸನವೊಂದು[7] ಹೊಯ್ಸಳ ಸೋಮೇಶ್ವರನ ಕಾಲಕ್ಕೆ ಸೇರಿರುವುದು ಗಮನಾರ್ಹವಾಗಿದೆ. ಈ ಶಾಸನದ ಕಾಲ ಕ್ರಿ.ಶ. ೧೨೩೫. ಅಸಿತರ ಸಾಧ್ಯವಾದ ಉಚ್ಚಂಗಿ ದುರ್ಗವನ್ನು ಸಾಧಿಸಿದ ಫಲವಾಗಿ ಬಲ್ಲಾಳನಿಗೆ ಗಿರಿದುರ್ಗಮಲ್ಲನೆಂಬ ಬಿರುದು ಸಿಕ್ಕಿತ್ತೆಂದೂ ಈ ಶಾಸನದ ಮೊದಲ ಪದ್ಯ ತಿಳಿಸುತ್ತದೆ. ನರಸಿಂಹರಾಜನು ಪಾಂಡ್ಯರನ್ನೂ, ಮಗರೆಗ ಮತ್ತು ಕಾಡವ ರಾಜರನ್ನೂ ಸೋಲಿಸಿದನೆಂದೂ, ತಮಿಳರ ಸೇನೆಯನ್ನು ('ತ್ರಮಿಳವಡೆ') ನಾಶಮಾಡಿದನೆಂದೂ ಎರಡನೆಯ ಪದ್ಯ ತಿಳಿಸುತ್ತದೆ. ಹೊಯ್ಸಳ ವೀರಸೋಮೇಶ್ವರನು ರಾಜ್ಯವಾಳುತ್ತಿದ್ದಾಗ ಮಹಾಪಸಾಯಿತು ಮಾವಂತಯ್ಯ, ದಣ್ಣಾಯಕನ ಸೇನ ಬಾವ ಸೋಮಣ್ಣ ಸೇನ, ಬೋವ ಚಾವುಣ್ಣ ನಾಡಪ್ರಭುಗಳಾದ ಮಲ್ಲಗವುಡ ಮತ್ತು ಸಮಸ ಪ್ರಜೆ ಗಾವುಂಡುಗಳು ಸೇರಿ ಒಟ್ಟಿಯಕೆರೆಗ್ರಾಮದ ಹಿರಿಯಕೆಜಿಗೆ ಕಲ್ಲಿನ (ತೂಬನ್ನು) ಕಟ್ಟಿಸಿ ಅದರ ಪರಿಶಿಕ್ಷಣೆಗೆ ಗದ್ದೆಯನ್ನು ದಾನ ಮಾಡಿದರೆಂದು ಈ ಶಾಸನದಿಂದ ತಿಳಿದು ಬರುತ್ತದೆ. ಶಾಸನದಲ್ಲಿ ಹೇಳಿರುವ ಒಟ್ಟಿಯಕೆರೆ ಗ್ರಾಮವೇ ಈಗಿನ ವೋಟುಕೆರೆ.

ಹೊಯ್ಸಳರ ಮೂರನೆಯ ನರಸಿಂಹರಾಜನ ಕಾಲದ ಸೆಟ್ಟಿಯಕೆರೆ ಶಾಸನ (ಕ್ರಿ.ಶ, ೧೨೬೧) ಅಸಂದಿ ನಾಡಿನಲ್ಲಿದ್ದ ಕೆಲವು ಹಳ್ಳಿಗಳ ಸಮೇತವಾಗಿ ಸೆಟ್ಟಿಯಕೆರೆ ಗ್ರಾಮವನ್ನು ಅಗ್ರಹಾರವಾಗಿ ಮಾಡಿದ ಬಗ್ಗೆ ಹಲವು ವಿವರಗಳನ್ನು ನೀಡುತ್ತದೆ. ಈ ಶಾಸನದ ಪ್ರಕಾರ ಸೆಟ್ಟಿಯಕೆರೆ ಮತ್ತು ಆ ಗ್ರಾಮಕ್ಕೆ ಸೇರಿರುವ ಹಳ್ಳಿಗಳಿಂದ ಬರುವ ಆದಾಯ ೩೫ ಗದ್ಯಾಣ, ೭ ಪಣ, ೧ ಹಾಗ; ಸೆಟ್ಟಿಯಕೆರೆ ಗ್ರಾಮದ ಬಳಿಯಲ್ಲಿರುವ ಹೊಸಗೆರೆ ಗ್ರಾಮ ಮತ್ತು ಅದಕ್ಕೆ ಸೇರಿದ ಹಳ್ಳಿಗಳಿಂದ ಬರುವ ಆದಾಯ ೫ ಗದ್ಯಾಣ, ೭ ಪಣ, ೧ ಬೇಳೆ. ಸೆಟ್ಟಿಯಕೆರೆ ಹಾಗೂ ಹೊಸಗೆರೆ ಗ್ರಾಮಗಳನ್ನು ಹಳ್ಳಿಗಳ ಸಮೇತವಾಗಿ, ಏಕಗ್ರಾಮವಾಗಿ ಮಾಡಿರುವುದರಿಂದ ಬರುವ ಆದಾಯ ೪೧ ಗದ್ಯಾಣ, ೪ ಪಣ, ೧ ಹಾಗ, ೧ ಬೇಳೆ, (ಇದರಿಂದ ಆ ಕಾಲದಲ್ಲಿ ೧೦ ಪಣಗಳು ಒಂದು ಗದ್ಯಾಣಕ್ಕೆ ಸಮಾನವೆಂದು ಸ್ಪಷ್ಟವಾಗುತ್ತದೆ). ಈ ಎರಡು ಗ್ರಾಮಗಳನ್ನು ಒಂದಾಗಿ ಸೇರಿಸಿ ಅಗ್ರಹಾರವನ್ನಾಗಿ ಮಾಡಿ ನರಸಿಂಹರಾಜನ ಪ್ರಧಾನಿಯಾದ ನಾಂಚರಸನು ಗೋಪಾಲ ದಣ್ಣಾಯಕನಿಗೆ ದಾನ ಮಾಡಿದ್ದಾನೆ. ಗೋಪಾಲದಣ್ಣಾಯಕನು ಈ ಗ್ರಾಮಗಳ ಸಮುದಾಯಕ್ಕೆ ಭರಿತ ಪ್ರಕಾಶಪುರವೆಂಬ ಹೊಸ ಹೆಸರನ್ನು ಕೊಟ್ಟು ೪೭ ವೃತ್ತಿಗಳಾಗಿ ವಿಭಜಿಸಿ ಅವುಗಳಲ್ಲಿ ೩೬ ವೃತ್ತಿಗಳನ್ನು ಬೇರೆ ಬೇರೆ ಗೋತ್ರಗಳಿಗೆ ಸೇರಿದ ಬ್ರಾಹ್ಮಣರಿಗೆ ಕೊಟ್ಟಿದ್ದಾನೆ. ಉಳಿದಿರುವ ೧೧ ವೃತ್ತಿಗಳಲ್ಲಿ ಒಂದನ್ನು ಮಾತ್ರ ತಾನಿಟ್ಟುಕೊಂಡು ಮಿಕ್ಕಿದ ೧೦ ವೃತ್ತಿಗಳನ್ನು ತನ್ನಿಂದ ಸೆಟ್ಟಿಕೆರೆಯಲ್ಲಿ ಪ್ರತಿಷ್ಠನಾದ ಯೋಗನಾಥ ದೇವರಿಗೆ ಸೇವಾರ್ಥವಾಗಿ ಸಮರ್ಪಿಸಿದನು. ಈ ೧೦

ವೃತ್ತಿಗಳನ್ನು ದೇವರಿಗೆ ವಿನಿಯೋಗ ಮಾಡಬೇಕೆಂಬುವುದರ ಬಗ್ಗೆ ಶಾಸನ ವಿವರವಾಗಿ ಹೇಳುತ್ತದೆ. ಈ ವಿವರಗಳಿಂದ ಆ ಕಾಲದಲ್ಲಿ ದೇವಾಲಯದ ನಿರ್ವಹಣೆ ಹೇಗಿತ್ತೆಂಬುವುದೂ, ದೇವಾಲಯ ಪರಿಚಾರಕರ ಜೀವನ ಪ್ರಮಾಣ ಹೇಗಿತ್ತೆಂಬುವುದೂ ಸ್ಪಷ್ಟವಾಗುತ್ತದೆ.

I. ವಿವರಗಳು ಹೀಗಿವೆ.

| | | |
|---|---|---|
| 1) | ಯೋಗನಾಥ ಮತ್ತಿತರ ದೇವರುಗಳ ನಿತ್ಯಪೂಜಾದಿ ವಿಧಿಗಳಿಗೆ ಮತ್ತು ದೇವರಸೇವೆ ಮಾಡುವ ನಂಬಿಗಳ ಜೀವನಕ್ಕೆ | ೬ ಗದ್ಯಾಣ |
| 2) | ಶೃಂಗಾರಿಗಳಿಗೆ ಜೀವಿತ | ೬ ಗದ್ಯಾಣ |
| 3) | ಪರಿಚಾರಕರಿಗೆ ಜೀವಿತ | ೪ ಗದ್ಯಾಣ |
| 4) | ಬಣಸಿಗರಿಗೆ ಜೀವಿತ | ೪ ಗದ್ಯಾಣ |
| 5) | ನೀರು ತರುವವರಿಗೆ ಜೀವಿತ | ೨ ಗದ್ಯಾಣ |
| | ಈ ಐದು ನಿಯೋಗಗಳಿಗೆ ಒಟ್ಟು ಜೀವಿತ | ೨೨ ಗದ್ಯಾಣ |

ii) ಇಬ್ಬರು ಡವರಿಗನಿಗೆ, ಒಬ್ಬ ಅರಕ್ಷಕನಿಗೆ, ಒಬ್ಬ ಮೊಲೆಗಾರನಿಗೆ, ಒಬ್ಬ ಬಾಹ್ಯನಿಗೆ (ಗೂಡಿಸುವವನಿಗೆ) ಒಟ್ಟು ಈ ಐದು ನಿಯೋಗಗಳಿಗೆ ಮತ್ತೆ ಒಬ್ಬ ಮಾಲೆಗಾರನಿಗೆ–ಇವರೆಲ್ಲರಿಗೂ ಸೇರಿ ಜೀವಿತ ೨೨ ಗದ್ಯಾಣಗಳು (ಒಬ್ಬರಿಗೆ ಎಷ್ಟು ಎಂಬುವುದು ಸೂಚಿಸಲಿಲ್ಲ.)

| | | |
|---|---|---|
| iii) | ಪೆಗ್ಗಡಿಕೆ ಹಾಗೂ ಭಂಡಾರಿಕೆಗಳನ್ನು ನಿರ್ವಹಿಸುವ ಅಧಿಕಾರಿಗೆ ಜೀವಿತ | ೪೦ ಗದ್ಯಾಣ |
| iv) | ಆದ್ದಿಕ ಮತ್ತು ಸೇನ ಬೋವಿಕೆಗಳನ್ನು ನಿರ್ವಹಿಸುವ ಅಧಿಕಾರಿಗೆ ಜೀವಿತ | ೪೦ ಗದ್ಯಾಣ |
| v) | ದೇವರ ತೋಟ, ಕ್ಷೇತ್ರಗಳನ್ನು, ಕೂಠಾರವನ್ನು ನೋಡಿಕೊಳ್ಳುವ ಅಧಿಕಾರಿ ಜೀವಿತಕ್ಕೆ (ಈ ಅಧಿಕಾರಿ ಸ್ತ್ರೀಯಾಗಿರುವುದು ಗಮನಾರ್ಹ) | ೨೦ ಗದ್ಯಾಣ |
| vi) | ಪಾಯಸಾದಿಗಳನ್ನು ತಯಾರಿಸುವವರಿಗೆ, ರಂಗವಲ್ಲಿ ಹಾಕುವವರಿಗೆ ಜೀವಿತ | ೨ ಗದ್ಯಾಣ |
| vii) | ಗಾಣಿಗ, ಕುಂಬಾರ, ಅಗಸ ಈ ಮೂವರ ಜೀವಿತ | ೨ ಗದ್ಯಾಣ |
| viii) | ವೈಷ್ಣವರ ಜೀವಿತ | ೩ ಗದ್ಯಾಣ |

| | | |
|---|---|---|
| ix) | ಶ್ರೀಗಂಧ, ಕರ್ಪೂರ, ಧೂಪ ಇತ್ಯಾದಿಗಳಿಗೂ, ಪಂಚಪರ್ವಾದಿಗಳ ಖರ್ಚಿಗೂ | ಎಂಟು ವೃತ್ತಿಗಳಿಂದ ಲಭಿಸುವ ಆದಾಯ ಮತ್ತು ತೆರಿಗೆಗಳು |
| x) | ಗೋಪಾಲ ದಣ್ಣಾಯಕರ : ವರ್ಷಕ್ಕೆ ಒಂದು ಸಲ ಯೋಗೇಶ್ವರ ದೇವರ ಪೂಜೆ ಸಂದರ್ಭದಲ್ಲಿ ಮಾಡುವ ಸಮಾರಾಧನೆಗೆ | ಒಂದು ವೃತ್ತಿಯಿಂದ ಲಭಿಸುವ ಆದಾಯ ಮತ್ತು ತೆರಿಗೆಗಳು |
| xi) | ದೇವಾಲಯದ ಎಲ್ಲಾ ಭಾಗಗಳ ಜೀರ್ಣೋದ್ಧಾರಕ್ಕೆ | ,, |

ಹೀಗೆ ಯೋಗೇಶ್ವರ ದೇವರಿಗೆ ಕೊಟ್ಟ ಎಂಟು ವೃತ್ತಿಗಳು ವಿನಿಯೋಗವಾದವು.

ಮೇಲೆ ಕೊಟ್ಟ ವಿವರಗಳಿಂದ ಆ ಕಾಲದ ದೇವಾಲಯ ನಿರ್ವಹಣೆ, ಆರ್ಥಿಕ ಸ್ಥಿತಿ, ಸಾಮಾಜಿಕ ಸ್ಥಿತಿ ಸುಸ್ಪಷ್ಟವಾಗುತ್ತವೆ.

ಮೂರನೆಯ ಬಲ್ಲಾಳನ ಕಾಲದ ಶಾಸನ[9]ವೊಂದು ಮಲ್ಲಿಗೆರೆ ಗ್ರಾಮದ ಈಶ್ವರ ದೇವಸ್ಥಾನದ ಬಳಿಯಿದೆ. ಇದೊಂದು ವೀರಗಲ್ಲು. ಮಹಾಸಾಮಂತ ಮಾಚಯ ನಾಯಕನನ್ನು ಸ್ಮರಿಸುವ ಈ ಶಾಸನ ವೀರಗಲ್ಲಿನ ಪೂಜೆಗಾಗಿ ಮಾದಜೀಯ. ಮಸಣ ಜೀಯ ಎಂಬುವವರಿಗೆ ಭೂಮಿಯನ್ನು ದಾನಮಾಡಿರುವುದನ್ನು ತಿಳಿಸುತ್ತದೆ.

ಇದೇ ರಾಜನಿಗೆ ಸೇರಿದ ಬೆಳಗುಲಿ ತಾಮ್ರಶಾಸನ ಅಸಂಪೂರ್ಣವಾದದ್ದಾರೂ ಕುತೂಹಲಕಾರಿಯಾಗಿದೆ. ಈ ತಾಮ್ರ ಶಾಸನದ ಒಂದನೆಯ ಮತ್ತು ಮೂರನೆಯ ಹಲಗೆಗಳು ಮಾತ್ರ ಸಿಕ್ಕಿವೆ. ರಾಮಕೃಷ್ಣ ಪ್ರಭುಗಳ ಬೃಂದಾವನದಲ್ಲಿರುವ ಗೋಪಾಲ ದೇವರಿಗೆ ನೈವೇದ್ಯ. ದೀಪ, ಉತ್ಸವಗಳಿಗಾಗಿ ಮಹಾಜನರು ಪ್ರತಿವರ್ಷ ೧೮ ಗದ್ಯಾಣಗಳನ್ನು ಕೊಡುವರೆಂದೂ, ಬಲ್ಲಾಳ ರಾಜನು ಹಲವಾರು ತೆರಿಗೆಗಳನ್ನು, ವಿಶ್ವೇಶ್ವರ ಹಾಗೂ ವಜ್ರೇಶ್ವರ ದೇವರುಗಳ ಸನ್ನಿಧಾನದಲ್ಲಿ, ಉದಕಪೂರ್ವಕವಾಗಿ ಮಹಾಜನರಿಗೆ ಬಿಟ್ಟುಕೊಟ್ಟನೆಂದೂ ಈ ಶಾಸನ ತಿಳಿಸುತ್ತದೆ. ಈ ತೆರಿಗೆಗಳ ಪಟ್ಟಿ ಗಮನಾರ್ಹವಾಗಿದೆ.

ಹೊಯ್ಸಳರ ಶಾಸನಗಳ ನಂತರ ಪ್ರದಾನವಾದುವು ವಿಜಯನಗರ ರಾಜರ ಶಾಸನಗಳು. ಇವರ ಶಾಸನಗಳಲ್ಲಿ ಎರಡನೆಯ ಹರಿಹರ, ಎರಡನೆಯ ದೇವರಾಯ, ಸಾಳುವ ನರಸಿಂಹ, ಕೃಷ್ಣದೇವರಾಯ, ರಾಮರಾಯ, ವೆಂಕಟಪತಿರಾಜರ ಶಾಸನಗಳು ಸೇರಿವೆ. ಇವುಗಳ ಪೈಕಿ ಹೆಚ್ಚಿನವು ಕೇವಲ ದಾನಶಾಸನಗಳು. ಕ್ರಿ. ಶ. ೧೩೮೮ನೆಯ ಸಂವತ್ಸರದ ಶಾಸನ[10] ವಿಜಯನಗರ ರಾಜರ ಸೇನೆ ಓರುಗಲ್ಲಿನ ಕಾಕತೀಯರ ಮೇಲೆ ವಿಜಯಯಾತ್ರೆಗೆ ಹೊರಟಾಗ ತುರುಕರ ದಂಡು ಕೊಂತಕೊಂಡೆಯನ್ನು ಆಕ್ರಮಣ ಮಾಡಲಿಕ್ಕೆ ಬಂದಿತೆಂದು ತಿಳಿಸುತ್ತದೆ. ಈ ಯುದ್ಧದಲ್ಲಿ ತುರುಕರ ದಳಕ್ಕೆ ಭಯಂಕರ

ನಾದ ಸಾಳುವ ರಾಮದೇವನೆಂಬ ವೀರನು ಸ್ವರ್ಗಸ್ಥನಾದನು. ಉಳಿದ ವಿಜಯನಗರ ರಾಜರ ಶಾಸನಗಳಲ್ಲಿ ಚಿಕ್ಕನಾಯಕನಹಳ್ಳಿಯ ಶಾಸನವನ್ನು[11] ಇಲ್ಲಿ ಪ್ರಸ್ತಾಪಿಸಬಹುದಾಗಿದೆ. ಈ ಶಾಸನ (ಕ್ರಿ.ಶ. ೧೬೨೩) ರಾಮದೇವರಾಯನು ಘನಗಿರಿಯಿಂದ (ಆಂಧ್ರದ ಪೆನುಗೊಂಡೆ) ರಾಜ್ಯವನ್ನು ಪರಿಪಾಲಿಸುತ್ತಿದ್ದಾಗ, ಘನಗಿರಿಗೆ ಪಶ್ಚಿಮದಲ್ಲಿ ಹೊಯ್ಸಳ ಸೀಮೆಯಲ್ಲಿದ್ದ ಚಿಕ್ಕನಾಯಕನಹಳ್ಳಿಯಿಂದ, ವಿಜಯನಗರರಾಜನ ಸಾಮಂತನಾದ ಮುದಿಯಪ್ಪನಾಯಕನು ಆಳುತ್ತಿದ್ದನೆಂದು ತಿಳಿಸುತ್ತದೆ. ಮುದಿಯಪ್ಪನಾಯಕನ ದಕ್ಷಿಣ ದೋರ್ದಂಡನಾದ ಶೀಲವಂತ ದಳವಾಯಿ ಪರಮಪ್ಪನು ಒಂದು ಮಠವನ್ನು, ಕೆರೆಯನ್ನು, ಕಿರೀಟವನ್ನು ನಂದೀಶ್ವರ ಸ್ವಾಮಿಗಳಿಗೆ ದಾನಮಾಡಿದನು. ಈ ಮಠದಲ್ಲಿ "ಸಮಸ್ತ ಪದಾರ್ಥವನು ಶಿವಾರ್ಪಣ ಮಾಡುವಂಥಾ ಸತ್ಪುರಷ ಮಾಹೇಶ್ವರರೇ" ಇರಬೇಕೆಂದೂ, ತದ್ವಿರುದ್ಧವಾಗಿರುವವರಿದ್ದರೆ ವೀರಮಹೇಶ್ವರರೂ, ಒಡೆಯರೂ, ಭಕ್ತರು ವಿಚಾರಿಸಿ ಅವರನ್ನು ಹೊರಹಾಕಿ ಒಳ್ಳೆಯವರನ್ನೇ ಅಲ್ಲಿ ವಾಸಿಸುವುದಕ್ಕೆ ಬಿಡಬೇಕೆಂದು ಈ ಶಾಸನ ಹೇಳುತ್ತದೆ. ಅಷ್ಟೆ ಅಲ್ಲದೆ "ಶಾಸನದ ಕಲ್ಲ ಕಿತ್ತರೆ ಲಿಪಿಯ ಕೆಡಸಿದರೆ" ಪಾಪಿಗಳಾಗುತ್ತಾರೆಂದು ಉದ್ಘೋಷಿಸುತ್ತದೆ.

ಸಾಮಂತರಾಜರ ಶಾಸನಗಳ ಪೈಕಿ ಹಾಗಲವಾಡಿ ಪ್ರಭುಗಳ ಶಾಸನಗಳು ಪ್ರಧಾನವಾದವು. ಹಾಗಲವಾಡಿ ಪ್ರಭುಗಳಲ್ಲಿ ಸಾಲಿನಾಯಕನು ಪ್ರಸಿದ್ಧನಾದವನು. ಈತ ಸೆಟ್ಟಿಕೆರೆ, ಕಂದಿಕೆರೆ, ಹೊನ್ನವಳ್ಳಿ, ತರುವೇಕೆರೆ ಮತ್ತು ನೊಣವಿನಕೆರೆಗಳನ್ನು ಆಕ್ರಮಿಸಿ ಸಾಲಿನಾಯಕ ('ಸಾಲಾಗಿ ವಿಜಯಗಳನ್ನು ಪಡೆದನು')ನೆಂಬ ಬಿರುದನ್ನು ಹೊಂದಿದನೆಂದು ಹೇಳಲಾಗಿದೆ. ಚಿಕ್ಕನಾಯಕನಹಳ್ಳಿ ಸ್ಥಾಪಿತವಾದದ್ದು ಈತನ ತಮ್ಮನ ಹೆಸರಿನಲ್ಲಿಯೇ.[12] ಈ ಸಾಮಂತರಾಜರ ಬಗ್ಗೆ ಕೆಲವು ವಿವರಗಳನ್ನು ಈ ವಂಶದ ಮುದಿಯಪ್ಪನಾಯಕನ ತಾಮ್ರಶಾಸನವೊಂದು (ಕ್ರಿ. ಶ. ೧೬೬೯) ನೀಡುತ್ತದೆ.[13] ಇದರಂತೆ ಹೊಯ್ಸಳ ಸೀಮೆಯಲ್ಲಿರುವ ಯರೆಕಟ್ಟೆಗ್ರಾಮವನ್ನು ಅಮರ ನಾಯಕತನಕ್ಕಾಗಿ ಸಾಲಿನಾಯಕ ವಿಜಯನಗರದ ವೆಂಕಟಪತಿರಾಜರಿಂದ ಪಡೆದನು. ಮುದಿಯಪ್ಪನಾಯಕನ ಶಾಸನವೊಂದು[14] ಚಿಕ್ಕನಾಯಕ ಹಳ್ಳಿಯಲ್ಲಿಯೇ ಲಭಿಸಿತು. ಈ ಶಾಸನದ ಬಗ್ಗೆ ಮೇಲೆ ಚರ್ಚಿಸಲಾಗಿದೆ.

ಮೊಗಲ್‌ರಾಜರ ಶಾಸನಗಳಲ್ಲಿ ಮಹಮದ್‌ಶಾನ ತಾಮ್ರಶಾಸನ[15]ವೊಂದು ಮಾತ್ರ ಚಿಕ್ಕನಾಯಕನಹಳ್ಳಿಯಲ್ಲಿ ಸಿಕ್ಕಿದೆ. ಒಂದೇ ತಾಮ್ರ ಪಟ್ಟಿಕೆಯ ಮೇಲೆ ಈ ಶಾಸನ ರಚಿತವಾಗಿದೆ. ಇದರ ಮೇಲ್ಭಾಗದಲ್ಲಿ ಬೆಳ್ಳಿಯ ಮೊಹರುಬಿಲ್ಲೆ ಬೆಸದಿದೆ. ಈ ಮೊಹರಿನ ಮೇಲೆ ಫಾರ್ಶಿ ಅಕ್ಷರಗಳಲ್ಲಿ "೧೧೩೨ ಮಹಮ್ಮದ್ ಷಾಹಿ ಬಾದಷಾ ಗಾಸಿ ಇಸ್ಮಾಲ್ ಖಾನ್ ಫಿದ್ವಿ" ಎಂದು ಮೂರು ಸಾಲಿನಲ್ಲಿ ಬರೆದಿದೆ. ಶಾಸನದ ಕಾಲ ಶಕ ೧೬೪೮, ಅಕ್ಷಯ, ಮಾರ್ಗಶಿರವೆಂದೂ, ಹಿಜರಾ ೧೧೩೮, ಸವ್ವಾಲ್ ೨೧ನೆಯ ದಿನವೆಂದೂ ಶಾಸನದಲ್ಲಿ ನಮೂದಿಸಲಾಗಿದೆ. ಎಂದರೆ ಮೊಹರಿನ ಮೇಲಿದ್ದ ತೇದಿಗಿಂತಲೂ

ಶಾಸನದಲ್ಲಿ ತೇದಿ 24 ವರ್ಷಗಳು ಅರ್ವಾಚೀನ. ಮೊಗಲ್ ದಾನ ಶಾಸನವಾದರೂ 'ನಮಸ್ತುಂಗ ಶಿರಶ್ಚುಂಬಿ' ಎಂದು ಶಿವಸ್ತುತಿಯಿಂದಲೇ ಶಾಸನ ಆರಂಭವಾಗುತ್ತದೆ. ಬೂದಿಹಾಳ ಸ್ಥಳದ ಯಳನಾಡಿನಲ್ಲಿ ಕೋಟೆಯನ್ನು ನಿರ್ಮಿಸಿರುವುದಕ್ಕಾಗಿ ಯಳನಾಡಿನ ಗೌಡನಾದ ಸಿದ್ದಪ್ಪಗೌಡನಿಗೆ ಭೂದಾನ ಮಾಡಿರುವುದರ ಬಗ್ಗೆ ಈ ಶಾಸನ ತಿಳಿಸುತ್ತದೆ. ಆದರೆ ದಾನಮಾಡಿದವರಾರೆಂಬುವುದು ಸ್ಪಷ್ಟವಾಗಿಲ್ಲ. ಇಸ್ಮಾಯಿಲ್‌ಖಾನ್ ಅಥವಾ ಮಹಮ್ಮದ್ ಷಾ, ಇವರಿಬ್ಬರಲ್ಲಿ ಒಬ್ಬರು ದಾನಮಾಡಿರಬಹುದು.

ಮೈಸೂರು ಮಹಾರಾಜರಲ್ಲಿ ಮೂರನೆಯ ಕೃಷ್ಣರಾಜ ಒಡೆಯರ ಹಾಗೂ ಚಾಮರಾಜ ಒಡೆಯರ ಶಾಸನಗಳು ಮಾತ್ರ ಚಿಕ್ಕನಾಯಕನಹಳ್ಳಿ ತಾಲ್ಲೋಕಿನಲ್ಲಿ ಸಿಕ್ಕಿವೆ. ಕೃಷ್ಣರಾಜ ಒಡೆಯರ ಬೆಳವಾಡಿ ಗ್ರಾಮ ಶಾಸನ[16] ಸೈದು ಯಕೋಬ ಬೂಬಿ ಎಂಬುವನು ೯೦೮ ಗದ್ಯಾಣಗಳನ್ನು ಅರಮನೆಯ ಬೊಕ್ಕಸಕ್ಕೆ ಕೊಟ್ಟು ಅರಸರಿಂದ ಕಂದಿಕೆರೆ ಸ್ಥಳದ ಬೆಳವಾಡಿ ಗ್ರಾಮವನ್ನು ಅದರ ಉಪಗ್ರಾಮಗಳೊಂದಿಗೆ ಪಡೆದನೆಂದು ಹೇಳುತ್ತದೆ. ಚಾಮರಾಜ ಒಡೆಯರ ಚಿಕ್ಕನಾಯಕನಹಳ್ಳಿ ಗ್ರಾಮ ಶಾಸನ[17] ಮಹಾರಾಜ ಚಾಮರಾಜೇಂದ್ರ ಒಡೆಯರ ಪಟ್ಟಾಭಿಷೇಕ ಮಹೋತ್ಸವ ದಿನವಂದು. ಅಂದರೆ ೧೮೮೧, ಮಾರ್ಚಿ ೨೫ರಂದು, ಕೇಶವದೇವರನ್ನು ಪ್ರತಿಷ್ಠಾಪನೆ ಮಾಡಲಾಗಿದೆ ತಿಳಿಸುತ್ತದೆ.

ಚಿಕ್ಕನಾಯಕನಹಳ್ಳಿ ತಾಲ್ಲೂಕಿನಲ್ಲಿ ಲಭಿಸಿರುವ ಶಾಸನಗಳ ಪೈಕಿ ಬಹಳ ಇತ್ತೀಚಿನದೆಂದರೆ ಹುಳಿಯಾರು ಗ್ರಾಮದ ರಂಗನಾಥಸ್ವಾಮಿ ದೇವಸ್ಥಾನದ ಉತ್ಸವ ವಿಗ್ರಹದ ಪೀಠದಲ್ಲಿ ಬರೆದಿರುವ ಶಾಸನ.[18] ಈ ಶಾಸನದಲ್ಲಿ ತೇದಿ, ಮಾತ್ರ. ''ಶೋಭಕೃತು। ಶ್ರಾವಣ ಶುದ್ಧ ೨ ಯಲ್ಲು'' ಎಂದು ಕೊಡಲಾಗಿದೆ. ಇದು ಈ ಉತ್ಸವ ವಿಗ್ರಹವನ್ನು ಸಮರ್ಪಿಸಿದ ತೇದಿಯಾಗಿರಬಹುದು. ಈ ಶಾಸನ ಕ್ರಿ. ಶ. ೧೯೦೩ನೆಯ ಸಂವತ್ಸರದ್ದಾಗಿರಬಹುದು.[19]

ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಶಾಸನಗಳಲ್ಲಿ ಕೆಲವು ರಾಜವಂಶಗಳಿಗೆ ಸೇರಿದ್ದವು; ಕೆಲವು ಖಾಸಗಿ ಶಾಸನಗಳು; ಕೆಲವು ವೀರಗಲ್ಲುಗಳು. ಆದ್ದರಿಂದ ಈ ಶಾಸನಗಳ ಸಂಪೂರ್ಣ ಅಧ್ಯಯನದಿಂದ ಆಯಾಯ ಕಾಲದ ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ ರಂಗಗಳಿಗೆ ಸಂಬಂಧಿಸಿದ ಹಲವಾರು ಕುತೂಹಲಕಾರಿ ಅಂಶಗಳು ಬೆಳಕಿಗೆ ಬರುತ್ತವೆ ಎಂಬುದರಲ್ಲಿ ಸಂಶಯವಿಲ್ಲ.

## Notes

1 Ep Carn., XVI Ck. 60

2 Ibid., Ck, 93

3 Ibid., p. 14 (Dynastic list)

4 Ibid., Vol. XII, Ck. 21

5 Ibid., Ck. 13, 20, etc.

6 Ibid., Vol. XVI, Ck. 98

7 Ibid., No Ck. 70

8 Ibid., XII, No. Ck 2

9 Ibid , XVI, Ck. 78

10 Ibid., XII, Ck. 15

11 Ibid., XVI, Ck. 1 (Rev)

12 Mys Stode Gazetter, Tumkur Dt., (1969). p. 40

13 *Ep. Carn.*, XII, Ck. 38

14 Ibid., XVI, Ck. 1 (Rev)

15 Ibid , Ck. 94

16 Ibid., Ck. 45

17 Ibid., Ck 47

18 Ibid., Ck. 91

19 Ibid., p. 32

## ಚಿಕ್ಕನಾಯಕನಹಳ್ಳಿ
# ಸ್ಮಾರಕಗಳು

**ಎಸ್. ಆರ್. ಚಂದ್ರರಾಜ್ ಅರಸ್**

ಈ ಲೇಖನದಲ್ಲಿ ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಕೆಲವು ಸ್ಮಾರಕಗಳ ಬಗ್ಗೆ ಸೂಕ್ಷ್ಮ ವಿವರಣೆ ನೀಡಲು ಪ್ರಯತ್ನಿಸಲಾಗಿದೆ.

ಚಿಕ್ಕನಾಯಕನಹಳ್ಳಿಯು ಕರ್ನಾಟಕರಾಜ್ಯದ ತುಮಕೂರು ಜಿಲ್ಲೆಯ ತಿಪಟೂರು ಉಪವಿಭಾಗಕ್ಕೆ ಸೇರಿದ ಒಂದು ತಾಲ್ಲೂಕು ಹಾಗೂ ಅದರ ಮುಖ್ಯ ಸ್ಥಳ. ಉತ್ತರಕ್ಕೆ ಚಿತ್ರದುರ್ಗ ಜಿಲ್ಲೆಯ ಹೊಸದುರ್ಗ ಮತ್ತು ಹಿರಿಯೂರು ತಾಲ್ಲೂಕುಗಳು; ಪೂರ್ವಕ್ಕೆ ಶಿರಾ ಮತ್ತು ಗುಬ್ಬಿ ತಾಲ್ಲೂಕುಗಳು : ದಕ್ಷಿಣಕ್ಕೆ ತಿಪಟೂರು ತಾಲ್ಲೂಕು ಮತ್ತು ಪಶ್ಚಿಮದಲ್ಲಿ ಹಾಸನ ಜಿಲ್ಲೆಯ ಅರಸೀಕೆರೆ ತಾಲ್ಲೂಕು. ಈ ತಾಲ್ಲೂಕನ್ನು ಸುತ್ತುವರೆದಿವೆ.

ಚಿಕ್ಕನಾಯಕನಹಳ್ಳಿ ಪಟ್ಟಣದಲ್ಲಿ ಹಲವು ಸ್ಮಾರಕಗಳಿವೆ. ಅವುಗಳಲ್ಲಿ ಮುಖ್ಯವಾದವುಗಳು ವೆಂಕಟರಮಣಸ್ವಾಮಿ ದೇವಾಲಯ, ಆಂಜನೇಯ ದೇವಾಲಯ. ರಾಮೇಶ್ವರ ದೇವಾಲಯ, ಎಲ್ಲಮ್ಮ ದೇವಾಲಯ ಮುಂತಾದವುಗಳು.

**ವೆಂಕಟರಮಣಸ್ವಾಮಿ ದೇವಾಲಯ :** ಚಿಕ್ಕನಾಯಕನಹಳ್ಳಿ ಪಟ್ಟಣದಲ್ಲಿ ಅತ್ಯಂತ ದೊಡ್ಡದೂ ಮತ್ತು ಸುಂದರವೂ ಆದುದು ವೆಂಕಟರಮಣಸ್ವಾಮಿ ದೇವಾಲಯ. ಇದು ದ್ರಾವಿಡ ಶೈಲಿಯಲ್ಲಿ ನಿರ್ಮಿತವಾಗಿದೆ. ಇತರೆ ಹೊಯ್ಸಳ ದೇವಾಲಯಗಳಂತೆಯೇ ಇದು ಸಹ ಎತ್ತರದ ಜಗತಿಯ ಮೇಲೆ ನಿರ್ಮಿಸಲಾಗಿದೆ. ಇದರ ಸುತ್ತಲೂ ಪ್ರಾಕಾರವಿದೆ. ನವರಂಗದ ಸ್ತಂಭಗಳು ಆನೆ, ನಂದಿ ಮುಂತಾದ ಸುಂದರ ಶಿಲ್ಪಕೃತಿಗಳನ್ನು ಹೊಂದಿವೆ. ವೆಂಕಟರಮಣಸ್ವಾಮಿ ದೇವರ ಮೂರ್ತಿಯು ನಾಲ್ಕು ಅಡಿ ಎತ್ತರವಿದೆ ಹಾಗೂ ಸುಂದರವಾಗಿದೆ. ಸ್ತಂಭವೊಂದರ ಮೇಲೆ ಬಲಕೈಯಲ್ಲಿ ಕಮಲದ ಹೂವನ್ನು ಹಿಡಿದುಕೊಂಡು ಸಿಂಹಾಸನಾರೂಢನಾಗಿರುವ ರಾಜನ ಶಿಲ್ಪವಿದೆ. ಪುಟೀಪುಪಿನಮೇಲೆ ತ್ರಿದಂಡಧಾರಿ ಸನ್ಯಾಸಿಯ ಪ್ರತಿಮೆಯಿದೆ. ದ್ವಾರಮಂಟಪದ ಎದುರುಬದರಾಗಿರುವ ಎರಡು ಕಂಬಗಳ ಮೇಲೆ ರಾಮ ಮತ್ತು ಲಕ್ಷ್ಮಣರ ಮೂರ್ತಿಗಳಿವೆ.

**ಆಂಜನೇಯ ದೇವಾಲಯಗಳು :–** ಇಲ್ಲಿ ಹುಳಿಯಾರು ಆಂಜನೇಯ ಮತ್ತು ಬ್ರಹ್ಮಪುರಿ ಆಂಜನೇಯ ಎಂಬ ಎರಡು ದೇವಾಲಯಗಳಿವೆ. ಹುಳಿಯಾರು ಆಂಜನೇಯ

ದೇವಾಲಯವು ದೊಡ್ಡದಾಗಿದೆ. ಹಾಗೂ ಹೆಚ್ಚಿನ ಪ್ರದುವಟ್ಟು ಹೊಂದಿದೆ. ಆ ದೇವರ ಭಕ್ತರ ಸಂಖ್ಯೆ ಅಪಾರ.

**ರಾಮೇಶ್ವರ ದೇವಾಲಯ :-** ಇದು ದ್ರಾವಿಡ ಶೈಲಿಯಲ್ಲಿ ನಿರ್ಮಿತವಾಗಿರುವ ಮತ್ತೊಂದು ದೇವಾಲಯ. ಇದನ್ನು ಹಾಗಲವಾಡಿಯ ಪಾಳೆಯಗಾರನು ಕಟ್ಟಿಸಿದನೆಂದು ಹೇಳಲಾಗಿದೆ. ಸುಕನಾಸಿಯ ದ್ವಾರದ ಬಲಭಾಗದಲ್ಲಿ ಗಣಪತಿಯ ಮೂರ್ತಿಯೂ ಮತ್ತು ಎಡಭಾಗದಲ್ಲಿ ಭೈರವನ ಮೂರ್ತಿಯಿದೆ. ಈ ದ್ವಾರದ ಮುಂಭಾಗದ ಎಡಗಡೆಯ ಕಂಬದಲ್ಲಿ ಬಹು ಸುಂದರವಾಗಿ ರೂಪಿಸಿದ ಕುಳಿತಿರುವ ವಿಗ್ರಹವಿದೆ. ಸುಮಾರು 1¼ ಅಡಿ ಎತ್ತರವಿದೆ. ಧ್ಯಾನಾಸಕ್ತವಾಗಿದೆ. ಸರ್ಪಾಕೃತಿಯ ಕಿವಿಯೋಲೆ ಹೊಂದಿದೆ. ಇವರ ಮುಂಭಾಗದ ಕಂಬದಲ್ಲಿ 2½ ಅಡಿ ಎತ್ತರದ ಪುರುಷಮೂರ್ತಿಯಿದೆ. ಕೈಮುಗಿದುಕೊಂಡಿದೆ. ಇದು ಬಹುಶಃ ಈ ದೇವಾಲಯವನ್ನು ನಿರ್ಮಿಸಿದ ಪಾಳೆಯಗಾರನ ಮೂರ್ತಿಯಿರಬಹುದು. ಮುಖಮಂಟಪದ ಮೇಲೆ ಇದೇ ಬಗೆಯ ಮೂರ್ತಿಯೊಂದಿದೆ. ಇತರೆ ಪ್ರಮುಖ ಮೂರ್ತಿಗಳೆಂದರೆ ಲಿಂಗವನ್ನು ಪೂಜಿಸುತ್ತಿರುವ ವ್ಯಾಘ್ರಪಾದನ ಮತ್ತು ಲಿಂಗವನ್ನು ಮುಟ್ಟಿಕೊಂಡು ತನ್ನ ಕಣ್ಣನ್ನು ಬಾಣದಿಂದ ಕೀಳುತ್ತಿರುವ ಬೇಡರ ಕಣ್ಣಪ್ಪನ ವಿಗ್ರಹ.

**ರುದ್ರೇಶ್ವರ ದೇವಾಲಯ :-** ಈ ದೇವಾಲಯದಲ್ಲಿ ಅಕ್ಕಪಕ್ಕದಲ್ಲಿ ಭದ್ರಕಾಳಿ ಮತ್ತು ದಕ್ಷರಮೂರ್ತಿಗಳನ್ನೊಳಗೊಂಡ ವೀರಭದ್ರದೇವರ ಮೂರ್ತಿಯಿದೆ.

**ಕೇಶವ ದೇವಾಲಯ :-** ಈ ದೇವಾಲಯ ಮೈಸೂರಿನ ಮಹಾರಾಜ ಚಾಮರಾಜ ಒಡೆಯರ ಪಟ್ಟಾಭಿಷೇಕ ಮಹೋತ್ಸವದ ನೆನಪಿಗಾಗಿ 1881ರಲ್ಲಿ ನಿರ್ಮಿತವಾಯಿತು.

**ಬೇಡರಕಣ್ಣಪ್ಪನ ಗುಡಿ :-** ಈ ಗುಡಿಯ ಮರದ ಬಾಗಿಲಿನ ಮೇಲೆ ಮಾನವ ಮತ್ತು ಪ್ರಾಣಿಗಳ ಸುಂದರಮೂರ್ತಿಗಳನ್ನು ಬಿಡಿಸಲಾಗಿದೆ. ಇಲ್ಲಿ ಶಿವಲಿಂಗವಿರುವ ಗರ್ಭಗುಡಿಯ ಹಿಂಭಾಗದ ಗೋಡೆಯ ಮೇಲೆ ಬಿಲ್ಲುಧಾರಿ ಬೇಡರಕಣ್ಣಪ್ಪನು ಈಶ್ವರ ಲಿಂಗವನ್ನು ಪೂಜಿಸುತ್ತಿರುವ ಮೂರ್ತಿಶಿಲ್ಪವಿದೆ.

**ಯಲ್ಲಮ್ಮನ ದೇವಾಲಯ :-** ಚಿಕ್ಕನಾಯಕನಹಳ್ಳಿಯ ಗ್ರಾಮದೇವತೆ ಹಿರಿಮಾವರದಾ ಯಲ್ಲಮ್ಮ. ಈ ದೇವರನ್ನು ರೇಣುಕಾದೇವಿ ಎಂಬುದಾಗಿಯೂ ಕರೆಯುವರು. ವಿಗ್ರಹ ಮರದ್ದು. ಕಲ್ಲಿನಿಂದ ಕಡೆಯಲಾದ ಮುಖವಿರುವುದು ಒಂದು ವಿಶೇಷ. ಉತ್ಸವಮೂರ್ತಿಯು ರೇಣುಕಾದೇವಿಯ ಮಗ ಪರಶುರಾಮನದು. ಇದು ಮರದಿಂದ ಮಾಡಿದ ಮೂರ್ತಿ. ರೇಣುಕೆಯ ವಿಗ್ರಹದ ಬಲಭಾಗದಲ್ಲಿ ಆಕೆಯ ಪತಿ ಜಮದಗ್ನಿ ಕುಳಿತಿರುವ ಒಂದು ಅಡಿ ಎತ್ತರದ ಮೂರ್ತಿಯಿದೆ. ಇವರ ಬಲಗೈ "ಅಭಯಹಸ್ತದ ಭಂಗಿಯಲ್ಲಿದೆ. ಮತ್ತೊಂದು ಹಸ್ತವು ತೊಡೆಯಮೇಲಿದೆ. ಹೊರಗಡೆ ಮಾತಂಗಿ ಮತ್ತು ಆಕೆಯ ಮಗ ಪಾತಪ್ಪ ಇವರ ವಿಗ್ರಹಗಳನ್ನೊಳಗೊಂಡ ಎರಡು ಚಿಕ್ಕ ಗುಡಿಗಳಿವೆ.

**ದಬ್ಬೆ ಘಟ್ಟ** ದಬ್ಬೆಘಟ್ಟದಲ್ಲಿ 13ನೆಯ ಶತಮಾನದ ಮಹಾಲಿಂಗೇಶ್ವರ ದೇವಾಲಯ ವಿದೆ. ಇಲ್ಲಿಯ ಮೂರು ಗರ್ಭಗುಡಿಗಳಲ್ಲಿ ಹೊಯ್ಸಳೇಶ್ವರ, ಬ್ರಹ್ಮೇಶ್ವರ ಮತ್ತು ಮಹಾದೇಶ್ವರ ಲಿಂಗಗಳಿವೆ.

ಮರುಳಸಿದ್ದೇಶ್ವರ ದೇವಾಲಯದಲ್ಲಿನ ಅಂಕಣದಲ್ಲಿ ಸುಂದರವಾಗಿ ಬಿಡಿಸಿದ ಮರುಳಸಿದ್ಧ, ರೇವಣಸಿದ್ಧ ಮತ್ತು ಅಲ್ಲಮರ ಮೂರ್ತಿಗಳಿವೆ. ಈ ಮೂವರು ಬಸವಣ್ಣನ ಕಾಲದ ವೀರಶೈವ ಗುರುಗಳಾಗಿದ್ದರು. ಉತ್ಸವಮೂರ್ತಿ ನಂದಿ. ವರ್ಷ ಕ್ಕೊಮ್ಮೆ ನಡೆಯುವ ಜಾತ್ರೆಯಲ್ಲಿ ರಥದಲ್ಲಿ ಆ ನಂದಿಯ ಮೂರ್ತಿಯನ್ನು ಮೆರವಣಿಗೆ ಯಲ್ಲಿ ತೆಗೆದುಕೊಂಡು ಹೋಗುವರು. ಈ ದೇವಾಲಯದಲ್ಲಿ 'ಬಿಲ್ವವೃಕ್ಷ ವಾಹನ'ವಿದೆ. ಇಲ್ಲಿ ದೇವಾಲಯದ ಬಸವಗಳ ಅನೇಕ ಸಮಾಧಿಗಳಿವೆ.

**ಶೆಟ್ಟಿಕೆರೆಯೋಗಮಾಧವ ದೇವಾಲಯ :–** ಶೆಟ್ಟಿಕೆರೆಯ ನೈರುತ್ಯದಲ್ಲಿರುವ ಕೆರೆಯ ಹತ್ತಿರ ಹೊಯ್ಸಳ ಕಾಲದ ಅಗ್ರಹಾರವಿದ್ದಿತು. ಪಶ್ಚಿಮದಲ್ಲಿ ವಿಷ್ಣು ದೇವಾಲಯ ಈಶಾನ್ಯದಲ್ಲಿ ಶಿವದೇವಾಲಯಗಳಿವೆ. ಈ ಗ್ರಾಮದ ದೇವಾಲಯಗಳಲ್ಲಿ ಕಲೆಯ ದೃಷ್ಟಿಯಿಂದ ಬಹಳ ಮುಖ್ಯವಾದುದು ಯೋಗಮಾಧವ ದೇವಾಲಯ. ಈ ದೇವಾಲಯ ತ್ರಿಕೂಟವಾಗಿದ್ದರೂ ಪಶ್ಚಿಮದ ಗರ್ಭಗುಡಿಗೆ ಮಾತ್ರ ಶುಕನಾಸಿ ಶಿಖರ ಗಳಿವೆ. ನವರಂಗದ ಆಗ್ನೇಯ ಮೂಲೆಯಲ್ಲಿರುವ ಶಾಸನದಿಂದ ಶಕ 1194 ದುರ್ಮತಿ (ಕ್ರಿ. ಶ. 1261)ಯಲ್ಲಿ ಹೊಯ್ಸಳ ದೊರೆ ಮುಮ್ಮಡಿ ವೀರನರಸಿಂಹನ ದಂಡನಾಯಕ ಗೋಪಾಲ ದಣಾಯಕನು ಅಗ್ರಹಾರವನ್ನು ಮಾಡಿಸಿದನೆಂದು ತಿಳಿದುಬರುತ್ತದೆ. ಮೂರು ಗರ್ಭಗುಡಿಗಳು, ಪಶ್ಚಿಮದ ಶುಕನಾಸಿ, ಒಳಗಿನ ನವರಂಗ, ಪೂರ್ವದ ಒಂದು ಅಂಕಣದ ಮುಖಮಂಟಪ ಹೊಯ್ಸಳರ ಕಾಲದ್ದಾಗಿವೆ. ಅನಂತರ ಮುಖಮಂಟಪದ ಜಗತಿಗಳನ್ನು ತೆಗೆದು ಹೊರಗಿನ ನವರಂಗವನ್ನು ಶಿಲೆಯಿಂದ ಕಟ್ಟಿರುವರು. ಈ ದೇವಾಲಯವು ನಕ್ಷತ್ರಾಕಾರವಾಗಿರುವ ಮೂರು ಅಡಿ ಎತ್ತರದ ಜಗತಿಯ ಮೇಲೆ ನಿರ್ಮಿತವಾಗಿದೆ. ಜಗತಿಯ ಮೇಲೆ ಐದು ಸಾಲುಗಳಿವೆ. ಈ ಜಗತಿಯ ಮೇಲೆ ಗೋಡೆಯ ಪೀಠಿಕೆಯಲ್ಲಿ ಐದು ಚಿತ್ರಪಟ್ಟಿಕೆಗಳಿವೆ. ಗೋಡೆಯ ಮೇಲ್ಭಾಗದಲ್ಲಿ ಶಿಖರಗಳು ವಿವಿಧರೂಪಗಳಲ್ಲಿವೆ. ನಕ್ಷತ್ರಾಕಾರದ ಗರ್ಭಗುಡಿಗೆ ಉತ್ತರ ದಕ್ಷಿಣ ಪಶ್ಚಿಮಗಳಲ್ಲಿ ಚತುರಸ್ರಭಾಗಗಳು ಸೇರಿಸಲ್ಪಟ್ಟಿವೆ. ಮೇಲ್ಛಾವಣಿಯ ಬೋದಿಗೆ ಕೈಪಿಡಿ ಗೋಡೆಯ ಮೇಲೆ ಸಣ್ಣ ಗೋಪುರಗಳಿವೆ. ವಿಮಾನವು ನಾಲ್ಕು ಸಾಲು ಶಿಖರಗಳನ್ನೂ ಕಲ್ಲಿನ ಕಳಶವನ್ನೂ ಹೊಂದಿದೆ.

ಗರುಡ ಪೀಠದ ಮೇಲೆ ಒಂಬತ್ತಡಿ ಎತ್ತರದ ಯೋಗಮಾಧವನ ಸುಂದರ ವಿಗ್ರಹವಿದೆ. ಯೋಗಾಸನದಲ್ಲಿ (ಪದ್ಮಾಸನ) ವಿಷ್ಣುವು ಕುಳಿತಿರುವನು. ಹಿಂದಿನ ಕೈಗಳಲ್ಲಿ ಚಕ್ರ (ಬಲಗಡೆ), ಶಂಖ (ಎಡಗೈ)ಗಳಿವೆ. ಮೇಲಿನ ತೋರಣದಲ್ಲಿ ದಶಾವ ತಾರಗಳು, ಸಿಂಹಮುಖ ಕುಳಿತಿರುವ ಒಂದು ವಿಗ್ರಹವಿದೆ. ಯೋಗಮಾಧವನಿಗೆ

ಸುಂದರವಾದ ಕಿರೀಟ, ಬೆರಳಿನ ಉಂಗುರ, ಭುಜಕೀರ್ತಿ, ಕಾಲುಂಗುರ, ಕಂಠಾಹಾರ ಮುಂತಾದ ಆಭರಣಗಳಿವೆ. ಕಣ್ಣುಗಳು ತೆರೆದಿವೆ. ಮುಖದಲ್ಲಿ ಮಂದಹಾಸವಿದೆ. ಯೋಗಮಾಧವ ವಿಗ್ರಹ ಅಪರೂಪವಾದುದು.

ಈ ಗ್ರಾಮದಲ್ಲಿ ಈಶ್ವರ ದೇವಾಲಯ, ರಂಗನಾಥ ದೇವಾಲಯ, ಹನುಮಂತ ದೇವರ ದೇವಾಲಯ, ಶೆಟ್ಟಿಕೆರೆಯಮ್ಮನ (ಕೆಂಪಮ್ಮ) ದೇವಾಲಯ ಮುಂತಾದ ದೇವಾಲಯಗಳಿವೆ. ಕೆಂಪಮ್ಮ ಗ್ರಾಮ ದೇವತೆ.

**ಪಂಕಜನಹಳ್ಳಿ ಮಲ್ಲಿಕಾರ್ಜುನ ದೇವಾಲಯ** :– ಪಂಕಜನಹಳ್ಳಿಯಲ್ಲಿ ಮಲ್ಲಿಕಾರ್ಜುನ ದೇವಾಲಯವು ದ್ರಾವಿಡ ಶೈಲಿಯಲ್ಲಿ ನಿರ್ಮಿತವಾಗಿದ್ದು ದೊಡ್ಡದೂ ಸುಂದರವೂ ಆಗಿದೆ. ದೇವಾಲಯದಲ್ಲಿ ಗರ್ಭಗೃಹ, ಶುಖನಾಸಿ, ಪ್ರದಕ್ಷಿಣಾಪಥ, ನವರಂಗ, ಮುಖಮಂಟಪ, ಸ್ವಲ್ಪ ತಗ್ಗಿನ ಮಟ್ಟದಲ್ಲಿ ಒಂದು ಹಜಾರ, ಶಿಖರಹೊಂದಿರುವ ನಂದಿಮಂಟಪ, ಮಹಾದ್ವಾರ ಮತ್ತು ಪ್ರಾಕಾರಗಳಿವೆ. ದೇವಾಲಯದ ಶಿವಲಿಂಗವು ಶಿಲಾಸ್ಫಟಿಕಗಳಿಂದ ನಿರ್ಮಿತವಾಗಿದೆ. ನೂರೊಂದು ಲಿಂಗಗಳ ಪ್ರತೀಕವಾಗಿ ಈ ಶಿವಲಿಂಗವು ನೂರೊಂದು ಶಿಲಾಸ್ಫಟಿಕಗಳಿಂದ ಮಾಡಲಾಗಿದೆ. ಹನ್ನೆರಡು ಅಡಿ ಎತ್ತರದ ಮಹಾದ್ವಾರವು ಸುಂದರ ಕೆತ್ತನೆಗಳಿಂದ ಕೂಡಿದೆ. ಸ್ತಂಭಗಳೂ, ಬಾಗಿಲುಗಳೂ ಸುಂದರ ಕೆತ್ತನೆಗೆ ಹೆಸರಾಗಿವೆ. ದೇವಾಲಯದ ಮುಂಭಾಗದಲ್ಲಿ ನಲವತ್ತು ಅಡಿ ಎತ್ತರದ ದೀಪಸ್ತಂಭವಿದೆ.

**ದೊಡ್ಡಬಿದರೆಯ ಈಶ್ವರ ದೇವಾಲಯ** :– ದೊಡ್ಡಬಿದರೆಯಲ್ಲಿ ಈಶ್ವರ ದೇವಾಲಯವಿದೆ. ದೇವಾಲಯದ ನವರಂಗದಲ್ಲಿ ಸರಸ್ವತಿ, ಮಹಿಷಾಸುರಮರ್ಧಿನಿ, ಉಮಾಮಹೇಶ್ವರ ಮುಂತಾದ ದೇವರುಗಳ ಸುಂದರ ವಿಗ್ರಹಗಳಿವೆ. ಬಲಗೈಯಲ್ಲಿ ಕತ್ತಿಯನ್ನೂ ಎಡಗೈಯಲ್ಲಿ ಒಂದು ಬಟ್ಟಲನ್ನೂ ಹಿಡಿದಿರುವ ದುರ್ಗಾದೇವತೆಯ ವಿಗ್ರಹ ಮತ್ತು ನಾಗದೇವತೆಯ ವಿಗ್ರಹಗಳು ಸುಂದರವಾಗಿವೆ.

ಪಾತೇಲಿಂಗೇಶ್ವರ ದೇವಾಲಯದಲ್ಲಿ ನೂರೊಂದು ಈಶ್ವರಲಿಂಗಗಳಿವೆ. ಇದರ ಮುಂಭಾಗದ ಮಂಟಪದಲ್ಲಿ ''ಪಾತೇಲಿಂಗ''ವಿದೆ.

**ಚಿಕ್ಕಬಿದರೆಯ ಆಂಜನೇಯ ದೇವಾಲಯ** :– ಚಿಕ್ಕಬಿದರೆಯಲ್ಲಿ ಆಂಜನೇಯ ದೇವಾಲಯವಿದೆ, ಇದರ ಮುಖಮಂಟಪದಲ್ಲಿ ಗಣಪತಿ, ಭೈರವ, ವಿಷ್ಣು ಹಾಗೂ ಎರಡು ನಾಗಪ್ರತಿಮೆಗಳಿವೆ.

**ಯಳನಾಡು ಸಿದ್ಧರಾಮೇಶ್ವರ ದೇವಾಲಯ** :– ಯಳನಾಡು ಸಿದ್ಧರಾಮೇಶ್ವರ ದೇವಾಲಯವು ದ್ರಾವಿಡ ಶೈಲಿಯಲ್ಲಿ ನಿರ್ಮಿತವಾಗಿದೆ. ಇಲ್ಲಿ ವೀರಶೈವರಗುರು ಸಿದ್ಧರಾಮನು ತಪಸ್ಸು ಮಾಡಿದನು. ದೇವಾಲಯದ ಪೂಜಾಮೂರ್ತಿ ಲಿಂಗಾಕೃತಿಯ ಹುತ್ತ.

ಹೊನ್ನೆಬಾಗಿ ಗ್ರಾಮಕ್ಕೆ ಸ್ವಲ್ಪ ದೂರದಲ್ಲಿ ಬೆಟ್ಟದ ಮೇಲೆ ರಂಗನಾಥಸ್ವಾಮಿ ಗುಡಿಯಿದೆ. ಹುಳಿಯೂರಿನಲ್ಲಿಯೂ ಹೊಯ್ಸಳರ ಕಾಲದ ರಂಗನಾಥಸ್ವಾಮಿ ದೇವಾ

ಲಯವಿದೆ. ಕಂದಿಕೆರೆಯಲ್ಲಿ ಪುರಾತನ ಕೋಟೆಯೊಂದಿದೆ. ಇಲ್ಲಿಯ ಮುಖ್ಯ ದೇವಾಲಯ ಗೋಪಾಲಕೃಷ್ಣನದು. ಇಲ್ಲಿ ಒಂದು ಬಸ್ತಿಯೂಯಿದೆ. ಮರುಳೆ ಗ್ರಾಮದಲ್ಲಿ ಕೆಲವು ಮಾಸ್ತಿಕಲ್ಲುಗಳಿವೆ. ಕುಪ್ಪೂರಿನಲ್ಲಿ ಮರುಳಸಿದ್ದೇಶ್ವರ ಗದ್ದುಗೆಯಿದೆ. ಒಡೇರಹಳ್ಳಿಯಲ್ಲಿ ಶಾಂತಮಲ್ಲಪ್ಪ ಮತ್ತು ಹೆಂಜೇರಪ್ಪ (ಭೈರವ) ದೇವಾಲಯಗಳಿವೆ. ಇಲ್ಲಿನ ಕಲ್ಲೇಶ್ವರ ದೇವಾಲಯವು ಚಾಳುಕ್ಯರ ಕಾಲದ್ದು (ಕಿ. ಶ. 1041). ಈಗ ಹಾಳಾಗಿದೆ. ಸಾಸಲು ಗ್ರಾಮದಲ್ಲಿ ಬನಶಂಕರಿ ದೇವಾಲಯವಿದೆ. ಶೆಟ್ಟಿಕೆರೆಯಿಂದ ದಕ್ಷಿಣಕ್ಕೆ ಒಂದು ಮೈಲಿ ದೂರದಲ್ಲಿ (ಸೋಮಲಾಪುರದಲ್ಲಿ)ರಂಗನಾಥಸ್ವಾಮಿ ದೇವಾಲಯವಿದೆ. ಈ ದೇವರನ್ನು ತಿರುಮಲ ದೇವರೆಂದೂ, ಕಟ್ಟೆರಂಗನಾಥಸ್ವಾಮಿಯೆಂದೂ ಕರೆಯುವರು. ಈ ದೇವಾಲಯದ ಪೂಜಾಮೂರ್ತಿಯು ಉದ್ಭವ ಮೂರ್ತಿ. ಈ ದೇವರ ಮೆರವಣಿಗೆ ವಿಗ್ರಹಗಳು ಪಂಚಲೋಹಗಳಿಂದ ಮಾಡಲ್ಪಟ್ಟಿವೆ. ರಂಗನಾಥಸ್ವಾಮಿ, ಶ್ರೀದೇವಿ ಮತ್ತು ಭೂದೇವಿಯ ವಿಗ್ರಹಗಳು, ಮೆರವಣಿಗೆಯ ಈ ವಿಗ್ರಹಗಳು. ರಾಜಯ್ಯನಪಾಳ್ಯದಲ್ಲಿ ರೇಣುಕಾದೇವಿಯ ದೇವಾಲಯದಲ್ಲಿವೆ. ರಾಜಯ್ಯನಪಾಳ್ಯದ ರೇಣುಕಾದೇವಿಯ (ಯಲ್ಲಮ್ಮದೇವತೆ) ವಿಗ್ರಹವು ಮರದಿಂದ ಮಾಡಲ್ಪಟ್ಟಿದೆ. ಆನೆಯ ಮೇಲೆ ಕುಳಿತಿರುವ ರೇಣುಕಾದೇವಿಯ ವಿಗ್ರಹಕ್ಕೆ ಬೆಳ್ಳಿಯ ಮುಖವಾಡವಿದೆ. ಅಜ್ಜೇನಹಳ್ಳಿಯಲ್ಲಿ ಬಸವೇಶ್ವರ, ಬನಶಂಕರಿ, ಕೋಟೆ ಕೆರೆಯಮ್ಮ ಹಾಗೂ ಬೀರದೇವರ ದೇವಾಲಯಗಳಿವೆ. ಗೋಪಾಲನಹಳ್ಳಿಯಲ್ಲಿ ಬಸವೇಶ್ವರ ದೇವಾಲಯವಿದೆ.

ಚಿಕ್ಕನಾಯಕನಹಳ್ಳಿಯ ತಾಲ್ಲೂಕಿನಲ್ಲಿ ಇನ್ನೂ ಅನೇಕ ದೇವಾಲಯಗಳಿವೆ. ಈ ಪಟ್ಟಣ ಮತ್ತು ತಾಲ್ಲೂಕು ಇತಿಹಾಸ ಪ್ರಸಿದ್ಧವೂ ಆಗಿರುವುದಲ್ಲದೆ ವಾಸ್ತು ಶಿಲ್ಪಕ್ಕೂ ಹೆಸರು ಪಡೆದಿದೆ. ನಮ್ಮ ನಾಡಿನ ಸಂಸ್ಕೃತಿಯ ಸಂಕೇತಗಳ ಆಗಿರುವ ಸ್ಮಾರಕಗಳನ್ನು ಕಾಪಾಡಿಕೊಂಡು ಬರುವುದು ಎಲ್ಲರ ಕರ್ತವ್ಯವಾಗಿದೆ.

## ಗ್ರಂಥಋಣ


1) ಮೈಸೂರು ಗೆಜೆಟಿಯರ್ : ಹಯವದನರಾವ್

2) 'ಗೆಜೆಟಿಯರ್ ಆಫ್ ಇಂಡಿಯಾ' (ಮೈಸೂರು ರಾಜ್ಯ) vol. ತುಮಕೂರು ಜಿಲ್ಲೆ : ಕೆ. ಅಭಿಶಂಕರ್

3) ಕನ್ನಡ ವಿಶ್ವಕೋಶ : ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾ ನಿಲಯ

4) ಹೊಯ್ಸಳ ವಾಸ್ತುಶಿಲ್ಪ : ಡಾ. ಎಸ್. ಶ್ರೀಕಂಠಶಾಸ್ತ್ರಿ

ಪರಿಸರ

# ಚಿಕ್ಕನಾಯಕನಹಳ್ಳಿ
# ಸೆಟ್ಟಿಯಕೆಱೆಯ
# ಶ್ರೀಯೋಗನಾಥ ದೇವಾಲಯ

ಎಚ್. ಆರ್. ರಘುನಾಥ ಭಟ್

ಕರ್ನಾಟಕದ ವಾಸ್ತುಶಿಲ್ಪ ಪರಂಪರೆ ಭವ್ಯವಾದ್ದು. ಇದನ್ನು ಶ್ರೀಮಂತಗೊಳಿಸುವಲ್ಲಿ ಹಲವು ಅರಸು ಮನೆತನಗಳು ಪಾಲ್ಗೊಂಡಿವೆ. ಅವುಗಳಲ್ಲಿ ಹೊಯ್ಸಳ ವಂಶ ಹೆಸರುವಾಸಿಯಾಗಿದೆ. ಶಿಲ್ಪ-ಅಲಂಕರಣೆ ಎದ್ದುಕಾಣುವ 'ಹೊಯ್ಸಳಶೈಲಿ'ಯ ಕಲಾದೇಗುಲಗಳು ನಾಡಿನ ಹಲವೆಡೆ ನೋಡಸಿಗುತ್ತವೆ. ಇವುಗಳಲ್ಲಿ ಸೆಟ್ಟಿಕೆರೆ 'ಯೋಗಮಾಧವ' ದೇವಾಲಯ ತನ್ನ ಸರಳವಾಸ್ತು ಮತ್ತು ಅಪೂರ್ವ ಶಿಲ್ಪಗಳಿಂದಾಗಿ ವಿಶಿಷ್ಟವಾಗಿದೆ ; ಆ ಪ್ರದೇಶದ ಸಾಂಸ್ಕೃತಿಕ ಜೀವನದಲ್ಲಿ ಅದು ವಹಿಸಿದ ಪಾತ್ರದ ದೃಷ್ಟಿಯಿಂದ ಗಣನೀಯವಾಗಿದೆ. ಇದನ್ನು ಅಧ್ಯಯನ ಮಾಡುವ ಒಂದು ಪ್ರಯತ್ನ ಇಲ್ಲಿದೆ.

ಸೆಟ್ಟಿಕೆರೆ ತುಮಕೂರು ಜಿಲ್ಲೆಯ ಪಡುವಣಕ್ಕಿರುವ ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಒಂದು ಹೋಬಳಿ; ಈ ತಾಲ್ಲೂಕಿನ ನೈರುತ್ಯಕ್ಕೆ ಸುಮಾರು ಎಂಟು ಕಿ.ಮೀ. ದೂರದಲ್ಲಿದೆ. ಇದನ್ನು ಹದಿಮೂರನೆಯ ಶತಮಾನದ ಹೊಯ್ಸಳಶಾಸನ 'ಸೆಟ್ಟಿಯಕೆಱೆ' ಎಂದು ಉಲ್ಲೇಖಿಸುತ್ತದೆ.[1] ಶೆಟ್ಟೀಕೆರೆ, ಶೆಟ್ಟಿಕೆರೆ ಎಂದು ಮುಂತಾಗಿ ಕರೆದದ್ದುಂಟು.[2] ಆಸಂದಿ ನಾಡೊಳಗಣ 'ಹೊಯ್ಸಳಸೀಮೆ' ಯಲ್ಲಿ ಇದು ಸಮನ್ವಿತವಾಗಿತ್ತು.

'ಸೆಟ್ಟಿಯ ಕೆಱೆ'[3] ವ್ಯಕ್ತಿ ನಾಮಾಧಾರಿತ ಸ್ಥಳನಾಮ. ಊರಿಗೆ (ಒಂದು ಕಾಲದಲ್ಲಿ) ವಿಶೇಷವಾಗಿ ಸಂಬಂಧಿಸಿದ ಸೆಟ್ಟಿಯ ಅಥವಾ ಸಾಮೂಹಿಕವಾಗಿ ಸೆಟ್ಟಿಜನವರ್ಗದ ಹೆಸರು ಪಡೆದಿದೆ.[4] ಅಂತೆಯೇ ನಿರ್ದಿಷ್ಟವಾದ ಜಾಗದಲ್ಲಿ ಷಷ್ಠ್ಯಂತವಾದ ವ್ಯಕ್ತಿನಾಮವನ್ನು ಈ ಸ್ಥಳನಾಮದಲ್ಲಿ ಗಮನಿಸಬೇಕು. ಇದರ ನಿಷ್ಪತ್ತಿಯಲ್ಲಿ ನಾವು ಅಗತ್ಯವಾದ ಗಮನಿಸಬೇಕಾದ ಪ್ರಾದೇಶಿಕ ವೈಲಕ್ಷಣ್ಯವೆಂದರೆ ಕೆರೆ. ಈ ಪ್ರಾಚೀನ ವಿಶಾಲಜಲಾಶಯ ಊರನೈರುತ್ಯಕ್ಕೆ. ಸನಿಹದಲ್ಲಿದೆ. ಹದಿಮೂರನೆಯ ಶತಮಾನದಲ್ಲಿ ಹೊಸಗೆಱೆಯನ್ನೊಳಗೊಂಡ ಸೆಟ್ಟಿಯ ಕೆಱೆ ಮಹಾಜನರ ಅಗ್ರಹಾರವಾಗಿತ್ತು. "ಶ್ರೀಘಟಿತ ಪ್ರಕಾಶಪುರ" ಎಂಬ ಹೆಸರು ಪಡೆದಿತ್ತು.[5] ಇದು ಸಂಸ್ಕೃತೀಕರಣದ ಫಲವಾದರೂ ಈ ಹೆಸರು ಯಾದೃಚ್ಛಿಕವಾದದ್ದೆಂದೇ ಹೇಳಬೇಕು. ದೇಶಿಯ ಹೆಸರಾದ 'ಸೆಟ್ಟಿಯಕೆಱೆ'ಗೂ 'ಪ್ರಕಾಶಪುರ'ಎಂಬುದಕ್ಕೂ ಯಾವುದೇ ಸಹಜಸಂಬಂಧ ಇಲ್ಲಿ ಎದ್ದು ಕಾಣದು. ಸೆಟ್ಟಿಯಕೆಱೆ ಸೆಟ್ಟಿಗಳಿಂದಾಗಿ ಸಮೃದ್ಧ ಊರಾಗಿರಬೇಕು. 'ಶ್ರೀಘಟಿತ' (ಲಕ್ಷ್ಮೀಘಟಿತ) ವಾಗಿರಬೇಕು. ಯೋಗನಾಥಾಲಯ ಮತ್ತು ಅದರ ಸುತ್ತ ಪಟ್ಟಿನ ವಿದ್ವಾಂಸ ಮಹಾಜನರಿಂದಾಗಿ 'ಪ್ರಕಾಶಪುರ'ವಾಗಿರಬೇಕು. ನಾಡಿನ

ನಕಾಶೆಯಲ್ಲಂತೂ ಸೆಟ್ಟಿಕೆರೆ (ಪ್ರಕಾಶಪುರ) ಪ್ರಕಾಶಕ್ಕೆ ಬಂದದ್ದು ಮುಖ್ಯವಾಗಿ ಅಲ್ಲಿರುವ ಯೋಗನಾಥ ದೇಗುಲದಿಂದಾಗಿ.

ಊರ ಪಶ್ಚಿಮಕ್ಕಿರುವ ಯೋಗನಾಥದೇವಾಲಯು ಹೊಯ್ಸಳ ಭುಜಬಲ ವೀರ ನರಸಿಂಹನ III ಕಾಲದ್ದು. ಆತನ ಮಹಾಪ್ರಧಾನ ಗೋಪಾಲದಂಡನಾಯಕ 'ಶಕವರ್ಷ ಸಾವಿರದ ನೂರತೊಂಬತ್ತನಾಲ್ಕನೆಯ ದುರ್ಮತಿಸಂವತ್ಸರದ ಚೈತ್ರಶುದ್ಧ ದ್ವಾದಶಿ ಮಂಗಳವಾರ' ದಂದು[6] ಅಂದರೆ, ಸಾವಿರದ ಇನ್ನೂರ ಎಪ್ಪತ್ತೆರಡರಲ್ಲಿ ಸ್ಥಾಪಿಸಿದ ಶ್ರೀಭರಿತಪ್ರಕಾಶಪುರದಲ್ಲಿ ಈ ಪ್ರಸನ್ನಯೋಗನಾಥ ದೇವರನ್ನು ಪ್ರತಿಷ್ಠಾಪಿಸಿ, ದೇಗುಲದ ಕಾರ್ಯನಿರ್ವಹಣೆಗಾಗಿ ದಾನದತ್ತಿನೀಡಿದ. ಅನಂತರದಲ್ಲಿ, ವಿಜಯನಗರ-ಚಿಕ್ಕನಾಯಕನಹಳ್ಳಿ ಪಾಳೆಯಗಾರರ ಕಾಲದಲ್ಲಿ, ಈ ದೇಗುಲಕ್ಕೆ ಕೆಲ ಸೇರ್ಪಡೆಗಳಾಗಿವೆ. ದೇಗುಲ ನಿರ್ಮಾಣದಲ್ಲಿ ಕಾಲಮಾನದ ದೃಷ್ಟಿಯಿಂದ (ಹದಿಮೂರು ಮತ್ತು ಹದಿನಾರು-ಹದಿನೇಳನೆಯ ಶತಮಾನ) ಹಾಗೂ ಶೈಲಿಯನ್ನಾಧರಿಸಿ ('ಹೊಯ್ಸಳ' ಮತ್ತು 'ದ್ರಾವಿಡ' ಇಲ್ಲವೆ ವಿಜಯನಗರ-ಪಾಳೆಗಾರ') ಎರಡು ಹಂತಗಳನ್ನು ಗುರುತಿಸಬಹುದು. ಯೋಗನಾಥಗುಡಿಯ ಅಂತರಾಳವನ್ನೊಳಗೊಂಡಂತೆ ದೇಗುಲದ ಮೂರು ಗರ್ಭಾಂಕಣಗಳು, ಒಳನವರಂಗ ಮತ್ತು ಅದರ ಪೂರ್ವಕ್ಕಿದ್ದ ಒಂದಂಕಣದ ಮೂಲ ಮುಖ ಮಂಟಪಭಾಗ ಹೊಯ್ಸಳ ಕಾಲದ್ದು, 'ಹೊಯ್ಸಳ ಶೈಲಿ'ಯದು. ಈ ಕಾಲದ ಮುಖ ಮಂಟಪಭಾಗವನ್ನೊಳಗೊಂಡು ನಿರ್ಮಿಸಿದ ಹೊರನವರಂಗ, ಇದರ ಕೂಡಡಿ, ಪ್ರಾಕಾರ ಹಾಗೂ ಮಹಾದ್ವಾರ ಮಂಟಪ ಮತ್ತು ಹೊರವಲಯದಲ್ಲಿ ದ್ವಾರದೆದುರಿನ ಗರುಡಸ್ತಂಭ-ಇವೆಲ್ಲ ವಿಜಯನಗರ-ಪಾಳೇಗಾರ ಕಾಲದವು : ದ್ರಾವಿಡಶೈಲಿಯಲ್ಲಿವೆ.

**ಹೊರನೋಟ :** ಪೂರ್ವಾಭಿಮುಖವಾಗಿರುವ ಯೋಗನಾಥ ದೇವಸ್ಥಾನ ಒಂದು ವೈಷ್ಣವ 'ತ್ರಿಕೂಟ.' ಇದರ ಮೂರು ಕೂಟ (ಶಿಖರ) ಗಳಲ್ಲಿ ಯೋಗನಾಥ ಕೂಟ ಮಾತ್ರ ಕಾಣಸಿಗುತ್ತದೆ. ಹೊರನೋಟಕ್ಕೆ ಈ ಗುಡಿಯಲ್ಲಿ ವಾಸ್ತು ವೈಖರಿಯೇ ಎದ್ದು ಕಾಣುತ್ತದೆ. 'ಹೊಯ್ಸಳಶೈಲಿ' ಯಲ್ಲಿ ಶಿಲ್ಪ-ಅಲಂಕರಣೆ, ಕುಸುರಿ ಕೆಲಸ ಹೆಚ್ಚು ಪ್ರಧಾನವಾಗಿ ಕಾಣುವುದಾದರೂ ಇವಿಲ್ಲದೆ (ಶಿಲ್ಪರಹಿತ) ವಾಸ್ತು ಅಲಂಕರಣೆಯೇ ಪ್ರಧಾನವಾಗಿರುವ ಹೊಯ್ಸಳ ದೇಗುಲಗಳೂ ಸಾಕಷ್ಟಿವೆ. ಇವುಗಳಲ್ಲಿ ಈ ಯೋಗನಾಥಾಲಯವೂ ಒಂದಾಗಿದೆ.

ಜಗತಿಯಮೇಲೆ ಈ ದೇಗುಲ ನಿರ್ಮಿತವಾಗಿದೆ. ಸುಮಾರು ತೊಂಬತ್ತು. ಸೆಂ.ಮೀ. ಎತ್ತರದ ಈ ಜಗತಿ ಹಿಂಬಣೆ-ಮುಂಬಣೆಗಳಿಂದ ರಚಿತವಾಗಿದೆ. ಯೋಗನಾಥಗುಡಿಯ ಜಗತಿ ಮಾತ್ರ ಹಿಂಬಣೆ-ಮುಂಬಣೆ ವಿನ್ಯಾಸಗಳ ಮಧ್ಯೆ ನಕ್ಷತ್ರ ವಿನ್ಯಾಸ ಅಥವಾ ಕಮಲದಳವಿನ್ಯಾಸವೂ ಸೇರಿದ್ದರಿಂದ ಒಂದು ಬಗೆಯ ಸಮಿಶ್ರ ರಚನೆಯಾಗಿದೆ. ಅನಂತರ ಸೇರಿಸಿದ ಹೊರನವರಂಗದ ಜಗತಿ ಚತುರಸ್ರಾಕಾರದಲ್ಲಿದೆ ; ಏಣುಗಳಿಂದ ಕೂಡಿಲ್ಲ. ಜಗತಿಯ ಹೊರಅಂಚಿನಲ್ಲಿ ಅಲಂಕಾರಿಕವಾದ ಐದು ಏಣುಗಳಿವೆ. ಜಗತಿಯ

ಮೇಲೆ ಬಳಪದ ಹಾಸುಗಲ್ಲಿನಿಂದ ಆವೃತ್ತವಾಗಿದ್ದು (ಜಗತಿಪಥ) ದೇಗುಲವನ್ನು ಸುತ್ತು ಬಳಸಿರುವುದರಿಂದ ಓಡಾಡಲು ಸಾಕಷ್ಟು ಸ್ಥಳವಿದ್ದು ವಿಶಾಲವಾಗಿದೆ. ಇದು ದೇಗುಲದ ಹೊರಪ್ರದಕ್ಷಿಣಪಥವೂ ಹೌದು, ಜೊತೆಗೆ ದೇಗುಲಕ್ಕೆ ಎತ್ತರವನ್ನು ನೀಡಿದೆ. ಈ ಬಗೆಯ ದೇಗುಲ 'ನಿರಂಧಾರ' ಮಾದರಿಯದು.

ಜಗತಿಯ ತಲವಿನ್ಯಾಸಕ್ಕನುಗುಣವಾಗಿಯೇ ಅದರ ಮೇಲೆ ನಿಂತ ತ್ರಿಕೂಟಾಚಲ ದೇವಾಲಯದ ತಲವಿನ್ಯಾಸವಿದೆ. ಇವರ ಅಧಿಷ್ಠಾನದ ಮೇಲೆ, ಭಿತ್ತಿಯ ಬುಡದಲ್ಲಿ ಐದು ಸಮಾನಾಂತರ ಪಟ್ಟಿಕೆಗಳಿವೆ. ಬುಡದಿಂದ ಎರಡನೆಯ ಪಟ್ಟಿಕೆ ಅಲಗಿನ ಬಾಯಿಯಂತಿದೆ. ಅಲ್ಲಲ್ಲಿ ಪುಷ್ಪವಿನ್ಯಾಸಗಳಿವೆ. ಮೂರನೆಯ ಮತ್ತು ಐದನೆಯ ಏಣುಗಳಲ್ಲಿ ಅರ್ಧಪತ್ರ ವಿನ್ಯಾಸಗಳಿವೆ. ಇವೆರಡರ ಮಧ್ಯದಲ್ಲಿರುವ ನಾಲ್ಕನೆಯ ಪಟ್ಟಿಕೆಯು ದಂತ ವಿನ್ಯಾಸ ಹಾಗೂ ಕಮಲದಳವಿನ್ಯಾಸಗಳನ್ನೊಳಗೊಂಡಿದೆ. ಇವನ್ನೆಲ್ಲ ಹೊಯ್ಸಳ ಶೈಲಿಯ. ಸಾಂಪ್ರದಾಯಿಕ ರೀತಿಯಲ್ಲೇ ಕಂಡರಿಸಲಾಗಿದೆ. ಪಟ್ಟಿಕೆಗಳ ಮಧ್ಯದ ಪಡವಿನಿಂದಾಗಿ ಬೆಳಕು ನೆರಳಿನ ಚೆಲ್ಲಾಟವನ್ನು ನೋಡಬಹುದಾಗಿದೆ. ಈ ಪಟ್ಟಿಕೆಗಳಾವುವೂ ಹೊಯ್ಸಳಶೈಲಿಯಲ್ಲಿ ಸಾಮಾನ್ಯವಾಗಿ ಗಮನಿಸಬಹುದಾದ ಪ್ರಾಣಿ, ಪಕ್ಷಿ, ಪುರಾಣ ಕಥಾನಕ ಶಿಲ್ಪಗಳನ್ನು ಒಳಗೊಂಡಿಲ್ಲ.

ಹೊಯ್ಸಳ ಭಿತ್ತಿಯ ಅಪೂರ್ವ ಶಿಲ್ಪ ವೈಭವವನ್ನು ಯೋಗನಾಥಾಲಯದ ಭಿತ್ತಿಯಲ್ಲಿ ನೋಡಲಾರೆವು. ಇದು, ಕಲ್ಯಾಣ ಚಾಲುಕ್ಯ ದೇಗುಲ ಭಿತ್ತಿಯಂತೆ, ಮಿತಮಿತ ವಾಸ್ತು ಅಲಂಕರಣೆಗಳಿಂದ ಕೂಡಿದೆ. ತಲವಿನ್ಯಾಸಕ್ಕನುಗುಣವಾಗಿ ಎಬ್ಬಿಸಿದ ಭಿತ್ತಿಯ ಹೊರಮೈಯಲ್ಲಿ ಹಿಂಬಡೆ-ಮುಂಬಡೆಗಳಿವೆ. ಅಲ್ಲಲ್ಲಿ ಜೋಡು ಇಲ್ಲವೇ ಒಂಟಿ ಸ್ತಂಭಿಕೆಗಳೂ ಇವುಗಳ ಮಧ್ಯೆ ದೇವ ಕೋಷ್ಠಗಳೂ ಅರೆಕಂಬಗಳು, ನೋಡಸಿಗುತ್ತವೆ. ಸಪುರಾದ ಸ್ತಂಭಿಕೆಗಳ ಕೆತ್ತನೆ ನವಿರಾಗಿದೆ. ಅರೆಕಂಬಗಳೂ ವಾಸ್ತವವಾಗಿ ಇಡೀ ಕಂಬಗಳನ್ನು ಸೀಳಿ ಭಿತ್ತಿಗೆ ಅಂಟಿಸಿದಂತಿವೆ. ಈ ಬಗೆಯ ಭಿತ್ತಿಸ್ತಂಭಗಳನ್ನು ಕೇವಲ ಅಲಂಕರಣೆಗಾಗಿ ಕಂಡರಿಸಲಾಗಿದೆಯೆಂಬುದನ್ನು ನೆನಪಿಡಬೇಕು. ಇವು ಶಿಲ್ಪ ರಹಿತವಾದ ಭಿತ್ತಿಯ ಸರಳತೆಯನ್ನು ಮುರಿದು ಅದಕ್ಕೊಂದು ಅಲಂಕರಣೆಯ ಆಯಾಮ ನೀಡುತ್ತವೆ.

ಜೋಡುಸ್ತಂಭಿಕೆಗಳ ಮಧ್ಯೆ ಕಂಡರಿಸಿರುವ ಸಣ್ಣ ಶಿಖರಗಳನ್ನು ಹೊತ್ತ ದೇವ ಕೋಷ್ಠ ಮಾದರಿಗಳಲ್ಲಿ ಶಿಲ್ಪಗಳಿಲ್ಲದೆ ಖಾಲಿಯಾಗಿವೆ, ಹೊಯ್ಸಳ ಶೈಲಿಯ ವಿವಿಧ ಶಿಖರ ಮಾದರಿಗಳ ಸೂಚಿಕೆಯಂತಿರುವ ಈ ಅಲಂಕಾರಿಕ ಶಿಖರಗಳು ಭಿತ್ತಿಯ ಸೊಬಗನ್ನು ಸಾಕಷ್ಟು ಹೆಚ್ಚಿಸುತ್ತವೆ. ವೇಸರ, ಕಳಿಂಗ, ಭೂಮಿಜ ಮುಂತಾದ ಶಿಖರ ಶೈಲಿಗಳನ್ನು ಇಲ್ಲಿ ಗಮನಿಸಬಹುದು. ಇವೆಲ್ಲ ವಾಸ್ತುಶಿಲ್ಪದ ಅಧ್ಯಯನದಲ್ಲಿ ಅಮೂಲ್ಯವಾಗಿವೆ. ಅಂತೆಯೇ ಇವುಗಳ ಇನ್ನೂ ವಿವರ ಪೂರ್ಣವಾದ ಅಧ್ಯಯನದ ಆಗತ್ಯವಿದೆ,

ಭಿತ್ತಿಯ ಮೇಲ್ತುದಿಯ ಚಜ್ಜ (ಕಪೋತ) ತುಸು ಮುಂಚಾಚಿದೆ. ಇದು S–ಆಕಾರದ ಬಾಗು ಚಜ್ಜದಂತಿಲ್ಲ : ಚೈತ್ಯ ಇಲ್ಲವೆ ಕುಡು ವಿನ್ಯಾಸಗಳನ್ನು ಅಲ್ಲಲ್ಲಿ ಕಂಡರಿಸಲಾಗಿದೆ. ವಾಸ್ತುಶಿಲ್ಪದ ದೃಷ್ಟಿಯಿಂದ ನೋಡಿದರೆ ಈ ಚಜ್ಜ ದೇಗುಲದ ಒಟ್ಟು ವಾಸ್ತುಶಿಲ್ಪಕ್ಕೆ ಮೆರುಗನ್ನು ನೀಡುವಂತೇನೂ ಇಲ್ಲ. ಹೊಯ್ಸಳಶೈಲಿಯಲ್ಲಿ ಸಾಮಾನ್ಯವಾಗಿ ಮೆರುಗನ್ನುಕೊಡುವ ಪಾತ್ರವನ್ನು ಕಪೋತವಹಿಸುತ್ತದೆಯೆನ್ನುವ ಹಿನ್ನೆಲೆಯಲ್ಲಿ ಈ ಮಾತು ಹೌದೆನ್ನಿಸುತ್ತದೆ.

ಅಂತರಾಳ ಮತ್ತು ನವರಂಗ ಭಾಗಗಳಿಗೆ ಸಂಬಂಧಿಸಿದಂತಿರುವ ಕಪೋತದ ಮೇಲೆ ಕೈಪಿಡಿಗಳಿವೆ. ಇವುಗಳಲ್ಲಿ ಕೆಲವು ಪುಟ್ಟಶಿಖರಗಳಂತಿವೆ. ಇನ್ನೂ ಕೆಲವು ಶಿಲ್ಪ ಕೆತ್ತನೆರಹಿತ ಕೀರ್ತಿಮುಖ ಫಲಕಗಳಂತಿವೆ. ಯೋಗನಾಥಗುಡಿಗೆ ಮಾತ್ರ ಶಿಖರವಿದೆ. ಉಳಿದೆರಡು ಗುಡಿಗಳ ಮೇಲೆ ಈಗ ಶಿಖರಗಳು ಕಂಡು ಬರುವುದಿಲ್ಲ.

'ಯೋಗನಾಥ ಶಿಖರ' ಚಾಲುಕ್ಯ–ಹೊಯ್ಸಳ ಮಾದರಿಯಲ್ಲಿದೆ. (ವೇಸರ) ನಾಲ್ಕು ತಲಗಳನ್ನೊಳಗೊಂಡಿದೆ. ಪ್ರತಿಯೊಂದು ತಲದಲ್ಲೂ ಕರ್ಣಕೂಟ, ಕೀರ್ತಿ ಮುಖ ಫಲಕ ಮತ್ತಿತರ ವಾಸ್ತುಅಲಂಕರಣೆಗಳು ತುಂಬಿವೆ. ಈ ಮಾದರಿಯೇ ಮೇಲಿನ ಮೂರು ತಲಗಳಲ್ಲಿಯೂ ಮರುಕಳಿಸುತ್ತದೆ. ಮೇಲೇರಿದಂತೆ ಶಿಖರವು ಪಿರ ಮಿಡ್ಡಿನಾಕಾರ ತಳೆದು ಸ್ತೂಪಿಯ ಬುಡದಲ್ಲಿ. ಗ್ರೀವದಲ್ಲಿ, ಐಕ್ಯವಾದಂತೆ ಕಂಡು ಬರುತ್ತದೆ. ಶಿಲ್ಪ ಕೆತ್ತನೆ ಹಾಗೂ ಕುಸುರಿಕೆಲಸಗಳಿಲ್ಲದಿದ್ದರೂ ಈ ಶಿಖರ ಆಕರ್ಷಣೀಯ ವಾಗಿದೆ. ಜ್ಯಾಮಿತಿಯವಿನ್ಯಾಸ, ರೇಖಾಪ್ರಾಧಾನ್ಯ, ಜೋಡಣೆಗಳಲ್ಲಿರುವ ಸಮಂಜಸ್ಯ ಇದಕ್ಕೆ ಪ್ರಧಾನಕಾರಣಗಳಾಗಿವೆ. ಶಿಖರದ ಸ್ತೂಪಿ ಬಹುಕೋನಗಳಿಂದ ಹಲವು ಲಂಬಾಂತರ ಏಣುಗಳಿಂದುಂಟಾಗಿದೆ. ಶಿಖರಕ್ಕೆ ಹೊಂದಿಕೊಳ್ಳುವಂತಿದೆ. ಇವರ ಮೇಲೆ ಇಟ್ಟಿರುವ ಕಲಶ ಪ್ರಮಾಣದಲ್ಲಿ ಚಿಕ್ಕದಾಗಿರುವಂತೆ ಕಾಣುತ್ತದೆ. ಈ ಶಿಖರದ ಸುಕನಾಸದಲ್ಲೂ ಶಿಖರದ ಬುಡದಲ್ಲಿ ಕಾಣುವ ಮೂರು ತಲಗಳೇ ಮುಂದುವರಿದಿವೆ. ಇದರ ಮೇಲೆ ಹೊಯ್ಸಳ ಲಾಂಛನವೀಗ ಕಾಣದು. (ಈ ಸ್ಥಳ ಖಾಲಿಯಿದೆ.) ಸುಕನಾಸದ ಮುಖದಂತಿರುವ ಮಹಾನಾಸದ ಮೇಲೆ ಶಿಲ್ಪ ಅಲಂಕರಣೆಯಿಲ್ಲ.

ಯೋಗನಾಥ ದೇಗುಲದ ಒಟ್ಟೂ ಹೊರನೋಟದಲ್ಲಿ ಹೊಯ್ಸಳವಾಸ್ತು ವೈಭವ ಮೆರೆದಾಡುತ್ತದೆ. ಇದಕ್ಕೆ (ಈಗಾಗಲೆ ತಿಳಿಸಿದಂತೆ) ವಿಜಯನಗರ–ಪಾಳೇಗಾರ ಕಾಲದ ದ್ರಾವಿಡ ಶೈಲಿಯ ಸೇರ್ಪಡೆಗಳಾಗಿರುವುದನ್ನು ಹೊರನವರಂಗ, ಮಹಾದ್ವಾರ ಮಂಟಪ, ಗರುಡಸ್ತಂಭ, ಪ್ರಾಕಾರ ಭಾಗಗಳಲ್ಲಿ ನೋಡಬಹುದು. ಹೊರನವರಂಗವನ್ನು ನಿರ್ಮಿಸುವಾಗ ವಾಸ್ತವವಾಗಿ ಮೂಲ ಮುಖಮಂಟಪವನ್ನು ರೂಪಾಂತರಿಸಿದ್ದಲ್ಲದೆ, ಬೇರೆ ದೇಗುಲದ ಬಿಡಿಭಾಗಗಳನ್ನೂ ತಂದು ಕಟ್ಟಿದ್ದು ಕಂಡು ಬರುತ್ತದೆ. ಅಲ್ಲದೆ ಬಳಪಕಲ್ಲಿ ಕಟ್ಟಡಕ್ಕೆ ಕಣಶಿಲೆಯ ಸೇರ್ಪಡೆಗಳಾಗಿ ಮೂಲಸೌಂದರ್ಯಕ್ಕೇ ತುಸು ಭಂಗವಾಗಿದೆ. ಹೀಗಾಗಿ ಈ ಭಾಗಗಳು ಮೂಲ ಹೊಯ್ಸಳ ಕಲಾದೇಗುಲಕ್ಕೆ ಅಷ್ಟು ಅನ್ಯೋನ್ಯವಾಗಿ ಹೊಂದಿಕೊಳ್ಳುವುದಿಲ್ಲ.

ಹೊರನವರಂಗದ್ವಾರದೆದುರು ಮಹಾದ್ವಾರ ಮಂಟಪವಿದೆ. ಇದರ ಮೇಲೆ ಗೋಪುರವಿಲ್ಲ. ಬಳಪಕಲ್ಲಿನ ಈ ಸರಳ ಕಟ್ಟಡ ಅಷ್ಟೇನು ಮನೋಹರವಾಗಿಲ್ಲ. ಇದರ ಅಷ್ಟಕೋನಾಕಾರದ ಕಂಬಗಳೂ ಚೆನ್ನಾಗಿಲ್ಲ. ದೇಗುಲದ ಪ್ರಕಾರ ಬಿದ್ದು ಹೋಗಿದೆ. ಅಲ್ಲಲ್ಲಿ ಕೆಲಭಾಗಗಳನ್ನು ಮಾತ್ರ ಗುರುತಿಸಬಹುದು. ಈ ಮಹಾದ್ವಾರ ದೆದುರಿಗೆ ಸುಮಾರು 10.5 ಮಿ. ಎತ್ತರದ ಗರುಡಸ್ತಂಭವನ್ನು ನಿಲ್ಲಿಸಲಾಗಿದೆ. ಇದರ ಕಂಡರಣೆ ಕೂಡ ಹೇಳಿಕೊಳ್ಳುವಷ್ಟೇನೂ ಸುಂದರವಾಗಿಲ್ಲ.

**ಒಳನೋಟ** : ಮಹಾದ್ವಾರದ ಮೂಲಕ ದೇಗುಲ ಪ್ರವೇಶಿಸಿದರೆ ಮೊದಲು ಸಿಗುವುದು ಹೊರನವರಂಗದ ಪೂರ್ವದ್ವಾರ. (ಉತ್ತರಕ್ಕಿರುವ ದ್ವಾರವನ್ನು ಮುಚ್ಚ ಲಾಗಿದೆ). ಒಂಬತ್ತಂಕಣದ ಈ ಚೌಕನವರಂಗದಲ್ಲಿ ಮೂಲ ಮುಖ ಮಂಟಪ ಅಂತರ್ಗತ ವಾಗಿ ಹೋಗಿದೆ. ಅದರ ಎರಡು ಕಂಬಗಳು ಹಾಗೂ ಮೇಲ್ಛಾವಣೆ ಮಾತ್ರ ಚೆನ್ನಾಗಿದೆ. ಉಳಿದೆರಡು ಕಂಬ ಹಾಗೂ ಎಂಟು ಮೇಲ್ಛಾವಣೆಗಳೂ ಸರಳವಾಗಿವೆ. ನವ ರಂಗಕ್ಕೆ ಸುತ್ತುಗೋಡೆ ಹಾಕಿದ್ದಾರೆ. ನೈರುತ್ಯಮೂಲೆಯಲ್ಲಿ ಒಂದು ಕೊಠಡಿಯನ್ನು ಸೇರಿಸಿ ಅದರಲ್ಲಿ ಚತುರ್ಭುಜಿ ದೇವಿಯ ವಿಗ್ರಹವನ್ನೂ ಇಡಲಾಗಿದೆ, ಈ ಸೇರ್ಪಡೆ ಕೂಡ ಮೂಲವಾಸ್ತು ಸೌಂದರ್ಯವನ್ನು ತುಸು ವಿರೂಪಗೊಳಿಸುತ್ತದೆ.

ಒಳನವರಂಗದ ಪ್ರವೇಶದ್ವಾರ ಹೊಯ್ಸಳಶೈಲಿಯ ಉತ್ತಮ ಕೆತ್ತನೆಗಳಿಂದ ಅಲಂಕೃತವಾಗಿದೆ. ಬಾಗಿಲುವಾಡದ ಲಲಾಟ ಬಿಂಬದಮೇಲೆ ಪ್ರತಿಮೆಯನ್ನು ಕಂಡರಿ ಸಿಲ್ಲ. ಒಂಬತ್ತಂಕಣದ ಈ ನವರಂಗ ಮಂಟಪದಲ್ಲಿ ಸುಂದರವಾದ ನಾಲ್ಕುಕಡಚಲು ಸ್ತಂಭಗಳಿವೆ. ಇವುಗಳ ಮಧ್ಯದ ಅಂಕಣ ನೃತ್ಯ ಮಂಟಪವಾಗಿದೆ. ಇಲ್ಲಿ ತುಸು ಎತ್ತರದ ವೇದಿಕೆಯಿದೆ. ಇದರ ಭುವನೇಶ್ವರಿ ಗುಂಡಿಬಟ್ಟಲಿನಂತೆ ಗೋಳಾಕಾರ ವಾಗಿದೆ. ಕಮಲವಿನ್ಯಾಸದಿಂದ ಅಲಂಕೃತಗೊಂಡಿದೆ. ಒಳನವರಂಗಕೂಡ ಸುತ್ತು ಗೋಡೆ ಹಾಗೂ ಹೊರನವರಂಗದ ಸೇರ್ಪಡೆಯಿಂದಾಗಿ ಈಗ ಕತ್ತಲು ಮಂಟಪವಾಗಿದೆ. ಇದರ ಎಡ ಬಲ ಬಾಜುಗಳಿಗೆ ಹೊಂದಿಕೊಂಡು ಎರಡು ಗರ್ಭಾಂಕಣಗಳಿವೆ, ಪಶ್ಚಿಮಕ್ಕೆ ಅಂತರಾಳ ಅದರ ಹಿಂದೆ ಪ್ರಧಾನಗರ್ಭಾಂಕಣವಿದೆ. ಪಶ್ಚಿಮ ಗೋಡೆಗೆ ತಾಗಿದಂತೆ ಅಂತರಾಳ ದ್ವಾರದ ಅಚೀಚೆಗೆ ಎರಡು ದೇವಕೋಷ್ಠಗಳಿವೆ. ಇವುಗಳಲ್ಲಿ ಗಣಪತಿ ಮತ್ತು ಮಹಿಷಾಸುರಮರ್ದಿನಿ ವಿಗ್ರಹಗಳದ್ನು ಪ್ರತಿಷ್ಠಾಪಿಸಲಾಗಿದೆ. ಅಂತರಾಳ ದ್ವಾರ ಆಕರ್ಷಣೀಯವಾಗಿದೆ, ಇದು ಒಂದು ಸಾಲಿನ ಪಾರ್ಶ್ವಜಾಲಂಧ್ರಗಳನ್ನೊಳಗೊಂಡಿದೆ. ಲಲಾಟಬಿಂಬ ಶಿಲ್ಪರಹಿತವಾಗಿದೆ. ಇಲ್ಲಿ ರಾಮಾನುಜಾಚಾರ್ಯ ಹಾಗೂ ನಮ್ಮಾಳ್ವರ್ ರವರ ಬಿಡಿಶಿಲ್ಪಗಳನ್ನು ತಂದಿಡಲಾಗಿದೆ. ಇವಾದರೂ ವಿಜಯನಗರ ಪಾಳೆಗಾರರ ಕಾಲದವಾಗಿವೆ. ಪಶ್ಚಿಮಕ್ಕಿರುವ ಯೋಗನಾಥ ಗರ್ಭಾಂಕಣದ್ವಾರ ವೈಷ್ಣವ ದ್ವಾರ ಪಾಲಕರಿಂದ ಅಲಂಕೃತಗೊಂಡಿದೆ. ಇವು ಉಬ್ಬುಶಿಲ್ಪಗಳಾಗಿವೆ. ಬಾಗಿಲುವಾಡದ ಲಲಾಟಬಿಂಬಪಟ್ಟಿಯ ಮೇಲೆ ಐದುಶಿಖರಮಾದರಿಗಳನ್ನು ಅಲಂಕಾರಿಕವಾಗಿ

ಕೆತ್ತಲಾಗಿದೆ. ಗರ್ಭಗೃಹದಲ್ಲಿ ಸುಮಾರು 2·7 ಮೀ ಎತ್ತರದ ಯೋಗನಾಥ ವಿಗ್ರಹವನ್ನು ಗರುಡ ಪೀಠದ ಮೇಲೆ ಪ್ರತಿಷ್ಠಾಪಿಸಲಾಗಿದೆ.

ದಕ್ಷಿಣ ಮತ್ತು ಉತ್ತರದಿಕ್ಕಿನ ಗರ್ಭಾಂಕಣಗಳು ಅವುಗಳ ರಚನೆಯಲ್ಲಿ ಒಂದೇ ಬಗೆಯಹಾಗಿವೆ. ದ್ವಾರಪಟ್ಟಿಯ ಬುಡದಲ್ಲಿ ದ್ವಾರಪಾಲಕರು, ಅಪೂರ್ಣಕಂಡರಿಸಿದ ಲಲಾಟಬಿಂಬ, ಮುಂತಾದವುಗಳಿವೆ; ದಕ್ಷಿಣ ಗರ್ಭಗೃಹದಲ್ಲಿ ವೇಣುಗೋಪಾಲನ ವಿಗ್ರಹ (ಸುಮಾರು 1·5ಮೀ ಎತ್ತರ) ಹಾಗೂ ಉತ್ತರಗರ್ಭಾಂಕಣದಲ್ಲಿ ಲಕ್ಷ್ಮೀನಾರಾಯಣ ದಂಪತಿ ವಿಗ್ರಹ ಇವೆ. ಈ ಮೂರು ಗರ್ಭಾಂಕಣಗಳು, ಯೋಗನಾಥ ಗುಡಿ ಅಂತರಾಳ, ಒಳನವರಂಗ ಹಾಗೂ ಮೂರು ಮುಖ ಮಂಟಪಗಳಲ್ಲಿ ಒಟ್ಟು ಹದಿನಾಲ್ಕು ಭುವನೇಶ್ವರಿಗಳಿವೆ. ಇವೆಲ್ಲ ಸುಮಾರು ಅರವತ್ತು ಸೆಂ. ಮೀ ಆಳವಾಗಿವೆ. ಗೋಳಾಕಾರದ ಈ ಮೇಲ್ಚಾವಣಿಯ ಫಲಕಗಳ ಮೇಲೆ ಕಮಲವಿನ್ಯಾಸಗಳಿವೆ. ಒಳನವರಂಗ ಗರ್ಭಾಂಕಣ ಹಾಗೂ ಪಶ್ಚಿಮಕ್ಕಿರುವ ಅಂತರಾಳದ ಒಳಗೋಡೆ ಸರಳವಾಗಿದೆ; ಮಟ್ಟಸವಾಗಿದೆ. ಗೋಡೆ ಸಾಕಷ್ಟು ದಪ್ಪವಿದೆ. ಒಳಭಾಗಗಳಲ್ಲಿ ಹೊರಗಿರುವಂತೆ ಹಿಂಬಣೆ ಮುಂಬಣೆಗಳಿಲ್ಲ. ಅವು ಚತುರಸ್ರಾಕಾರದಲ್ಲಿವೆಯೆಂಬುದು ಗಮನಾರ್ಹ. ಆದರೆ ಈ ಅಂಗಭಾಗಗಳಲ್ಲಿ ಸಾಕಷ್ಟು ಗಾಳಿ ಬೆಳಕುಯಿಲ್ಲವಾಗಿದೆ, ಒಳನೋಟದಲ್ಲಿ ವಾಸ್ತುಶಿಲ್ಪದ ದೃಷ್ಟಿಯಿಂದ ಮುಖ್ಯವಾಗಿ ಗರ್ಭಗೃಹಗಳು ಹಾಗೂ ಅಂತರಾಳದ ನವರಂಗದ ಬಾಗಿಲುವಾಡ, ನವರಂಗಸ್ತಂಭ ಮತ್ತು ಭುವನೇಶ್ವರಿಗಳು ಮನೋಹರವಾಗಿವೆ.

**ಮೂರ್ತಿಶಿಲ್ಪ :** ಹೊಯ್ಸಳಶೈಲಿಯ ಕಲಾಮಂದಿರಗಳಲ್ಲಿ ಸಾಮಾನ್ಯವಾಗಿ ಶಿಲ್ಪ ಅಲಂಕರಣೆಗಳಿಗೇ ಮೊದಲ ಪ್ರಾಶಸ್ತ್ಯ ಸಿಗುತ್ತದೆ. ಯೋಗನಾಥ ದೇಗುಲ ಇದಕ್ಕೆ ಅಪವಾದವಾಗಿದೆ. ದೇಗುಲದೊಳಗಿನ ಪ್ರಧಾನ ಬಿಡಿಶಿಲ್ಪಗಳನ್ನು ಬಿಟ್ಟರೆ ಶಿಲ್ಪ ಅಲಂಕರಣೆ ಇಲ್ಲವೇ ಇಲ್ಲ. ಬಾಗಿಲುದಾಡದ ಪಟ್ಟಿಕೆಗಳ ಮೇಲೆ ವೈಷ್ಣವ ದ್ವಾರಪಾಲಕರ ಉಬ್ಬುಶಿಲ್ಪಗಳಿರುವುದನ್ನು ಇಲ್ಲಿ ಮರೆಯುವಂತಿಲ್ಲ. ಗರ್ಭಾಂಕಣಗಳಲ್ಲಿರುವ ಯೋಗನಾಥ, ವೇಣುಗೋಪಾಲ, ಲಕ್ಷ್ಮೀನಾರಾಯಣ, ನವರಂಗದ ದೇವಕೋಷ್ಠಗಳಲ್ಲಿಟ್ಟಿರುವ ಗಣಪತಿ ಮತ್ತು ಮಹಿಷಮರ್ದಿನಿ ಹೊರನವರಂಗಮಂಟಪದ ಕೊಠಡಿಯಲ್ಲಿರುವ ಚತುರ್ಭುಜದೇವಿ–ಹೀಗೆಹೊಯ್ಸಳಶೈಲಿಯ ಆರು ದುಂಡುಶಿಲ್ಪಗಳು ಮತ್ತು ಅಂತರಾಳದಲ್ಲಿರುವ ರಾಮಾನುಜಾಚಾರ್ಯ ಹಾಗೂ ನಮ್ಮಾಳ್ವಾರ್‌ರವರ ವಿಜಯನಗರ–ಪಾಳೆಗಾರರ ಕಾಲದ ಎರಡು ಶಿಲ್ಪಗಳು ಕಂಡುಬರುತ್ತವೆ. ಇವುಗಳಲ್ಲೆಲ್ಲ ಪ್ರಸನ್ನ ಯೋಗನಾಥ ವಿಗ್ರಹ ಪ್ರತಿಮಾ ಲಕ್ಷಣಶಾಸ್ತ್ರದ ದೃಷ್ಟಿಯಿಂದ ಹಾಗೂ ಧಾರ್ಮಿಕ ವಿಧಿವಿಧಾನಗಳ ದೃಷ್ಟಿಯಿಂದ ತುಂಬ ಅಮೂಲ್ಯವಾಗಿದೆ; ಕನ್ನಡನಾಡಿನ ಮೂರ್ತಿಶಿಲ್ಪಗಳಲ್ಲೇ ಅಪೂರ್ವವಾಗಿದೆ. ಆರ್. ನರಸಿಂಹಾಚಾರ್ಯ[7], ಸಿ. ಹಯವದನ ರಾವ್[8], ಎಸ್. ಶ್ರೀಕಂಠಶಾಸ್ತ್ರಿ[9], ಮೊದಲಾದವರು ಈ ವಿಗ್ರಹವನ್ನು 'ಯೋಗಮಾಧವ'ನೆಂದು ಉಲ್ಲೇಖಿಸಿದ್ದಾರೆ. ಈ ದೇಗುಲದಲ್ಲಿರುವ 1272ರ ಶಾಸನ ಮಾತ್ರ

'ಪ್ರಸನ್ನ ಯೋಗನಾಥ' ಅಥವಾ 'ಶ್ರೀಭರಿತ ಪ್ರಕಾಶ ಪ್ರಸನ್ನಯೋಗನಾಥ' 'ಶ್ರೀ ಯೋಗನಾಥದೇವರು' ಎಂದೆ ಹೆಸರಿದೆ. ಶಾಸನದ ಕೊನೆಯಲ್ಲಿ ಒಂದೆಡೆ ಮಾತ್ರ 'ಶ್ರೀಭರಿತನಾಥ' ಎಂದು ಉಲ್ಲೇಖಿಸಲಾಗಿದೆ[10]. ಈ ಬಗೆಯ ಯೋಗೇಶ್ವರ ವಿಷ್ಣುವಿನ ವರ್ಣನೆಯನ್ನು ಸಿದ್ಧಾರ್ಥಸಂಹಿತೆ[11], ಚತುರ್ವರ್ಗ ಚಿಂತಾಮಣಿ[12] ಮುಂತಾದವುಗಳಲ್ಲೂ ನೋಡಬಹುದು. ಭಾರತೀಯ ಶಿಲ್ಪಗಳಲ್ಲಿ ಕ್ರಿ.ಶ. ಸುಮಾರು 7ನೆಯ ಶತಮಾನದಿಂದೀಚೆಗೆ, ಯೋಗನಾರಾಯಣನಸ್ವರೂಪ ಶಿಲ್ಪಿತವಾಗಿದ್ದರೂ ಮಧ್ಯಕಾಲೀನ ಶಿಲ್ಪಕಲೆಯಲ್ಲಿ ಈ ರೂಪ ಸ್ಪಷ್ಟತೆಯನ್ನು ಪಡೆಯುತ್ತದೆ. ಈ ಬಗೆಯ ಬಿಡಿಶಿಲ್ಪಗಳು ಕರ್ನಾಟಕದಲ್ಲಿ ವಿರಳವೆಂದೇ ಹೇಳಬಹುದು. ಕಲ್ಯಾಣಚಾಲುಕ್ಯ–ಹೊಯ್ಸಳ ಶಿಲ್ಪಕಲೆಯಲ್ಲಿ ಅಲ್ಲೊಂದು, ಇಲ್ಲೊಂದು ಶಿಲ್ಪಗಳನ್ನು (ವಿರಳವಾಗಿ) ನೋಡಬಹುದು. ಬಾಗಲಿಯ 'ಯೋಗಮಾಧವ' ಬಳ್ಳಿಗಾವೆಯ 'ಯೋಗೇಶ್ವರ ತ್ರಿಮೂರ್ತಿ'ಗಳು ಬಿಡಿ ಶಿಲ್ಪಮಾದರಿಗಳಾಗಿವೆ. ಸೋಮನಾಥಪುರ ಮತ್ತಿತರ ಹೊಯ್ಸಳ ದೇಗುಲದ ಭಿತ್ತಿಗಳಲ್ಲಿ ಯೋಗಾಸೀನ ವಿಷ್ಣುವಿನ ಉಬ್ಬುಶಿಲ್ಪಗಳನ್ನು ಗಮನಿಸಬಹುದು. ಆದರೆ ಸೆಟ್ಟಿಕೆರೆಯ ಯೋಗನಾಥಮೂರ್ತಿ ನಿಜಕ್ಕೂ ಅಪೂರ್ವವಾಗಿದೆ. ಚತುರ್ಭುಜ ಯೋಗನಾಥ ಇಲ್ಲಿ ಪದ್ಮಾಸನ ಅಥವಾ ಬ್ರಹ್ಮಾಸನದಲ್ಲಿ (ಬುದ್ಧ–ಜಿತನಂತೆ) ಕುಳಿತಿದ್ದಾನೆ. ಈತನ ಪೀಠದ ಮೇಲೆ ಗರುಡ ಶಿಲ್ಪವಿದೆ. ಹಿಂದಿನ ಬಲಗೈಯಲ್ಲಿ ಚಕ್ರ, ಎಡಗೈಯಲ್ಲಿ ಶಂಖಗಳಿವೆ. ಮುಂದಿನ ಕೈಗಳಲ್ಲಿ, ಬಲಹಸ್ತದಮೇಲೆ ಎಡಹಸ್ತವನ್ನಿಟ್ಟು, ಯೋಗಮುದ್ರೆಸೂಚಿತವಾಗಿದೆ. ವಿಷ್ಣು ಧ್ಯಾನಮುದ್ರೆಯಲ್ಲೂ ಆಯುಧಧಾರಿಯಾಗಿರುವುದು ಇಲ್ಲಿ ಸ್ವಾರಸ್ಯಕರವಾಗಿದೆ. ಯೋಗಶಾಸ್ತ್ರ ತಿಳಿಸುವಂತೆ ಈತನ ನೇತ್ರಗಳು ನಾಸಿಕಾಗ್ರದಲ್ಲಿ ಕೇಂದ್ರೀಕೃತಭಾವವನ್ನಾಗಲಿ, ಅರೆತರೆದವಾಗಿದ್ದು ಏಕಾಗ್ರತೆಯನ್ನಾಗಲಿ ಸೂಚಿಸುವುದಿಲ್ಲ. ಪೂರ್ಣತೆರೆದಂತಿವೆ; ಎದುರು ನೋಟದ ದಿಟ್ಟಭಾವವನ್ನು ಸೂಚಿಸುವಂತಿವೆ. ತುಟಿಯಲ್ಲಿ ಮಂದಸ್ಮಿತಭಾವ ಸೂಸುತ್ತಿದೆ. ಪೀತಾಂಬರ ಧಾರಿ, ಶ್ವೇತವರ್ಣೀಯನಾದ ಯೋಗನಾಥನ ಬೆಂಗಡೆ ಅಲಂಕೃತ ಪ್ರಭಾವಳಿಯಿದೆ. ಇದರ ನಾಗತೋರಣ, ಸಿಂಹಲಲಾಟದಿಂದ ಕೂಡಿದ ಕೀರ್ತಿಮುಖ ಹಾಗೂ ಹೊರಅಂಚಿನಲ್ಲಿ ಕೆತ್ತಿದ ದಶಾವತಾರದ ಬಿಕಣಿಶಿಲ್ಪಗಳು ಆಕರ್ಷಣೀಯವಾಗಿವೆ. ನಮ್ಮನಾಡಿನಲ್ಲಿ ಇದುವರೆಗೆ ದೊರೆತ ಯೋಗನಾಥ ವಿಗ್ರಹಗಳಲ್ಲೇ ಇದು ಅತ್ಯಂತ ಪ್ರಸನ್ನದಾಯಕ ಹಾಗೂ ಅಪೂರ್ವ ಶಿಲಾಮೂರ್ತಿಯಾಗಿದೆ. ಮಹಾಪ್ರಧಾನಿ ಗೋಪಾಲದಂಡನಾಯಕನು ಹೊಯ್ಸಳ ಮುಮ್ಮಡಿ ನರಸಿಂಹನ ಕಾಲದಲ್ಲಿ ಸ್ವತಃ ಪ್ರತಿಷ್ಠಾಪಿಸಿ, ಪೂಜಾನಿಯೋಗಗಳಿಗಾಗಿ ಬಿಟ್ಟ ದಾನದತ್ತಿಗಳ ಹಿನ್ನೆಲೆಯಲ್ಲಿ ಮತ್ತು ಇದರ ಪ್ರಮಾಣದ ಹಿನ್ನೆಲೆಯಲ್ಲಿ (ಸುಮಾರು 2·7 ಮೀ ಎತ್ತರ) ಈ ಮೂರ್ತಿಯ ಮಹತ್ತು ಬೃಹತ್ತುಗಳ ಅರಿವಾದಿತ್ತು. ಜ್ಞಾನಾಧಿದೇವತೆಯಾಗಿ ಯೋಗನಾಥ ಯೋಗಿಗಳ ಆರಾಧ್ಯ ಮೂರ್ತಿಯಷ್ಟೇ ಅಲ್ಲ, ಆತ್ಮಸಾಕ್ಷಾತ್ಕಾರ ಬಯಸುವವರಿಗೆಲ್ಲ ಇದೊಂದು ಪವಿತ್ರ ಪೂಜಾವಿಗ್ರಹವಿದಾಗಿದೆ,

ಯೋಗನಾಥಾಲಯದ ಶಾಸನ ಉಲ್ಲೇಖಿಸುವಂತೆ ಇಲ್ಲಿಯ ಎರಡನೆಯ ಪ್ರಮುಖ ಶಿಲ್ಪ ಶ್ರೀ ಲಕ್ಷ್ಮೀನಾರಾಯಣ ದೇವರದಾಗಿದೆ. ನಾರದ ಪಂಚರಾತ್ರಾಗಮ, ಸ್ಕಂದ ಪುರಾಣ, ಪದ್ಮಪುರಾಣ, ರೂಪಮಂಡನ, ಜಯಾಖ್ಯಸಂಹಿತೆ, ವಿಶ್ವಕರ್ಮಶಾಸ್ತ್ರ[13] ಮುಂತಾದವುಗಳಲ್ಲಿ ಲಕ್ಷ್ಮೀಆಲಿಂಗನ ನಾರಾಯಣನ ಬಣ್ಣನೆ ಬರುವುದುಂಟು. ಆಲಿಂಗ ಮುದ್ರೆಯಲ್ಲಿರುವ ಈ ಬಗೆಯ ಶಿಲ್ಪಗಳು ಹೊಯ್ಸಳ ಶಿಲ್ಪಕಲೆಯಲ್ಲಿ ಮನೋಜ್ಞವಾಗಿ ಮೂಡಿಬಂದಿವೆ. ಸೆಟ್ಟಿಕೆರೆ ತ್ರಿಕೂಟಾಚಲದ ಉತ್ತರಗರ್ಭಾಂಕಣದಲ್ಲಿ ಚತುರ್ಭುಜ ಶಂಖ, ಪದ್ಮ, ಗದಾ ಚಕ್ರಧಾರಿಯಾಗಿ ಸುಖಾಸನದಲ್ಲಿ ನಾರಾಯಣ ಕುಳಿತಿದ್ದಾನೆ. ಈತನ ಎಡತೊಡೆಯ ಮೇಲೆ ಲಕ್ಷ್ಮಿ ಆಲಂಗಿತಳಾಗಿ ಕುಳಿತಿದ್ದಾಳೆ. ಇದು ವಿಷ್ಣುವಿನ ಭೋಗಾಸನಮೂರ್ತಿ. ಅನಂತಶಯನ ನಾರಾಯಣಮೂರ್ತಿಯನ್ನು ಬಿಟ್ಟರೆ ಈ ಬಗೆಯ ಲಕ್ಷ್ಮೀಸಹಿತ ಆಲಿಂಗನಮುದ್ರೆಯ ಆಸೀನ ನಾರಾಯಣ ಅಗ್ರಹ ತೀರ ವಿರಳ. ವಿಗ್ರಹದ ಬೆಂಗಡೆಯಲ್ಲಿ ಅಲಂಕಾರಿಕ ಪ್ರಭಾವಳಿಯಿದೆ. ಇದರ ಹೊರ ಅಂಚಿನಲ್ಲಿ ದಶಾವತಾರ ಶಿಲ್ಪತವಾಗಿದೆ.

ಸೆಟ್ಟಿಕೆರೆ ದೇವಾಲಯದ 1272ರ ಶಾಸನ ಉಲ್ಲೇಖಿಸುವಂತೆ ತ್ರಿಕೂಟದ ಮೂರ ನೆಯ ಮುಖ್ಯ ವಿಗ್ರಹ ಶ್ರೀ ಗೋಪಾಳದೇವರದು.(ಇದನ್ನು ಪ್ರತಿಷ್ಠಾಪಿಸಿದ ದಂಡ ನಾಯಕನ ಹೆಸರೂ ಗೋಪಾಳ) ಆರ್. ನರಸಿಂಹಾಚಾರ್ಯ ಮತ್ತಿತರು ಈ ಮೂರ್ತಿ ಯನ್ನು ವೇಣುಗೋಪಾಲ ಎಂದೇ ಕರೆದಿದ್ದಾರೆ. ಕೈಯಲ್ಲಿ ವೇಣು ಹಿಡಿದು ಬಾರಿಸುತ್ತ ನಿಂತಿರುವ ಈ ಬಗೆಯ ವೇಣುಗೋಪಾಲ ವಿಗ್ರಹಗಳನ್ನು ಮಧ್ಯಕಾಲೀನ ಅದರಲೂ ಹೊಯ್ಸಳಶಿಲ್ಪಗಳಲ್ಲಿ ನೋಡಬಹುದು. ಹರಿವಂಶ (11, 122, 4-5) ಶಿಲ್ಪರತ್ನ[15] ಉತ್ತರಭಾಗ (23, 38, ಪು. 131) ಮುಂತಾದವುಗಳಲ್ಲೂ ಈತನ ಬಣ್ಣನೆಯಿದೆ. ದೇವಾಲಯದ ದಕ್ಷಿಣ ಗರ್ಭಾಂಕಣದಲ್ಲಿರುವ ದ್ವಿಭುಜಗೋಪಾಲ ವಿಷ್ಣುವಿನ ಸ್ಥಾನಕ ಮೂರ್ತಿ. ಸುರಹೊನ್ನೆಗಿಡದಡಿ ಕತ್ತರಿಕಾಲಲ್ಲಿ ನಿಂತು, ವೇಣುವಾದನದಲ್ಲಿ ತನ್ಮಯನಾಗಿ ರುವ ಈ ಗೋಪಾಲನ ಅಂಗಸೌಷ್ಠವ ಹಿತಮಿತವಾಗಿದೆ. ಮುಖದಲ್ಲಿ ಸೂಸುವ ಉಲ್ಲಾಸಭಾವ ಪರಿಣಾಮಕಾರಿಯಾಗಿದೆ. ಈತನ ನಾದಲೀಲೆಯನ್ನಾಲಿಸುತ್ತಿರುವ ಗೋಪ ಗೋಪಿಯರನ್ನೂ, ಗೋ, ಋಷಿ ಶಿಲ್ಪಗಳನ್ನೂ ಪ್ರಭಾವಳಿಯ ಆಚೆ ಮತ್ತು ಈಚಗಿನ ಪಟ್ಟಿಗಳ ಮೇಲೆ ಕೆತ್ತಲಾಗಿದೆ. ಪ್ರಭಾವಳಿಯ ತೋರಣದಂಚಿನಲ್ಲಿ ದಶಾವ ತಾರ ಶಿಲ್ಪಗಳಿವೆ.

ಯೋಗನಾಥ ತ್ರಿಕೂಟದ ಈ ಮೂರೂ ಬಿಡಿ ವಿಗ್ರಹಗಳು ಹೊಯ್ಸಳಶೈಲಿಯ ಉತ್ತಮ ಶಿಲ್ಪರತ್ನಗಳೆಂದು ಧಾರಾಳವಾಗಿ ಹೇಳಬಹುದು. ಇಲ್ಲಿ ಯೋಗನಾಥ ಪ್ರಾಧಾನ್ಯ ಪಡೆದದ್ದುನ್ನು ಹಾಗೂ ಆತನ ವಿಗ್ರಹಾರಾಧನೆ ಮತ್ತು ನಿಯೋಗಗಳಿಗೆ ವಿಶೇಷದಾನದತ್ತಿ ನೀಡಿದ್ದನ್ನೂ ಗಮನಿಸಿದಲ್ಲಿ ಮುಮ್ಮಡಿನರಸಿಂಹನ ಕಾಲದ, ವೈಷ್ಣವ ಮತದ, ಜನಪ್ರಿಯತೆ ಹಾಗೂ ಗೋಪಾಲ ದಂಡನಾಯಕನಿಗೆ ಆ ಬಗೆಗೆ ಇದ್ದ ಮತೀಯ

ಆಸಕ್ತಿ ಗೊತ್ತಾದೀತು. ವಿಷ್ಣುವಿನ ಯೋಗಾಸನ, ಭೋಗಾಸನ ಹಾಗೂ ಸ್ಥಾನಕ ಮೂರ್ತಿಪೂಜೆ ಹದಿಮೂರನೆಯ ಶತಮಾನದಲ್ಲಿ ಪ್ರಕಾಶಪುರ ಅಗ್ರಹಾರದಲ್ಲಿ ಸಾಕಷ್ಟು ಜನಪ್ರಿಯವಾಗಿತ್ತೆಂದೂ ಊಹಿಸಬಹುದು.[16] ಆದರೂ ಈ ವಿಷ್ಣು ಪಂಚಾಯತನ ದೇವಾಲಯದಲ್ಲಿ ಗಣೇಶ ಮತ್ತು ಮಹಿಷಾಸುರಮರ್ದಿನಿ ದುರ್ಗೆಗೆ ಅವರದೇ ಆದ ಸ್ಥಾನವನ್ನು ನೀಡಲಾಗಿದೆ. ಹೊಯ್ಸಳಶೈಲಿಯ ಅಲಂಕರಣೆಗಳಿಂದ ಶೋಭಿಸುತ್ತಿರುವ ಈ ಶಿಲ್ಪಗಳನ್ನು ನವರಂಗದ ದೇವಕೋಷ್ಠಗಳಲ್ಲಿ ಪ್ರತಿಷ್ಠಾಪಿಸಲಾಗಿದೆ. ಮಹಿಷ ಮರ್ದಿನಿ ಕಾಲಿಂದ ಮಹಿಷನನ್ನು ಮೆಟ್ಟಿನಿಂತು, ತನ್ನ ತ್ರಿಶೂಲದಿಂದ ತಿವಿಯುತ್ತಿರುವ ದೃಶ್ಯ ಮನೋಜ್ಞವಾಗಿದೆ. ಗಣೇಶನ ಶಿಲ್ಪವನ್ನು ಸಾಂಪ್ರದಾಯಿಕ ಆಸೀನಮೂರ್ತಿ ಯಾಗಿ ಕಂಡರಿಸಲಾಗಿದೆ. ಹೊರನವರಂಗದ ಕೊಠಡಿಯಲ್ಲಿ ಅನಂತರದಲ್ಲಿ ಪ್ರತಿಷ್ಠಾ ಪಿತವಾಗಿರುವ ಚತುರ್ಭುಜೆ ದೇವಿ ಮುಂಗೈಗಳಲ್ಲಿ ಕಮಲ ಹಿಡಿದಿರುವುದರಿಂದಾಗಿ ಯೋಗನಾಥ ಪತ್ನಿಯಾದ ಲಕ್ಷ್ಮಿಯ ವಿಗ್ರಹವಿರಬಹುದೆಂದು ಊಹಿಸಲಾಗಿದೆ. ಆದರೆ ಇದನ್ನು ಊರ ಈಶಾನ್ಯಕ್ಕಿದ್ದ ಪಾಳು ಶಿವಾಲಯದಿಂದ ತಂದಿಡಲಾಗಿದೆಯಂತೆ.[17] ಈ ವಿಗ್ರಹದ ಪೀಠದ ಮೇಲೆ ಸಿಂಹಲಾಂಛನವಿದೆ. ಹೀಗಾಗಿ ಇದು ಪಾರ್ವತಿಯ ಶಿಲ್ಪವಿದ್ದಿರಬೇಕು. ಸುಖಾಸನದಲ್ಲಿ ಕುಳಿತಿರುವ ಈ ಸ್ತ್ರೀವಿಗ್ರಹಕ್ಕೆ ನಾಲ್ಕುಕೈಗಳಿವೆ. ಎರಡು ಕೈಗಳು ಕ್ರಮವಾಗಿ ಅಭಯ ಹಸ್ತ, ದಾನಮುದ್ರೆಯನ್ನು ಸೂಚಿಸಿದರೆ, ಇನ್ನೆರಡು ಸಹಜಕೈಗಳಲ್ಲಿ ಕಮಲದ ಹೂಗಳನ್ನು ಹಿಡಿದಿದೆ. ಬೆಂಗಡೆಯಲ್ಲಿ ನಾಗ ಬಂಧವನ್ನೊಳಗೊಂಡ ಅಲಂಕೃತ ಪ್ರಭಾವಳಿಯಿದೆ. ವಿಗ್ರಹದ ವಸ್ತ್ರದ ನಿರಿಗೆಗಳನ್ನು ಸಾಂಪ್ರದಾಯಿಕವಾದ ರೀತಿಯಲ್ಲಿ ಚಿತ್ರಿಸಲಾಗಿದೆ. ಇದನ್ನಾಧರಿಸಿ ಶಿಲ್ಪವನ್ನು ಹೊಯ್ಸಳಶೈಲಿಯ ಕೊನೆಯ ಹಂತದ್ದೆಂದು ಊಹಿಸಬಹುದು.

ದೇವಾಲಯದ ಅಂತಾರಳದಲ್ಲಿರುವ ರಾಮಾನುಜಾಚಾರ್ಯ ಹಾಗೂ ನಮ್ಮಾಳ್ವಾರ್ ರವರ ಶಿಲ್ಪಗಳನ್ನು ವಿಜಯನಗರ–ಪಾಳೆಗಾರ ಶೈಲಿಯಲ್ಲಿ ಕಂಡರಿಸಲಾಗಿದ್ದು ಹೊಯ್ಸಳಶಿಲ್ಪದಷ್ಟು ನಾಜೂಕಾಗಿಲ್ಲ. ಇವು ಮತಾಚಾರ್ಯರ ಸರಳಶಿಲ್ಪಗಳಾಗಿವೆ; ಅನಂತರ ಸೇರ್ಪಡೆಗಳಾಗಿವೆ.

ಸೆಟ್ಟಿಕೆರೆ ದೇಗುಲ ನಿರ್ಮಾಣಕ್ಕೆ ಹಾಗೂ ಶಿಲ್ಪಗಳ ಕಂಡರಣೆಗೆ ಬಳಸಿದ ಕಲ್ಲನ್ನು ಸಾಮಾನ್ಯವಾಗಿ ಬಳಪದಕಲ್ಲು (ಸಾಬೂನುಕಲ್ಲು) ಎಂದು ಕರೆಯುತ್ತಾರೆ 'ಸ್ಟಿಯಟೈಟ್' ಶಿಲಾ ಪದರುಗಳು ಈ ಪ್ರದೇಶದಲ್ಲಿವೆ. ಹೊಯ್ಸಳ ಶೈಲಿಯಲ್ಲಿ ಈ ಶಿಲೆಯ ಬಳಕೆ ವಿಶೇಷವಾಗಿದೆ. ಅನಂತರದ ವಿಜಯನಗರ-ಪಾಳೆಗಾರರ ಕಾಲದ ಶಿಲ್ಪಿಗಳು ಕಣಶಿಲೆಗೆ ಪ್ರಾಶಸ್ತ್ಯ ನೀಡಿ ಅದನ್ನು ಈ ದೇವಾಲಯದ ನಿರ್ಮಾಣದಲ್ಲಿ ಬಳಸಿದ್ದಾರೆ. ಈ ಶಿಲೆಯೂ ಈ ಪ್ರದೇಶದಲ್ಲಿ ಸಿಗುವುದು. ಈ ಶಿಲೆಗಳನ್ನು ಕಂಡರಿಸಿ ದೇಗುಲ ನಿರ್ಮಾಣ ಮಾಡಿದ ಸ್ಥಪತಿ, ಶಿಲ್ಪಿಗಳ ವಿವರ ನಮಗೆ ಇನ್ನೂ ಸಿಕ್ಕಿಲ್ಲ. ಹೊಯ್ಸಳರ ಕಾಲದಲ್ಲಿ ಶಿಲ್ಪಿಗಳು, ಸ್ಥಪತಿಗಳು ತಮ್ಮ ಹೆಸರನ್ನು ಬಹಿರಂಗಪಡಿಸುವ ರೂಢಿಯಿಟ್ಟಿದ್ದರು.

ಆದರೆ ಎಲ್ಲ ಹೊಯ್ಸಳ ದೇಗುಲಗಳಲ್ಲೂ ಇವು ಲಭ್ಯವಿಲ್ಲ. ಆದರೆ ಈ ದೇಗುಲದಲ್ಲಿ ಶಿಲಾಕರ್ಮ, ಜೀರ್ಣೋದ್ಧಾರಕಾರ್ಯ, ಅಲಂಕರಣೆ ಮಾಡುವುದರ ಕುರಿತ ಉಲ್ಲೇಖ ದೇಗುಲದಲ್ಲಿರುವ ಶಾಸನದಲ್ಲಿದೆ. ಈ ದೇವಾಲಯದ ಪರಿಸೂತ್ರ ಹ(ಕ)ಲ್ಲ ಕೋಟೆ (ಪ್ರಾಕಾರ?) ಕಲ್ಲಬಾಗಿಲವಾಡ (ಶಿಲಾದ್ವಾರ), ಕಲ್ಲಕೊಠಾರ (ಕಣಜ), ಕಲ್ಲಭಾಣಸದ ಮನೆ (ಅಡಿಗೆಮನೆ) ಮುಂತಾದವುಗಳ ಕೆಲಸಕ್ಕಾಗಿ ಹಾಗೂ ಭಂಡಿ ಬಳಿ ಕೆಲಸಕ್ಕಾಗಿ ಕಲ್ಲು ಕುಟ್ಟಿಗಳ(ಶಿಲ್ಪಿಗಳ) ಜೀವಿತಕ್ಕಾಗಿ ಹಾಗೂ "ಇಟ್ಟಿಗೆಸೊದೆ, (ಸುಧಾಲೇಪನ) ಸಂಧಿವಾಳ, ಕೋಟೆಯುದಿಗ್ಗಣ ವೊಳಗಾದ ಎಲ್ಲ ಕೆಲಸಗಳಿಗೆ ಕೂಡ" 1272ರಲ್ಲಿ ದಾನ ನೀಡಲಾಗಿದೆ.[18] ಇಲ್ಲಿ ಬಳಸಿದ ಕೆಲಪಾರಿಭಾಷಿಕ ಪದಗಳು ವಾಸ್ತುಶಿಲ್ಪದ ಬಗೆಗಿನ ತಾಂತ್ರಿಕ ಮಾಹಿತಿ ನೀಡುವಂಥವಾಗಿವೆ.[19] ಸೆಟ್ಟಿಕೆರೆ ಯೋಗನಾಥ ದೇಗುಲವನ್ನು ಕಟ್ಟಿಸಿದವ ಅಗಸ್ತ್ಯಗೋತ್ರದ ಗೋಪಾಲದಂಡನಾಯಕ. ಈತ ಹೊಯ್ಸಳ ಭುಜಬಲ ಮುಮ್ಮಡಿ ವೀರನರಸಿಂಹನ ಮಹಾಪ್ರಧಾನಿಯೂ, ದಂಡನಾಯಕನೂ ಆಗಿದ್ದ. ಈತನ ತಂದೆ ಮುಮ್ಮಡಿ ನರಸಿಂಹನ ಪ್ರಿಯಪ್ರಧಾನನಾಗಿದ್ದಂಥ ನಾಚರಸ. ತಾಯಿ ಸೋವುಲದೇವಿ. ಈತನ ಪೂರ್ವಿಕ ಮಲ್ಯಣ್ಣ. ಕಲ್ಯಾಣರಾಜರ ಗಜಸೇನಾನಿಯಾಗಿದ್ದವ ನಂತೆ. ಗೋಪಾಲದಂಡನಾಯಕ ಅಸಂದಿನಾಡಿನ ಹೊಯ್ಸಳಸೀಮೆಯಲ್ಲಿ ಶ್ರೀಭರಿತ ಪ್ರಕಾಶಪುರವನ್ನು ಸ್ಥಾಪಿಸಿ 1272ರಲ್ಲಿ ಪ್ರಸನ್ನ ಯೋಗನಾಥ ದೇವರನ್ನೂ ತ್ರಿಕೂಟದಲ್ಲಿ ಪ್ರತಿಷ್ಠಾಪಿಸಿದನೆಂಬುದು ಶಾಸನೀಯವಾಗಿ ಸ್ಪಷ್ಟವಾಗುತ್ತದೆ.[20]

ದೇಗುಲ ನಿರ್ಮಾಣ ಹಾಗೂ ದೇವರ ಪ್ರತಿಷ್ಠಾಪನೆ ಎಷ್ಟು ಮುಖ್ಯವೋ ಅಷ್ಟೆ ಅವಶ್ಯವಾಗಿ ಮಾಡಬೇಕಾಗಿರುವುದು ಅದರ ಕಾರ್ಯ ನಿರ್ವಹಣೆಗಾಗಿ ಬೇಕಾದ ವ್ಯವಸ್ಥೆ. ಈ ವಿಷಯದಲ್ಲಿ ಕೂಡ ಸ್ವತಃ ಗೋಪಾಲದಂಡನಾಯಕ ಹಾಗೂ ಆತನ ಮಗಳು ಆಸಕ್ತಿ ವಹಿಸಿದ್ದಲ್ಲದೆ ಗಣನೀಯ ಪಾತ್ರವಹಿಸಿದ್ದರು. ಪ್ರಕಾಶಪುರ ಅಗ್ರಹಾರದ ಮೂವತ್ತೇಳು ವೃತ್ತಿಯ ಬ್ರಾಹ್ಮಣೋತ್ತಮರನ್ನು ಒಡಂಬಡಿಸಿ ದೇಗುಲವನ್ನು ನಡೆಸುವಂತಾಗಬೇಕೆಂದು ಈತ ಸಾಕಷ್ಟು ವ್ಯವಸ್ಥೆ ಮಾಡಿದನು. ಅಲ್ಲದೆ ಈ ದೇಗುಲದ ಅಮೃತಪಡಿಯೇ ಮೊದಲಾದ ಸಮಸ್ತ ಅಂಗಭೋಗಕ್ಕಾಗಿ ಹತ್ತು ವೃತ್ತಿಯನ್ನು ಬಿಟ್ಟುಕೊಟ್ಟನು. ಈ ಹತ್ತು ವೃತ್ತಿಯಲ್ಲಿ ದೇವಾಲಯದ ಯಾವ ಯಾವ ನಿಯೋಗ ಗಳಿಗೆ ಎಷ್ಟೆಷ್ಟು ಹಣ ಮೀಸಲಿಡಲಾಗಿದೆಯೆಂಬುದನ್ನು ಸಂದೇಹಕ್ಕೆಡೆಯಿರದಂತೆ ಎಪ್ಪತ್ತೈದು ಸಾಲುಗಳ ದೀರ್ಘ ಶಾಸನ ಅಧಿಕೃತವಾಗಿ ದಾಖಲುಪಡಿಸಿರುವುದೂ ಸ್ವಾರಸ್ಯಕರವಾಗಿದೆ.

ಗೋಪಾಳದಂಡನಾಯಕ ವರ್ಷಂಪ್ರತಿ ಶ್ರೀಭರಿತ ಪ್ರಕಾಶಪುರ ಪ್ರಭುವಾದ ಪ್ರಸನ್ನಯೋಗೇಶ್ವರ ಪೂಜೆ ಮತ್ತು ಸಮಾರಾಧನೆ ಮಾಡಿಸುತ್ತಿದ್ದ. ಇದಕ್ಕಾಗಿಯೇ ಒಂದು ವೃತ್ತಿಯ ಫಲ (ಆದಾಯ) ವನ್ನು ಮೀಸಲಾಗಿಟ್ಟಿದ್ದ. ಆದರೆ ಈ ಆದಾಯದ ವಿವರವನ್ನು ಶಾಸನದಲ್ಲಿ ಉಲ್ಲೇಖಿಸಿಲ್ಲ. ಹದಿಮೂರನೆಯ ಶತಮಾನದ ಉತ್ತರಾರ್ಧ

ದಲ್ಲಿ ಯೋಗನಾಥಾಲಯ ಸಮೃದ್ಧವಾದ ಒಂದು ಸಾಮಾಜಿಕ ಧಾರ್ಮಿಕ ಸಾಂಸ್ಕೃತಿಕ ಸಂಸ್ಥೆಯಾಗಿದ್ದಿರಬೇಕು. ಅದರ ತೋಟಿತುಡಿಕಗಳನ್ನೊಳಗೊಂಡಂತೆ ದೇಗುಲ ಕ್ಷೇತ್ರಗಳೂ ವಿಸ್ತೃತ ಗೊಂಡಿದ್ದಿರಬೇಕು. ದೇವಾಲಯದ ಕೊಠಾರಿ(ಕಣಜ) ಸಾಕಷ್ಟು ದೊಡ್ಡದಾಗಿದ್ದಿರಬೇಕು. ಇವುಗಳ 'ಆರೈಕೆ' (ಮೇಲ್ವಿಚಾರಣೆ) ಒಂದು ಜವಾಬ್ದಾರಿಯ ಕೆಲಸವೇ ಆಗಿತ್ತು. ಈ ಎರಡೂ ನಿಯೋಗಗಳನ್ನೂ ಗೋಪಾಳದಂಡನಾಯಕ ತನ್ನ ಮಗಳಾದ ಬಾಯಕ್ಕಳಿಗೇ ವಹಿಸಿಕೊಟ್ಟ. ಇವಳ ಜೀವಿತಕ್ಕಾಗಿ ಇಪ್ಪತ್ತು ಗದ್ಯಾಣ ಗಳನ್ನು ಮೀಸಲಾಗಿಟ್ಟಿದ್ದ. ಈ ಕಾಲದ ವೈಷ್ಣವ ದೇಗುಲದ ಕಾರ್ಯ ನಿರ್ವಹಣೆಯಲ್ಲಿ ದಂಡನಾಯಕ ಪುತ್ರಿಯಂಥ ಪ್ರಮುಖ ಸ್ತ್ರೀಯೊಬ್ಬಳು ಎಷ್ಟು ಜವಾಬ್ದಾರಿ ಕೆಲಸ ವನ್ನೂ ವಹಿಸಿದ್ದಳೆಂಬುದು ಸ್ವಾರಸ್ಯಕರವಾಗಿದೆ.

ಯೋಗನಾಥ ದೇವಸ್ಥಾನದ ಇನ್ನುಳಿದ ನಿಯೋಗಗಳೂ ಅವುಗಳ ಖರ್ಚಿಗಾಗಿ ತೆಗೆದಿಟ್ಟ ಹಣದ ವಿವರಗಳು ಸಾಮಾಜಿಕ–ಆರ್ಥಿಕ ಇತಿಹಾಸದ ದೃಷ್ಟಿಯಿಂದ ತುಂಬ ಉಪಯುಕ್ತವಾಗಿವೆ. ಇವುಗಳನ್ನು ಪ್ರತ್ಯೇಕವಾಗಿ ವಿಶ್ಲೇಷಿಸಿದಲ್ಲಿ ಆ ಕಾಲದ ಜನರ ಸಾಮಾಜಿಕ–ಆರ್ಥಿಕ ಜೀವನದ ಮೇಲೆ ಹೆಚ್ಚಿನ ಬೆಳಕು ಚೆಲ್ಲಲು ಸಾಧ್ಯವಾದೀತು.[21]

೧. ಸೆಟ್ಟಿಕೆರೆ ದೇವಾಲಯದ ಶ್ರೀ ಯೋಗನಾಥ ದೇವರು, ಶ್ರೀ ಲಕ್ಷ್ಮೀನಾರಾ ಯಣ ದೇವರು, ಶ್ರೀ ಗೋಪಾಳದೇವರು, ಶ್ರೀ ವಿಘ್ನೇಶ್ವರ ದೇವರು, ಶ್ರೀ ದುರ್ಗಾದೇವಿ ಸಹಿತ ಎಲ್ಲ ದೇವರುಗಳ ನಿತ್ಯ ನೈಮಿತ್ತಿಕ ಮೊದಲಾದ ಅಮೃತಪಡಿಗೆ ಮತ್ತು ಆ ದೇವರ ಊಳಿಗಕ್ಕೆ ನಡೆಯುವಂಥ ನಂಬಿಯರಿಗೆ ಜೀವಿತಕ್ಕಾಗಿ ಆರು ಗದ್ಯಾಣಗಳನ್ನು ತೆಗೆದಿಡಲಾಗಿತ್ತು.
೨. ಸಿಂಗಾರಿಗಳಿಗೆ. (ಅಲಂಕರಣೆ ಮಾಡುವವರಿಗೆ) ಜೀವಿತಕ್ಕಾಗಿ ಆರು ಗದ್ಯಾಣ.
೩. ಪರಿಚಾರಕರಿಗೆ, ಜೀವಿತಕ್ಕಾಗಿ ನಾಲ್ಕು ಗದ್ಯಾಣ,
೪. ಬಾಣಸಿಗರಿಗೆ, (ಅಡಿಗೆ ಭಟ್ಟರಿಗೆ) ಜೀವಿತಕ್ಕಾಗಿ ನಾಲ್ಕು ಗದ್ಯಾಣ ಮತ್ತು
೫. ಅಭ್ಯಣೆಯತಹ (ಪೂಜೆಗೆ ನೀರು ತರುವ) ಪರಿಚಾರಕರಿಗೆ ಜೀವಿತಕ್ಕಾಗಿ ಎರಡು ಗದ್ಯಾಣಗಳನ್ನು ಕೊಟ್ಟಿದ್ದರು.

ಈ ರೀತಿಯಾಗಿ ಐದುನಿಯೋಗಗಳಿಗೆ ಜೀವಿತಕ್ಕಾಗಿ ಇಪ್ಪತ್ತೆರಡು ಗದ್ಯಾಣ ಗಳನ್ನು ನೀಡಲಾಗಿದ್ದವು ಇಲ್ಲಿ ನಂಬಿಯರು, ಸಿಂಗಾರಿ, ಪರಿಚಾರಕ, ಬಾಣಸಿಗರನ್ನು ಒಂದು ಗುಂಪಾಗಿ ಉಲ್ಲೇಖಿಸಲಾಗಿದೆ. ಇವರು ದೇವಪೂಜೆಕಾರ್ಯಕರ್ತರು.

೬. ಇಬ್ಬರು ಡವರಿರರಿಗೆ
೭. ಒಬ್ಬ ಕೆಡತೆತ್ತು ಕಾವ ಅಂಘರಿಕನಿಗೆ (ಅಂಗರಕ್ಷಕ, ಆರಕ್ಷಕ ?)
೮. ಒಬ್ಬ ಮಾಲೆಗಾರನಿಗೆ
೯. ಒಬ್ಬ ಬಾಹ್ಯನಿಗೆ (ಕಸ ಗುಡಿಸುವವ ?)
೧೦. ಒಬ್ಬ ಮಾಲೆಗಾರನಿಗೆ

ಹೀಗೆ ಒಟ್ಟು ಆರು ನಿಯೋಗಗಳಿಗೆ ಜೀವಿತಕ್ಕಾಗಿ ಇಪ್ಪತ್ತೆರಡು ಗದ್ಯಾಣಗಳನ್ನು ನೀಡಲಾಗಿತ್ತು. ಆದರೆ ಇಲ್ಲಿ ಒಬ್ಬೊಬ್ಬರಿಗೆ ಎಷ್ಟೆಷ್ಟು ಗದ್ಯಾಣಗಳನ್ನು ಮೀಸಲಾಗಿಡ ಲಾಗಿತ್ತೆಂಬ ವಿವರವಿಲ್ಲ. ಇವರನ್ನೆಲ್ಲ ಒಟ್ಟಿಗೆ ಒಂದೆಡೆ ಹೆಸರಿಸಿದ್ದೂ ಸ್ವಾರಸ್ಯಕರ ವಾಗಿದೆ. ಡವರಿಗ, ಅಂಘರಿಕ, ಮಾಲೆಗಾರ, ಬಾಹ್ಯ–ಇವರು–ದೇವಾಲಯದ ಸೇವಾ ಕಾರ್ಯಕರ್ತರು.

೧೧. ಭರಿತೆಯ ದಂಡನಾಯಕರಿಗೆ ಹೆಗ್ಗಡಿಕೆ ಮತ್ತು ಭಂಡಾರಿಕೆ ಎಂಬ ಎರಡು ನಿಯೋಗಗಳನ್ನೂ ನಿರ್ವಹಿಸುವುದರಿಂದ ಅವರ ಜೀವಿತಕ್ಕಾಗಿ ನಲವತ್ತು ಗದ್ಯಾಣಗಳನ್ನು,

೧೨. ಸಿಂಗೆಯ ದಂಡನಾಯಕರಿಗೆ
ಸೇನ ಬೋವಿಕೆ ಮತ್ತು ಅದ್ದಿಕ ಎಂಬ ಎರಡು ನಿಯೋಗಗಳನ್ನು ಮಾಡು ವುದರಿಂದ ಅವರ ಜೀವಿತಕ್ಕಾಗಿ ನಲವತ್ತು ಗದ್ಯಾಣಗಳನ್ನೂ ಕೊಡಲಾಗಿ ದ್ದವು.

ಇಲ್ಲಿ ಹೆಗ್ಗಡಿಕೆ, ಭಂಡಾರಿಕೆ, ಸೇನಬೋವಿಕೆ, ಅದ್ಧಿಕ ಕಾರ್ಯಗಳು ದೇಗುಲದ ಆಡಳಿತ ಕಾರ್ಯನಿರ್ವಹಣೆಯನ್ನು ಸೂಚಿಸುವವು.

೧೩. ಪಾಯಸ ಪಕ್ವಾನ್ನಾದಡುಗೆಗೂಡಿದ
ರಂಗವಾಲಿಯ ನಿಯೋಗಕ್ಕಾಗಿ, ಜೀವಿತಕ್ಕಾಗಿ, ಎರಡು ಗದ್ಯಾಣ

೧೪. ಗಾಣಿಗ, ಕುಂಬಾರ ಮತ್ತು ಅಗಸ—ಹೀಗೆ ಮೂವರ ಜೀವಿತಕ್ಕಾಗಿ ಎರಡು ಗದ್ಯಾಣ,

೧೫. ವೈಷ್ಣವರ ಜೀವಿತಕ್ಕಾಗಿ ಮೂರು ಗದ್ಯಾಣ,

೧೬. ಹೀಗೆ ಅಮೃತಪಡಿ ಜೀವಿತವರ್ಗಗಳು, ಮಡಿವರ್ಗಗಳು, ಶ್ರೀಗಂಧ• ಕರ್ಪೂರ, ಧೂಪ ಮೊದಲಾದ ಸಮಸ್ತ ಅಂಗಭೋಗ ರಂಗಭೋಗ, ಚೈತ್ರ ಪವಿತ್ರ, ಪಂಚಪರ್ವತಗಳೇ ಮೊದಲಾದ ಎಲ್ಲ 'ಶ್ರೀಕಾರ್ಯ'ಗಳ ಬ್ರಯಕ್ಕೆ (ವ್ಯಯಕ್ಕೆ, ಖರ್ಚಿಗಾಗಿ) ಒಟ್ಟು ಎಂಟುವೃತ್ತಿಯ ಫಲ (ಆದಾಯ)ವನ್ನು ತೆಗೆದಿಡಲಾಗಿತ್ತು. ಅಂತೂ ಈ ಎಲ್ಲ ರೀತಿಯ ಉಪಾರ್ಜನೆ ಸಲ್ಲುವಂತಾಗಬೇಕೆಂಬುದು ದಂಡನಾಯಕನ ಆಶಯವಾಗಿತ್ತು; ಅದಕ್ಕೆ ತಕ್ಕ ಏರ್ಪಾಡುಗಳನ್ನು ತಪ್ಪದೆ ಮಾಡಿದ್ದ. ಯೋಗನಾಥ ದೇವರ ತೋಟಗಳನ್ನು ಇಕ್ಕಿಸುವ ಬ್ರಯಕ್ಕಾಗಿ (ವ್ಯಯಕ್ಕಾಗಿ) ಅಲ್ಲಿರುವ ತೋಟಿ ಗರ ಜೀವಿತಕ್ಕಾಗಿ ದೇವರ ಆಭರಣಗಳಿಗಾಗಿ ಮುಂತಾದ ಎಲ್ಲ ಬಗೆಯ ಖರ್ಚುಗಳಿಗಾಗಿ ಒಂದು ವೃತ್ತಿಯ ಆದಾಯವನ್ನೂ ಮೀಸಲಾಗಿಡಲಾ ಗಿತ್ತು. ಇದರಲ್ಲಿ ಈ ಮೊದಲೇ ತಿಳಿಸಿದ ಶಿಲಾಕರ್ಮ, ಜೀರ್ಣೋದ್ಧಾರ ಕಾರ್ಯಗಳೂ ಒಳಗೊಂಡಿವೆ.

ಗೋಪಾಲದಂಡನಾಯಕನಿಲ್ಲದೆ ಆ ಅಗ್ರಹಾರದ ಬ್ರಾಹ್ಮಣರೂ ಯೋಗನಾಥ ದೇವರ ತೋಟಗಳಿಗಾಗಿ ಭೂದಾನ ನೀಡಿದ್ದರು ; ಆ ಭೂಪ್ರದೇಶದ ಚತುರ್ಗಡಿಗಳನ್ನು ಶಾಸನದಲ್ಲಿ ಸ್ಪಷ್ಟವಾಗಿ ತಿಳಿಸಲಾಗಿದೆ. ಹೂತೋಟ ಮತ್ತು ತೋಟವಮಾಡುವುದಕ್ಕಾಗಿ ಚತುವಟ್ಟವೇ ಮೊದಲಾದ ಯಾವುದೇ ತೆರಗಡೆ ಹೊರುಗಡೆಯಿಲ್ಲದೆ ಸರ್ವಬಾಧಾ ಪರಿಹಾರಾರ್ಥವಾಗಿ, ಆ ಚಂದ್ರಾರ್ಕಸ್ಥಾಯಿಯಾಗಿ, ಧಾರಾಪೂರ್ವಕವಾಗಿ ಸ್ವರುಚ್ಯಾ ಒಡಂಬಟ್ಟು ಮಹಾಜನರು ಕೊಟ್ಟರೆಂದು ಶಾಸನ ತಿಳಿಸುತ್ತದೆ. ಯೋಗನಾಥ ದೇವರಿಗೆ ಆ ಸೆಟ್ಟಿಕೆರೆಯ ಹಳ್ಳಿಯ ಓರಿವೂರಲ್ಲಿ ಬೆಳೆಯುವ ಎಲ್ಲ ಬಗೆಯ ಧ್ಯಾನಗಳನ್ನು ನೀಡ ಬೇಕು. ಅವನ್ನು–'ದೇವಕೊಳಗ'ದಲ್ಲಿ ಅಳೆದು ಆಯ ಸಲ್ಲಿಸಬೇಕು. ಸಂತೆಯ ಆಯವೂ ದೇವರಿಗೆ ಆಚಂದ್ರಾರ್ಕಸ್ಥಾಯಿಯಾಗಿ ಸಲ್ಲಬೇಕು ಎಂದು ಶಾಸನ ವಿಧಿಸುತ್ತದೆ.

ಆ ಸೆಟ್ಟಿಯ ಕೆರೆಯ ಮಹಾಜನರು ತಾವು ವರ್ಷಂಪ್ರತಿ ಮಾಡುವ ಶ್ರೀಭರಿತ ಪ್ರಕಾಶಪ್ರಭುವಾದ ಯೋಗೇಶ್ವರ ಪೂಜೆಯ ಮತ್ತು ಸಮಾರಾಧನೆಯ ಖರ್ಚಿಗಾಗಿ ಮೂರು ಸಲಗೆ ಗದ್ದೆಯನ್ನೂ ಆರುನೂರು ಕಂಬ ಬೆದ್ದಲನ್ನೂ ಯಾವುದೇ ತೆರುಗಡೆ ಹೊರುಗಡೆಯಿಲ್ಲವೆ ಸರ್ವಮಾನ್ಯವಾಗಿ ಆಚಂದ್ರಾರ್ಕಸ್ಥಾಯಿಯಾಗಿ, ಸ್ವರುಚ್ಯಾಂ ಒಡಂಬಟ್ಟು ಧಾರಾಪೂರ್ವಕವಾಗಿ ಬಿಟ್ಟುಕೊಟ್ಟರು.

ಆ ಸೆಟ್ಟಿಕೆರೆ ಹಳ್ಳಿ ಓರಿಯೂರಲ್ಲಿ ಶ್ರೀ ಯೋಗನಾಥದೇವರ ಪವಿತ್ರಾರೋಹಣಕ್ಕೆ ಇನ್ನೂರು 'ಹಲ'ತೂಕದ ನೂಲನ್ನೂ ಕೊಡಬೇಕು. ಆ ದೇವರ ಅಮೃತಪಡಿ ಅನ್ನಕ್ಕೆ ಹಾಗೂ ಸಮಾರಾಧನೆಯ ಅನ್ನಕ್ಕೆಂದು ಓರಿಯೂರ ಮುಂತಾದ ಎಲ್ಲ ಹಳ್ಳಿಗಳಿಂದಲೂ ಐವತ್ತು ಭಂಡಿಯುಡುಗಬ್ಬು ಆಚಂದ್ರಾರ್ಕಸ್ಥಾಯಿಯಾಗಿ ಸಲ್ಲುವುದು ಎಂದೂ ವಿಧಿಸ ಲಾಗಿದೆ.

ಆ ಸೆಟ್ಟಿಕೆರೆಯ ಉಳಿದ ಮಹಾಜನರು ಗೋಪಾಳದಂಡನಾಯಕರಿಗೆ ತಮ್ಮ 'ಪ್ರೀತಿಗೊಡಗಿ' (ಪ್ರೀತಿಯ ಕೊಡುಗೆ ?) ಯಾಗಿ ತೋಟಸ್ಥಳಕ್ಷೇತ್ರವನ್ನು ಉಂಬಳಿ ಯಾಗಿ ನೀಡಿದರು. ಹಾಗೆಯೆ ಭರಿತೆಯ ದಂಡನಾಯಕರಿಗೂ, ಸಿಂಗೆಯ ದಂಡನಾಯಕ ರಿಗೂ ತಮ್ಮ 'ಪ್ರೀತಿಗೊಡಗಿ'ಯಾಗಿ ಒಂದು ಸಾವಿರ 'ಕಂಬ' ತೋಟಕ್ಷೇತ್ರವನ್ನು, ಎರಡು ಸಾವಿರ 'ಕಂಬ' ಕ್ಷೇತ್ರವನ್ನೂ ಉಂಬಳಿಯಾಗಿ, 'ಕೊಡುಗೆ'ಯಾಗಿ, ಧಾರಾ ಪೂರ್ವಕವಾಗಿ ಬಿಟ್ಟರು. ಇಷ್ಟಲ್ಲದೆ ಈ ಉಂಬಳಿ ಜಮೀನನ್ನೂ ಮತ್ತು ಅದಕ್ಕೆ ಸಂಬಂಧಿಸಿದ ಕೆರೆಕಾಲುವೆಗಳನ್ನು ಸರಿಯಾಗಿ ನೋಡಿಕೊಳ್ಳುವ ವ್ಯವಸ್ಥೆಯನ್ನೂ ಮಹಾಜನರು ಮಾಡಿದ್ದರು. ಅಲ್ಲದೆ ಕೊಳವಾಳಿಕೆ, ತೋಟದ ತಳವಾರಿಕೆ, ಊರ ತಳವಾರಿಕೆ, ಸೇನಬೋವಿಕೆಗಳಿಗೆ ತಗಲುವ ಖರ್ಚನ್ನೂ ಆ ತೋಟಗಳೆ ಮುಂತಾದ ಗದ್ದೆ ಗಟ್ಟಿನ ಭೂಮಿಯ ಕಂಬವಳೆಯಲಿಕ್ಕಾಗಿ ಬರುವ ಪ್ರಾಪ್ತಿಯನ್ನು ಆ ಊರಿನ ವೃತ್ತಿ ಮಂತರೂ, ನಾಯಕರೂ. ಗೌಂಡುಗಳೂ, ದೇವದಾನದವರೂ, ಬ್ರಹ್ಮಪುರಿಗಳೂ ಹದಿಕೆಯ ಬಟ್ಟು ತೆರುವರು ಮತ್ತು ಈ ಮರ್ಯಾದೆಯಲ್ಲಿ ತಮ್ಮ ಕಾರ್ಯವನ್ನು

ಆಚಂದ್ರಾರ್ಕಸ್ಥಾಯಿಯಾಗಿ ನಡೆಸುವರು. ಈ ಎಲ್ಲ ವಿವರಗಳೂ ಆ ದೇವಾಲಯದ ಸುತ್ತ ಹಬ್ಬಿಕೊಂಡ ಜನರ ಸಾಮಾಜಿಕ, ಆರ್ಥಿಕ, ಜೀವನ ಪರಿಕ್ರಮಗಳನ್ನು ಪುನಾರಚಿಸಲು ಸಹಾಯಕವಾಗಿವೆ. ಕೃಷಿ, ನೀರಾವರಿ, ಕಂದಾಯ, ತೆರಿಗೆ ಮುಂತಾದವುಗಳ ಬಗೆಗೆ ತಿಳಿಯಲೂ ಈ ಮಾಹಿತಿಗಳು ಉಪಯುಕ್ತವಾಗಿವೆ.

ಸೆಟ್ಟಿಕೆರೆಯ ಯೋಗನಾಥ ದೇವಾಲಯ ಒಂದು ಧಾರ್ಮಿಕ ವಿದ್ಯಾಸಂಸ್ಥೆಯಾಗಿ ಯಾವರೀತಿಯ ಪಾತ್ರವಹಿಸಿತ್ತು, ಆ ಊರ ಮಹಾಜನರು ಜನರ ಧರ್ಮ, ಸಂಸ್ಕೃತಿ ಮತ್ತು ಶಿಕ್ಷಣವನ್ನು ಸುಧಾರಿಸುವಲ್ಲಿ ಯಾವ ಜವಾಬ್ದಾರಿಯನ್ನು ಹೊತ್ತಿರಬೇಕಾಗಿತ್ತು — ಎಂಬುದು ಕೂಡ ದೇಗುಲದ ಶಾಸನದಿಂದ ವೇದ್ಯವಾಗುತ್ತದೆ.

ಶ್ರೀ ಯೋಗನಾಥ ದೇವರ ಅಮೃತಪಡಿಯೇ ಮೊದಲಾದ ಎಲ್ಲ ಶ್ರೀ ಕಾರ್ಯಗಳನ್ನು, ಮುಖ್ಯವಾದ ಎಲ್ಲಾ ಧರ್ಮಗಳನ್ನೂ (ವಿಧಿಗಳನ್ನೂ) ಉಳಿದ ಮಹಾಜನರು ನಡೆಸುವರು. ಅಂದಂದು ನಡೆಯುವ ಪೂಜೆವೆಗ್ಗಡೆ ಹಾಗೂ ಸೇನಬೋವರಿಂದಲೂ ಯಾರೊಬ್ಬರಿಂದಲೂ, ಉದಾಸೀನ ಮಾಡದೆ, ಆಚಂದ್ರಾರ್ಕಸ್ಥಾಯಿಯಾಗಿ ನಡೆಸಿಕೊಂಡು ಹೋಗುವುದು. ಊರಿನ ಮಹಾಜನರು ಯೋಗನಾಥದೇವರ ಚೈತ್ರಪವಿತ್ರವೇ ಮುಂತಾದ ಪಂಚಪರ್ವಗಳಲ್ಲಿ **ಕೊರತೆಯಿಲ್ಲದೆ ಕೊಂಡಾಡುವರು.** ಇದು ಆ ದೇಗುಲದ ಸಮೃದ್ಧಿಯನ್ನು ಸೂಚಿಸುತ್ತದೆಯೆನ್ನಬಹುದು.

ಯೋಗನಾಥ ದೇಗುಲದಲ್ಲಿ ಪುರಾಣವಾಚನದ ವ್ಯವಸ್ಥೆಯಿತ್ತು. ಇದಕ್ಕಾಗಿ ಮಹಾಜನರಿಗೆ ಐದು ಖಂಡುಗ ಗದ್ದೆ ಐನೂರು ಬೆದ್ದಲನ್ನು ಭೋಗ್ಯಕ್ಕಾಗಿ ನೀಡಲಾಗಿತ್ತು. ಇದನ್ನು ಪಡೆದ ಮಹಾಜನರು ದೇವಸ್ಥಾನದಲ್ಲಿ ಬೆಳಗ್ಗೆ ನಾಲ್ಕು ಘಳಿಗೆ ಪುರಾಣ ಹೇಳುವರು ಮತ್ತು ಅಗ್ರಹಾರದ ಅಗ್ನಿಷ್ಟಗೆಯಮಠದಲ್ಲಿ ಹೊತ್ತರೆ (ಸಂಜೆ) ನಾಲ್ಕು ಘಳಿಗೆ ಸ್ಮೃ(ಸ್ಮೃ)ತಿ ಹೇಳುವರು. ಉಳಿದ ಸಮಯದಲ್ಲಿ ಊರ ಮಕ್ಕಳಿಗೆ **ಕೇಳುವೆಯಕೊಱತೆಯಿಲ್ಲದೆ** ಹೇಳುವರು.

ಆಕಾಲದ ಊರ ಜನಜೀವನದಲ್ಲಿ ಜ್ಯೋತಿಷ್ಯಕ್ಕೂ ಮನ್ನಣೆನೀಡಲಾಗಿತ್ತು. ಈ ಕೆಲಸಕ್ಕಾಗಿ ಭೂದಾನ ನೀಡಲಾಗಿತ್ತು. ಈ ಕೆಲಸ ಮಾಡುವ ಮಹಾಜನರಿಗೆ ಇಖಂಡುಗ ಗದ್ದೆ, ಇನ್ನೂರು ಬೆದ್ದಲು, ಏಳು ಕೈಮನೆ ಇಷ್ಟನ್ನು **ಊರಲ್ಲೇ ಇದ್ದು ಕೊಂಡು**, ಊಳಿಗವ ನಡೆಸಿ, ಭೋಗಿಸಲು ನೀಡಲಾಗಿತ್ತು. ಇದನ್ನು ಮಾಡಲು ಸಾಧ್ಯವಾಗದೆ, ಕೊಟ್ಟ ಭೂಮಿಯನ್ನು ದಾನಕ್ರಯ ಮಾಡುವ ಪಕ್ಷದಲ್ಲಿ, ಅದನ್ನು ಜ್ಯೋತಿಷ್ಯವನ್ನು ಹೇಳುವಂಥ ಯೋಗ್ಯ ಬ್ರಾಹ್ಮಣನಿಗೇ ಕೊಡಬೇಕಾಗುವುದು, ಅಂತೂ ಜ್ಯೋತಿಷ್ಯವನ್ನು ಯಾವಕಾರಣಕ್ಕೂ ಕೈಬಿಡಬಾರದೆಂಬುದು ಇಲ್ಲಿ ಮುಖ್ಯವಾದ ಸಂಗತಿ.

ಯೋಗನಾಥ ದೇವಾಲಯದ ವಾಸ್ತುಶಿಲ್ಪವನ್ನು ಶಾಸನ ನೀಡುವ ವಿವರಗಳ

ಹಿನ್ನೆಲೆಯಲ್ಲಿ ಅಧ್ಯಯನ ಮಾಡಿದಲ್ಲಿ ನಿಜಕ್ಕೂ ಸ್ವಾರಸ್ಯಕರ ಸಂಗತಿಗಳು ಹೊರ ಬೀಳುವವು.

ಸೆಟ್ಟಿಕೆರೆಯ ಯೋಗನಾಥ ದೇವಮಂದಿರ ಹೊಯ್ಸಳಶೈಲಿಯ ವಾಸ್ತು ಮತ್ತು ಅಪೂರ್ವ ಪ್ರತಿಮಾಲಕ್ಷಣಗಳುಳ್ಳ ಯೋಗನಾಥ (ವಿಗ್ರಹ) ಶಿಲ್ಪಗಳಿಂದಾಗಿ ಎಷ್ಟು ಪ್ರಾಮುಖ್ಯತೆಯನ್ನು ಪಡೆಯುವುದೋ, ಅಷ್ಟೇ ಅಥವಾ ಅದಕ್ಕಿಂತ ಹೆಚ್ಚು ಅಮೂಲ್ಯವಾದ ಹಲವು ಸಾಮಾಜಿಕ, ಆರ್ಥಿಕ–ಸಾಂಸ್ಕೃತಿಕ ವಿಚಾರಗಳು ಈ ದೇಗುಲದ ಶಾಸನದಿಂದ ಸಂವೇದ್ಯವಾಗುತ್ತವೆ. ಆ ಭಾಗದ ಸಮಾಜದ ವಿವಿಧ ಸ್ತರಗಳ ಜನವರ್ಗದವರು ಮುಖ್ಯವಾಗಿ ನಂಬಿಯರು, ಮಹಾಜನರು, ಸಿಂಗಾರಿ, ಪರಿಚಾರಕ, ಬಾಣಸಿಗ, ಡವಂಗ, ಅಂಘರಿಕ, ಮಾಲೆಗಾರ, ಬಾಹ್ಯ, ಗಾಣಿಗ, ಕುಂಬಾರ, ಅಗಸ, ತಳವಾರ ಮುಂತಾದವರು ದೇವಾಲಯದ ನಿಯೋಗನಿರ್ವಹಣೆಯಲ್ಲಿ ಎಷ್ಟು ಅರ್ಥಪೂರ್ಣ ಪಾತ್ರವನ್ನು ವಹಿಸಿದ್ದರು ಎಂಬುದನ್ನು ತಿಳಿಯಲನುಕೂಲವಾಗುತ್ತದೆ. ಶ್ರೀಭರಿತ ಪ್ರಕಾಶಪುರದ ಜೀವನ ಅಲ್ಲಿಯ ದೇವಾಲಯದ ಸುತ್ತ ಹೇಗೆ ವರ್ತಿಸುತ್ತಿತ್ತು, ಊರಿಗೇ ಕೇಂದ್ರಬಿಂದುವಾಗಿ ಯೋಗನಾಥಾಲಯವಾದರೂ ಜನರ ಸಾಮಾಜಿಕ ಸಾಂಸ್ಕೃತಿಕ ಜೀವನವನ್ನು ಹೇಗೆ ರೂಪಿಸುತ್ತಿತ್ತು ಎಂಬುದನ್ನು ಈ ದೇಗುಲದ ಶಾಸನದಿಂದ ತಿಳಿಯಬಹುದು. ವಿಶೇಷ ಸವಲತ್ತುಗಳನ್ನೂ ಪಡೆದ ಮಧ್ಯಕಾಲೀನ ದೇವಾಲಯವೊಂದು ಭಾರೀ ಜಮೀನುದಾರ-ಒಡೆಯನಂತಾಗಿ, ಸ್ವತಂತ್ರ ವ್ಯಕ್ತಿತ್ವವನ್ನು ಪಡೆದು ಬೆಳೆದದ್ದನ್ನು ಇಲ್ಲಿ ಗಮನಿಸುತ್ತೇವೆ : ಆ ಪ್ರದೇಶದ ಕೃಷಿ ಹಾಗೂ ನೂಲು ಮುಂತಾದ ಕೈಗಾರಿಕೋತ್ಪನ್ನಗಳು ದೇವಾಲಯಕ್ಕೆ ಸಲ್ಲಬೇಕಾಗಿತ್ತು : ಅಂದರೆ ಆಳುವ ದೊರೆಗೆ ಸಲ್ಲಬೇಕಾದ್ದು, ಯೋಗನಾಥ ತ್ರಿಕೂಟದಂಥ ದೇವಾಲಯಕ್ಕೂ ಸಲ್ಲುತ್ತಿತ್ತು. ಈ ಬಗೆಯ ದೇಗುಲ ವ್ಯವಸ್ಥೆ, ಮಧ್ಯಕಾಲದಲ್ಲಿ, ಶೋಷಣೆಗೆ ಮೂಲವಾಗಿತ್ತೆಂದೂ ವಾದಿಸುವವರಿದ್ದಾರೆ. ಈ ವಿಷಯಕ್ಕೆ ಸಂಬಂಧಿಸಿದಂತೆ ಇನ್ನೂ ಹೆಚ್ಚಿನ ಖಚಿತ ಮಾಹಿತಿಗಳೂ ಆಧಾರಗಳೂ ಸಿಗಬೇಕಾಗಿವೆ ; ಇನ್ನೂ ಆಳವಾದ ಸಂಶೋಧನೆ ಮಾಡಬೇಕಾಗಿದೆ.

ವಾಸ್ತು, ಶಿಲ್ಪ, ಹಾಗೂ ಧಾರ್ಮಿಕ–ಸಾಮಾಜಿಕ–ಆರ್ಥಿಕ ವ್ಯವಸ್ಥೆಯನ್ನಾಧರಿಸಿದ ಸಾಂಸ್ಕೃತಿಕ ಮಹತ್ವ ಪಡೆದ ಸೆಟ್ಟಿಕೆರೆಯ ಯೋಗನಾಥ ದೇಗುಲವ ನಿರ್ಮಾಣ ಮತ್ತು ನಿರ್ವಹಣೆಯ ವಿಷಯದಲ್ಲಿ ಹದಿಮೂರನೆಯ ಶತಮಾನದ ಸಮಾಜ ತೋರಿದ ಹುರುಪು, ಉತ್ಸಾಹ, ಆಸಕ್ತಿ ಕಾಲಕ್ರಮದಲ್ಲಿ ಕಡಿಮೆಯಾಗಿರಬೇಕು. 1918ರ ಹೊತ್ತಿಗಾಗಲೇ ದೇಗುಲದ ಅಂಗಭಾಗಗಳು ಶಿಥಿಲವಾಗಿ ಮಳೆನೀರು ಮೇಲ್ಛಾವಣಿಯಿಂದ ಜಿನುಗುತ್ತಿತ್ತು. ಕೆಲವೆಡೆ ಗೋಡೆ ಬಿರುಕು ಬಿಟ್ಟು ಉಬ್ಬಿಕೊಂಡಿತ್ತು. ಪ್ರಾಂಗಣದ ಪ್ರಾಕಾರ ಶಿಥಿಲವಾಗಿ ಬಿದ್ದಿತ್ತು. ಪೂಜಾಪ್ರತಿಮೆಗಳ ಮೇಲೆ ಕೊಳೆ ತುಂಬಿತ್ತು. ದೇವಾಲಯದ ಆವರಣದಲ್ಲಿ ಕಸಕಡ್ಡಿಗಳು ಹರಡಿದ್ದವು–ಎಂದು ಮುಂತಾಗಿ ಆರ್. ನರಸಿಂಹಾಚಾರ್ಯರು ವರದಿಮಾಡಿದ್ದರು.[23] ಊರಿಗೇ ಕೇಂದ್ರಬಿಂದುವಾಗಿದ್ದ ದೇವಸ್ಥಾನಕ್ಕೆ ಈ ಸ್ಥಿತಿ ಬಂದದು ಶೋಚನೀಯ.

## ಅಡಿಟಿಪ್ಪಣಿಗಳು

1 *EC* XII Ck. 2 (1272)

2 ಪುಟ್ಟಣ್ಣ, ಎಂ. ಎಸ್. ಹಾಗಲವಾಡಿ ಪಾಳೆಗಾರರು, ಬೆಂಗಳೂರು. 1931

3 *EC* XVI (Supl), Ck. 1 (Rev) (1623). ಈ ಶಾಸನದಲ್ಲಿ 'ಹೊಯ್ಸಳ ಸೀಮೆ'ಯು 'ಘನಗಿರಿ'ಯ ಪಶ್ಚಿಮಕ್ಕಿದೆಯೆಂದು ತಿಳಿಸಲಾಗಿದೆ. ಘನಗಿರಿ ಆಂಧ್ರಪ್ರದೇಶದ ಪೆನುಗೊಂಡೆಯಾಗಿರಬೇಕು.

4 ತುಮಕೂರು ಜಿಲ್ಲೆಯ ಸೆಟ್ಟಿಹಳ್ಳಿ ಎಂಬ ಊರು ಚಿಕ್ಕನಾಯಕನಹಳ್ಳಿ ಎಂಬ ತಾಲೂಕು ಸ್ಥಳವನ್ನೂ ಇಲ್ಲಿ ಉದಹರಿಸಬಹುದು. ಅಣ್ಣಯ್ಯಕೆರೆ (ಅಣ್ಣಿಗೇರಿ), ಪುಲಿಕೆರೆ (ಪುಲಿಗೆರೆ, ಪೊಂಗೆಜ್ರೆ), ಸೂಳೆಕೆರೆ ಮುಂತಾದವನ್ನು ಇಲ್ಲಿ ಹೆಸರಿಸಬಹುದು.

5 *EC* XII, Ck 2 (1272)

6 ಈ ತೇದಿಯ ವಿವರಗಳನ್ನು ಅನುಲಕ್ಷಿಸಿದಲ್ಲಿ ಇದು ರೈಸ್, ಬಿ. ಎಲ್. ತಿಳಿಸಿವಂತೆ 1261 ಎಂದಾಗುವುದಿಲ್ಲ. 1272

7 *ASMAR*, 1918, ಪು. 15-16 ; 1934, ಪು. 24-26

8 Hayavadana Rao, C. *Mysore Gazetteer-V* 1930, Bangalore, p. 532-4

9 ಶ್ರೀಕಂಠಶಾಸ್ತ್ರಿ, ಎಸ್., ಹೊಯ್ಸಳ ವಾಸ್ತುಶಿಲ್ಪ, ಮೈಸೂರು, 1965, ಪು. 182-4

10 *EC* XII, Ck 2 (1272)

11 ನೋಡಿ Gopinatha Rao, T. A., *Elements of Hindu Iconography*, I-i, Delhi, 1971. p. 85, 90.

12 ———Kalpana Desai, S., *Iconography of Visnu*, New Delhi, 1973, p. 53.

13 ಅದೇ

14 *ASMAR*, 1918, p. 15-16; 1934, p. 24-26

15 Kalpana Desai, *Op. cit*

16 ಮುಮ್ಮಡಿ ನರಸಿಂಹನ ಕಾಲ ವೈಷ್ಣವಮತದ ಸಮೃದ್ಧಿಯನ್ನು ಕಂಡ ಕೊನೆಯ ಹಂತವನ್ನು ಪ್ರತಿನಿಧಿಸುತ್ತದೆ. ತುರುವೇಕೆರೆ, ಸೋಮನಾಥಪುರ, ಬೇಲೂರು, ಹೊಳೆನರಸೀಪುರ, ವಿಘ್ನಸಂತೆ ಮುಂತಾದೆಡೆಗಳಲ್ಲಿ ವೈಷ್ಣವ ತ್ರಿಕೂಟಗಳು ಕಂಡುಬರುತ್ತವೆ. ಶಾಸನಗಳಲ್ಲೂ ವಿಷ್ಣುಸ್ತುತಿ, ವೈಷ್ಣವ ಅಗ್ರಹಾರಗಳು ಉಲ್ಲೇಖಿತವಾಗಿವೆ. ಸೆಟ್ಟಿಕೆರೆಯಲ್ಲೇ ಇನ್ನೊಂದು ವೈಷ್ಣವ ದೇಗುಲವಿದೆ. ಇಲ್ಲಿರುವ ರಂಗನಾಥ ವಿಗ್ರಹಗಳ ನಾಲ್ಕೂ ಕೈಗಳಲ್ಲಿ ಶಂಖ ಚಕ್ರ, ಬಿಲ್ಲು ಬಾಣಗಳಿರುವುದು ಕುತೂಹಲಕಾರಿಯಾಗಿದೆ. (ಈ ಬಗೆಯ ಶಿಲ್ಪವೊಂದು ಚನ್ನಗಿರಿಯಲ್ಲಿದ್ದು ಅದನ್ನು ಬೇಟೆ ರಂಗನಾಥ ಎನ್ನುತ್ತಾರೆ.) ಇದೇ ದೇಗುಲದಲ್ಲಿ ಶ್ರೀದೇವಿ, ಭೂದೇವಿಯರ ವಿಗ್ರಹಗಳಿವೆ. ಈ ಊರಿನಲ್ಲಿ ಹನುಮಂತನ ಗುಡಿಯೂ ಇದೆ.

17 *ASMAR*, 1934, p. 24-26 ಭಗ್ನಶಿವಾಲಯ ಕೆರೆಯಲ್ಲಿ ಮುಳುಗಿಹೋಗಿದೆಯೆಂದೂ ವರದಿಯಾಗಿದೆ.

18 *EC* XII. Ck **2** (1272)

19 ಇವೆಲ್ಲಕ್ಕೂ ಸ್ಪಷ್ಟವಾದ ಅರ್ಥನಿರೂಪಣೆ ಮಾಡಬೇಕಾಗಿದೆ.

20 ***EC*XII, ಪೂರ್ವೋಕ್ತ**

21 ಈ ವಿಷಯ ಕುರಿತ ಅಧ್ಯಯನ ಇನ್ನೊಂದು ಸಂಪ್ರಬಂಧದಲ್ಲಿ ಮಾಡಲಾಗಿದೆ.

22 ನೋಡಿ, ವೀರಣ್ಣ, ಸಿ., ಹನ್ನೆರಡನೆಯ ಶತಮಾನದ ಕಾಯಕ ಜೀವಿಗಳ ಚಳುವಳಿ, ಬೆಂಗಳೂರು, 1980, ಪು. 8

23 ***ASMAR***, 1934, p. 25-26

ಪ
ರಿ
ಸ
ರ

## ಚಿಕ್ಕನಾಯಕನಹಳ್ಳಿ

# ಸ್ಥಳನಾಮಗಳು

**ತೀ. ನಂ. ಶಂಕರನಾರಾಯಣ**

ಹೆಸರುಗಳು ಮನುಷ್ಯನ ಜೀವನದಲ್ಲಿ ಮುಖ್ಯವಾದ ಪಾತ್ರವನ್ನು ವಹಿಸುತ್ತವೆ. ವ್ಯಕ್ತಿಗಳಿಗಾಗಲಿ, ಸ್ಥಳಗಳಿಗಾಗಲಿ ಹೆಸರುಗಳನ್ನಿಡುವ ಪದ್ಧತಿ ತಿಳಿಯದೆ ಹೋಗಿದ್ದರೆ ಮನುಷ್ಯರ ನಡುವಣ ಆಲೋಚನಾ ಸಂಪರ್ಕಕ್ಕೆ ತುಂಬ ತೊಂದರೆಯಾಗುತ್ತಿತ್ತು. ಹೆಸರುಗಳಿರುವುದರಿಂದ ವ್ಯಕ್ತಿಗಳನ್ನು, ಸ್ಥಳಗಳನ್ನು ಖಚಿತವಾಗಿ ಗುರುತಿಸಬಹುದು. ಹೆಸರುಗಳ ವ್ಯಾವಹಾರಿಕವಾದ ಉಪಯೋಗ ಇಷ್ಟೆಲ್ಲಾ ಇದ್ದರೂ ಅವುಗಳ ಮೂಲ, ಬದಲಾವಣೆ ಮೊದಲಾದ ವಿಷಯಗಳ ಬಗ್ಗೆ ಸಾಮಾನ್ಯವಾಗಿ ಜನ ವಿಚಾರಮಾಡಲು ಹೋಗುವುದಿಲ್ಲ. ಆದರೆ ಈ ಬಗೆಯಾದ ಅಧ್ಯಯನ ಭಾಷೆ, ಸಂಸ್ಕೃತಿ ಮೊದಲಾದ ಕ್ಷೇತ್ರಗಳಲ್ಲಿ ಮುಖ್ಯವಾಗುತ್ತದೆ. ಭಾರತದಲ್ಲಿ ಹೆಸರುಗಳ ಬಗ್ಗೆ ಹೆಚ್ಚಿನ ಕೆಲಸ ನಡೆಯದಿದ್ದರೂ ಪಾಶ್ಚಾತ್ಯದೇಶಗಳಲ್ಲಿ ಈ ಬಗ್ಗೆ ವಿಶೇಷವಾಗಿ ಕೆಲಸ ನಡೆದಿದೆ. ಹೆಸರುಗಳನ್ನು ಕುರಿತ ಅಧ್ಯಯನವನ್ನು ನಾಮವಿಜ್ಞಾನ (onamastics) ಎಂದು ಕರೆಯುತ್ತಾರೆ. ಇದರಲ್ಲಿ ಮೂರು ಮುಖ್ಯ ಉಪವಿಭಾಗಗಳಿವೆ : ಸ್ಥಳನಾಮಗಳನ್ನು ಕುರಿತ ಅಧ್ಯಯನವೇ Typonymy, ವ್ಯಕ್ತಿನಾಮಗಳನ್ನು ಕುರಿತ ಅಧ್ಯಯನವೇ Anthroponymy, ಜನಾಂಗಗಳು, ಕುಲಗಳು ಮೊದಲಾದವನ್ನು ಕುರಿತ ಅಧ್ಯಯನವೇ Ethnonymy. ಇವುಗಳಲ್ಲದೆ ಸ್ಥಳನಾಮಗಳಲ್ಲಿ ಕಾಡು, ಹೊಲ ಮೊದಲಾದವನ್ನು ಅಧ್ಯಯನ ಮಾಡುವುದು Microtoponymy ; ದಾರಿ ರಸ್ತೆಗಳ ಅಧ್ಯಯನ ಮಾಡುವುದು Hodonymy ; ಕೆರೆ , ಕೊಳ, ಕಾಲುವೆಗಳ ಅಧ್ಯಯನ ಮಾಡುವುದು Hydronymy ; ಬೆಟ್ಟಗುಡ್ಡಗಳ ಅಧ್ಯಯನ ಮಾಡುವುದು Oronymy [1]

ಸ್ಥಳನಾಮಗಳ ವ್ಯವಸ್ಥಿತವಾದ ಅಧ್ಯಯನ ಪಾಶ್ಚಾತ್ಯದೇಶಗಳಲ್ಲಿ ಆರಂಭವಾದದ್ದು 1841 ರಿಂದ ಈಚೆಗೆ. ಆದರೆ ಈ ಅಧ್ಯಯನದ ಮಹತ್ವವನ್ನು 1768 ರಲ್ಲಿಯೇ ಲೀಬನಿಜ್ ಎಂಬುವರು ಸ್ಪಷ್ಟಪಡಿಸಿದ್ದರು. ಭಾಷಾವಿಜ್ಞಾನದ ಬೆಳವಣಿಗೆಯೊಂದಿಗೇ ಸ್ಥಳನಾಮಗಳ ಅಧ್ಯಯನವೂ ಬೆಳವಣಿಗೆ ಹೊಂದುತ್ತಾ ಬಂದಿದೆ. ಸ್ಥಳ

---

1 ನನ್ನ ಲೇಖನದ ಮೊದಲನೆಯ ಭಾಗವನ್ನು ಬರೆಯಲು ಡಾ॥ ಸಾಚಿಮುತ್ತು ಅವರ "Methodology In Placename Studies" ಮತ್ತು Folkloristies and Placenames" ಲೇಖನಗಳನ್ನು (ಅಪ್ರಕಟಿತ) ಮತ್ತು ಪ್ರೊ॥ ಜಿ. ಎಸ್. ರೆಡ್ಡಿಯವರ "Place-names Studies And Folkloristics" ಎಂಬ ಲೇಖನದ (ಅಪ್ರಕಟಿತ) ಪ್ರಯೋಜನ ಪಡೆದಿದ್ದೇನೆ. ಆದಕ್ಕಾಗಿ ಅವರಿಗೆ ವಂದನೆಗಳು.

ನಾಮಗಳ (ಹಾಗೂ ವ್ಯಕ್ತಿನಾಮಗಳ) ಅಧ್ಯಯನದಲ್ಲಿ ಉಳಿದೆಲ್ಲಾ ವಿಷಯಗಳಿಗಿಂತಲೂ ಹೆಚ್ಚಿನ ಸಂಬಂಧ ಹೊಂದಿರುವುದು ಭಾಷಾವಿಜ್ಞಾನ; ಹೀಗಾಗಿ ಈ ಅಧ್ಯಯನವನ್ನು ಭಾಷಾವಿಜ್ಞಾನದ ಒಂದು ಭಾಗವೆಂದೇ ಪರಿಗಣಿಸಲಾಗುತ್ತದೆ. 19ನೆಯ ಶತಮಾನದ ಕೊನೆಯ ವೇಳೆಗೆ ಸ್ಥಳನಾಮಗಳ ಅಧ್ಯಯನ ಖಚಿತವಾದ ಸ್ವರೂಪವನ್ನು ಪಡೆದು ಕೊಂಡಿತು. ಸುದೀರ್ಘವಾದ ಐತಿಹಾಸಿಕ ಪರಂಪರೆಯುಳ್ಳ ಯೂರೋಪಿನಲ್ಲಿ ವಿದ್ವಾಂಸರು ಸ್ಥಳನಾಮ ಅಧ್ಯಯನ ಸಂಸ್ಥೆಗಳನ್ನು ಆರಂಭಿಸಿದರು. ಈ ಸಂಸ್ಥೆಗಳು ಸರ್ಕಾರದ ನೆರವನ್ನು ಪಡೆದು ಕ್ಷೇತ್ರಕಾರ್ಯದ ಮೂಲಕ ಸ್ಥಳನಾಮಗಳಿಗೆ ಸಂಬಂಧಿಸಿ ದಂತೆ ಅಪಾರವಾದ ಸಾಮಾಗ್ರಿಯನ್ನು ಸಂಗ್ರಹ ಮಾಡಿದವು. ಅಂತರರಾಷ್ಟ್ರೀಯ ಸಮ್ಮೇಳನಗಳು ನಡೆದವು; ಹಲವಾರು ಜನ ವಿದ್ವಾಂಸರು ಸ್ಥಳನಾಮಗಳ ಬಗ್ಗೆ ಪಿಎಚ್‌ಡಿ ನಿಬಂಧಗಳನ್ನು ಬರೆದರು. ಹೀಗಾಗಿ ಸ್ಥಳನಾಮಗಳ ಬಗ್ಗೆ ಹೆಚ್ಚು ಕೆಲಸ ನಡೆಯಲು ಅವಕಾಶವಾಯಿತು. 1921ರಲ್ಲಿ ಆರಂಭವಾದ British place Name society, 1950 ರಲ್ಲಿ ಆರಂಭವಾದ American Name society ಮತ್ತು ಬೆಲ್ಜಿಯಮ್‌ನ ಲೋವೇನ್‌ನಲ್ಲಿ 1949 ರಲ್ಲಿ ಆರಂಭವಾದ International onamastic centre ಈ ಸಂಸ್ಥೆಗಳು ಬಹುಮುಖ್ಯವಾದವು. British place name society ಈವರೆಗೆ ಐವತ್ತು ಸಂಪುಟಗಳಲ್ಲಿ ಸ್ಥಳ ನಾಮಗಳಿಗೆ ಸಂಬಂಧಪಟ್ಟ ವಿಷಯ ಸಾಮಗ್ರಿಯನ್ನು ಪ್ರಕಟಿಸಿದೆ. American Name Society ಯು *Names* ಎಂಬ ತ್ರೈಮಾಸಿಕ ಪತ್ರಿಕೆಯನ್ನು ಪ್ರಕಟಿಸು ತ್ತಿದೆ; ಈ ಸಂಸ್ಥೆ 5 ಮಿಲಿಯನ್ ಅಮೆರಿಕನ್ ಸ್ಥಳನಾಮಗಳ ಪರಿವೀಕ್ಷಣೆಯ ಯೋಜನೆಯನ್ನು ಕಾರ್ಯರೂಪಕ್ಕೆ ತರಲು ಪ್ರಯತ್ನಿಸುತ್ತಿದೆ. ಲೋವೇನ್‌ನಲ್ಲಿರುವ International onamastic centre ನಿಂದ *onama* ಎಂಬ ತ್ರೈಮಾಸಿಕ ಪತ್ರಿಕೆ ಪ್ರಕಟವಾಗುತ್ತಿದೆ. 48 ದೇಶಗಳ ಸ್ಥಳನಾಮ ಸಂಸ್ಥೆಗಳು ಮತ್ತು ಸ್ಥಳನಾಮ ವಿಜ್ಞಾನಿಗಳು ಈ ಸಂಸ್ಥೆಯ ಪ್ರಯೋಜನ ಪಡೆಯುತ್ತಿದ್ದಾರೆ. ಸ್ಥಳ ನಾಮಗಳ ಅಧ್ಯಯನದಲ್ಲಿ ಯೂರೋಪಿಯನ್ ಮತ್ತು ಅಮೆರಿಕನ್ ಸ್ಥಳನಾಮ ಸಂಸ್ಥೆಗಳ ಮತ್ತು ಸ್ಥಳನಾಮ ವಿಜ್ಞಾನಿಗಳ ವಿಧಾನಗಳು ಮತ್ತು ಆಸಕ್ತಿಗಳು ಭಿನ್ನ ವಾಗಿವೆ. ಮಧ್ಯಕಾಲೀನ ಯುಗದನಂತರ ಹುಟ್ಟಿಕೊಂಡ ಸ್ಥಳನಾಮಗಳ ಬಗ್ಗೆ ಯೂರೋಪಿಯನ್ ವಿದ್ವಾಂಸರ ಆಸಕ್ತಿ ಕಡಮೆ; ಸ್ಥಳನಾಮಗಳ ನಿಷ್ಪತ್ತಿಯ ಬಗ್ಗೆ ಇವರು ಹೆಚ್ಚು ಆಸಕ್ತರು., ಇವರ ಆಸಕ್ತಿ ಸ್ಥಳನಾಮಗಳ ಪ್ರಾಗೈತಿಹಾಸಿಕ ಪರಿ ವೀಕ್ಷಣೆಯಲ್ಲಿ ಅಮೆರಿಕನ್ ವಿದ್ವಾಂಸರು ಸಮಕಾಲೀನ ಸ್ಥಳನಾಮಗಳ ರಚನೆ ಮತ್ತು ಪ್ರಕ್ರಿಯೆಗಳು ಹಾಗೂ ಅವುಗಳ ಪರಿವೀಕ್ಷಣೆ ಮತ್ತು ಉಚ್ಚಾರಣೆಯ ವಿಷಯಗಳಲ್ಲಿ ಆಸಕ್ತರು. ಯೂರೋಪ್‌ನ ಮತ್ತು ಅಮೆರಿಕಾ ದೇಶಗಳಲ್ಲಿ ಸ್ಥಳನಾಮಗಳ ಅಧ್ಯಯನ ರಾಷ್ಟ್ರಾಭಿಮಾನನ್ನು ಜಾಗೃತಗೊಳಿಸುವ ಸಾಧನಗಳಲ್ಲಿ ಒಂದು ಎಂದು

ಪರಿಗಣಿತವಾಗಿದೆ. ಅದರಲ್ಲಿಯೂ ಯೂರೋಪಿನ ಕಮ್ಯುನಿಸ್ಟ್ ರಾಷ್ಟ್ರಗಳಲ್ಲಿ ಸ್ಥಳ ನಾಮಗಳ ಅಧ್ಯಯನಕ್ಕೆ ವಿಶೇಷವಾದ ರಾಷ್ಟ್ರೀಯ ಮಹತ್ವವಿದೆ.

ಜಗತ್ತಿನ ಉಳಿದೆಲ್ಲ ದೇಶಗಳಿಗಿಂತ ಭಾರತದ ಸ್ಥಳನಾಮಗಳು ವಿಪುಲವಾಗಿವೆ ಮತ್ತು ವೈವಿಧ್ಯಮಯವಾಗಿವೆ, ಆದರೆ ಭಾರತದಲ್ಲಿ ಈ ಬಗ್ಗೆ ನಡೆದಿರುವ ಕೆಲಸ ಏನೇನೂ ಸಾಲದು. *onama* ಪತ್ರಿಕೆಯ (1970) 15ನೆಯ ಸಂಪುಟದಲ್ಲಿ ಪ್ರಕಟ ವಾಗಿರುವ ಶ್ರೀ ವಿಶ್ವನಾಥ ರೆಡ್ಡಿಯವರ Bibliography of Indian Toponymyಯಲ್ಲಿ 60 ಪುಸ್ತಕ, ಲೇಖನಗಳನ್ನು ಪಟ್ಟಿ ಮಾಡಲಾಗಿದೆ. ಅಲ್ಲಿಂದ ಈಚೆಗೆ ಹತ್ತಿಪ್ಪತ್ತು ಲೇಖನಗಳು ಪುಸ್ತಕಗಳು ಪ್ರಕಟವಾಗಿದ್ದರೆ ಹೆಚ್ಚು. ಭಾರತದಲ್ಲಿ ಸ್ಥಳನಾಮಗಳ ಬಗ್ಗೆ ನಡೆದಿರುವ ಕೆಲಸ ಏನೇನೂ ಸಾಲದು ಎಂಬುದನ್ನು ಇದು ಸ್ಪಷ್ಟಪಡಿಸುತ್ತದೆ. ಭಾರತದಲ್ಲಿ ಸುಮಾರು ಹತ್ತು ಪಿ ಎಚ್ ಡಿ ನಿಬಂಧಗಳು ಸ್ಥಳ ನಾಮಗಳನ್ನು ಕುರಿತವುಗಳಾಗಿವೆ. 1978ರಲ್ಲಿ ಮೈಸೂರಿನಲ್ಲಿ ಆರಂಭವಾದ Indian place name Societyಯು 1979ರಲ್ಲಿ ಉಡುಪಿಯಲ್ಲಿ ಮತ್ತು 1981ರಲ್ಲಿ ಬೆಂಗಳೂರಿನಲ್ಲಿ ಹೀಗೆ ಎರಡು ವಾರ್ಷಿಕಾಧಿವೇಶನಗಳನ್ನು ನಡೆಸಿದೆ; ಕರ್ನಾಟಕದ ಎಲ್ಲಾ ಜಿಲ್ಲೆಗಳ ಸ್ಥಳನಾಮಗಳ ಪರಿವೀಕ್ಷಣೆ ಮತ್ತು ಅಧ್ಯಯನ ಮಾಡುವ ಯೋಜನೆ ಯನ್ನು ಹಾಕಿಕೊಂಡಿದೆ. ಭಾರತದಲ್ಲಿ ಸ್ಥಳನಾಮ ಸಂಬಂಧವಾದ ಅಧ್ಯಯನಕ್ಕೆ ಈ ಸಂಸ್ಥೆ ಮುಂದಿನ ದಿನಗಳಲ್ಲಿ ಸ್ಫೂರ್ತಿಕೇಂದ್ರವಾಗುವುದೆಂದು ನಿರೀಕ್ಷಿಸಬಹುದು. ಸ್ಥಳ ನಾಮಗಳ ಬಗ್ಗೆ ಉತ್ತರ ಭಾರತದಲ್ಲಿ ನಡೆದಿರುವ ಕೆಲಸ ಕಡಿಮೆ; ದಕ್ಷಿಣ ಭಾರತದಲ್ಲಿ ಕೇರಳ, ತಮಿಳುನಾಡು ಮತ್ತು ಆಂಧ್ರದಲ್ಲಿ ಒಳ್ಳೆಯ ಕೆಲಸ ನಡೆದಿದೆ. Dravidian Lingustic Association ವಾಲ್ಟೇರ್‌ನಲ್ಲಿ ನಡೆಸಿದ ವಾರ್ಷಿಕಾಧಿವೇಶನದಲ್ಲಿ ಸ್ಥಳನಾಮಗಳ ಬಗ್ಗೆ ಪ್ರತ್ಯೇಕವಾದ ಗೋಷ್ಠಿಯನ್ನು ಏರ್ಪಡಿಸಿದ್ದಾಗ ಒಳ್ಳೆಯ ಲೇಖನಗಳು ಆ ವಿಚಾರ ಗೋಷ್ಠಿಯಲ್ಲಿ ಮಂಡಿತವಾದುವು. ಇದೂ ಒಂದು ಮುಖ್ಯ ವಾದ ಬೆಳವಣಿಗೆ.

ಕರ್ನಾಟಕದಲ್ಲಿ ಸ್ಥಳನಾಮಗಳ ಬಗ್ಗೆ ಆಸಕ್ತಿ ಬಂದದ್ದು 1950ರಿಂದ ಈಚೆಗೆ, ಡಾ॥ ಆರ್. ಸಿ. ಹಿರೇಮಠ, ಶ್ರೀ ಸಿ. ಹಯವದನರಾವ್ ಅವರ ಒಂದೊಂದು ಲೇಖನ ಡಾ॥ ಶಂ. ಬಾ. ಜೋಷಿಯವರ "ಎಡೆಗಳು ಹೇಳುವ ಕನ್ನಡ ಕಥೆ" ಎಂಬ ಪುಸ್ತಕ ಬಿ. ಎಲ್. ರೈಸ್, ಜೆ. ಎಫ್. ಫ್ಲೀಟ್, ಬಾರ್ನೆಟ್, ಫ್ಲೀಟ್, ಪಿ. ಬಿ. ದೇಸಾಯಿ ಮೊದಲಾದ ಶಾಸನ ತಜ್ಞರು ಬಿಡಿ ಊರಿನ ಹೆಸರುಗಳ ಬಗ್ಗೆ ಮಾಡಿರುವ ಪ್ರಸ್ತಾಪ ಗಳನ್ನು ಇಲ್ಲಿ ಉಲ್ಲೇಖಿಸಬಹುದು. ಶ್ರೀ ಕೆಮ್ತೂರು ರಘುಪತಿ ಭಟ್ಟರ "ತುಳುನಾಡಿನ ಸ್ಥಳನಾಮಗಳು" ಎಂಬ ಗ್ರಂಥ ಡಾ॥ ಎಂ. ಚಿದಾನಂದ ಮೂರ್ತಿಯವರ 'ವಾಗರ್ಥ' ಗ್ರಂಥದ ಸ್ಥಳನಾಮ ಸಂಬಂಧವಾದ ಲೇಖನಗಳು, Studies In Indian Placenames ಪತ್ರಿಕೆಯ ಮೊದಲ ಸಂಪುಟದಲ್ಲಿನ ಲೇಖನಗಳು, Indian

placenames Societyಯ ಎರಡು ಅಧಿವೇಶನಗಳಲ್ಲಿ ಮಂಡಿತವಾಗಿರುವ ಸಂಪ್ರಬಂಧಗಳು (ಅಪ್ರಕಟಿತ). ಡಾ॥ ದೇಜಗೌ ಅವರು ಮೈಸೂರು ಜಿಲ್ಲೆಯ ಸ್ಥಳ ನಾಮಗಳ ಬಗ್ಗೆ ಮಾಡಿರುವ ಅಧ್ಯಯನ (ಅಪ್ರಕಟಿತ) ಇವು ಕರ್ನಾಟಕದಲ್ಲಿ ಸ್ಥಳ ನಾಮಗಳನ್ನು ಕುರಿತಂತೆ ವೈಜ್ಞಾನಿಕ ಅಧ್ಯಯನದ ಆರಂಭದ ಘಟ್ಟವನ್ನು ಸೂಚಿಸುತ್ತವೆ. ಕೆಮ್ತೂರು ರಘುಪತಿಭಟ್ಟರು ಪಿಎಚ್‌ಡಿ ಪದವಿಗಾಗಿ ತುಳುನಾಡಿನ ಸ್ಥಳ ನಾಮಗಳ ಬಗ್ಗೆ ಸಿದ್ಧಗೊಳಿಸಿರುವ ನಿಬಂಧ (ಅಪ್ರಕಟಿತ) ಬಹು ಮುಖ್ಯ ಕೊಡುಗೆ. ಸ್ಥಳನಾಮಗಳ ಬಗ್ಗೆ ಕರ್ನಾಟಕದಲ್ಲಿ ಅಧ್ಯಯನ ಕಾರ್ಯ ಇನ್ನೂ ತೀವ್ರವಾಗಿ, ವ್ಯಾಪಕವಾಗಿ ನಡೆಯಬೇಕು.

ಯಾವುದೇ ಒಂದು ಪ್ರದೇಶದ ಸ್ಥಳನಾಮಗಳ ಅಧ್ಯಯನ ಮಾಡುವಾಗ ಆ ಪ್ರದೇಶದ ಇತಿಹಾಸದ ತಿಳುವಳಿಕೆ ಅತ್ಯಗತ್ಯ. ಈ ದೃಷ್ಟಿಯಿಂದ ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಸ್ಥಳನಾಮಗಳನ್ನು ಕುರಿತು ಬರೆಯುವ ಮೊದಲು ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಭೂಗೋಳ ಮತ್ತು ಇತಿಹಾಸದ ಸ್ಥೂಲ ಚಿತ್ರವನ್ನು ಇಲ್ಲಿ ಕೊಡಲಾಗಿದೆ.[2]

ತುಮಕೂರು ಜಿಲ್ಲೆಯ ಇತರ ತಾಲ್ಲೂಕುಗಳಲ್ಲಿ ಗುರುತಿಸಬಹುದಾದ ಲಕ್ಷಣಗಳು ಚಿಕ್ಕನಾಯಕನಹಳ್ಳಿ ತಾಲ್ಲೂಕಿನಲ್ಲಿಯೂ ಕಂಡು ಬರುತ್ತವೆ. ಇದು ಬಯಲುಸೀಮೆ. ಕಾಡುಗಳು ಕಡಮೆ, ಈಚೆಗಂತೂ ಕಾಡುಗಳಿಲ್ಲ ಎಂದೇ ಹೇಳಬಹುದು. ಮಳೆಯಂತೂ ತೀರ ಕಡಿಮೆ; ಅಲ್ಲಲ್ಲಿ ಗುಡ್ಡಗಳಿವೆ. ಬೋರನಕಣಿವೆ ಎಂಬ ಸಣ್ಣಪ್ರಮಾಣದ ಜಲಾಶಯವನ್ನು ಬಿಟ್ಟರೆ ಬೇರೆಯಾವ ಜಲಾಶಯವೂ ಇಲ್ಲ. ಯಾವ ನದಿಗಳೂ ಇಲ್ಲ: ಕೆರೆ ಬಾವಿಗಳೇ ನೀರಿಗೆ ಆಧಾರ. ಕಿಬ್ಬನಹಳ್ಳಿಕ್ರಾಸ್ ಬಳಿ ಇರುವ ಹತ್ಯಾಳಿನಿಂದ (ರಜತಾದ್ರಿಪುರ) ಆರಂಭವಾಗುವ ತೀರ್ಥರಾಮಪುರ ಫಾರೆಸ್ಟ್‌ರೇಂಜ್ ಜಾಣೇಹಾರು ಮತ್ತು ಕಂದಿಕೆರೆಯವರೆಗೂ ವ್ಯಾಪಿಸಿದೆ. ಮದಲಿಂಗನ ಕಣಿವೆಯೂ ಈ ಫಾರೆಸ್ಟ್ ರೇಂಜಿನಲ್ಲಿಯೇ ಇದೆ. ಈ ಫಾರೆಸ್ಟ್ ರೇಂಜಿನಲ್ಲಿ ಹಿಂದೆ ದಟ್ಟವಾದ ಕಾಡುಗಳಿದ್ದವು. ಹುಲಿ, ಕರಡಿ. ಕಿರುಬಗಳಿದ್ದವು. ಜಾಲರಿ. ದಿಂಡಿಗ, ಹೊನ್ನೆ, ಮತ್ತಿ. ಅಳಲೆ, ಹುಣಸೆ, ತೇಗ. ಶ್ರೀಗಂಧ. ಬಾಗಿ, ಮರಡಿ ಮತ್ತು ತಾರೆಮರಗಳು ಹೇರಳವಾಗಿ ಬೆಳೆಯುತ್ತಿದ್ದವು. ಈಗ ಬೋಳು ಗುಡ್ಡಗಳು ಮಾತ್ರ ಉಳಿದಿವೆ. ಬಂದರೆ, ತಂಗಡಿ, ಕಾರೆಗಿಡಗಳು ಮೊದಲು ತುಂಬಾ ವ್ಯಾಪಕವಾಗಿದ್ದವು. ಈಗ ಇವೂ ಕಡಮೆಯಾಗಿವೆ. ಈ ತಾಲ್ಲೂಕಿನಲ್ಲಿ ಮ್ಯಾಂಗನೀಸ್ ಮತ್ತು ಸುಣ್ಣಕಲ್ಲು ಹೇರಳವಾಗಿ ದೊರೆಯುತ್ತದೆ. ಸಾರಂಗಪಾಣಿ ಮೊದಲಿಯಾರರ ಮ್ಯಾಂಗನೀಸ್ ಗಣಿಗಳಿಂದ ಗಣನೀಯವಾದ ಪ್ರಮಾಣದಲ್ಲಿ ಮ್ಯಾಂಗನೀಸನ್ನು ತೆಗೆಯಲಾಗಿದೆ. ಅಮ್ಮಸಂದ್ರ ಸಿಮೆಂಟ್ ಫ್ಯಾಕ್ಟರಿಗೆ ಬೇಕಾಗುವ ಸುಣ್ಣಕಲ್ಲು ಚಿಕ್ಕನಾಯಕನಹಳ್ಳಿ ತಾಲ್ಲೂಕಿನಲ್ಲಿರುವ

---

2. Abhishankar (ed). *Mysore Gazetteer* (*Tumkur District*). Bangalore Government press, 1969, pp. 1-59.

ಕ್ವಾರಿಯಿಂದಲೇ(Quarry) ಸರಬರಾಜಾಗುತ್ತದೆ. ಬೆಳ್ಳಾರದಲ್ಲಿ ಮೊದಲು ಚಿನ್ನ ಸಿಕ್ಕುತ್ತಿತ್ತು; ಈಗ ಸಿಕ್ಕುತ್ತಿಲ್ಲ. ಕೆರೆಗಳ ಆಶ್ರಯದಲ್ಲಿ ಅಲ್ಲಲ್ಲಿ ಗದ್ದೆಗಳಿವೆ; ಬತ್ತವನ್ನು ರೈತರು ಬೆಳೆಯುತ್ತಾರೆ. ಅಲ್ಪಸ್ವಲ್ಪ ಅಡಕೆ ತೋಟಗಳು ಅಲ್ಲಲ್ಲಿ ಕಣ್ಣಿಗೆ ಬೀಳುತ್ತವೆ. ಈ ತಾಲ್ಲೂಕಿನ ಮುಖ್ಯ ಬೆಳೆ ತೆಂಗು. ಹೊಲಗಳಲ್ಲಿ ರಾಗಿ, ನವಣೆ, ಅವರೆ, ಎಳ್ಳು, ಹುಚ್ಚೆಳ್ಳು, ಕಡಲೆ, ಹೆಸರು, ತೊಗರಿ, ಉದ್ದು, ಸಾಸಿವೆ ಮೊದಲಾದ ಬೆಳೆಗಳನ್ನು ಬೆಳೆಯುತ್ತಾರೆ.

ತುಮಕೂರು ಜಿಲ್ಲೆ ಗಂಗರ, ನೊಳಂಬರ ಆಳ್ವಿಕೆಗೆ ಸೇರಿದ್ದರೂ, ಚಿಕ್ಕನಾಯಕನ ಹಳ್ಳಿ ತಾಲ್ಲೂಕಿನ ಭಾಗಗಳು ಸೇರ್ಪಡೆಯಾಗಿರಲಿಲ್ಲವೆಂದು ತಿಳಿದು ಬರುತ್ತದೆ. ಈ ತಾಲ್ಲೂಕು ಹೊಯ್ಸಳ ಸಾಮ್ರಾಜ್ಯಕ್ಕೆ ಸೇರಿತ್ತು. ಹೊಯ್ಸಳರ ಕಾಲದ ದೇವಸ್ಥಾನ ಗಳು ಈ ತಾಲ್ಲೂಕಿನಲ್ಲಿವೆ. ಕ್ರಿ. ಶ. 15ನೆಯ ಶತಮಾನದ ವೇಳೆಗೆ ಹಾಗಲವಾಡಿ ಸಂಸ್ಥಾನದ ಒಂದು ಭಾಗವಾಗಿದ್ದ ಈ ತಾಲ್ಲೂಕು ಸ್ವಲ್ಪಕಾಲ ವಿಜಯನಗರ ಸಂಸ್ಥಾ ನಕ್ಕೂ ಸೇರಿತ್ತು. ಆ ಕಾಲಕ್ಕೆ ಹಾಗಲವಾಡಿ, ಹೊಳವನಹಳ್ಳಿ, ಮದ್ದಗಿರಿ ಮತ್ತು ನಿಡುಗಲ್ ಎಂಬ ನಾಲ್ಕು ಸಂಸ್ಥಾನಗಳಿದ್ದವು. ಮೊಗಲರು ಗೋಲ್ಕೊಂಡ ಮತ್ತು ಬಿಜಾಪುರಗಳನ್ನು ಗೆದ್ದ ಮೇಲೆ ಸಿರಾದಲ್ಲಿ ರಾಜಧಾನಿಯನ್ನು ಮಾಡಿಕೊಂಡ ಸಮಯ ದಲ್ಲೂ ಈ ತಾಲ್ಲೂಕು ಹಾಗಲವಾಡಿ ಪಾಳೇಗಾರರ ವಶದಲ್ಲಿತ್ತು, ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಇತಿಹಾಸದ ಸಾಕಷ್ಟು ಭಾಗ ಹಾಗಲವಾಡಿ ಪಾಳೆಯಪಟ್ಟಿನ ಇತಿಹಾಸವೇ ಆಗಿದೆ. ಕ್ರಿ. ಶ. 1478 ರಿಂದ ಕ್ರಿ. ಶ. 1776 ರವರೆಗೆ ಮೂರು ಶತಮಾನಗಳ ಕಾಲ ಒಟ್ಟು 12 ಜನ ಪಾಳೇಗಾರರು ಹಾಗಲವಾಡಿ ಸಂಸ್ಥಾನವನ್ನು ಆಳಿದರು. ಈ ವಂಶದ ಮೂಲಪುರುಷ ಎರಿಮಾದನಾಯಕನನಂತರ ಬಂದ ಸಾಲಿನಾಯಕನು (ಕ್ರಿ.ಶ 1508–15+4) ಶೆಟ್ಟಿಕೆರೆ ಮತ್ತು ಕಂದಿಕೆರೆ ಪ್ರದೇಶಗಳನ್ನು ಗೆದ್ದುಕೊಂಡು ಚಿಕ್ಕನಾಯಕ ಎಂಬ ತನ್ನ ಸಹೋದರನ ಹೆಸರಿನಲ್ಲಿ ಚಿಕ್ಕನಾಯಕನಹಳ್ಳಿ ಊರನ್ನು ಸ್ಥಾಪಿಸಿದನು. ಹಾಗೆಯೇ ತನ್ನ ಪರಾಕ್ರಮದಿಂದ ಹೊನ್ನವಳ್ಳಿ, ತುರುವೇಕೆರೆ, ನೊಣವಿನಕೆರೆ ಪ್ರದೇಶ ಗಳನ್ನೂ ತನ್ನ ಸಂಸ್ಥಾನಕ್ಕೆ ಸೇರಿಸಿಕೊಂಡನು. ಹಾಗಲವಾಡಿ ಸಂಸ್ಥಾನ ತನ್ನ ಉಚ್ಛ್ರಾಯ ಸ್ಥಿತಿಯಲ್ಲಿ ಈಗಿನ ತುಮಕೂರು ಜಿಲ್ಲೆಯ ಮುಕ್ಕಾಲು ಭಾಗ ಪ್ರದೇಶವನ್ನು ಒಳಗೊಂಡಿತ್ತು. ದೇವರಾಜ ಒಡೆಯರು (1659–1673) ತಮ್ಮ ಆಳ್ವಿಕೆಯ ಕೊನೆ ಗಾಲದಲ್ಲಿ ತಮ್ಮ ಸಾಮ್ರಾಜ್ಯವನ್ನು ಉತ್ತರಕ್ಕೆ ಚಿಕ್ಕನಾಯಕನ ಹಳ್ಳಿಯವರೆಗೂ ವಿಸ್ತರಿಸಿದ್ದರು. ಆ ಕಾಲಕ್ಕೆ ಚಿಕ್ಕನಾಯಕನಹಳ್ಳಿ ಅವರ ಕೈವಶವಾಯಿತು. ಚಿಕ್ಕ ದೇವರಾಜ ಒಡೆಯರು ಬಿಜಾಪುರದ ಸೇನಾಪತಿ ರಣದುಲ್ಲಾಖಾನನ್ನು ಸೋಲಿಸಿ ಕೇತ ಸಮುದ್ರ, ಕಂದಿಕೆರೆ, ಹಂದಲಕೆರೆ, ಗೂಳೂರು, ತುಮಕೂರು ಮತ್ತು ಹೊನ್ನವಳ್ಳಿ ಮೊದಲಾದ ಪ್ರದೇಶಗಳನ್ನು ವಶಪಡಿಸಿಕೊಂಡರು. ಹೀಗಾಗಿ ಚಿಕ್ಕನಾಯಕನಹಳ್ಳಿ, ಕಂದಿಕೆರೆ, ಹಂದಲಕೆರೆ, ಪ್ರದೇಶಗಳು ಹಾಗಲವಾಡಿ ಪಾಳೇಗಾರರ ಕೈಬಿಟ್ಟುಹೋದವು

ಈ ಸಂಸ್ಥಾನದ ಕೊನೆಯ ಪಾಳೆಯಗಾರನಾದ ಚೆನ್ನಬಸಪ್ಪನಾಯಕನನ್ನು ಹೈದರಾಲಿ ಶ್ರೀರಂಗಪಟ್ಟಣದಲ್ಲಿ ಸೆರೆಯಿಟ್ಟು ಕೊಂದನಂತರ ಹಾಗಲವಾಡಿ ಸಂಸ್ಥಾನ ಹೈದರಾಲಿ ಮತ್ತು ಅವನ ನಂತರ ಟಿಪ್ಪುವಿನ ವಶವಾಯಿತು. ಮುಮ್ಮಡಿ ಕೃಷ್ಣರಾಜ ಒಡೆಯರು ತಮ್ಮ ಸಾಮ್ರಾಜ್ಯವನ್ನು ಆರು ಫೌಜುದಾರಿಗಳಾಗಿ ವರ್ಗೀಕರಿಸಿದಾಗ ಚಿಕ್ಕನಾಯಕನ ಹಳ್ಳಿ ಮತ್ತು ತುಮಕೂರು ಜಿಲ್ಲೆಯ ಇತರ ತಾಲ್ಲೂಕುಗಳು ಮದ್ದಗಿರಿ ಫೌಜುದಾರಿಗೆ ಸೇರಿದವು. 1834ರಲ್ಲಿ ಪುನರ್‌ವರ್ಗೀಕರಣವಾದಾಗ ಈ ಭಾಗಗಳು ಚಿತ್ರದುರ್ಗ ವಿಭಾಗಕ್ಕೆ ಸೇರಿದವು. 1862ರಲ್ಲಿ ಬ್ರಿಟಿಷ್ ಕಮೀಷನರ್ ಬೌರಿಂಗ್ ಮೈಸೂರು ರಾಜ್ಯವನ್ನು ಎಂಟು ಜಿಲ್ಲೆಗಳಾಗಿ ವರ್ಗೀಕರಿಸಿದಾಗ ತುಮಕೂರು ಪ್ರತ್ಯೇಕವಾದ ಜಿಲ್ಲೆಯಾಯಿತು. 1870 ರಲ್ಲಿ ಚಿಕ್ಕನಾಯಕನಹಳ್ಳಿ ಒಂದು ತಾಲ್ಲೂಕಾಗಿ ರೂಪುಗೊಂಡು, ತುಮಕೂರು ಜಿಲ್ಲೆಯ ಒಂದು ತಾಲ್ಲೂಕು ಎಂದು ಪರಿಗಣಿತವಾಯಿತು. ಹುಳಿಯೂರು ಮೊದಲಿಗೆ ಬೂದಿಹಾಳು ತಾಲ್ಲೂಕಿನ (ಅಂದರೆ ಈಗಿನ ಹೊಸದುರ್ಗ ತಾಲ್ಲೂಕು) ಮುಖ್ಯ ಸ್ಥಳವಾಗಿದ್ದು, 1886ರಲ್ಲಿ ಅದು ಹುಳಿಯೂರು ಸಬ್‌ಡಿವಿಜನ್ ಆಯಿತು. ಅನಂತರ ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಒಂದು ಹೋಬಳಿಯಾಯಿತು. 1938 ರಲ್ಲಿ ತುಮಕೂರು ಜಿಲ್ಲೆಯನ್ನು ತುಮಕೂರು, ಮಧುಗಿರಿ ಮತ್ತು ತಿಪಟೂರು ಸಬ್‌ಡಿವಿಜನ್‌ಗಳಾಗಿ ವರ್ಗೀಕರಿಸಿದಾಗ ಚಿಕ್ಕನಾಯಕನಹಳ್ಳಿ ತಿಪಟೂರು ಸಬ್‌ಡಿವಿಜನಿಗೆ ಸೇರಿತು. ಈಗಲೂ ಈ ವ್ಯವಸ್ಥೆಯೇ ಮುಂದುವರಿದಿದೆ. ಈಗ ಚಿಕ್ಕನಾಯಕನಹಳ್ಳಿ ತಾಲ್ಲೂಕಿನಲ್ಲಿ ಚಿಕ್ಕನಾಯಕನಹಳ್ಳಿ, ಹಂದಲಕೆರೆ, ಹುಳಿಯಾರು, ಕಂದಿಕೆರೆ. ಶೆಟ್ಟಿಕೆರೆ ಎಂಬ ಐದು ಹೋಬಳಿಗಳೂ 234 ಹಳ್ಳಿಗಳೂ ಕೆಲವಾರು ಮಾಜರೆಗ್ರಾಮಗಳು ಅಥವಾ ಉಪಗ್ರಾಮಗಳು (Hamlets) ಇವೆ.

ಸ್ಥಳನಾಮಗಳನ್ನು ಬೇರೆ ಬೇರೆ ದೃಷ್ಟಿಕೋನಗಳಿಂದ ಅಭ್ಯಾಸ ಮಾಡಬಹುದು ಅವುಗಳಲ್ಲಿ ಸ್ಥಳನಾಮಗಳ ರಚನೆಯನ್ನು ಕುರಿತ ಅಧ್ಯಯನ ಕುತೂಹಲಕರವಾದ ವಿಷಯಗಳನ್ನು ತಿಳಿಸುತ್ತದೆ. ಕರ್ನಾಟಕದ ಸ್ಥಳನಾಮಗಳಲ್ಲಿ (ಹಾಗೂ ಯಾವುದೇ ದೇಶದ ಸ್ಥಳನಾಮಗಳಲ್ಲಿ) ಎರಡು ಘಟಕಗಳಿರುವಂತೆ ತೋರುತ್ತದೆ. ಇವುಗಳನ್ನು ಆಕೃತಿಮಗಳು (morphemes) ಎಂದು ಕರೆಯಬಹುದು. ಇವುಗಳಲ್ಲಿ ಪೂರ್ವ ಭಾಗವನ್ನು "ನಿರ್ದಿಷ್ಟ" (specific) ಎಂದೂ ಉತ್ತರ ಭಾಗವನ್ನು "ವಾರ್ಗಿಕ" (Generic) ಎಂದೂ ಡಾ॥ ಚಿದಾನಂದಮೂರ್ತಿ ಅವರು ಗುರುತಿಸುತ್ತಾರೆ.[3] ಒಂದು ಉದಾಹರಣೆಯ ಮೂಲಕ ಈ ವಿಷಯವನ್ನು ಸ್ಪಷ್ಟಪಡಿಸಬಹುದು : ಶೆಟ್ಟಿಕೆರೆ

---

3 ಡಾ॥ ಎಂ. ಚಿದಾನಂದಮೂರ್ತಿ. ವಾಗರ್ಥ. ಬೆಂಗಳೂರು : ಬಾಪ್ಕೊ ಪ್ರಕಾಶನ. 1981 ಪು 15. ಈ ಗ್ರಂಥದಲ್ಲಿರುವ ಸ್ಥಳನಾಮ. ವ್ಯಕ್ತಿನಾಮಗಳಿಗೆ ಸಂಬಂಧಿಸಿದ ಲೇಖನಗಳು ಕರ್ನಾಟಕದ ಸ್ಥಳ ನಾಮಗಳ ಹಾಗೂ ವ್ಯಕ್ತಿನಾಮಗಳ ಅಧ್ಯಯನಕ್ಕೆ ಮಹತ್ವಪೂರ್ಣ ಕೊಡುಗೆಗಳಾಗಿವೆ. ಪ್ರಸ್ತುತ ಸಂಪ್ರಬಂಧರಚನೆಗೆ ಈ ಲೇಖನಗಳು ಮಾರ್ಗದರ್ಶಕವಾಗಿವೆ.

ಎಂಬ ಸ್ಥಳನಾಮದಲ್ಲಿ ಶೆಟ್ಟಿ ಮತ್ತು ಕೆರೆ ಎಂಬ ಎರಡು ಆಕೃತಿಮಗಳಿವೆ. ಇವುಗಳಲ್ಲಿ ಶೆಟ್ಟಿ ಎನ್ನುವುದು ನಿರ್ದಿಷ್ಟ: ಕೆರೆ ಎನ್ನುವುದು ವಾರ್ಗಿಕ. ಕೆರೆ ಎಂದು ಕೊನೆಗೊಳ್ಳುವ ಹಲವಾರು ಸ್ಥಳನಾಮಗಳಿರಬಹುದು. ಆದರೆ ಶೆಟ್ಟಿ ಎಂಬ ಆಕೃತಿಮ ಇರುವುದರಿಂದ ನಿರ್ದಿಷ್ಟವಾದ ಒಂದು ಊರು ಎಂದು ತಿಳಿದು ಬರುತ್ತದೆ, ಹೀಗೆಯೇ ಮಲ್ಲಿ ಎಂಬ ನಿರ್ದಿಷ್ಟ ಸೇರಿ ಮಲ್ಲಿಗೆರೆ ಆಗುತ್ತದೆ. ಹಂದನಕೆರೆ, ಅರಳೀಕೆರೆ ಮುಂತಾದ ಉದಾ ಹರಣೆಗಳನ್ನು ಗಮನಿಸಬಹುದು. ಡಾ॥ ಚಿದಾನಂದಮೂರ್ತಿ ಅವರು ಕರ್ನಾಟಕದ ಸ್ಥಳನಾಮಗಳನ್ನು ರಚನೆಯ ದೃಷ್ಟಿಯಿಂದ ಅಧ್ಯಯನ ಮಾಡಿ ಸುಮಾರು ನೂರು ವಾರ್ಗಿಕಗಳನ್ನು ಗುರುತಿಸಿದ್ದಾರೆ. ನಿರ್ದಿಷ್ಟಗಳ ಸಂಖ್ಯೆಯನ್ನು ಗುರುತಿಸುವುದು ಕಷ್ಟ. ಏಕೆಂದರೆ ಎಷ್ಟು ಸ್ಥಳನಾಮಗಳಿವೆಯೋ ಅಷ್ಟು ನಿರ್ದಿಷ್ಟಗಳು ಇರಬಹುದು; ಅಥವಾ ಸ್ವಲ್ಪ ಕಡಮೆ ಇರಬಹುದು. ಚಿಕ್ಕನಾಯಕನಹಳ್ಳಿ ತಾಲ್ಲೂಕಿನಲ್ಲಿಯೇ ಕುರುಬರಹಳ್ಳಿ ಎಂಬ ಹೆಸರಿನ ಎರಡು ಹಳ್ಳಿಗಳೂ, ಹೊಸಹಳ್ಳಿ ಎಂಬ ಹೆಸರಿನ ಎರಡು ಹಳ್ಳಿಗಳೂ, ಮಲ್ಲೇನಹಳ್ಳಿ ಎಂಬ ಹೆಸರಿನ ಎರಡು ಹಳ್ಳಿಗಳೂ ಇವೆ. ಕರ್ನಾಟಕದ ಸ್ಥಳ ನಾಮಗಳ ಪಟ್ಟಿಯನ್ನು ಅಭ್ಯಾಸ ಮಾಡಿದರೆ ಒಂದೇ ಹೆಸರಿನ ನೂರಾರು ಹಳ್ಳಿಗಳಿರುವುದನ್ನು ಕಾಣಬಹುದು. ರಾಮ ಎಂಬ ನಿರ್ದಿಷ್ಟವುಳ್ಳ ಆದರೆ ವಾರ್ಗಿಕಗಳು ಬೇರೆ ಬೇರೆಯಾಗಿರುವ ರಾಮನಹಳ್ಳಿ, ರಾಮಕಟ್ಟೆ, ರಾಮಪುರ. ರಾಮ ಘಟ್ಟ ಎಂಬ ಸ್ಥಳನಾಮಗಳನ್ನು ಚಿಕ್ಕನಾಯಕನಹಳ್ಳಿ ತಾಲ್ಲೂಕಿನಲ್ಲಿಯೇ ಗುರುತಿಸ ಬಹುದು.

ಚಿಕ್ಕನಾಯಕನಹಳ್ಳಿ ತಾಲ್ಲೂಕಿನ 234 ಸ್ಥಳನಾಮಗಳನ್ನು ವಾರ್ಗಿಕಗಳ ದೃಷ್ಟಿ ಯಿಂದ ಕೆಳಕಂಡಂತೆ ವರ್ಗೀಕರಿಸಬಹುದು :

| | | | | | |
|---|---|---|---|---|---|
| –ಹಳ್ಳಿ | 120 | –ಕೊಣ, –ಕೊಳ | 2 | –ಕಾವಲು | 4 |
| –ಕಟ್ಟೆ | 20 | –ಕುಂಟೆ | 1 | –ಕಣಿವೆ | 1 |
| –ಪುರ | 21 | –ಅಗರ(ಅಗ್ರಹಾರ) | 2 | –ಕುಂಟೆ | 1 |
| –ಕೆರೆ | 20 | –ಕಲ್ಲು | 2 | –ಮಡು | 1 |
| –ಸಂದ್ರ, –ಸಮುದ್ರ | 5 | –ಬಿದರೆ | 2 | –ಗುಡ್ಡೆ | 1 |
| –ನಾಡು, ನಡು | 4 | –ಬಾಗಿ | 2 | –ಗುಡ್ಲು | 1 |
| –ಊರು | 4 | –ಹಾಳು | 4 | –ಹೊಳೆ | 1 |
| –ಘಟ್ಟ, –ಗಟ್ಟ | 3 | –ಹಾರು | 1 | –ವಾಡಿ | 2 |
| | | –ಹಟ್ಟಿ | 1 | –ಇತರೆ | 8 |
| | | | | ಒಟ್ಟು | 234 |

ಈ ಪಟ್ಟಿಯನ್ನು ಗಮನಿಸಿದರೆ ಸುಮಾರು ಅರ್ಧದಷ್ಟು ಸ್ಥಳನಾಮಗಳು–ಹಳ್ಳಿ ಎಂಬ ವಾರ್ಗಿಕದಿಂದಲೂ, ಸುಮಾರು ಕಾಲುಭಾಗದಷ್ಟು ಸ್ಥಳನಾಮಗಳು–ಕೆರೆ. ಕಟ್ಟೆ, ಪುರ ಈ ವಾರ್ಗಿಕಗಳಿಂದಲೂ ಇನ್ನು ಉಳಿದ ಸುಮಾರು ಕಾಲುಭಾಗದಷ್ಟು ಸ್ಥಳನಾಮಗಳು ಇತರ ವಾರ್ಗಿಕಗಳಿಂದಲೂ ರೂಪುಗೊಂಡಿದೆಯೆಂಬ ವಿಷಯ ಸ್ಪಷ್ಟವಾಗುತ್ತದೆ.

ಹಳ್ಳಿ ಎಂಬ ವಾರ್ಗಿಕದಿಂದ ಕೂಡಿರುವ ಸ್ಥಳನಾಮಗಳಲ್ಲಿ ಗಿಡಮರಗಳ ಹೆಸರುಗಳನ್ನು ಹೊಂದಿರುವ ಒಂಬತ್ತು ಸ್ಥಳಗಳಿವೆ : ಕಾರೇಹಳ್ಳಿ, ತಾರೇಪಹಳ್ಳಿ, ಯಗಚೀಪಳ್ಳಿ, ಬಂದರೇ ಹಳ್ಳಿ, ಬೇವಿನಹಳ್ಳಿ, ದವನದ ಹೊಸಹಳ್ಳಿ, ಹೆಸರಹಳ್ಳಿ, ಕೇದಿಗೆಹಳ್ಳಿ ಮತ್ತು ಮುತ್ತುಗದ ಹಳ್ಳಿ. ಈ ಒಂದೊಂದು ಸ್ಥಳದಲ್ಲೂ ಆಯಾ ಹೆಸರಿನ ಮರ, ಗಿಡ, ಇವುಗಳು ಹೆಚ್ಚಾಗಿ ಬೆಳೆಯುತ್ತಿದ್ದಿರಬೇಕು : ಈಗ ಆ ಗಿಡ ಮರಗಳು ಆ ಸ್ಥಳಗಳಲ್ಲಿ ಇಲ್ಲದಿರಬಹುದು ; ಆದರೆ ಆ ಸ್ಥಳಗಳಲ್ಲಿ ಹಳ್ಳಿಗಳು ರೂಪುಗೊಂಡಕಾಲದಲ್ಲಿ ಇದ್ದಿರಬಹುದು. ಭೌಗೋಳಿಕ ಪರಿಸರ ಕಲ್ಲಹಳ್ಳಿ, ಎರೇಹಳ್ಳಿ, ಮರಳಹಳ್ಳಿ, ದಿಬ್ಬದ ಹಳ್ಳಿ, ಕೋಡೀಹಳ್ಳಿ ಈ ಹೆಸರುಗಳು ಬರಲು ಕಾರಣವಾಗಿವೆ. ಹೊಸದಾಗಿ ಕಟ್ಟಿದ ಹಳ್ಳಿ ಹೊಸಹಳ್ಳಿ ಎಂಬ ಹೆಸರು ಪಡೆಯಬಹುದು. ದೇವರ ಮೇಲಿನ ಭಕ್ತಿಯಿಂದ ದೇವರ ಹಳ್ಳಿ ಎಂಬ ಹೆಸರು ಬಂದಿರಬಹುದು. ವ್ಯಕ್ತಿಗಳ ಹೆಸರುಗಳನ್ನುಳ್ಳ ಸ್ಥಳನಾಮಗಳೇ ಅತ್ಯಂತ ಹೆಚ್ಚಿನ ಸಂಖ್ಯೆಯಲ್ಲಿವೆ. ಇವುಗಳನ್ನು ನಾಲ್ಕು ವರ್ಗಗಳಾಗಿ ವಿಂಗಡಿಸ ಬಹುದು :

1. ಕಾಡೇನಹಳ್ಳಿ, ಚನ್ನೇನಹಳ್ಳಿ, ಮುದ್ದೇನಹಳ್ಳಿ, ಅಜ್ಜೇನಹಳ್ಳಿ, ಬುಳ್ಳೇನಹಳ್ಳಿ, ಸೋಮೇನಹಳ್ಳಿ ಇತ್ಯಾದಿ. ಇವು ಕ್ರಮವಾಗಿ ಕಾಡಯ್ಯನಹಳ್ಳಿ, ಚನ್ನಯ್ಯನಹಳ್ಳಿ, ಮುದ್ದಯ್ಯನಹಳ್ಳಿ, ಅಜ್ಜಯ್ಯನಹಳ್ಳಿ, ಬುಳ್ಳಯ್ಯನಹಳ್ಳಿ, ಸೋಮಯ್ಯನಹಳ್ಳಿ ಇವುಗಳ ಭಿನ್ನರೂಪಗಳು. ಚಿಕ್ಕೇನಹಳ್ಳಿ, ಕಾಟೇನಹಳ್ಳಿ, ಪಿನ್ನೇನಹಳ್ಳಿ, ಲಕ್ಷ್ಮೇನಹಳ್ಳಿ, ಕಲ್ಲೇನ ಹಳ್ಳಿ, ಬ್ಯಾಲೇನಹಳ್ಳಿ, ಸೊಂಡೇನಹಳ್ಳಿ, ಮಲ್ಲೇನಹಳ್ಳಿ, ರಂಗೇನಹಳ್ಳಿ, ಬೊಮ್ಮೇನಹಳ್ಳಿ, ಸಂಗೇನಹಳ್ಳಿ, ನಾಗೇನಹಳ್ಳಿ, ಗಂಟೇನಹಳ್ಳಿ, ಗೊಟ್ಟಿಗೇನಹಳ್ಳಿ, ಯಳ್ಳೇನ ಹಳ್ಳಿ, ಮೊದಲಾದ ಸ್ಥಳನಾಮಗಳು ಈ ಮಾದರಿಯವು.

2. ಚಿಕ್ಕನಾಯಕನಹಳ್ಳಿ ಬ್ಯಾಟೇರಂಗನಹಳ್ಳಿ (ಬೇಟೆ ರಂಗನಹಳ್ಳಿ). ಹೊನ್ನಸೆಟ್ಟಿಹಳ್ಳಿ, ಚುಂಗನಹಳ್ಳಿ, ಬಾವನಹಳ್ಳಿ, ಬಗ್ಗನಹಳ್ಳಿ ತಿಮ್ಮನಹಳ್ಳಿ, ರಾಮನಹಳ್ಳಿ, ಕಾಮನಹಳ್ಳಿ, ಬೈರಲಿಂಗನಹಳ್ಳಿ, ಗಂಗನಾಯಕನಹಳ್ಳಿ, ಮುಚ್ಚನಹಳ್ಳಿ, ಕಂಪನಹಳ್ಳಿ, ಸೋಮನಹಳ್ಳಿ, ಹನುಮಂತನಹಳ್ಳಿ, ಮೊದಲಾದ ಸ್ಥಳನಾಮಗಳು ಯಾವುದೇ ಬದಲಾವಣೆಯೂ ಇಲ್ಲದೆ ವ್ಯಕ್ತಿಯ ಹೆಸರಿನ ಜೊತೆ ಹಳ್ಳಿ ಎಂಬ ನಿರ್ದಿಷ್ಟವು ಸೇರಿ ರೂಪುಗೊಂಡಿವೆ. ಕೇವಲ ರೂಢನಾಮವೇ ನಿರ್ದಿಷ್ಟವಾಗಿ ಬಳಕೆಯಾಗಿರುವ ಗೌಡನಹಳ್ಳಿ ಎಂಬ ಸ್ಥಳನಾಮವೂ ಗಮನಾರ್ಹ.

3. ಗೋಪಗೊಂಡಸಹಳ್ಳಿ, ಹರಗೊಂಡನಹಳ್ಳಿ, ಚೋರಗೊಂಡನಹಳ್ಳಿ ತೊರೆಸುಂಡಗೊಂಡನಹಳ್ಳಿ, ಕೆರೆಸೂರಗೊಂಡನಹಳ್ಳಿ, ಮಲಗೊಂಡನಹಳ್ಳಿ, ಲಕ್ಷ್ಮ ಗೊಂಡನಹಳ್ಳಿ– ಈ ಸ್ಥಳನಾಮಗಳಲ್ಲಿ ಗೊಂಡ ಎಂಬುದು ಗೌಡ ಎಂಬುದರ ಹಳೆಯ ರೂಪ. ಇವು ಕ್ರಮವಾಗಿ ಗೋಪಗೌಡನಹಳ್ಳಿ, ಹರಗೌಡನಹಳ್ಳಿ, ಚೋರಗೌಡನಹಳ್ಳಿ, ಕೆರೆಸೂರಗೌಡನಹಳ್ಳಿ, ಮಲಗೌಡನಹಳ್ಳಿ, ಲಕ್ಷ್ಮಗೌಡನಹಳ್ಳಿ, ಎಂಬ ಅರ್ಥವನ್ನು ಕೊಡುತ್ತವೆ.

'ಗೊಂಡ'ದಲ್ಲಿ ಬರುವ ಅನುನಾಸಿಕದ ಸಹಾಯದಿಂದ ಅಂತಹ ಹಳ್ಳಿಗಳ ಇತಿಹಾಸವನ್ನು ಹನ್ನೆರಡು ಹದಿಮೂರನೇ ಶತಕಕ್ಕಿಂತ ಹಿಂದಕ್ಕೆ ತಳ್ಳಬಹುದು. (ಸಬಿಂದುಕಗಳು ಅಬಿಂದುಕಗಳಾಗಿದ್ದು ಹನ್ನೆರಡು ಹದಿಮೂರನೆಯ ಶತಮಾನಗಳಲ್ಲಿ ಎಂದು ಕನ್ನಡ ಭಾಷಾ ಚರಿತ್ರೆಯಿಂದ ತಿಳಿಯುತ್ತದೆ,) " 'ಗೌಡ' ಎಂಬರ್ಥದ–ಗೊಂಡ ರೂಪ ದಕ್ಷಿಣ ಕರ್ನಾಟಕದ ಸ್ಥಳನಾಮಗಳಲ್ಲಿ ಮಾತ್ರ ದೊರೆಯುತ್ತದೆ". ಎಂದು ಡಾ॥ ಚಿದಾನಂದಮೂರ್ತಿ ಅವರು ಅಭಿಪ್ರಾಯಪಡುತ್ತಾರೆ.[4] ಮೇಲೆ ಉಲ್ಲೇಖಿಸಿದ ಹಳ್ಳಿಗರ ಪ್ರಸ್ತಾಪ ಚಿಕ್ಕನಾಯಕನಹಳ್ಳಿಯ ಶಾಸನಗಳಲ್ಲಿ ಬರುವುದಿಲ್ಲ. ಆದಾಗ್ಯೂ ಈ ಹಳ್ಳಿಗಳು ಬಹಳ ಹಿಂದಿನಿಂದಲೂ ಅಸ್ತಿತ್ವದಲ್ಲಿರಬಹುದು–ಈ ಹಳ್ಳಿಗಳ ಜನರಿಗೆ ಇವುಗಳ ಪ್ರಾಚೀನತೆಯ ಬಗ್ಗೆ ತಿಳಿದಿರುವಂತೆಯೇ ಕಾಣುವುದಿಲ್ಲ.

4, ಹೆಂಗಸರ ಹೆಸರುಗಳುಳ್ಳ ಹಳ್ಳಿಗಳು, ದಾಸೀಹಳ್ಳಿ, ಅಕ್ಕನಹಳ್ಳಿ, ಮಾದೀಹಳ್ಳಿ, ಬರಗೀಹಳ್ಳಿ, ಈ ನಾಲ್ಕು ಹಳ್ಳಿಗಳು ಮಾತ್ರ ಹೆಂಗಸರ ಹೆಸರುಗಳುಳ್ಳವು. ಇವುಗಳಲ್ಲಿ ದಾಸಿ, ಅಕ್ಕ, ಇವು ರೂಢನಾಮಗಳು, ಮಾದಿ, ಬರಗಿ ಅಂಕಿತನಾಮಗಳು.

ವ್ಯಕ್ತಿಗಳ ಹೆಸರು ಊರುಗಳಿಗೆ ಬರಲು ಬೇರೆ ಬೇರೆ ಕಾರಣಗಳಿರಬಹುದು : ಒಬ್ಬ ವ್ಯಕ್ತಿ ಒಂದು ಪ್ರದೇಶದಲ್ಲಿ ಮೊದಲು ಮನೆಕಟ್ಟಿಕೊಂಡು ವಾಸಮಾಡುತ್ತಿದ್ದು ಅನಂತರ ಇತರರು ವಾಸಮಾಡಲು ತೊಡಗಿರಬೇಕು. ಇಂತಹ ಸಂದರ್ಭದಲ್ಲಿ ಆ ಊರಿನ ಸ್ಥಾಪಕನ ಹೆಸರನ್ನು ಆ ಊರಿಗೆ ಇಟ್ಟಿರಬಹುದು. ಅಥವಾ ಯಾವುದಾದರೂ ಸಾಹಸಕಾರ್ಯವನ್ನು ಮಾಡಿ ಗ್ರಾಮಕ್ಕೆ ಒಳ್ಳೆಯದನ್ನು ಮಾಡಿದವನ ಹೆಸರನ್ನು ಅಥವಾ ಅತ್ಯಂತ ಪ್ರಬಲನಾದ ವ್ಯಕ್ತಿಯ ಹೆಸರನ್ನು ಊರುಗಳಿಗೆ ಇಡಬಹುದು, ಇಂತಹ ವ್ಯಕ್ತಿಗಳ ಜೀವಿತ ಕಾಲದಲ್ಲಿಯೇ ಇವರ ಹೆಸರನ್ನಿಡಬಹುದು ಇಲ್ಲವೇ ಇವರು ತೀರಿಹೋದನಂತರ ಇವರ ಹೆಸರನ್ನು ಇಡಬಹುದು. ಅಥವಾ ಪ್ರಬಲನಾದ ವ್ಯಕ್ತಿಯೇ ತನ್ನ ಹೆಸರನ್ನು ಒಂದು ಗ್ರಾಮಕ್ಕೆ ಇರಿಸಬಹುದು. ಹೀಗೆ ಬೇರೆ ಬೇರೆ ಕಾರಣಗಳಿರುತ್ತವೆ. ವ್ಯಕ್ತಿನಾಮಗಳಿಗೆ ಮತ್ತು ಸ್ಥಳನಾಮಗಳಿಗೆ ಗಾಢವಾದ ಸಂಬಂಧ ಇರುವುದು ಇಂತಹ ಹೆಸರುಗಳಿಂದ ತಿಳಿದು ಬರುತ್ತದೆ, ಕೆಲವು ಸಲ ಒಂದೊಂದು ಜಾತಿಯ

---

4 ಅದೇ, ಪು. 32

ಜನರೇ ಒಂದು ಪ್ರದೇಶದಲ್ಲಿ ವಾಸಿಸುತ್ತಿದ್ದುದರಿಂದ ಆ ಊರಿಗೆ ಅವರ ಜಾತಿಯ ಅಥವಾ ಅವರ ಜಾತಿಯ ಕಸುಬಿನ ಹೆಸರನ್ನೇ ಇಡಬಹುದು. ಗೊಲ್ಲರಹಳ್ಳಿ, ಕುರುಬರ ಹಳ್ಳಿ, ಜೋಗಿಹಳ್ಳಿ, ಬಾಚೀಹಳ್ಳಿ, ಬೇಡರಹಳ್ಳಿ, ವಡ್ಡರಹಳ್ಳಿ, ಒಡೆಯರಹಳ್ಳಿ, ಸಾದರಹಳ್ಳಿ ಭಟ್ಟರಹಳ್ಳಿ, ತಿಗಡನಹಳ್ಳಿ, ಅಗಸರಹಳ್ಳಿ, ಇತ್ಯಾದಿ, ಭಟ್ಟರಹಳ್ಳಿ, ಮೊದಲಿಗೆ ಬ್ರಾಹ್ಮಣರೂ, ಬೇಡರಹಳ್ಳಿಯಲ್ಲಿ ಮೊದಲಿಗೆ ಬೇಡರೂ, ಅಗಸರಹಳ್ಳಿ ಯಲ್ಲಿ ಮೊದಲಿಗೆ ಅಗಸರೂ ವಾಸಿಸುತ್ತಿದ್ದಿರಬಹುದು. ಆದರೆ ಇಂದು ಈ ಎಲ್ಲಾ ಗ್ರಾಮಗಳಲ್ಲಿಯೂ ಎಲ್ಲ ಜಾತಿಯ ಜನರೂ ವಾಸ ಮಾಡುತ್ತಾರೆ : ಆದರೆ ಆಯಾ ಹೆಸರಿನ ಜನ ಆಯಾ ಗ್ರಾಮಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿರಬಹುದು ಇಲ್ಲವೇ ಪ್ರಬಲ ವಾಗಿರಬಹುದು.

–ಕಟ್ಟೆ, --ಕೆರೆ ಈ ಎರಡು ಪಾರ್ಗಿಕಗಳನ್ನುಳ್ಳ ಸ್ಥಳನಾಮಗಳಲ್ಲಿ ವ್ಯಕ್ತಿನಾಮ ಗಳು ಭೌಗೋಳಿಕ ಅಂಶಗಳು ಮತ್ತು ಮರಗಿಡಗಳು ನಿರ್ದಿಷ್ಟಗಳಾಗಿ ಬರುತ್ತವೆ. ಪುರ ಎಂಬ ಪಾರ್ಗಿಕವನ್ನುಳ್ಳ ಸ್ಥಳನಾಮಗಳಲ್ಲಿ ವ್ಯಕ್ತಿನಾಮಗಳು ಮಾತ್ರ ಪಾರ್ಗಿಕ ಗಳಾಗಿ ಬರುತ್ತವೆ. ಅವುಗಳ ಪಟ್ಟಿಯನ್ನು ಕೆಳಗೆ ಕೊಡಲಾಗಿದೆ.

| ಪಾರ್ಗಿಕ | ವ್ಯಕ್ತಿನಾಮ (ನಿರ್ದಿಷ್ಟ) | ಭೌಗೋಳಿಕ ಅಂಶ (ನಿರ್ದಿಷ್ಟ) | ಮರಗಿಡಗಳು (ನಿರ್ದಿಷ್ಟ) |
|---|---|---|---|
| 1–ಕಟ್ಟೆ | ಬೆನಕನಕಟ್ಟೆ | ಅಣೇಕಟ್ಟೆ (ಕೆರೆಯ ಅಣೆಯ ಬಳಿಯ ಊರು) | ಹೊಂಬಾಳ ಕಟ್ಟೆ, ಆಲದ ಕಟ್ಟೆ |
| | ಸಿದ್ದನಕಟ್ಟೆ | ಚೌಳಕಟ್ಟೆ (ಚೌಳುಮಣ್ಣು) | ಕಾರೇಕಟ್ಟೆ |
| | ಭೂಮನಕಟ್ಟೆ | ಸಾಲಕಟ್ಟೆ (ಸಾಲಾಗಿ ಬರುವ ಕಟ್ಟೆಗಳು) | ತರಬೇಕಟ್ಟೆ |
| | ಇತ್ಯಾದಿ | | ಯುಗಚೀಕಟ್ಟೆ |
| 2–ಕೆರೆ | ಶೆಟ್ಟೀಕೆರೆ | ಒಳಗೆರೆ (ಅಥವಾ ಒಳಗೆರೆ ಹಳ್ಳಿ) | ಅರಳೀಕೆರೆ, ಬನ್ನಿಕೆರೆ |
| | ಮಲ್ಲೀಗೆರೆ | ಕೋರಗೆರೆ (ಅಥವಾ | ಬ್ಯಾಲದಕೆರೆ |
| | ಹುಲಿಕೆರೆ | ಕೋರಗೆರೆಹಳ್ಳಿ) | ಅವಳಗೆರೆ (ಅವಳ= ನೈದಿಲೆ) |
| | ಇತ್ಯಾದಿ | | |
| 3–ಪುರ | ಸೋಮಲಾಪುರ | | |
| | ತೀರ್ಥಪುರ | | |
| | ದೊಡ್ಡರಾಂಪುರ | — | — |
| | ಚಿಕ್ಕಾರಾಂಪುರ | | |
| | ಕಾವಲ್ಲಾಪುರ | | |
| | ಮಾದಾಪುರ | | |

ಕೆರೆಯ ಅಂಗಳದಲ್ಲಿ ನೀರಿನಿಂದ ಮೇಲೆ ಎತ್ತರವಾದ ಜಾಗದಲ್ಲಿ ಕಟ್ಟಿರುವ ಹಳ್ಳಿಯನ್ನು ಒಳಗೆರೆಹಳ್ಳಿ ಎಂದೂ ಕೆರೆಯ ಏರಿಯ ಹಿಂಭಾಗದಲ್ಲಿ ಕಟ್ಟಿರುವ ಹಳ್ಳಿಯನ್ನು ಮೇಲಿನಹಳ್ಳಿ ಎಂದೂ, ಎರಡು ಹಳ್ಳಗಳು ಸೇರುವ ಜಾಗದಲ್ಲಿ ಕಟ್ಟಿದ ಕೆರೆಯನ್ನು ಕೋರಗೆರೆ ಅಥವಾ ಕ್ವಾರಗೆರೆ ಎಂದೂ, ಅಲ್ಲಿನ ಹಳ್ಳಿಯನ್ನು ಕೋರಗೆರೆಹಳ್ಳಿ ಅಥವಾ ಕ್ವಾರೆಗೆರೆಹಳ್ಳಿ ಎಂದೂ ಕರೆಯುತ್ತಾರೆ. ಭೌಗೋಳಿಕವಾದ ಈ ಅಂಶಗಳೂ ಸ್ಥಳನಾಮಗಳನ್ನು ರೂಪುಗೊಳ್ಳಲು ಕಾರಣವಾಗುತ್ತವೆ.

ಮಾರಸಂದ್ರ, ಅಂಕಸಂದ್ರ, ಮಂಚಸಂದ್ರ, ಭೀಮಸಮುದ್ರ, ಶೆಟ್ಟೀಸಮುದ್ರ– ಈ ಸ್ಥಳನಾಮಗಳಲ್ಲಿ ಬರುವ ನಿರ್ದಿಷ್ಟಗಳು ವ್ಯಕ್ತಿನಾಮಗಳು. ಪಾರ್ಗಿಕಗಳಾದ–ಸಂದ್ರ –ಸಮುದ್ರ ಇವು ಯಾವ ಸಮುದ್ರವನ್ನೂ ಸೂಚಿಸುವುದಿಲ್ಲ ; ಬಯಲು ಸೀಮೆಯಲ್ಲಿ ಯಾವ ಸಮುದ್ರವಿದೆ ? ಇಲ್ಲಿ–ಸಂದ್ರ–ಸಮುದ್ರ ಎಂದರೆ ಕೆರೆ ಎಂದು ಅರ್ಥ. ಸಮುದ್ರವನ್ನೇ ನೋಡಿರದ ಜನಕ್ಕೆ ದೊಡ್ಡಕೆರೆಯೇ ಸಮುದ್ರ ಎನಿಸಿರಬೇಕು.

ಮರೇನಾಡು ಎಂಬ ಸ್ಥಳನಾಮದ ಅರ್ಥ ಸ್ಪಷ್ಟವಾಗುವುದಿಲ್ಲ. ಮರೆ ಎಂದರೆ ಜಿಂಕೆ. ಈ ಊರಿನ ಸುತ್ತಮುತ್ತ ಜಿಂಕೆಗಳಿದ್ದ ಕಾಲದಲ್ಲಿ ಈ ಹೆಸರು ಬಂದಿರಬಹುದೆ? ವಿಚಾರ ಮಾಡಬೇಕಾದ ಅಗತ್ಯವಿದೆ. ಹಂದಿಗನಾಡು ಹಂದಿಗ ಎಂಬ ವ್ಯಕ್ತಿಯ ಹೆಸರಿನಿಂದ ರೂಪುಗೊಂಡ ಸ್ಥಳನಾಮ. ಕೈನಡು, ಯಳನಡು ಇವು ಕ್ರಮವಾಗಿ ಕೈನಾಡು, ಯಳನಾಡು ಎಂದಾಗುತ್ತವೆ ಕೈನಾಡು ಎಂಬ ಸ್ಥಳನಾಮದ ಅರ್ಥ ಸ್ಪಷ್ಟವಾಗಿಲ್ಲ.' ಹಳಗನ್ನಡದಲ್ಲಿ ಕೆಯಿ ಎಂದರೆ ಕ್ಷೇತ್ರ, ಹೊಲ ಎಂಬ ಅರ್ಥಗಳಿವೆ. ಕೆಯಿನಾಡು> ಕೈನಾಡು ಆಗಿರಬಹುದೆ ? ಉದ್ದಿನಕೆಯಿ, ಎಳ್ಳಿನಕೆಯಿ ಎಂಬ ಮಾತುಗಳು ಹಳಗನ್ನಡದಲ್ಲಿ ಇವೆ. ಯಳನಾಡು ಎನ್ನುವುದು ಎಳ್ಳುನಾಡು ಎಂಬುದರ ರೂಪಾಂತರ. ಈ ಪ್ರದೇಶದಲ್ಲಿ ಎಳ್ಳು ಬೆಳೆಯುತ್ತಿದ್ದರು. ಈ ಊರಿನ ಐತಿಹ್ಯದಲ್ಲಿಯೂ (Legend) ಎಳ್ಳಿನ ಪ್ರಸ್ತಾಪವಿದೆ.

–ಘಟ್ಟ,–ಗಟ್ಟ ಎಂದರೆ ಎತ್ತರವಾದ ಪ್ರದೇಶ. ಮತ್ತಿಘಟ್ಟ ಅಂದರೆ ಮತ್ತಿ ಮರಗಳು ಬೆಳೆಯುತ್ತಿದ್ದ ಎತ್ತರವಾದ ಜಾಗ. ದಬ್ಬೇಗಟ್ಟದಲ್ಲಿ ಹಿಂದೆ ಮೇದರು ವಾಸವಾಗಿದ್ದರು. ಬಿದಿರು, ಬೆತ್ತ ಈ ಪ್ರದೇಶದಲ್ಲಿ ತಕ್ಕಮಟ್ಟಿಗೆ ಬೆಳೆಯುತ್ತಿದ್ದಿತೆಂದು ಹೇಳುತ್ತಾರೆ. ಬಿದಿರಿನ ದಬ್ಬೆಗಳನ್ನು ಬಳಸುತ್ತಿದ್ದುದರಿಂದ ದಬ್ಬೇಗಟ್ಟ ಎಂಬ ಹೆಸರು ಬಂದಿರಬಹುದು. ರಾಮಘಟ್ಟ ಎಂಬಲ್ಲಿ ರಾಮ ವ್ಯಕ್ತಿನಾಮ–ಕೊಳ ಕೋಣ ಎರಡೂ ಒಂದೇ. ಹಾಲುಗೊಣ ಎಂದರೆ ಹಾಲಿನ ಕೊಳ. ಬಹುಶಃ ಒಂದು ಕಾಲಕ್ಕೆ ಸಮೃದ್ಧವಾಗಿ ಹಾಲು ದೊರಕುತ್ತಿದ್ದಿರಬಹುದು. ಬಾಳೆಕೊಣ ಈಗ ಬೇಜರಾಕ್‌ಗ್ರಾಮ (ಹಾಳೂರು). ಅಗ್ರಹಾರ ಒಂದು ಕಾಲಕ್ಕೆ ಬ್ರಾಹ್ಮಣರಿಗೆ ಕೊಟ್ಟಿದ್ದ ಹಳ್ಳಿಯಾಗಿರಬೇಕು. ಕೊಡಲಾಗರ ಎಂಬುದು ಕೊಡಲ+ಅಗರ ಎಂದು ವಿಭಾಗಿಸಬಹುದು. ಇಲ್ಲಿ ಅಗರ ಎಂದರೆ ಅಗ್ರಹಾರ ಎಂದು ಅರ್ಥ. ಕೊಳ್ಳ+ಅಗರ>

ಕೊಳ್ಳಗರ> ಕೊಡಲಾಗರ ಎಂದು ಇದರ ನಿಷ್ಪತ್ತಿ ಇರಬಹುದು.[5] ಆದರೆ ಇದಕ್ಕೆ ಶಾಸನದ ಆಧಾರವಿಲ್ಲ. ಪಳ್ಳದ ದಂಡೆಯಲ್ಲಿರುವ ಅಗ್ರಹಾರ ಎಂದು ಇದಕ್ಕೆ ಅರ್ಥ ವಿರಬಹುದು. ಕೊಟ್ಟಿಗೆಕಲ್ಲು, ನಿರುಪಗಲ್ಲು, ಇವುಗಳಲ್ಲಿ ಬರುವ ಕಲ್ಲು ಭೌಗೋಳಿಕ ಅಂಶ. ಕೊಟ್ಟಿಗೆಗೆ ಅಗತ್ಯವಾದ ಕಲ್ಲುಗಳು ಸಿಗುವ ಜಾಗ ಎಂದು ಈ ಹೆಸರು ಬಂದಿರ ಬಹುದೆ? ನಿರುವಗಲ್ಲು ಎತ್ತರವಾಗಿದ್ದು ಅದನ್ನು ಭೂಮಿಯಲ್ಲಿ ಹೂಳಿರುತ್ತಾರೆ. ದನಗಳು ಮೈತುರಿಸಿಕೊಳ್ಳಲು ತಮ್ಮ ಮೈಯನ್ನು ಈ ಕಲ್ಲಿಗೆ ಉಜ್ಜುತ್ತವೆ. ಇಂತಹ ಒಂದು ನಿರುವಗಲ್ಲಿನ ಬಳಿ ಸ್ಥಾಪಿತವಾದ ಹಳ್ಳಿ ನಿರುವಗಲ್ಲು ಎಂಬ ಹೆಸರನ್ನು ಪಡೆದಿರ ಬಹುದು. ದೊಡ್ಡಬಿದರೆ, ಚಿಕ್ಕಬಿದರೆ. ಅವಳಿಗ್ರಾಮಗಳು. ಬಿದರೆ ಎಂದರೆ ಬಿದಿರು ಬೆಳೆಯುವ ಪ್ರದೇಶ. ಹಿಂದೆ ಈ ಪ್ರದೇಶಗಳಲ್ಲಿ ತಕ್ಕಮಟ್ಟಿಗೆ ಬಿದಿರು ಬೆಳೆಯುತ್ತಿದ್ದಿರಬಹುದು. ಬಿದರೆ ಎಂಬುದಕ್ಕೆ ಬೇರೆ ಯಾವ ಅರ್ಥವೂ ತೋರುವುದಿಲ್ಲ. ಹೊನ್ನೇಬಾಗಿ, ಸೀಗೆಬಾಗಿ ಈ ಪದಗಳು ವಿಶಿಷ್ಟವಾಗಿವೆ. ಸೀಗೆಮೆಳೆ ಮತ್ತು ಬಾಗಿಮರ ಬೆಳೆಯುವ ಪ್ರದೇಶಕ್ಕೆ ಸೀಗೆಬಾಗಿ ಎಂದೂ ಹೊನ್ನೆ ಮತ್ತು ಬಾಗಿ ಮರಗಳು ಬೆಳೆಯುವ ಪ್ರದೇಶಕ್ಕೆ ಹೊನ್ನೇಬಾಗಿ ಎಂದು ಹೆಸರು ಬಂದಿದೆ. ಈ ಪ್ರದೇಶಗಳಲ್ಲಿ ಸೀಗೆ, ಹೊನ್ನೆ, ಬಾಗಿ ಮರಗಳು ಹೆಚ್ಚಾಗಿ ಬೆಳೆಯುತ್ತಿದ್ದವು: ಈಚೆಗೆ ಕಡಮೆಯಾಗಿವೆ.

ಮೊದಲಿಗೆ ಹುಲ್ಲುಗಾವಲುಗಳಿದ್ದ ಪ್ರದೇಶದಲ್ಲಿ ಅಂಕಸಂದ್ರಕಾವಲು, ಕುರಿಪಳ್ಳಿ ಕಾವಲು, ಹಾಲು ಮಲ್ಲೇದೇವರ ಕಾವಲು, ಮರಳಹಳ್ಳಿ ಕಾವಲು ಈ ಸ್ಥಳಗಳು ರೂಪುಗೊಂಡಿವೆ. ಹೀಗಾಗಿ ಅಲ್ಲಿ ಗ್ರಾಮಗಳು ಬಂದನಂತರವೂ ಕಾವಲು ಎಂಬ ಪಾರ್ಗಿಕ ಉಳಿದಿದೆ. ಕರ್ನಾಟಕದ ಸ್ಥಳನಾಮಗಳಲ್ಲಿ–ಊರು ಎಂಬುದು ತುಂಬ ಪ್ರಚುರವಾಗಿರುವ ಪಾರ್ಗಿಕ. ಆದರೆ ಈ ತಾಲ್ಲೂಕಿನಲ್ಲಿ ಕುಪ್ಪೂರು. ಬರಗೂರು, ನೂಲೇನೂರು ಈ ಮೂರು ಸ್ಥಳನಾಮಗಳು ಮಾತ್ರ ದೊರೆಯುತ್ತವೆ. ಕುಪ್ಪೆ+ಊರು=ಕುಪ್ಪೂರು (ಎತ್ತರದಲ್ಲಿರುವ ಜಾಗ) ಎಂದು ಇದರ ನಿಷ್ಪತ್ತಿಯನ್ನು ಸೂಚಿಸಬಹುದು. ಬರಗು+ಊರು=ಬರಗೂರು. ಬರಗು ಎಂಬ ಬೆಳೆ ಈ ಪ್ರದೇಶದಲ್ಲಿ ಬೆಳೆಯುವುದರಿಂದ ಈ ಹೆಸರು ಬಂದಿರಬೇಕು. ನೂಲೇನೂರು ಎಂಬುದು ನೂಲೇನ+ಊರು (ಅಂದರೆ ನೂಲಯ್ಯನ ಊರು) ಅಥವಾ ನೂಲಿನ+ಊರು (ಬಟ್ಟೆ ನೇಯುವ ಕಸುಬಿನವರ ಊರು)–ಈ ಎರಡರಲ್ಲಿ ಒಂದಾಗಿರಬಹುದು. ಕಾತ್ರೀಕೆಹಾಳು. ಗಾಣದ ಹಾಳು. ಕೊಪ್ಪರಿಗೆ ಹಾಳು ಆಸರೀಹಾಳು ಈ ನಾಲ್ಕು ಸ್ಥಳಗಳು ಹಾಳು ಎಂಬ ಪಾರ್ಗಿಕದಿಂದ ಕೂಡಿವೆ. ಹಾಳು ಎಂದರೆ ಖಾಲಿ ಇರುವ ಜಾಗ. ಮೊದಲಿಗೆ ಬೀಳುಬಿದ್ದಿದ್ದ ಜಾಗಗಳಲ್ಲಿ

5 ಮೈಸೂರು ಜಿಲ್ಲೆಯ ಕೊಳ್ಳೇಗಾಲ ಎಂಬ ಸ್ಥಳನಾಮದ ನಿಷ್ಪತ್ತಿಯನ್ನೂ ಈ ಸಂದರ್ಭದಲ್ಲಿ ಗಮನಿಸಬಹುದು. "ಕೊಳ್ಳೇಗಾಲ ಎಂಬುದು 'ಕೊಳ್ಳಗರ' ಎಂಬ ಚತುರ್ವೇದಿ ಮಂಗಲವಾಗಿತ್ತು" —ಡಾ. ಎಂ. ಚಿದಾನಂದಮೂರ್ತಿ, ವಾಗರ್ಥ, ಪು. 28. ಅಗರ, ಅಗ್ರಹಾರ, ಆರಗ, ಗಾಲ, ಮಂಗಲ ಈ ಪಾರ್ಗಿಕಗಳು ಬ್ರಾಹ್ಮಣರಿಗೆ ದತ್ತಿಕೊಟ್ಟ ಗ್ರಾಮಗಳು ಎಂಬುದನ್ನು ಸೂಚಿಸುತ್ತವೆ.

ಈ ಊರುಗಳನ್ನು ಕಟ್ಟಿರಬೇಕು. ಕಾತ್ರೀಕೆ ಎಂಬ ಪದ ಕಾತರಿಕೆ ಎಂಬುದರಿಂದ ಬಂದಿರಬಹುದು. ಕಾತರಿಕೆ ಎಂಬುದು ಒಂದು ಗಿಡ; ಆ ಗಿಡ ಈ ಪ್ರದೇಶದಲ್ಲಿ ಹಿಂದೆ ಹೆಚ್ಚಾಗಿ ಬೆಳೆಯುತ್ತಿದ್ದಿರಬೇಕು. ಹೀಗಾಗಿ ಆ ಪಾಳು ಪ್ರದೇಶದಲ್ಲಿ ಕಟ್ಟಿದ ಊರಿಗೆ ಕಾತರಿಕೆ ಹಾಳು ಎಂಬ ಹೆಸರು ಬಂದಿರಬೇಕು; ಅನಂತರ ಅದು ಕಾತ್ರೀಕೆಹಾಳು ಎಂಬ ರೂಪವನ್ನು ಪಡೆದಿರಬೇಕು. ಗಾಣ ಎಂದರೆ ಎಣ್ಣೆ ತೆಗೆಯುವ ಸಾಧನ, ಮೀನಿನ ಗಾಳ ಮೊದಲಾದ ಅರ್ಥಗಳಿವೆ. ಈ ಪ್ರದೇಶಕ್ಕೆ ಗಾಣದ ಹಾಳು ಎಂಬ ಹೆಸರು ಹೇಗೆ ಬಂದಿರಬಹುದು ಎಂಬುದು ಸ್ಪಷ್ಟವಾಗುವುದಿಲ್ಲ. ಗಂಧದ ಮರಗಳು ಈ ಜಾಗದಲ್ಲಿ ಬೆಳೆಯುಬಹುದೆ? ಹಾಗಾದರೆ ಗಂಧದ ಹಾಳು ಉಚ್ಚಾರಣೆಯಲ್ಲಿ ಗಾಣದ ಹಾಳು ಆಗಿರತ್ತಿದ್ದಿರಬಹುದು.[6] ಕೊಪ್ಪರಿಗೆಯಲ್ಲಿ ಹಣವನ್ನು, ಚಿನ್ನವನ್ನು ಹಿಂದೆ ಹೂಳುವ ಪದ್ಧತಿಯಿತ್ತು. ಇಂತಹ ಕೊಪ್ಪರಿಗೆ ಈ ಹಾಳಿನಲ್ಲಿ ಅಗೆಯುವಾಗ ಸಿಕ್ಕಿರಬಹುದು. ಹೀಗೆ ಕೊಪ್ಪರಿಗೆ ಹಾಳು ಎಂಬ ಹೆಸರು ಬಂದಿರಲು ಸಾಧ್ಯ. ಆಸರಿಹಾಳು ಎಂಬುದರ ಅರ್ಥ ಸ್ಪಷ್ಟವಾಗುವುದಿಲ್ಲ. ಆದರೆ ಹಸರಾಣಿ ಎಂಬ ಬಳ್ಳಿ ಇದೆ. ಇದನ್ನು ಹಸರ್ವಾಣಿ ಎಂದೂ ಕರೆಯುತ್ತಾರೆ. ಹಸರ್ವಾಣಿ> ಹಸರಾಣಿ> ಅಸರಾಣಿ> ಅಸರಿ <ಆಸರಿ— ಹೀಗೆ ಈ ಪದದ ನಿಷ್ಪತ್ತಿಯನ್ನು ಗುರುತಿಸಬಹುದು. ಅಸರಿ ಎಂಬುದು ಉಚ್ಚಾರದಲ್ಲಿ ಆಸರಿ ಎಂದಾಗಿದ್ದರೆ ಆಗ ಆಸರಿಹಾಳು ಎಂಬುದರ ಮೂಲ ಅಸರಾಣಿ ಹಾಳು ಅಥವಾ ಅಸರಿ ಹಾಳು. ಈ ಗ್ರಾಮದಲ್ಲಿ ಹಿಂದೆ ಅಸರಾಣಿ ಬಳ್ಳಿ ಬೆಳೆಯುತ್ತಿದ್ದಿರಬಹುದು. ಬೋರನಕಣಿವೆಯ ಬಳಿ ಜಲಾಶಯ ನಿರ್ಮಿಸಲಾಗಿದೆ. ಮೊದಲು ಕಣಿವೆಗೆ ಕೊಟ್ಟಿದ್ದ ಹೆಸರು ಈಗಲೂ ಮುಂದುವರಿದಿದೆ. ದಬ್ಬಗುಂಟೆ ಎಂಬುದು ದಬ್ಬೆ+ ಕುಂಟೆ ಎಂದು ಇರಬೇಕು. ಕುಂಟೆ ಎಂಬುದು ಒಂದು ಹೊಂಡ. ಇದರ ಬಳಿ ಬಿದಿರು ಬೆಳೆಯುತ್ತಿತ್ತೆ? ತಿಳಿಯದು. ಅಥವಾ ದಪ್ಪ—ಕುಂಟೆ ಅಂದರೆ ದೊಡ್ಡಕುಂಟೆ ಎಂದ್ಯ ಅರ್ಥವಾಗುವುದೆ? ಸ್ಪಷ್ಟವಾಗಿ ತಿಳಿಯುವುದಿಲ್ಲ. ಬೆಳವಾಡಿ, ದೊಡ್ಡ ಬೆಳವಾಡಿ ಈ ಸ್ಥಳನಾಮಗಳಲ್ಲಿ ವಾಡಿ ಎಂಬ ಪಾರ್ಗಿಕವಿದೆ. ವಾಡಿ ಎಂದರೆ ವಾಸಮಾಡುವ ಸ್ಥಳ. ಬೆಳ ಎಂದರೆ ಬಿಳಿಯದು ಎಂದು ಅರ್ಥ. ಅಜ್ಜಿಗುಡ್ಡೆ ಅಜ್ಜಿಯೊಬ್ಬಳ ಸಮಾಧಿಯ ಬಳಿ ಕಟ್ಟಿದ ಊರು. ಬಡಕೇಗುಡ್ಲು ಬರಕಿ ಎಂಬ ಹೆಂಗಸು ಆರಂಭಿಸಿದ ಊರು. ಅವಳು ಒಂದು ಗುಡಿಸಲನ್ನು ಮೊದಲಿಗೆ ಕಟ್ಟಿರಬೇಕು. ಮಾರು ಹೊಳೆ ಎಂಬುದು ಹೊಳೆಯ ಅಂದರೆ ಹಳ್ಳದ ದಂಡೆಯ ಊರು. ಒಂದು ಮಾರು ಅಗಲದ ಹೊಳೆ ಇರಬೇಕು. ಸವಿಲೆ ಎಂಬ ಸ್ಥಳದಲ್ಲಿ ಸವಿಲುಗಳಿದ್ದು ಆ ಹೆಸರು ಬಂದಿರಬಹುದು.

---

6 –ಹಾಳು ಎಂಬುದು ಪಾಳು ಬಿದ್ದಿರುವ ಜಾಗವಾಗಿರುವುದರಿಂದ ಈ ಪಾರ್ಗಿಕದ ನಿರ್ದಿಷ್ಟಗಳು ಸಾಮಾನ್ಯವಾಗಿ ಗಿಡ ಮರ ಬಳ್ಳಿಗಳಾಗಿರುವ ಸಂಭವ ಹೆಚ್ಚು. ಈ ದೃಷ್ಟಿಯಿಂದ ಗಾಣದ ಹಾಳು ಎಂಬುವದರ ಮೂಲ ರೂಪ ಗಂಧದ ಹಾಳು ಎಂದು ಇರುವ ಸಂಭವವಿದೆ. ಚಿಕ್ಕನಾಯಕನಹಳ್ಳಿ ತಾಲ್ಲೂಕಿನಲ್ಲಿ ಶ್ರೀಗಂಧ ಬೆಳೆಯುವುದರಿಂದ ಈ ಊಹೆ ಮಾಡಬಹುದು.

ಸಾಸಲು ಎಂಬ ಊರಿನ ಅರ್ಥ ಸ್ಪಷ್ಟವಾಗುವುದಿಲ್ಲ. ಬೆಳ್ಳಾರ ಎಂದರೆ ಬಲೆ ಎಂದು ಅರ್ಥ. ಇದು ಮೀನುಗಾರರ ಅಥವಾ ಬೇಟೆಗಾರರ ಪ್ರದೇಶವಾಗಿದ್ದಿರಬೇಕು. ದಸೂಡಿ, ಬೆಳಗುಲಿ ಈ ಪದಗಳ ಅರ್ಥ ಸ್ಪಷ್ಟವಾಗುವುದಿಲ್ಲ. ಸೋರಲಮಾವು ಎಂಬ ಸ್ಥಳನಾಮಬರಲು ಆ ಪ್ರದೇಶ ಮಾವಿನ ಮರಗಳು ಹೆಚ್ಚಾಗಿದ್ದು, ಮಾವಿನ ಕಾಯಿನ ಸೊನೆ ಹೆಚ್ಚಾಗಿ ಸೋರುತ್ತಿದ್ದಿರಬಹುದು. ಈ ಬಗೆಯ ಸ್ಥಳನಾಮಗಳು ತುಂಬ ಅಪರೂಪ. ಬಾಗಾಯತ್ತು ಎಂದರೆ ತೋಟ. ಬಾಗಾಯತ್ತು ಎಂಬುದೇ ಒಂದು ಸ್ಥಳ ನಾಮವಾಗಿದೆ. ಮೈಲಕಟ್ಟೆ ಎಂಬ ಸ್ಥಳನಾಮ ಮೈಲ ಕೆಬ್ಬೆ ಎಂಬುದರ ರೂಪಾಂತರ ವಿರಬಹುದು, ಕೆಟ್ಟೆ ಎಂದರೆ ಕೆಂಪುನೆಲ. ಮೈಲನಿಗೆ ಸೇರಿದ ಕೆಂಪುನೆಲ ಎಂಬ ಅರ್ಥದಲ್ಲಿ ಮೈಲಕೆಬ್ಬೆ ಎಂಬ ಪದ ಬಳಕೆಯಾಗಿದ್ದು ಕ್ರಮೇಣ ಮೈಲಕಟ್ಟೆ ಎಂದಾಗಿರುವ ಸಾಧ್ಯತೆಯಿದೆ. ಜಾಣೇಹಾರು ಎಂಬ ಸ್ಥಳನಾಮದ ವಿವರಣೆ ಕಷ್ಟವಾಗಿದೆ. ಅದು ಜಾನೆ+ಹಾಳು=ಜಾನೆಹಾಳು ಅಥವಾ ಜಾಣೆ+ಹಾರ=ಜಾಣೆಹಾರ ಎಂದಿರ ಬಹುದು.

ಸ್ಥಳನಾಮಗಳ ಅಧ್ಯಯನದಲ್ಲಿ ಶಾಸನಗಳು ನೆರವಾಗುತ್ತವೆ. ಸ್ಥಳಗಳು ಎಷ್ಟು ಕಾಲ ದಿಂದಲೂ ಅಸ್ತಿತ್ವದಲ್ಲಿವೆ ಮತ್ತು ಕಾಲಗತಿಯಲ್ಲಿ ಅವುಗಳ ಹೆಸರುಗಳು ಹೇಗೆ ಬದ ಲಾಗಿವೆ ಎಂಬುದನ್ನು ಶಾಸನಗಳ ಆಧಾರದಿಂದ ತಿಳಿದುಕೊಳ್ಳಬಹುದು. ಚಿಕ್ಕನಾಯಕನ ಹಳ್ಳಿ ತಾಲ್ಲೂಕಿನಲ್ಲಿ 45 ಶಾಸನಗಳು ಸಿಕ್ಕಿವೆ; ಇವು ಗಂಗರ, ಕಲ್ಯಾಣಿಚಾಳುಕ್ಯರ, ಹೊಯ್ಸಳರ ಮತ್ತು ಮೈಸೂರು ಅರಸರ ಕಾಲಕ್ಕೆ ಸೇರಿವೆ. ಚಿಕ್ಕನಾಯಕನಹಳ್ಳಿ, ಶೆಟ್ಟೀಕೆರೆ, ಹಂದನಕೆರೆ, ಕಂದಿಕೆರೆ, ಹುಳಿಯಾರು, ಸೀಗೆಬಾಗಿ, ಮೋಟೀಹಳ್ಳಿ ಈ ಹೆಸರುಗಳು ಶಾಸನಗಳಲ್ಲಿ ಉಕ್ತವಾಗಿವೆ. ಇವುಗಳಲ್ಲಿ ಮೊದಲ ಐದು ಸ್ಥಳಗಳು ಹೋಬಳಿಯ ಕೇಂದ್ರಗಳೆಂಬುದು ಗಮನಾರ್ಹವಾದ ವಿಷಯ. ಎಪಿಗ್ರಾಫಿಯಾ ಕರ್ನಾಟಿಕಾದ ತುಮಕೂರು ಜಿಲ್ಲೆಯ ಸಂಪುಟದಲ್ಲಿ ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಒಂದನೆಯ ಶಾಸನದಲ್ಲಿಯೇ (ಕ್ರಿ. ಶ. 1622) "........ಚಿಕ್ಕನಾಯಕನಹಳ್ಳಿಯೆಂಬ ಪಟ್ಟಣದಲ್ಲಿ ಮುದಿಯಪ್ಪ ನಾಯಕನೆಂಬುವನು ರಾಜ್ಯವನಾಳುತ್ತಾಯಿರಲು... ....' ಎಂಬ ಮಾತು ಬರುತ್ತದೆ. ಹೀಗಾಗಿ ಚಿಕ್ಕನಾಯಕನಹಳ್ಳಿಗೆ ಮೂರುವರೆ ಶತ ಮಾನಕ್ಕೂ ಹೆಚ್ಚಿನ ಇತಿಹಾಸವಿರುವುದು ಸ್ಪಷ್ಟವಾಗುತ್ತದೆ. ಶೆಟ್ಟಿಕೆರೆ ಮತ್ತು ಹುಳಿಯಾರು ತುಂಬ ಪ್ರಾಚೀನವಾದ ಸ್ಥಳಗಳು. ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಎರಡನೆಯ ಶಾಸನದಲ್ಲಿ (ಕ್ರಿ. ಶ. 1259) ಈ ಎರಡೂ ಸ್ಥಳಗಳ ಉಲ್ಲೇಖವಿದೆ. ಈ ಎರಡೂ ಗ್ರಾಮಗಳೂ ಬ್ರಾಹ್ಮಣರಿಗೆ ದತ್ತಿಯಾಗಿ ಕೊಟ್ಟ ಅಗ್ರಹಾರಗಳು. ಹೊಯ್ಸಳ ದೊರೆ ಮೂರನೆಯ ನರಸಿಂಹನು ತನ್ನ ಪ್ರಧಾನಿ ನಾಚರಸರ ಮಗ ಮಹಾ ಪ್ರಧಾನ ಗೋಪಾಲ ದಂಡನಾಯಕರಿಗೆ ಈ ಅಗ್ರಹಾರವನ್ನು ದಾನವಾಗಿ ಕೊಟ್ಟನು. ಗೋಪಾಲ ದಂಡನಾಯಕ ಈ ಅಗ್ರಹಾರದಲ್ಲಿ ಯೋಗಮಾಧವ ದೇವಾಲಯವನ್ನು

ಕಟ್ಟಿಸಿದನು; ಈ ಅಗ್ರಹಾರಕ್ಕೆ ಶ್ರೀಭರಿತ ಪ್ರಕಾಶಪುರಿ ಎಂದು ಹೆಸರಿಟ್ಟನು. "...... ಇಂತೀ ಸಿದ್ಧಾದಾಯವನು ಅರಮನೆಗೆ ತೆತ್ತು ಉಂಬಂತಾಗಿ ಶ್ರೀ ವೀರನರಸಿಂಹ ದೇವರು ಆ ಹೊಸಗೆಱೆಗೂಡಿದ **ಸೆಟ್ಟಿಯ ಕೆರೆಯನು** ಅಗ್ರಹಾರವನ್ನು ಮಾಡು ವಂತಾಗಿ ತಂದು ಪ್ರಿಯ ಪ್ರಧಾನರಹ ಅಗಸ್ತ್ಯ ಗೋತ್ರಜರಹ ನಾಚರಸರಿಂದ ಸೋವಲದೇವಲ ದೇವಿಯಲ್ಲಿ ಉದಯಿಸಿದ ಶ್ರೀಮನ್ಮಹಾಪ್ರಧಾನ ಗೋಪಾಲ ದಣ್ಣಾಯಕರಿಗೆ ಧಾರಾಪೂರ್ವಕಂ ಮಾಡಿಕೊಟ್ಟರು. ಆ ಗೋಪಾಲ ದಣ್ಣಾಯಕರು ಆ ಮರಿಯಾದೆಯಲ್ಲಿ ಆ ಹೊಸಗೆಱೆಗೂಡಿದ ಕಾಲುವಳ್ಳಿಗಳು ಸಹಿತವಾದ ಸೆಟ್ಟಿಯ ಕೆಱೆಯನು ಶ್ರೀಭರಿತ ಪ್ರಕಾಶಪುರವೆಂದು ಹೆಸರಿಟ್ಟು ನಾಲ್ವತ್ತೇಳು ವೃತ್ತಿಯಾಗಿ ಮಾಡಿ ನಾನಾ ಗೋತ್ರರಹ ಬ್ರಾಹ್ಮಣೋತ್ತಮರಿಗೆ ಮೂವತ್ತಾಱು ವೃತ್ತಿಯನು ಧಾರಾಪೂರ್ವಕಂ ಮಾಡಿಕೊಟ್ಟರು." ಎಂಬ ಈ ಶಾಸನದ ಮಾತುಗಳು ಶೆಟ್ಟೀಕೆರೆಯ ಇತಿಹಾಸದ ಮೇಲೆ ಬೆಳಕು ಚೆಲ್ಲುತ್ತದೆ. ಶ್ರೀಭರಿತ ಪ್ರಕಾಶಪುರಿ ಎಂಬ ಹೆಸರು ಕಾಲಗತಿಯಲ್ಲಿ ಕೈಬಿಟ್ಟುಹೋಗಿ ಶೆಟ್ಟಿಕೆರೆ ಎಂಬ ಹೆಸರು ಮಾತ್ರ ಬಳಕೆಯಲ್ಲಿ ಉಳಿದಿದೆ, ಈಗ ಶೆಟ್ಟಿಕೆರೆಯಲ್ಲಿ ಎಲ್ಲ ಜಾತಿಯ ಜನರೂ ವಾಸವಾಗಿದ್ದಾರೆ. ಈ ಶಾಸನದಲ್ಲಿಯೇ ಬರುವ "........ಆಸಂದಿನಾಡ ಹುಳಿಯಱವೃತ್ತಿಯೊಳಗಣ ಪ್ರಸಿದ್ಧ ಸೀಮಾ ಸಮನ್ವಿತ......." ಎಂಬ ಮಾತಿನಿಂದ ಹುಳಿಯಱಸೀಮೆ ಎಂಬುದು ಆ ಕಾಲಕ್ಕೆ ಇತ್ತೆಂದು ತಿಳಿದು ಬರುತ್ತದೆ. ಹಾಗೆಯೇ ಇದೇ ಹುಳಿಯೂರು ಪ್ರದೇಶ ವೆಂದೂ ತಿಳಿಯುತ್ತದೆ. ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ನಾಲ್ಕನೆಯ ಶಾಸನದಲ್ಲಿ (ಕ್ರಿ. ಶ. 1318) "........ದೇವರ ದಣ್ಣಾಯಕರ ಮಗ ಹಟಿಯ ಕೇತಯ್ಯನ ಮಗ ಯಿರುಗೆಯ ನಾಯಕನೂ ಮುಪ್ಪೆಯನಾಯಕನೂ ಇರುಗೆಯ ನಾಯ್ಕನ ತಮ್ಮ **ಹುಳಿ ಎಱ ಒಪ್ಪೆಯನಾಯ್ಕನೂ** ..." ಎಂಬ ಮಾತುಗಳನ್ನು ಗಮನಿಸಿದಾಗ ಹುಳಿಯೂರಿಗೆ ಹುಳಿಎಱ ಎಂಬ ರೂಪವಿದ್ದುದು ತಿಳಿದು ಬರುತ್ತದೆ. ಆ ಕಾಲಕ್ಕೆ ಬೂದಿಹಾಳುಸೀಮೆ ಮತ್ತು ಹುಳಿಯಱ ಸೀಮೆ ಇವೆರಡೂ ಪ್ರಸಿದ್ಧವಾದ ಸೀಮೆಗಳಾಗಿ ದ್ದವು. ಹನ್ನೊಂದನೆಯ ಶಾಸನದಲ್ಲಿ "... ...**ಪುಳಿಯಱ ನೆಲೆ ವೀಡಿನೊಳು**..." ಎಂಬ ಮಾತು ಬರುತ್ತದೆ. ಹನ್ನೆರಡನೆಯ ಶಾಸನದಲ್ಲಿ ".......ಹುಳಿಯಱವೃತಿಯಂ ಸುಖದಿಂ ರಾಜ್ಯಂಗೆಯ್ಯುತ್ತಿರೆ........" ಎಂಬ ಮಾತೂ ಮೂವತ್ತಾರನೆಯ ಶಾಸನದಲ್ಲಿ (ಕ್ರಿ. ಶ. 1177) "ಸ್ವಸ್ತಿಶ್ರೀಮನ್ಮಹಾ ಪ್ರಧಾನ ಸರ್ವಾಧಿಕಾರಿ ಸೇನಾಧಿಪತಿ ಮಹಾಪಸಾಯಿತ ಮಾಧವ ದಣ್ಣನಾಯಕನ ಸುಂಕದಧಿಕಾರಿಗಳಪ್ಪ ಹೆಗ್ಗಡೆ ನಾರಸಿಂಗ ಣನು ಹೆಗ್ಗಡೆ ಮಂಚಯ್ಯನುಂ ಸಕವರ್ಷ ೧೦೯೯ನೆಯ ಹೇವಿಳಂಬಿ ಸಂವತ್ಸರದ ಆಶ್ವ ಯುಜ ಶುದ್ಧ ಬಿದಿಗೆ ಸೋಮವಾರ ಸಂಕ್ರಮಣದಂದು **ಹುಳಿಎಱ ಬ್ರಹ್ಮಪುರಿಯ** ಮಹಾಜನಂಗಳಿಗೆ ಬಿಟ್ಟಧರ್ಮವೆಂತೆಂದೊಡೆ..........." ಎಂಬ ಮಾತುಗಳಿಂದ ಹುಳಿಯೂರು ಎಂಟು ಶತಮಾನಗಳಷ್ಟು ಸುದೀರ್ಘವಾದ ಇತಿಹಾಸವನ್ನು ಹೊಂದಿದೆ

ಎಂಬ ವಿಷಯ ಸ್ಪಷ್ಟವಾಗುತ್ತದೆ. ಪುಳಿಯಱೆ> ಪುಳಿವಱ> ಹುಳಿಯಱ> ಹುಳಿಯಾರು–ಹೀಗೆ ಈ ಪದದ ಬದಲಾಣೆಯಾಗಿರಬೇಕು.

ಚಿಕ್ಕನಾಯಕನಹಳ್ಳಿಯ ಹನ್ನೆರಡನೆಯ ಶಾಸನದಲ್ಲಿ "....... ಹಂದರಕೆಱೆಯ ಮಲ್ಲಿಕಾರ್ಜುನ ದೇವರಿಗೆ ಕೊಟ್ಟ ಮಯನ ಕೇತಣ ತನ್ನ ಕಡವದ ಕೆಱೆಯ ಕೊಡಂಗಿ ಏರಿಯ ಒಳಿವಿಡಿದು ೨ ಖಂಡುಗ ಗದ್ದೆ ದೇವರಿಗೆ ಬಿಟ್ಟ.... ..." ಎಂಬ ಮಾತು ಬರುತ್ತದೆ. ಈ ಹಂದರ ಕೆಱೆಯೇ ಇಂದು ಹಂದನಕೆರೆ ಹಂದಲಕೆರೆ ಎಂಬ ರೂಪಗಳಲ್ಲಿ ಬಳಕೆಯಲ್ಲಿದೆ. ಹಂದಲನಾಯಕ ಎಂಬ ಪಾಳೇಗಾರನ ಹೆಸರಿನ ಊರು ಇದು. ಈ ಊರಿಗೆ ನಾಲ್ಕು ಶತಮಾನಗಳ ಇತಿಹಾಸವಿದೆ. ಕಂದಿಕೆರೆ ಎಂಬ ಹೆಸರು ಕಂದಕ+ಕೆರೆ ಎಂಬುದರಿಂದ ರೂಪುಗೊಂಡಿರಬೇಕು. ಇಲ್ಲಿಯೂ ಒಂದು ಕೋಟೆ, ಅದರ ಪಕ್ಕದಲ್ಲಿ ಕಂದಕ ಮತ್ತು ಅದರ ಪಕ್ಕದಲ್ಲಿ ಕೆರೆ ಇದೆ. ಕಂದಕ ಮತ್ತು ಕೆರೆ ಪಕ್ಕಪಕ್ಕದಲ್ಲಿರುವುದರಿಂದ ಕಂದಕೆರೆ ಎಂಬ ಹೆಸರು ಬಂದಿರಬಹುದು. ಚಿಕ್ಕನಾಯಕನ ಹಳ್ಳಿಯ ನಲವತ್ತನಾಲ್ಕನೆಯ ಶಾಸನದಲ್ಲಿ "ಕಂದಿಕೆಱೆ ಸೀಮೆ" ಎಂಬ ಮಾತು ಬರುತ್ತದೆ. ಈ ಊರಿಗೆ ಕನಿಷ್ಟಪಕ್ಷ ನಾಲ್ಕು ಶತಮಾನಗಳ ಇತಿಹಾಸವಿದೆ. ಮೂವತ್ತೆರಡನೆಯ ಶಾಸನದಲ್ಲಿ ಸೀಗೆಬಾಗಿ ಎಂಬ ಗ್ರಾಮಕ್ಕೆ "ಸೀಗೆಬಗಿ" ಎಂಬ ಹೆಸರು ಬಳಕೆಯಾಗಿದೆ.' ಮೂವತ್ತೊಂದನೆಯ ಶಾಸನದಲ್ಲಿ (ಮೋಟಿಹಳ್ಳಿ ಗ್ರಾಮ ದಲ್ಲಿ ದೊರೆತ ಶಾಸನ) ಮೋಟಗೌಡ ಎಂಬುವರ ಹೆಸರಿನ ಪ್ರಸ್ತಾಪವಿದೆ ಬಹುಶಃ ಅವರ ಹೆಸರಿನಿಂದ ಮೋಟಿಹಳ್ಳಿ ಎಂಬ ಸ್ಥಳನಾಮ ರೂಪಿತವಾಗಿರಬೇಕು.

ಹಾಗಲವಾಡಿಯ ಪಾಳೇಗಾರರು ತೀರ್ಥರಾಂಪುರ ಫಾರೆಸ್ಟ್‌ರೇಂಜಿನಲ್ಲಿ ಏರೇ ಕಟ್ಟೆಯ ಬಳಿ ಇರುವ ಒಜ್ಜರ (=ಚಿಲುಮೆಯ ನೀರು) ದಲ್ಲಿ ತೀರ್ಥರಾಮೇಶ್ವರನ ದೇವಸ್ಥಾನವನ್ನು ಕಟ್ಟಿದ್ದಾರೆ. ಈ ದೇವಸ್ಥಾನ ಎತ್ತರದಲ್ಲಿದ್ದು ಅದರ ಕೆಳಭಾಗದಲ್ಲಿ ಒಂದು ಹಳ್ಳಯಾವಾಗಲೂ ಹರಿಯುತ್ತದೆ. ಈ ಪ್ರದೇಶವನ್ನು ತೀರ್ಥರಾಮೇಶ್ವರನ ಒಜ್ಜರ ಎಂದು ಕರೆಯುತ್ತಾರೆ, ದೇವಸ್ಥಾನದ ಹಿಂಭಾಗಕ್ಕೆ ಗುಡ್ಡದ ಮೇಲೆ ಪಾಳೇ ಗಾರರು ಕಟ್ಟಿಸಿದ ಕೋಟೆಯಿಂದ ಸುತ್ತುವರಿದ ಒಂದು ಅರಮನೆಯೂ ಇದೆ. ಈ ಪ್ರದೇಶದ ಸುತ್ತ ದೊಡ್ಡರಾಮಪುರ, ಚಿಕ್ಕರಾಮಪುರ, ತೀರ್ಥಪುರ, ಈ ಗ್ರಾಮ ಗಳಿವೆ. ತೀರ್ಥರಾಮೇಶ್ವರನ ಕ್ಷೇತ್ರದ ಸುತ್ತ ಇರುವುದರಿಂದ ಈ ಗ್ರಾಮಗಳಿಗೆ ಈ ಹೆಸರುಗಳು ಬಂದಿವೆ. ತೀರ್ಥರಾಮೇಶ್ವರನ ಒಜ್ಜರದ ದೇವಸ್ಥಾನದಲ್ಲಿ ಒಂದು ಶಾಸನವೂ ಇದೆ.

ಸ್ಥಳಗಳ ಹೆಸರುಗಳು ಕಾಲ ಕಳೆದಂತೆ ಬದಲಾಗುತ್ತವೆ, ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಈ ಉದಾಹರಣೆಗಳನ್ನು ಗಮನಿಸಿ,

ಶೆಟ್ಟಿಹಳ್ಳಿ> ಜಯ ಚಾಮರಾಜಪುರ
ವಸ್ತ್ರರಹಳ್ಳಿ> ಸಿದ್ಧರಾಮನಗರ

ನುಚ್ಚುಕಲ್ಲುಪಾಳ್ಯ> ಸೋಮಲಾಪುರ
ಕಾರೇಹಳ್ಳಿ> ಗೋಡೇಕೆರೆ
ಕಂಗಸನಹಳ್ಳಿ> ಪಂಕಜನಹಳ್ಳಿ
ಚಟ್ಟಸಂದ್ರ> ಶೆಟ್ಟೀಸಮುದ್ರ
ಹಾದರಗಲ್ಲು> ಲಕ್ಷ್ಮೀಪುರ
ಹಂದಿಗನಡು> ಕುಶಾಲಪುರ
ಹಡಪದಕಟ್ಟೆ> ಗೋಪಾಲಪುರ ಇತ್ಯಾದಿ

ಸ್ಥಳಗಳ ಹೆಸರುಗಳು ಬದಲಾಗಲು ಹಲವಾರು ಕಾರಣಗಳಿರುತ್ತವೆ. ಹಾದರಗಲ್ಲು, ಹಂದಿಗನಡು, ಹಡಪದಕಟ್ಟೆ ಈ ಹೆಸರುಗಳು ಬದಲಾಗಲು ಆಯಾ ಸ್ಥಳಗಳಲ್ಲಿನ ಕೆಲವರು ವಿದ್ಯಾವಂತರು ಆ ಹೆಸರುಗಳ ಬಗ್ಗೆ ಸಂಕೋಚಪಟ್ಟುಕೊಂಡಿರುವುದು ಕಾರಣವಿರಬಹುದು. ಸಂಸ್ಕೃತೀಕರಣ (Sanskritisation)ದ ವ್ಯಾಮೋಹ ಇತರ ಹೆಸರುಗಳು ಬದಲಾಗಲು ಕಾರಣವಾಗಿರಬೇಕು. ಕನ್ನಡದ ಪದಗಳಿಗಿಂತ ಸಂಸ್ಕೃತದ ಪದಗಳನ್ನು ಬಳಸುವುದು ಹೆಚ್ಚು ಗೌರವವನ್ನು ತಂದು ಕೊಡುತ್ತದೆ, ಎಂಬ ಕೀಳರಿಮೆ (Inferiority Comlex) ಇದಕ್ಕೆ ಕಾರಣವಿರಬಹುದು. ಜಯಚಾಮರಾಜ ಒಡೆಯರ ಗೌರವಾರ್ಥ ಶೆಟ್ಟೀಹಳ್ಳಿ ಎಂಬ ಹೆಸರನ್ನು ಬದಲಾಯಿಸಿ ಜಯಚಾಮರಾಜಪುರ ಎಂಬ ಹೆಸರನ್ನು ಇಡಲಾಗಿದೆ. ಹೀಗೆ ಹೆಸರುಗಳನ್ನು ಬೇರೆ ಬೇರೆ ಕಾರಣಗಳಿಗಾಗಿ ಸರ್ಕಾರದ ದಾಖಲೆಗಳಲ್ಲಿ ಮಾಡಿದರೂ ಕೂಡ, ಹಳ್ಳಿಯ ಜನರ ಮನಸ್ಸಿನಿಂದ ಸುಲಭವಾಗಿ ಹಳೆಯ ಹೆಸರುಗಳು ಮರೆಯಾಗುವುದಿಲ್ಲ. ಅವರು ಹಳೆಯ ಹೆಸರುಗಳನ್ನೇ ಬಳಸುತ್ತಾರೆ. ಈ ದೃಷ್ಟಿಯಿಂದ ಸ್ಥಳನಾಮಗಳು ಜಾನಪದದಂತೆ ಕಂಠಸ್ಥ ಸಂಪ್ರದಾಯದ ಮೂಲಕ ತಲೆಮಾರಿನಿಂದ ತಲೆಮಾರಿಗೆ ವರ್ಗಾವಣೆ ಹೊಂದುತ್ತವೆ ಎಂದು ಹೇಳಬಹುದು. ಶೆಟ್ಟಿಕೆರೆ ಎಂಬ ಸ್ಥಳನಾಮ ಇದಕ್ಕೆ ಅತ್ಯುತ್ತಮ ಉದಾಹರಣೆ. 13ನೆಯ ಶತಮಾನದಲ್ಲಿ ಈ ಹಳ್ಳಿಯ ಹೆಸರು ಶೆಟ್ಟಿಯಕೆಱೆ ಎಂದಿದ್ದು ಅನಂತರ ಅದನ್ನು ಶ್ರೀ ಭರಿತ ಪ್ರಕಾಶಪುರಿ ಎಂದು ಬದಲಾಯಿಸಲಾಯಿತು. ಆದರೆ ಏಳು ಶತಮಾನಗಳು ಕಳೆದನಂತರವೂ ಶೆಟ್ಟೀಕೆರೆ ಎಂಬ ಹೆಸರು ಮಾತ್ರ ಉಳಿದು ಶ್ರೀ ಭರಿತ ಪ್ರಕಾಶಪುರಿ ಎಂಬ ಹೆಸರು ಕೈಬಿಟ್ಟು ಹೋಗಿರುವುದನ್ನು ಗಮನಿಸಿದರೆ Oral Tradition ಎಷ್ಟು ಶಕ್ತಿಯುತವಾದದ್ದು ಎಂಬ ವಿಷಯ ಸ್ಪಷ್ಟವಾಗುತ್ತದೆ. ಸ್ಥಳನಾಮಗಳು ಎರಡು ರೀತಿಗಳಲ್ಲಿ ರೂಪುಗೊಳ್ಳುತ್ತವೆ. (1) ಯಾರೋ ಒಬ್ಬ ವ್ಯಕ್ತಿ ಕೊಡುವ ಹೆಸರು, 2) ಜನರೆಲ್ಲಾ ಒಟ್ಟಾರೆ ಸಹಜವಾಗಿ ಕೊಡುವ ಹೆಸರು. ಉದಾಹರಣೆಗೆ ಸೋಮಲಾಪುರ ಎಂಬುದು ಯಾರೋ ಒಬ್ಬ ವ್ಯಕ್ತಿ ಕೊಟ್ಟ ಹೆಸರಿರಬೇಕು. ಅದೇ ಸ್ಥಳನಾಮದ ಮೂಲ ರೂಪವಾದ ನುಚ್ಚುಕಲ್ಲುಪಾಳ್ಯ ಎಂಬುದು ಅಲ್ಲಿನ ಜನರೆಲ್ಲ ಸೇರಿ ಕೊಟ್ಟ ಹೆಸರು. ಹೀಗೆ ರೂಪುಗೊಳ್ಳುವ ಹೆಸರು

ಗಳು ಪ್ರಾಕೃತಿಕ ಘಟಕಗಳ ಹೆಸರುಗಳಾಗಿರುತ್ತವೆ. ಸ್ಥಳನಾಮಗಳು ಜಾನಪದದ (Folklore) ಇನ್ನೊಂದು ಲಕ್ಷಣವನ್ನೂ ಹೊಂದಿವೆ. ಜಾನಪದವನ್ನು ಸೃಷ್ಟಿ ಮಾಡಿದ ವ್ಯಕ್ತಿಯ ಹೆಸರು ಹೇಗೆ ತಿಳಿದಿರುವುದಿಲ್ಲವೋ ಹಾಗೆಯೇ ಸ್ಥಳನಾಮ ಗಳನ್ನು ಸೃಷ್ಟಿಸಿದವರ ಹೆಸರು ತಿಳಿದಿರುವುದಿಲ್ಲ, ಬಹುಮಟ್ಟಿಗೆ ಇದು ಸಾಮೂಹಿಕ ಸೃಷ್ಟಿಯಾಗಿರುತ್ತದೆ. ಈ ದೃಷ್ಟಿಯಿಂದ ಹಾಗೂ ಕಂಠಸ್ಥ ಸಂಪ್ರದಾಯದ ಮಹತ್ವ ಪೂರ್ಣಪಾತ್ರದಿಂದ ಸ್ಥಳನಾಮಗಳಿಗೆ ಮತ್ತು ಜಾನಪದಕ್ಕೆ ಅನೇಕ ವಿಷಯಗಳಲ್ಲಿ ಸಾಮ್ಯವನ್ನು ಗುರುತಿಸಬಹುದು. ಸ್ಥಳನಾಮಗಳ ಅಧ್ಯಯನದಲ್ಲಿ ಮೊದಲಸ್ಥಾನ ಭಾಷಾವಿಜ್ಞಾನಕ್ಕೂ, ಎರಡನೆಯಸ್ಥಾನ ಜಾನಪದಕ್ಕೂ ಸಲ್ಲುತ್ತದೆ. ಸ್ಥಳನಾಮ ಗಳನ್ನು ಸೃಷ್ಟಿಸುವವರು ಜನಸಾಮಾನ್ಯರು. ವಿದ್ಯಾವಂತರಂತೆ ಅವರು ಸ್ಥಳಗಳಿಗೆ ಹೆಸರು ಕೊಡುವಾಗ ಹೆಚ್ಚು ಯೋಚಿಸಲು ಹೋಗುವುದಿಲ್ಲ. ಅವರು ವಾಸಮಾಡುವ ಜಾಗದಲ್ಲಿ ಕಾರೇಗಿಡ ಹೆಚ್ಚು ಬೆಳೆದರೆ ಅವರ ಊರಿಗೆ ಕಾರೇಪಳ್ಳಿ ಎಂದು ಹೆಸರು ಕೊಡುತ್ತಾರೆ, ತಾವು ವಾಸಮಾಡುವ ಹಳ್ಳಿಯ ಬಳಿ ಒಂದು ಕಟ್ಟೆ ಇದ್ದು, ಅದು ಎರೇ ಮಣ್ಣಿನ ಭೂಮಿಯಾಗಿದ್ದರೆ ಆ ಹಳ್ಳಿಗೆ ಎರೇಕಟ್ಟೆ ಎಂದು ಹೆಸರು ಕೊಡುತ್ತಾರೆ. ಹೀಗಾಗಿ ಇವರು ಹೆಸರು ಕೊಡುವ ವಿಧಾನ ತುಂಬ ಸರಳವಾದುದು. ಆದ್ದರಿಂದ ಸ್ಥಳ ನಾಮಗಳ ಅಧ್ಯಯನದಲ್ಲಿ ಆಯಾ ಸ್ಥಳಗಳ ಬಗ್ಗೆ ಅಲ್ಲಿನ ಜನ ಏನು ಐತಿಹ್ಯವನ್ನು (Legend) ಕಟ್ಟಿರುತ್ತಾರೆ ಎಂಬುದನ್ನು ಗಮನಿಸುವುದು ಅವಶ್ಯಕ ಎಂಬುದು ವಿದ್ವಾಂಸರ ಅಭಿಪ್ರಾಯ. ಸ್ಥಳಗಳಿಗೆ ಹೆಸರುಗಳು ಹೇಗೆ ಬಂದವು ಎಂಬುವರ ಬಗ್ಗೆ ಆಯಾ ಪ್ರದೇಶದ ಜನ ತಮಗೆ ತೋಚಿದ ನಿಷ್ಪತ್ತಿಗಳನ್ನು ಸೂಚಿಸುವುದುಂಟು. ಇಂತಹ ನಿಷ್ಪತ್ತಿಗಳನ್ನು ಜನಪದ ನಿಷ್ಪತ್ತಿಗಳು (Folk Etymologies) ಎಂದು ಕರೆಯುತ್ತಾರೆ. ಜಾನಪದದ ದೃಷ್ಟಿಯಿಂದ ಸ್ಥಳನಾಮಗಳನ್ನು ಅಭ್ಯಾಸ ಮಾಡುವಾಗ ಜನಪದ ನಿಷ್ಪತ್ತಿಗಳನ್ನು ಮತ್ತು ಐತಿಹ್ಯಗಳನ್ನು ಗಮನಿಸಬೇಕಾಗುತ್ತದೆ.

**ಜನಪದ ನಿಷ್ಪತ್ತಿಗಳು** :—1) **ಹುಳಿಯಾರು** : ಈ ಊರಿಗೆ ಈ ಹೆಸರು ಏಕೆ ಬಂದಿತು ಎಂಬುದರ ಜನಪದ ನಿಷ್ಪತ್ತಿ ಈ ರೀತಿ ಇದೆ. ಹುಳಿಯಾರಿನ ಕೆರೆಯಲ್ಲಿ ಒಂದು ಕಲ್ಲು ಇದೆ. ಇದನ್ನು ನಾಯಿಕಲ್ಲು ಎಂದು ಕರೆಯುತ್ತಾರೆ. ಈ ಕಲ್ಲಿನ ಬಳಿ ಒಂದು ಹುಲಿಗೆ ಒಂದು ನಾಯಿಗೆ ಹೋರಾಟವಾಗಿ ಹುಲಿಯನ್ನು ನಾಯಿಯೇ ಸೋಲಿಸಿತು. ಆಗ ಅಲ್ಲಿ ಸೇರಿದ್ದ ಜನಕ್ಕೆ ಹುಲಿಯಾರು ಎಂಬುವರ ಬಗ್ಗೆ ಅನುಮಾನ ಬಂದು ನಾಯಿಯೇ ಹುಲಿಗಿಂತ ಬಲವಾದುದೆಂದು ಅಭಿಪ್ರಾಯ ಪಟ್ಟರು. ಈ ಸಂದರ್ಭ ದಲ್ಲಿ ಹುಟ್ಟಿಕೊಂಡ ಪ್ರಶ್ನೆ ಹುಲಿಯಾರು ಎಂಬುದು ಕಾಲ ಕ್ರಮೇಣ ಹುಳಿಯಾರು ಎಂಬ ರೂಪವನ್ನು ಪಡೆದು ಕೊಂಡಿತು.

2. **ಕಂದಿಕೆರೆ :** ಈ ಸ್ಥಳಕ್ಕೆ ಸಂಬಂಧಿಸಿದಂತೆ ಎರಡು ಜನಪದ ನಿಷ್ಪತ್ತಿ ಗಳಿವೆ. ಈ ಸ್ಥಳದಲ್ಲಿ ಕೋಟೆ ಕಟ್ಟಲು ಪದಿ ತೆಗೆದಾಗ ಒಂದು ಮಗು (ಕಂದ)

ಸಿಕ್ಕಿತಂತೆ. ಹೀಗಾಗಿ ಇದಕ್ಕೆ ಕಂದಕೆರೆ ಎಂಬ ಹೆಸರು ಬಂದು ಕ್ರಮೇಣ ಅದು ಕಂದಿಕೆರೆ ಎಂಬ ರೂಪವನ್ನು ಪಡೆಯಿತು. ಒಂದು ಸಲ ಈ ಸ್ಥಳದಲ್ಲಿ ಹಸುಗಳು ಕಂದುಗಳನ್ನು (ಸತ್ತು ಹೋದ ಕರುಗಳನ್ನು) ಹಾಕಿದವು. ಈ ಕಾರಣದಿಂದ ಕಂದಕೆರೆ ಎಂಬ ಹೆಸರು ಬಂದು ಅದು ಕ್ರಮೇಣ ಕಂದಿಕೆರೆ ಎಂಬ ರೂಪವನ್ನು ಪಡೆಯಿತು.

3. **ಹೊನ್ನೇಬಾಗಿ :** ಈ ಪ್ರದೇಶದಲ್ಲಿ ಹೊನ್ನಿನ (ಚಿನ್ನದ) ನೀರು ಚಿಲುಮೆಯಲ್ಲಿ ಉಕ್ಕಿಬಂದು ಮೇಲೆ ಬಾಗಿತು. ಹೊನ್ನು ಈ ರೀತಿ ಬಾಗಿದ್ದರಿಂದ ಈ ಸ್ಥಳಕ್ಕೆ ಹೊನ್ನುಬಾಗಿ ಎಂದು ಹೆಸರು ಬಂದಿತು. ಕಾಲಕ್ರಮದಲ್ಲಿ ಹೊನ್ನೇಬಾಗಿ ಎಂಬ ಹೆಸರು ಬಂದಿತು.

ಚಿಕ್ಕನಾಯಕನಹಳ್ಳಿಯ ಅನೇಕ ಸ್ಥಳಗಳ ಬಗ್ಗೆ ಇಂತಹ ಜನಪದ ನಿಷ್ಪತ್ತಿಗಳು ದೊರಕುತ್ತವೆ. ಸ್ಥಳಾಭಾವದಿಂದ ಅವೆಲ್ಲವನ್ನೂ ಕೊಡಲಾಗದೆ ಇರುವುದರಿಂದ ಮೂರು ಉದಾಹರಣೆಗಳನ್ನು ಮಾತ್ರ ಕೊಟ್ಟಿದ್ದೇನೆ. ಈ ಜನಪದ ನಿಷ್ಪತ್ತಿಗಳು ಬಹು ಮಟ್ಟಿಗೆ ಕಾಲ್ಪನಿಕವಾಗಿರುತ್ತವೆ. ಕುತೂಹಲವೊಂದನ್ನು ಬಿಟ್ಟರೆ ಇವುಗಳಿಂದ ಹೆಚ್ಚು ಪ್ರಯೋಜನವಾಗುವುದಿಲ್ಲ.

**ಐತಿಹ್ಯಗಳು :** ಸ್ಥಳಗಳಿಗೆ ಹೆಸರುಗಳು ಬರಲು ಕಾರಣವೇನು ಎಂಬುದನ್ನು ಐತಿಹ್ಯಗಳು ತಿಳಿಸುತ್ತವೆ. ಚಿಕ್ಕನಾಯಕನಹಳ್ಳಿ ತಾಲ್ಲೂಕಿನಲ್ಲಿಯೂ ಇಂತಹ ಅನೇಕ ಐತಿಹ್ಯಗಳು ದೊರಕುತ್ತವೆ. 'ಮದಲಿಂಗನ ಕಣಿವೆ'ಯ ಐತಿಹ್ಯವನ್ನು ಡಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು ಈಗಾಗಲೇ ಜನಪ್ರಿಯಗೊಳಿಸಿರುವುದರಿಂದ ಅದನ್ನು ಬಿಟ್ಟು ಬೇರೆಯ ಎರಡು ಐತಿಹ್ಯಗಳನ್ನು ಇಲ್ಲಿ ಕೊಡಲಾಗಿದೆ. 1. **ಯಳನಾಡು** : ಈ ಪ್ರದೇಶವು ಮೊದಲು ಕಾಡಿನಿಂದ ಆವೃತವಾಗಿತ್ತು. ಕಾಡಿನ ದಾರಿಯಲ್ಲಿ ಹುಳಿ ಯಾರಿಗೆ ಮತ್ತು ಶ್ರೀರಾಂಪುರಕ್ಕೆ ಹೋಗುವುದು ಕಷ್ಟವಾಗಿತ್ತು, ಆ ಸಂದರ್ಭದಲ್ಲಿ ಬೇರೆಯ ಒಂದು ಊರಿನಿಂದ ಬೆಟ್ಟಲಿಂಗಪ್ಪ ಎಂಬುವನು ಭಟ್ಟರಹಳ್ಳಿಗೆ ಬಂದನು. (ಭಟ್ಟರ ಹಳ್ಳಿಯೆಳನಾಡಿನಿಂದ 1½ ಮೈಲಿ ದೂರದಲ್ಲಿದೆ) ಆ ಊರಿನ ಗಣ್ಯರ ಮನೆ ಯಲ್ಲಿ ದನಕಾಯುವ ಕೆಲಸದಲ್ಲಿದ್ದನು. ಒಂದು ದಿನ ಒಂದು ಹಸು ಹಾಲು ಕೊಡಲಿಲ್ಲ. ಹೀಗಾಗಿ ಆ ಹುಡುಗನಿಗೆ ಶಿಕ್ಷೆಯನ್ನು ಕೊಟ್ಟರು. ಕೊನೆಗೆ ವಿಚಾರಮಾಡಿ ನೋಡಿದಾಗ ಆ ಹಸು ಒಂದು ಹುತ್ತದ ಕೋವೆಗೆ ಹಾಲು ಕರೆಯುತ್ತಿದುದ್ದನ್ನು ನೋಡಿ ಆ ಗಣ್ಯ ವ್ಯಕ್ತಿ ಆ ಹುತ್ತಕ್ಕೆ ಪೂಜೆ ಮಾಡಿದರು. ಆ ಬಯಲಿನಲ್ಲಿ ಎಳ್ಳನ್ನು ಬಿತ್ತಿದಾಗ ಸಮೃದ್ಧ ವಾದ ಬೆಳೆಯಾಯಿತು. ಎಳ್ಳಿನ ರಾಶಿಯನ್ನು ಸರ್ಕಾರದವರು ಮುಟ್ಟುಗೋಲು ಹಾಕಿಕೊಳ್ಳಲು ಯತ್ನಿಸಿದರು. ಆದರೆ ಸರ್ಕಾರದವರು ಎಷ್ಟು ಚೀಲಗಳಲ್ಲಿ ಎಳ್ಳನ್ನು ತುಂಬಿದರೂ ರಾಶಿ ಬರಿದಾಗಲಿಲ್ಲ. ಆಗ ಅವರಿಗೆ ತಮ್ಮ ತಪ್ಪಿನ ಅರಿವಾಗಿ ಆ ಹುತ್ತದ ಸುತ್ತ ಗುಡಿಕಟ್ಟಲು ನೆರವಾದರು. ಹೀಗಾಗಿ ಈ ಊರಿಗೆ ಯಳನಾಡು (<ಎಳ್ಳು ನಾಡು) ಎಂಬ ಹೆಸರು ಬಂದಿತು. ಈ ಐತಿಹ್ಯದ ಪವಾಡದ ಅಂಶವನ್ನು ನಾವು ಒಪ್ಪ

ದಿದ್ದರೂ ಈ ಪ್ರದೇಶದಲ್ಲಿ ಸಮೃದ್ಧವಾಗಿ ಎಳ್ಳು ಬೆಳೆಯುತ್ತಿತ್ತು ಎಂಬ ಅಂಶ ತಿಳಿದು ಬರುವುದರಿಂದ ಈ ಪದದ ನಿಷ್ಪತ್ತಿಯನ್ನು ತಿಳಿಯುವುದರಲ್ಲಿ ಪ್ರಯೋಜನಕ್ಕೆ ಬರುತ್ತದೆ.

2. **ಗೋಡೆಕೆರೆ :** ಈ ಸ್ಥಳಕ್ಕೆ ಮೊದಲು ಕಾರೇಹಳ್ಳಿ ಎಂಬ ಹೆಸರಿತ್ತು. ವೀರಶೈವ ಶರಣರಲ್ಲಿ ಒಬ್ಬನಾದ ಸಿದ್ಧರಾಮನು ಸೊಲ್ಲಾಪುರ, ಯಳನಾಡು ಮೊದಲಾದ ಹಲವಾರು ಗದ್ದುಗೆಗಳನ್ನು ಸ್ಥಾಪಿಸಿದನು. ಅವನು ಬರುವಾಗ ದಾರಿಯಲ್ಲಿ ಒಬ್ಬನು ಇಟ್ಟಿಗೆ ಗೋಡೆಯನ್ನು ಕಟ್ಟುತ್ತಿದ್ದನಂತೆ. ಸಿದ್ಧರಾಮನು ಅವನಿಂದ ಒಂದು ತುಂಡುಗೋಡೆಯನ್ನು ಭಿಕ್ಷೆಯಾಗಿ ಪಡೆದು, ಅದರ ಮೇಲೆ ಕುಳಿತು ಆಕಾಶಮಾರ್ಗವಾಗಿ ಬಂದು ಕಾರೇಹಳ್ಳಿಯಲ್ಲಿ ಕೆರೆಯೊಳಕ್ಕೆ ಬಂದು ಇಳಿದನು. ಅನಂತರ ಅಲ್ಲಿ ಅವನ ಗದ್ದುಗೆಯನ್ನು ಸ್ಥಾಪಿಸಿದನು. ಈ ಪವಾಡವನ್ನು ಕಂಡ ಜನ ಈ ಊರಿನ ಹೆಸರನ್ನು ಗೋಡೆಕೆರೆ ಎಂದು ಬದಲಾವಣೆ ಮಾಡಿದರು. ಈ ಐತಿಹ್ಯದಲ್ಲಿ ಸಿದ್ಧರಾಮನ ಗದ್ದುಗೆ ಇಲ್ಲಿರುವ ವಿಷಯ ತಿಳಿಯುವುದಾದರೂ ಉಳಿದ ವಿಷಯಗಳು ಕಾಲ್ಪನಿಕ.

ಈ ಬಗೆಯ ಐತಿಹ್ಯಗಳನ್ನು ಸ್ಥಳನಾಮಗಳ ವಿವರಣೆಯಲ್ಲಿ ಎಚ್ಚರಿಕೆಯಿಂದ ಬಳಸಿಕೊಳ್ಳಬೇಕಾದುದು ಅಗತ್ಯ. ಕೆಲವು ಸಲ ಈ ಐತಿಹ್ಯಗಳು ಐತಿಹಾಸಿಕವಾದ ವಿಷಯಗಳನ್ನೂ ತಿಳಿಸುವುದುಂಟು.

ಈವರೆಗಿನ ಅಧ್ಯಯನದಿಂದ ಚಿಕ್ಕನಾಯಕನಹಳ್ಳಿಯ ಸ್ಥಳನಾಮಗಳ ಬಗ್ಗೆ ಸ್ಥೂಲವಾದ ಚಿತ್ರವನ್ನು ಮಾತ್ರ ಕೊಡಲು ಸಾಧ್ಯವಾಗಿದೆ.[7] ತಾಲ್ಲೂಕಿನ ಕೆಲವು ಪ್ರದೇಶಗಳನ್ನು ನಾನು ಸಂದರ್ಶಿಸಲು ಸಾಧ್ಯವಾಗಲಿಲ್ಲ. ಹೀಗಾಗಿ ಈ ಲೇಖನದಲ್ಲಿ ಕೆಲವು ಪರಿಮಿತಿಗಳಿವೆ. ಕರ್ನಾಟಕ ಸ್ಥಳನಾಮಗಳ ಸಮಗ್ರ ಅಧ್ಯಯನಕ್ಕೆ ತಾಲ್ಲೂಕಿನ ಮಟ್ಟದ ಅಧ್ಯಯನ ಅಗತ್ಯ. ಈ ದಿಕ್ಕಿನಲ್ಲಿ ಈ ತಾಲ್ಲೂಕಿನ ಸ್ಥಳನಾಮಗಳನ್ನು ಕುರಿತ ಆರಂಭದ ಈ ಲೇಖನ ಉಪಯುಕ್ತವಾಗಬಹುದೆಂದು ಭಾವಿಸಿದ್ದೇನೆ.[8]

---

7. ಈ ಸಂಪ್ರಬಂಧದ (Research paper) ರಚನೆಗೆ ಅಗತ್ಯವಾದ ವಿಷಯ ಸಾಮಗ್ರಿಯನ್ನು ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸುವಲ್ಲಿ ಶ್ರೀ ಎಂ. ವಿ. ನಾಗರಾಜರಾವ್ ಎಂ.ಎ.ಬಿಎಡ್. (ಅಧ್ಯಾಪಕರು, ಸರ್ಕಾರಿ ಕಿರಿಯ ಕಾಲೇಜು, ಚಿಕ್ಕನಾಯಕಹಳ್ಳಿ) ಅವರು ವಿಶೇಷವಾದ ನೆರವು ನೀಡಿದ್ದಾರೆ. ಅವರ ಈ ನೆರವನ್ನು ನಾನು ತುಂಬ ಕೃತಜ್ಞತೆಯಿಂದ ಸ್ಮರಿಸುತ್ತೇನೆ. ಅವರ ವಿದ್ಯಾರ್ಥಿಗಳಿಗೂ ನನ್ನ ವಂದನೆಗಳು,

8. ನನಗೆ ನೆರವು ನೀಡಿದವರು, ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ತಹಸೀಲದಾರರು, ಮೆಯಿಲ್ ಓವರ್ಸಿಯರ್ ಶ್ರೀ ರಾಮನಾಥ್, ಶಾನುಭೋಗ್ ಶ್ರೀ ಡಿ. ವೆಂಕಟಕೃಷ್ಣಯ್ಯ, ಹುಳಿಯಾರಿನ ವಾಸವೀ ಬಾಲಿಕಾ ಪ್ರೌಢಶಾಲೆಯ ಮುಖ್ಯೋಪಾಧ್ಯಾಯರಾದ ಶ್ರೀ. ಕೆ ವಿ. ಸತ್ಯನಾರಾಯಣ ಮತ್ತು ಅದೇ ಸಂಸ್ಥೆಯ ನೌಕರರಾದ ಶ್ರೀ ಹನುಮಂತಯ್ಯ, ಕಂಟ್ರಾಕ್ಟರ್ ಶ್ರೀ ಅನಂತರಾಮಯ್ಯ, ಕಂದಿಕೆರೆಯ ಶ್ಯಾನುಭೋಗ್ ಅನಂತರಾಮಯ್ಯ ಶ್ರೀ ಪಿಲ್ಲಪ್ಪನಾಯಕ ಮತ್ತು ಶ್ರೀ ನಾಗರಾಜ್, ಹಂದನಗರೆಯ ಶಾನುಭೋಗ್ ಶ್ರೀ ಸೀತಾರಾಮಯ್ಯ ಮತ್ತು ಅವರ ಮಕ್ಕಳು ಶ್ರಿ ಆನಂದ್ ಶೆಟ್ಟೀಕೆರೆಯ ಶ್ರೀ ಎಸ್. ಕೆ. ನಟರಾಜ ಇವರೆಲ್ಲರಿಗೂ ನನ್ನ ವಂದನೆಗಳು ಸಲ್ಲುತ್ತವೆ.

ಪ
ರಿ
ಸ
ರ

ಚಿಕ್ಕನಾಯಕನಹಳ್ಳಿ

# ರಂಗಭೂಮಿಗೆ ಕೊಡುಗೆ

ಎಂ. ವಿ. ನಾಗರಾಜರಾವ್,

''ರಂಗಭೂಮಿ''— ಸಕಲ ಕಲೆಗಳ ಆರಾಧನೆಯ ಕ್ಷೇತ್ರ; ಸಾಹಿತ್ಯ, ಸಂಸ್ಕೃತಿ, ನಾಗರಿಕತೆಗಳ ಸಂಗಮ ಸ್ಥಳ., ನಾಡಿನ ಜನತೆಯ ವಿಶ್ವವಿದ್ಯಾನಿಲಯ, ಭಾರತೀಯರಿಗೆ ಅನಾದಿಕಾಲದಿಂದಲೂ ಪವಿತ್ರ ಸ್ಥಳ ಎನಿಸಿದೆ. ರಂಗಭೂಮಿಯ ಮೇಲೆ ಅಭಿನಯಿಸಲ್ಪಡುವ ನಾಟಕಗಳು ಸಾಹಿತ್ಯ, ಸಂಸ್ಕೃತಿ, ಕಲೆಗಳ ಹೊಂಗಳಸಗಳಿದ್ದಂತೆ. ಇವು ನಾಡು-ನುಡಿಗಳ ಬೆಳವಣಿಗೆಗೆ ಅದ್ಭುತ ಪ್ರಚೋದನೆ, ಉತ್ಸಾಹ ನೀಡುವಂಥವು. ವಿಭಿನ್ನ ಅಭಿರುಚಿಯುಳ್ಳ ಜನರಿಗೆ ಮನರಂಜನೆ, ಹರ್ಷ ಕೊಡುವಂಥವು. ನಾಟಕಗಳನ್ನು ಕಲಾದೇವತೆಗೆ, ಸಾಹಿತ್ಯದೇವತೆಗೆ ಅರ್ಪಿಸಬಹುದಾದ ಮುತ್ತಿನಾರತಿ ಎನ್ನುವುದುಂಟು. ಜನತೆಯ ಹಾಗು ನಾಡಿನ ಅಭಿವೃದ್ಧಿ ರಂಗಭೂಮಿಯ ಪುರೋಭಿವೃದ್ಧಿಯಿಂದ ಎನ್ನುವ ಮಾತೊಂದುಂಟು. ಈ ಎಲ್ಲ ಸಾಂಸ್ಕೃತಿಕ ಮಹತ್ವ ಪಡೆದ ರಂಗಭೂಮಿ ಒಂದು ನಾಡಿನ ಸರ್ವತೋಮುಖ ಬೆಳವಣಿಗೆಗೆ ಅತ್ಯಂತ ಸಹಾಯಕ ಎನ್ನುವ ವಿಷಯದಲ್ಲಿ ಎರಡುಮಾತಿಲ್ಲ.

ಈ ಶತಮಾನದ ಆದಿಯಿಂದ ಅಥವಾ ಅದಕ್ಕೆ ಸ್ವಲ್ಪ ಮುಂಚೆ ಕನ್ನಡ ರಂಗಭೂಮಿ ಮತ್ತು ನಾಟಕ ಸಾಹಿತ್ಯ ನಾಡು-ನುಡಿಗಳಿಗೆ ಆದರ್ಶವಾಗಿದ್ದು ಜನತೆಯ ಮೇಲೆ ಅದ್ಭುತ ಪ್ರಭಾವ ಬೀರಿತ್ತು. ಸಂಸ್ಕೃತ ಭಾಷೆಯ ಉತ್ತಮ ನಾಟಕಗಳು ಕನ್ನಡದಲ್ಲಿ ಅವತರಿಸಿ ರಂಗಭೂಮಿಯ ಮೇಲೆ ಅಭಿನಯಿಸಲ್ಪಟ್ಟವು. ಇದರ ಜೊತೆ ಜೊತೆಗೆ ಪೌರಾಣಿಕ ಕಥಾವಸ್ತುವನ್ನೊಳಗೊಂಡ ಸ್ವತಂತ್ರ ನಾಟಕಗಳೂ ಸಹ ರಂಗಭೂಮಿಯ ಮೇಲೆ ಪ್ರಕಾಶಿಸಿದವು. ಐತಿಹಾಸಿಕ, ಸಾಮಾಜಿಕ ಮತ್ತಿತರ ಕ್ಷೇತ್ರಗಳಿಂದಲೂ ವಸ್ತುಗಳನ್ನು ಆರಿಸಿಕೊಂಡು ಕನ್ನಡ ಜನಜೀವನಕ್ಕೆ ಸಂಬಂಧಿಸಿದಂತೆ ಹಲವಾರು ನಾಟಕಗಳು ಸೃಷ್ಟಿಯಾಗಿ ರಂಗಭೂಮಿಯ ಮೇಲೆ ಅಭಿನಯಿಸಲ್ಪಟ್ಟವು. ಹೊಸಬಗೆಯ ಏಕಾಂಕ ನಾಟಕಗಳು, ಗದ್ಯ-ಪದ್ಯ ನಾಟಕಗಳು ಜನಜೀವನದ ಬೇರೆ ಬೇರೆ ಕ್ಷೇತ್ರಗಳನ್ನು ಪ್ರತಿಬಿಂಬಿಸುವಂತೆ ತೀವ್ರಗತಿಯಿಂದ ಬೆಳೆದವು,

ಹೀಗೆ ನಾಟಕಸಾಹಿತ್ಯ ಬೇರೆ ಬೇರೆ ದೃಷ್ಟಿಯಿಂದ ವಿವಿಧ ರೂಪದಲ್ಲಿ ಮುಂದುವರಿದಂತೆ ರಂಗಭೂಮಿಯ ಹೊರಮೈ ಮತ್ತು ಒಳಮೈ ಪುಷ್ಟಿಗೊಂಡವು. ಚಪ್ಪರದ ಕೆಳಗೆ ಹರಳೆಣ್ಣೆ ಪಂಜುಗಳ ಬೆಳಕಲ್ಲಿ ನೋಡಬೇಕಾಗಿದ್ದ ಆಕರ್ಷಣೆಯಿಲ್ಲದ ರಂಗಭೂಮಿ ಕ್ರಮೇಣ ಆಶ್ಚರ್ಯ ಹುಟ್ಟಿಸುವ ರೀತಿಯಲ್ಲಿ ಬದಲಾವಣೆ ಮತ್ತು ಸುಧಾರಣೆ ಹೊಂದಿದವು. ಅತ್ಯಾಧುನಿಕ ರಂಗ ಪರಿಕರ, ವೈಜ್ಞಾನಿಕ ಸಲಕರಣೆಗಳು, ಕಣ್ಣುಕೋರೈಸುವ ವಿದ್ಯುದ್ದೀಪಾಲಂಕಾರ, ವಿಶೇಷ ಬಗೆಯ ಉಡುಗೆ-ತೊಡುಗೆ,

ಧ್ವನಿವರ್ಧಕ, ವಿಭಿನ್ನ ಬಗೆಯ ವಾದ್ಯ ಸಲಕರಣೆ, ಕಿವಿಗಿಂಪಾದ ಭಿನ್ನಧಾಟಿಯ ಸಂಗೀತದ ಅಳವಡಿಕೆ– ಇತ್ಯಾದಿ ಆಕರ್ಷಕ ಹೊಸರೀತಿಯ ಸುಸಜ್ಜಿತ ಕಲಾ ಪರಿಪೂರ್ಣ ರಂಗಮಂಟಪಗಳು ಅಸ್ತಿತ್ವಕ್ಕೆ ಬಂದವು. ಇದೆಲ್ಲಾ ರಂಗಭೂಮಿ ಬೆಳವಣಿಗೆಯ ದೃಷ್ಟಿಯಿಂದ ಕ್ರಾಂತಿಕಾರಿ ಎನ್ನಲಡ್ಡಿಯಿಲ್ಲ. ಈ ಆರೋಗ್ಯಕರ ಪ್ರವೃತ್ತಿ ಪ್ರೇಕ್ಷಕ ಸಮುದಾಯದಲ್ಲಿ ಹೊಸ ಉತ್ಸಾಹ, ಆಸಕ್ತಿಯುಂಟುಮಾಡಿತು.

ಕೇವಲ ಕಂದ, ವೃತ್ತ ಮತ್ತು ಯಕ್ಷಗಾನದ ಮಟ್ಟನ್ನು ಅಳವಡಿಸಿಕೊಂಡಿದ್ದ ರಂಗಭೂಮಿಯ ಸಂಗೀತದಲ್ಲಿ ಅದ್ಭುತ ಮಾರ್ಪಾಡುಗಳಾದವು. ಹೊರದೇಶದ ಸಂಗೀತ, ಸಂಸ್ಕೃತಿಯ ಲೇಪನವಾಗಿ ರಂಗಭೂಮಿಯ ಸಂಗೀತ ಪ್ರೇಕ್ಷಕರನ್ನು ಹುಚ್ಚೆಬ್ಬಿಸಿತು. ವಾದ್ಯ-ವಾದನ ನಿಪುಣರು, ಗಾಯನ ಪಟುಗಳು ರಂಗಭೂಮಿಯ ಉನ್ನತಾವಸ್ಥೆಗೆ ಕಾರಣರಾಗಿ ಎಲ್ಲರ ಮೆಚ್ಚಿಗೆ ಗಳಿಸಿದರು. ಕನ್ನಡ ರಂಗಭೂಮಿಯ ಈ ಬೆಳವಣಿಗೆ ನೆರೆ ರಾಜ್ಯಗಳಿಗೆ ಆಕರ್ಷಕವೆನಿಸಿ ಇದರ ಪ್ರಭಾವಕ್ಕೊಳಗಾಗಿ ತಮ್ಮ ತಮ್ಮ ರಂಗಭೂಮಿಯಲ್ಲಿ ಅನೇಕ ಪರಿವರ್ತನೆಗಳನ್ನು ಮಾಡಿಕೊಂಡುದು ಗಮನಾರ್ಹ ಸಂಗತಿ

ಚಲನ ಚಿತ್ರಗಳ ಆಗಮನ ರಂಗಭೂಮಿಯ ಉತ್ಸಾಹ ನಡಿಗೆಗೆ ಕುತ್ತಾಯಿತು. ಹೊಸ ಆಕರ್ಷಣೆಯ ಆವೇಶದಿಂದ ಜನತೆ ರಂಗಭೂಮಿಯತ್ತ ಮುಖ ತಿರುಗಿಸಲಾರಭಿಸಿದರು. ತೆರೆಯ ಮೇಲೆ ಕಾಣುವ ಮಿಂಚಿಗೆ, ಆಕರ್ಷಣೆಗೆ ಜನತೆ ಒಲವು ತೋರಿಸಿದರು. ರಂಗಭೂಮಿಯ ಬಗೆಗೆ ಜನತೆಯ ಅನಾದರಣೆಯಿಂದ ಬಂಡವಾಳ ಸಾಕಷ್ಟಿಲ್ಲದ ನಾಟಕ ಕಂಪನಿಗಳು ಎಚ್ಚೆತ್ತುಕೊಳ್ಳಲಾಗದೆ ಮುಚ್ಚಲ್ಪಟ್ಟವು. ರಂಗಭೂಮಿಯ ಸ್ಥಿತಿ-ಗತಿ ಶೋಚನೀಯವಾಯಿತು.

ಇಷ್ಟೆಲ್ಲಾ ಅಡೆತಡೆಗಳಿದ್ದರೂ ಸಹ ಕರ್ನಾಟಕ ರಂಗಭೂಮಿಯ ನಾಲ್ಕಾರು ಹಿರಿಯ ನಾಟಕ ಕಂಪನಿಗಳು ಕಷ್ಟಗಳನ್ನು ಎದುರಿಸಲು ಸಜ್ಜಾದವು. ಜನತೆಯ ಒಲವುಗಳಿಸಲು ರಂಗಭೂಮಿಯಲ್ಲಿ ಅನೇಕ ಬದಲಾವಣೆಗಳನ್ನು ತಂದವು. ಮುಖ್ಯವಾಗಿ ಸ್ತ್ರೀಪಾತ್ರಗಳನ್ನು ಸ್ತ್ರೀಯರೇ ನಿರ್ವಹಿಸಲು ತಕ್ಕ ಏರ್ಪಾಟು ಮಾಡಿಕೊಂಡವು ನಾಟಕ ಕಂಪನಿಗಳಿಗೆ ಶ್ರೇಷ್ಠ ನಟರು ಆಯ್ಕೆಗೊಂಡರು. ಸ್ವತಃ ಶ್ರೇಷ್ಠ ಕಲಾವಿದರಲ್ಲದೆ ಉತ್ತಮ ಗಾಯಕರಾದ ಅವರು ಜನತೆಯ ಮನಸ್ಸನ್ನು ಆಕರ್ಷಿಸಲು ಸಮರ್ಥರಾದರು. ಹೊಸ ಹೊಸ ಆಕರ್ಷಕ ಜನಪ್ರಿಯ ಕಥೆಗಳು ನಾಟಕಗಳು ರೂಪುಗೊಂಡವು. ವೇಷಭೂಷಣ, ರಂಗಸಜ್ಜಿಕೆ, ದೃಶ್ಯ ಬದಲಾವಣೆ ಇತ್ಯಾದಿ ಅನೇಕ ಬದಲಾವಣೆಗಳನ್ನು ಕಂಡುಕೊಂಡ ರಂಗಭೂಮಿ ತನ್ನೆದುರಿನ ಎಲ್ಲ ಸಮಸ್ಯೆಗಳನ್ನು ಎದುರಿಸಲು ಸನ್ನದ್ಧವಾದವು.

ಈ ಎಲ್ಲ ಅಂಶಗಳ ಜೊತೆಗೆ ರಂಗಭೂಮಿಯ ನಟರ ಸೇವೆಯನ್ನು ಮರೆಯುವಂತಿಲ್ಲ. ತಮಗೆ ದೊರೆಯುತ್ತಿದ್ದ ಕಡಿಮೆ ಸಂಬಳದಲ್ಲಿ, ತಮ್ಮ ಅಭಿನಯ ಕೌಶಲ್ಯದಿಂದ ಜಗತ್ತಿನ ಮಹಾನ್ ನಟರ ಸಾಲಿಗೆ ಸೇರುವಂಥ ಕಲಾ ಪ್ರೌಢಿಮೆ ಪ್ರದರ್ಶಿಸಿದ್ದು

ರಂಗಭೂಮಿಯು ಅಳಿವು–ಉಳಿವುಗಳಿಗೆ ಸೆಣಸಾಡುತ್ತಿದ್ದ ಕಂಪನಿಗಳ ಪಾಲಿಗೆ ವರವಾಯಿತು. ಸಾವಿರಾರು ಪ್ರೇಕ್ಷಕರ ಮುಂದೆ ನಾಟಕದ ಅಂತರಂಗವನ್ನು ಅರಿತು ಕೌಶಲ್ಯದಿಂದ ಅಭಿನಯ ನೀಡುತ್ತಿದ್ದ ನಟರನ್ನು ಜನತೆ ಹೃತ್ಪೂರ್ವಕವಾಗಿ ಸ್ವಾಗತಿಸತು. ಅಭಿನಯ ಕೌಶಲ್ಯ, ಶ್ರೇಷ್ಠ ಪ್ರತಿಭೆ, ಮನಸ್ಥೈರ್ಯ, ಇಂಪಾದ ಧ್ವನಿ– ಇವೆಲ್ಲಾ ಏಕೀಭವಿಸಿದ ನಟರನ್ನು ರಂಗಮಂಟಪದ ಮೇಲೆ ಕಂಡ ಪ್ರೇಕ್ಷಕರು ಮೂಕವಿಸ್ಮಿತರಾಗುತ್ತಿದ್ದರು.

ಕರ್ನಾಟಕ ರಂಗಭೂಮಿಯ ಇತಿಹಾಸದಲ್ಲಿ ತುಮಕೂರು ಜಿಲ್ಲೆಯ ಕೊಡುಗೆ ಅಪಾರ. ಪ್ರಸಿದ್ಧ ನಾಟಕ ಕಂಪನಿಗಳು, ಪ್ರಸಿದ್ಧ ರಂಗ ಕಲಾವಿದರು ತುಮಕೂರು ಜಿಲ್ಲೆಯವರಾಗಿದ್ದು ಕರ್ನಾಟಕ ಮತ್ತು ಹೊರಪ್ರಾಂತ್ಯಗಳಲ್ಲಿ ತಮ್ಮ ಪ್ರತಿಭೆಯನ್ನು ಮೆರೆಸಿ, ಕಲಾಪ್ರೌಢಿಮೆಯನ್ನು ಬೆಳಗಿಸಿದ್ದಾರೆ.

ತುಮಕೂರು ಜಿಲ್ಲೆಯ ಗುಬ್ಬಿ ಮತ್ತು ಚಿಕ್ಕನಾಯಕನಹಳ್ಳಿ, ನಾಟಕ ಕ್ಷೇತ್ರಕ್ಕೆ ನೀಡಿರುವ ಅಪೂರ್ವ ಕೊಡುಗೆ ಸುವರ್ಣಾಕ್ಷರಗಳಲ್ಲಿ ಬರೆದಿಡುವಂತಹುದು. "ಶ್ರೀ ಚನ್ನಬಸವೇಶ್ವರ ನಾಟಕ ಸಭಾ, ಗುಬ್ಬಿ" ಮತ್ತು "ಶ್ರೀ ಚಂದ್ರಮೌಳೀಶ್ವರ ನಾಟಕ ಸಭಾ, ಚಿಕ್ಕನಾಯಕನಹಳ್ಳಿ" ಈ ಎರಡು ನಾಟಕ ಕಂಪನಿಗಳು ಜಿಲ್ಲೆಯ ಎರಡು ಕಣ್ಣುಗಳಿದ್ದಂತೆ. ಇಂದಿಗೂ ಗುಬ್ಬಿ ಕಂಪನಿ ತನ್ನ ಅಮೋಘ ಕಲಾ ಸೇವೆಯನ್ನು ಸಲ್ಲಿಸುತ್ತಿದ್ದು ಎಲ್ಲೆಡೆ ಜನಪ್ರಿಯತೆ ಪಡೆದಿದೆ.

ಈ ಎರಡೂ ನಾಟಕ ಕಂಪನಿಗಳ ನಂಟು ಬಹಳ ಹತ್ತಿರದ್ದು. ಗುಬ್ಬಿ ನಾಟಕ ಕಂಪನಿಯ ಮಾಲೀಕರಾದ ದಿ॥ ಶ್ರೀ ಜಿ. ಎಚ್. ವೀರಣ್ಣನವರ ಮತ್ತು ದಿ॥ ಸಿ. ಬಿ. ಮಲ್ಲಪ್ಪನವರು ಬಹಳ ಕಾಲ ಜೊತೆಯಲ್ಲಿದ್ದು ನಾಟಕ ಕ್ಷೇತ್ರದ ಸಿಹಿ–ಕಹಿಯನ್ನು ಕಂಡುಂಡವರು. ಸ್ವಲ್ಪಕಾಲ ಜೊತೆಯಲ್ಲಿಯೇ ಪಾಲುದಾರರಾಗಿದ್ದು ನಾಟಕ ಸಂಸ್ಥೆ ನಡೆಸಿದವರು.

ಗುಬ್ಬಿ ವೀರಣ್ಣನವರು ಮತ್ತು ಸಿ. ಬಿ. ಮಲ್ಲಪ್ಪನವರು ಸ್ವತಃ ಶ್ರೇಷ್ಠ ನಟರಾಗಿದ್ದು ತಮ್ಮ ಅದ್ಭುತ ನಟನಾ ಕೌಶಲ್ಯದಿಂದ ಜನಕೋಟಿಯ ಮನಸ್ಸು ಸೂರೆಗೊಂಡು ಕಲಾ ದೇವತೆಯ ಆರಾಧನೆ ಮಾಡಿದವರು. ಇಂಥ ಮಹಾನ್ ನಟರನ್ನು ಪಡೆದ ತುಮಕೂರು ಜಿಲ್ಲೆ ಧನ್ಯ.

**ಸಿ. ಬಿ. ಮಲ್ಲಪ್ಪ**

ಪ್ರಸ್ತುತ ಈ ಲೇಖನದಲ್ಲಿ ಚಿಕ್ಕನಾಯಕನಹಳ್ಳಿ ತಾಲ್ಲೂಕಿಗೆ ಸಂಬಂಧಿಸಿದಂತೆ ಕೆಲವು ಅಂಶಗಳತ್ತ ಗಮನ ನೀಡಿರುವೆ.

ಚಿಕ್ಕನಾಯಕನಹಳ್ಳಿ ತಾಲ್ಲೂಕು ಸಂಗೀತ, ನಾಟಕ, ಕಲೆ, ವಿದ್ವತ್ತಿಗೆ ಪ್ರಸಿದ್ಧಿ ಹೊಂದಿದೆ. ಅಭಿನವ ಭಕ್ತಶಿರೋಮಣಿ, ಸಿ. ಬಿ. ಮಲ್ಲಪ್ಪ ಮತ್ತು ಅಭಿನಯ ಕಲಾ

ದರ್ಶಿ ಬಿ. ಕೆ. ಈಶ್ವರಪ್ಪ ಇದೇ ತಾಲ್ಲೂಕಿಗೆ ಸೇರಿದವರು. ಇವರುಗಳಲ್ಲದೆ ಅನೇಕ ಹಿರಿಯ ಮತ್ತು ಕಿರಿಯ ಕಲಾವಿದರು ಕನ್ನಡನಾಡು, ನುಡಿಗೆ, ನಾಟಕರಂಗಕ್ಕೆ ಸೇವೆ ಸಲ್ಲಿಸುತ್ತಿದ್ದಾರೆ.

ಸಿ. ಬಿ. ಮಲ್ಲಪ್ಪನವರ ತಂದೆ ಸಿದ್ದಪ್ಪನವರ. ತಾಯಿ ಗಂಗಮ್ಮನವರು. ದೇವಾಂಗ ಮತಸ್ಥರಾದ ಇವರು ತಮ್ಮ ಕುಲಕಸುಬಾದ ನೇಯ್ಗೆ ಮಾಡಿ ಜೀವನ ನಿರ್ವಹಿಸುತ್ತಿದ್ದರು. ಸಿದ್ದಪ್ಪನವರು ಸ್ವತಃ ನಟರು. ಅಂತೆಯೇ ಸುತ್ತಮುತ್ತಲಿನ ಹಳ್ಳಿಗಳಲ್ಲಿ ಬಯಲಾಟಗಳನ್ನು ಕಲಿಸಿ ಆಡಿಸುತ್ತಿದ್ದರು. ಜನ ಅವರನ್ನು ಭಾಗವತ ಸಿದ್ದಪ್ಪ ಎಂದೇ ಕರೆಯುತ್ತಿದ್ದರು.

ಇಂಥ ಪ್ರಸಿದ್ಧ ಭಾಗವತ ಮನೆತನದಲ್ಲಿ ಸಿ. ಬಿ. ಮಲ್ಲಪ್ಪನವರು ವ್ಯಯನಾಮ ಸಂವತ್ಸರದ ಮಾಘ ಬಹುಳ ಗುರುವಾರದಂದು ಜನಿಸಿದರು. ಮುಂದೆ ಈ ಶಿಶುವೇ ಕನ್ನಡ ರಂಗಭೂಮಿಯ ನಟಶ್ರೇಷ್ಠರೆಂದು ಜನಪ್ರಿಯತೆ ಹೊಂದಿ "ಅಭಿನವ ಭಕ್ತ ಶಿರೋಮಣಿ" ಎಂದು ಹೆಸರು ಗಳಿಸಿತು.

ಬಾಲ್ಯದ ದಿನಗಳಲ್ಲಿ ಸಿ. ಬಿ. ಮಲ್ಲಪ್ಪನವರಿಗೆ ಬಯಲಾಟ ನೋಡುವುದು ಮತ್ತು ಕಲಿಯುವುದರಲ್ಲಿ ಅಪಾರ ಆಸಕ್ತಿ. ಆದರೆ ತಂದೆ ಸಿದ್ದಪ್ಪನವರಿಗೆ ಇದು ಇಷ್ಟವಿಲ್ಲ. ಮಗ ಚೆನ್ನಾಗಿ ಓದಿ–ಬರೆದು ವಿದ್ಯಾವಂತನಾಗಬೇಕೆಂದೇ ಆಸೆ. ಇಲ್ಲವೇ ತಮ್ಮ ಕುಲ ಕಸುಬು ನೇಯ್ಗೆಯನ್ನು ಮುಂದುವರಿಸಿಕೊಂಡು ಹೋಗಲಿ ಎಂದು ಆಸೆ, 'ತಾವೊಂದು ಬಗೆದರೆ ದೈವ ಒಂದು ಬಗೆಯುವುದು' ಎಂಬ ಗಾದೆಯಂತೆ ಸಿ. ಬಿ. ಮಲ್ಲಪ್ಪನವರ ದಾರಿ ಬೇರೆಯಾಯಿತು. ಮಲ್ಲಪ್ಪ ಮಗ್ಗದ ಮೇಲೆ ಕುಳಿತುಕೊಳ್ಳಲಿಲ್ಲ. ನೇಯ್ಗೆ ಕೆಲಸದಲ್ಲಿ ಆಸಕ್ತಿ ತೋರಲಿಲ್ಲ; ಪುಸ್ತಕ ಹಿಡಿದು ಓದಲಿಲ್ಲ. ಕಲಾದೇವತೆಯ ಕರೆಗೆ ಓಗೊಟ್ಟ ಬಾಲಕ ಸಿ. ಬಿ. ಮಲ್ಲಪ್ಪ ಯಾರಿಗೂ ಹೇಳದೆ–ಕೇಳದೆ ಮನೆಬಿಟ್ಟು ಓಡಿದ.

ಯಾವುದೋ ಒಂದು ಹಳ್ಳಿಯಲ್ಲಿ ಬೀಡುಬಿಟ್ಟಿದ್ದ ನಾಟಕ ಕಂಪನಿಯಲ್ಲಿ ಸೇರಿ ಮಾಲೀಕರನ್ನು ಒಲಿಸಿ ಉದ್ಯೋಗ ಮಾಡಿದ. ಅನಂತರ ಕಂಪನಿಯಿಂದ ಕಂಪನಿಗೆ ಅಲೆದಾಟ ಆರಂಭವಾಯಿತು. ಗೇಟು ಕಾಯುವುದು, ಪರದೆ ಎಳೆಯುವುದು, ಕಸಗುಡಿಸುವುದು. ತರಕಾರಿ ತರುವುದು, ಊಟ ಬಡಿಸುವುದು ಇತ್ಯಾದಿ ಕಂಪನಿ ಮಾಲೀಕರು ಹೇಳಿದ ಕೆಲಸವನ್ನು ಶ್ರದ್ಧೆಯಿಂದ ಮಾಡಿದ.

ಕ್ರಮೇಣ ಬಾಲಕ ಸಿ. ಬಿ. ಮಲ್ಲಪ್ಪನಿಗೆ ಚಿಕ್ಕ–ಪುಟ್ಟ ಪಾತ್ರಗಳು ದೊರಕಿದವು. ದೃಢಕಾಯನಾಗಿ ಬೆಳೆದಿದ್ದ ಮಲ್ಲಪ್ಪನಿಗೆ ದೇವರು ದಯಪಾಲಿಸಿದ ಸುಂದರ ಶರೀರ ಮತ್ತು ಅದ್ಭುತ ಕಂಠಶ್ರೀ ಇದ್ದಿತು. ಸುಶ್ರಾವ್ಯವಾಗಿ ದೇವರನಾಮ, ಭಜನೆಗಳನ್ನು ಹೇಳುತ್ತಿದ್ದ ಮಲ್ಲಪ್ಪನಿಗೆ ಪ್ರಾರಂಭದಲ್ಲಿ ಸ್ತ್ರೀ ಪಾತ್ರಗಳು ದೊರೆತವು.

ತಂದೆ ತಾಯಿಗಳು ಮಗನನ್ನು ಕಾಣಲು ತವಕಿಸಿದರು. ಬಲವಂತದಿಂದ ಅವನನ್ನು ಮನೆಗೆ ಕರೆತಂದು ತುರುವೇಕೆರೆ ತಾಲ್ಲೂಕು ಮಾವಿನಕೆರೆಯ ವಧು ದೊಡ್ಡಮ್ಮನವರ

ಜೊತೆ ವಿವಾಹ ಮಾಡಿದರು. ಇಷ್ಟಾದರು ಮಲ್ಲಪ್ಪನಿಗೆ ನಾಟಕದ ಮೇಲಿನ ಮೋಹ ಕಡಿಮೆಯಾಗಲಿಲ್ಲ. ವಿವಾಹ ಬಂಧನಕ್ಕೆ ಸಿಲುಕಿಯೂ ಮಲ್ಲಪ್ಪ ಮತ್ತೊಮ್ಮೆ ನಾಟಕ ದತ್ತ ಓಡಿದ. ಆ ಕಾಲದಲ್ಲಿ ಉತ್ತಮ ನಾಟಕ ಸಂಸ್ಥೆ ಎನಿಸಿದ್ದ ಸಾರಂಗಿ ನಾಟಕ ಕಂಪನಿ ಸೇರಿ ಉತ್ತಮ ನಟನೆಂದು ಹೆಸರು ಗಳಿಸಿದ.

ದೈವದತ್ತವಾದ ಪ್ರತಿಭೆ, ಅಭಿನಯ ಕೌಶಲ್ಯ, ಆಕರ್ಷಕ ಶರೀರ ಹಾಗು ಕಂಠಶ್ರೀ ಪಡೆದಿದ್ದ ಸಿ. ಬಿ. ಮಲ್ಲಪ್ಪ ಬಹುಬೇಗ ತನ್ನ ಸ್ಥಾನವನ್ನು ನಾಟಕಗಳಲ್ಲಿ ಗಟ್ಟಿ ಮಾಡಿ ಕೊಂಡ. ಸ್ತ್ರೀ ಪಾತ್ರಗಳನ್ನು ಹೆಂಗಸರೂ ನಾಚುವಂತೆ ಮಾಡುತ್ತಿದ್ದ. ವಿದ್ವಾಂಸರು ತಲೆದೂಗುವಂತೆ ಹಾಡುತ್ತಿದ್ದ. ಸಹಜ ಅಭಿನಯ, ಕಂಠ ಮಾರ್ದವತೆ ಬಹುಬೇಗ ಮಲ್ಲಪ್ಪನನ್ನು ಉತ್ತಮ ನಟನ ಸಾಲಿಗೆ ಸೇರಿಸಿತು.

ಸಿ. ಬಿ. ಮಲ್ಲಪ್ಪನವರು ಬಾಳಿ ಬದುಕಿದ ಕಾಲ ಕನ್ನಡ ವೃತ್ತಿನಾಟಕ ರಂಗದ ಸುವರ್ಣಯುಗ ಎನ್ನಬಹುದು. ಕನ್ನಡ ನಾಟಕಗಳು ಎಲ್ಲರ ಮೆಚ್ಚುಗೆ ಪಡೆದು ಎಲ್ಲೆಡೆ ಜನಪ್ರಿಯವಾಯಿತು.

ಕೆಲವು ಕಾಲ ಕಲ್ಲೂರು ನಾಟಕ ಕಂಪನಿಯಲ್ಲಿ ಪಾತ್ರವಹಿಸುತ್ತಿದ್ದರು. 1884ರಲ್ಲಿ ಆರಂಭವಾದ ಗುಬ್ಬಿ "ಶ್ರೀ ಚನ್ನಬಸವೇಶ್ವರ ಕೃಪಾಪೋಷಿತ ನಾಟಕ ಸಂಘ" ಆ ಕಾಲ ದಲ್ಲಿ ಕನ್ನಡನಾಡಿನ ಅದ್ದೂರಿ ನಾಟಕ ಸಂಸ್ಥೆ ಎಂದು ಹೆಸರು ಗಳಿಸಿತ್ತು. ಆ ಸಂಸ್ಥೆಯ ಮಾಲೀಕರು ಚಂದಣ್ಣನವರು. ನಾಟಕರತ್ನ ಗುಬ್ಬಿ ವೀರಣ್ಣನವರೂ ಕೂಡ ಆ ಕಂಪನಿ ಯಲ್ಲಿ ನಟರಾಗಿದ್ದರು. ಚಂದಣ್ಣನವರು 1922ರಲ್ಲಿ ಸಿ. ಬಿ. ಮಲ್ಲಪ್ಪನವರನ್ನು ತಮ್ಮ ನಾಟಕ ಕಂಪನಿಯಲ್ಲಿ ಪಾತ್ರವಹಿಸಲು ಆತ್ಮೀಯ ಆಮಂತ್ರಣ ನೀಡಿದರು. ಆ ಕಾಲದಲ್ಲಿ ನಾಯಕ ನಟನಿಗೆ ಮಾತ್ರ ದೊರೆಯುತ್ತಿದ್ದ ಮೂವತ್ತೈದು ರೂಪಾಯಿ ಸಂಬಳಕ್ಕೆ ಸಿ. ಬಿ. ಮಲ್ಲಪ್ಪನವರು ಗುಬ್ಬಿ ಕಂಪನಿಯ ಪ್ರಮುಖ ನಟರಾಗಿ ಸೇರಿದರು. ಅನಂತರ ಮಲ್ಲಪ್ಪನವರು ಪುರುಷ ಪಾತ್ರಗಳಲ್ಲಿ ಮೆರೆದರು.

ಗುಬ್ಬಿ ಕಂಪನಿಯ ಮಾಲೀಕರಾದ ಚಂದಣ್ಣನವರು ಆಕಸ್ಮಾತ್ ಮರಣ ಹೊಂದಿ ದರು. ಹೀಗಾಗಿ ಆ ಕಂಪನಿಯ ಪ್ರಮುಖ ನಟರಾಗಿದ್ದ ಜಿ. ಎಚ್. ವೀರಣ್ಣನವರು ಮತ್ತು ಸಿ. ಬಿ. ಮಲ್ಲಪ್ಪನವರು ಪಾಲುದಾರರಾಗಿ ನಾಟಕ ಸಂಸ್ಥೆಯನ್ನು ಕೆಲವು ಕಾಲ ನಡೆಸಿಕೊಂಡು ಹೋದರು. ನಾಟಕ ಕಂಪನಿ ಜನಪ್ರಿಯತೆ ಗಳಿಸಲು ಬೆಳ್ಳಾವೆ ನರಹರಿ ಶಾಸ್ತ್ರಿಗಳಿಂದ ಸಂಗೀತ ಮತ್ತು ಭಕ್ತಿರಸ ಪ್ರಧಾನ ನಾಟಕಗಳನ್ನು ಬರೆಸಿ ಅವರ ಮೇಲ್ವಿ ಚಾರಣೆಯಲ್ಲಿ ತರಬೇತಿ ಹೊಂದಿ ನಾಟಕಗಳನ್ನು ರಂಗಮಂಟಪದ ಮೇಲೆ ಅಭಿನಯಿಸು ತ್ತಿದ್ದರು. ಸಂಪೂರ್ಣ ರಾಮಾಯಣ, ಕೃಷ್ಣಲೀಲೆ, ಸುಭದ್ರಾಪರಿಣಯ, ಸಾಧು ತುಕಾರಾಂ, ಕವಿರತ್ನ ಕಾಳಿದಾಸ, ಪ್ರಭಾಮಣಿ ವಿಜಯ, ಭಕ್ತ ಪ್ರಹ್ಲಾದ, ಸತ್ಯ ಹರಿಶ್ಚಂದ್ರ, ಸದಾರಮೆ, ಗುಲೇಬಕಾವಲಿ, ರುಕ್ಮಿಣೀ ಸ್ವಯಂವರ, ಜಲಂಧರ ಇತ್ಯಾದಿ ನಾಟಕಗಳು ಎಲ್ಲೆಡೆ ಜಯಭೇರಿ ಹೊಡೆದವು. ಗುಬ್ಬಿ ಕಂಪನಿಯ ಹೆಸರು ಜನಪ್ರಿಯ

ವಾಯಿತು. ಆರ್ಥಿಕವಾಗಿ ಕಂಪನಿ ಬಲಿಷ್ಠವಾಯಿತು. ಸಿ. ಬಿ. ಮಲ್ಲಪ್ಪನವರು ಭಕ್ತಿರಸ ಪ್ರಧಾನ ಪಾತ್ರಗಳಲ್ಲದೆ ಹರಿಶ್ಚಂದ್ರ, ಕನಕಸುಂದರ, ಕಾಳಿದಾಸ ಮುಂತಾದ ವಿಭಿನ್ನ ರೀತಿಯ ಪಾತ್ರಗಳಲ್ಲಿ ಪ್ರೇಕ್ಷಕರನ್ನು ರಂಜಿಸಿದರು.

ಸಿ. ಬಿ. ಮಲ್ಲಪ್ಪನವರು 'ಮಹಾತ್ಮ ಕಬೀರ್' ನಾಟಕದಲ್ಲಿ 'ಕಬೀರ್' ಪಾತ್ರವನ್ನು ಅಮೋಘವಾಗಿ ಅಭಿನಯಿಸುತ್ತಿದ್ದರು ಅಲ್ಲದೆ ಸುಶ್ರಾವ್ಯವಾಗಿ ಹಾಡುತ್ತಿದ್ದರು. ಈ ಪಾತ್ರವನ್ನು ನೋಡಲು ಜನರು ಜಾತ್ರೆಯಂತೆ ನೆರೆಯುತ್ತಿದ್ದರು. ಬೆಂಗಳೂರಿನಲ್ಲಿ ಈ ನಾಟಕ ಇನ್ನೂರಕ್ಕಿಂತಲೂ ಹೆಚ್ಚು ಪ್ರದರ್ಶನವನ್ನು ಕಂಡಿತು. ಶ್ರೀಯುತರ ಪ್ರೌಢ ಅಭಿನಯವನ್ನು ಕಾಣಲು ಆಗಿನ ಶ್ರೀ ಮನ್ಮಹಾರಾಜರಾಗಿದ್ದ ನಾಲ್ವಡಿ ಕೃಷ್ಣರಾಜ ಒಡೆಯರ್ ಬಹದ್ದೂರ್ ಆಶಿಸಿದರು. ಜಗನ್ಮೋಹನ ಅರಮನೆಯಲ್ಲಿ ನಾಟಕ ಪ್ರದರ್ಶಿತ ವಾಯಿತು. ಸಿ. ಬಿ. ಮಲ್ಲಪ್ಪನವರ ಅಮೋಘ ಅಭಿನಯ ಕಂಡು ಶ್ರೀ ಮನ್ಮಹಾ ರಾಜರು ಎದ್ದು ನಿಂತು ಮಲ್ಲಪ್ಪನವರ ಕೈಹಿಡಿದು "ಅಮೋಘವಾಗಿ ಅಭಿನಯಿಸಿದಿರಿ. ಕಬೀರನನ್ನು ಮತ್ತೆ ಜೀವಂತಗೊಳಿಸಿದಿರಿ. ಕಲಾದೇವತೆ ನಿಮಗೆ ಒಲಿದಿದ್ದಾಳೆ. ನೀವೊಬ್ಬ ಶ್ರೇಷ್ಠ ನಟರು" ಎಂದು ಪ್ರಶಂಸಿಸಿ ಉಡುಗೊರೆಗಳನ್ನಿತ್ತು ಗೌರವಿಸಿದರು.

ಸಿ. ಬಿ. ಮಲ್ಲಪ್ಪನವರು 1929ರಲ್ಲಿ ತಮ್ಮದೇ ಸ್ವಂತ ನಾಟಕ ಕಂಪನಿ "ಶ್ರೀ ಚಂದ್ರಮೌಳೀಶ್ವರ ನಾಟಕ ಸಭಾ"ವನ್ನು ಆರಂಭಿಸಿದರು. ನಾಟಕ ಸಂಸ್ಥೆಯ ರಂಗ ಸಲಕರಣೆಗಳಲ್ಲಿ ಅನೇಕ ಸುಧಾರಣೆಗಳನ್ನು ತಂದರು. ಗ್ಯಾಸ್‌ಲೈಟ್ ಬದಲು ಮದ್ರಾಸ್‌ ನಿಂದ ಡೈನಮೋ ತಂದರು. ಆಸನಗಳ ವ್ಯವಸ್ಥೆಯನ್ನು ಉತ್ತಮಗೊಳಿಸಿದರು. ಹೊಸ ಬಗೆಯ ಸೀನರಿಗಳು, ಬಣ್ಣ ಬಣ್ಣದ ಪರದೆಗಳು ಇತ್ಯಾದಿ ನೂತನ ರಂಗಸಲಕರಣೆಗಳಿಂದ ತಮ್ಮ ನಾಟಕ ಕಂಪನಿಯನ್ನು ಶ್ರೀಮಂತಗೊಳಿಸಿದರು. ಶ್ರೇಷ್ಠನಟರುಗಳನ್ನು ಕಂಪನಿಗೆ ಸೇರಿಸಿಕೊಂಡರು. ಉತ್ತಮ ಊಟ, ಉಪಚಾರ ಹಾಗು ಒಳ್ಳೆಯ ವೇತನ ಕೊಟ್ಟು ಕಂಪನಿಯ ಕೀರ್ತಿ, ಗೌರವಗಳಿಗೆ ಕಾರಣರಾದರು. ಶಿಸ್ತಿನ ಸಿಪಾಯಿಗಳಾಗಿದ್ದ ಮಲ್ಲಪ್ಪ ನವರು ನಟರ ಆಯ್ಕೆ, ಅಭ್ಯಾಸ, ರಂಗಸಜ್ಜಿಕೆ, ವೇಷಭೂಷಣ ಎಲ್ಲದರಲ್ಲಿ ಎಚ್ಚರ ವಹಿಸುತ್ತಿದ್ದರು. ಪ್ರತಿದಿನ ನಡೆಯುತ್ತಿದ್ದ ರಿಹರ್ಸಲ್‌ಗೆ ಎಲ್ಲ ನಟರೂ ಹಾಜರಾಗು ವಂತೆ ನೋಡಿಕೊಳ್ಳುತ್ತಿದ್ದರು. ಶಿಸ್ತು ಭಂಗವಾದಾಗ ತೀವ್ರಕ್ರಮ ಕೈಗೊಳ್ಳುತ್ತಿದ್ದು ನಾಟಕ ಕಂಪನಿಯ ಸರ್ವತೋಮುಖ ಅಭಿವೃದ್ಧಿಗೆ ಹಗಲಿರುಳೂ ದುಡಿಯುತ್ತಿದ್ದರು. ಕಂಪನಿಯ ನಾಟಕಗಳು ಎಲ್ಲೆಡೆ ಜನಪ್ರಿಯತೆ ಗಳಿಸಿತು. ಇದರಿಂದ ಉತ್ಸಾಹಗೊಂಡ ಅವರು ಗೋಸ್ವಾಮಿ ತುಲಸೀದಾಸ, ಭಕ್ತಗೋರಕುಂಬಾರ, ಸತ್ಯವಿಜಯ, ದಾಯಾದಿ ಮಾತ್ಸರ್ಯ ಇತ್ಯಾದಿ ಹೊಸ ನಾಟಕಗಳನ್ನು ಬರೆಸಿ ಆಡಿಸಿದರು. ಈ ಎಲ್ಲ ನಾಟಕ ಗಳನ್ನು ಪ್ರೇಕ್ಷಕರು ತುಂಬುಹೃದಯದಿಂದ ಸ್ವಾಗತಿಸಿದರು.

"ಶ್ರೀ ಚಂದ್ರಮೌಳಿ ನಾಟಕ ಸಭಾ" ಕಂಪನಿ ಕರ್ನಾಟಕಾದ್ಯಂತ ಜಯಭೇರಿ ಬಾರಿಸಿ ನೆರೆಯ ರಾಜ್ಯಗಳಾದ ಆಂಧ್ರ, ತಮಿಳುನಾಡುಗಳಲ್ಲೂ ಜಯದುಂದುಭಿ ಮೊಳ

ಗಿಸಿತು. ಎಲ್ಲೆಡೆ ಅಭೂತಪೂರ್ವ ಸ್ವಾಗತ ಸಿಕ್ಕಿತು; ಸಿ. ಬಿ. ಮಲ್ಲಪ್ಪನವರ ಭಾವ ಪೂರ್ಣ ಅಭಿನಯ ಕೌಶಲ್ಯವನ್ನು ಕಂಡು, ಶೋಕ, ಕರುಣ, ಭಕ್ತಿರಸಗಳನ್ನು ಅಭಿವ್ಯಕ್ತಿ ಗೊಳಿಸುವುದರಲ್ಲಿ ಅವರಿಗಿದ್ದ ಸಾಮರ್ಥ್ಯವನ್ನು ಕಂಡು ತಮಿಳುನಾಡಿನ ವೆಲ್ಲೂರಿನ ಕಲಾರಸಿಕರು ಅವರಿಗೆ "ಅಭಿನವ ಭಕ್ತ ಶಿರೋಮಣಿ" ಎಂಬ ಬಿರುದನ್ನಿತ್ತು, ಗೌರವಿ ಸಿದರು. ಸುವರ್ಣಪದಕವನ್ನು ತೊಡಿಸಿದರು. ಕೀರ್ತಿ ಶ್ರೀ ಮಲ್ಲಪ್ಪನವರನ್ನು ಅರಸಿ ಬಂದಿತು. ಮಹಾರಾಜರು, ಕಲಾ ಪ್ರೇಮಿಗಳು. ಅಭಿಮಾನಿಗಳು ಅವರಿಗೆ ಅನೇಕ ಬಿರುದು ಬಾವಲಿಗಳನ್ನು ನೀಡಿ ಗೌರವಿಸಿದರು.

ತಮ್ಮ ಅಭಿನಯದಿಂದ ಲಕ್ಷಾಂತರ ಜನರ ಮನ ಸೂರೆಗೊಂಡ ಸಿ. ಬಿ, ಮಲ್ಲಪ್ಪ ನವರು ಬಡವರಿಗೆ, ಸಂಘ-ಸಂಸ್ಥೆಗಳಿಗೆ ಅನೇಕ ಸಹಾಯಾರ್ಥ ಪ್ರದರ್ಶನಗಳನ್ನು ನೀಡಿದರು. ಕಲಾವಿದರು, ಮತ್ತು ನೌಕರರಿಗೆ ತಾವೇ ಮುಂದೆ ನಿಂತು ಮದುವೆ ಮಾಡಿ ಸಿದರು. ಅವರ ಕುಟುಂಬದವರಿಗೆ ಕಷ್ಟ ಬಂದಾಗಲೆಲ್ಲಾ ಸಹಾಯ ಮಾಡಿದರು. ಬಡ ವಿದ್ಯಾರ್ಥಿಗಳಿಗೆ ಫೀಜು, ಪುಸ್ತಕ, ಊಟ, ಬಟ್ಟೆಗಳಿಗೆ ಉದಾರವಾಗಿ ಹಣ ನೀಡಿದರು.

ಸಿ. ಬಿ. ಮಲ್ಲಪ್ಪನವರು ಭಕ್ತಿ, ಶೋಕ, ಕರುಣಾರಸಗಳ ಪಾತ್ರಗಳಿಗೆ ಪ್ರಖ್ಯಾತರಾದಂತೆಯೇ ದೈತ್ಯ ಪಾತ್ರಗಳು ಮತ್ತು ರಾಜಪಾರ್ಟುಗಳಿಗೂ ಹೆಸರಾಗಿ ದ್ದರು. ಶಿಶುಪಾಲ, ಜರಾಸಂಧ, ಸಾಂಬಾಜಿ ಇತ್ಯಾದಿ ಪಾತ್ರಗಳನ್ನು ಜೀವತುಂಬಿ ಅಭಿನಯಿಸುತ್ತಿದ್ದರು.

ಸಿ. ಬಿ. ಮಲ್ಲಪ್ಪನವರ ಅಭಿನಯ ಕಂಡು ಸಿನಿಮಾ ನಿರ್ದೇಶಕರು ಚಲನಚಿತ್ರ ಗಳಲ್ಲಿ ಪಾತ್ರವಹಿಸಲು ಆಹ್ವಾನ ನೀಡಿದರು. 'ಕಬೀರ್‌ದಾಸ್' ಮೂಕ ಚಿತ್ರದಲ್ಲಿ 'ಕಬೀರ್' ಆಗಿ ಮತ್ತು ಕರ್ನಾಟಕ ಫಿಲ್ಮ್‌ರವರ "ಹೇಮರೆಡ್ಡಿಮಲ್ಲಮ್ಮ" ಚಿತ್ರದಲ್ಲಿ ಹೇಮರೆಡ್ಡಿ ಪಾತ್ರವನ್ನು ವಹಿಸಿ ಕನ್ನಡ ಚಿತ್ರ ಪ್ರೇಮಿಗಳ ಮೆಚ್ಚುಗೆ ಗಳಿಸಿದರು.

"ಶ್ರೀ ಚಂದ್ರಮೌಳೇಶ್ವರ ನಾಟಕ ಸಭಾ" ಕನ್ನಡನಾಡಿನಲ್ಲಿ ಮತ್ತು ನೆರೆಯ ರಾಜ್ಯಗಳಲ್ಲಿ 1927 ರಿಂದ 1953 ರ ವರೆಗೆ ಕಾಲು ಶತಮಾನ ಅತ್ಯಂತ ವೈಭವದಿಂದ ಕಲಾ ಪ್ರಪಂಚಕ್ಕೆ ಅಪೂರ್ವ ಸೇವೆ ಸಲ್ಲಿಸಿ ಅನಿವಾರ್ಯ ಕಾರಣಗಳಿಂದ ಕಲಾಸೇವೆಗೆ ಮಂಗಳ ಹಾಡಿತು.

ಸಿ, ಬಿ. ಮಲ್ಲಪ್ಪನವರು 70ರ ಇಳಿವಯಸ್ಸಿನಲ್ಲೂ ಆಗಾಗ್ಗೆ ಕರೆ ಬಂದ ಬೇರೆ ಬೇರೆ ನಾಟಕಸಂಸ್ಥೆಗಳಿಗೆ ಹೋಗಿ ಪಾತ್ರ ವಹಿಸುತ್ತಿದ್ದರು. ವಯಸ್ಸು ಮತ್ತು ಅನು ಭವ ಅವರ ಅಭಿನಯ ಪಕ್ವತೆಗೆ ಮೆರಗು ನೀಡಿತ್ತು. 27-2-1959ರಲ್ಲಿ ಬೆಂಗಳೂರಿನ ಸರ್ ಪುಟ್ಟಣ್ಣಚೆಟ್ಟಿ ಪುರಭವನದಲ್ಲಿ ಸಿ. ಬಿ, ಮಲ್ಲಪ್ಪನವರ ಕಲಾಸೇವೆ, ಅಭಿನಯ ಕೌಶಲ್ಯ ಮತ್ತು ಪ್ರತಿಭೆಯನ್ನು ಕೊಂಡಾಡಿ ಗೌರವಿಸಲಾಯಿತು. ಆಕಾಶ

ವಾಣಿಯವರು ಅವರಿಗೆ ಕೀರ್ತಿತಂದ ಪಾತ್ರಗಳ ಸಂಭಾಷಣೆ ಮತ್ತು ಹಾಡುಗಳನ್ನು ಧ್ವನಿಮುದ್ರಿಸಿಕೊಂಡರು.

ಇದಾದ ಒಂದು ತಿಂಗಳನಂತರ ಕನ್ನಡನಾಡಿನ ರಂಗಭೂಮಿಯಲ್ಲಿ ತಮ್ಮ ಧೀರ, ಗಂಭೀರ ಅಭಿನಯ, ಸುಶ್ರಾವ್ಯ ಸಂಗೀತದಿಂದ ಮೆರೆದ 'ಅಭಿನಯ ಭಕ್ತ ಶಿರೋಮಣಿ' ಸಿ. ಬಿ. ಮಲ್ಲಪ್ಪನವರು ತಮ್ಮ 73ನೇ ವಯಸ್ಸಿನಲ್ಲಿ 3-4-1959 ರಂದು ನಿಧನರಾದಾಗ ಕನ್ನಡ ರಂಗಭೂಮಿ ತನ್ನ ಅಮೂಲ್ಯವಾದ ರತ್ನವೊಂದನ್ನು ಕಳೆದುಕೊಂಡು ಬಡವಾಯಿತು. ಚಿಕ್ಕನಾಯಕನಹಳ್ಳಿಗೆ ಹೆಸರು ತಂದುಕೊಟ್ಟ ಧೀಮಂತ ಕಲಾವಿದ ಸಿ. ಬಿ. ಮಲ್ಲಪ್ಪನವರ ನೆನಪು ಸದಾ ಹಸಿರಾದುದು.

## ಬಿ. ಕೆ. ಈಶ್ವರಪ್ಪ

ಕನ್ನಡ ರಂಗಭೂಮಿ ಮತ್ತು ಸಿನಿಮಾರಂಗದಲ್ಲಿ ಅವಿಶ್ರಾಂತವಾಗಿ ದುಡಿದ ಬಿ. ಕೆ. ಈಶ್ವರಪ್ಪನವರು ಚಿಕ್ಕನಾಯಕನಹಳ್ಳಿಯ ಮತ್ತೊಂದು ಕಲಾಕುಸುಮ. ಬಿ. ಕಾಡು ಬಸವಯ್ಯ ಮತ್ತು ಚಿಕ್ಕಮ್ಮನವರ ಮಗನಾಗಿ 6-12-1915ರಲ್ಲಿ ಜನಿಸಿದ ಬಿ. ಕೆ. ಈಶ್ವರಪ್ಪನವರು ಹಲವಾರು ವರ್ಷಗಳು ರಂಗಭೂಮಿಯಲ್ಲಿ ಸೇವೆಸಲ್ಲಿಸಿ ಅನಂತರ ಸಿನಿಮಾರಂಗದಲ್ಲಿ ಹೆಸರು ಪಡೆದವರು. ಕಾಡುಬಸವಯ್ಯನವರು ಸ್ವತಃ ಕಲಾವಿದರಾಗಿದ್ದು ರ ವಣಿಸ ಪಾತ್ರವನ್ನು ಸೊಗಸಾಗಿ ಅಭಿನಯಿಸುತ್ತಿದ್ದರು, ಕನ್ನಡ ರಂಗಭೂಮಿಯ ಖ್ಯಾತ ಕಲಾವಿದ ದಿ॥ ಸಿ. ಬಿ. ಮಲ್ಲಪ್ಪನವರು ಇವರ ಚಿಕ್ಕಪ್ಪನವರು, ಹೀಗಾಗಿ ಈಶ್ವರಪ್ಪನವರಿಗೆ ಬಾಲ್ಯದಿಂದಲೂ ಕಲಾದೇವತೆಯ ಸೇವೆ ಮಾಡಲು ಅವಕಾಶ ದೊರೆತಿತ್ತು.

ಕಲೆ ಹುಟ್ಟಿನಿಂದ ಬಂದುದಾಗಿದ್ದು ಕಲಾದೇವಿಯ ಆರಾಧಕರಾಗಿ ಸಿದ್ಧಿ ಪಡೆಯುವ ಹಂಬಲದಿಂದ ಈಶ್ವರಪ್ಪನವರು ಊರಿನ ಕಿರಿಯ ಕಲಾವಿದರನ್ನು ಒಟ್ಟುಗೂಡಿಸಿ 'ಕೃಷ್ಣಲೀಲೆ' ಇತ್ಯಾದಿ ನಾಟಕಗಳನ್ನು ಆಡುತ್ತಿದ್ದರು.

ಕ್ರಮೇಣ ನಾಟಕದ ಮೇಲೆ ಆಸಕ್ತಿ ಬೆಳೆದು ತಮ್ಮ ಚಿಕ್ಕಪ್ಪ ದಿ॥ ಸಿ.ಬಿ, ಮಲ್ಲಪ್ಪನವರ 'ಶ್ರೀ ಚಂದ್ರಮೌಳೀಶ್ವರ ನಾಟಕ ಕಂಪನಿ' ಸೇರಿ ಪ್ರಾರಂಭದಲ್ಲಿ ಬುಕ್ಕಿಂಗ್ ಗುಮಾಸ್ತೆಯಾಗಿ ಕೆಲಸ ಮಾಡಿದರು ಸಮಯ ಒದಗಿದಾಗ ನಾಟಕದಲ್ಲಿ ಚಿಕ್ಕಪುಟ್ಟ ಪಾತ್ರಗಳನ್ನು ನಿರ್ವಹಿಸುತ್ತಿದ್ದರು. 1934ರಲ್ಲಿ ಗೋರ ಕುಂಬಾರ ನಾಟಕದಲ್ಲಿ 'ಸರದಾರ' ನಾಗಿ ತುಲಸೀದಾಸ್ ನಾಟಕದಲ್ಲಿ 'ತಂದೆ'ಯಾಗಿ ಹರಿಶ್ಚಂದ್ರ ನಾಟಕದಲ್ಲಿ 'ವಿಶ್ವಾಮಿತ್ರ' ನಾಗಿ ಕಬೀರ್ ನಾಟಕದಲ್ಲಿ 'ಕಾಕೋದರ'ನಾಗಿ ಅಭಿನಯಿಸಿದರು. ಶ್ರೀಯುತರ ನೈಜ ಅಭಿನಯ ಪ್ರೇಕ್ಷಕರನ್ನು ರಂಜಿಸಿತು. 1936ರಲ್ಲಿ ಈಶ್ವರಪ್ಪನವರು ಶ್ರೀಮತಿ ಲಕ್ಷ್ಮೀದೇವಮ್ಮನವರ ಕೈ ಹಿಡಿದರು.

ಶ್ರೀ ಚಂದ್ರ ಮೌಳೀಶ್ವರ ನಾಟಕ ಕಂಪನಿ ಅನಿವಾರ್ಯ ಕಾರಣಗಳಿಂದ ಮುಚ್ಚಿದಾಗ ರಂಗಭೂಮಿಯ ವ್ಯಾಮೋಹದಿಂದ ದೂರವಾಗಲು ಸಾಧ್ಯವಾಗದೇ ಈಶ್ವರಪ್ಪ

ನವರು ಬೇರೆ ಬೇರೆ ಕಂಪನಿಗಳಲ್ಲಿ ಕೆಲಸ ಮಾಡಿದರು. ಅವರಿಗೆ ಹೆಸರು ತಂದು ಕೊಟ್ಟ ಪಾತ್ರಗಳೆಂದರೆ ಹಿರಣ್ಯಾಕ್ಷ, ವಿಶ್ವಾಮಿತ್ರ, ಕರ್ಣ, ಶಕುನಿ, ದಶರಥ ಇತ್ಯಾದಿ. ಶೋಕ ಮತ್ತು ಕರುಣಾರಸಗಳ ಪಾತ್ರಗಳಲ್ಲಿ ಈಶ್ವರಪ್ಪನವರ ಅಭಿನಯ ಉತ್ತುಂಗ ಶಿಖರ ಮುಟ್ಟುತ್ತಿತ್ತು.

1944ರಲ್ಲಿ ಕನ್ನಡನಾಡಿನ ಪ್ರಖ್ಯಾತ ನಾಟಕ ಸಂಸ್ಥೆಗಳಲ್ಲಿ ಒಂದಾದ ನಾಟಕ ರತ್ನ ಶ್ರೀ ಗುಬ್ಬಿವೀರಣ್ಣನವರ ಕಂಪನಿಯಿಂದ ಈಶ್ವರಪ್ಪನವರಿಗೆ ಪಾತ್ರವಹಿಸಲು ಆಹ್ವಾನ ಬಂದಿತು. ಅಲ್ಲಿ ಶ್ರೀಯುತರು ಅಕ್ಕಮಹಾದೇವಿ ನಾಟಕದಲ್ಲಿ 'ಅರವಿಂದ'ನ ಪಾತ್ರ, ಕುರುಕ್ಷೇತ್ರದಲ್ಲಿ 'ಬೀಷ್ಮ', ರಾಜಭಕ್ತಿಯಲ್ಲಿ 'ಕೋದಂಡ' ಇತ್ಯಾದಿ ಪಾತ್ರ ಗಳನ್ನು ಅದ್ಭುತವಾಗಿ ಅಭಿನಯಿಸುತ್ತಿದ್ದರು. ಪಾತ್ರ ಚಿಕ್ಕದು ಅಥವಾ ದೊಡ್ಡದು ಎಂದು ಯೋಚಿಸದೆ ಆ ಪಾತ್ರಕ್ಕೆ ತಕ್ಕದಾದ ನೈಜ ಅಭಿನಯ ನೀಡುತ್ತಿದ್ದ ಅವ ರನ್ನು ಕಂಡರೆ ಎಲ್ಲರಿಗೂ ಗೌರವವಿತ್ತು.

ಗುಬ್ಬಿ ಕಂಪನಿ 1948ರಲ್ಲಿ ಮೈಸೂರಿನಲ್ಲಿ ಮೊಕ್ಕಾಂಮಾಡಿತ್ತು. ಕನ್ನಡದ ಖ್ಯಾತ ನಿರ್ದೇಶಕರಾಗಿದ್ದ ಬಿ. ಶಂಕರಸಿಂಗ್ ಕಂಪನಿಯ 'ಗೋಪಿಚಂದ್' ನಾಟಕ ನೋಡಲು ಬಂದಿದ್ದರು. ಆಗ ಅವರು ಈಶ್ವರಪ್ಪನವರ ಮಂತ್ರಿ ಪಾತ್ರವನ್ನು ಕಂಡು ಬೆರಗಾದರು. 'ನಾಗಕನ್ನಿಕೆ' ಚಿತ್ರ ತಯಾರಿಕೆಯ ಸಿದ್ಧತೆಯಲ್ಲಿದ್ದ ಅವರು ಬಿ. ಕೆ. ಈಶ್ವರಪ್ಪನವರನ್ನು ತಮ್ಮ ಚಿತ್ರದಲ್ಲಿ 'ಮಂತ್ರಿ' ಪಾತ್ರವಹಿಸುವಂತೆ ಕೋರಿ ದರು. ರಂಗಭೂಮಿಯಿಂದ ಚಲನಚಿತ್ರರಂಗಕ್ಕೆ ಈಶ್ವರಪ್ಪನವರು ಪಾದಾರ್ಪಣೆ ಮಾಡಿದರು. ಶ್ರೀ ಶಂಕರಸಿಂಗ್‌ರ ಎಲ್ಲಾ ಚಿತ್ರಗಳಲ್ಲಿ ಈಶ್ವರಪ್ಪನವರು ಪಾತ್ರವಹಿಸಿ ದ್ದಾರೆ. ಜಗನ್ಮೋಹಿನಿ, ಶ್ರೀನಿವಾಸ ಕಲ್ಯಾಣ. ದಲ್ಲಾಳಿ, ಸೌಭಾಗ್ಯಲಕ್ಷ್ಮಿ, ಚಂಚಲ ಕುಮಾರಿ, ಮುಟ್ಟಿದ್ದೆಲ್ಲಾ ಚಿನ್ನ ಇತ್ಯಾದಿ ಚಿತ್ರಗಳಲ್ಲಿ ಅವರು ನೀಡಿರುವ ಅಭಿನಯ ನೆನಪಿನಲ್ಲಿ ಉಳಿಯುವಂಥದು.

1956ರಲ್ಲಿ ಮದ್ರಾಸ್‌ನಲ್ಲೇ ನೆಲೆಸಿದ ಶ್ರೀಯುತರ ಎಲ್ಲ ಸಮಯ ಚಿತ್ರರಂಗಕ್ಕೆ ಮೀಸಲಾಯಿತು. ಶ್ರೀಯುತರು ಅಭಿನಯಿಸಿದ ಕೆಲವು ಪ್ರಖ್ಯಾತ ಚಿತ್ರಗಳೆಂದರೆ ಕಿತ್ತೂರುರಾಣಿಚೆನ್ನಮ್ಮ. ಅಣ್ಣ-ತಂಗಿ, ರಣಧೀರ ಕಂಠೀರವ, ಮನಮೆಚ್ಚಿದಮಡದಿ, ಕಲಿತರೂಪೆಣ್ಣೇ, ಪೋಸ್ಟ್‌ಮಾಸ್ಟರ್, ದಶಾವತಾರ, ಇತ್ಯಾದಿ. ಪಾತ್ರದ ಔಚಿತ್ಯ ಅರಿತು ಪಾತ್ರಕ್ಕೊಪ್ಪುವ ಭಾವಪೂರ್ಣ ಅಭಿನಯದಿಂದ ಬಿ. ಕೆ. ಈಶ್ವರಪ್ಪನವರು ಚಲನಚಿತ್ರ ರಂಗದಲ್ಲಿ ಬಹುಬೇಗ ಹೆಸರುಗಳಿಸಿದರು.

ಚಿತ್ರಜಗತ್ತಿನಲ್ಲಿ ಈಶ್ವರಪ್ಪನವರಿಗೆ ಕೈತುಂಬ ಕೆಲಸವಿದ್ದರೂ ರಂಗಭೂಮಿಯ ಆಕರ್ಷಣೆಯಿಂದ ದೂರಸರಿಯಲಾಗದೆ ಆಗಾಗ್ಗೆ ಕರೆ ಬಂದ ಕಡೆ ಹೋಗಿ ನಾಟಕದಲ್ಲಿ ಪಾತ್ರವಹಿಸುತ್ತಿದ್ದರು. ವಿಶೇಷವಾಗಿ ಪ್ರಖ್ಯಾತ ತಾರೆ ಶ್ರೀಮತಿ ಪಂಡರೀಬಾಯಿ ಯವರ ಶ್ರೀಕೃಷ್ಣಚೈತನ್ಯ ನಾಟಕ ಕಂಪನಿಯ ಹೆಸರಾಂತ ನಾಟಕಗಳಾದ 'ಶಾಂತಿ

ನಿವಾಸ'ದಲ್ಲಿ ಗೋಪಾಲದಾಸನ ಪಾತ್ರವನ್ನೂ, 'ಮಾಂಗಲ್ಯ ಭಾಗ್ಯ' ಮತ್ತು 'ಭಕ್ತ ವಿದಾರ'ದಲ್ಲಿ ಉತ್ತಮ ಪೋಷಕ ಪಾತ್ರಗಳನ್ನು ವಹಿಸುತ್ತಿದ್ದರು. ಶ್ರೀ ಹೊನ್ನಪ್ಪ ಭಾಗವತರ 'ಶ್ರೀ ಉಮಾಮಹೇಶ್ವರ ನಾಟಕ ಕಂಪನಿ'ಯ 'ಶ್ರೀನಿವಾಸಕಲ್ಯಾಣ'ದಲ್ಲಿ 'ಭೃಗು ಮುನಿಯಾಗಿ' 'ಗೋರ ಕುಂಬಾರ'ದಲ್ಲಿ ಮತ್ತು 'ಬ್ರೋಕರ್ ಭೀಷ್ಮಾಚಾರಿ' ನಾಟಕದಲ್ಲಿ ತಂದೆಯಾಗಿ ಅಭಿನಯಿಸುತ್ತಿದ್ದರು. ಈ ಎಲ್ಲ ಪಾತ್ರಗಳನ್ನು ಕನ್ನಡ ಕಲಾರಸಿಕರು ಮೆಚ್ಚಿ ಪ್ರಶಂಸಿಸುತ್ತಿದ್ದರು,

ಬಿ. ಕೆ, ಈಶ್ವರಪ್ಪನವರ ಅಭಿನಯ ಕಲಾಕೌಶಲ್ಯ ಮತ್ತು ಪ್ರತಿಭೆಯನ್ನು ಗುರುತಿಸಿ ಅವರಿಗೆ 'ಅಭಿನಯ ಕಲಾದರ್ಶಿ' ಪ್ರಶಸ್ತಿ ದೊರೆಯಿತು.

ಚಿಕ್ಕನಾಯಕನಹಳ್ಳಿಯ ಹಿರಿಯ ಮತ್ತು ಕಿರಿಯ ಕಲಾವಿದರು ಶಿವರಾತ್ರಿಯ ದಿನದಂದು ಸುಮಾರು 60 ವರ್ಷಗಳಿಂದ ಒಂದೇ ಸಮನೆ 'ರಾಜಾವಿಕ್ರಮ ಅಥವಾ ಶನಿಪ್ರಭಾವ' ಎಂಬ ಬಯಲು ನಾಟಕವನ್ನು ಅಭಿನಯಿಸುತ್ತಾ ಬಂದಿದ್ದು ಇಡೀ ತಾಲ್ಲೂಕಿನ ಜನತೆಯ ಮೆಚ್ಚುಗೆಗೆ ಪಾತ್ರವಾಗಿದ್ದಾರೆ. ಅವರ ಈಶ್ರದ್ಧೆ-ಆಸಕ್ತಿ ಮೆಚ್ಚುವಂತಹುದು.

ದಿ॥ ಸಿ. ಬಿ. ಮಲ್ಲಪ್ಪನವರ ಮಗ ಶ್ರೀ ಸಿ. ಎಂ. ಮಲ್ಲೇಶಯ್ಯನವರು ತಂದೆಯ ನಾಟಕ ಗರಡಿಯಲ್ಲಿ ಪಳಗಿದವರು. ತಮ್ಮ ತಂದೆಯವರು ಅಭಿನಯಿಸುತ್ತಿದ್ದ ನಾಟಕಗಳಲ್ಲಿ ಪಾತ್ರವಹಿಸುತ್ತಿದ್ದರು. 'ತುಲಸೀದಾಸ' ನಾಟಕದಲ್ಲಿ ಅಕ್ಬರ್ 'ಕೃಷ್ಣಲೀಲಾ' ನಾಟಕದಲ್ಲಿ ವಸುದೇವ, 'ತುಕಾರಾಂ' ನಾಟಕದಲ್ಲಿ ಔರಂಗಜೇಬ ಇತ್ಯಾದಿ ಪಾತ್ರವಹಿಸುತ್ತಿದ್ದರು.

ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಇತರ ಹೆಸರಾಂತ ಕಲಾವಿದರುಗಳೆಂದರೆ ಶ್ರೀಗಳಾದ ಸಿ. ಎಸ್. ತಮ್ಮಯ್ಯನವರು, ಸಿ. ಎಸ್. ಕರಿಸಿದ್ದಯ್ಯನವರು, ಸಿ. ಎಸ್. ಮಲ್ಲಪ್ಪನವರು, ಎಸ್. ಮರುಡಯ್ಯನವರು, ನವಿಲೆ ಕೃಷ್ಣಪ್ಪನವರು, ಗಂಗಾಧರಯ್ಯನವರು, ಲಕ್ಕಸೆಟ್ಟಪ್ಪನವರು, ಬಿ. ಕೆ. ಸಿದ್ದಯ್ಯನವರು. ಪಂಚಲಿಂಗಯ್ಯನವರು, ಶಂಭುಲಿಂಗಯ್ಯನವರು, ಸಿ. ಜಿ. ಗೋವಿಂದಪ್ಪನವರು, ಗೋವಿಂದಪ್ಪನವರು, ನರಸಿಂಹಯ್ಯನವರು, ಕಿರಿಯ ಕಲಾವಿದರುಗಳಾದ ಸಿ. ಎನ್. ಕೃಷ್ಣಾಚಾರ್. ಸಿ. ಎಸ್. ನಾಗೇಶ ಮುಂತಾದವರು ತಮ್ಮ ಅಭಿನಯ ಕೌಶಲ್ಯದಿಂದ ಚಿಕ್ಕನಾಯಕನಹಳ್ಳಿಯ ಕಲೆಯನ್ನು ಮತ್ತಷ್ಟು ಜೀವಂತಗೊಳಿಸುವುದರಲ್ಲಿ ಪೂರ್ಣಪ್ರಯತ್ನ ಮಾಡಿದ್ದಾರೆ.

ಕನ್ನಡ ರಂಗಭೂಮಿಗೆ ಚಿಕ್ಕನಾಯಕನಹಳ್ಳಿಯ ಕೊಡುಗೆ ಮಹತ್ತರವಾದುದೆಂಬುದರಲ್ಲಿ ಸಂಶಯವಿಲ್ಲ.

ಚಿಕ್ಕನಾಯಕನಹಳ್ಳಿ

# ಜಾನಪದ

—ಸಾ. ಶಿ. ಮರುಳಯ್ಯ.

ವ್ಯಕ್ತಿಗೆ ವೈಯಕ್ತಿಕತೆ ಇದ್ದಂತೆ ಪ್ರಾಂತಕ್ಕೊಂದು ಪ್ರಾದೇಶಿಕತೆ ಇದೆ. ಈ ಪ್ರಾದೇಶಿಕತೆ ಸಿದ್ಧಿಸುವುದು ಪರಿಸರದ ನೆಲ-ಜಲಗಳ ಸೊಗಡಿನಿಂದ, ಪ್ರಾಚೀನ ಯುಗಗಳಿಂದಲೂ ಅಲ್ಲಿ ಅನುಸ್ಯೂತವಾಗಿ ಸಾಗಿ ಬಂದ ಬದುಕು; ಆ ಬದುಕಿನ ಏಳು-ಬೀಳು, ನೋವು-ನಲಿವು, ದ್ವೇಷ-ರೋಷ, ನಯ-ಭಯ, ಯುಕ್ತಿ-ಶಕ್ತಿ –ಇವೆಲ್ಲವುಗಳ ಪರಿಪಾಕ. ಜನಪದದ ಜೊತೆಯಾಗಿ, ಜನಪದದ ಹಿತಕಾಗಿ, ಜನಪದವೆ ತಾನಾಗಿ ಬೆಳೆದ ಬಾಳನ್ನು ಬೆಳಗಿಸಿದ ಸಂಸ್ಕೃತಿ, ಅದೇ ಜಾನಪದ. ಅದು ಜಾತ್ರೆ, ಹಬ್ಬ, ಐತಿಹ್ಯ, ಆಚರಣೆ, ಸಾಹಿತ್ಯ, ಸಂಪ್ರದಾಯ, ನೇಹ, ನಂಬಿಕೆ, ಆಚಾರ, ವಿಚಾರ, ಊಟ, ಉಪಚಾರ, ಒಡವೆ, ವಸ್ತ್ರ, ದೈವ, ಧ್ಯೇಯ, ಪೂಜೆ, ಪುರಸ್ಕಾರ ಇತ್ಯಾದಿ ಹಲವು ಹತ್ತೆಂಟು ಮುಖಗಳನ್ನು ಉಳ್ಳದ್ದು. ಇವುಗಳನ್ನು ಕುರಿತ ವೈಜ್ಞಾನಿಕ ವಿವೇಚನೆಯೇ ಜಾನಪದ ಅಧ್ಯಯನ. ಆ ಅಧ್ಯಯನದ ಹಾದಿಯಲ್ಲಿಟ್ಟ ಒಂದು ಹೆಜ್ಜೆ ಈ ಲೇಖನ.

**ಜಾತ್ರೆ** :

ಯಾತ್ರೆ ಅಂದ ಕೂಡಲೆ ಪಾತ್ರೆ ನೆನಪಾಗುತ್ತೆ. ಜಾತ್ರೆ ಅಂದ ಕೂಡಲೆ ತೇರು ನಮ್ಮ ಕಣ್ಣೆದುರು ಧುತ್ತೆಂದು ಬಂದು ನಿಲ್ಲುತ್ತೆ. ಅಂದರೆ ಜಾತ್ರೆಯಲ್ಲಿ ತೇರು ಸರ್ವ ಸಾಮಾನ್ಯ ಉತ್ಸವ ವಿಶೇಷ. ನಮ್ಮಲ್ಲಿ ತೇರಿಲ್ಲದ ಜಾತ್ರೆಗಳು ಬಹಳ ಕಡಿಮೆ, ಅಲ್ಲದೆ 'ಧಾರೆಯಾದ ಮೇಲೆ ಮದುವೆ ಆಯ್ತು, ತೇರು ಹರಿದ ಮೇಲೆ ಪರಿಷೆ ಆಯ್ತು'[1] ಎಂಬ ಗಾದೆ ಇದೆ ನಮ್ಮಲ್ಲಿ. ಅದರರ್ಥ ತೇರು ಜಾತ್ರಾ ಮಹೋತ್ಸವದ ಕಡೆಯ ಆಚರಣೆ. ಅದು ಹಲವರಿಗೆ ಅತ್ಯಂತ ಮಹತ್ವದ್ದೂ ಹೌದು. ಜಾತ್ರೆಯ ಯಾವ ಉತ್ಸವಗಳಿಗೂ ಬಾರದವರು ಕೆಲವರು ಕಡೆಯ ರಥೋತ್ಸವಕ್ಕೆ ಬಂದೇ ಬರುತ್ತಾರೆ. ರಥವನ್ನು ಒಂದು ಹೆಜ್ಜೆಯಷ್ಟಾದರೂ ಎಳೆದು ಉರುಳಿಸಿ, ಹಣ್ಣು-ಕಾಯಿ ಮಾಡಿಸಿ ಕೊಂಡು ಹೋಗುತ್ತಾರೆ.

ಜಾತ್ರೆಗಳಲ್ಲಿ ರಥೋತ್ಸವ ಪ್ರಧಾನ ಅಂಗವಾಗಿದ್ದರೂ ಅನಿವಾರ್ಯವೇನಲ್ಲ. ಹಲವು ಜಾತ್ರೆಗಳು ತೇರಿಲ್ಲದೆ ಆಗುವುದೂ ಉಂಟು: ತೇರುಳ್ಳ ದೇವರುಗಳಿದ್ದರೂ ತೇರು ಮುರಿದಿದ್ದರೆ, ಇಲ್ಲವೆ ಉಪಯೋಗಿಸಲು ಬೇರೆ ಅಡಚಣೆಗಳಿದ್ದರೆ ತೇರು ಎಳೆಯದೆ ಇರುವುದೂ ಸಾಧ್ಯ. ಅಲ್ಲದೆ ತೇರುಗಳ ರಚನೆಯಲ್ಲಿ ವೈವಿಧ್ಯವೂ ಇಲ್ಲ, ವೈಶಿಷ್ಟ್ಯವೂ ಅಷ್ಟಾಗಿ ಇಲ್ಲ. ಎಲ್ಲ ತೇರುಗಳೂ ಹೆಚ್ಚು ಕಡಿಮೆ ಒಂದೇ ಮಾದರಿಯವು:

---

1. ಇದು ಬ್ರಾಹ್ಮಣರಿಗೆ ಅನ್ವಯಿಸುವುದಿಲ್ಲ. ಅವರಲ್ಲಿ ಸಪ್ತಪದಿ ಆಗುವವರೆಗೆ ಮದುವೆ ಆಯಿತೆಂದು ಹೇಳ ಬರುವುದಿಲ್ಲ.

ಬಣ್ಣ ಬಣ್ಣದ ಪಟ್ಟಿ, ಪಟ, ಕುಚ್ಚು, ಕಲಶ, ತೋರಣ, ಬಾವುಟ ಇವೇ ಮೊದಲಾದವುಗಳಿಂದ ಕೂಡಿರುತ್ತವೆ. ಮೇಲೆ ಮೇಲೆ ಕಟ್ಟಿಕೊಂಡು ಹೋಗುವ ಅಂಕಣಗಳ ಸಂಖ್ಯೆ ವ್ಯತ್ಯಾಸವಿರಬಹುದು; ಆದರೆ ವಿನ್ಯಾಸ ಮಾತ್ರ ಎಲ್ಲವುಗಳಲ್ಲೂ ಒಂದೇ ಆಗಿರುತ್ತದೆ. ಆದರೆ ತೇರಿಗೆ ಮೊದಲ ದಿನಗಳ ಧಾರ್ಮಿಕ ಹಾಗೂ ದೈವಿಕ ಪ್ರಕ್ರಿಯೆಗಳಲ್ಲಿ ಒಂದು ಜಾತ್ರೆಯಂತೆ ಮತ್ತೊಂದಿಲ್ಲ. ಒಂದೊಂದರದ್ದೂ ಒಂದೊಂದು ವೈಶಿಷ್ಟ್ಯ. ಈ ವೈಶಿಷ್ಟ್ಯ ವಿಶೇಷವಾಗಿ ಕಂಡು ಬರುವುದು ಶಿಷ್ಟ ಸಂಪ್ರದಾಯದ ಜಾತ್ರೆಗಳಲ್ಲಲ್ಲ; ಜಾನಪದ ಪರಂಪರೆಯ ಪರಿಷೆಗಳಲ್ಲಿ.[2]

ಶಿಷ್ಟ ಜಾತ್ರೆಗಳು ಕುತೂಹಲ ಹುಟ್ಟಿಸುವಂಥವಲ್ಲ. ಯಾವ ಊರಿನ ಜಾತ್ರೆಯೇ ಆಗಿರಲಿ, ಅದು ಶಿಷ್ಟ ಸಂಪ್ರದಾಯಕ್ಕೆ ಸೇರಿದ್ದಾದರೆ ಅದರಲ್ಲಿ ಬ್ರಹ್ಮ ರಥೋತ್ಸವ, ಶಯನೋತ್ಸವ, ತೆಪ್ಪೋತ್ಸವ, ವೃಷಭೋತ್ಸವ, ಗರುಡೋತ್ಸವ, ಸೂರ್ಯಪಾನ, ಬಿಲ್ವವೃಕ್ಷ, ಉಯ್ಯಾಲೆ ಉತ್ಸವ, ಶಶಾಂಕ ಮಂಡಲೋತ್ಸವ ಮೊದಲಾದ ಉತ್ಸವಗಳಿರುತ್ತವೆ. ಎಲ್ಲ ಊರಿನ ಜಾತ್ರೆಗಳೂ ದೇವರ ಕುಲಧರ್ಮಗಳಿಗೆ ತಕ್ಕಂತೆ ನಡೆಯುತ್ತವೆ. ನಾಂದಿ ಅಂಕುರಾರ್ಪಣದಿಂದ ಆರಂಭವಾಗಿ ವಿವಾಹ ಉಡುಗೊರೆಗಳಾಗಿ, ಹೋಮಹವನಗಳಾಗಿ ಕಡೆಯಲ್ಲಿ ಅವಭೃತ ಸ್ನಾನದೊಂದಿಗೆ ಮುಗಿವು ಪಡೆಯುತ್ತವೆ. ಜಾನಪದ ಜಾತ್ರೆಗಳಲ್ಲಿ ಪದ್ಧತಿಯ ಪ್ರಕಾರ ಹಲವು ಆಚರಣೆಗಳು ಇದ್ದರೂ, ಕೆಲವು ತುಂಬಾ ರೋಮಾಂಚಕಾರಿಯಾದವುಗಳು. ಪ್ರತಿಯೊಂದು ಹಳ್ಳಿಯ, ಪ್ರತಿಯೊಂದು ದೇವರ ಜಾತ್ರೆಯೂ ವಿಶಿಷ್ಟವಾದುದು, ವಿಚಿತ್ರವಾದುದು. ಮೈಲಾರ ದೇವರ

---

2. ಆಚರಣೆಯ ದೃಷ್ಟಿಯಿಂದ ಜಾತ್ರೆಗಳನ್ನು ಶಿಷ್ಟ ಸಂಪ್ರದಾಯದ ಜಾತ್ರೆಗಳು ಮತ್ತು ಜಾನಪದ ಪರಂಪರೆಯ ಪರಿಷೆಗಳು ಎಂದು ಎರಡು ಭಾಗಗಳಾಗಿ ವಿಂಗಡಿಸಬಹುದು. ಶಿಷ್ಟ ಸಂಪ್ರದಾಯದ ಜಾತ್ರೆಗಳನ್ನು ನಡೆಸುವವರು ಸ್ವಲ್ಪ ಸುಧಾರಿಸಿದವರು. ಸುಸಂಸ್ಕೃತರು ಮಡಿವಂತರು, ತುಂಬು ನಾಗರಿಕರು, ಸಮಾಜದಲ್ಲಿ ಮೇಲ್ಸ್ತರಗತಿಯ ಜನ. ಆದರೆ ಜಾಪದ ಪರಂಪರೆಯ ಪರಿಷೆಗಳನ್ನು ಮಾಡುವವರು ಜನ ಸಾಮಾನ್ಯರು, ನಿರಕ್ಷರ ಕುಕ್ಷಿಗಳು, ಶುದ್ಧ ನಾಗರಿಕರಲ್ಲದ ಪ್ರಕೃತಿಗೆ ಹೆಚ್ಚು ಸಮೀಪವಾಗಿರುವ, ಆದರೆ ತಮ್ಮದೇ ಆದ ಜಾನಪದ ಸಂಸ್ಕೃತಿಯನ್ನು ಉಳ್ಳವರು. ಅವರದು ಸಾತ್ವಿಕ ಪೂಜೆ, ಇವರದು ಉಗ್ರಭಕ್ತಿ; ಅವರಲ್ಲಿ ಹೋಮಹವನಗಳಾದರೆ, ಇವರಲ್ಲಿ ಭಯಂಕರ ಬಲಿಗಳಿರುತ್ತವೆ. ಅವು ನಿಗದಿಯಾದ ತಿಥಿ, ನಕ್ಷತ್ರ, ಲಗ್ನಗಳಲ್ಲಿ ನಡೆದರೆ, ಇವು ನಡೆಯುವುದಕ್ಕೆ ವಾರಗಳೇ ಮುಖ್ಯ; ನಕ್ಷತ್ರ, ತಿಥಿಗಳಲ್ಲ. ಅವು ಸಂಬಳ ಇಲ್ಲವೇ ಕೆಲಸಕ್ಕೆ ತಕ್ಕ ಕೂಲಿ ಇವುಗಳ ಮೇಲೆ ನಡೆದರೆ, ಇವು ದೇವರ ಬಿಟ್ಟಿ, ಊರುಬಿಟ್ಟಿ ಇವುಗಳ ಮೇಲೆ ನಡೆಯುತ್ತವೆ. ಅಲ್ಲಿಯವರದು ಆದಾಯದ ದೃಷ್ಟಿ, ಇಲ್ಲಿಯವರದು ಭಕ್ತಿಪೂರ್ಣ ಸೇವೆ.

ಶಿಷ್ಟ ಮತ್ತು ಜಾನಪದ—ಎರಡು ಜಾತ್ರೆಗಳಲ್ಲೂ ದನಗಳು ಸೇರಬಹುದು. ಆದರೆ ದನದ ಜಾತ್ರೆಗಳನ್ನು ಜನದ ಜಾತ್ರೆಗಳೊಡನೆ ಹೋಲಿಸಿದರೆ ದನದ ಜಾತ್ರೆಗಳು ಸಂಖ್ಯೆಯಲ್ಲಿ ಬಹಳ ಕಡಿಮೆ. ಈ ಜಾತ್ರೆ ನಡೆಯುವ ಪ್ರದೇಶ ಹತ್ತಾರು ಹಳ್ಳಿಗಳ ಕೇಂದ್ರವಾಗಿರಬೇಕು; ನೀರು ಮತ್ತು ನೆರಳಿಗೆ ಆಸರೆ ಇರಬೇಕು. ಹೆದ್ದಾರಿಗಳ ಬದಿಯಲ್ಲಿದ್ದರಂತೂ ಮತ್ತೂ ಒಳ್ಳೆಯದು. ಈ ಪರಿಷೆಗಳಿಗೆ ಹೋಗುವ ಜನರಲ್ಲಿ ಭಕ್ತಿಗಿಂತ ಹೆಚ್ಚಾಗಿ ವ್ಯಾಪಾರೀ ಮನೋಭಾವನೆ ಇರುತ್ತದೆ.

ಜಾತ್ರೆಯಲ್ಲಿ ಸರಪಣಿ ಹರಿಯುಬೇಕು. ಅಂದರೆ ದಪ್ಪ ಕಬ್ಬಿಣದ ಸರಪಣಿಯನ್ನು ಪರಂಪರೆಯಿಂದ ಬಂದ ಒಂದು ಮನೆತನದ ಒಬ್ಬನೇ ಒಬ್ಬ ವ್ಯಕ್ತಿ ಜಗ್ಗಿ ಜಗ್ಗಿ ತುಂಡಾಗುವಂತೆ ಮಾಡಬೇಕು. ಒಂದು ವೇಳೆ ಬೆಸುಗೆ ಬಿಚ್ಚಿಕೊಂಡರೆ ಮಾತ್ರೆ ಅದನ್ನು ಕೂಡಿಸುತ್ತಾರೆ. ಸರಪಣಿಮಧ್ಯದಲ್ಲಿ ಎರಡು ತುಂಡಾಗಿ ಹರಿದು ಬೀಳಬೇಕು, ಇನ್ನೊಂದು ದೇವರ ಜಾತ್ರೆಯಲ್ಲಿ ಬಗಣಿ ಗೂಟವನ್ನು ಮನುಷ್ಯನ ಕಣಗಾಲಿಗೆ ಹೊಡೆಯುತ್ತಾರೆ. ಮತ್ತೊಂದರಲ್ಲಿ ಧಗಧಗಿಸುವ ಅಗ್ನಿ ತುಂಬಿದ ಮಡಕೆಯನ್ನು ತಲೆಯ ಮೇಲಿಟ್ಟು ಅದಕ್ಕೆ ಎಣ್ಣೆ ಸುರಿಯುತ್ತಾರೆ. ಕಾದ ಎಣ್ಣೆ ಹೊತ್ತವನ ಮೇಲೆ ಹರಿಯುತ್ತಿದ್ದರೂ ಅದರಿಂದ ಅವನಿಗೇನೂ ಆಗುವುದಿಲ್ಲ. ಮಗುದೊಂದರಲ್ಲಿ ಬೆನ್ನಿನ ನರ ಎಳೆದು ಅದಕ್ಕೆ ಕೊಂಡಿ ಹಾಕಿ ಸಿಡಿ ಆಡಿಸುತ್ತಾರೆ. ಹೀಗೆ ನಾನಾವಿಧವಾದ ಉಗ್ರ ಆಚರಣೆ, ಅರ್ಚನೆಗಳೂ ಬಾಯಿಬೀಗ, ಬೆತ್ತಲೆ ಸೇವೆ, ಬೇವಿನ ಉಡುಗೆ, ದಿಂಡುರುಳು, ಹೆಜ್ಜೆ ನಮಸ್ಕಾರ, ಕುರಿ ಕೋಣಗಳ ಬಲಿ, ಘಟ ಉಕ್ಕಿಸುವುದು (ಹೆಂಡ ತುಂಬಿದ ಗಡಿಗೆಯಲ್ಲಿ ಈಚಲಗರಿ ಇಟ್ಟು ಒಂದೇ ಸಮನೆ ಕಲಕಿದರೆ ಹೆಂಡ ನೊರೆಗಟ್ಟಿ ಹರಿಯುತ್ತದೆ. ಅದೇ ಘಟ ಉಕ್ಕಿಸುವುದು), ಕೋಳಿ ಮುರಿಯುವುದು ಇತ್ಯಾದಿ ನೂರಾರು ರೂಪದ ಹರಕೆಗಳು ಇರುತ್ತವೆ.

ಜಾನಪದ ಜಾತ್ರೆಗಳ ವಿವರ ಒಂದು ಬಗೆಯ ಮೋಜೆನಿಸುತ್ತದೆ. ನಮ್ಮ ಜನರ ಮೌಢ್ಯವೂ ಅದರಿಂದ ವೇದ್ಯವಾಗುತ್ತದೆ. ಆದರೆ ಭಗವತ್ ಶಕ್ತಿಯಲ್ಲಿ ಅವರಿಗಿರುವ ಅಚಲನಂಬಿಕೆ ಮೆಚ್ಚುವಂಥದು. ಆ ನಂಬಿಕೆಯೇ ಭಕ್ತಿಯಾಗಿ, ಭಕ್ತಿಯೇ ಆವಿರ್ಭವಿಸಿದ ಶಕ್ತಿಯಾಗಿ ಒಂದು ಅದ್ಭುತ ಪವಾಡವೆನಿಸಿ ಮೆರೆಯುತ್ತದೆ. ನಮ್ಮ ಗ್ರಾಮೀಣ ಸಂಸ್ಕೃತಿಯ ಜ್ವಲಂತ ನಿದರ್ಶನಗಳು ನಮ್ಮ ಜಾನಪದ ಜಾತ್ರೆಗಳು. ಜಾತ್ರೆಗಳೇ ನಮ್ಮ ಸಂಸ್ಕೃತಿಯ ವಸ್ತು ಪ್ರದರ್ಶನಗಳು. ಪ್ರತಿವರ್ಷವೂ ಜಾತ್ರೆಗಳನ್ನು ಆಚರಿಸುವ ನಮಗೆ ಪಾಶ್ಚಾತ್ಯ ಮಾದರಿಯ ವಸ್ತು ಪ್ರದರ್ಶನ (Exhibition) ಗಳ ಅಗತ್ಯ ಇರುವುದಿಲ್ಲ.

**ಶಿಷ್ಟ ಸಂಪ್ರದಾಯದ ಜಾತ್ರೆಗಳು :**

ಶಿಷ್ಟ ಸಂಪ್ರದಾಯದ ಜಾತ್ರೆಗಳು ಚಿಕ್ಕನಾಯಕನಹಳ್ಳಿ ತಾಲ್ಲೂಕಿನಲ್ಲಿ ಹಲವಿವೆ. ಅವುಗಳಲ್ಲಿ ಚಿಕ್ಕನಾಯಕನಹಳ್ಳಿ ಪಟ್ಟಣದ ಶ್ರೀ ಆಂಜನೇಯ ಸ್ವಾಮಿ ಜಾತ್ರೆ, ಯಳನಡು ಶ್ರೀ ಸಿದ್ದರಾಮೇಶ್ವರಸ್ವಾಮಿ ಜಾತ್ರೆ, ಗೋಡೇಕೆರೆ ಶ್ರೀ ಸಿದ್ಧರಾಮೇಶ್ವರ ಸ್ವಾಮಿ ಜಾತ್ರೆ, ಶೆಟ್ಟೀಕೆರೆ ಶ್ರೀ ಭೈರವೇಶ್ವರ ಸ್ವಾಮಿ ಜಾತ್ರೆ, ಸಿದ್ಧರಾಮನಗರದ ಶ್ರೀ ಹೆಂಜೇರು ಭೈರವೇಶ್ವರ ಸ್ವಾಮಿ ಜಾತ್ರೆ, ಕುಪ್ಪೂರು ಗದ್ದಿಗೆ ಮಠದ ಶ್ರೀ ಗುರು ಮರುಳು ಸಿದ್ದೇಶ್ವರ ಸ್ವಾಮಿ ಜಾತ್ರೆ ಇವು ಮುಖ್ಯವಾದವುಗಳು. ಇವು ಸಾಂಪ್ರದಾಯಕವಾಗಿ ನಡೆಯುವ ಸಾತ್ವಿಕ, ಆದರೆ ವೈಭವದ ಪರಿಷೆಗಳು; ಹಲವು ದಿನಗಳ ವರೆಗೆ ನಡೆಯುವ "ದೊಡ್ಡ ಪರಿಷೆ"ಗಳು. ಬೆರಗುಗೊಳಿಸುವಂತಹ ಅಲಂಕಾರಗಳು,

ಉತ್ಸವಗಳು, ಮದ್ದು ಮತಾಪುಗಳ ಆರ್ಭಟ ಇಪ್ಪ ಇರುತ್ತವೆ. ಆಚರಣೆಯಲ್ಲಿ ಹೆಚ್ಚಿನ ವೈವಿಧ್ಯವಿಲ್ಲದಿದ್ದರೂ ಒಂದೆರಡು ವೈಶಿಷ್ಟ್ಯಗಳಿವೆ.

ಆಷಾಢಮಾಸ ನಿಷಿದ್ಧಮಾಸ : ಶ್ರಾವಣಾದಿಗಳಂತೆ ಪವಿತ್ರ ಮಾಸವಲ್ಲ. ಅಂತಹ ಅಶುದ್ಧ ಮಾಸವೆನಿಸಿದ ಆಷಾಢ ಶುದ್ಧ ಏಕಾದಶಿಯದಿನ ನಡೆಯುತ್ತದೆ ಚಿಕ್ಕನಾಯಕನಹಳ್ಳಿ ಶ್ರೀ ಆಂಜನೇಯಸ್ವಾಮಿ ಜಾತ್ರೆ. ಇದನ್ನು 'ಯಾಕಾಶಿ ಪರಿಷೆ' ಅನ್ನುತ್ತಾರೆ. ಆ ವರ್ಷ ಹೊಸದಾಗಿ ಮದುವೆಯಾದ ಗಂಡು ಹೆಣ್ಣುಗಳು ತೇರಿನ 'ಕಳಶ' ನೋಡಲು ಹೋಗುತ್ತಾರೆ. ಆ ಸುತ್ತಿನವರೆಲ್ಲರೂ ತಮ್ಮ ತಮ್ಮ ನೂತನ ದಂಪತಿಗಳಿಗೆ ಕಳಶ ತೋರಿಸುವುದು ವಾಡಿಕೆ. ಅದು ಜೀವನದ ಹೊಸ್ತಿಲಲ್ಲಿ ಕಾಲಿರಿಸು ತ್ತಿರುವವರಿಗೆ ಶುಭವೆಂಬ ನಂಬಿಕೆಯಿದೆ.

ಇಂಥವೇ ಮತ್ತೊಂದು ಜಾತ್ರೆ ಕುಪ್ಪೂರು ಗದ್ದಿಗೆ ಶ್ರೀ ಮರುಳು ಸಿದ್ಧೇಶ್ವರ ಸ್ವಾಮಿ ಜಾತ್ರೆ. ಇದನ್ನು 'ಗದ್ದಿಗೆ ಪರಿಷೆ' 'ಗದ್ದಿಗೆ ಕಡೇ ಕಾರ್ತೀಕ' ಎಂದೆಲ್ಲಾ ಕರೆ ಯುತ್ತಾರೆ. ಇದು ನಡೆಯುವುದು ಮಾರ್ಗಶಿರ ಶುದ್ಧ ಪೌರ್ಣಿಮೆಯ ದಿವಸ: ಅಂದರೆ ಮಾಗಿಕಾಲದಲ್ಲಿ ದಿಸೆಂಬರ್ ತಿಂಗಳಲ್ಲಿ ಚಳಿ ಮೈ ಕೊರೆದು ಹೋಗುವ ಕಾಲದಲ್ಲಿ. ಅಂದಿಗೆ ಹೊಲದ ಕೊಯಿಲು ಮಾತ್ರ ಮುಗಿದಿರುತ್ತೆ. ಕಣದ ಸುಗ್ಗಿ ಆರಂಭವಾಗಿರುವು ದಿಲ್ಲ. ಅದು ರೈತನಿಗೆ ಬಿಡುವಿನ ದಿನವೂ ಆಗಿರುವುದಿಲ್ಲ. ಆದರೂ ಆಗ ನಡೆಯು ತ್ತಿದ್ದ ಒಂದೇ ಒಂದು ದಿನದ ಶ್ರೀ ಕುಪ್ಪೂರು ಗದ್ದಿಗೆ ಜಾತ್ರೆ.

ಮಾರ್ಗಶೀರ್ಷದ ಪೌರ್ಣಿಮೆಯ ದಿನ ಬೆಳಿಗ್ಗೆ ೯ ಗಂಟೆಗೆ ವೃಷಭೋತ್ಸವ. ಅಂದರೆ ಮಠದ ಬಸವನನ್ನು ಅಲಂಕರಿಸಿ, ಸ್ವಾಮಿಯ ಸಾನ್ನಿಧ್ಯದಿಂದ ಪೂಜಾದಿ ಗಳೊಂದಿಗೆ ಹೊರಡಿಸಿಕೊಂಡು ಮಠದ ಬಲಭಾಗದ ಕೆರೆ ಏರಿ ಮೇಲಿಂದ ಜಾತ್ರೆ ನೆರೆ ದಿರುವ ಹಿಪ್ಪೆತೋಪಿನ ಅಂಗಡಿಸಾಲಿನ ಮಾರ್ಗವಾಗಿ ದಾಸೋಹದ ಹತ್ತಿರ ಹದು ಮಾಡಿಸುತ್ತದೆ. ಬಹುದೊಡ್ಡದಾದ ದಾಸೋಹದ 'ರೊಪ್ಪ'ದಲ್ಲಿ ಬಸವೇಶ್ವರನಿಗೆ ಪೂಜೆ ನಡೆದು ಆದ ಅದುಗೆಯನ್ನು 'ಎಡೆ' ಮಾಡಲಾಗುತ್ತದೆ. ಅನಂತರ ವೃಷಭೋ ತ್ಸವ ರಾಜಬೀದಿಯಲ್ಲಿ ಸಾಗಿ ಮಠದ ಉತ್ತರ ದಿಕ್ಕಿನ ಮೂಲೆಗೆ ಬರುತ್ತದೆ. ಆ ವೇಳೆಗೆ ಸರಿಯಾಗಿ ಬಂದು ಉತ್ಸವದಲ್ಲಿ ಭಾಗವಹಿಸುತ್ತಾಳೆ ಪಕ್ಕದ ಊರಿನ 'ಬೇವಿನ ಹಳ್ಳಿ ಅಮ್ಮ'. ಪೆಟ್ಟಿಗೆಯಲ್ಲಿ ಕುಳಿತಿರುವ ಅಮ್ಮನನ್ನು ಪೂಜಾರಿ ಹೊತ್ತಿರುತ್ತಾನೆ. ಹರೆ ಬಡಿಸಿಕೊಂಡು ಆನಂದದಿಂದ ಬರುತ್ತಾಳೆ ಅಮ್ಮ. ಮರುಳುಸಿದ್ಧೇಶ್ವರ ಸ್ವಾಮಿ ಭಕ್ತರು ವೀರಶೈವರು. ಬೇವಿನಹಳ್ಳಿ ಅಮ್ಮನ ಭಕ್ತರು ಬೆಸ್ತರು, ಅದು ಶಿಷ್ಟ ಜಾತ್ರೆ ಇದು ಜಾನಪದ ಪರಿಷೆ. ಎರಡೂ ಒಂದಾಗಿ ಜೊತೆಯಾಗಿ ನಡೆಯುವುದು. ದೈವ ಧರ್ಮ, ಸಂಸ್ಕೃತಿಗಳ ಸಮಾಗಮದ ಸಂಕೇತ. ಹೇಮಂತ ಋತುವಿನಲ್ಲಿ ನಡೆಯುವ ಜಾತ್ರೆಯುಷ್ಟೇ ವೈಶಿಷ್ಟ್ಯ ಈ ಸಂಸ್ಕೃತಿ ಸಮಾಗಮ.

ಬಸವನ ಉತ್ಸವದಲ್ಲಿ ಸಹಸ್ರಾರು ಜನ ಭಾಗವಹಿಸುತ್ತಾರೆ. ಹಾದಿಯುದ್ದಕ್ಕೂ ಬಸವನಿಗೆ ಬಾಳೇಹಣ್ಣಿನ ಸೇವೆ ನಡೆಯುತ್ತದೆ. ಇತ್ತೀಚೆಗೆ ಮುಂದೆ ಬಸವ, ಅವರ ಹಿಂದೆ ಶ್ರೀ ಮರುಳುಸಿದ್ಧೇಶ್ವರ ಸ್ವಾಮಿಯ ಅಡ್ಡಪಲ್ಲಕ್ಕಿ ಉತ್ಸವವೂ ಇರುತ್ತದೆ. ಈ ಉತ್ಸವವನ್ನು ಯಾಚಗೊಂಡನಹಳ್ಳಿ ಭಕ್ತರು ಪ್ರತಿವರ್ಷವೂ ತಪ್ಪದೇ ನಡೆಸುತ್ತಾರೆ. ನಂದಿಧ್ವಜಗಳು, ವೀರಗಾಸೆ ಕುಣಿತ, ವೀರಭದ್ರನ ಹಲಗೆಹೊತ್ತವರ ಕುಣಿತ ಇತ್ಯಾದಿಗಳು ಉತ್ಸವದಲ್ಲಿ ಭಾಗವಹಿಸುತ್ತವೆ. ನಂದಿಧ್ವಜದ ಕುಣಿತ ಕಣ್ಣಿಗೆ ಹಬ್ಬ. ಸಾಸಲು, ಶೆಟ್ಟೀಕೆರೆ. ಮಾದೀಹಳ್ಳಿ ಮೊದಲಾದ ಬೇರೆ ಬೇರೆ ಊರುಗಳಿಂದ ಬಂದ ನಂದಿಧ್ವಜಗಳು ನರ್ತಿಸುತ್ತವೆ. ಧ್ವಜ ಕುಣಿಸಲು, ಕುಣಿಸುವುದನ್ನು ನೋಡಲು ಬಹಳ ಜನ ಸೇರುತ್ತಾರೆ.

ಬಸವ ಉತ್ಸವ ಮುಗಿದ ಕೂಡಲೇ ರೊಪ್ಪದಲ್ಲಿ ದಾಸೋಹ ನಡೆಯುತ್ತದೆ. ಸಂಜೆ ಜ್ಞಾನಮಂದಿರದ ಮುಂಭಾಗದ ಬಯಲಿನಲ್ಲಿ ಬಹು ದೊಡ್ಡ ಸಭೆ ಸೇರಿ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸುತ್ತದೆ. ಧಾರ್ಮಿಕ ಸಾಂಸ್ಕೃತಿಕ ವಿಷಯಗಳನ್ನು ಕುರಿತ ಭಾಷಣಗಳಿರುತ್ತವೆ. ಪ್ರತಿವರ್ಷವೂ ಗಣ್ಯವಕ್ತಿಗಳು ಒಬ್ಬಿಬ್ಬರಿಗೆ ಸನ್ಮಾನ ಆಗುತ್ತದೆ. ನೃತ್ಯ, ನಾಟಕ ಇತ್ಯಾದಿ ಮನೋರಂಜನೆಗಳೊಂದಿಗೆ ರಾತ್ರಿ ಸುಮಾರು ೧೦ ಗಂಟೆವರೆಗೆ ಕಾರ್ಯಕ್ರಮಗಳು ನಡೆಯುತ್ತವೆ. ಅನಂತರ ರಥೋತ್ಸವಕ್ಕೆ ಸಿದ್ಧತೆಗಳಾಗುತ್ತವೆ. ಸ್ವಾಮಿಯ ಪೀಠವನ್ನು ಅನನ್ಯಭಕ್ತಿಯಿಂದ ಮಠಾಧಿಪತಿಗಳಾದ ಶ್ರೀ ಶ್ರೀ ಗಳವರ ಸಮುಖದಲ್ಲಿ ಹಿಡಿದು ತಂದು ಕೆರೆಏರಿಯ ಮೇಲೆ ಪಣ್ಣಿ ಕೊಂಡ ರಥದ ಮೇಲೆ ಸ್ಥಾಪಿಸುತ್ತಾರೆ. ಕೀಲುಕುದುರೆ, ಕರಗನೃತ್ಯ, ನಂದಿಧ್ವಜ ಇತ್ಯಾದಿ ಆಕರ್ಷಣೆಗಳಿರುತ್ತವೆ. ಉತ್ಸವದಲ್ಲಿ ರಥೋತ್ಸವ ರಾತ್ರಿಯೆಲ್ಲಾ ನಡೆದು ಮಾರನೆಯ ದಿನ ಬೆಳಗಿನ ಏಳು ಗಂಟೆ ಹೊತ್ತಿಗೆ ಮಠದ ಮುಂದಕ್ಕೆ ಹರಿದು ಬರುತ್ತದೆ. ಸ್ವಾಮಿಯನ್ನು ಗದ್ದುಗೆಯ ಗರ್ಭಗೃಹದಲ್ಲಿ ಸ್ಥಾಪಿಸುತ್ತಾರೆ. ಅಲ್ಲಿಗೆ ಜಾತ್ರೆ ಮುಗಿಯುತ್ತದೆ. ಇಷ್ಟೂ ಕಾರ್ಯಕ್ರಮ ಮಠದ ಶ್ರೀ ಶ್ರೀ ಗಳವರ ನೇತೃತ್ವದಲ್ಲಿ ನಡೆಯುತ್ತದೆ.

ಕುಪ್ಪೂರು ಗದ್ದಿಗೆ ಜಾತ್ರೆ ಒಂದೇ ದಿನದ ಜಾತ್ರೆಯಾದರೂ ವೈಭವದ ಜಾತ್ರೆ. ಶಿಷ್ಟ ಮತ್ತು ಜಾನಪದ ಎರಡೂ ಬಗೆಯ ಜಾತ್ರೆಗಳ ಸಂಗಮಸ್ಥಾನ, ಅಲ್ಲದೆ ಅದು ನಡೆಯುವುದು ಚಿಕ್ಕನಾಯಕನಹಳ್ಳಿ ಶ್ರೀ ಆಂಜನೇಯಸ್ವಾಮಿ ಜಾತ್ರೆಯಂತೆ ಕಾಲವಲ್ಲದ ಕಾಲದಲ್ಲಿ. ಎಲ್ಲಾ ಜಾತ್ರೆಗಳೂ ಸಾಧಾರಣವಾಗಿ ಸುಗ್ಗಿ ಆದಮೇಲೆ ಬೇಸಗೆಯ ಬಿಡುವಿನ ದಿನಗಳಲ್ಲಿ ನಡೆದರೆ ಇವು ಆಷಾಢದಲ್ಲಿ ಒಂದು, ಮಾರ್ಗಶಿರದಲ್ಲಿ ಮತ್ತೊಂದು ಹೀಗೆ ಅಕಾಲದಲ್ಲಿ ನಡೆಯುತ್ತವೆ.

ಯಳನಡು ಮತ್ತು ಗೋಡೇಕೆರೆ ದೊಡ್ಡಜಾತ್ರೆಗಳು ಹನ್ನೆರಡು ವರ್ಷಗಳಿಗೊಮ್ಮೆ ನಡೆಯುತ್ತವೆ. ಶೆಟ್ಟೀಕೆರೆ ಭೈರವೇಶ್ವರನ ಜಾತ್ರೆ, ಸಿದ್ಧರಾಮನಗರದ

(ವಡ್ಡರಹಳ್ಳಿ) ಗುಡ್ಡದ ಮೇಲಿನ ಹೆಂಜೇರಪ್ಪನ ಜಾತ್ರೆ. ಮತ್ತಿಘಟ್ಟದ ಪಾರ್ವತಮ್ಮನ ಜಾತ್ರೆ-ಇವು ಪ್ರತಿವರ್ಷವೂ ನಡೆಯುತ್ತವೆ. ಶೆಟ್ಟೀಕೆರೆ 'ಭೈರೇದೇವರ' ಪರಿಷೆಯನ್ನು ಬ್ರಾಹ್ಮಣರು ಮತ್ತು ಲಿಂಗಾಯಿತರು ಕೂಡಿ ಮಾಡುತ್ತಾರೆ. ಅದರಲ್ಲಿ ಬ್ರಾಹ್ಮಣರದೇ ಪ್ರಧಾನ ಪಾತ್ರ. ಇಡೀರಾತ್ರಿ ಭೈರವನನ್ನು ವರನನ್ನಾಗಿ ಮಾಡಿಕೊಂಡು ಹೆಣ್ಣೊಂದರೊಡನೆ ಪ್ರತಿವರ್ಷವೂ ಮದುವೆ ಮಾಡುತ್ತಾರೆ. ಅಂತಹ ಪುಣ್ಯಶಾಲಿ ಭೈರವ ! ಅನಂತರ ಓಕುಳಿಯೊಂದಿಗೆ ಮದುವೆ–ಅಲ್ಲ–ಜಾತ್ರೆ ಮುಗಿಸುತ್ತಾರೆ. ಮತ್ತಿಘಟ್ಟದ ಪಾರ್ವತಮ್ಮನ ಜಾತ್ರೆಗೆ ದನಗಳೂ ಸೇರುತ್ತವೆ. ಇವೆಲ್ಲಾ ಸಾಂಪ್ರದಾಯಿಕ ಜಾತ್ರೆಗಳು.

**ಜಾನಪದ ಜಾತ್ರೆಗಳು :**

ಚಿಕ್ಕನಾಯಕನಹಳ್ಳಿಗೆ ನೈರುತ್ಯದಲ್ಲಿ ಸುಮಾರು ೧೦ ಕಿ. ಮೀ. ದೂರದಲ್ಲಿದೆ ಸಾಸಲು. ಇದು ಶೆಟ್ಟೀಕೆರೆ ಹೋಬಳಿಗೆ ಸೇರಿದ ಗ್ರಾಮ. ಇಲ್ಲಿನ ಗ್ರಾಮದೇವತೆ ಬನಶಂಕರಿ (ಬನದಮ್ಮ ಅಥವಾ ಬಂದಮ್ಮ), ಈ ಶಕ್ತಿ ದೇವತೆಯ ಜೊತೆಯಲ್ಲಿ ಶ್ರೀ ಗುರುಮರುಳುಸಿದ್ಧೇಶ್ವರನೂ ಇದ್ದಾನೆ ಈ ಅಮ್ಮನ ಜಾತ್ರೆ ವೈಶಿಷ್ಟ್ಯದಿಂದ ಕೂಡಿದ್ದು ಸಾಧಾರಣವಾಗಿ ಜ್ಯೇಷ್ಠ ಶುದ್ಧ ಪೌರ್ಣಮಿಯ ದಿನ ಶೆಟ್ಟೀಕೆರೆಯ ಕರಗದ ದಿನ ನಡೆಯುವುದು ರೂಢಿ. ಆದರೆ ಜಾತ್ರೆ ಅಕಾಲಿಕ. ಅಂದರೆ ಪ್ರತಿವರ್ಷವೂ ನಡೆಯುವುದಿಲ್ಲ. ಮೂರುವರ್ಷಕ್ಕೊ, ಆರುವರ್ಷಕ್ಕೊ ಒಮ್ಮೆ ನಡೆಯುತ್ತದೆ.

ಸಾಸಲು ಬನದಮ್ಮನ ಜಾತ್ರೆ ಆರಂಭವಾಗುವುದು ಶನಿವಾರದಿಂದ. ಶನಿವಾರ ರಾತ್ರಿ ಆಂಜನೇಯನ ಪರು ಮಾಡುತ್ತಾರೆ. ಕರಡಿ, ಸಣ್ಣ ಮೇಳ ಬಡಿದುಕೊಂಡು ಊರಾಚೆ ಇರುವ ಬನಶಂಕರಿ ದೇವಸ್ಥಾನದ ಮುಂಭಾಗದ ಹೊಲಮಾಳದಲ್ಲಿ "ಬಿಲ್‌ಗೂಡು"[3] ಹೂಡುತ್ತಾರೆ. ಸಾಸಲಿನಲ್ಲಿರುವ ದಾಸಯ್ಯಗಳ ಕೆಲಸ ಅದು. ಅಲ್ಲಿ ಎಡೆ ಬಿಡಾರ ಆದಮೇಲೆ ಆಂಜನೇಯನ ದೇವಾಲಯದ ಪಾಳಿಯಲ್ಲಿ ಅಕ್ಕಸಾಲಿಗರು ಸೇರಿ ಅಡುಗೆಮಾಡಿ, ಆಂಜನೇಯನಿಗೆ ಕುಂಕುಮ ಸೇವೆ ಸಲ್ಲಿಸಿ ಪೂಜಾದಿಗಳ ನಂತರ ಪರು ನಡೆಸುತ್ತಾರೆ. ಭಾನುವಾರ ಮೊದಲ ಉತ್ಸವ. ಮರುಳುಸಿದ್ಧ ಸ್ವಾಮಿಯನ್ನು ಪಲ್ಲಕ್ಕಿಯಲ್ಲೂ, ಬನಶಂಕರಮ್ಮನನ್ನು ಅಡ್ಡಣಿಗೆಯಲ್ಲೂ ಊರೊಳಗಿನ ದೇವಸ್ಥಾನದಿಂದ ಉತ್ಸವದಲ್ಲಿ ಹೊರಡಿಸಿಕೊಂಡು ಊರಮುಂದಣ ಅರಳೀಕಟ್ಟೆಯವರೆಗೂ ಕರೆತಂದು ಮತ್ತೆ ಗುಡಿದುಂಬಿಸುತ್ತಾರೆ. ಸೋಮವಾರ ಎರಡನೆಯ ಉತ್ಸವ. ಜಗನ್ಮಾತೆ ಬನಶಂಕರಿಯನ್ನು ಮರದಿಂದ ಮಾಡಿದ ಬಿಳಿಕುದುರೆಯ ಮೇಲೂ, ಸ್ವಾಮಿಯನ್ನು ಮರದಿಂದ ಮಾಡಿದ ಬಿಳಿ ಬಸವನ ಮೇಲೂ ಕೂರಿಸಿ ಉತ್ಸವ ಮಾಡುತ್ತಾರೆ.

———

3 ಬಿಲ್ಲಿನ ಆಕಾರದಲ್ಲಿ ಮೂರು ಕಡ್ಡಿಗಳನ್ನು ನೆಲದಲ್ಲಿ ನೆಡುತ್ತಾರೆ. ಮಧ್ಯೆ ದೀಪ ಹಚ್ಚಿಸಿ ಪೂಜೆ ಮಾಡುತ್ತಾರೆ. ಅದೇ ಬಿಲ್‌ಗೂಡು. ಅದನ್ನು ಪರಿಸೇವೆ ಎಂತಲೂ ಕರೆಯುತ್ತಾರೆ.

ಮಂಗಳವಾರದ್ದೇ ವಿಶೇಷ. ಅಂದು ಕೆಂಡ. ಊರ ಮುಂದಿನ ಅರಳೀಕಟ್ಟೆ ಬಳಿ ನಡೆಯುತ್ತದೆ. ಸುಮಾರು ೪-೫ ಗಾಡಿಗಳಷ್ಟು ಮಾವಿನಮರದ ತುಂಡುಗಳನ್ನು ತಂದು ರಾಶಿ ಹಾಕುತ್ತಾರೆ. ಅಂದು ಮುಂಜಾನೆ ವೀರಶೈವ ಮುತ್ತೈದೆಯರು ದೊಡ್ಡ ದೇವಸ್ಥಾನದ ತೋಪಿನಲ್ಲಿರುವ ಗಂಗಮ್ಮನ ಬಾವಿಯಲ್ಲಿ ಗಂಗಾಪೂಜೆ ಮಾಡಿಕೊಂಡು ಬರುತ್ತಾರೆ. ಒಟ್ಟಿದ್ದ ಸೌದೆಗೆ ಪೂಜಾರಿ ಪೂಜೆ ಮಾಡಿ, ತಂದ ತೀರ್ಥವನ್ನು ಪ್ರೋಕ್ಷಿಸುತ್ತಾನೆ. ಊರಗೌಡ ಕರ್ಪೂರದ ಹಲಗೆಯನ್ನು ಹತ್ತಿಸಿ ಸೌದೆಗೆ ಅಗ್ನಿಸ್ಪರ್ಶ ಮಾಡಿಸುತ್ತಾನೆ. ಮಧ್ಯಾಹ್ನ ದೇವರು ಹೊರಟು ಊರಾಚೆಯ ದೊಡ್ಡದೇವಸ್ಥಾನದ ಬಳಿಯ ಅಮ್ಮನ ಕಟ್ಟೆಯಲ್ಲಿ ಗಂಗಾಸ್ನಾನ ಮಾಡಿಕೊಂಡು ಬರುವಷ್ಟರಹೊತ್ತಿಗೆ ಕೆಂಡ ಸಿದ್ಧವಾಗಿರುತ್ತದೆ. ದೇವರುಗಳು ಊರೊಳಕ್ಕೆ ಹೋಗಿ 'ಅಯ್ಯಗಳ' ಮನೆಯಿಂದ 'ಗುರು ಕಲಶ' ಹೊರಡಿಸಿಕೊಂಡು ನೇರವಾಗಿ ಕೆಂಡಕ್ಕೆ ಬರುತ್ತವೆ. ಸುಮಾರು ಒಂದೂವರೆ ಅಡಿ ಎತ್ತರ, ಹತ್ತು ಅಡಿ ಅಗಲ, ಇಪ್ಪತ್ತು ಅಡಿ ಉದ್ದವಿರುವ ಕೆಂಡದ ರಾಶಿಯನ್ನು ನಗಾರಿ ಹೊತ್ತ ಬಸವನಿಂದ ಹಿಡಿದು, ಎಲ್ಲ ಉತ್ಸವ ಪರಿಕರಗಳೂ ದೇವರ ಜೊತೆಯಲ್ಲಿ ಹಾಯ್ದು ಹೋಗುತ್ತವೆ. ಕೆಂಡ ಮುಗಿದ ಮೇಲೆ ಕೆಂಡದ ನೀರು[4] ಹಾಕಿಸಿಕೊಳ್ಳುತ್ತಾರೆ ಹಲವರು ಹೆಂಗಸರು. ಊರಿನ ಎಲ್ಲರ ಮನೆಗಳಲ್ಲೂ ಹಬ್ಬದೂಟ ನೆಂಟರಿಷ್ಟರಿಗೆ. ಅಂದು ರಾತ್ರಿಯವರೆಗೆ ಬಿಡುವು.

ರಾತ್ರಿ ಸುಮಾರು ೧೦ ಗಂಟೆಗೆ ಆರಂಭವಾಗುತ್ತೆ ಮಹೋತ್ಸವ. ಚಿಕ್ಕನಾಯಕನಹಳ್ಳಿ, ಹಿಂಡಿಸ್ಕೆರೆ, ಕೋಟನಾಯ್ಕನಪಳ್ಳಿ, ಅಣ್ಣಾಪುರ, ಹಳೇಪಾಳ್ಯ, ಬೆಂಗಳೂರು ಮುಂತಾದ ಕಡೆಗಳಿಂದ ನೂರಾರು ಜನ ದೇವಾಂಗದವರು ಬರುತ್ತಾರೆ. ಇವರೆಲ್ಲರಿಗೂ ಜಾತ್ರೆಗೆ ಮುಂಚೆಯೇ ವೀಸಲು ಹೋಗಿರುತ್ತದೆ. ಅವರು ಆ ದಿನ ಸಂಜೆ ನೇರವಾಗಿ ಕತ್ತಿ ಮೊದಲಾದ ಹಲವು ಆಯುಧಗಳೊಡನೆ ಸಾಸಲಿಗೆ ಬರುತ್ತಾರೆ. ವಾದ್ಯದೊಂದಿಗೆ ಅವರನ್ನು ರಾತ್ರಿ ಹತ್ತು ಗಂಟೆಗೆ ಸ್ನಾನಕ್ಕಾಗಿ ಊರಗೌಡ ಮತ್ತು ಜನ ಕರೆದೊಯ್ದು, ಊರ ಮುಂದಿರುವ ಕಟ್ಟೆಯಲ್ಲಿ ಸ್ನಾನ ಮಾಡಿಸುತ್ತಾರೆ. ಸಣ್ಣ ಪಂಚೆಯೊಂದನ್ನು ಉಟ್ಟು ಆ ಒದ್ದೆಯಲ್ಲೇ ಕೆರೆ ಏರಿ ಮೇಲೆ ನಿಂತ ಆ ದೇವಾಂಗದವರಿಗೆ ತೊಳೆದು, ಪೂಜಿಸಿದ ಕತ್ತಿಗಳನ್ನು ಕೊಡುತ್ತಾರೆ. ಹಣೆಗೆ ಕುಂಕುಮವಿಟ್ಟು, ಮೈಗೆ 'ಅಮ್ಮನ ಬಂಡಾರ' ಅಂದರೆ ಹರಿಶಿಣವನ್ನು ಹಚ್ಚುತ್ತಾರೆ. ಕೂಡಲೇ ಅವರಿಗೆ ಆವೇಶ ಬರುತ್ತದೆ. ಅವರನ್ನು ವೀರಮಕ್ಕಳು (ಈರಮಕ್ಕಳು) ಎಂದು ಕರೆಯುತ್ತಾರೆ. ಈ

---

4 ಹರಕೆ ಹೊತ್ತ ಹೆಂಗಸು ಕುಕ್ಕರುಗಾಲಿನಲ್ಲಿ ಕೆಂಡದ ಸ್ಥಳದಿಂದ ಸ್ವಲ್ಪ ದೂರದಲ್ಲಿ ಕುಳಿತುಕೊಳ್ಳುತ್ತಾಳೆ. ಅವಳ ಬಂಧುಗಳು ಅವಳ ತಲೆಯ ಮೇಲೆ ರಾಶಿಯಿಂದ ಕೆಂಡವನ್ನು ಕೈಬಟ್ಟಲಿನಲ್ಲಿ ಮೊಗೆದು ತಂದು ಹೆಂಗಸಿನ ತಲೆಮೇಲೆ ಇಟ್ಟಿರುವ ಬಾಳೆಎಲೆ ಮೇಲೆ ಸುರಿಯುತ್ತಾರೆ. ಕೂಡಲೇ ಬೇರೆಯವರು ಒಂದು ಬಿಂದಿಗೆ ತಣ್ಣೀರು ಸುರಿಯುತ್ತಾರೆ. ಇದು ಕೆಂಡದ ನೀರು.

ವೀರಮಕ್ಕಳ ಮುಖಂಡನೊಬ್ಬ ದೇವಿಯನ್ನು ಕುರಿತು "ಖಂಡುಗ[5]" ಹೇಳುತ್ತಾನೆ. ಅವನ ಪ್ರತಿ ಹೊಗಳಿಕೆಗೂ ಖಡ್ಗ ಹಿಡಿದ ವೀರಮಕ್ಕಳು 'ಹೋ ! ಹೋ !' ಎಂದು ಸೊಲ್ಲು ಕೂಡಿಸುತ್ತಾರೆ ; ಅನಂತರ ಖಡ್ಗ ಹಿಡಿದು ಕುಣಿದು ಕುಪ್ಪಳಿಸುತ್ತಾ ಊರೊಳಕ್ಕೆ ದೇವಾಲಯದ ಕಡೆಗೆ ಧಾವಿಸುತ್ತಾರೆ. ದೇವಾಲಯದ ಮುಂದೆ ಎಲ್ಲರೂ ಸೇರಯುತ್ತಾರೆ. ಆಗಿನ ಅವರ ಆರ್ಭಟ ತುಂಬಾ ರೋಮಾಂಚಕಾರಿಯಾಗಿರುತ್ತದೆ. ನೋಡುವವರೆಲ್ಲರಲ್ಲೂ ಸ್ಫೂರ್ತಿ ತುಂಬಿ ಆವೇಶ ತರುತ್ತಿರುತ್ತಾರೆ. ರಣವಾದ್ಯಗಳು ಮೊಳಗುತ್ತವೆ. ಅದನ್ನು 'ದುರ್ತ ಹಾಕುವುದು[6]' ಎನ್ನುತ್ತಾರೆ. ದೇವರು ಹೊರಡುತ್ತವೆ : ಅಡ್ಡಣಿಗೆಯಲ್ಲಿ ಬನಶಂಕರಿ, ಪಲ್ಲಕ್ಕಿಯಲ್ಲಿ ಮರುಳುಸಿದ್ಧೇಶ್ವರ. ಅಮ್ಮನದೇ ಪ್ರಧಾನ ಪಾತ್ರ ಅಲ್ಲಿ. ಸ್ವಾಮಿ ಎಲ್ಲೋ ಒಂದು ಮೂಲೆಯಲ್ಲಿ. ಅಮ್ಮನನ್ನು ನಾಲ್ಕು ಜನ ಹೊತ್ತಿರುತ್ತಾರೆ. ವೀರಮಕ್ಕಳು ವೀರಾವೇಶದಿಂದ ನರ್ತಿಸುತ್ತಾ ಖಡ್ಗಗಳಿಂದ ಮೈ ಮೇಲೆ ಹೊಡೆದುಕೊಳ್ಳುತ್ತಾರೆ. ಕತ್ತರಿಯಂತೆ ಎರಡು ಕತ್ತಿಗಳನ್ನು ಮಾಡಿಕೊಂಡು ಕುತ್ತಿಗೆಗಳನ್ನು ಕೊಯ್ದುಕೊಳ್ಳುತ್ತಾರೆ. ಅದನ್ನು 'ಈರಿಕೆ' ಮಾಡಿಕೊಳ್ಳುವುದು ಎನ್ನುತ್ತಾರೆ. ವೀರಮಕ್ಕಳ ಕುಣಿತ ಆರ್ಭಟಗಳಿಂದ ಅಮ್ಮನಿಗೆ ಎಣೆ ಇಲ್ಲದ ಸಂತಸ. ಒಂದೆ ಮುಂದೆ ಅಡ್ಡಣಿಗೆ ಹೊತ್ತವರನ್ನು ಎಳೆದಾಡುತ್ತಾಳೆ. ವೀರಮಕ್ಕಳಿಗೂ ಪ್ರಚೋದನೆ ಕೊಡುತ್ತಾಳೆ, ವೀರಮಕ್ಕಳು ವೈಮರೆತು ಕೇಕೆ ಹಾಕುತ್ತಾ ಕುಣಿಯುತ್ತಾರೆ. ಇಂತಹ ಅದ್ಭುತ ನರ್ತನದೊಡನೆ ದೇವರು ಊರ ಮುಂದಿನ ಅರಳೀಕಟ್ಟೆ ಬಳಿ ಬರಲು ಸುಮಾರು ೨–೩ ಗಂಟೆಗಳ ಕಾಲ ಬೇಕಾಗುತ್ತದೆ. ಅಲ್ಲಿ ಕಟ್ಟಿ ನಿಲ್ಲಿಸಿದ ಸಣ್ಣ ತೇರಿನ ಮೇಲೆ ದೇವರುಗಳನ್ನು ಕೂರಿಸುತ್ತಾರೆ. ಅಲ್ಲಿಗೆ ವೀರಮಕ್ಕಳ (ದೇವಾಂಗದವರ) ಕೆಲಸ ಮುಗಿಯುತ್ತದೆ. ಅವರು ವಿಸರ್ಜಿತರಾಗುತ್ತಾರೆ. ಮುಂದೆ ಬಲಿಗೆ ಸಿದ್ಧರಾಗುತ್ತಾರೆ ಊರ ಹೊರಗಿನ ದೇವಾಲಯದ ಬಳಿ.

ಹೊರಗಿರುವ ದೇವಾಲಯ ಬನಶಂಕರಿಯ ಶಿಲಾಮೂರ್ತಿ ಇರುವ ಸ್ಥಳ. ದೇವರ ಹೂವಿನ ತೇರು ಅಲ್ಲಿಗೆ ಬರುವ ಹೊತ್ತು ಸುಮಾರು ಸರಿರಾತ್ರಿ ಮೀರಿರುತ್ತದೆ. ಊರ ಹೊರಗಿನ ದೊಡ್ಡ ದೇವಸ್ಥಾನದ ಮುಂದೆ ಅಷ್ಟು ಹೊತ್ತಿನಲ್ಲಿ ನಡೆಯುವುದೇ ಮಹತ್ವದ ಕಾರ್ಯ. ಅದೇ ಬಲಿ. ಜನ ಕಿಕ್ಕಿರಿದು ನೆರೆದಿರುತ್ತಾರೆ ತೇರುಬೀದಿಯಲ್ಲಿ. ಅಲ್ಲಿಯೇ ನಿಂತಿರುತ್ತದೆ ಅರಳೀಕಟ್ಟೆ ಬಳಿಯಿಂದ ಹರಿದು ಬಂದ ಹೂವಿನ ತೇರು.

---

5 ಖಂಡುಗ ಅಥವಾ ಖಡ್ಗ ಹೇಳುವುದು ಎಂದರೆ ಚಂಡಿ–ಚಾಮುಂಡಿ–ಮಹಾಕಾಳಿ ಎಂದು ಆದಿಶಕ್ತಿಯ ಸಹಸ್ರ ನಾಮಗಳನ್ನು ಉಚ್ಚರಿಸುವುದು. ಪ್ರತಿ ಉಚ್ಚಾರಕ್ಕೂ ಹಿಮ್ಮೇಳದವರು ಹೋ ಹೋ ಎಂದು ಸೊಲ್ಲು ಕೂಡಿಸುತ್ತಾರೆ.

6 'ತುರ್ತು' ಪದವೇ 'ದುರ್ತ' ಆಗಿರಬಹುದು. ಕರಡಿ, ಸಣ್ಣಮೇಳ, ದಿಂಬು ವಾದ್ಯಗಳನ್ನು ತುರ್ತು ಗತಿಯಲ್ಲಿ ಅಂದರೆ ಬಹಳ ಗಡುಸಾಗಿ, ಬೇಗ ಬೇಗ ಬಾರಿಸುತ್ತಾರೆ. ಓಲಗದವರು 'ಊಊ' ಎಂಬಷ್ಟೇ ಸ್ವರ ಹಿಡಿದು ಜೋರಾಗಿ ನುಡಿಸುತ್ತಿರುತ್ತಾರೆ.

ಬಲಿಗೆ ಸಿದ್ಧತೆಗಳಾಗುತ್ತವೆ. ಪೂರ್ವದಿಕ್ಕಿನ ಗೊಲ್ಲರಹಟ್ಟಿಯಿಂದ ಕುರಿ ರೊಪ್ಪದಲ್ಲಿದ್ದ ಮೀಸಲು ಕುರಿಯೊಂದನ್ನು ಹೊತ್ತು ತರುತ್ತಾರೆ ಪತ್ತು ಹಿಡಿದುಕೊಂಡು ಹೋಗಿ ನಾಲ್ಕು ಜನ. ಊರೊಳಗೆ ಪೂಜಾರರ ಮನೆಯಲ್ಲಿ ಬಲಿ ಅನ್ನ ಸಿದ್ಧವಾಗಿರುತ್ತೆ. ಅದನ್ನು ಬೆಳಗ್ಗೆ ಗಂಗಾ ತಂದಾಗಲೇ ಅದೇ ಗಂಗೆಯಲ್ಲಿ ಹೊಸ ಗುಡಾಣದಲ್ಲಿ ಅಕ್ಕಿ ನೀರು ಬೆರೆಸಿ, ಬಾಯಿಗೆ ಬಟ್ಟೆ ಕಟ್ಟಿಕೊಂಡು, ತುಂಬು ಮಡಿಯಿಂದಲೇ, ಒಲೆಹತ್ತಿಸಿ, ಬಾಗಿಲಿಗೆ ಬೀಗ ಹಾಕಿಕೊಂಡು ಬಂದಿರುತ್ತಾರೆ. ಅದು ಬೇದು ಅನ್ನವಾಗಿರುತ್ತೆ. ಅದನ್ನು ಆ ನಿಶೆಯಲ್ಲಿ ಪೂಜಾರಿ ಮತ್ತು ಗೌಡ ಹೊತ್ತು ತರುತ್ತಾರೆ. ಇವರು ಬಲಿ ಅನ್ನ ತರುವುದಕ್ಕೂ ಗೊಲ್ಲರಹಟ್ಟಿಯಿಂದ ಕುರಿ ಬರುವುದಕ್ಕೂ ಸರಿಹೋಗುತ್ತದೆ. ಅಷ್ಟರಲ್ಲಿ ಆ ಕಾರ್ಯಕ್ಕಾಗಿಯೇ ತಲೆತಲಾಂತರದಿಂದ ಬಂದ ಮನೆತನದ ಐದು ಜನ ದೇವಾಂಗದವರು ಬಲಿಗೆ ಹೊರಡಲು ಸಿದ್ಧರಾಗುತ್ತಾರೆ. ವಾದ್ಯ ಮೇಳಗಳೊಡನೆ ದೇವಸ್ಥಾನದ ಹಿಂದಿರುವ ಅಮ್ಮನ ಕಟ್ಟೆಯಲ್ಲಿ ಮುಳುಗಿ ಸ್ನಾನಮಾಡಿ ಮಡಿ ಜೋಟಾ ಪಂಚೆಯನ್ನು ಮಾತ್ರ ಉಟ್ಟುಕೊಂಡು 'ಹಾ! ಹಾ!' ಎಂದು ಕೂಗುತ್ತಾ ಆವೇಶದಿಂದ ಆರ್ಭಟಿಸುತ್ತಾ ದೇವಾಲಯವನ್ನು ಪ್ರವೇಶಿಸುತ್ತಾರೆ. ಮಹಾಮಂಗಳಾರತಿಯಾಗುತ್ತದೆ. ಆ ಐವರಿಗೂ ಆಗ ಪ್ರಜ್ಞೆ ಇರುವುದಿಲ್ಲ. ಅವರಲ್ಲಿ ಒಬ್ಬನ ಕೈಗೆ ಗಂಟೆ, ಮತ್ತೊಬ್ಬನ ಕೈಗೆ ಒಂದು ಕತ್ತಿ ಕಟ್ಟುತ್ತಾರೆ, ಮೂರನೆಯವನ ಕೈಗೆ ಧಗಧಗಿ ಉರಿಯುತ್ತಿರುವ ಎರಡು ಪತ್ತು (ದೊಂದಿಗಳು) ಕೊಡುತ್ತಾರೆ. ನಾಲ್ಕನೆಯವನು ಬಲಿ ಅನ್ನದ ಮಡಕೆ ಹೊರುವವನು, ಐದನೆಯವನು ಬಲಿ ಅನ್ನ ಎಸೆಯುವವನು. ಇವರು ಐವರೂ ಬಿರುಗಾಳಿಯಂತೆ ಭೋರಿಡುತ್ತಾ ದೇವಸ್ಥಾನದ ಆಚೆ ಈಶಾನ್ಯ ಮೂಲೆಯಲ್ಲಿ ಕುರಿ ಇರುವ ಬಳಿಗೆ ಬರುತ್ತಾರೆ. ಬಲಿ ಅನ್ನವನ್ನು ದೊಡ್ಡ ಬಟ್ಟೆಯ ಮೇಲೆ ಸುರಿದಿರುತ್ತಾರೆ. ಕುರಿಗೆ ಪೂಜೆ ಆಗುತ್ತೆ ; ಅದರ ಬಲಿಯೂ ಆಗುತ್ತೆ. ಅದರ ನೆತ್ತರಿನಿಂದ ನಾಂದ ಅನ್ನವನ್ನು ಮಡಕೆಗೆ ತುಂಬುತ್ತಾರೆ. ನಾಲ್ಕನೆಯ ವೀರಕುಮಾರ ಅವನ್ನು ಹೊರುತ್ತಾನೆ. ಕೂಡಲೇ ಐವರೂ ಪೂರ್ವಾಭಿಮುಖವಾಗಿ ಪೆಮ್ಮಲು ದೇವನಹಳ್ಳಿ ಕಡೆಗೆ ಹೊರಟುಹೋಗುತ್ತಾರೆ. ಅವರು ಎಷ್ಟು ದೂರ, ಎಲ್ಲಿಗೆ ಹೋಗುತ್ತಾರೆ ಎಷ್ಟುಕಾಲ ಜೊತೆಯಲ್ಲಿದ್ದರು ಯಾವುದೂ ಗೊತ್ತಿಲ್ಲ. ಆದರೆ ದೇವಿ ಬಿಳೀ ಕುದುರೆ ಏರಿ ಅವರನ್ನು ನಡೆಸುತ್ತಿರುತ್ತಾಳಂತೆ. ಅವರು ಲೋಕ ಶಾಂತಿಗಾಗಿ ಆ ಬಲಿಯನ್ನು ಆಕಾಶಕ್ಕೆ ಎಸೆಯುತ್ತಿರುತ್ತಾರಂತೆ. ಅವರು ಎಸೆದ ಅನ್ನ ದಾರಿಯಲ್ಲಿ ಸೂರೆಯಾಗಿರುವುದಿಲ್ಲ. ಸೂರೆಯಾಗಿದ್ದರೆ ಆ ವರ್ಷ ಬಲಿ ಚೆನ್ನಾಗಿ ನಡೆದಿಲ್ಲ ಎಂಬ ಭಾವನೆ. ಈ ಬಲಿ ಮುಗಿಸಿಕೊಂಡು ಅವರು ಹಿಂತಿರುಗಿ ಬರುವುದು ಬೆಳಗಿನ ಜಾವದಲ್ಲಿ. ಹೋಗುವಾಗ ಒಟ್ಟಾಗಿ ಹೋಗಿರುತ್ತಾರೆ, ಆದರೆ ಬರುವಾಗ ಬೇರೆ ಬೇರೆಯಾಗಿ ಆಗೊಬ್ಬ ಈಗೊಬ್ಬ ಬರುತ್ತಾರೆ.

ಬಲಿಯವರು ಬರುವವರೆಗೂ ದೇವಸ್ಥಾನದ ಮುಂದೆ ಜನ ಸುಮ್ಮನೆ ಕುಳಿತಿರುವುದಿಲ್ಲ. ವೀರ ಮಕ್ಕಳ ಅದ್ಭುತ ನರ್ತನ ನಡೆಯುತ್ತಿರುತ್ತದೆ. ದುರ್ತವಾದ್ಯ ಮೊಳಗು

ತ್ತಿರುತ್ತದೆ. ಅವರ ನರ್ತನ, ಈರಿಕೆ ರಣವಾದ್ಯಗಳ ಮೊಳಗುವಿಕೆ ಇವು ಇಲ್ಲದಿದ್ದರೆ ಬಲಿಗೆ ಹೋದವರು ಬರುವುದೇ ಇಲ್ಲವೆಂಬ ನಂಬಿಕೆ ಇದೆ. ಇವರ ಕೂಗು ಅವರಿಗೆ ಮಾರ್ಗದರ್ಶನವಾಗುತ್ತದೆ ಎಂಬ ಭಾವನೆ. ಅದ್ದರಿಂದ ಈರಿಕೆ ಮಾಡಿಕೊಂಡು ಕುಣಿಯುತ್ತಿರುತ್ತಾರೆ ನೂರಾರು ಜನ. ಆ ವೇಳೆಯಲ್ಲಿ ಪಲವು ಬೆರಗು ಗೊಳಿಸುವ ಕಾರ್ಯಗಳು ನಡೆಯುತ್ತವೆ. ಗಂಡಸ್ಕರ್ತಿ ಹಾಕ್ತಾರೆ: ಅಂದರೆ ಎರಡೆರಡು ಕತ್ತಿಗಳನ್ನು ಕತ್ತರಿಯಾಕಾರದಲ್ಲಿ ಕಟ್ಟಿ ಸಾಲಾಗಿ ಹೂತಿರುತ್ತಾರೆ ಹೂವಿನ ತೇರಿನ ಮುಂದೆ. ಆ ಖಡ್ಗ ಶಯ್ಯೆಯ ಮೇಲೆ ಒಬ್ಬ ವೀರಕುಮಾರ ಬೋರಲಾಗಿ ಮಲಗುತ್ತಾನೆ. ಅವನ ಬೆನ್ನ ಮೇಲೆ ಬೇರೊಬ್ಬ ವೀರಕುಮಾರ ನಿಂತು 'ಖಂಡುಗ'' ಹೇಳಿಕೊಂಡು ನೂರಾರು ಜನ ವೀರ ಮಕ್ಕಳ ಜೊತೆಯಲ್ಲಿ 'ಈರಿಕೆ' ಮಾಡಿಕೊಳ್ಳುತ್ತಾನೆ.

ಇದಾದ ಮೇಲೆ ದೇವಸ್ಥಾನದಲ್ಲಿ ಗರ್ಭಗುಡಿಯ ಮುಂದೆ, ಮತ್ತೊಂದು ಪವಾಡ ನಡೆಯುತ್ತದೆ. ಅದೇ ''ಶಸ್ತ್ರ ಮಂಗಳಾರತಿ'' ಆ ಕಾರ್ಯಕ್ಕೆಂದೇ ಬಂದ ಮನೆತನದ ಒಬ್ಬ ದೇವಾಂಗ ರಣವಾದ್ಯಗಳೊಡನೆ ಅಮ್ಮನ ಕಟ್ಟೆಗೆ ಹೋಗಿ ಮುಳುಗಿ ಮಡಿಯುಟ್ಟು ಬರುತ್ತಾನೆ. ಅವನಿಗೆ ಆಗ ಆವೇಶ ಬಂದಿರುತ್ತದೆ. ಬಂದವನೇ ಗರ್ಭಗುಡಿಯ ಮುಂದೆ ವೀರಮಂಡಿಯೂರಿ ಕುಳಿತುಕೊಳ್ಳುತ್ತಾನೆ. ಅವನ ಸುತ್ತ ಇತರ ದೇವಾಂಗ ವೀರರು 'ಕೊಡವ್ವಾ ಕೊಡು, ಕೊಡು' ಎಂದು ಬೇಡಿಕೊಳ್ಳುತ್ತಿರುತ್ತಾರೆ. ಮಹಾಮಂಗಳಾರತಿ ಆಗಿ, ಅವನ ಕೊರಳಿಗೆ ದೇವಿ ಪಾದದ ಮೇಲಿನ ಹಾರ ಹಾಕಿದ ಸ್ವಲ್ಪ ಹೊತ್ತಿನಲ್ಲಿ ಅವನ ನಾಲಗೆ ಸುಮಾರು ಅರ್ಧ ಅಡಿಯಷ್ಟು ಹೊರಕ್ಕೆ ಬರುತ್ತದೆ ಆ ನಾಲಗೆಗೆ ಊರಗೌಡ ತ್ರಿಶೂಲಾಕಾರದ ಬೆಳ್ಳಿಯ ಶಸ್ತ್ರವನ್ನು ಚುಚ್ಚುತ್ತಾನೆ. ಆ ತ್ರಿಶೂಲದ ತುದಿಗಳಿಗೆ ತುಪ್ಪದ ಬತ್ತಿ ಸುತ್ತಿರುತ್ತಾರೆ. ಅದನ್ನು ಆಗ ಹತ್ತಿಸುತ್ತಾರೆ. ಪೂಜಾರಿ ಗಂಟಾನಾದ ಮಾಡುತ್ತಾನೆ. ಇರಿದ ನಾಲಗೆಯ ವೀರ ಕುಮಾರನ ಶಸ್ತ್ರ ಮಂಗಳಾರತಿ ನಡೆಯುತ್ತದೆ. ಅಲ್ಲಿಂದ ನೇರವಾಗಿ ಆತನನ್ನು ದೇವಾಲಯದ ಹೊರಗಡೆ ತೇರು ಬೀದಿಯ ಹೂವಿನ ತೇರಿನ ಬಳಿಗೆ ಗೌಡ ಕರೆದೊಯ್ಯುತ್ತಾನೆ. ಇರಿದ ನಾಲಗೆಯ ಶಸ್ತ್ರದೊಡನೆ ಅಲ್ಲಿ ದೇವರುಗಳಿಗೆ ಮತ್ತೆ ಶಸ್ತ್ರ ಮಂಗಳಾರತಿ ಆಗುತ್ತದೆ. ಅಲ್ಲಿಂದ ದೇವಸ್ಥಾನದೊಳಕ್ಕೆ ಬಂದು ಶಸ್ತ್ರ ವಿಸರ್ಜನೆ ಮಾಡುತ್ತಾರೆ. ಇಂಥ ಅದ್ಭುತ ಪವಾಡಗಳು ಮಾಹಾತ್ಮೆಗಳು ನಡೆಯುತ್ತವೆ.

ಆಗ ಬೆಳಗಿನ ಜಾವ ಐದು ಗಂಟೆ, ಬಲಿಗೆ ಹೋದವರು ಒಬ್ಬೊಬ್ಬರಾಗಿ ಬರುತ್ತಾರೆ. ಬಹು ದೂರದಲ್ಲೇ ಅವರ ಆಗಮನವನ್ನು ತಿಳಿಸಲು ಕೆಲವರು ನಿಯಮಿತರಾಗಿರುತ್ತಾರೆ. ಆಗ ಈಗ ಬರುವ ಪ್ರತಿಯೊಬ್ಬ ಬಲಿಯುವನೂ 'ಅಪ್ಪಾ ಅಪ್ಪಾ' ಎಂದು ಕೂಗಿಕೊಂಡೇ ಬರುತ್ತಿರುತ್ತಾನೆ ಉತ್ತರ ದಿಕ್ಕಿನಲ್ಲೇ ಎಲ್ಲರೂ ಬರುವುದು. ದೂರದಲ್ಲೇ ಅಲ್ಲಲ್ಲಿ ಕಾಯುತ್ತಿರುವ ಜನ ಕರ್ಪೂರ ಹತ್ತಿಸಿ ಬೆಳಕು ಮಾಡುತ್ತಾರೆ. ಆ ಬೆಳಕು ನೋಡಿ ಸಾಕಷ್ಟು ದೂರದಲ್ಲಿ ಕಾಯುತ್ತಿರುವ ಮತ್ತೊಬ್ಬ ತಾನೂ ಕರ್ಪೂರ ಹತ್ತಿಸಿ

ಮುಂದಿನವನಿಗೆ ಸೂಚನೆ ಕೊಡುತ್ತಾನೆ. ಈ ಬೆಳಕಿನ ಸಂಜ್ಞೆ ದೇವಸ್ಥಾನದ ಮುಂದೆ ಕಾಯುತ್ತಿರುವ ಹಿರಿಯರಿಗೆ ಬಲಿಯುವರು ಬರುತ್ತಿದ್ದಾರೆ ಎಂಬುದನ್ನು ಸೂಚಿಸುತ್ತದೆ. ಅವರ ಸ್ವಾಗತಕ್ಕೆ ಸಿದ್ಧತೆಗಳಾಗುತ್ತವೆ. ಜನ ದಾರಿ ಬಿಟ್ಟು ಇಕ್ಕೆಲದಲ್ಲೂ ಕಿಕ್ಕಿರಿದು ನಿಂತಿರುತ್ತಾರೆ ಕುತೂಹಲಿಗಳಾಗಿ. ಬರಲುತ್ತಲೇ ಬಂದ ಬಲಿಯುವನನ್ನು ಯಾರೂ ಮುಟ್ಟುವುದಿಲ್ಲ. ಅವನು ಉತ್ತರದ ಗಿಡ್ಡ ಬಾಗಿಲಲ್ಲಿ ಹಾಯ್ದು ದೇವಸ್ಥಾನದ ಮಹಾ ದ್ವಾರ ತಲುಪುತ್ತಾನೆ ಅಲ್ಲಿನವರೆಗೆ ಅವನನ್ನು ಯಾರು ಮುಟ್ಟಿರುವುದಿಲ್ಲ. ದ್ವಾರಕ್ಕೆ ಬಂದಕೂಡಲೇ ನಾಲ್ಕು ಜನ ಹಿಡಿದು ದೇವರಿಗೆ ಮಂಗಳಾರತಿ ಮಾಡಿ ಬಾಳೆಹಣ್ಣು, ಎಳನೀರು ಕೊಟ್ಟು ಒಂದಡೆ ಮಲಗಿಸುತ್ತಾರೆ. ಹೀಗೆ ಐವರಿಗೂ ಸತ್ಕಾರ. ಇಲ್ಲಿ ಒಂದು ವಿಶೇಷ ಎಂದರೆ ಕತ್ತಿಯುವನು ಕತ್ತಿಯನ್ನು ನೆಲದಲ್ಲಿ ಎಳೆದುಕೊಂಡು ಬಂದರೆ ಊರಿಗೆ, ದೇಶಕ್ಕೆ ಒಳ್ಳೆಯದು, ಹೆಗಲ ಮೇಲೆ ಹೊತ್ತುಕೊಂಡು ಬಂದರೆ ಕೇಡು ಎಂಬ ಭವಿಷ್ಯ.

ಇಲ್ಲಿಗೆ ಬಲಿ ಮುಗಿಯುತ್ತದೆ. ಬೆಳಕು ಹರಿಯುತ್ತೆ. ಬುಧವಾರ ಬೆಳಗ್ಗೆ ಏನೂ ಕಾರ್ಯಕ್ರಮಗಳಿಲ್ಲ. ಮತ್ತೆ ರಾತ್ರಿ ಊರಾಚೆಯ ದೇವಸ್ಥಾನದಿಂದ ಮರುಳು ಸಿದ್ಧೇಶ್ವರ ಸ್ವಾಮಿ ಒಂದನ್ನೇ ಅತ್ಯಂತ ಶೃಂಗಾರ ಪೂರ್ಣ ಹೂವಿನ ವನದಲ್ಲಿ ಊರ ಮುಂದಿನ ಅರಳೀಮರದವರೆಗೆ ಮಾತ್ರ ಕರೆತಂದು ಮತ್ತೆ ಊರಾಚೆಯ ದೇವಸ್ಥಾನಕ್ಕೆ ಕರೆದೊಯ್ಯುತ್ತಾರೆ.

ಗುರುವಾರ ಬೆಳಗ್ಗೆ ಆರು ಗಂಟೆಗೆ ತೇರು. ಬಹು ದೊಡ್ಡ ತೇರು. ಅಮ್ಮನ ಗುಡಿಯ ಮುಂದಿನ ಹಿಪ್ಪೆ ತೋಪಿನಲ್ಲಿ ಹರಿಯುತ್ತದೆ. ನೆಲೆನಿಂತ ಮೇಲೆ ಕೈಉಯ್ಯಾಲೆ ದೇವಸ್ಥಾನದ ಸುತ್ತ ಜನ ಕಿಕ್ಕಿರಿದಿರುತ್ತಾರೆ. ಹೆಂಗಸರು ಮಕ್ಕಳು ಪೌಳಿಮೇಲೆ ನಿಂತಿರು ತ್ತಾರೆ ಬನಶಂಕರಿಯ ಪೀಠವನ್ನು ಉಯ್ಯಾಲೆ ತೂಗಿ ಅಭ್ಯಾಸವಿರುವ ಇಬ್ಬರು ಹಿಡಿದು ತಮ್ಮ ತೋಳುಗಳನ್ನೇ ಉಯ್ಯಾಲೆ ಹಗ್ಗ ಮಾಡಿಕೊಂಡು ಹಿಂದೆ ಮುಂದೆ, ಮೇಲೆ ಕೆಳಗೆ ತೂಗುತ್ತಾರೆ. ಅದು ತುಂಬಾ ವೈಭವದ ಹಾಗೂ ರೋಮಾಂಚನಕಾರಿ ದೃಶ್ಯ. ದೇವಿ ಆಗ ಆನಂದದಿಂದ ನರ್ತಿಸುತ್ತಿರುತ್ತಾಳೆ. ವೀರ ಮಕ್ಕಳು ಅದರಲ್ಲಿ ಭಾಗವಹಿಸಿ ಈರಿಕೆ ಮಾಡಿಕೊಂಡು ಖಂಡುಗ ಹೇಳಿಕೊಂಡು ಕುಣಿಯುತ್ತಿರುತ್ತಾರೆ. ಜನ ಜಂಗುಳಿ ಯಲ್ಲಿ ನುಗ್ಗಿಕೊಂಡು ಉಯ್ಯಾಲೆ ದೇವಸ್ಥಾನದ ಸುತ್ತ ನಡೆಯುತ್ತದೆ. ಪೌಳಿಗಳ ಮೇಲೆ ನಿಂತಿರುವ ಸ್ತ್ರೀಯರು ಬಾಳೆಹಣ್ಣು, ವೀಳೆದೆಲೆಗಳನ್ನು ದೇವಿಯ ಮೇಲೆ ಎಸೆಯುತ್ತಾರೆ. ಪಕ್ಕದ ಒಂದು ಮೂಲೆಯಲ್ಲಿ ಸುಮ್ಮನೆ ಬರುತ್ತಿರುವ ಮರುಳುಸಿದ್ಧ ದೇವರ ಮೇಲೂ ಹಾಕುತ್ತಾರೆ. ಉಯ್ಯಾಲೆ ಮುಗಿದು ದೇವರುಗಳು ಗುಡಿದುಂಬುತ್ತವೆ.

ಅಂದು ಅಂದರೆ ಗುರುವಾರ ರಾತ್ರಿ ೯ ಗಂಟೆಯಿಂದ ಸಾಸಲು ಗೊಲ್ಲರ ಹಟ್ಟಿಯ ಆರತಿಗಳು ಬರಲಾರಂಭವಾಗುತ್ತವೆ. ಗೊಲ್ಲತಿಯರು ನಾನಾರೀತಿಯ ಹಸಿ ಅಕ್ಕಿ ಹಿಟ್ಟಿನ ಉಂಡೆಗಳನ್ನು ಮಾಡಿಕೊಂಡು, ಅವುಗಳ ಮೇಲೆ ತುಪ್ಪದ ಬತ್ತಿ ಹತ್ತಿಸಿಕೊಂಡು, ಅವುಗಳಿಗೆ ಹೂವಿನ ಕೋಲುಗಳನ್ನು ಮುಡಿಸಿಕೊಂಡು, ತಲೆ ಮೇಲೆ ಹೊತ್ತುಕೊಂಡು

ಬರುತ್ತಾರೆ. ಪಟ್ಟಿಯಿಂದ ದೇವಸ್ಥಾನಕ್ಕೆ ಸುಮಾರು ೨ ಕಿ. ಮೀ. ದೂರ. ಅಷ್ಟೂ ಉದ್ದದ ಹಾದಿಯಲ್ಲಿ ಈ ಆರತಿಗಳು ಮಿಣ ಮಿಣ ಮಿನುಗುತ್ತಿರುತ್ತವೆ. ನಕ್ಷತ್ರಗಳಂತೆ ಅದು ಕಣ್ಣಿಗೊಂದು ಹಬ್ಬ. ಆರತಿ ಆದ ಮೇಲೆ ಮಹಾಮಂಗಳಾರತಿ, ಫಲಾಹಾರ ಗಳಾಗುತ್ತವೆ. ದೇವರುಗಳು ಪುರ ಪ್ರವೇಶ ಮಾಡುತ್ತವೆ. ಮಡಿಲಅಕ್ಕಿ ಹಾಕಿ ಸ್ವಾಗತಿಸುತ್ತಾರೆ ಊರ ಜನ. ದೇವರುಗಳು ಗುಡಿದುಂಬಿದ ಮೇಲೆ ಜಾತ್ರೆ ಮುಗಿಯುತ್ತದೆ.

ಮತ್ತೊಂದು ವಿಶಿಷ್ಟ ಜನಪದ ಜಾತ್ರೆ ಶೆಟ್ಟೀಕೆರೆ ಕೆಂಪಮ್ಮನ ಪರಿಷೆ[7]. ಇದರಲ್ಲಿ "ಸಿಡಿ" ವಿಶೇಷ ಆಕರ್ಷಣೆ, ಸೋಮನ ಕುಣಿತ ಆಹ್ಲಾದಕರ.

ಶೆಟ್ಟೀಕೆರೆಗೆ ೨ ಕಿ, ಮೀ. ದೂರದಲ್ಲಿದೆ ಹೆಸರಳ್ಳಿ; ಹೆಸರಳ್ಳಿ ಲಕ್ಕವ್ವನ ಪರಿಷೆ ಸುತ್ತೆಲ್ಲ ಪ್ರಸಿದ್ಧ, ಕಾರಣ ಬಹು ವಿಚಿತ್ರ. ದೇವತೆಯ ಕಲಶ ಹೊರಟಾಗ ಗೊರವಯ್ಯ ಗಳು ಅವಾಚ್ಯ, ಅಶ್ಲೀಲ ಶಬ್ದಗಳನ್ನು ಬಳಸಿ ಬಯ್ದು ಕಲಷ ಮುಂದೆ ಬರುವಂತೆ ಮಾಡುವರು, ಬಯ್ಯದಿದ್ದರೆ ಬರುವುದೇ ಇಲ್ಲ. ಹೆಸರಳ್ಳಿ ಲಕ್ಕವ್ವ ವಿಜಯನಗರ ದಿಂದ ಬಂದು ಇಲ್ಲಿ ನೆಲೆಸಿದಳೆಂಬ ಐತಿಹ್ಯ ಇದೆ.[8] ಅವಳು ಉಗ್ರದೇವತೆ. ಸಹಸ್ರಾರು ಜನ ರಾಕ್ಷಸರನ್ನು ನಾಶ ಮಾಡಿದವಳು. ಅವಳಿಗೆ ರಾಕ್ಷಸರ ಮೇಲೆ ಸಿಟ್ಟು ಬರಿಸುವ ಸಲುವಾಗಿ ಗೊರವಯ್ಯಗಳು ಅವಾಚ್ಯ ಶಬ್ದಗಳನ್ನು ಬಳಸುತ್ತಾರೆ ಎಂಬುದು ಪ್ರತೀತಿ.[9]

ಜಾತ್ರೆ ಆರಂಭವಾಗುವುದು ಚೈತ್ರ ಶುದ್ಧ ಪೌರ್ಣಮಿಯ ದಿನ. ಅಥವಾ ಯುಗಾದಿ ಆದ ಹದಿನೈದು ದಿನದೊಳಗೆ ಬರುವ ಶುಕ್ರವಾರದಿಂದ ಆರಂಭ. ಶೆಟ್ಟೀಕೆರೆ ಕೆಂಪಮ್ಮನ ಪರಿಷೆ, ಹೆಸರಳ್ಳಿ ಲಕ್ಕವ್ವನ ಪರಿಷೆ ಎರಡೂ ಒಂದೇ ದಿನದಲ್ಲಿ ಆರಂಭ, ಒಂದೇ ದಿನದಲ್ಲಿ ಮುಕ್ತಾಯ. ಶುಕ್ರವಾರ ಬಾನ ಹಂದಿಯೊಂದನ್ನು ಕೊಯ್ದು ದೇವರ ತಲೆ ಮೇಲೆ ಅದರ ರಕ್ತ ತೊಟ್ಟಿಕ್ಕುವಂತೆ ಕಟ್ಟುತ್ತಾರೆ. ಶನಿವಾರದ್ದೇ ವಿಶೇಷ ಜಾತ್ರೆ. ಅಂದು ಬೆಳಿಗ್ಗೆ ಲಕ್ಕವ್ವ ಬೇವಿನ ಹಳ್ಳಿಅಮ್ಮ, ಬೀರಲಿಂಗೇಶ್ವರ ಇವರೊಡನೆ ಹೆಸರಳ್ಳಿ ಪಕ್ಕದಲ್ಲಿರುವ ಗೌಡನ ಹಳ್ಳಿಗೆ ಹೋಗುತ್ತಾಳೆ. ಅಲ್ಲಿ ಅವಳ ಗಂ(ಮಿಂ)ಡ ರಂಗನಾಥ ಸ್ವಾಮಿ ಅಲ್ಲಿದ್ದಾನೆ. ಅವನ ದೇವಾಲಯದ ಬಳಿ ಹರಿಸೇವೆ. ನೊರೊಂದೆಡ ಸೇವೆ, ಬಿಲ್‌ಗೂಡು[10] ಇತ್ಯಾದಿಗಳು ನಡದು ಲಕ್ಕವ್ವ ಹೆಸರಳ್ಳಿಗೆ ಬರುತ್ತಾಳೆ.

---

7 ಈ ಪರಿಷೆಯ ವಿವರಕ್ಕೆ ನೋಡಿ—ಡಾ॥ ತೀ. ನಂ. ಶಂಕರನಾರಾಯಣರವರ ಜಾನಪದ ವಿಚಾರ ಪುಸ್ತಕದ 'ಶೆಟ್ಟೀಕೆರೆ ಕೆಂಪಮ್ಮನ ಜಾತ್ರೆ' ಎಂಬ ಲೇಖನ.

8 ಮುಂದೆ ನೋಡಿ: ಐತಿಹ್ಯ ಮತ್ತು ಸ್ಥಳಪುರಾಣಗಳು.

9 ಮುಂದೆ ನೋಡಿ: ವೃತ್ತಿ ಗಾಯಕರು.

10 ಹಿಂದೆ ನೋಡಿ : ಸಾಸಲು ಬನದಮ್ಮನ ಜಾತ್ರೆ.

ಶನಿವಾರ ಸಂಜೆ ಸುಮಾರು ೬–೩೦ಕ್ಕೆ ದೇವಸ್ಥಾನದಿಂದ ಕಲಶ ಹೊರಡುತ್ತೆ. ಕಲಶ ಅಂದರೆ ಒಂದು ಕಲಶದ ತಂಬಿಗೆಗೆ ಅಡಕೆ ಹೊಂಬಾಳೆಯಿಟ್ಟು, ಅಕ್ಕಿ ತುಂಬಿದ ತಟ್ಟೆಯಲ್ಲಿ ಹೂಳಿ, ಹೂವುಗಳಿಂದ ಅಲಂಕರಿಸಿರುತ್ತಾರೆ. ಇದಕ್ಕೆ ಪೂಜೆ ಮಾಡಿದ ಮೇಲೆ ಅಮ್ಮನ ಸೂಳೆ ಬಂದು ಗೊರವಯ್ಯನ ತೊಡೆಯ ಮೇಲೆ ಕೂರುತ್ತಾಳೆ. ಮಂಗಳಾರತಿ ಆದಮೇಲೆ ಕಲಶವನ್ನು ಅವಳ ತಲೆಯ ಮೇಲಿಡುತ್ತಾನೆ ಪೂಜಾರಿ ಆಗ ಅವಳು ಕಣ್ಣು ಮುಚ್ಚಿರುತ್ತಾಳೆ; ಆವೇಶ ಭರಿತಳಾಗಿರುತ್ತಾಳೆ. ದೇವಿ ಅವಳ ಮೈ ಮೇಲಿದ್ದಾಳೆ ಆಗ ಎಂಬ ಭಾವನೆ ಎಲ್ಲರಲ್ಲೂ ; ಭಯದಿಂದ ಭಕ್ತಿಯೂ ಉದ್ಭವಿಸುತ್ತದೆ ಕಲಶ ಹೊತ್ತಾಕೆ ಮೇಲೆದ್ದು ಮುಂದೆ ಹೊರಡುತ್ತಾಳೆ ಒಂದು ಹೆಜ್ಜೆ ಮುಂದೆ ಹೋಗಲು ಅದೆಷ್ಟೋ ಸಮಯ ಹಿಡಿಯುತ್ತದೆ. ನೂರು ಜನ ತಳ್ಳಿದರೂ ಒಂದು ಅಂಗುಲ ಚಲಿಸುವುದಿಲ್ಲ ಅವಳು. ಆಗ ಗೊರವಯ್ಯನಳು—

> ಪದ್ಮಲೋಚನೆ ಬಾರಮ್ಮ । ನಮ್ಮ । ಮುದ್ದುರಂಗನ ರಾಣಿ
> ಪದ್ಮಲೋಚನೆ ಬಾರಮ್ಮ ॥

ಎಂದು ಬೇಡಿ ಕರೆಯುತ್ತಾರೆ. ಅವಳು ಅದಕ್ಕೂ ಬರದಿದ್ದಾಗ

> ಹಾಸಿಗೆ ಹಾಸದ ಮೋಣೆ । ದೀಪ ತುಂಬಿದ ಮೋಣೆ[11]
> ಲೇ ಸುಳ್ಳಿ ಮನೆಗೆ । ಸಡಿ । ಮನೆಗೆ ॥

ಎಂದು ಹೀಯಾಳಿಸಿ ನುಡಿಯುತ್ತಾನೆ. ಕೂಡಲೇ ಕಲಶ ಒಂದು ಹೆಜ್ಜೆ ಮುಂದೆ ಹೋಗುತ್ತದೆ. ಮತ್ತೆ ನಿಂತಾಗ ಮತ್ತೊಂದು ವಚನ—

> ಅಡಕೆಯ ಹಾಕುತ । ಎಡಗೈಯ ತಡವುತ
> ಹಡಕುಳ್ಳ ನಿನ ಮೋಣ ತಡಕುತ ॥

ಅಂದಕೂಡಲೇ ಮತ್ತೊಂದು ಹೆಜ್ಜೆ ಮುಂದೆ ಸಾಗುತ್ತದೆ. ಮತ್ತೆ ನಿಂತಾಗ—

> ಕುಂತ್ರೆ ಕುಡಿಕೆ ಹಂಗೆ । ಎದ್ದರೆ ಹಣತೆ ಹಂಗೆ
> ಬಗಿದರೆ ನಿನ ಮೋಣು ತಲಕೆಳಕು ॥

ಅಂದು ಬಣ್ಣಿಸಿದರೆ ಸಾಕು, ಕಲಶ ಖುಷಿಯಿಂದ ಮುಂಬರಿಯುತ್ತದೆ.

> ಪುರಂಧರನ ರಾಣಿ । ಮಧುರ ಕೋಕಿಲ ವಾಣಿ
> ಚದುರ ಕೋಮಲ ಗಾತ್ರೆ । ಸಚ್ಚರಿತ್ರೆ ॥
> ಬಾರಮ್ಮ ಬಾ ತಾಯಿ ॥

ಎಂದು ಬೇಡುತ್ತಾರೆ. ಕಲಶ ಜಪ್ಪಯ್ಯಾ ಅಂದರೂ ಮುಂದೆ ಬರದು. ಆಗ ಗೊರವಯ್ಯಗಳ ಮುಖಂಡ—

> ಸುಲಿದ ಬಾಳೆಹಣ್ಣು ಹೊಂಬಾಳೆಯೊಳಗಿರುವ
> ಅದಕೆಂದ ರಾಯ ಮನದೊಳು ॥

---

11 ಮೋಣು ಎಂದರೆ ಯೋನಿ.

[ಸುಲಿದ ಬಾಳೆಹಣ್ಣು ಪುರುಷನ ಗುಪ್ತಾಂಗದ ಸಂಕೇತ, ಅದಕೆ ಅಂದರೆ ಸ್ತ್ರೀ ಯೋನಿಗೆ ಎಂದರ್ಥ]

ಹೀಗೆ ವಚಿಸುತ್ತಾ, ಸಂಭೋಗದ ಅಭಿನಯ ಮಾಡುತ್ತಾ ಕಲಶ ಹೊತ್ತ ಸೂಳೆಯ ಎರಡೂ ಸ್ತನಗಳನ್ನು ತನ್ನ ಕೈಯಿಂದ ಹಿಡಿದು ಎಳೆಯುತ್ತಾನೆ. ಈ ಅಧಿಕಾರ ಇರುವುದು ಗೊರವಯ್ಯಗಳ ತಂಡದ ಮುಖಂಡನಿಗೆ ಮಾತ್ರ. ಗೊರವಯ್ಯಗಳ ಸಂಖ್ಯೆ ಸುಮಾರು ೪ ಅಥವಾ ೫ ಇರುತ್ತೆ, ಅವರಲ್ಲಿ ಹಿರಿಯನಾದವನೊಬ್ಬ ಮುಖಂಡನಿರುತ್ತಾನೆ.

ಹೀಗೆ ಕಲಶ ಮುಂದೆ ಸಾಗಿ ಅಮ್ಮನ ದೇವಸ್ಥಾನದ ಸುತ್ತ ಮೂರು ಬಾರಿ ಪ್ರದಕ್ಷಿಣೆ ಬರುತ್ತದೆ. ಅದರ ಹಿಂದೆ ಅನೇಕ ಅಲಂಕೃತವಾದ ರಥಗಳು (ಎತ್ತಿನ ಗಾಡಿಗಳು) ಓಡುತ್ತವೆ. ಹರಕೆ ಹೊತ್ತವರು ಸುತ್ತುತ್ತಾರೆ.

ಜಾತ್ರೆಯ ಅಂಗವಾಗಿ ಗೌಡನಪಳ್ಳಿ ರಂಗಪ್ಪನೊಡನೆ ಹೆನರಳ್ಳಿ ಲಕ್ಕವ್ವನ ಮದುವೆಯೂ ಆಗುತ್ತೆ. ಆದರೆ ಕಲಶವೇ ಮುಖ್ಯ ಆಕರ್ಷಣೆ ಈ ಜಾತ್ರೆಯಲ್ಲಿ.

* * * *

ದೊಡ್ಡೆಣ್ಣೇಗೆರೆಯಲ್ಲಿ ಅಕಾಲಿಕವಾಗಿ ಚರಿಗೆ ಲಕ್ಕವ್ವನ ಜಾತ್ರೆ ಆಗುತ್ತೆ. ಆದರೆ ಅದನ್ನು ಆ ಊರವರು ಮಾಡುವುದಿಲ್ಲ. ಹೊಸ ದುರ್ಗದ ಕಡೆಯಿಂದ ಬಂದ ಆ ದೇವರ ಒಕ್ಕಲಿನವರು ನೂರಾರು ಜನ ಸೇರಿ 'ಕ್ಯಾರ್ಗ್ಲೋ' ಎಂದು ಕೂಗಿಕೊಂಡು ದೇವರಿಗೆ ಎಡೆ ಬಿಡಾರ ಮಾಡಿ ತಮ್ಮ ತಮ್ಮ ಊರುಗಳಿಗೆ ಹಿಂತಿರುಗುತ್ತಾರೆ.[12]

ದೊಡ್ಡೆಣ್ಣೇ ಗೆರೆಯಲ್ಲಿ 'ಲಂಬಾಣಿ' ಗಳ ಜಾತ್ರೆ ನೆರೆಯುತ್ತದೆ ವರ್ಷಕ್ಕೊಮ್ಮೆ. ಲಂಬಾಣಿಗಳದು ನಮ್ಮ ದೇಶದಲ್ಲಿ ಎಲ್ಲೂ ಜಾತ್ರೆ ಆದಂತಿಲ್ಲ ಇದೊಂದು ಕಡೆ ಬಿಟ್ಟರೆ ಎಲ್ಲಾ ಲಂಬಾಣಿಗಳು ತಿಂದು ಕುಡಿದು ಊರಾಚೆಯ ತೆಂಗಿನ ತೋಟದ ಅವರ ದೇವರ ಗುಡಿಮುಂದೆ ಹಾಡಿ, ಕುಣಿದು ಮೂರುದಿವಸಗಳಾದ ಮೇಲೆ ತಮ್ಮ ತಮ್ಮ ಊರು ಗಳಿಗೆ ಹೋಗುತ್ತಾರೆ.

ದಬ್ಬೆ ಕಟ್ಟಿದ ಕೆಂಡ ಒಂದು ವಿಶಿಷ್ಟ ಹಾಗೂ ವಿಶೇಷ. ಮುರುಳುಸಿದ್ಧೇಶ್ವರ ಸ್ವಾಮಿಗೆ ಕೆಂಡ ಮಾಡುತ್ತಾರೆ. ದೇವಸ್ಥಾನದ ಮುಂದೆ ದೊಡ್ಡ ಕೆಂಡದ ರಾಶಿ ಹಾಕಿ ಪೂಜೆ ಆದಮೇಲೆ ಪೂಜಾರಿ ಗೈಷ್ಟಿಲಲ್ಲಿ ಕೆಂಡವನ್ನು ತೆಗೆದುಕೊಂಡು ಹೋಗಿ ಅದನ್ನೇ ದೇವರಿಗೆ ನೈವೇದ್ಯ ಮಾಡುತ್ತಾನೆ. ಆ ಕೆಂಡವನ್ನು ಉಂಡವನು ಕೆಂಡದಯ್ಯ ಎನ್ನಿಸಿ ಕೊಂಡಿದ್ದಾನೆ. ಕೆಂಡ ತುಳಿಯುವುದು (ಸಾಸಲಿನಂತೆ) ಇಲ್ಲಿನ ವಿಶೇಷ.

---

12 'ಕ್ಯಾರ್ಗ್ಲೋ' ಎಂಬುದು ಒಬ್ಬ ವ್ಯಕ್ತಿಯ ಹೆಸರಂತೆ. ಹಿಂದೆ ಎಂದೋ ಅವನು ಕಳೆದು ಹೋದನಂತೆ. ಅವನನ್ನು ಇಂದಿಗೂ ಆ ಒಕ್ಕಲಿನವರು ಜಾತ್ರೆಯ ವೇಳೆ ಕೂಗಿ ಕರೆಯುತ್ತಾರೆ. ಸ್ಮರಿಸು ತ್ತಾರೆ. ಈ ಜಾತ್ರೆ ಆಗುವ ಮುನ್ನ ಆ ಒಕ್ಕಲಿನವರಿಗೆ ಕನಸಿನಲ್ಲಿ ದೇವರು ಕಾಣಿಸಿಕೊಳ್ಳುತ್ತದಂತೆ. ಅಂದೇ ಎಲ್ಲರೂ ಹೊರಟು ಬಂದು ಜಾತ್ರೆ ಮಾಡುತ್ತಾರೆ.

ತೀರ್ಥಪುರದ ಹತ್ತಿರವಿರುವ ರಾಂಪುರದಲ್ಲಿ ಮಾರಮ್ಮನ ಜಾತ್ರೆ ಬಹಳ ಭಯಂಕರವಾಗಿರುತ್ತದೆ. ಪ್ರತಿವರ್ಷ ಸುಮಾರು ೮೦ರಿಂದ ೧೦೦ರ ವರೆಗೆ ಕೋಣಗಳನ್ನು ಕಡಿಯುತ್ತಾರೆ. ದೇವಸ್ಥಾನದ ಮುಂದೆ ಕೋಣಗಳ ರಾಶಿ, ರಕ್ತದ ಮಡು ಎಂಥವರಿಗೂ ಮೂರ್ಛೆ ತರುವಂತಿರುತ್ತದೆ.

ಚಿಕ್ಕನಾಯಕನಹಳ್ಳಿ ತಾಲೂಕಿನಲ್ಲಿ ಇನ್ನಿತರ ಸಣ್ಣ ಪುಟ್ಟ ಪರಿಷೆಗಳಾಗುತ್ತವೆ. ಅವುಗಳಲ್ಲಿ ಉಡುವೆ ಮಾವೀಹಳ್ಳಿ ರಂಗಸ್ವಾಮಿಜಾತ್ರೆ, ಮುಪ್ಪೇನಹಳ್ಳಿ ಬಯಲು ಬಸವೇಶ್ವರನ ಜಾತ್ರೆ, ಚಿಕ್ಕನಾಯಕನಹಳ್ಳಿ ರೇವಣಸಿದ್ಧೇಶ್ವರ ಹಾಗೂ ಪ್ರಸನ್ನೇಶ್ವರ ಜಾತ್ರೆಗಳು, ಬೇವಿನಹಳ್ಳಿ ಅಮ್ಮನಜಾತ್ರೆ, ಮತಿಘಟ್ಟದ ಪಾರ್ವತಮ್ಮನ ಪರಿಷೆ, ಕಾರೇಹಳ್ಳಿ ರಂಗಸ್ವಾಮಿಜಾತ್ರೆ, ದಸೂತಿ ಆಂಜನೇಯಸ್ವಾಮಿ ಜಾತ್ರೆ, ಕೆಂಕೆರೆ ಶ್ರೀ ಚೆನ್ನಬಸವೇಶ್ವರಸ್ವಾಮಿ ಜಾತ್ರೆ, ಮೊದಲಾದುವನ್ನು ಹೆಸರಿಸಬಹುದು. ಇವುಗಳಲ್ಲಿ ಮತಿಘಟ್ಟದ ಜಾತ್ರೆ, ಕಾರೇಹಳ್ಳಿ ಜಾತ್ರೆಗಳು ಜಾನುವಾರುಜಾತ್ರೆಗಳು.

ಈ ತಾಲೂಕಿನ ಜಾತ್ರೆಗಳಲ್ಲಿ ಕಡ್ಲೆಪುರಿ ವಿಶೇಷ. ತೇರು ಹರಿದ ಮೇಲೆ ಯಾರ ಬೆನ್ನು ಮೇಲೆ ನೋಡಿದರೂ ಪುರಿ ಗಂಟು, ಖಾರಸೇವು, ಬೆಂಡು, ಬತ್ತಾಸು, ಮಿಠಾಯಿ. ಪಕೋಡ ಇವುಗಳ ಪೊಟ್ಟಣ. ಹೆಂಗಸರ ತಲೆಗಳಲ್ಲಿ ಹೇರ್‌ಪಿನ್ನು, ಟೇಪು, ಹೆಂಗಸರ ಕೈಯಲ್ಲಿ ಜರಡಿ, ಕನ್ನಡಿ, ಎಲೆ ಅಡಿಕೆ ಚೀಲಗಳು, ಗಂಡಸರ ಕೈಯಲ್ಲಿ ಬೀಗಗಳು, ಹಗ್ಗಗಳು, ರಾಗಿಕಲ್ಲುಗಳು ಇತ್ಯಾದಿಗಳು, ಚಿಕ್ಕಮಕ್ಕಳ ಕಣ್ಣುಗಳಲ್ಲಿ ಬಣ್ಣದ ಕನ್ನಡಕಗಳು, ಕೈಗಳಲ್ಲಿ ಬೆಲೂನ್, ಗಿಲಕಿ ಇತ್ಯಾದಿಗಳಿರುತ್ತವೆ.

**ಐತಿಹ್ಯ ಮತ್ತು ಸ್ಥಳಪುರಾಣಗಳು :**

ಚಿಕ್ಕನಾಯಕನಹಳ್ಳಿ ಇತಿಹಾಸ ಪ್ರಸಿದ್ಧವಾದ ಸ್ಥಳ. ಈ ತಾಲ್ಲೂಕಿನ ಹಲವು ಭಾಗಗಳು ನೊಳಂಬರಿಗೂ, ವಿಜಯನಗರದ ಅರಸರಿಗೂ, ಹಲವು ಪಾಳೆಯಗಾರರಿಗೂ, ಮೈಸೂರು ಒಡೆಯರ ಆಳ್ವಿಕೆಗೂ ಸೇರಿತ್ತು. ಪಾಳೆಯ ಪಟ್ಟುಗಳಲ್ಲಿ ಕಂದಿಕೆರೆ, ಹುಳಿಯಾರು ಮುಖ್ಯವಾದವುಗಳು. ಚಿಕ್ಕನಾಯಕನಹಳ್ಳಿ ಹಾಗಲವಾಡಿ ಮಹಾಸಂಸ್ಥಾನಕ್ಕೆ ಸೇರಿತ್ತು, ಆ ಪಾಳೇಪಟ್ಟಿನ ರಾಜಧಾನಿಯೂ ಆಗಿತ್ತು. ಹಾಗಲವಾಡಿಯ ಪಾಳೇಗಾರ ಚಿಕ್ಕನಾಯಕ ಇಲ್ಲಿ ನಗರ ನಿರ್ಮಾಣ ಮಾಡಿ, ಆಂಜನೇಯ ವೆಂಕಟರಮಣ, ಚೌಕೀಮಠ ಮೊದಲಾದ ಏಳು ದೇವಾಲಯಗಳನ್ನು ಕಟ್ಟಿಸಿದ. ಚಿಕ್ಕನಾಯಕ ಕಟ್ಟಿಸಿದ್ದರಿಂದ ಇದು 'ಚಿಕ್ಕನಾಯಕನಹಳ್ಳಿ' ಎಂದಾಯಿತು. ಹಾಗಲವಾಡಿಯ ಮುದಿಯಪ್ಪನಾಯಕ ಪ್ರಖ್ಯಾತ ದೊರೆ. ಈತ ಹಬ್ಬಿಗೆ ಗುಡ್ಡದಮಲ್ಲಿಕಾರ್ಜುನ ಸ್ವಾಮಿ ದೇವಸ್ಥಾನ ಕಟ್ಟಿಸಿದ. ಶೆಟ್ಟೀಕೆರೆಯಲ್ಲಿ ಸುಮಾರು ಒಂದು ಸಾವಿರ ಅಂಕಣದ ಒಂದು ಕಲ್ಲುಮಠ ಕಟ್ಟಿಸಿದ. ವಿಜಯನಗರದ ಪತನಾನಂತರ ತಲೆ ಎತ್ತಿದ ಈ ಪಾಳೇಪಟ್ಟು ಬ್ರಿಟಿಷರ ಕಾಲದಲ್ಲಿ ಸರ್ವನಾಶವಾಯಿತು. ಇಂಥವೇ ಪಾಳೆಯಪಟ್ಟು ಹಂದನಕೆರೆ ಮತ್ತು ಹುಳಿಯಾರು ಕುಂಚಟಿಗ ಕುಲದ ಪಾಳೆಯಗಾರ ಕಂದಿಕೆರೆ ಆಳಿದ್ದಾನೆ.

ಹುಳಿಯಾರು ಬೂದಾಳು ಪ್ರಾಂತಕ್ಕೆ ಸೇರಿತ್ತು. ಕೆಲಕಾಲ ಸಿರಾ ಮುಸಲ್ಮಾನರ ಅಧೀನದಲ್ಲೂ ಇತ್ತು.

ಇಂತಹ ಅಲ್ಪ ಸ್ವಲ್ಪ ಇತಿಹಾಸ ಮಹತ್ವ ಪಡೆದಿರುವ ಚಿಕ್ಕನಾಯಕನಹಳ್ಳಿಯಲ್ಲಿ ಹಲವು ಸ್ಥಳಪುರಾಣಗಳಿವೆ. ಶೆಟ್ಟೀಕೆರೆ ಅವುಗಳಲ್ಲಿ ಒಂದು.

ಮುತ್ತಿನ ವ್ಯಾಪಾರಿ ಎತ್ತುಗಳ ಮೇಲೆ ಮುತ್ತು ಹೇರಿಕೊಂಡು ಬಂದ. ಅಡುಗೆಗೆಂದು ಈಗಿನ ಕೆರೆ ಅಂಗಳಕ್ಕೆ ಹೋಗಿ ಅಲ್ಲಿದ್ದ ಮೂರು ಗುಂಡುಕಲ್ಲುಗಳ ಮೇಲೆ ಅನ್ನದಪಾತ್ರೆ ಇಟ್ಟ. ಪಾತ್ರೆ ಆ ಕಲ್ಲು ಗುಂಡುಗಳ ಮೇಲೆ ನಿಲ್ಲಲಿಲ್ಲ, ಅದು ಕುಣಿದಾಡತೊಡಗಿತು. ಕಣಿ ಕೇಳಿದ ಆಗ ತಿಳಿಯಿತು: ಅವು ಕಲ್ಲು ಗುಂಡುಗಳಲ್ಲ, ಅವು ಸಾಕ್ಷಾತ್ ಶಿವಲಿಂಗಗಳು ಎಂದು. ಮುತ್ತಿನ ಶೆಟ್ಟಿ ದೇವರ ಕ್ಷಮೆ ಬೇಡಿ, ಆ ಲಿಂಗಗಳಿದ್ದ ಬಳಿ ಶಿವನ ಆದೇಶದಂತೆ ದೊಡ್ಡ ಕೆರೆಯೊಂದನ್ನು ಕಟ್ಟಿಸಿದ. ಶೆಟ್ಟಿ ಕಟ್ಟಿಸಿದ ಆ ಕೆರೆ ಶೆಟ್ಟೀಕೆರೆ ಆಯಿತು. ಅವನು ನೆಲೆಸಿದ ಊರಿಗೂ ಅವೇ ಹೆಸರು ಬಂದಿತು. ಆ ಊರಿನಲ್ಲಿ ಇಂದಿಗೂ ವೀರಶೈವ ಶೆಟ್ಟರು ಬಹಳ ಜನರಿದ್ದಾರೆ. ತುಂಬಾ ಏಳಿಗೆ ಇದೆ ಅವರಿಗೆ ಆ ಊರಲ್ಲಿ. ಕೆರೆಯ ಮಧ್ಯಭಾಗದಲ್ಲಿ ಬಹು ದೊಡ್ಡ ಪ್ರಮಾಣದ ಮೂರು ಲಿಂಗಗಳು ಇಂದಿಗೂ ಇವೆ.

ಕುಪ್ಪೂರು ಗದ್ದಿಗೆ ತಾಲ್ಲೂಕಿನ ಒಂದು ಜಾಗ್ರತ ಕ್ಷೇತ್ರ. ಕಡೂರು ತಾಲ್ಲೂಕು ನಿಡುವಳ್ಳಿ ಗ್ರಾಮದಲ್ಲಿ ಹುಟ್ಟಿದ ಶ್ರೀ ಮರುಳುಸಿದ್ಧೇಶ್ವರರು ಎಳೆಯಲ್ಲೇ ವೀರ ವೈರಾಗ್ಯ ಮೂರ್ತಿಗಳಾಗಿ ಶಿವದೀಕ್ಷೆ ಪಡೆದು ಲೋಕ ಸಂಚಾರದಲ್ಲಿ ತೊಡಗಿದರಂತೆ. ಹಾದಿಯಲ್ಲಿ ಅವರ ದಿವ್ಯತೇಜಸ್ಸನ್ನು ಕಂಡು ಮಣಿದ ಜನತೆಯನ್ನು ಆಶೀರ್ವದಿಸುತ್ತಾ ದಬ್ಬೆಕಟ್ಟೆ, ಸಾಸಲು, ಸೋಮೇನಹಳ್ಳಿ ಮೊದಲಾದ ಕಡೆಗಳಲ್ಲಿ ಅನುಷ್ಠಾನ ಮಾಡಿದರಂತೆ. ಅದರ ಸ್ಮರಣೆಗಾಗಿ ಇಂದಿಗೂ ಆ ಸ್ಥಳಗಳಲ್ಲಿ ಮರುಳುಸಿದ್ಧರಗುಡಿಗಳಿವೆ. ಶ್ರೀ ಗುರುಮರುಳುಸಿದ್ಧೇಶ್ವರರು 'ಚಿಕ್ಕಮೇಟೀಕುರ್ಕೆ ಚೊಕ್ಕವಾಗಿರಲಿ, ದೊಡ್ಡ ಮೇಟೀಕುರ್ಕೆ ದೊಡ್ಡದಾಗಲಿ, ಶಶಿವಾಳದವರು ನನ್ನ 'ಶಿಶುಮಕ್ಕಳು' ಮಾಡಾಳವರು ನಾಡಾಳಲಿ. ಸಾಸಲಿನವರು ಎಳ್ಳು ಸೊಸಲಿಸಂತವರು' ಎಂದು ಅಕ್ಕರೆಯಿಂದ ನುಡಿದರಂತೆ. ಕಡೆಗೆ ಈಗಿರುವ ಕುಪ್ಪೂರು ಗ್ರಾಮದ ಸಮೀಪದ ಕೆರೆಯ ಹಿಂದೆ ಬಾಳೆ ತೋಟದಲ್ಲಿ ನೆಲೆ ನಿಂತು, ಕುಪ್ಪೂರಿನ ಚೆನ್ನವೀರೇಗೌಡನಿಂದ ಸೇವೆ ಪಡೆದು, ಜಗತ್ತಿಗೆ ಅನೇಕ ಕಲ್ಯಾಣ ಕಾರ್ಯಗಳನ್ನು ಮಾಡಿ, ಕಾಯಸಮೇತ ಕೈಲಾಸವನ್ನೈದಿದರಂತೆ. ಅವರ ಸಮಾಧಿಯೇ ಇಂದಿನ ಪವಿತ್ರ ಪುಣ್ಯಕ್ಷೇತ್ರ ಕುಪ್ಪೂರು ಗದ್ದಿಗೆ,

ಮದಲಿಂಗನ ಕಣಿವೆ ಎಂಬ ಹೆಸರನ್ನು ಕೇಳದ ಕನ್ನಡಿಗನಿಲ್ಲ. ಅದರ ಐತಿಹ್ಯವನ್ನು ಜಗಜ್ಜಾಹೀರು ಮಾಡಿದವರು ಮಾಸ್ತಿಯವರು.[13] ಅದಿರುವುದು

---

13 ಮಾಸ್ತಿಯವರ ಮರಲಿಂಗನ ಕಣಿವೆ–ನೀಳ್ಗವನ.

ಚಿಕ್ಕನಾಯಕನಹಳ್ಳಿಯಿಂದ ೮ ಕಿ. ಮೀ. ದೂರದಲ್ಲಿ. ಈಶಾನ್ಯ ದಿಕ್ಕಿನಲ್ಲಿ ತೀರ್ಥಪುರಕ್ಕೆ ಹೋಗುವ ಹಾದಿಯಲ್ಲಿ. ಅದನ್ನು ಸುತ್ತುಕಣಿವೆ ಎಂತಲೂ ಕರೆಯುತ್ತಾರೆ. ಆ ಕಣಿವೆಗೆ ಹೊಂದಿಕೊಂಡಿವೆ ಮದಲಿಂಗನಗುಡ್ಡ. ಈ ಗುಡ್ಡ, ಈ ಕಣಿವೆಗಳದು ಒಂದು ಕರುಣಾಜನಕ ಕಥೆ ಇದೆ, ಅದು ಅದರ ಐತಿಹ್ಯವೂ ಹೌದು.

ತೇಜಸ್ವೀ ತರುಣ ಮದಲಿಂಗ ಮದುವಣಗಿತ್ತಿಯನ್ನು ಮನೆದುಂಬಿಸಿ ಕೊಳ್ಳುವ ಸಲುವಾಗಿ ಅವಳನ್ನೂ, ಅವಳ ತಾಯಿ ಮತ್ತು ಅವಳ ತಂಗಿ (ಜಾಣೆ ಅವಳ ಹೆಸರು) ಇಷ್ಟು ಜನರೊಡನೆ ನಡೆದು ಹೊರಟ. ತನ್ನ ಕೈಹಿಡಿದವಳನ್ನೂ, ಅವಳ ತಂಗಿ ಜಾಣೆ ಯನ್ನೂ ತಮಾಷೆ ಮಾಡುತ್ತಿದ್ದ. ಜಾಣೆಯ ಮೇಲೆ ಕಣ್ಣು ಹಾಕಿದ. ಅತ್ತೆಯನ್ನು ಕೇಳಿದ ಅವಳನ್ನೂ ತನಗೇ ಕೊಟ್ಟು ಲಗ್ನಮಾಡು ಎಂದು. ಅತ್ತೆ ನಕ್ಕಳು, ಹೇಳಿದಳು. 'ಅಬ್ಬುಳ್ಳೊ ಗಂಡಿಗೆ ಇಬ್ಬಳಾರು ಹೆಂಡಿರು' ಎಂದದೆ ಗಾದೆ ಎಂದು ಅಂದರೆ ಅಶಕ್ತ ಗಂಡಸಿಗೆ ಇಬ್ಬರು ಹೆಂಡತಿಯರು ಎಂದು. ಮದುವಣಿಗನ ಸ್ವಾಭಿಮಾನವನ್ನು ಮೆಟ್ಟಿ ದಂತಾಯಿತು ಆ ಮಾತು. 'ಏನತ್ತೆ ನಾನು ಗಂಡಸು ಅಲ್ವಾ. ನಿನ್ನ ಒಬ್ಬಳ ಮಗಳನ್ನು ಸಾಕಿದ ಹಾಗೆ ಇನ್ನೊಬ್ಬಳನ್ನೂ ಸಾಕಲಾರೆನಾ......ನನಗಷ್ಟು ಶಕ್ತಿ ಇಲ್ಲಾ ಅಂತಾ ತಿಳಿದೆಯಾ ! ಎಂದ. ಅಷ್ಟು ಹೊತ್ತಿಗೆ ಸುತ್ತು ಕಣಿವೆ ಹತ್ತಿರ ಬಂದಿದ್ದರು. ಅತ್ತೆಗೆ ಏನು ತೋಚಿತೋ ಏನೋ ಹೇಳಿದಳು—'ನೋಡು, ನಿನಗಿ ಅಷ್ಟು ಇಷ್ಟವಿದ್ದರೆ, ಈ ಬೆಟ್ಟವನ್ನು ಹಿಮ್ಮುರಿಕೆ (ಅಂದರೆ ಹಿಂದು ಹಿಂದಾಗಿ—ಬೆಟ್ಟಕ್ಕೆ ಬೆನ್ನು ಮಾಡಿಕೊಂಡು) ಹತ್ತಿ, ಹಿಮ್ಮುರಿಕೆ ಇಳಿ.'

ಅಳಿಯ ಅತ್ತೆಯ ಸವಾಲು ಸ್ವೀಕರಿಸಿದ. ಬೆಟ್ಟವನ್ನು ಹಿಂದು ಹಿಂದಾಗಿ ಹತ್ತ ತೊಡಗಿದ, ಆಗ ಬೀಸಿಲು ಮೇಲೇರಿತ್ತು, ಅತ್ತೆಗೆ ಒಂದು ಮಾತು ಕೇಳಿದ– 'ನಾನು ಇಳಿದು ಬರುವಷ್ಟರಲ್ಲಿ ಬೆಟ್ಟದ ಆ ಭಾಗದಲ್ಲಿ ಜಾಣೆ ಮೊಗೆ ನೀರು ಹಿಡಿದು ಕಾದಿರಲಿ, ಅವಳ ಕೈಯಿಂದಲೇ ನೀರು ಕೊಡಿಸು' ಎಂದು. ಆ ಪ್ರದೇಶದ ಹತ್ತಿರ ದಲ್ಲಿ ಎಲ್ಲೂ ನೀರಿರಲಿಲ್ಲ. ಆ ಮೊಗೆ ನೀರು ಬಿಟ್ಟರೆ. ಮದಲಿಂಗ ಬೆಟ್ಟದ ತುದಿಗೆ ಹೋಗಿ ಚಣಕಾಲ ವಿಶ್ರಮಿಸಿಕೊಂಡು ಒಂದು ನಿಂಬೆಹಣ್ಣು ತಿಂದು ಬೀಜ ಉಗಿದನಂತೆ. ಆ ಬೀಜ ಗಜನಿಂಬೆಗಿಡವಾಗಿ ಅಲ್ಲಿ ಹುಟ್ಟಿದೆಯಂತೆ (ಈಗಂತೂ ಅದು ಇಲ್ಲ). ಹಿಮುರಿಕೆ ಯಲ್ಲೇ ಬೆಟ್ಟ ಇಳಿದು ಬಂದ. ಬೆಟ್ಟದ ಆ ಬದಿಗೆ ಬಂದಿದ್ದರು ಮೂವರು ಹೆಂಗಸರು. ಮದಲಿಂಗ ಗೆದ್ದ ನೆಂಬ ಸಂತಸದಿಂದ ಜಾಣೆ ಮೊಗೆಯನ್ನು ಕೊಟ್ಟು ನೀರು ಕುಡಿಸಲು ಹೋದಾಗ ಮೊಗೆ ಕೈಯಿಂದ ಜಾರಿಬಿದ್ದು ಒಡೆದು ಹೋಗಿ ನೀರು ನೆಲಸೇರಿತಂತೆ ! ಮತ್ತೊಂದು ಹೇಳಿಕೆ ಹೀಗಿದೆ ಅತ್ತೆ ಮಗಳನ್ನು ಕೊಡಬೇಕೆಂಬ ಹೊಟ್ಟೆ ಉರಿಯಿಂದ ಮೊಗೆಯನ್ನು ಬಡಿದು ಕೆಡವಿದಳಂತೆ. ಅಂತೂ ನೀರಿಲ್ಲದೆ ಗಂಟಲೊಣಗಿ ಮೇಲುಸಿರು ಬಿಡುತ್ತಾ, ತೇಲುಗಣ್ಣು ಮೇಲುಗಣ್ಣಾಗಿದ್ದ ಮದಲಿಂಗ ಅಲ್ಲಿಯೇ ಒರಗಿದ. ಮದುವಣಗಿತ್ತಿ ಸೀರಿಗಾಗಿ ಅತ್ತ ಓಡಿದಳು. ಅಲ್ಲೆಲ್ಲೊ ಇದ್ದ ಮದುವಿನಲ್ಲಿ ಏಷ್ಟು

ಸತ್ತ್ರಳು–ಆ ಸ್ಥಳ ಮದವಣಮಡು ಅಥವಾ ಮದನಮಡು ಎಂದಾಯಿತು. ಜಾಣೆ ತನ್ನ ಬಾಯ ಜೊಲ್ಲನ್ನೇ ಮದಲಿಂಗನ ಬಾಯಿಗೆ ತುಂಬಿ ಬದುಕಿಸಿಕೊಳ್ಳಲು ಯತ್ನಿಸಿದಳು. ಯತ್ನ ವಿಫಲವಾಯಿತು. ಮದಲಿಂಗ ಸತ್ತು ಗುಡ್ಡಕ್ಕೆ ಮದಲಿಂಗನ ಗುಡ್ಡ, ಕಣಿವೆಗೆ ಮದಲಿಂಗನ ಕಣಿವೆ ಎಂದು ಹೆಸರು ಕೊಟ್ಟ. ಜಾಣೆ ಅಲ್ಲೇ ಪಕ್ಕದಲ್ಲಿ ಮಡಿದಳು. ಅವಳು 'ಹಾರ' ವಾದ ಜಾಗ 'ಜಾಣೇಹಾರ' ಆಯಿತು. ಅತ್ತೆ ಓಡಿ ಮಡಿದ ನೆಲ 'ಅತ್ತ್ಯಾಳು' ಆಯಿತು. ಅವಳ ಸಮಾಧಿಯ ಸ್ಥಳ ಅಜ್ಜಿಗುಡ್ಡೆ ಎಂದೂ ಆಯಿತು. ಒಟ್ಟಿನಲ್ಲಿ ಅವರೆಲ್ಲಾ ಮಡಿದು ತಾವು ಮಡಿದ ಸ್ಥಳಗಳಿಗೆ ಹೆಸರು ಕೊಟ್ಟು ಊರು ನಿರ್ಮಾಣವಾಗಲು ಅನುವಾಗಿದ್ದಾರೆ.

ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಪ್ರಮುಖ ಹೋಬಳಿ ಹುಳಿಯಾರು, ಇಲ್ಲಿನ ಕೆರೆ ಒಡೆಯದೆ ನಿಲ್ಲಲು ಊರ ಒಡೆಯ ತನ್ನ ಸೊಸೆ ಕೆಂಚಮ್ಮನನ್ನು ಬಲಿಕೊಟ್ಟನಂತೆ. ಹುಳಿಯಾರು ಕೆಂಚಮ್ಮನ ಹಾಡು ಇಂದಿಗೂ ಜಾನಪದಸಾಹಿತ್ಯದಲ್ಲಿ ಸುಪ್ರಸಿದ್ಧ.

ಶೆಟ್ಟೀಕೆರೆ ಕಾಲಭೈರವ. ವಡ್ಡರಹಳ್ಳಿ (ಈಗಿನ ಸಿದ್ಧರಾಮನಗರ) ಹೆಂಜೇರು ಭೈರವ, ಅದರ ಪಕ್ಕದಲ್ಲಿರುವ ಸುಂಟರ ಗುಡ್ಡದ ಸಿದ್ಧರಾಮ, ಅತ್ತಿಮರದಮ್ಮ, ಆಲದ ಮರದಮ್ಮ, ಬೇವಿನಮರದಮ್ಮ, ಮಾಕುವಳ್ಳಿ ಕರಿಯಮ್ಮ, ಶೆಟ್ಟೀಕೆರೆಕೆಂಪಮ್ಮ ಇವರೆಲ್ಲರಿಗೂ ಸಂಬಂಧಿಸಿದ ಒಂದು ಕಗ್ಗ ಇದೆ. ಹೆಂಜೇರು ಭೈರವ ಮೇಲೆ ಹೇಳಿದ ದೇವತೆಗಳೊಡನೆ ಕುರಿಮಂದೆಯ ಜೊತೆಯಲ್ಲಿ ಹೆಂಜೇರುವಿನಿಂದ (ಆಂಧ್ರಪ್ರದೇಶದ ಒಂದು ಸ್ಥಳ) ಕರ್ನಾಟಕಕ್ಕೆ ಬಂದನಂತೆ. ವಡ್ಡರ ಹಳ್ಳಿಯ ತಿಟ್ಟಿನಲ್ಲಿ ಕುಳಿತು, ತನ್ನ ಅನುಷ್ಠಾನಕ್ಕೆ ಯೋಗ್ಯ ಸ್ಥಳ ಹುಡುಕುವಂತೆ ಆಜ್ಞೆ ಮಾಡಿ ಕಾಲಭೈರವನನ್ನು ಐದು ಜನ ಸ್ತ್ರೀದೇವತೆಯರೊಡನೆ ಕಳುಹಿಸಿದನಂತೆ, ಕೆಂಪಮ್ಮ ಶೆಟ್ಟೀಕೆರೆ ಕರೆಯ ಮುಂಭಾಗದ ಬಾಳೆತೋಟದಲ್ಲಿ, ಕಾಲಭೈರವ ಕೆರೆ ಹಿಂದೆ. ಕರಿಯಮ್ಮ ಮಾಕುವಳ್ಳಿಯಲ್ಲಿ ನೆಲೆನಿಂತರಂತೆ. ಎಷ್ಟು ಹೊತ್ತಾದರೂ ಬಾರದ್ದನ್ನು ಕಂಡು ಹೆಂಜೇರು ಭೈರವ ಹುಡುಕಿಕೊಂಡು ಬಂದು ಕೆರೆ ಹಿಂದೆ ನೆಲೆನಿಂತಿದ್ದ ಕಾಲಭೈರವನನ್ನು ಕೋಪದಿಂದ ಒದದೆನಂತೆ. ಕಾಲಭೈರವನ ಸೊಂಟ ಮುರಿದು ಓರೆಯಾಯಿತಂತೆ. ಇಂದಿಗೂ ಆ ಮೂರ್ತಿ ಓರೆಯಾಗಿ ನಿಂತಿದೆ. ಅದರಿಂದಲೇ ಅದನ್ನು ಇಂದಿಗೂ "ಸೊಂಟ ಮುರುಕ ಭೈರೇದೇವರು" ಎನ್ನುತ್ತಾರೆ.

ಹೆಸರಳ್ಳಿ ಲಕ್ಕಮ್ಮನ ಮೂಲಸ್ಥಾನ ಹಂಪೆ. ವಿಜಯನಗರ ಹಾಳಾದ ಮೇಲೆ ಮುಸಲ್ಮಾನರ ಹಾವಳಿಯನ್ನು ತಡೆಯಲಾರದೆ ಜನ ವಲಸೆ ಬಂದರು. ಅವರೊಡನೆ ಈ ದೇವತೆಯೂ ಬಂದಳಂತೆ. ಅವರಿಗೆ ಹೇಳಿದಳಂತೆ ಎಲ್ಲಿ ನಿಮ್ಮ ಬಂಡಿಗಳು ಮುರಿಯುತ್ತವೋ ಅಲ್ಲಿ ನಾನು ನೆಲೆ ನಿಲ್ಲುತ್ತೇನೆ ಎಂದು. ಈಗಿನ ಹೆಸರಳ್ಳಿ ಬಳಿಯಲ್ಲಿ ಬಂಡಿ ಮುರಿಯಲು ದೇವಿ ಅಲ್ಲಿ ನೆಲೆಸಿದಳೆಂದು ತಿಳಿದು ಕಲಶ ಹೂಡಿ ಪೂಜೆ ಮಾಡಿ ಆಶೀರ್ವದಿತರಾದರಂತೆ.

ಹನ್ನೆರಡನೆಯ ಶತಮಾನದ ಶಿವಯೋಗಿ ಸಿದ್ಧರಾಮನು ಸೊನ್ನಲಿಗೆಯಿಂದ ಹೊರಟು ಚಿಕ್ಕನಾಯಕನಹಳ್ಳಿಯ ಕೆಲವು ಸ್ಥಳಗಳಲ್ಲಿ ಅನುಷ್ಠಾನ ಮಾಡಿದನಂತೆ. ಅವುಗಳೇ ಗೋಡೇಕೆರೆ ಮತ್ತು ಯಳನಡು ಗ್ರಾಮಗಳು. ಈ ಗ್ರಾಮಗಳಲ್ಲಿ ಇಂದಿಗೂ ಶ್ರೀ ಸಿದ್ಧರಾಮೇಶ್ವರಸ್ವಾಮಿಯ ದೇವಾಲಯಗಳೂ, ಶ್ರೀ ಮಠಗಳೂ ಇವೆ.

ಕುಪ್ಪೂರು ಗದ್ದಿಗೆ ಹತ್ತಿರದಲ್ಲಿ ತಮ್ಮಡಿಹಳ್ಳಿ ಇದೆ. ಅದರ ಪಕ್ಕದಲ್ಲೇ ಶ್ರೀ ಮಲ್ಲೇಶ್ವರಸ್ವಾಮಿ ಬೆಟ್ಟವಿದೆ. ಆ ಗುಡ್ಡದ ಮಲ್ಲಯ್ಯನ ಪದವಡಿ ಇರುವುದ ರಿಂದ ಅದು 'ತಮ್ಮ+ಅಡಿ' ಆಗಿದೆ. ಅಲ್ಲೊಂದು ಖ್ಯಾತವಾದ ವೀರಶೈವ ವಿರಕ್ತ ಮಠ ಇದೆ.

ಶೆಟ್ಟೀಕೆರೆ ಕಲ್ಲುಮಠ ಮಹಾಪವಾಡ ಪುರುಷರನ್ನೂ ಪ್ರಭುಗಳನ್ನಾಗಿ ಪಡೆದ ಪುಣ್ಯತಾಣ. ಇತ್ತೀಚಿನ ಸ್ವಾಮಿಗಳು ಅನೇಕ ಪವಾಡಗಳನ್ನು ಮೆರೆದಿದ್ದಾರೆ. ಅವರದೇ ಒಂದು ಮಹಾಪುರಾಣಕಾವ್ಯವಾಗುತ್ತದೆ. ಹಿಂದಿದ್ದ ಶಾಂತವೀರಸ್ವಾಮಿಗಳನ್ನು ಒಡೆ ಯರು ಪೂಜಿಸಿ, ಸೇವೆ ಮಾಡಿ ಊರಾಚೆ ಒಂದು ದೇವಾಲಯವನ್ನೂ ಅವರ ದಿವ್ಯ ಸಮಾಧಿ ಮೇಲೆ ನಿರ್ಮಿಸಿದರು. ಆ ಒಡೆಯರಿದ್ದ ಊರೇ ಇಂದು ಒಡೇರಹಳ್ಳಿ ಯಾಗಿದೆ.

ಈ ತಾಲ್ಲೂಕಿನ ಗಡಿಯಲ್ಲಿರುವ ಪಟ್ಟದೇವರ ಕೆರೆ ತುಂಬಾ ಖ್ಯಾತಿವೆತ್ತಕೆರೆ, ಅದು ಜಾತ್ರೆಸ್ಥಾನ. ಅಲ್ಲಿಗೆ ಸಾಸಲು ಗೊಲ್ಲರಹಟ್ಟಿ ಬಾಲಪ್ಪದೇವರು ಪುಣ್ಯಸ್ನಾನ ಕ್ಕಾಗಿ ಆಗಾಗ ಹೋಗುವುದುಂಟು.

ತೀರ್ಥಪುರ ಎಂಬ ಹೆಸರು ಹತ್ತಿರವಿರುವ ಜಳಿರಾಮೇಶ್ವರ ಪಜ್ರದ ತೀರ್ಥ ದಿಂದ ಬಂದದ್ದು. ಆ ರಾಮೇಶ್ವೇರನ ದೇವಸ್ಥಾನದ ಬಳಿ ನೀರಿನ ಬುಗ್ಗೆ ಹರಿದು ಮತ್ತೆ ಸ್ವಲ್ಪದೂರ ಮರಳಿನಲ್ಲಿ ಮರೆಯಾಗಿ ಮುಂದೆ ಮತ್ತೆ ನದಿಯಾಗಿ ಹರಿಯು ತ್ತದೆ. ತೀರ್ಥೋದ್ಭವವಾಗುವ ತಾಣತೀರ್ಥಪುರ ಆಗಿದೆ. ಅದೊಂದು ಪುಣ್ಯಕ್ಷೇತ್ರ, ಆಚಾರ್ಯ ತೀ ನಂ ಶ್ರೀ ಯವರ ಜನ್ಮಸ್ಥಳ.

## ವೃತ್ತಿ ಗಾಯಕರು

ಗೊರವಯ್ಯಗಳು ಮತ್ತು ಜುಂಜಪ್ಪಗಳು ಈ ತಾಲ್ಲೂಕಿನ ಹೆಸರಾಂತ ಧಾರ್ಮಿಕ ವೃತ್ತಿ ಗಾಯಕರು. (ಈ ತಾಲೂಕಿನಲ್ಲಿ ಲೌಕಿಕ ವೃತ್ತಿ ಗಾಯಕರಿಲ್ಲ) ಗೊರವರು ಜಾತಿಯಲ್ಲಿ ಕುರುಬರು, ವೃತ್ತಿಯಲ್ಲಿ ಕೃಷಿಕರು : ಪ್ರವೃತ್ತಿಯಲ್ಲಿ ಧಾರ್ಮಿಕ ವೃತ್ತಿ ಗಾಯಕರು. ಶೆಟ್ಟೀಕೆರೆ ಹೋಬಳಿ ನುಚ್ಚಕಲ್ಲು ಪಾಳ್ಯ ಇವರ ವಾಸಸ್ಥಳ. ಆ ಊರಿ ನಲ್ಲಿ ನಾಲ್ಕೆಂಟು ಮನೆಗಳಿವೆ ಅವರವು. ಉದ್ದವಾದ ಬಿಳಿ ನಿಲುವಂಗಿ, ಬಿಳೀಪೇಟ, ಕೈಯಲ್ಲಿ ತಾಳಗಳು, ಹೊಂಬಾಳೆ ಕರವಸ್ತ್ರ ಮುಂತಾದುವುಗಳನ್ನು ಹಿಡಿದಿರುತ್ತಾರೆ. ಕಚ್ಚೆ ಪಂಚೆ ಉಟ್ಟಿರುತ್ತಾರೆ. ಹೆಗಲಮೇಲೆ ಒಂದು ಬದಿಯಲ್ಲಿ ಮುದ್ರೆ (ಮದ್ದಲೆ– ಸಣ್ಣಮದ್ದಲೆ) ಇರುತ್ತದೆ, ಹಣೆಯಲ್ಲಿ ಅಮ್ಮನ ಭಂಡಾರ (ಹರಿಶಿಣ) ಹಚ್ಚಿರುತ್ತಾರೆ,

ಇವರ ಮುಖಂಡ ಮಾತ್ರ ಪೇಟ ಹೋಬಾಳಿ ಹಿಡಿಯುವ ಅಧಿಕಾರ ಉಳ್ಳವನು. ಉಳಿದವರು ತಾಳ ಮದ್ದಲೆಗಳನ್ನು ಬಡಿಯುವ ಹಿಮ್ಮೇಳದವರು.

ಗೊರವಯ್ಯಗಳು ಹೆಸರಳ್ಳಿ ಅಮ್ಮನ ಜಾತ್ರೆಗೆ ಹೋಗಲೇಬೇಕು. ಅವರಿಲ್ಲದಿದ್ದರೆ ಜಾತ್ರೆಯೇ ಇಲ್ಲ. ಇವರೂ ಸಹ ವಿಜಯನಗರದಿಂದ ಅಮ್ಮನ ಜೊತೆಯಲ್ಲೇ ಬಂದರಂತೆ. ಗುಮುರಿ, ಉರುಮೆ ಹಾಡೊ ಈ ಗೊರವಯ್ಯಗಳು ಕುರಿಮಂದೆಯೊಡನೆ ಬಂದು ಶೆಟ್ಟೀಕೆರೆ ಬಳಿ ನೆಲೆಸಿದರಂತೆ. ಇವರಿಗೆ ಗೋಡೇಕೆರೆ ಮಠದ ಸ್ವಾಮಿಗಳು ರುದ್ರಾಕ್ಷಿ ಸರ ಹಾಗೂ ಕುಶನೀ ಅಂಗಿ ಕೊಟ್ಟು ಪ್ರಸಿದ್ಧಿಗೆ ತಂದರಂತೆ. ಅಂದಿನಿಂದ ಸಿದ್ಧರಾಮ ದೇವರುಗಳಿಗೂ, ಗೋಡೇಕೆರೆ ಮಠಕ್ಕೂ ವಿಶೇಷವಾಗಿ ನಡೆದು ಕೊಳ್ಳುತ್ತಾರೆ.

ಇವರು ನಿಲುವಂಗಿ ಮೊದಲಾದ ವೇಷಗಳನ್ನು ಧರಿಸುವುದು ಕೇವಲ ದೇವರ ಕೆಲಸದ ಅಥವಾ ಜಾತ್ರೆಯ ಗೊತ್ತಾದ ಸಮಯದಲ್ಲಿ ಮಾತ್ರ. ಉಳಿದಂತೆ ಆ ಬಟ್ಟೆಗಳನ್ನೂ, ತಾಳ ಇತ್ಯಾದಿ ಮುದ್ರೆಗಳನ್ನೂ ಪೆಟ್ಟಿಗೆಯಲ್ಲಿಟ್ಟು ವಾರಕ್ಕೊಮ್ಮೆ ಪೂಜಿಸಿ ಎಡೆ ಮಾಡುತ್ತಾರೆ ಮುತಿಯಿಂದ. ಬಟ್ಟೆ ಹರಿದರೆ ಅವುಗಳನ್ನು ಜಲಧಿಗೆ ಸೇರಿಸುತ್ತಾರೆ. ಹೊಸ ಬಟ್ಟೆಗಳನ್ನು ಭಕ್ತಾದಿಗಳು ಹೊಲಿಸಿಕೊಡುತ್ತಾರೆ. ಹೆಸರಳ್ಳಿ ಲಕ್ಕವ್ವನ ಜಾತ್ರೆಗಷ್ಟೇ ಅಲ್ಲದೆ, ಇದೇ ತಾಲೂಕಿನ ಅಜ್ಜೇನಹಳ್ಳಿ ಕೋಟೀಕೆರೆ ಅಮ್ಮನ ಪರಿಷೆ. ಅರಸೀಕೆರೆ ತಾಲೂಕಿನ ಜೇನತ್ತಹಳ್ಳಿ ಕರಿಯಮ್ಮನ ಪರಿಷೆ ಇತ್ಯಾದಿ ಕಡೆಗಳಿಗೆ ಹೋಗುತ್ತಾರೆ. ಆದರೆ ಅವರಿಗೆ ಜಾತ್ರೆಗೆ ಹದಿನೈದು ದಿನಗಳ ಮುಂಚೆಯೇ ವೀಳೆಸಲು ಕಳುಹಿಸಿರಬೇಕಾಗುತ್ತದೆ. ವೀಳೆಸಲು ಬಂದ ಕಡೆಗಳಿಗೆ ಮಾತ್ರ ಇವರು ಹೋಗುತ್ತಾರೆ. ಇವರಿಗೆ ಒಂದು ಹಣ ಅಂದರೆ ೨೫ ಪೈಸೆ ಮಾತ್ರ ಜಾತ್ರೆಯಲ್ಲಿ ಕಾಣಿಕೆ ಕೊಡುತ್ತಾರೆ. ಉಳಿದಂತೆ ಹಲವರು ಭಕ್ತರು ಕಾಣಿಕೆ ನೀಡಬಹುದು. ಆದರೆ ಗೊರವಯ್ಯಗಳದು ನಿಷ್ಕಾಮಕರ್ಮ: ಅವರು ಸೇವೆಯೆಂದೇ ಮಾಡುತ್ತಾರೆ, ಕೂಲಿ ಎಂದಲ್ಲ. ಜಾತ್ರೆಯ ದಿನಗಳಲ್ಲಿ ಮಾಂಸ ಸೇವಿಸುವುದಿಲ್ಲ. ಗೊರವಪ್ಪಗಳು ಲಿಂಗಾಯಿತರ ಮನೆಯಲ್ಲಿ ಊಟ ಮಾಡುತ್ತಾರೆ ಆ ದಿನಗಳಲ್ಲಿ.

ಗೊರವಪ್ಪಗಳು ಕುರುಬರಾದರೆ ಜುಂಜಪ್ಪಗಳು[14] ಕಾಡಗೊಲ್ಲರು. ಇವರ ಧರ್ಮದ ಮಾತೃಸ್ಥಳ ಚಿಕ್ಕನಾಯಕನಹಳ್ಳಿ ತಾಲೂಕಲ್ಲ. ಗುಬ್ಬಿ ತಾಲೂಕು ಹಾಗಲವಾಡಿ. ಆದರೆ ಈ ಧಾರ್ಮಿಕ ವೃತ್ತಿಗಾಯಕರ ಆಡುಂಬೊಲ ಚಿಕ್ಕನಾಯಕನ ಹಳ್ಳಿ ತಾಲೂಕು. ಇವರು ಉದ್ದನೆಯ ಪಿಳ್ಳಂ. ಗೋವಿ ಹಿಡಿದು ಊದುತ್ತಾ, ಒಂದು ಬಿದಿರುದೊಣ್ಣೆಗೆ ಬಣ್ಣಬಣ್ಣದ ಬಟ್ಟೆ ಸುತ್ತಿ, ಅದಕ್ಕೆ ಹಲವು ಚೇಳು. ಹಾವಿನ ಬೆಳ್ಳಿ ಹಿತ್ತಾಳೆ ಪ್ರತಿಮೆಗಳನ್ನು ಸಿಕ್ಕಿಸಿರುತ್ತಾರೆ—ಅದನ್ನು ಹೆಗಲಮೇಲೆ ಹೊತ್ತು, ಎತ್ತಪ್ಪ

---

14 ನೋಡಿ : ಜೀ ಶಂ ಪ ರವರ ಜನಪದ ಕಾವ್ಯ ಕಥೆಗಳು ಪುಸ್ತಕದ ಜುಂಜಪ್ಪನ ಕಥೆಗಳು—ಪುಟ. ೨೯೧–೩೪೫.

ಜುಂಜಪ್ಪ, ಹಾಗಲವಾಡಿ ಜುಂಜಪ್ಪ ಹರಿಯೊ ಹಾವಿನ ಗಂಡ, ಉರಿಯೊ ಕಿಚ್ಚಿನ ಗಂಡ ...ಅವರ ಮಕ್ಕಳು ಮರಿ, ದನಕುರಿ ಇವುಗಳಾಗೆ ಹಾವು ಚೇಳು ಏನಾರ ಆಗಿ ಕಂಡೀಯಪ್ಪಾ...' ಎಂದು ಹೇಳುತ್ತಾ, ಕೊಟ್ಟ ಭಿಕ್ಷೆ ಸ್ವೀಕರಿಸುತ್ತಾ ಹೋಗುತ್ತಾರೆ. ಜುಂಜಪ್ಪ ಇವರ ಕುಲದೈವ.

**ಹಬ್ಬ, ಆಚರಣೆಗಳು**

ಈ ತಾಲೂಕಿನಲ್ಲಿ ವೀರಶೈವರು, ಕುರುಬರು, ದೇವಾಂಗದವರು, ಕುಂಚಟಿಗ ಒಕ್ಕಲಿಗರು ಇವರು ಬಹು ಸಂಖ್ಯಾತರು. ಬ್ರಾಹ್ಮಣ, ಅಕ್ಕಸಾಲೆ, ಬೆಸ್ತ, ಸರ್ಪ ಒಕ್ಕಲಿಗ, ಮೇಲ್ ಸಕ್ಕರೆ, ಉಪ್ಪಾರ, ಕುಂಬಾರ, ಹರಿಜನ ತಿಗಳರು ಮೊದಲಾದವರು ಅಲ್ಪ ಸಂಖ್ಯಾತರು. ಇವರಲ್ಲಿ ಅವರವರ ಧರ್ಮಕ್ಕೆ ತಕ್ಕಂತೆ ಹಲವು ಧಾರ್ಮಿಕ ಕಾರ್ಯಗಳು, ಮದುವೆ, ಸಂಸ್ಕಾರ ಮೊದಲಾದುವು ನಡೆಯುತ್ತವೆ. ಅವುಗಳಲ್ಲಿ ಕುರುಬರ ಹಾಗೂ ತಿಗಳರ (ವಹ್ನಿಕುಲ ಕ್ಷತ್ರಿಯರ) ವಿವಾಹ ಪದ್ಧತಿ, ಕಟ್ಟಳೆ ಇತ್ಯಾದಿಗಳು ಅಧ್ಯಯನ ಯೋಗ್ಯವಾದವುಗಳು.[15]

ಯುಗಾದಿ, ಶಿವರಾತ್ರಿ, ಗೌರಿ, ಮಹಾನವಮಿ, ಸಂಕ್ರಾಂತಿ, ಕಾರುಹಬ್ಬಗಳು ಬಹಳ ವಿಶೇಷದ ಹಬ್ಬಗಳು. ಇವುಗಳನ್ನು ಎಲ್ಲಾ ಜನಾಂಗದವರೂ ಆಚರಿಸುತ್ತಾರೆ. ಆದರೆ ಲಿಂಗಾಯತರು ದೀಪಾವಳಿಯಲ್ಲಿ ಒಂದು ವಿಚಿತ್ರ ರೀತಿಯ ಆಚರಣೆ, ಪೂಜೆ ಇಟ್ಟುಕೊಂಡಿದ್ದಾರೆ. ನರಕಚತುರ್ದಶಿ ದಿನದಿಂದ ಬಲಿಪಾಡ್ಯಮಿವರೆಗೆ ಮೂರೂ ದಿನಗಳು "ಕೆರ್ಕ" (ಕಾರ್ತಿಕೇಯ ಅಥವಾ ಷಣ್ಮುಖ)ನನ್ನು ಹಾಕುತ್ತಾರೆ ಮನೆಗಳಲ್ಲಿ. ಕೆರ್ಕ ಅಂದರೆ ಸಗಣಿ ಉಂಡೆಗಳು. ನರಕ ಚತುರ್ದಶಿಯ ದಿನ ಚೌಕಾಕಾರವಾಗಿ, ಅಮಾವಾಸ್ಯೆ ದಿವಸ ತ್ರಿಕೋಣಾಕಾರವಾಗಿ, ಬಲಿಪಾಡ್ಯಮಿ ದಿವಸ ಸ್ವಸ್ತಿಕಾಕಾರವಾಗಿ ಸಗಣಿ ಕಟ್ಟೆಕಟ್ಟಿ ಮನೆಯೊಳಗೆ ತಲೆಬಾಗಿಲಿಗೆ ಎದುರಾಗಿ ಹೂಡುತ್ತಾರೆ. ಆ ಕಟ್ಟೆಯಲ್ಲಿ ದಪ್ಪ ಹಾಗೂ ಸಣ್ಣ ಸಗಣಿಯಿಂದ ಮಾಡಿದ ಬೆನಕಗಳನ್ನು ಇಟ್ಟಿರುತ್ತಾರೆ. ಅವುಗಳಿಗೆ ಹುಚ್ಚೆಳ್ಳುಹೂವು, ಹಾಗೂ ಹೊಲದಲ್ಲಿ ಬೆಳೆದ ಎಲ್ಲ ಬಗೆಯ ಧಾನ್ಯದ ತೆನೆಗಳನ್ನೂ ಸಿಕ್ಕಿಸಿ ಪೂಜಿಸುತ್ತಾರೆ. ಪ್ರತಿದಿನವೂ ಪೂಜೆ ಎಡೆ ಆದಮೇಲೆ ತಮ್ಮ ಮನೆ, ಕೋಣೆ ದನದಕೊಟ್ಟಿಗೆ, ಅಟ್ಟ, ಎಲ್ಲೆಡೆಗಳಿಗೂ ಸಗಣಿ ಬೆನಕಗಳನ್ನು ಎರಡೆರಡು ತೆಗೆದುಕೊಂಡು ಹೋಗಿ ಇಡುತ್ತಾರೆ.

ದೀವಳಿಗೆ ಆದಮೇಲೆ ಕಾರ್ತೀಕದಲ್ಲಿ ಗೋಡೇಕೆರೆಯಲ್ಲಿ ದೀಪಾರಾಧನೆ ಬಹು ವಿಶೇಷವಾಗಿ ನಡೆಯುತ್ತದೆ. ಸುಮಾರು ಲಕ್ಷದೀಪಗಳನ್ನು ಹತ್ತಿಸಿ ವೈಭವದ ಆಚರಣೆ ಆಚರಿಸುತ್ತಾರೆ. ಜ್ಯೇಷ್ಠ ಶುದ್ಧದಲ್ಲಿ ಮೂಲ ನಕ್ಷತ್ರ ಬಂದ ವೇಳೆಗೆ ಸರಿಯಾಗಿ ಶೆಟ್ಟೀಕೆರೆಯಲ್ಲಿ ಕರಗ ನಡೆಯುತ್ತದೆ.[16] ಕರಗ ತುಂಬಾ ಖ್ಯಾತಿ ಈ ಸುತ್ತಿನ ಪ್ರದೇಶದಲ್ಲಿ.

---

15 ಇವು ಸಮಾಜಶಾಸ್ತ್ರ ದೃಷ್ಟಿಯಿಂದ, ಸಂಸ್ಕೃತಿಯ ದೃಷ್ಟಿಯಿಂದ ಅಧ್ಯಯನ ಯೋಗ್ಯವಾದವುಗಳು. ಅವುಗಳಿಗೆ ಇಲ್ಲಿ ಸ್ಥಳಾವಕಾಶವಿಲ್ಲ.

16 ನೋಡಿ: ತೀ. ನಂ. ಶಂಕರನಾರಾಯಣ, ಜಾನಪದ ವಿಚಾರ, ಪುಟ ೧೧.

**ಜನಪದ ವೈದ್ಯ :** ಸುಮಾರು ಐದು ದಶಕಗಳ ಹಿಂದೆ ಶೆಟ್ಟೀಕೆರೆಯಲ್ಲಿ ಪಂಡಿತ ಭೈರಪ್ಪ ನವರೆಂಬ ಬ್ರಾಹ್ಮಣೋತ್ತಮರಿದ್ದರು. ಅವರೇ ಅಂದಿಗೆ ಆ ಭಾಗದ ಧನ್ವಂತರಿ ! ಆಯುರ್ವೇದದ ಔಷಧಿ ಕೊಡುತ್ತಿದ್ದರು ನಾಡಿ ಹಿಡಿದು ಪರಿಶೀಲಿಸಿ. ಅಷ್ಟೇ ಪ್ರಖ್ಯಾತ ಪುರುಷನೊಬ್ಬ ಮಾಳಿಗೆಹಳ್ಳಿಯಲ್ಲಿದ್ದ. ಆತ ಕ್ಯಾನ್ಸರ್‌ಗೆ ಔಷಧಿ ಕೊಡು ತ್ತಿದ್ದ. ಗುಣವಾಗುತ್ತಿತ್ತು. ದೌರ್ಭಾಗ್ಯ ಆತ ಯಾರಿಗೂ ಹೇಳದೆ ಸತ್ತ. ಇಂತಹ ಕೆಲವೇ ಜನ ಜನಪದ ವೈದ್ಯರು ತಾಲೂಕಿನಲ್ಲಿ ಹಿಂದೆ ಇದ್ದರು. ಈಗ ಕಡಿಮೆ, ಇಲ್ಲವೇ ಇಲ್ಲ ಎಂದು ಹೇಳಬಹುದು.

ಪಶುವೈದ್ಯರು ಹಳ್ಳಿಗಳಲ್ಲಿ ಇಂದಿಗೂ ಇದ್ದಾರೆ. ವಡ್ಡರಹಳ್ಳಿ ನಂಜುಂಡಪ್ಪ, ಮಾದೀಹಳ್ಳಿ ಮರುಳಪ್ಪ ಸಾಸಲು ಮರಿಬಸವೇಗೌಡರ ಬೋರಣ್ಣ, ಉಗ್ರೇಗೌಡರ ಶಿವಣ್ಣ ಇವರು ಪ್ರಸಿದ್ಧರು. ಇಂಥವರು ನೂರಾರು ಜನ ಸಿಗುತ್ತಾರೆ.

**ಜನಪದ ಸಾಹಿತ್ಯ ಮತ್ತು ಕಲೆ**

ಸಟ್ಟಂ ಸರ್ವೊತ್ತಿನಲ್ಲಿ । ನೆಟ್ಟ ಮಧ್ಯಾನದಲ್ಲಿ
ಕೊಟ್ನಲ್ಲೆ ನಮ್ಮಪ್ಪ ಬಲಗೈಯ ।
ಕೊಟ್ನಲ್ಲೆ ನಮ್ಮಪ್ಪ ಬಲಗೈ ಭಾಷೆಯ
ತಪಿತಲ್ಲೆ ಕೆಂಚಿ ಬರುವ್ರುದೊ ॥

ಎಂದು ಆರಂಭವಾಗುವ ಪುಳಿಯಾರು ಕೆಂಚಮ್ಮ ಮೇಲಿನ ಕಥನ ಗೀತೆ ಅತ್ಯಂತ ಭಾವ ಪೂರ್ಣವಾದ ರಚನೆ[17] ಇದು ಜನಮನದಲ್ಲೇ ಅಲ್ಲಲ್ಲಿ ಉಳಿದಿದೆ.

ಅಮ್ಮನ ಗುಡಿ ಸುತ್ತ ಗವ್ಮನ್ನೊದೇನಮ್ಮ
ಗಂಡು ಭೂತಾಳೆ ಗಜನಿಂಬೆ । ಕೆಂಪವ್ನ
ಬಾಗಿಲಿಗೆ ಮುತ್ತ ಬಿಗಿಸ್ಯಾಳೆ ॥

ಎಂದು ಶೆಟ್ಟೀಕೆರೆ ಸೋಮನ ಮುಂದೆ ಹೇಳಿದರೆ, ಪೂಜಾರಿ ಒಮ್ಮೆ ಸಿಟ್ಟುಗೊಂಡು ಓಲಗದವರ ಮೇಲೆ ಒಂದು ಆಶುಕವಿತೆ ಕಟ್ಟಿದ, ಅದು ಹೀಗಿದೆ—

ಪರೆಯೋನು ಹಾಳಾದ । ಪೌರಿಯುವನು ಮಣ್ಣಾದ
ಬಗ್ಗಿ ಬಗ್ಗಿ ದೋಣ ಬಡಿಯೊವನ । ಶಿರಹೋಗಿ
ಸಿದ್ಧರ ಭೂಮೀಲೀ ಶಿವಪೂಜೆ ॥

ಸಾಸಲು ಬನಶಂಕರಿಯ ಮೇಲೆ, ಹೆಸರಳ್ಳಿ ಲಕ್ಕಮ್ಮನ ಮೇಲೆ ಹೀಗೆ ನಾನಾ ದೇವತೆಗಳ ಮೇಲೆ ವಿಧವ ಹಾಡುಗಳಿವೆ. ತಿಗಳ ಹೆಂಗಸರು, ಹರಿಜನ ಹೆಂಗಸರು ನೂರಾರು ಬಗೆಯ

———

17 ಡಾ॥ ಜೀಶಂಪ ರವರ ಜನಪದ ಖಂಡಕಾವ್ಯಗಳು ಪುಸ್ತಕದ ಪುಳಿಯಾರು ಕೆಂಚಮ್ಮ ಕಥನ ಕವನ ನೋಡಬಹುದು. ಆದರೆ ಅದಕ್ಕೂ ಪುಳಿಯಾರು ಸುತ್ತಲಿರುವ ಜನಪ್ರಿಯ ಹಾಡಿ (ನಾವು ಮೇಲೆ ಕೊಟ್ಟಿರುವುದು)ಗೂ ರಚನೆಯಲ್ಲಿ ಬಹಳ ವ್ಯತ್ಯಾಸವಿದೆ.

ಕಥೆ ಹಾಗೂ ಹಾಡುಗಳನ್ನು ಹೇಳುತ್ತಾರೆ. ತಿಗಳರಲ್ಲಿ ಮದುವೆಗೆ ಸಂಬಂಧಿಸಿದ ಹಾಗೂ ಮಹಾಭಾರತಕ್ಕೆ ಸಂಬಂಧಿಸಿದ ಹಾಡುಗಳು ಸಾವಿರಾರು.

ಹರಿಕಥೆಗೆ ಶೆಟ್ಟೀಕೆರೆ ವೀರಣ್ಣಯ್ಯನವರಿದ್ದರೆ, ನಾಟಕದ ಸೀನರಿ ಮೊದಲಾದುವುಗಳನ್ನು ಕೊಡಲು ಶೆಟ್ಟೀಕೆರೆ ರಾಮಕೃಷ್ಣಯ್ಯ, ಕುಪ್ಪೂರು ಮೋಪುರಶೆಟ್ಟಿ ಇದ್ದಾರೆ. ಕಂದಿಕೆರೆಯಲ್ಲೂ ಒಳ್ಳೆಯ ಸೀನರಿ ಇತ್ಯಾದಿಗಳಿವೆ. ಹುಳಿಯಾರು ಇದಕ್ಕೆ ಪ್ರಸಿದ್ಧಿ.

ಒಗಟು, ಗಾದೆ, ಒಡಪು, ಕತೆ, ಲಾವಣಿ, ಹಾಡು,—ಜನಪದ ಆಟಗಳು ಇವೆಲ್ಲವುಗೆಳಲ್ಲೂ ಚಿಕ್ಕನಾಯಕನಹಳ್ಳಿ ತಾಲೂಕು ತನ್ನದೇ ಆದ ವೈಶಿಷ್ಟ್ಯವನ್ನು ಉಳಿಸಿಕೊಂಡಿದೆ. ಯಕ್ಷಗಾನದಂತಿರುವ ಬಯಲುಸೀಮೆಯ ಬಯಲಾಟ, ಅಥವಾ ಮೇಳಕ್ಕೆ ಈ ತಾಲೂಕು ತೌರಾಗಿದೆ. ಶಿಷ್ಟರೂಪದ ನಾಟಕಕಲೆಗೂ ಇದು ನೆಲೆವೀಡಾಗಿದೆ. ಸಿ. ಬಿ. ಮಲ್ಲಪ್ಪನವರ ಶ್ರೀ ಚಂದ್ರಮೌಳೇಶ್ವರ ನಾಟಕ ಸಭಾ ಈ ಊರಿನದು. ಯಕ್ಷಗಾನ ಮೇಳದಲ್ಲಿ ಶೆಟ್ಟೀಕೆರೆ ಎತ್ತಿದ ಕೈ. ಶೆಟ್ಟೀಕೆರೆಯಲ್ಲಿ ಮಾರಯ್ಯ ಎಂಬ ಭಾಗವತನಿದ್ದ. ಈಗ ಆತನ ಮಕ್ಕಳಿದ್ದಾರೆ. ದಾಸಪ್ಪ ಮತ್ತು ಕೆಂಪರಾಮಯ್ಯ ಇವರು ಪ್ರಖ್ಯಾತ ಭಾಗವತರು. ನೂರಾರು ನಾಟಕ (ಮೇಳಗಳನ್ನು) ಹಳ್ಳಿಹಳ್ಳಿಗಳಲ್ಲೂ ಕುಣಿಸಿದ್ದಾರೆ. ಇವರಂತೆಯೇ ಮಾದೀಹಳ್ಳಿಯಲ್ಲಿದ್ದ ಪಾಲ್ಕುರಿಕೆ ರುದ್ರಯ್ಯನವರು, ಶೆಟ್ಟೀಕೆರೆ ಬಡಗಿ ಸಿದ್ದಯ್ಯ, ವಡೇರಹಳ್ಳಿ ಕರಡಿ ನಿಂಗಪ್ಪ ಇವರು ಪ್ರಖ್ಯಾತ ಭಾಗವತರು. ಆದರೆ ಮಾರಯ್ಯ ಮತ್ತು ಮಕ್ಕಳು ಇವರ ಮುಂದೆ ಬೇರೆಯವರಿಲ್ಲ. ಮೃದಂಗ ಬಾಜಿಸುವಲ್ಲಿ ಕೆಂಪರಾಮಯ್ಯ ಅದ್ವಿತೀಯ. ಶೆಟ್ಟೀಕೆರೆಯಲ್ಲಿ ಶನಿಮಹಾತ್ಮೆ ಬಹು ಪ್ರಸಿದ್ಧ. ಕೊಕ್ಕಟ್ಟೆ ಸಿದ್ದರಾಮಣ್ಣ ಶನಿ, ಅಗಸರಹಟ್ಟಿ ಚನ್ನಬಸಪ್ಪ ವಿಕ್ರಮಾದಿತ್ಯ, ಅವರ ನರ್ತನ ಅದ್ಭುತ ಅಮೋಘ. ಅರ್ಧಾಣಿ ಚನ್ನಣ್ಣನೆಂಬ ಹಾಸ್ಯನಟ ಇನ್ನೊಬ್ಬ ಹುಟ್ಟಿಲ್ಲ. ಮೇಳಕ್ಕೆ ಮುಖವೀಣೆ ನುಡಿಸುವವರಲ್ಲಿ ಗಂಟಿಗಯ್ಯನ ಪಾಳ್ಯದ ನಿಂಗಪ್ಪ ಮತ್ತು ಹೆಸರಳ್ಳಿ ಭೈರಪ್ಪ ಇವರು ಪ್ರಸಿದ್ಧ. ಷಹನಾಯ ನುಡಿಸಿದಂತೆ ಮುಖವೀಣೆ ನುಡಿಸಬಲ್ಲ ಪ್ರವೀಣರು ಇವರು.

ಇಂತಹ ನೂರಾರು ಕಲೆ, ಸಾವಿರಾರು ಕಲಾವಿದರನ್ನು ಕೊಟ್ಟಿದೆ ಚಿಕ್ಕನಾಯಕನಹಳ್ಳಿ ತಾಲೂಕು.

[**ಕೃತಜ್ಞತೆ :** ಈ ಲೇಖನ ಸಿದ್ಧಪಡಿಸುವಲ್ಲಿ ನೆರವಾದ ನುಚ್ಚಗಲ್ಲು ಪಾಳ್ಯದ (ಸೋಮಲಾಪುರದ) ಪುಟ್ಟಯ್ಯನ ಮಗ ಮಾದೀಹಳ್ಳಯ್ಯ (ಗೊರವಪ್ಪ), ನನ್ನ ಅಣ್ಣ ಪಂಚಣ್ಣ, ಮಿತ್ರರಾದ ಮಾಲಿ, ಎಸ್. ಜಿ. ದಯಾಶಂಕರ, ಕೊಕ್ಕಟ್ಟೆ ಮರುಳುಸಿದ್ದಪ್ಪ, ಎಸ್. ಬಿ. ಗುರುಬಸಪ್ಪ, ಎಸ್. ವಿಶ್ವೇಶ್ವರಪ್ಪ, ಪುಟ್ಟಣ್ಣಶೆಟ್ಟಿ, ಯಜಮಾನ್ ರಾಮಲಿಂಗಪ್ಪ ಮತ್ತು ಸಿದ್ದಪ್ಪ ಹಾಗೂ ಕೆಂಪರಾಮಯ್ಯ (ಭಾಗವತ)—ಇವರೆಲ್ಲರನ್ನೂ ಕೃತಜ್ಞತೆಯಿಂದ ಸ್ಮರಿಸುತ್ತೇನೆ.]

ಚಿಕ್ಕನಾಯಕನಹಳ್ಳಿ

# ಜನಪದ ಕಲಾವಿದರು

ಸಿ. ಕೆ. ಪರಶುರಾಮಯ್ಯ

## ಹರಿದಾಸ ಗಿರಿಯಪ್ಪ

ಬಾಯಿ ಬಿಟ್ಟರೆ ಸಾಕು ಹರಿನಾಮ ಸಂಕೀರ್ತನ ಪುಂಖಾನುಪುಂಖವಾಗಿ ಅಸ್ಖಲಿತವಾಗಿ ಉಸಿರಾಡಿದಷ್ಟು ಸಹಜವಾಗಿ ಹೃದಯಾಂತರಾಳದಿಂದ ಹರಿದು ಬರುತ್ತಿದ್ದ ಗಿರಿಯಪ್ಪನ ಕಂಠ ಕಂಚಿನಷ್ಟು ಸ್ಪಷ್ಟ. ಹರಿದಾಸ ಮನೆತನಕ್ಕೆ ಸೇರಿದ್ದ ಗಿರಿಯಪ್ಪ ವಂಶಪಾರಂಪರ್ಯವಾಗಿ ಬಂದ ದಾಸಸೇವೆಯನ್ನು ಅನನ್ಯ ಶ್ರದ್ಧೆ ಮತ್ತು ಭಕ್ತಿಯಿಂದ ಮಾಡಿಕೊಂಡು ಬಂದ ನಿಷ್ಕಳಂಕ ಜೀವಿ.

ಗಿರಿಯಪ್ಪ ವೃತ್ತಿಯಲ್ಲಿ ಕಂಬಳಿ ನೇಕಾರ. ಉಳಿದ ಹತ್ತಾರು ಕುಟುಂಬಗಳಂತೆ ಆತನೂ ಈ ಉದ್ಯೋಗದಿಂದಲೇ ಜೀವನ ನಡೆಸಬೇಕು. ಆದರೆ ಉಳಿದವರಿಗಿಂತ ಅವನಲ್ಲಿದ್ದ ಬೇರೆಯಾದ ಮನೋವೃತಿಯೆಂದರೆ, ಹರಿದಾಸ ಸೇವಾ ಪ್ರವೃತ್ತಿ. ಪ್ರತಿ ಶನಿವಾರ ಸ್ನಾನಮಾಡಿ. ಮಡಿಯುಟ್ಟು ಶಂಖ, ಜಾಗಟೆ, ಭವನಾಶಿ ಹಿಡಿದು ನಾಲ್ಕು ಮನೆ ಭಿಕ್ಷೆ ಮಾಡಿದ ಮೇಲೆ ಊಟ ಮಾಡುತ್ತಿದ್ದ. ಗಿರಿಯಪ್ಪನ ಮನಕ್ಕೆ ಈ ಸೇವನೆಯಿಂದ ದೊರಕುತ್ತಿದ್ದ ಸಮಾಧಾನ ಅಪಾರ. ಭಿಕ್ಷೆ ಎಂದರೆ, ಜೀವನ ನಿರ್ವಹಣೆಗೆ. ಅದೇ ಪ್ರಮುಖ ವೃತ್ತಿಯಲ್ಲ ; ಸಾಂಪ್ರದಾಯಿಕ ಪ್ರವೃತ್ತಿ.

ಗಿರಿಯಪ್ಪನಂತೆಯೇ ಇನ್ನೂ ಹತ್ತಾರು ಜನ ಹರಿದಾಸರು ನಮ್ಮಲ್ಲಿದ್ದರು. ಈಗಲೂ ಇದ್ದಾರೆ. ಆದರೆ ಹರಿದಾಸ ಸೇವಾಕಾರ್ಯ ಒಂದು ವಿಶಿಷ್ಟ ಕಲೆಯಾಗಿ ಮೈಗೂಡಿಕೊಂಡಿದ್ದು ಗಿರಿಯಪ್ಪನಲ್ಲಿ ಮಾತ್ರ. ಪ್ರತಿವರ್ಷ ಆಷಾಢಮಾಸದಲ್ಲಿ ನಡೆಯುವ ನಮ್ಮೂರಿನ ಹಳೆಯೂರು ಶ್ರೀ ಆಂಜನೇಯ ಜಾತ್ರೆ ಬಂತೆಂದರೆ, ಹರಿದಾಸರಿಗೆಲ್ಲ ಸಡಗರದ ಹಬ್ಬ. ಎರಡುವಾರ ಕಾಲ ಅವಿರತವಾಗಿ ನಡೆಯುವ ಆಂಜನೇಯ ಪೂಜೆ–ಉತ್ಸವ ಕಾರ್ಯದಲ್ಲಿ ಅವರದೇ ಪ್ರಮುಖ ಪಾತ್ರ. ಹರಿದಾಸರ ಗುಂಪಿನ ನೇತಾರನಾಗಿ ಮುಂದೆ ನಿಂತು ಉತ್ಸವಕ್ಕೆ ಕಳೆಕೊಡುತ್ತಿದ್ದ ಗಿರಿಯಪ್ಪನ ಹರಿನಾಮ ಸ್ಮರಣೆಯ ವೈಶಿಷ್ಟ್ಯ ಕೇಳಿ–ನೋಡಿದವರ ಕಣ್ಮನಗಳಲ್ಲಿ ಇಂದಿಗೂ ನೆಲೆಯಾಗಿ ನಿಂತಿದೆ.

ಅಷ್ಟು ಎತ್ತರವಲ್ಲದ ಮಟ್ಟಸವಾದ ದೇಹ, ತಲೆಗೆ ಬಣ್ಣ ಬಣ್ಣದ ರುಮಾಲು, ಹಣೆಯಲ್ಲಿ ಎರಡು ಬಿಳಿನಾಮಗಳ ನಡುವೆ ಶೋಭಿಸುವ ಕೆಂಪುನಾಮ, ಬಿಳಿ ಪಂಚೆ, ನಿಲುವಂಗಿಯ ಮೇಲೆ ಇಳಿಬಿಟ್ಟ ಬಣ್ಣ ಬಣ್ಣದ ಧೋತ್ರ, ಕಂಕುಳಲ್ಲಿ ಭವನಾಶಿ, ಶಂಖ, ಗಂಟೆ, ಬಲಗೈಯಲ್ಲಿ ಜಾಗಟೆ, ಎಡಗೈಯಲ್ಲಿ ಗರುಡಗಂಬ ಹಿಡಿದು ಬರುವ ಗಿರಿಯಪ್ಪ ಒಂದೆರಡು ನಿಮಿಷ ಕಾಲ ನಿಂತು ಪ್ರಾಸಬದ್ಧವಾಗಿ ಹರಿನಾಮಗಳನ್ನು ಹೇಳಿ,

ಶಂಖ ಊದಿ ಜಾಗಟೆಯನ್ನು ಬಾರಿಸಿದನೆಂದರೆ ಇಡೀ ವಾತಾವರಣ ಭಕ್ತಿಯ ಪರಿವೇಶ ದಲ್ಲಿ ತುಂಬುತ್ತಿತ್ತು.

ಗಿರಿಯಪ್ಪ ಅಕ್ಷರ ಕಲಿತವನೇನಲ್ಲ, ಆದರೆ ಆತನ ಉಚ್ಚಾರಣೆಯಲ್ಲಿದ್ದ ಸ್ಪಷ್ಟತೆ ಅವನ ಶ್ರದ್ಧೆ ಮತ್ತು ಆಸಕ್ತಿಯ ನಿದರ್ಶನವಾಗಿತ್ತು. ಈಗಿನಷ್ಟು ಸಂಪರ್ಕಸಾಧನ ಗಳಿಲ್ಲದಿದ್ದ ಹಿಂದಿನ ಕಾಲದಲ್ಲಿ ಏನೇ ಕಷ್ಟವಾದರೂ ಐದಾರು ವರ್ಷಕ್ಕೊಮ್ಮೆ ಯಾದರೂ ತಿರುಪತಿಗೆ ಹೋಗಿ ಮನೆ ದೇವತೆ ತಿಮ್ಮಪ್ಪನಿಗೆ ಮುಡಿಪಿನಕಾಣಿಕೆ, ಮಕ್ಕಳ ಮುಡಿ ಅರ್ಪಿಸಿ ಬರುತ್ತಿದ್ದ ತಿಮ್ಮಪ್ಪನ ಭಕ್ತಿ ಕಾಯಕ ಅಪಾರ.

ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಹೊನ್ನೇಬಾಗಿ ಗ್ರಾಮದ ವೈಷ್ಣವ ಸಂಪ್ರದಾ ಯದ ಶ್ರೀರಂಗನಾಥ ಸ್ವಾಮಿಯ ಜಾತ್ರೆ ಸುತ್ತಣಗ್ರಾಮಗಳಿಗೆ ವೈಭವದ ಹಬ್ಬ. ಈ ಉತ್ಸವಕ್ಕೆ ಪ್ರತಿವರ್ಷವೂ ಗಿರಿಯಪ್ಪನಿಗೆ ತಪ್ಪದ ಆಹ್ವಾನ. ಆ ಸಂದರ್ಭದಲ್ಲಿ ಭಕ್ತರ ಅಭೀಷ್ಟದಂತೆ, ಶ್ರೀರಂಗನಾಥನ ಪ್ರೀತ್ಯರ್ಥವಾಗಿ ಗಿರಿಯಪ್ಪ ನಡೆಸುತ್ತಿದ್ದ "ನೂರೊಂದು ಎಡೆಸೇವೆ" ಒಂದು ವಿಶಿಷ್ಟ ಆಚರಣೆ. ಜಾತ್ರೆಯ ದಿನ ಮಧ್ಯಾಹ್ನ 12 ಗಂಟೆಗೆ ಊರ ಹೊರಾಂಗಣದ ಗುಡಿಯ ಪ್ರಾಂಗಣದಲ್ಲಿ ನಡೆಯುತ್ತಿದ್ದ ಈ ವೈಭವದ ಕಾರ್ಯ ಭಕ್ತರ ಮನಸ್ಸಿನಲ್ಲಿ ಪುನೀತಭಾವಸ್ಫುರಿಸುವಷ್ಟು ಪವಿತ್ರವಾಗಿ ನಡೆಯು ತ್ತಿತ್ತು. ಅಲ್ಲಿನ ಪ್ರಮುಖ ವ್ಯಕ್ತಿಯೆಂದರೆ ಗಿರಿಯಪ್ಪ.

ಗಿರಿಯಪ್ಪ ಕಾಲವಾಗಿ ಎರಡು ದಶಕಗಳೇ ಸಂದಿವೆ. ಆತನ ನಡೆ-ನುಡಿಗಳನ್ನು ನೋಡಿದ್ದವರು ಒಮ್ಮೆ ಜ್ಞಾನಿಸಿದರೆ ಸಾಕು ; ಶಂಖ, ಜಾಗಟೆ, ಭವನಾಶಿಹಿಡಿದ ಆ ವ್ಯಕ್ತಿ ಕಣ್ಣು ಮುಂದೆ ಸುಳಿಯುತ್ತದೆ, ಹರಿನಾಮ ಸಂಕೀರ್ತನೆ ಕಿವಿಗಳಲ್ಲಿ ಅನುರಣನ ಗೊಳ್ಳುತ್ತದೆ.

## ಸಾವಿರ ಪದಗಳ ಬೋರಮ್ಮ

ಈಗಿನಂತೆ ವಿದ್ಯುದ್ದೀಪ, ಧ್ವನಿವರ್ಧಕಗಳ ಸುಳಿವಿಲ್ಲದ ಹಿಂದಿನ ಕಾಲದಲ್ಲಿ ಮದುವೆ ಮನೆಯ ಸಡಗರಕ್ಕೆ ಕಳೆಕೊಡುತ್ತಿದ್ದ ಅಂಶವೆಂದರ, ಒಸಗೆಯ ಪದಗಳು. ನಮ್ಮ ಹಿರಿಯ ಜಾನಪದ ಕೋಗಿಲೆಗಳ ಕಂಠದಿಂದ ನಿರರ್ಗಳವಾಗಿ ಹರಿದು ಬರುತ್ತಿದ್ದ ಆ ಭಾವಗೀತಾತ್ಮಕ ಮಧುರವಾಣಿ ಸಂದರ್ಭದ ಸೊಗಸನ್ನು ನೂರುಪಟ್ಟು ಹಿಗ್ಗಿಸು ತ್ತಿತ್ತು.

ನಮ್ಮೂರಿನ ಒಸಗೆಯ ಪದಗಾರ್ತಿಯರಲ್ಲಿ ಈಗ್ಗೆ ಕಾಲು ಶತಮಾನದ ಹಿಂದೆ ಬಾಳಿ ಹೋದ ಬೋರಮ್ಮನಿಗೆ ಮೊದಲ ಮನ್ನಣೆ ಸಲ್ಲುತ್ತದೆ. ನಾವು ಚಿಕ್ಕವರಾಗಿ ದ್ದಾಗಲೇ "ಬೋರಮ್ಮಜ್ಜಿ"ಯಾಗಿದ್ದ ಆ ಹಿರಿಯ ಜೀವ ಹೃದ್ಗತಮಾಡಿಕೊಂಡಿದ್ದ ಪದಗಳು ಅಸಂಖ್ಯಾತ. ಆಕೆಗೂ ಹಿರಿಯ ತಲೆಮಾರಿನವರಾಗಿದ್ದ ಚಿಕ್ಕಚೆನ್ನಮ್ಮ, ದೊಡ್ಡಚನ್ನಮ್ಮ, ಎಂಬುವರಿಂದ ಕಲಿತ ಪದಗಳನ್ನು ತನ್ನವನ್ನಾಗಿಸಿಕೊಂಡು ಉಸಿರಾಡಿ ಸಿದಷ್ಟು ಸಹಜವಾಗಿ ಹೇಳುತ್ತಿದ್ದ ಬೋರಮ್ಮನ ಜ್ಞಾಪಕಶಕ್ತಿ ಅಸಾಧಾರಣ ವಾದುದ್ದು.

ಬದುಕು ಸಮೃದ್ಧವಾಗಿದ್ದ ಹಿಂದಿನ ಕಾಲದಲ್ಲಿ ಮದುವೆ ಒಂದು ವಿರಾಮ ಕಾರ್ಯಕ್ರಮ, ಅದು ಈಗಿನಂತೆ ಒಂದು ದಿನ ಮಧ್ಯಾಹ್ನಕ್ಕೆ ಮುಗಿಯುತ್ತಿರಲಿಲ್ಲ. ನಾಲ್ಕೈದು ದಿನಗಳ ವ್ಯವಸ್ಥಿತವಾದ ಸಂಭ್ರಮದ ಕಾರ್ಯ, ಒಂದೊಂದು ಕಾರ್ಯಕ್ಕೂ ಹತ್ತೆಂಟು ಶಾಸ್ತ್ರ ಸಂಪ್ರದಾಯ, ಅವೆಲ್ಲ ಚಾಚೂತಪ್ಪದೆ ನಡೆಯಬೇಕು. ಅವೆಲ್ಲ ಸಂದರ್ಭವನ್ನು ಅರ್ಥಪತ್ತಾಗಿ ವರ್ಣಿಸುವ ಪದಗಳನ್ನು ಹೇಳಲೇಬೇಕು, ಬೋರಮ್ಮನ ಸರಕಿನಲ್ಲಿ ಅದಕ್ಕೆಲ್ಲ ಅಗತ್ಯವಾದ ಪದಗಳು ತುಂಬಿದ್ದವು.

ಹುಡುಗಿ ಮೈನೆರೆದಾಗ ಮೂರು ದಿನ ಮನೆಯ ಜಗುಲಿಯ ಮೇಲೆ ಹಸಿರು ಗುಡಿಸಲಿನಲ್ಲಿಟ್ಟು ಪ್ರತಿಸಂಜೆ ಹಾಲು–ತುಪ್ಪ, ಹರಿಶಿನ–ಚಂದನತೊಡೆದು ನೀರೆರೆದು ಮಡಿಯುಡಿಸಿ, ಮಡಿಲುದುಂಬುವ ಸಂಪ್ರದಾಯವನ್ನು ವರ್ಣಿಸುತ್ತಿದ್ದ ಬೋರಮ್ಮನ ಪದಗಳು ಸ್ಫುರಿಸುತ್ತಿದ್ದ ಅರ್ಥ ಪರಂಪರೆ ಅವರ್ಣನೀಯ. ಹೆಣ್ಣು ಕೇಳಲು ಬಂದು ಒಪ್ಪಿಗೆಯಾಗಿ, ವೀಳ್ಯ–ಮಾತು ಕೊಟ್ಟು, ತೆಗೆದುಕೊಂಡು, ಸಂಭ್ರಮದ ಮದುವೆ ನಡೆದು, ಬೀಗರನ್ನು ಉಪಚರಿಸಿ, ಮಗಳನ್ನು ಕಳಿಸಿ ಮರುಗುವ ಹೃದಯ ಸ್ಪರ್ಶಿ ಸಂದರ್ಭದವರೆಗೆ ಪ್ರತಿಯೊಂದು ಘಟ್ಟವನ್ನೂ ವಿವರಣಾತ್ಮಕವಾಗಿ ಹಾಡುತ್ತಿದ್ದ ಬೋರಮ್ಮನ ಪದಗಳು ಕೇಳುವವರ ಮನಸ್ಸಿನಲ್ಲಿ ಜೀವನ ನಾಟಕದ ಸ್ಪಷ್ಟ ಚಿತ್ರವನ್ನು ನಿಲ್ಲಿಸುತ್ತಿದ್ದುವು.

ಬೋರಮ್ಮನ ಕೆಲಸ ಉಣ್ಣೆ ನೂಲುವುದು. ಗಂಡನ ಕಂಬಳಿ ನೇಯ್ಗೆವೃತ್ತಿಗೆ ನೆರವಾಗ ಬೇಕಾಗಿದ್ದ ಆಕೆ ಮನೆಗೆಲಸ, ಮಕ್ಕಳ ಪಾಲನೆಯ ಜೊತೆಯಲ್ಲೇ ಬಂಧು ಬಳಗದವರ ಮದುವೆ ಮುಂಜಿಗಳಿಗೆ ಕರೆದಾಗ ಹೋಗಿ ಹಾಡಬೇಕಾಗಿತ್ತು. ಇದು ಕಷ್ಟವಾದರೂ ಎಂದೂ ಆಹ್ವಾನವನ್ನು ತಿರಸ್ಕರಿಸದೇ, ಹೋಗಿ ಹಾಡಿ ಬರುವ ಔದಾರ್ಯ–ಆಸಕ್ತಿ ಬೋರಮ್ಮನಲ್ಲಿ ನೆಲೆಗೊಂಡಿದ್ದುವು. ಇಂದಿನ ಆಧುನಿಕ ಪರಿಕರಗಳ ಯುಗದಲ್ಲಿ ಬೋರಮ್ಮ ಬದುಕಿದ್ದರೆ, ಅಪೂರ್ವ ಪದಸಂಪತ್ತಿನ ಅನರ್ಘ್ಯಗಣಿಯೊಂದು ದೊರೆತಂತಾಗುತ್ತಿತ್ತು. ಆಕೆಯ ಪದಗಳನ್ನೆಲ್ಲ ಪ್ರತಿಮಾಡಿ ಅಚ್ಚುಹಾಕಿಸುವಂತಿದ್ದರೆ, ಜಾನಪದ ಹಾಡುಗಳ ಕ್ಷೇತ್ರಕ್ಕೆ ಒಂದು ಉದ್ಗ್ರಂಥವೇ ದೊರೆಯುತ್ತಿತ್ತು.

ಬೋರಮ್ಮ ಕಾಲವಾಗಿ ಮೂರು ದಶಕಗಳ ಹತ್ತಿರವಾಗುತ್ತಿದೆ, ಆದರೆ ಆಕೆಯ ಧ್ವನಿ ಕೇಳಿದ್ದವರ ಹೃದಯದಲ್ಲಿ ಇಂದಿಗೂ ಆ ವ್ಯಕ್ತಿತ್ವ ಮಾರ್ದನಿಗೊಡುತ್ತದೆ.

## ನೀರುಗಂಟಿಕೆಂಪಯ್ಯ

ವೃತ್ತಿಯಲ್ಲಿ ನೀರುಗಂಟಿ, ಪ್ರವೃತ್ತಿಯಲ್ಲಿ ಗ್ರಾಮದೇವತೆ ಕೆಂಪಮ್ಮನ ಪೂಜಾರಿ ಕೆಂಪಯ್ಯ ನಮ್ಮೂರಿನ ದೊಪರಂ ಹಬ್ಬದ ಸಂದರ್ಭದಲ್ಲಿ ಅರ್ಜುನಜೋಗಿಯ ವೇಷ ಧರಿಸಿ ಕುಣಿಯುತ್ತ ಬಂದನೆಂದರೆ, ಹರೆಯದ ಹೆಣ್ಣು ಮಕ್ಕಳ ಹೃದಯದಲ್ಲಿ ಕೋಲಾಹಲವೇ ಆಗುತ್ತಿತ್ತೆಂದರೆ ಅತಿಶಯೋಕ್ತಿಯಲ್ಲ. ಆತನನ್ನು ಆ ವೇಷದಲ್ಲಿ ನೋಡಿದಾಗ "ಸಿಟ್ಟಿಸಿದರೆ ಮುತ್ತ ಮುದುಕಿಗಾದರೂ ಮೈ ರೋಮಾಂಚನ ದಿಟ್ಟಿಸುತಿಹುದು, ಇನ್ನು

ಬಟ್ಟ ಜವ್ವನೆಯರು ಅಂತಿಂತಾದರೆಂದರೆ ಹೇಳಲೇನು''—ಎಂಬ ಕನ್ನಡ ಕವಿ ರತ್ನಾಕರನ ಪದ್ಯ ಜ್ಞಾಪಕಕ್ಕೆ ಬರುತ್ತಿತ್ತು.

ಕೆಂಪಯ್ಯನದು ಲಕ್ಷಣವಾದ ತೆಳ್ಳನೆಯ ಆಕರ್ಷಕ ನಿಲುವು. ನೀಳವಾದ ಮೂಗು, ತೆಳ್ಳನೆಯ ತುಟಿ, ಪುಟ್ಟಬಾಯಿ, ಅಗಲವಾದ ಕಿವಿ, ತಿದ್ದಿ ಹುರಿಮಾಡಿದ ಮೀಸೆ, ಹೊಳಪಾದ ಕಣ್ಣು, ಪದಹಾಡುವುದಕ್ಕೇ ರೂಪುಗೊಂಡ ಸಣ್ಣದನಿ, ಕಾಲಿಗೆ ಬಿಗಿದ ಬಿಳಿಚಲ್ಲಣ, ಅದರ ಮೇಲೆ ಮೊಣಕಾಲಿನವರೆಗೆ ತುಂಬುಕೊರಳಿನ ಕಪ್ಪು ನಿಲುವಂಗಿ, ಸೊಂಟದ ಬಲಕ್ಕೆ ಚುಂಗು ಬಿಟ್ಟು ಬಿಗಿದುಕಟ್ಟಿದ ಜರಿ ಅಂಚಿನ ಕೆಂಪುಪಟ್ಟಿ, ಬೆರಳುಗಳಲ್ಲಿ ಹೊಳೆಯುವ ಉಂಗುರ, ಕೊರಳಲ್ಲಿ ಮುತ್ತಿನಹಾರ, ತಲೆಗೆ ಜರಿಯ ಕೆಂಪು ರುಮಾಲು, ಹಣೆಯಲ್ಲಿ ಅಷ್ಟಗಂಧ, ಮೇಲೊಂದು ಕಪ್ಪುಸಾದಿನಗೆರೆ, ಅದರ ಮಧ್ಯಕ್ಕೆ ಚಿಕ್ಕ ಕುಂಕುಮದ ಬೊಟ್ಟು, ಬಲಗೈಯಲ್ಲಿ ಮಿಡಿದರೆ ಮಾತಾಡುವ ಚಿಕ್ಕ ಸೋರೆಯ ಕಿನ್ನರಿ, ಎಡಗೈಯಲ್ಲಿ ಕಿರುಗೆಜ್ಜೆ ಕಟ್ಟಿದ ಚಿಕ್ಕ ಚಿಟಿಕೆಯ ತಾಳ, ಕಾಲುಗಳಿಗೆ ಗೆಜ್ಜೆಸರ—ಇದು ಕೆಂಪಯ್ಯನ ಅರ್ಜುನಜೋಗಿಯ ವೇಷ. ಹೃದಯದಲ್ಲಿ ಹೊಮ್ಮಿ, ನೀಳವಾದ ಕತ್ತಿನಲ್ಲಿ ಬೆಳೆದು ಪುಟ್ಟಬಾಯಿಂದ ಹೊರ ಬರುತ್ತಿದ್ದ ''ಪರಪರಾ ಪರನೆ ಜಯುತೋ, ಇವು ಮೂರು ಪುರವಾ ಗೆದ್ದವನೆ ಜಯುತೋ! ಕರುಣಿಸು ನಂಜುಂಡ ಕಾರಾಜ್ಞನಾಭಯ್ಯ, ಭೋಗ ಭೋಗನಂಜುಂಡ ಜಯುತೋ'' ಎಂಬ ಸೊಲ್ಲಿಗೆ ಸರಿಯಾಗಿ ಹೆಜ್ಜೆ ಹಾಕುತ್ತ ಒನೆದಾಡಿ ಕುಣಿಯುತ್ತ ಕಿನ್ನರಿ ನುಡಿಸುತ್ತಿದ್ದ ಕೆಂಪಯ್ಯನ ಜೋಳಿಗೆ ಅರೆಘಳಿಗೆಯಲ್ಲಿ ಹಣದಿಂದ ತುಂಬಿ ಹೋಗುತ್ತಿತ್ತು.

ಕೆಂಪಯ್ಯನ ವ್ಯಕ್ತಿತ್ವ ಅವನನ್ನು ನೋಡಿದ್ದವರ ಮನಸ್ಸಿನಲ್ಲಿ ನಾಲ್ಕು ಕಾಲ ಅಚ್ಚೊತ್ತಿದಂತೆ ನೆಲೆನಿಲ್ಲಲು ಕಾರಣವಾದ ಮತ್ತೊಂದು ಅಂಶವೆಂದರೆ ಅವನ ಸೋಮನ ಕುಣಿತ. ಗ್ರಾಮಾಂತರ ಪ್ರದೇಶಗಳ ಗ್ರಾಮ ದೇವತೆಯ ಜಾತ್ರೆ-ಉತ್ಸವಕಾಲದಲ್ಲಿ ದೇವತೆಯ ಮುಂದೆ ಅಂಗರಕ್ಷಕರಂತೆ ಕುಣಿಯುತ್ತಿದ್ದ ಸೋಮನ ಕುಣಿತ ಕೆಂಪಯ್ಯನಿಗೆ ವಂಶಪಾರುಪರ್ಯವಾಗಿ ಬಂದ ವೃತ್ತಿಯಾದರೂ ಆತನು ತನ್ನ ವೈಯಕ್ತಿಕ ಆಸಕ್ತಿ ಮತ್ತು ಪ್ರತಿಭೆಯಿಂದ ಅದನ್ನು ಒಂದು ವಿಶಿಷ್ಟ ಕಲೆಯಾಗಿ ಮೈಗೂಡಿಸಿಕೊಂಡಿದ್ದ. ಕೆಂಪಮ್ಮನ ಉತ್ಸವ ಕಾಲದಲ್ಲಿ ಕೆಂಪಯ್ಯ ಸೋಮನನ್ನು ಹೊತ್ತು ಕಾಲ ಹಾಕಲು ಆರಂಭಿಸಿದನೆಂದರೆ ಜನ ಆಸಕ್ತಿಯಿಂದ ಗುಂಪು ಸೇರುತ್ತಿತ್ತು. ದೇವಿಯ ವಿವಿಧ ಬಣ್ಣಗಳ ಸೀರೆಯನ್ನು ಕಲಾತ್ಮಕವಾಗಿ ಇಳಿಬಿಟ್ಟು ಉಗ್ರರೂಪದ ಸೋಮನ ಶಿರವನ್ನು ಹೊತ್ತ ಕೆಂಪಯ್ಯ ಮೈದುಂಬಿ ಕುಣಿಯುತ್ತಿದ್ದ. ಡೊಳ್ಳು, ಆರೆ, ಮೌರಿ, ವಾದ್ಯಗಳ ಹಿನ್ನೆಲೆಯ ಗತ್ತಿಗನುಸಾರವಾಗಿ ಕೈಯಲ್ಲಿ ಹಿಡಿದ ಬೆಳ್ಳಿಯ ಬೆತ್ತವನ್ನು ಕಲಾತ್ಮಕವಾಗಿ ತಿರುಗಿಸುತ್ತ ದೇವಿಯ ಮುಂದೆ ತಲೆಬಾಗಿ, ನಡುಬಾಗಿ, ಓಲಾಡಿ, ಒನೆದಾಡಿ ಕುಣಿಯುವ ಕೆಂಪಯ್ಯ ಎಂತಹ ಆವೇಶ ಸ್ಥಿತಿಯಲ್ಲೂ ಆಯತಪ್ಪುತ್ತಿರಲಿಲ್ಲ.

ತಾನು ಸೋಮನನ್ನು ಹೊತ್ತು ಕುಣಿಯುವುದರ ಜೊತೆಗೆ ಸೋಮನನ್ನು ಹೊತ್ತವರನ್ನು ಕುಣಿಸಿ, ಹಾಡುವುದು ಕೆಂಪಯ್ಯನ ಇನ್ನೊಂದು ವೈಶಿಷ್ಟ್ಯ. ಸೋಮ

ನನ್ನು ಹೊತ್ತ ಇಬ್ಬರು ಕುಣಿಯಲು ಸಿದ್ಧರಾದಾಗ ಕೆಂಪಯ್ಯ ದೇವಿಯ ಸ್ತುತಿಪದ ಗಳನ್ನು ಹಾಡಿ ಕುಣಿಯುವವರನ್ನು ಪ್ರೇರೇಪಿಸುತ್ತಿದ್ದ. ಉದಾಹರಣೆಗೆ, ಹಿನ್ನೆಲೆಯ ವಾದ್ಯಗಾರರು ಸಣ್ಣ ಸ್ವರದಲ್ಲಿ ಶೃತಿ ಆರಂಭಿಸಿದ ಕುಣಿಯುವವರು ಮೆಲ್ಲ ಮೆಲ್ಲನೆ ಹೆಜ್ಜೆ ಹಾಕಲು ಅನುವಾಗುತ್ತಿದ್ದಂತೆಯೇ ಕೆಂಪಯ್ಯ "ಚಿಕ್ಕನಾಯಕನಹಳ್ಳಿ, ದೊಡ್ಡ ಬಾಣಾವಾರ, ತಗ್ಗಿನಾಗೈತೆವನಹಳ್ಳಿ. ತಗ್ಗಿನಾಗೈತೆ ವನವಳ್ಳಿ ಹುಡಿಗೇರ ಹುಬ್ಬಿನ ಮ್ಯಾಲೈತೆ ಹುಡಿನಾವು" ಎಂಬ ಪದ ಹಾಡಿ ಹಿಂದೆಯೇ, ಬಹೋಹೋ ಬಹ್ ಎನ್ನುತ್ತಿದ್ದಂತೆಯೇ ಡೊಳ್ಳು: ಅರೆ, ಮೌರಿಯವರು ಎತ್ತಿದ ಸ್ವರದಲ್ಲಿ ವಾದ್ಯ ಬಾರಿಸುವುದರೊಂದಿಗೆ ಸೋಮಗಳ ಕುಣಿತ ಆರಂಭವಾಗಿ 5–10 ನಿಮಿಷಕಾಲ ವಿವಿಧ ಗತ್ತುಗಳಲ್ಲಿ ಮುಂದುವರಿಯುತ್ತಿತ್ತು. ಹೀಗೆಯೇ "ಅಮ್ಮನ ಗುಡಿಸುತ್ತ ಘಮ್ಮನ್ನದೇನಮ್ಮ ಗಂಡುಭೂತಾಳೆ ಗಜನಿಂಬೆ ಮರದಡಿ ದಂಡು ಬಿಟ್ಟವಳೆ ಕೆಂಪವ್ವ" ಎಂಬಂತಹ ನೂರಾರು ಪದಗಳು ಕೆಂಪಯ್ಯ ಮಧುರ ಕಂಠದಿಂದ ಹೊರಬರುತ್ತಿದ್ದವು ; ಸೋಮಗಳು ಮೈಮರೆತು ಕುಣಿಯುತ್ತಿದ್ದವು : ಜನ ಕಣ್ಮನ ತಣಿಯುವಂತೆ ಆನಂದಿ ಸುತ್ತಿದ್ದರು.

ನಮ್ಮೂರಿನ ಕೆರೆಯ ನೀರುಗಂಟಿ ಕೆಲಸ ಮತ್ತು ಕೆಂಪಮ್ಮನ ಪೂಜೆಯಿಂದ ಬರುವ ಆದಾಯದಿಂದ ನಿರಾತಂಕ ಜೀವನನಡೆಸಿದ ಕೆಂಪಯ್ಯ ಇಳಿವಯಸ್ಸಿನಲ್ಲಿ ಸೋಮ ನನ್ನು ಹೊರಲು ಸಾಧ್ಯವಾಗದಿದ್ದಾಗ ಆಕೆಯ ಮಹಿಮೆಗಳನ್ನು ಹಾಡಿ ಅರ್ಜಿಸಿ ಕೃತಾರ್ಥವಾದ ಪುಣ್ಯಜೀವಿ.

## ಬಯಲಾಟದ ಭೀಮಣ್ಣ

ಆ ಕಾಲಕ್ಕೆ ಇನ್ನೂ ಈಗಿನಂತೆ ಸಿನಮಾ ರೇಡಿಯೋ ಮುಂತಾದ ಆಧುನಿಕ ಮನರಂಜನಾ ಮಾಧ್ಯಮಗಳು ಹೆಚ್ಚು ಪ್ರಚಾರಕ್ಕೆ ಬಂದಿರಲಿಲ್ಲ. ನಮ್ಮೂರಿನಲ್ಲೂ ಆಗಿನ ಪ್ರಮುಖ ಮನರಂಜನಾ ಮಾಧ್ಯಮವೆಂದರೆ ಬಯಲಾಟಗಳ ಪ್ರದರ್ಶನ. ಹಬ್ಬ–ಹರಿದಿನ, ಜಾತ್ರೆ–ಉತ್ಸವ ಸಂದರ್ಭಗಳಲ್ಲಿ ಅನಿವಾರ್ಯ ಕಾರ್ಯಕ್ರಮವಾಗಿ ನಡೆಯುತ್ತಿದ್ದ ಬಯಲಾಟ ಆಬಾಲವೃದ್ಧರಾದಿಯಾಗಿ ಎಲ್ಲರಿಗೂ ಆನಂದ ನೀಡುವ ಜೊತೆಗೆ ಮಾರ್ಗದರ್ಶನ ನೀಡುವ ಮಾಧ್ಯಮವಾಗಿತ್ತು.

ಬಯಲಾಟಕ್ಕೆ ಪೌರಾಣಿಕ ಐತಿಹಾಸಿಕ ವಿಷಯಗಳನ್ನು ಆಯ್ಕೆ ಮಾಡಿಕೊಂಡ ಕಲಾವಿದರ ಗುಂಪು ಭಾಗವತನ ನಿರ್ದೇಶನದಲ್ಲಿ ಪ್ರಸಂಗವನ್ನು ಅಭ್ಯಾಸ ಮಾಡುತ್ತಿದ್ದರು. ಬಯಲಾಟ ಕಳೆಕಟ್ಟಲು ಅಭಿನಯದ ಜೊತೆಗೆ ರಂಗಸಜ್ಜಿಕೆ, ಹಿನ್ನೆಲೆ ಪರದೆ ವೇಷ–ಭೂಷಣಗಳು ಅಗತ್ಯ. ಈ ಪರಿಸರಗಳಿಲ್ಲದೆ ಬಯಲಾಟ ಶೋಭಿಸುವುದಿಲ್ಲ. ಈ ಅಗತ್ಯಗಳನ್ನು ಮನಗಂಡು ಅತ್ಯಂತ ಆಸಕ್ತಿಯಿಂದ ಬಯಲಾಟಕ್ಕೆ ಬೇಕಾದ ಪರಿಕರಗಳನ್ನು ರಚಿಸಿ, ರೂಪಿಸಿ ಒದಗಿಸುತ್ತಿದ್ದ ವ್ಯಕ್ತಿಯೆಂದರೆ ನಮ್ಮೂರಿನ ಕುಂಟ ಹನುಮಂತಯ್ಯನ ಭೀಮಣ್ಣ.

ವೃತ್ತಿಯಲ್ಲಿ ಕೃಷಿಕನಾದರೂ ಅವಿಭಕ್ತ ಕುಟುಂಬದಲ್ಲಿ ಬೆಳೆದಿದ್ದ ಭೀಮಣ್ಣ ಈ ಕಲೆಯನ್ನು ಪ್ರವೃತ್ತಿಯಾಗಿ ಮಾಡಿಕೊಂಡ ಮೇಲೆ ಮನೆಯ ದುಡಿಮೆಯ ಕಡೆಗೆ ಚಿಕ್ಕಂದಿನಲ್ಲೇ ತಿಲಾಂಜಲಿಯನ್ನಿಟ್ಟಿದ್ದ. ಆತನ ಅಭಿರುಚಿಯನ್ನು ಅರ್ಥಮಾಡಿಕೊಂಡಿದ್ದ ಮನೆಯವರು ಭೀಮಣ್ಣನನ್ನು ದುಡಿಮೆಗೆ ಒತ್ತಾಯಿಸಿದವರಲ್ಲ. ಹೀಗಾಗಿ ಭಿಮಣ್ಣನ ಕಲಾ ಆಸಕ್ತಿಗೆ ಗುರಿಮಾಡಿತು. ಬಯಲಾಟದ ಪ್ರಸಂಗಗಳಿಗೆ ಬೇಕಾದ ಒಡವೆ-ವಸ್ತ್ರ ಆಯುಧ, ಪರನೆ ಮುಂತಾದ ಸಲಕರಣೆಗಳನ್ನು ಕಲಾತ್ಮಕವಾಗಿ ರೂಪಿಸಿಸಂಗ್ರಹಿಸಿಡುವುದರಲ್ಲಿ ಪರಿಣತಿಹೊಂದಿದ. ಹೋದ ಕಡೆಯಲ್ಲೆಲ್ಲ ಭೀಮಣ್ಣನ ಕುತೂಹಲ ಅಂತಹ ವಸ್ತುಗಳನ್ನು ಹುಡುಕಿ ಕೂಡಿಡುವುದರ ಕಡೆಗೇ ಇರುತ್ತಿತ್ತು. ಈ ವೈಯಕ್ತಿಕ ಒಲವಿನಿಂದ ನಮ್ಮೂರು ಮತ್ತು ಸುತ್ತಮುತ್ತಣ ಬಯಲಾಟ ಪ್ರದರ್ಶನಗಳಿಗೆ ಭೀಮಣ್ಣನ ಪರಿಕರಗಳು ಅನಿವಾರ್ಯವಾದವು.

ಹಳೆಯ ಕಾಲದ ವಿಶಾಲವಾದ ಅವರ ಮನೆಯ ಪಡಸಾಲೆಯಲ್ಲಿ ದೊಡ್ಡದೊಂದು ಮರದ ಪೆಟ್ಟಿಗೆ. ಅದರ ಬಾಯಿ ತೆಗೆದರೆ ಗದೆ. ಬಿಲ್ಲು, ಕಿರೀಟ, ಭುಜಕೀರ್ತಿ ಸೊಂಟಪಟ್ಟಿ, ಕತ್ತಿ, ಗುರಾಣಿ, ಹಾರ, ತುರಾಯಿ, ಜರತಾರಿಯನ್ನು ಮೀರಿಸುವ ಅಂಚಿನ ಸೀರೆ, ಕುಪ್ಪಸಗಳನ್ನೊಳಗೊಂಡು ಸಕಲ ಉಡುಗೆತೊಡಿಗೆಗಳು ತುಂಬಿತುಳುಕುತ್ತಿದ್ದುವು. ನೋಡುವವರ ಕಣ್ಣು ಕೋರೈಸುವಂತೆ ಯಕ್ಷಕಿನ್ನರ ಲೋಕವನ್ನೇ ಕಣ್ಣೆದುರಿಗೆ ನಿಲ್ಲಿಸುತ್ತಿದ್ದ ಆ ಒಡವೆ ವಸ್ತ್ರಗಳು ಭೀಮಣ್ಣನ ಅಭಿರುಚಿಯ ದ್ಯೋತಕವಾಗಿದ್ದುವು.

ನಮ್ಮೂರಿನ ಕಲಾವಿದರು ಅಭಿನಯಿಸುತ್ತಿದ್ದ ಬಯಲಾಟಗಳು ಮುಖ್ಯವಾಗಿ ಪೌರಾಣಿಕ ಪ್ರಸಂಗಗಳನ್ನೇ ಅವಲಂಬಿಸಿದ್ದರಿಂದ ಭೀಮಣ್ಣನ ವಸ್ತು ವಿಶೇಷಗಳು ಅತ್ಯಂತ ವೈಭವದಿಂದ ಬೆಳಗಿ ಪ್ರೇಕ್ಷಕರ ಕಣ್ಣೆದುರಿಗೆ ಕೈಲಾಸ-ವೈಕುಂಠಗಳನ್ನೇ ಸೃಷ್ಟಿಸುತ್ತಿದ್ದುವು. ಭೀಮಣ್ಣ ಪರಿಕರಗಳನ್ನು ಒದಗಿಸುತ್ತಿದ್ದುದರ ಜೊತೆಗೆ ಆಗಾಗ ಬಯಲಾಟದ ಕೆಲವು ಪಾತ್ರಗಳನ್ನು ಅಭಿನಯಿಸುತ್ತಿದ್ದುದೂ ಉಂಟು. ಆತನಲ್ಲಿದ್ದ ಕಲಾಭಿರುಚಿಯ ಪರಿಣಾಮವಾಗಿ ಆ ಪಾತ್ರವಿಶೇಷ ಕಳೆಯಿಂದ ಶೋಭಿಸುತ್ತಿತ್ತು.

ಭೀಮಣ್ಣ ಹಚ್ಚಿಕೊಂಡಿದ್ದ ಮತ್ತೊಂದು ಹವ್ಯಾಸವೆಂದರೆ, ನಮ್ಮೂರಿನ ಎಲ್ಲಮ್ಮನ ಗುಡಿಯ ಗೌಡಿಕೆ. ಈ ಗ್ರಾಮದೇವತೆಯ ಗುಡಿಗೆ ಯಾವುದೇ ಆದಾಯ ತರುವ ಆಸ್ತಿ–ಪಾಸ್ತಿಗಳಿಲ್ಲ. ಭಕ್ತರೂ ಕೊಡುವ ಹರಕೆ-ಕಾಣಿಕೆಗಳಿಂದಲೇ ಪೂಜೆ ಉತ್ಸವಕಾರ್ಯಗಳು ನಡೆಯಬೇಕು. ಭೀಮಣ್ಣನ ನಿಷ್ಠೆಯ ವ್ಯವಹಾರದಿಂದ ದೇವಾಲಯದ ಆದಾಯದ ಒಂದು ಕಾಸೂ ಪೋಲಾಗುತ್ತಿರಲಿಲ್ಲ. ವರ್ಷಕ್ಕೆ ಒಮ್ಮೆ ನಡೆಯುವ ದೇವಿಯ ಜಾತ್ರೆ ಸಂದರ್ಭದಲ್ಲಿ ಭೀಮಣ್ಣನಿಗೆ ಬಿಡುವಿಲ್ಲದ ಕೆಲಸ. ಗುಡಿಗೆ ಸುಣ್ಣ ಬಣ್ಣ ಬಳಿಸುವುದು, ಚಪ್ಪರಹಾಕಿಸುವುದು ಮೊದಲ್ಗೊಂಡು ದೇವಿಯ ಗಂಗಾಸ್ನಾನ, ಕೆಂಡ, ಆರತಿ, ಸಿಡಿ, ಭಂಡಾ–ಹೀಗೆ ಐದಾರುದಿನ ಭೀಮಣ್ಣ ಕೆಲಸವಿದ್ದರೂ ಅವನ ಉತ್ಸಾಹ ಸದಾ ಗರಿಗೆದರಿರುತ್ತಿತ್ತು. ಅದನ್ನು ಕಂಡ ನೂರಾರು ಕೈಗಳು

ದೇವಿಯ ಜಾತ್ರೆಯ ಕೆಲಸಕ್ಕೆಂತಾವಾಗಿಯೇ ಬಂದು ಅವನ ಹೊರೆಯನ್ನು ಹಗುರ ಮಾಡುತ್ತಿದ್ದುವು.

ಗರ್ಭಗುಡಿಯ ಮೂಲ ಮೂರ್ತಿಯ ಹಿಂದೆ ಶೋಭಿಸುವ ದೊಡ್ಡ ಆಕಾರದ ಎಲ್ಲಮ್ಮನ ವಿಗ್ರಹಕ್ಕೆ ಬಣ್ಣಬಣ್ಣದ ಪತ್ತಲಗಳನ್ನು ಇಳಿಯ ಬಿಡಿಸಿ, ಕಣ್ಣುಕೋರೈಸುವಂತೆ ಒಡವೆ. ವಸ್ತ್ರ. ಪುಷ್ಪಗಳಿಂದ ಅಲಂಕರಿಸಿ, ಗುಡಿಯ ಪ್ರಾಂಗಣದಲ್ಲಿ ದೊಡ್ಡದೊಂದು ಕನ್ನಡಿಯಿಂದ ದೇವಿಯ ಮುಖದ ಮೇಲೆ ಹೊಳಹುಬೆಟ್ಟು ನೋಡಿ ಆನಂದಿಸುವ ಭೀಮಣ್ಣ ಆಕೆಯ ಸೇವೆಯಲ್ಲಿ ತಲ್ಲೀನನಾಗುತ್ತಿದ್ದ.

ಸಂಜೆ ಹರಕೆ, ಕಾಣಿಕೆ ಆರತಿಯೊಡನೆ ತಂಡೋಪತಂಡವಾಗಿ ಗುಡಿಗೆ ಧಾವಿಸುತ್ತಿದ್ದ ಹೆಂಗಸರು ಮಕ್ಕಳಲ್ಲಿ ಭೀಮಣ್ಣನ ಭಕ್ತಿಕಾಯಕ ಗೌರವ ಭಾವನೆಯನ್ನು ಮೂಡಿಸುತ್ತಿತ್ತು. ಆಗ ಭೀಮಣ್ಣ ಅವರನ್ನು ಕುರಿತು "ನಮ್ಮಮ್ಮ ಇವತ್ತು ಹೆಂಕಾಣ್ತಾಳವ್ವ ಎನ್ಬತ್ತಾಳೇನೋ ಅನ್ನಂಗದಾಳೆ" 'ಏನ್ಕಳೆ, 'ಎನ್ಚಂದ" ಎಂದು ಹೇಳುವಾಗ ಭೀಮಣ್ಣನ ಹೃದಯ ತುಂಬಿ ಬರುತ್ತಿತ್ತು.

ಹೀಗೆ ನಮ್ಮ ಜನಪದ ಸಂಸ್ಕೃತಿಯ ಸೊಗಸನ್ನು ಸವಿಯುವುದರಲ್ಲೇ ಜೀವನ ಸವೆಸಿದ ಭೀಮಣ್ಣ ನಮ್ಮೂರಿನ ಜನರೇ ಹೇಳುವಂತೆ ಮೋಸ–ಕೃತಕಗಳನ್ನು ಕಂಡರಿಯದೆ ಕಣ್ಮುಚ್ಚಿದ ಮುಗ್ಧಜೀವಿ.

## ಭಾಗವತ ಬಂದಯ್ಯ

ನಮ್ಮೂರಿನ ದೇವಾಂಗ ಬಂಧುಗಳ ಮನೆದೇವತೆ ಬನಶಂಕರಮ್ಮ. ದೇವಾಂಗದವರು ಅವರವರ ನಂಬಿಕೆ ಸಂಪ್ರದಾಯಗಳಿಗನುಸಾರವಾಗಿ ಬೇರೆ ಬೇರೆ ದೇವರನ್ನು ಆರಾಧಿಸಿದರೂ ಅವರೆಲ್ಲರಿಗೂ ಬನಶಂಕರಮ್ಮ ಮಾತ್ರ ಸಾರ್ವತ್ರಿಕ ದೇವತೆ. ಊರಿನ ಮುಖ್ಯ ಬೀದಿಯಲ್ಲಿರುವ ಬನಶಂಕರಿಯ ಪ್ರಾಚೀನ ದೇವಾಲಯದ ಗರ್ಭಗುಡಿಯಲ್ಲಿ ಕಂಗೊಳಿಸುವ ಕಪ್ಪುಶಿಲೆಯ ಮೂಲಮೂರ್ತಿ ವಿಶಿಷ್ಟ ಕಳೆಯಿಂದ ಶೋಭಿಸಿದರೆ ಬಂಗಾರವನ್ನು ಬಾಯಿಬಿಡಿಸಿದ ಅಚ್ಚಹಿತ್ತಾಳೆ ಸಿಂಹದ ಮೇಲೆ ರಾರಾಜಿಸುವ ಪಂಚಲೋಹದ ಉತ್ಸವ ಮೂರ್ತಿಯದು ವಿಶೇಷ ಕಳೆ.

ವಿಶೇಷ ಸಂದರ್ಭಗಳಲ್ಲಿ ಹಬ್ಬಹರಿದಿನಗಳಲ್ಲಿ ಹರಕೆ ಮಾಡಿಕೊಂಡವರ ಅಭೀಷ್ಟೆಯಂತೆ ಉತ್ಸವದಲ್ಲಿ ಬಂದು ಮನೆಮನೆಮುಂದೆ ಅರ್ಚನೆ ಕೈಗೊಳ್ಳುವ ದೇವಿಯ ಮುಂದೆ ಆಕೆಯ ಮಹಿಮಾವಳಿಗಳನ್ನು ಹೇಳುವುದು ಸಂಪ್ರದಾಯ. ದೇವಿಯನ್ನು ಹಾಗೆ ಹಾಡಿಹೊಗಳುವ ಗುಂಪಿನಲ್ಲಿ ಚಿಕ್ಕಂದಿನಲ್ಲಿ ನನ್ನ ಮನಸೆಳೆದ ವ್ಯಕ್ತಿ ಬಂದಯ್ಯ. ಭಾಗವತ ಬಂದಯ್ಯನೆಂದೇ ಪರಿಚಿತವಾದ ಆ ವ್ಯಕ್ತಿ "ಅಬರಾಕು ದೇವಿ ಪರಾಕು. ಜನನಿ ಶಂಕರಿ ಜಗದಾಂಬ ಪರಾಕು" ಎಂದು ಸೊಲ್ಲೆತ್ತುತ್ತಿದ್ದಂತೆಯೇ ಹಿಮ್ಮೇಳದ ನಾಲ್ಕಾರು ಜನ ದನಿಗೂಡಿಸಿ ಜಗನ್ಮಾತೆಯ ಮಹಿಮೆಗಳನ್ನು ಉಗ್ಗಡಿಸಿ ಹೇಳುತ್ತಿದ್ದರು. ಅದಕ್ಕೆ ಹಿನ್ನೆಲೆಯಾದ ತಾಳ, ಮೌರಿ, ಕರಡೆಗಳ ವಾದನ ಗೀತೆಯ ಗತಿಗೆ ಗತ್ತು ತರುತ್ತಿತ್ತು.

ಈಗ್ಗೆ ಆಗಲೇ ಸುಮಾರು ದಶಕಗಳ ಹಿಂದೆ ನಾನು ಈ ದೃಶ್ಯವನ್ನು ನೋಡು ತ್ತಿದ್ದಾಗ ಬಂದಯ್ಯ ಆಗಲೇ 50ರ ಗಡಿಯಲ್ಲಿದ್ದ ವ್ಯಕ್ತಿ.

ವೃತ್ತಿಯಲ್ಲಿ ರೇಷ್ಮೆ–ಪತ್ತಿ ಬಟ್ಟೆ ನೇಯುವ ಕೆಲಸ. ಅದರ ಜೊತೆಗೆ ಸಂಗೀತ, ನಾಟಕ, ಬಯಲಾಟಗಳ ಬಗ್ಗೆ ಆಸಕ್ತಿ. ಹೀಗೆ ಬೆಳೆದು ಬಂದ ಆಸಕ್ತಿಯ ಪರಿಣಾಮ ವಾಗಿ ಯಕ್ಷಗಾನ ನಾಟಕಗಳಲ್ಲಿ ಅಭಿನಯ. ಅದಕ್ಕಿಂತ ಹೆಚ್ಚಾಗಿ ಯಕ್ಷಗಾನ ಪ್ರಸಂಗ ಗಳನ್ನು ಕಲಿಸಿ ನಿರ್ದೇಶಿಸಿ, ಆಡಿಸುವುದರಲ್ಲಿ ಪರಿಣತಿ.

ಬಂದಯ್ಯ ಹೇಳಿ ಕೊಳ್ಳುವಂತಹ ವಿದ್ಯಾವಂತನೇನಲ್ಲ. ಆದರೆ ಜ್ಞಾಪಕಶಕ್ತಿ ಉಚ್ಚಾರಣೆಯ ಸ್ಪಷ್ಟತೆ ಹಾಗೂ ಕಂಠಮಾಧುರ್ಯ ಅಪೂರ್ವವಾದವುಗಳು.

ಮಹಾಶಿವರಾತ್ರಿಯಲ್ಲಿ ಪ್ರತಿವರ್ಷವೂ ಜಾಗರಣೆಯ ಪ್ರಯುಕ್ತ ದೇವಾಂಗದವರ ಬೀದಿಯಲ್ಲಿ ಅಭಿನಯಿಸುತ್ತಿದ್ದ ಶನಿಮಹಾತ್ಮೆ ಯಕ್ಷಗಾನ ಆ ಕಾಲಕ್ಕೆ ಒಂದು ಅದ್ಭುತ ಆಕರ್ಷಣೆ. ಶನಿದೇವನ ಕೋಪಕ್ಕೊಳಗಾದ ವಿಕ್ರಮ ರಾಜ ಅನುಭವಿಸುವ ಕಷ್ಟ ಪರಂಪರೆ ಗಳನ್ನು ಕಣ್ಣಿಗೆ ಕಟ್ಟುವಂತೆ ಅಭಿನಯಿಸಿ ಪ್ರೇಕ್ಷಕರ ಮನದಲ್ಲಿ ಕರುಣಾರಸವನ್ನು ಉದ್ಬೋಧಗೊಳಿಸುತ್ತಿದ್ದ ಪಾತ್ರದ ಪ್ರತಿ ಮಾತಿಗೂ ಹಿಮ್ಮೇಳದ ದನಿಗೂಡಿಸಿ ಪ್ರಸಂಗದ ಸ್ವಾರಸ್ಯವನ್ನು ಹೆಚ್ಚಿಸುತ್ತಿದ್ದ ಬಂದಯ್ಯ ಎತ್ತಿದ ಕಂಠದಲ್ಲಿ ಮಾತು ಗೀತೆ ಗಳನ್ನು ಹಾಡಿದಾಗ ಪ್ರೇಕ್ಷಕ ವರ್ಗ ಶೋಕಸಾಗರದಲ್ಲಿ ಮುಳುಗುತ್ತಿತ್ತು.

ರಾತ್ರಿ 10–11 ಗಂಟೆಗೆ ಆರಂಭವಾಗುತ್ತಿದ್ದ 'ಶನಿಮಹಾತ್ಮೆ' ಪ್ರಸಂಗವನ್ನು ಬೆಳಗಿನ 6 ಗಂಟೆಯವರೆಗೆ ಲೀಲಾಜಾಲವಾಗಿ ನಡೆಸುತ್ತಿದ್ದ ಬಂದಯ್ಯನ ಜ್ಞಾಪಕಶಕ್ತಿ ಬೆರಗುಗೊಳಿಸುವಂಥದು. ಯಾವುದಾದರೊಂದು ಪಾತ್ರ ಅಪ್ಪಿತಪ್ಪಿ ಮಾತು ಅಥವಾ ಗೀತೆಯನ್ನು ಆಡುವುದು– ಹಾಡುವುದರಲ್ಲಿ ಮುಗ್ಗರಿಸಿದಾಗ ಅದನ್ನು ತಕ್ಷಣ ಕೂಡಿಸಿ ಕೊಟ್ಟು ಪ್ರಸಂಗ ಕೆಡದಂತೆ ಬಂದಯ್ಯ ವಹಿಸುತ್ತಿದ್ದ ಎಚ್ಚರಿಕೆ ಆತನ ಕಥಾ ಬಂಧ ಪರಿಣತಿಗೆ ಸಾಕ್ಷಿಯಾಗಿತ್ತು.

ಬಂದಯ್ಯ ಯಕ್ಷಗಾನದ ಬೇರೆ ಪ್ರಸಂಗಗಳು ಹಾಗೂ ನಾಟಕಗಳನ್ನು ಕಲಿಸಿ ಆಡಿಸಿದ್ದರೂ ಆತನ ಕಲಾ ಪ್ರೌಢಿಮೆ ನಿಚ್ಚಳವಾಗಿ ಪಡಿಮೂಡಿದ್ದುದು ಆತ ನಿರ್ದೇಶಿಸಿ ಆಡಿಸುತ್ತಿದ್ದ ಶನಿಮಹಾತ್ಮೆ ಪ್ರಸಂಗದಲ್ಲಿ. "ಈಚಿನ ವರ್ಷಗಳಲ್ಲಿ ಆತ ಕಾಲವಾಗು ವುದಕ್ಕೆ ಮುಂಚೆ ಶರೀರ—ಶಾರೀರಗಳು ಸತ್ವಕಳೆದುಕೊಂಡಿದ್ದರೂ ಶಿವರಾತ್ರಿಯ ದಿನ ಮಾತ್ರ ಇಡೀ ರಾತ್ರಿ ಅಟ್ಟದ ಮೇಲೆ ಹಿಮ್ಮೇಳದವರ ಜೊತೆಗೆ ಕೂತು ಪಾತ್ರ ಗಳನ್ನು ನುಡಿಸುತ್ತಿದ್ದ ಈ ಕಲಾವಿದ ಒಮ್ಮೊಮ್ಮೆ ಉತ್ಸಾಹದಿಂದ ದೇಹಸ್ಥಿತಿ ಯನ್ನೂ ಮರೆತು ಹಾಡುತ್ತಿದ್ದುದು ಈ ಕಲೆಯ ಬಗೆಗಿದ್ದ ಅಭಿಮಾನಕ್ಕೆ ನಿದರ್ಶನ ವಾಗಿತ್ತು.

ಪರಿಸರ

### ಚಿಕ್ಕನಾಯಕನಹಳ್ಳಿ

# ಸಮಾಜವ್ಯವಸ್ಥೆ

**ಲಿಂಗದೇವರು ಹಳೆಮನೆ**

ಆಗ ನನಗೆ ಸುಮಾರು ಹದಿಮೂರು ಹದಿನಾಲ್ಕು ವರ್ಷವಿರಬಹುದು. ನಮ್ಮ ಗ್ರಾಮದ ಮಧ್ಯೆ ಒಂದು ಮೋಟಾರ್ ರಸ್ತೆಹಾದುಹೋಗುತ್ತಿತ್ತು. ಆ ರಸ್ತೆಯಲ್ಲಿ ಖಾಸಗಿ ಮಾಲೀಕರ ಬಸ್ಸುಗಳು ಹೆಚ್ಚಾಗಿ ಓಡಾಡುತ್ತಿದ್ದವು. ಒಮ್ಮೊಮ್ಮೆ ಸಾಮಾನು ಹೊತ್ತ ಒಂದೋ ಎರಡೋ ಲಾರಿಗಳು ಕಣ್ಣಿಗೆ ಬೀಳುತ್ತಾ ಇದ್ದವು. ನಮ್ಮ ಎಳೆಯ ಕಣ್ಣುಗಳಿಗೆ ಯಾವುದೋ ಅದೃಶ್ಯಲೋಕದ ಅನೂಹ್ಯ ವಸ್ತುಗಳನ್ನು ಹೊತ್ತು ತರುವ ವಾಹನಗಳಂತೆ ಅವು ಕಾಣುತ್ತಿದ್ದವು. ಬೆಳೆಯುತ್ತಾ ಬೆಳೆಯುತ್ತಾ ತಿಳಿದದ್ದು, ತುಮಕೂರು ಮಂಡಿಯಿಂದ ಚಿಕ್ಕನಾಯಕನಹಳ್ಳಿ, ಹುಳಿಯಾರು, ಕಂದಿಕೆರೆಗಳ ಶೆಟ್ಟರ ಅಂಗಡಿಗಳಿಗೆ ಸಾಮಾನು ಕೊಂಡೊಯ್ಯುತ್ತಿದ್ದ ಲಾರಿಗಳೆಂದು. ಹೀಗಿರುವಾಗ ಒಂದು ದಿನ ಇದ್ದಕ್ಕಿದ್ದಂತೆ ಹಳದಿ ಬಣ್ಣದ ಚಿಕ್ಕ ಚಿಕ್ಕ ಲಾರಿಗಳು ಕೆಂಪು ಮಿಶ್ರಿತ ಕಂದು ಬಣ್ಣದ ಕಲ್ಲು ಚಿಕ್ಕೆಗಳನ್ನು ಹೊತ್ತು ಓಡಾಡುವ ಸದ್ದು ಹೆಚ್ಚಾಯಿತು. ರಸ್ತೆ ಪಕ್ಕದ ಬೇಂಚು ಕಲ್ಲಿನ ಹತ್ತಿರ ನಿಂತು ಸ್ಕೂಲಿಗೆ ಹೋಗುವುದನ್ನೂ ಮರೆತು ಈ ಲಾರಿಗಳು ಎಲ್ಲಿಗೆ ಹೋಗುತ್ತವೆ ? ಏನು ಹೊತ್ತೊಯ್ಯುತ್ತವೆ ? ಎಂಬ ಕುತೂಹಲದಲ್ಲಿ ನೋಡುತ್ತಿದ್ದೆವು. ನಮ್ಮ ಕುತೂಹಲಕ್ಕೆ ಸಿಗುತ್ತಿದ್ದ ಉತ್ತರ ಲಾರಿಗಳು ಎಬ್ಬಿಸಿ ಹೋದ ಧೂಳು ಮಾತ್ರ. ಕಡೆಗೊಮ್ಮೆ ಊರಿನ ಮಂದಿ ಆಡಿಕೊಳ್ಳುತ್ತಿದ್ದುದು : ಇವು ಮ್ಯಾಂಗನೀಸ್ ಕೊಂಡೊಯ್ಯುವ ಲಾರಿಗಳಂತೆ, ನಮ್ಮ ಹಳ್ಳಿಯಿಂದ ಆರೇಳು ಮೈಲಿಗಳ ದೂರದಲ್ಲಿರುವ ಬೆಟ್ಟಸಾಲುಗಳಲ್ಲಿ ಯಥೇಚ್ಛವಾಗಿ ಸಿಗುವ ಈ ಖನಿಜವನ್ನು ಬೇರೆಲ್ಲಿಗೋ ಸಾಗಿಸುತ್ತಾರಂತೆ. ಇನ್ನೂ ಕೆಲವು ದಿನಗಳು ಕಳೆದ ಮೇಲೆ ಮಂಗಳೂರಿಗೆ ಸಾಗಿಸಿ ಅಲ್ಲಿಂದ ಹಡಗಿನಲ್ಲಿ ಸಮುದ್ರದ ಮೇಲೆ ಬೇರೆಲ್ಲಿಗೋ ? ನಮ್ಮ ಅಪ್ರಬುದ್ಧ ಮನಸ್ಸು ಎಲ್ಲಿಗೆ ಎಂದು ಯೋಚನೆ ಮಾಡುವಷ್ಟು ಬೆಳೆದಿರಲಿಲ್ಲ. ಮತ್ತೆ ಕೆಲವರು ಬಾಣಸಂದ್ರದಲ್ಲಿ ಗೂಡ್ಸ್ ಗಾಡಿಗೆ ತುಂಬಿಸಿ ತೆಗೆದುಕೊಂಡು ಹೋಗುತ್ತಾರಂತೆ ಎಂದು ಹೇಳುತ್ತಿದ್ದುದು ಜ್ಞಾಪಕಕ್ಕೆ ಈಗಲೂ ಬರುತ್ತಿದೆ. ಈ ಲಾರಿಗಳನ್ನು ಖಾಲಿ ಮಾಡಲು ಆಳುಗಳೇ ಬೇಕಿಲ್ಲವಂತೆ. ಮೂಕೆತ್ತುವ ಲಾರಿಗಳು ಎತ್ತಿನ ಗಾಡಿಯನ್ನು ಮೂಕೆತ್ತಿದಂತೆ ಮೂಕೆತ್ತಿದರೆ ಎಲ್ಲಾ ಸುರಿದು ಹೋಗುತ್ತದೆ. ಎಂಥಾ ಮೋಜು. ನಾನು ಕೆಲವೊಮ್ಮೆ ಆಳುಮಕ್ಕಳ ಜೊತೆ ಎತ್ತಿನ ಗಾಡಿಯಲ್ಲಿ ಗೊಬ್ಬರ ತುಂಬಿಕೊಂಡು ಹೋಗುತ್ತಿದ್ದೆ. ಆಗ ಮೂಕೆತ್ತಿದ್ದರೆ ? ಸುನಾಯಾಸವಾಗಿ ಗೊಬ್ಬರವೆಲ್ಲ ಸುರಿದು ಹೋಗುತ್ತಿತ್ತು. ಕೆಲಸವೂ ಭರದಿಂದ ನಡೆಯುತ್ತಿತ್ತು. ಆದರೆ ಈ ಮೂಕೆತ್ತುವ ಲಾರಿಗಳು ನಮ್ಮ ತಾಲ್ಲೂಕಿನ ಮ್ಯಾಂಗನೀಸನ್ನೆಲ್ಲಾ ಎಷ್ಟು ಸುನಾಯಾಸವಾಗಿ ಬೇರೆಡೆಗೆ ಮೂಕೆತ್ತಿಬಿಟ್ಟವು ? ಅದನ್ನು ನೆನಸಿಕೊಂಡರೆ ಕಣ್ಣುಮುಂದೆ ಅವು ಎಬ್ಬಿಸಿದ ಧೂಳು ಮಾತ್ರ ನಿಲ್ಲುತ್ತದೆ.

ಮ್ಯಾಂಗನೀಸ್ ಗಣಿಗಳು ಕೆಲಸವಾರಂಭಿಸಿದೊಡನೆ ನಮ್ಮ ಸುತ್ತಮುತ್ತಲ ಹಳ್ಳಿಗಳ ಯುವಕರಿಗೆಲ್ಲ ಹೊಸ ಉತ್ಸಾಹ ಪುಟಿಯತೊಡಗಿತು. ಒಂದು ದಿನಕ್ಕೆ ಗಂಡಾಳಿಗೆ ಆರು ರೂಪಾಯಿ ಹೆಣ್ಣಾಳಿಗೆ ನಾಲ್ಕು ರೂಪಾಯಿ ಕೊಡುತ್ತಾರಂತೆ. ಅದೇ ಹೊಲ ತೋಟದಲ್ಲಿ ಹೋಗಿ ನಾಟಿ, ಕೊಯ್ಲು ಕೆಲಸ ಮಾಡಿದರೆ ಊಟ ಹಾಕಿ ಎರಡು ರೂಪಾಯಿ. ಯಾವ ಪುರುಷಾರ್ಥಕ್ಕೆ? ನಾಲ್ಕು ಮೈಲಿ ನಡೆದು ಹೋಗಿ ಮೈಮುರಿದು ದುಡಿದು ನಾಲ್ಕು ಮೈಲು ನಡೆದು ಬಂದರೆ ಆರು ರೂಪಾಯಿ. ಒಂದು ಸಂಸಾರದಲ್ಲಿ ಒಂದು ಹೆಣ್ಣು ಒಂದು ಗಂಡು ಒಟ್ಟು ಹತ್ತು ರೂಪಾಯಿಯ ಆಕರ್ಷಣೆ. ಇದು ಕೂಲಿಯ ವಿಚಾರ. ಇನ್ನು ಕೂಲಿಯ ಮೇಲ್ವಿಚಾರಣೆ ನೋಡಿಕೊಳ್ಳುವ ಮೇಸ್ತ್ರಿ ಕೆಲಸ ಸಿಕ್ಕಿದರೆ ? ಸಂಭವವಿಲ್ಲ. ಜನ ಆಡಿಕೊಳ್ಳುತ್ತಿದ್ದರು : ಮೇಸ್ತ್ರಿಯ ಕೆಲಸಕ್ಕಿಂತ ದೊಡ್ಡ ಕೆಲಸಗಳಿಗೆಲ್ಲಾ ಜನರನ್ನು ಬೇರೆ ಕಡೆಯಿಂದ ಕರೆದುಕೊಂಡು ಬಂದಿದ್ದಾರಂತೆ. ಹೈಸ್ಕೂಲುವರೆಗೆ ಓದಿದ್ದ ಯುವಕರಿಗೆ ನಿರಾಶೆ, ಹಿಂದೆಯೇ ಕೊಂಚ ಅಸಮಾಧಾನ. ಆದರೆ ಕೇಳುವವರಾರು ? ಅಗೆಯುವ ಅಗೆದು ತೆಗೆಯುವ ತೆಗೆದು ಹೊರಗೆ ಸಾಗಿಸುವ ಕೆಲಸ ನಿರಂತರವಾಗಿ ಸಾಗಿತು. ಈಗ ಆ ಬೆಟ್ಟಸಾಲುಗಳಿಗೆ ಹೋದರೆ ಗುಳಿಬಿದ್ದು ನೀರು ತುಂಬಿಕೊಂಡಿರುವ ಹೊಂಡಗಳು ಕಾಣುತ್ತವೆ. ಲಾರಿಗಳು ಓಡಾಡಿದ ರಸ್ತೆ ಪಕ್ಕದಲ್ಲಿ ಧೂಳಿನಿಂದ ಗರಿ ಇಳಿಬಿಟ್ಟು ಅಥವಾ ಸುಳಿಬಿದ್ದ ತೆಂಗಿನಮರಗಳು ಚೇತರಿಸಿಕೊಳ್ಳಲು ಹವಣಿಸುತ್ತಿವೆ. ಇದು ಕಣ್ಣಿಗೆ ಕಾಣದ ಲೋಕದಲ್ಲಿದ್ದುಕೊಂಡು ಮ್ಯಾಂಗನೀಸ್ ವ್ಯವಹಾರ ಮಾಡಿದ ಸರದಾರರು ನೀಡಿದ ಕಾಣಿಕೆ.

ವರ್ಷವಿಡೀ ದುಡಿದು ಅಥವಾ ದಿನವಿಡೀ ದುಡಿದು ಸಂಜೆ ಕುಟುಂಬದ ರೇಜಿಗೆಗೆ ರೇಗಿ ಹೋದವರಿಗೆ ಚಿಕ್ಕನಾಯಕನಹಳ್ಳಿಯೇ ಮನರಂಜನಾ ಕೇಂದ್ರ. ಚಿಕ್ಕನಾಯಕನಹಳ್ಳಿ ತಾಲ್ಲೂಕು ಕೇಂದ್ರವಾಗಿದ್ದರೂ ಒಂದು ದೊಡ್ಡ ಹಳ್ಳಿಯಂತೆಯೇ ಕಾಣುತ್ತಿತ್ತು. ಕಾಣುತ್ತಿತ್ತು ಏನು ? ಈಗಲೂ ಕಾಣುತ್ತಿದೆ. ಐದಾರು ಹೋಟೆಲ್, ಒಂದು ಸಂಚಾರೀ ಚಲನ ಚಿತ್ರದ ಟೆಂಟ್, ಹತ್ತೋ ಹದಿನೈದೋ ಅಂಗಡಿಗಳ ಒಂದು ನೀಳವಾದ ಬೀದಿ, ಮಳೆ ಬಂದರೆ, ಬಿಸಿಲು ಹೆಚ್ಚಾದರೆ ನಿಲ್ಲಲು ಜಾಗವಿಲ್ಲದ ಬಸ್‌ಸ್ಟ್ಯಾಂಡ್. ಜೊತೆಗೆ ತಾಲ್ಲೂಕು, ಅದ್ದರಿಂದ ಸರಕಾರೀ ಕಚೇರಿಗಳು. ಇವುಗಳಲ್ಲಿ ಹೆಚ್ಚು ಆಕರ್ಷಣೆ ಇಟ್ಟುಕೊಂಡದ್ದು ಯಾವುದು ? ಬ್ರಾಹ್ಮಣರ ಹೋಟೆಲಿನ ಮಸಾಲೆ ದೋಸೆಗಳೊ ಅಥವಾ ರಾಜಕುಮಾರನ ಸಿನಿಮಾಗಳೊ ? ಬಹುಶಃ ಎರಡೂ ಇರಬಹುದು, ಒಂದು ಉದ್ದೇಶದಿಂದ ಇನ್ನೊಂದು ಉದ್ದೇಶ ತಾನೇ ತಾನೇ ತಾನಾಗಿ ದಕ್ಕುತ್ತಿತ್ತು. ಚಿಕ್ಕನಾಯಕನಹಳ್ಳಿ ತುಂಬಾ ಚಟುವಟಿಕೆಯಿಂದ ಕೂಡಿರುತ್ತಿದ್ದುದು ಸೋಮವಾರ. ಸಂತೆಯ ದಿನ ಬೇಸಾಯಗಾರರಿಗೆ ಬಿಡುವು. ಇಡೀ ವಾರ ದುಡಿದ ಕೂಲಿಯ ಹಣವನ್ನೆಲ್ಲಾ ಕೂಡಿಸಿಟ್ಟು ಒಂದು ಬಳ್ಳ ರಾಗಿಗೋಸ್ಕರ ಕಾಲು ಹಾಕುತ್ತಿದ್ದ ಗುಳಿಬಿದ್ದ ಕಣ್ಣಿನ ಜನಗಳು. ಸಣ್ಣಪುಟ್ಟ ಸಂಸಾರಕ್ಕೆ ಬೇಕಾದ ಸಾಮಾನು ತರಲು ಗಾಡಿಕಟ್ಟಿ

ಬರುತ್ತಿದ್ದ ಸಣ್ಣಪುಟ್ಟ ರೈತರು. ನಮ್ಮಂಥ ಹುಡುಗರಿಗೂ ಕೆಲವೊಮ್ಮೆ ಗಾಡಿಯಲ್ಲಿ ಕುಳಿತು ಹೋಗುವ ಅವಕಾಶ. ಹೋದರೆ ದಿನವೆಲ್ಲಾ ಎತ್ತು ಗಾಡಿಕಾದು ಕುಳಿತು ಕೊಳ್ಳುವ, ಕುತೂಹಲದ ಕಣ್ಣುಗಳಲ್ಲಿ ಜನಜಂಗುಳಿ, ಸಿನಿಮಾ ಪೋಸ್ಟರ್ ನೋಡುವ ತವಕ. ಹೋಗದಿದ್ದ ದಿನಗಳಲ್ಲಿ ಅಪ್ಪ ಅಮ್ಮ ತರುವ ಕಡಲೆಪುರಿ ನೆನಸಿಕೊಂಡು ಅವರು ರಾತ್ರಿ ತಿರುಗಿ ಬರುವುದನ್ನೇ ಕಾಯುತ್ತಾ ಕೂರುವ, ಎಣ್ಣೆದೀಪದ ಬೆಳಕಿನಲ್ಲಿ ಮಾತ್ರ ಮಿನುಗುಡುವ ಕಣ್ಣುಗಳು.

ಬಸ್ಸಿನ ಕುಲುಕಾಟಕ್ಕೆ ಮುಂದುವರಿದ ಕನವರಿಕೆ ತುಂಡರಿಸಿ ಬಿತ್ತು. ಚಿಕ್ಕನಾಯ ಕನಹಳ್ಳಿ ತಾಲ್ಲೂಕಿನ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿ ಕುರಿತು ಲೇಖನ ಬರೆಯುವ ಮೊದಲು ಅಲ್ಲಿನ ತಾಲ್ಲೂಕು ಕಛೇರಿಗಳಲ್ಲಿ ಸಿಗಬಹುದಾದ ಮಾಹಿತಿ ಸಂಗ್ರಹಿಸಲು ಹೊರಟಿದ್ದೆ. ಮೈಸೂರಿನಿಂದ ಬಂದು ತಿಪಟೂರಿನಲ್ಲಿ ಇಳಿದು ಅಲ್ಲಿಂದ ಬಸ್ಸು ಹಿಡಿದು ಚಿಕ್ಕನಾಯಕನಹಳ್ಳಿಗೆ ಹೋಗಬೇಕಿತ್ತು. ತಿಪಟೂರಿನಲ್ಲಿದ್ದ ನನ್ನ ವ್ಯಾಪಾರೀ ಗೆಳೆಯ ಕಿಬ್ಬನಹಳ್ಳಿ ಕ್ರಾಸ್ ಮುಖಾಂತರ ಹೋಗು, ರಸ್ತೆ ಚೆನ್ನಾಗಿದೆ ಎಂದ, ಬಳಸಿಕೊಂಡು ಹೋದರೆ ಲೇಟಾಗಬಹುದೆಂಬ ಭಯದಿಂದ ಶೆಟ್ಟೀಕೆರೆ ದಾರಿ ಹಿಡಿದು ಹೊರಟಿದ್ದೆ. ಕಿಬ್ಬನಹಳ್ಳಿ ಕ್ರಾಸ್ ಬೆಂಗಳೂರು–ಹೊನ್ನಾವರ ರಸ್ತೆಯಲ್ಲಿರುವ ಸ್ಥಳ. ಜನ ಪ್ರೀತಿ ಯಿಂದ 'ಅಡ್ಡರಸ್ತೆ' ಎಂದು ಕರೆಯುತ್ತಾರೆ. ಅಲ್ಲಿಂದ ಸುಮಾರು ಹತ್ತು ಕಿ.ಮೀ. ಉತ್ತರಕ್ಕೆ ಹೋದರೆ ಚಿಕ್ಕನಾಯಕನಹಳ್ಳಿ ಸಿಗುತ್ತದೆ. ಈ ರಸ್ತೆಯೇ ಮೂಕೆತ್ತುವ ಲಾರಿಗಳು ಓಡಾಡಿ ತನ್ನ ಆಕಾರವನ್ನೆಲ್ಲಾ ಧೂಳಾಗಿ ಮಾರ್ಪಡಿಸಿಕೊಂಡದ್ದು. ಈಗ ಅದು ಡಾಂಬರಿನಿಂದ ಮಾಡಲ್ಪಟ್ಟಿದ್ದು ಮುಚ್ಚಿದ್ದು ಏಳುವ ಧೂಳನ್ನು ನಿರೋಧಿಸುವ ಶಕ್ತಿ ಪಡೆದುಕೊಂಡಿದೆ. ಆದರೆ ನಾನು ಕುಳಿತ ಬಸ್ಸು ಹೋಗುತ್ತಿರುವ ದಾರಿ ! ಬಹುಶಃ ಇದಕ್ಕೆ 'ರಸ್ತೆ' ಎನ್ನುವುದಕ್ಕಿಂತ 'ದಾರಿ' ಎನ್ನುವುದೇ ಸರಿ. ಯಾಕೆಂದರೆ ಮಳೆಬಿದ್ದರೆ ರಸ್ತೆ ಇದೆ ಎಂಬ ಸುಳಿವೂ ಸಿಗುವುದಿಲ್ಲ. ಮಟ್ಟವಾದ ದಾರಿ ಒಂದು ಫರ್ಲಾಂಗ್ ಸಹ ಕಾಣುವುದಿಲ್ಲ. ಎಲ್ಲೆಲ್ಲೂ ಇಳುಕಲು ಎತ್ತಿನ ದಾರಿಯಂತೆ. ಸಿಡಿದೆದ್ದ ಜಲ್ಲಿಯ ಹರಳು. ಇಂಥ ದಾರಿಯಲ್ಲೂ ಬಸ್ಸು ಓಡಿಸುವ ಸಾಹಸ ಮಾಡುತ್ತಿದ್ದಾರಲ್ಲಾ ಈ ಮಾಲೀಕರು ಎಂಬ ಮೆಚ್ಚುಗೆ. ಬೆವರು ಮತ್ತು ಧೂಳು. ಸುತ್ತಮುತ್ತ ಮುರುಟಿ ಹೋದ ಗಿಡಮರಗಳು. ಅಲ್ಲಲ್ಲಿ ಧೂಳಿನಿಂದ ಹಸಿರನ್ನು ಮರೆಮಾಚಲು ಯತ್ನಿಸುವ ಆದರೂ ಹುಟ್ಟುಗುಣವನ್ನು ಕಳೆದುಕೊಳ್ಳಲಾರದ ತೆಂಗಿನ ಮರಗಳು.

ಚಿಕ್ಕನಾಯಕನಹಳ್ಳಿಯನ್ನು ಈಗೀಗ ಕೆಲವು ತರುಣರು 'ಟೌನ್' ಎಂದು ಕರೆಯು ತ್ತಾರೆ. ಇತ್ತೀಚೆಗೆ ಒಂದು ಜೂನಿಯರ್ ಕಾಲೇಜು, ಒಂದು ನ್ಯಾಯಾಲಯ ಬಂದಿರು ವುದರಿಂದ ಸೋಮವಾರವನ್ನುಳಿದು ಇನ್ನಿತರ ದಿನಗಳಲ್ಲೂ ಓಡಾಟ ಸ್ವಲ್ಪ ಜಾಸ್ತಿ ಯಾಗಿದೆ. ಸಂಚಾರಿ ಚಲನಚಿತ್ರದ ಬದಲು ಸೂರುಹಾಕಿದ ಚಿತ್ರಮಂದಿರ ನಿರ್ಮಾಣ ವಾಗಿದೆ.

ಯಾವುದೇ ಭೌಗೋಳಿಕ ಪರಿಸರದ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿಯ ಅಧ್ಯಯನಕ್ಕೆ ತೊಡಗುವಾಗ ಅಲ್ಲಿಯ ಜನಜೀವನದ ಮೇಲೆ ಆದ ಬಾಹ್ಯ ಮತ್ತು ಆಂತರಿಕ ಒತ್ತಡಗಳನ್ನು ಅವಶ್ಯಕವಾಗಿ ಗಮನಿಸಬೇಕಾಗುತ್ತದೆ. ಬಾಹ್ಯ ಒತ್ತಡಗಳಾದ ಸರಕಾರೀ ಧೋರಣೆ, ಜೊತೆಗೆ ಆ ಪ್ರದೇಶದ ಜನಗಳ ಪ್ರಗತಿ ಹೊಂದಬೇಕೆನ್ನುವ ಆಂತರಿಕ ಒತ್ತಾಸೆ ಕಾಲದಿಂದ ಕಾಲಕ್ಕೆ ಜೀವನ ಮಟ್ಟವನ್ನು ಬೆಳೆಸುವುದರಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ನಮ್ಮಲ್ಲಿನ ಸಾಮಾಜಿಕ ಒಳರಚನೆಗಳು ಮತ್ತು ಆಡಳಿತ ಯಂತ್ರದ ಧೋರಣೆಗಳು ಆರ್ಥಿಕ ಸ್ಥಿತಿಗತಿಗಳನ್ನು ಸಾಮಾಜಿಕ ಬಾಂಧವ್ಯವನ್ನು ಸುಧಾರಿಸಲು ಯತ್ನಿಸಿಲ್ಲ ಎಂಬುದು ಚಿಕ್ಕನಾಯಕನಹಳ್ಳಿಯಂಥ ತಾಲ್ಲೂಕನ್ನು ಗಮನಿಸಿದಾಗ ಮನ ದಟ್ಟಾಗುತ್ತದೆ. ಆನುಷಂಗಿಕವಾಗಿ ನಾನು ಚಿಕ್ಕನಾಯಕನಹಳ್ಳಿಯ ಉದಾಹರಣೆ ತೆಗೆದುಕೊಂಡಿದ್ದರೂ ಇದು ಬಹುತೇಕ ಗ್ರಾಮಾಂತರ ಪರಿಸರದ ಚಿತ್ರಣವಾದ್ದರಿಂದ ಬೇರೆ ಅಂಥ ಪ್ರದೇಶಗಳಿಗೂ ಅನ್ವಯವಾಗುತ್ತದೆ.

ಈ ತಾಲ್ಲೂಕಿನಲ್ಲಿ ವೀರಶೈವರು ಮತ್ತು ಕುರುಬರು ಹೆಚ್ಚಿನ ಸಂಖ್ಯೆಯಲ್ಲಿರುವ ಜನಾಂಗದವರು. ಕೃಷಿ ಯೋಗ್ಯವಾದ ಪ್ರದೇಶವಿರುವ ಕಡೆಯೆಲ್ಲ ವೀರಶೈವರ ತಾವು ಕುರುಬರು ಹೆಚ್ಚಾಗಿ ಚಿಕ್ಕನಾಯಕನಹಳ್ಳಿಯಲ್ಲೇ ವಾಸ. ವ್ಯವಸಾಯ ಈ ತಾಲ್ಲೂಕಿನ ಪ್ರಮುಖ ಉದ್ಯೋಗವಾದರೂ ಪ್ರಗತಿಯ ದೃಷ್ಟಿಯಿಂದ ಹೆಗ್ಗಳಿಕೆಯಿಂದೇನೂ ಕೂಡಿಲ್ಲ. ಇದಕ್ಕೆ ಮೂಲ ಕಾರಣ ಸಮೃದ್ಧ ನೀರಾವರಿ ಮೂಲದ ಕೊರತೆ. ಸಮೃದ್ಧ ಎನ್ನುವ ಪದದ ಬಳಕೆಯೇ ಇಲ್ಲಿ ಅಪ್ರಸ್ತುತ. ಅಲ್ಲಲ್ಲಿ ಹರಿಯುವ ಹಳ್ಳಗಳಿಗೆ ಏರಿ ಹಾಕಿ 'ಕೆರೆ'ಗಳನ್ನು ನಿರ್ಮಿಸಿ ಆ ಕೆರೆಗಳಿಂದ ನೀರನ್ನು ಕೃಷಿಗೆ ಒದಗಿಸುವ ಪ್ರಯತ್ನ ನಡೆದಿದೆ. ಆದರೆ ಈ ಕೆರೆಗಳೋ........ಎಮ್ಮೆಗಳು ಬಿದ್ದು ಒದ್ದಾಡಿದರೆ ಇಡೀ ನೀರೇ ಬಗ್ಗಡವಾಗುವಷ್ಟು ಚಿಕ್ಕವು. ಇವುಗಳಿಂದ ವಾರ್ಷಿಕ ಎರಡು ಬೆಳೆ ತೆಗೆಯುವುದಿರಲಿ ವರ್ಷ ವರ್ಷ ಒಂದು ಬೆಳೆ ತೆಗೆದರೆ ಸಾಕು ಎನ್ನುವಷ್ಟು ತುಡಿತ. ಇಡೀ ತಾಲ್ಲೂಕಿನಲ್ಲಿ 'ಬೋರನ ಕಣಿವೆ'ಯೊಂದೇ ಹೆಸರು ಹೇಳಲು ಯೋಗ್ಯವಾದ ಜಲಾಶಯ. ವೀರಶೈವರು ಧಾರ್ಮಿಕವಾಗಿ ಮತ್ತು ಜೀವನಮಟ್ಟದಲ್ಲಿ ತಾವು ತಾಲ್ಲೂಕಿನ ಇತರರಿಗಿಂತ ಶ್ರೇಷ್ಠರು ಎಂಬ ಭ್ರಮೆಯುಳ್ಳವರು. ಬ್ರಾಹ್ಮಣರ ಸಂಖ್ಯೆ ಗ್ರಾಮೀಣ ಪ್ರದೇಶದಲ್ಲಿ ಗೌಣ ವಾದದ್ದರಿಂದ ಮತ್ತು ಅವರ ಪ್ರಭಾವ ಕಂಡುಬಾರದ್ದರಿಂದ ವೀರಶೈವರೇ ಅಲ್ಲಿಯ ಶಾಸನಾಧಿಕಾರಿಗಳು. ವೀರಶೈವರ ನೇರ ಆಡಳಿತದಡಿಯಲ್ಲಿ ಬರುವವರು ಹರಿಜನರು ಮತ್ತು ಇನ್ನಿತರ ಕೆಳವರ್ಗದವರು. ವೀರಶೈವರನ್ನು ಸಾಮಾನ್ಯವಾಗಿ ಮಧ್ಯಮವರ್ಗ ಹಾಗೂ ಆದರ ಕೆಳವರ್ಗದಲ್ಲಿ ವಿಂಗಡಿಸಬಹುದು. ಸಾಧಾರಣವಾಗಿ 300 ರಿಂದ 400 ತೆಂಗಿನಮರಗಳು, ಹದಿನೈದರಿಂದ ಇಪ್ಪತ್ತು ಎಕರೆ ಜಮೀನು ಉಳ್ಳ ಇವರಿಗೆ ಜೀವನದಲ್ಲಿ ಒಂದು ರೇಡಿಯೊ, ಸೈಕಲ್, ಅಲ್ಮೆರಾ, ಗಡಿಯಾರ ಮುಂತಾದ ಮಧ್ಯಮ ವರ್ಗದ ಅನಿವಾರ್ಯ ವಸ್ತುಗಳ ಕಡೆ ಆಕರ್ಷಣೆ. ಇತ್ತೀಚೆಗೆ ಮಧ್ಯಮವರ್ಗಕ್ಕಿಂತ ಕೊಂಚ ಮೇಲ್ಮಟ್ಟದ ರೈತರು ಟ್ರ್ಯಾಕ್ಟರ್ ಕೊಳ್ಳುವ ಉತ್ಸಾಹದಲ್ಲಿ ಮುಂದಾಗಿದ್ದಾರೆ,

ಗ್ರಾಮೀಣ ಪ್ರದೇಶದಲ್ಲಿ ವೀರಶೈವರ ಹಾಗೂ ಇನ್ನಿತರ ಸಂಬಂಧ ಎಂತಹದು? ಯಾವುದೇ ಊಳಿಗಮಾನ್ಯ ವ್ಯವಸ್ಥೆಯಲ್ಲಿ ಕಂಡುಬರುವಂತಹ ವ್ಯವಸ್ಥೆಯೇ ಇಲ್ಲಿಯೂ ಕಂಡುಬರುತ್ತಿದೆ. ಆದರೆ ಊಳಿಗಮಾನ್ಯ ವ್ಯವಸ್ಥೆ ಇಲ್ಲಿ ಉತ್ಕರ್ಷಕ್ಕೇರಿಲ್ಲದೇ ಇರುವುದರಿಂದ ಜಮೀನ್ದಾರೀ ಪದ್ಧತಿಯ ಎಲ್ಲಾ ಗುಣಗಳೂ ಮೈದುಂಬಿಕೊಳ್ಳದೇ ಇರುವುದರಿಂದ ಅವು ಸರೀಕ್ಷಿಸಿದ ಮಟ್ಟಿಗೆ ಕಾರ್ಯೋನ್ಮುಖವಾಗಿಲ್ಲ. ಅಂದರೆ ಜಮೀನುಳ್ಳ ಧಣಿಗೂ ಅವನ ತೋಟದಲ್ಲಿ ಕೆಲಸ ಮಾಡುವ ಕೂಲಿಗೂ ಕೆಲಮಟ್ಟಿಗೆ ಪರಸ್ಪರಾವಲಂಬಿ ಮನೋಭಾವಗಳು ಜಾಗೃತವಾಗಿವೆ. ಬಹುಶಃ ರಾಜ್ಯದ ಬೇರೆ ಕಡೆ ನಡೆಯುವಂತಹ ಹರಿಜನ ವಿರೋಧಿ ಚಟುವಟಿಕೆಗಳು, ಅತ್ಯಾಚಾರಗಳು ಈ ತಾಲ್ಲೂಕಿನಲ್ಲಿ ನಡೆದಿಲ್ಲವೆಂದೇ ಹೇಳಬೇಕು. ಹಾಗೆಂದು 'ವಸುಧೈವ ಕುಟುಂಬಕಂ' ಎಂಬ ಜಾಗತಿಕ ಪ್ರಜ್ಞೆಯೂ ಇಲ್ಲ. ಊರಿನಲ್ಲಿ ನಡೆಯುವ ದೇವರ ಉತ್ಸವದಲ್ಲಿ ನಗಾರಿ ಹೊರುವ ಬಸವ ಕಣ್ಣ ಕಿತ್ತು ಪರಾರಿಯಾದಾಗ ಹರಿಜನರ ದಷ್ಟಪುಷ್ಟ ವ್ಯಕ್ತಿಯೊಬ್ಬನನ್ನು ಕರೆಸಿ ಬಲಾತ್ಕಾರವಾಗಿ ಹೊರಿಸಿ ನಗಾರಿ ಬಡಿದದ್ದನ್ನು ಕಣ್ಣಾರೆ ಕಂಡಿದ್ದೇನೆ.

ಇತ್ತೀಚೆಗೆ ಭೂನಿಯಂತ್ರಣ ಕಾಯಿದೆ ಜಾರಿಗೆ ಬಂದ ಮೇಲೆ ಗ್ರಾಮವೊಂದರ ಬೀಳನ್ನು ಹರಿಜನರು ಕೃಷಿ ಯೋಗ್ಯ ಭೂಮಿಯನ್ನಾಗಿ ಪಡೆಯಬೇಕೆಂದು ಪ್ರಯತ್ನಿಸಿದಾಗ ಆ ಹರಿಜನರ ಮೇಲೆ ಹಲ್ಲು ಕಡಿದದ್ದಲ್ಲದೆ ಹೈಕೋರ್ಟಿನವರೆಗೆ ಹೋಗಿ ತಡೆಯಾಜ್ಞೆ ತಂದದ್ದೂ ಉಂಟು. ಹರಿಜನ ಪಂಚಾಯ್ತಿ ಸದಸ್ಯನೊಬ್ಬ ಛೇರ್ಮನ್ ಎದುರಿಗೇ ಕುರ್ಚಿಯಲ್ಲಿ ಕುಳಿತದ್ದಕ್ಕೆ ಮೈಭೂತ ಬಿಡಿಸಿದ್ದೂ ಇದೆ. ಈ ಘಟನೆಗಳು ಸಾಮಾಜಿಕ ಸಂಬಂಧದ ಮೇಲೆ ಕೊಂಚ ತಿಳಿವು ಮೂಡಿಸುತ್ತವೆ. ತನ್ನ ಹುಟ್ಟೇ ಶ್ರೇಷ್ಠ ಎಂಬ ಜನ್ಮದಾರಾಭ್ಯ ಬಂದ ತಿಳುವಳಿಕೆಯು ಮುಂದೆ ಹಳ್ಳಿಗೆ ದಿಢೀರ್ ಬದಲಾವಣೆಗೆ ತೋರುವ ನಿರೋಧ ಕಥೆ ಇದು.

ತಾಲ್ಲೂಕಿನ ಸಾಮಾಜಿಕ ಒಳಸಂಬಂಧಗಳನ್ನು ವಿವೇಚಿಸುವಾಗ ಇಲ್ಲಿನ ರಾಜಕೀಯ ಧೋರಣೆಗಳನ್ನು ಗಮನಿಸುವುದು ಅಗತ್ಯ. ಯಾವುದೇ ಚುನಾವಣೆಯಾಗಲಿ–ವಿಧಾನ ಸಭೆ, ತಾಲ್ಲೂಕು ಮಂಡಳಿ, ಗ್ರಾಮ ಪಂಚಾಯಿತಿ–ಅವೆಲ್ಲಾ ಜಾತಿಯ ಬಲಪ್ರದರ್ಶನದ ಮೇಲೆ ನಡೆದದ್ದೇ ಹೆಚ್ಚು. ಈ ತಾಲ್ಲೂಕಿನ ಜನರ ಮತ ಬೆಂಬಲಗಳಿಸಿದ ಯಾವುದೇ ಪ್ರತಿನಿಧಿ ರಾಜ್ಯದ ಅಥವಾ ಜಿಲ್ಲೆಯ ಯಾವುದೇ ನಿರ್ಣಾಯಕ ತೀರ್ಮಾನಗಳಲ್ಲಿ ಗಮನಾರ್ಹ ಕೊಡುಗೆ ಕೊಟ್ಟಿಲ್ಲವೆಂಬುದು ಗಮನಾರ್ಹ. ಈ ತಾಲ್ಲೂಕಿನ ರಾಜಕೀಯ ಎಂದೂ ಸಿದ್ಧಾಂತದ ಮಟ್ಟದಲ್ಲಿ ಭಾವೀ ಮುಂದಾಳುಗಳನ್ನು ರೂಪಿಸುವ ಹಂತದಲ್ಲಿ ನಡೆದುದೇ ಇಲ್ಲ. ದೇಶವದ್ದೇ ಹಾಗಿರುವಾಗ ತಾಲ್ಲೂಕಿನದೇನು ಮಹಾ ಎಂದಾರೆ ಹೋಗಲಿ, ತಾಲ್ಲೂಕಿನ ಕೇಂದ್ರ ಸ್ಥಳದಲ್ಲಿಯೂ ಅವರ ಪ್ರಭಾವಗಳು ಹೆಜ್ಜೆಯ ಹಾದಿ ಮೂಡಿಸಲಿಲ್ಲ. ಕಾಂಗ್ರೆಸ್ ಎಂದು ಹಿಂದೆ ಚುನಾವಣೆಗೆ ನಿಲ್ಲುತ್ತಿದ್ದ ವೀರಶೈವ ಅಭ್ಯರ್ಥಿ ತನ್ನ ಎದುರಾಳಿ ಶೆಟ್ಟರ ಜನಾಂಗಕ್ಕೆ ಸೇರಿದವನೆಂದು

ಪ್ರಚಾರ ಕೈಗೊಂಡರೆ, ಆ ಅಭ್ಯರ್ಥಿ ವೀರಶೈವರಲ್ಲಿಯೇ ಕಾಂಗ್ರೆಸ್ ಅಭ್ಯರ್ಥಿ ನಾಲ್ಕು ದಿನದವನೆಂದು ಒಡಕು ಹುಟ್ಟಿಸಿ ಗೆಲ್ಲಲು ಪ್ರಯತ್ನಿಸುತ್ತಿದ್ದುದು. ಸೋಷಲಿಸ್ಟ್ ಅಭ್ಯರ್ಥಿ ಗೆದ್ದರೂ ಒಂದೇ, ಕಾಂಗ್ರೆಸ್ ಅಭ್ಯರ್ಥಿ ಗೆದ್ದರೂ ಒಂದೇ. ಹರಿಯುವ ಹಳ್ಳಕ್ಕೆ ಒಂದು ಅಣೆ ಹಾಕಿಸುವ ಪ್ರಯತ್ನವೂ ನಡೆದಿಲ್ಲ. ತಮ್ಮ ಪಕ್ಷದ ಬಲ ಪ್ರದರ್ಶನಕ್ಕೆ ಮುಗ್ಧ ಹಳ್ಳಿಗರನ್ನು ಬಳಸಿಕೊಂಡು ಅವರಲ್ಲಿ ಸ್ಥಳೀಯ ಒಡಕು ಉಂಟು ಮಾಡಿ ತಾವು ಮಾತ್ರ ಐಷಾರಾಮದ ಬದುಕು ಬಾಳಿಹೋದವರು, ಸೋಮಾರಿ ಸಂತತಿ ಯನ್ನು ಉಳಿಸಿ ಹೋದವರು. ಇಂದಿಗೂ ಜನಾನುರಾಗಿ ನಾಯಕನೊಬ್ಬ ಜನಗಳ ಮಧ್ಯೆ ಮೂಡಿ ಬಂದಿಲ್ಲ. ಇದಕ್ಕೇನು ಜನಗಳ ಮೌಢ್ಯಕಾರಣವೋ ? ಕನಸು ಕಾಣ ಲಾಗದ ನಿಷ್ಕ್ರಿಯತೆ ಕಾರಣವೋ ? ಇತ್ತೀಚೆಗೆ ಕುರುಬ ಜನಾಂಗದ ವ್ಯಕ್ತಿಯೊಬ್ಬ ಮುಖಂಡನಾಗಿ ರೂಪುಗೊಂಡಾಗ ದುರ್ಬಲವರ್ಗದ ಜನ ಕಡೆಗೂ ನಿಟ್ಟುಸಿರುಬಿಟ್ಟ ದ್ದುಂಟು. ಆದರೆ ಊಳಿಗ ಮಾನ್ಯ ವ್ಯವಸ್ಥೆಯಲ್ಲಿ ಅಧಿಕಾರ ವಾಲುವುದು ಉಳ್ಳವರ ಕಡೆಗೆ. ಚರ್ಮದ ಹೊದಿಕೆಯಲ್ಲಿ ಎಲುಬನ್ನು ಅಡಗಿಸಿಕೊಂಡವರು, ಅಡಗಿಸಿ ಕೊಂಡೇ ಕುಳಿತಿದ್ದಾರೆ, ಎಂದು ಚರ್ಬಿ ಬೆಳಸಿಕೊಳ್ಳುತ್ತಾರೋ ಕಾದು ನೋಡಬೇಕು ?

ಚಿಕ್ಕನಾಯಕನ ಹಳ್ಳಿಯ ಕ್ಷೇತ್ರಾಭಿವೃದ್ಧಿ ಅಧಿಕಾರಿಗೆ ನಾನು ಕೇಳಿದ ಪ್ರಶ್ನೆ : ಈ ತಾಲ್ಲೂಕಿನಲ್ಲಿ ನೂರಕ್ಕೆ ಎಷ್ಟು ಜನ ಬಡತನದ ರೇಖೆ ಒಳಗೆ ಬರುತ್ತಾರೆ ? ಎಂದು ಅವರು ಹೇಳಿದರು. ಅರವತ್ತು ಪರ್ಸೆಂಟ್ ಎಂದು. ಅದರಲ್ಲಿ ವೀರಶೈವರು ಬಹಳ ಕಡಿಮೆ. ಹರಿಜನರು ಕುರುಬರು ಮತ್ತು ಇನ್ನಿತರ ಜನಾಂಗದವರೇ ಜಾಸ್ತಿ. ಬಡತನ ಎಂಬ ವಸ್ತು ಹೇಗೆ ರೂಪತಾಳುತ್ತದೆ ? ಅಥವಾ ಶ್ರೀಮಂತಿಕೆ ಎಂಬುದು ಹೇಗೆ ರೂಢಿಗೊಳ್ಳುತ್ತಾ ಹೋಗುತ್ತದೆ ? ಬೇಂದ್ರೆ ಒಮ್ಮೆ ಹೇಳಿದ ಮಾತು ನೆನಪಿಗೆ ಬರುತ್ತದೆ, "ಅಯ್ಯೋ ದೇವರೆ ! ಹಸಿವನ್ನು ಹೊಟ್ಟೆಯೊಳಗೆ ಇಟ್ಟು ಅನ್ನವನ್ನು ಹೊರಗಡೆ ಇಟ್ಟು ಬಿಟ್ಟೆಯಲ್ಲಾ" ಎಂದು. ದುಡಿಯುವ ಶಕ್ತಿ ಮತ್ತು ದುಡಿಸಿ ಕೊಳ್ಳುವ ಸಂಪನ್ಮೂಲಗಳು ಇದ್ದರೆ ಬಡತನ ಹೇಗೆ ರೂಪತಾಳುವುದಕ್ಕೆ ಸಾಧ್ಯ ? ತಾಲ್ಲೂಕಿನಲ್ಲಿ 44,949 ಎಕರೆ ಸಾಗುವಳಿ ಭೂಮಿ ಇದ್ದರೆ ಸಾಗುವಳಿ ಯೋಗ್ಯವಾದ ಬಂಜರುಭೂಮಿ 92,664 ಎಕರೆ ಇದೆ. 27,993 ಮಂದಿ ಜಮೀನು ಕೃಷಿಕರಿದ್ದರೆ ಮಿಕ್ಕ ಜನದಲ್ಲಿ ಕೃಷಿಕಾರ್ಮಿಕರು, ಗೃಹ ಕೈಗಾರಿಕೆಯಲ್ಲಿ ತೊಡಗಿರುವವರು ಜಮೀನು ಪಡೆದುಕೊಳ್ಳುವ ಆಸೆಯನ್ನು ದಿನದಿನಕ್ಕೆ ಹಿಂಗಿಸಿ ಕೊಳುತ್ತಿದ್ದಾರೆ. ಈ ತಾಲ್ಲೂಕಿನ ಮಳೆಯೂ ಸಹ ಬರುಬರುತ್ತಾ ಕೃಷಿಕರಿಗೆ ನಿರಾಶೆಯ ದಿನಗಳನ್ನೇ ತರುತ್ತಿದೆ. ಈ ತಾಲ್ಲೂಕಿನಲ್ಲಿ ಇಲ್ಲಿಯವರೆಗೆ ಬಿದ್ದ ಗರಿಷ್ಠ ಮಳೆ 1,076.9 ಅಂಗುಲವಾದರೆ ಕನಿಷ್ಠ ಮಳೆ 284.9 ಅಂಗುಲ. ಸಮುದ್ರ ಮಟ್ಟಕ್ಕಿಂತ 2,596 ಅಡಿ ಎತ್ತರದಲ್ಲಿರುವ ಈ ಪ್ರದೇಶದಲ್ಲಿ ಕೃಷಿ ಯೋಗ್ಯವಾದ ಬಾವಿಗಳು ನೀರು ಹಣಿಸುವುದೇ ಇಲ್ಲ. ಬಹಳ ಮೇಲ್ಲೆಯೇ ಭೂಮಿಯ ಪದರದಲ್ಲಿರುವ ಜಲವನ್ನು ಕಂಡು ಒಗ್ಗುವಜನ ದಿನ

ಗಳಿದಂತೆ ನೀರು ಬತ್ತುವುದನ್ನು ಕಂಡು ತಾವೂ ಬತ್ತುತ್ತಾರೆ. ಪಂಪ್ ಮತ್ತು ವಿದ್ಯುತ್ ಸರಬರಾಜಿಗೆ ಖರ್ಚು ಮಾಡಿದ ವೆಚ್ಚದ ಹಿಂದೆಯೇ ಬರೀ ಎಲೆಕ್ಟ್ರಿಕ್ ಬಿಲ್ ಕಟ್ಟು ವುದರಲ್ಲಿಯೇ ಜೀವನ ತಳ್ಳುತ್ತಾರೆ. 1930 ನೀರಾವರಿ ಬಾವಿಗಳು ಇವೆಯೆಂದು ಹೇಳಿಕೊಳ್ಳುವ ಸರಕಾರಕ್ಕೆ ಈ ಭೂಮಿಯಲ್ಲಿ ಎಷ್ಟು ಆಳ ಕೊರೆಸಿದರೂ ನೀರಿನ ಸೆಲೆ ಒಡೆಯುವುದಿಲ್ಲವೆಂದು ಗೊತ್ತು. ಆದರೂ ಜನಗಳ ಪ್ರಯತ್ನ ನಿಂತಿಲ್ಲ.

ವರ್ಷವರ್ಷಕ್ಕೂ ಇಳಿಮುಖವಾಗುತ್ತಿರುವ ಮಳೆಯನ್ನು ಗಮನಿಸುತ್ತಿದ್ದಂತೆಲ್ಲಾ ಪರಿಸರದ ಅಧ್ಯಯನಕ್ಕೆ ತಕ್ಕ ಗಮನ ಕೊಡದ ಸರಕಾರ ಜನಗಳ ಮೇಲೆ ತನ್ನ ಅಳಿದುಳಿದ ಅಧಿಕಾರ ಚಲಾಯಿಸುವುದರಲ್ಲೇ ಕಾಲ ಕಳೆಯುವುದನ್ನು ಗಮನಿಸಬಹುದು. ಇಡೀ ತಾಲ್ಲೂಕಿನಲ್ಲಿ 8,335 ಹೆಕ್ಟೇರು ಅರಣ್ಯ ಇದೆ ಎಂದು ತಾಲ್ಲೂಕು ಕಚೇರಿ ತಿಳಿಸುತ್ತದೆ. ನೀವು ನಂಬಬೇಕು. ರಸ್ತೆಯ ಪಕ್ಕದ ದೊಡ್ಡ ದೊಡ್ಡ ಆಲದ ಮರ, ಗೋಣಿ ಮರಗಳೂ ಇಂದು ಕಥೆಯಂತೆ ನಿಂತಿವೆ. ಇಳಿಮುಖವಾಗುತ್ತಿರುವ ಅರಣ್ಯ ಪರೋಕ್ಷವಾಗಿ ನಮ್ಮೆಲ್ಲ ದುರಂತಗಳಿಗೆ ಕಾರಣ ಎಂಬುದು ಅಧಿಕಾರಿಗಳಿಗೆ ಹೇಗೆ ತಿಳಿಯ ಬೇಕು ? ಭೂಮಿ ತಪಸಿಧಿಯೆ ? ಇದು ಯೋಚಿಸಬೇಕಾದ ವಿಷಯ. ಅಗೆದಷ್ಟೂ ತೆಗೆಯಬೇಕೆನ್ನುವ ನಾವು ಸಂರಕ್ಷಿಸುವುದನ್ನು ಕಲಿಯದಿದ್ದರೆ, ಕಡೆಗೆ ರಾಗಿ ಬೆಳೆಯು ವುದೂ ಕಷ್ಟವಾಗುಹುದು.

ತೆಂಗು ಇಂದು ಹೆಚ್ಚು ಬೆಲೆ ಗಳಿಸುತ್ತಿರುವುದರಿಂದ ತುಂಬಾ ಜನರ ಗಮನ ಸೆಳೆಯುತ್ತಿದೆ. ಈಗಾಗಲೇ 13,300 ಹೆಕ್ಟೇರು ಪ್ರದೇಶದಲ್ಲಿ ತೆಂಗು ಬೆಳೆಯುತ್ತಿದ್ದು ಹೆಚ್ಚು ಮಂದಿ ಆ ಕಡೆ ಗಮನ ಹರಿಸುತ್ತಿದ್ದಾರೆ. ಆದರೆ ವೈಜ್ಞಾನಿಕವಾಗಿ ಇಲ್ಲಿ ಏನು ಬೆಳೆಯುವುದೂ ಕಡಿಮೆ. ತಾನು ಸುರಿಸಿದ ಬೆವರಿನ ಶ್ರಮಕ್ಕೆ ಗರಿಷ್ಠ ಲಾಭ ಪಡೆಯ ಬೇಕೆಂಬ ಆಕಾಂಕ್ಷೆ ಇಲ್ಲ. ಒಂದು ವರ್ಷಕ್ಕಾಗುವಷ್ಟು ಆದರೆ ಸಾಕೆಂಬ ನಿರ್ಲಿಪ್ತತೆ. ತೆಂಗು ರಾಗಿಗಳನ್ನು ಬಿಟ್ಟು ಹೊಸ ಅನ್ವೇಷಣೆಗೆ ತೊಡಗಲು ಭಯ. ರೇಶ್ಮೆ ಕೈಗಾರಿಕೆ ಯನ್ನು ಜನಪ್ರಿಯಗೊಳಿಸಬೇಕೆಂಬ ಹಂಬಲ ಹೊತ್ತ ಸರಕಾರೀ ಅಧಿಕಾರಿಗಳಿಗೂ ಜನರ ನಿರ್ಲಿಪ್ತತೆ ಕಂಡು ನಿಷ್ಕ್ರಿಯತೆ.

ಈ ತಾಲ್ಲೂಕಿನಲ್ಲಿ 2010 ಕೈಗಾರಿಕಾ ಘಟಕಗಳಿದ್ದು 4,550 ಜನರಿಗೆ ಉದ್ಯೋಗವನ್ನು ಕಲ್ಪಿಸಲಾಗಿದೆ ಎಂದಾಗ ಆಶ್ಚರ್ಯವಾದುದ್ದು ನನಗೆ. ಏಕೆಂದರೆ 'ಕೈಗಾರಿಕಾ ಘಟಕ' ದ ಬಗ್ಗೆ ನನಗಿದ್ದ ಕಲ್ಪನೆಯೇ ಬೇರೆ. ಈ ಮೇಲಿನ ಅಂಕಿ ಅಂಶ ಗಳಿಂದ ಸರಾಸರಿ ಇಬ್ಬರಿಗೆ ಉದ್ಯೋಗ ಕಲ್ಪಿಸಿ ಕೊಟ್ಟಂತಾಯಿತು. ಅಂದರೆ ಇಲ್ಲಿನ ಕೈಗಾರಿಕೆಗಳೆಲ್ಲವೂ ಗೃಹಕೈಗಾರಿಕೆಗೆ ಸೀಮಿತಪಟ್ಟವು. ಚಿಕ್ಕನಾಯಕನಹಳ್ಳಿ ಸುತ್ತ ಮುತ್ತ ಇರುವ ಕಂಬಳಿನೇಯ್ಗೆ ಇದರಲ್ಲಿ ಮುಖ್ಯವಾದದ್ದು. ಜೊತೆಗೆ ಅಕ್ಕಿ ಮತ್ತು ಹಿಟ್ಟಿನ ಗಿರಣಿಗಳು, ಕಮ್ಮಾರಿಕೆ, ಮರಗೆಲಸ, ಎಣ್ಣೆಗಾಣಗಳು, ಇತ್ಯಾದಿ. ಬೃಹತ್ ಕೈಗಾರಿಕೆಗಳನ್ನು ಇಲ್ಲಿ ಸ್ಥಾಪಿಸುವುದಕ್ಕೆ ಸಾಧ್ಯವಿಲ್ಲವೇ ? ಅದಕ್ಕೆ ಬೇಕಾದ ಕಚ್ಚಾ

ಸಾಮಾಗ್ರಿಗಳ ಕೊರತೆಯೆ ? ಬಂಡವಾಳ ಹೂಡುವ ಬಂಡವಾಳಿಗಳ ಕೊರತೆಯೆ ? ಇದಕ್ಕೆಲ್ಲ ಕಾರಣ ಚಿಕ್ಕನಾಯಕನಹಳ್ಳಿ ವ್ಯಾಪಾರ ಕೇಂದ್ರವಾಗಿ ಬೆಳೆಯದ್ದೇ ಮುಖ್ಯ ಕೊರತೆ. ತಾಲ್ಲೂಕಿನ ಉತ್ಸಾಹಶಾಲೀ ಯುವಕರು ತಿಪಟೂರು ಅಥವಾ ತುಮಕೂರಿಗೆ ಹೋಗಲು ಬಯಸುತ್ತಾರೆಯೆ ವಿನಾ ಚಿಕ್ಕನಾಯಕನಹಳ್ಳಿಯಲ್ಲಿ ಉಳಿಯಲು ಇಷ್ಟ ಪಡುವುದಿಲ್ಲ. ಇದರ ಹೊರೆಯನ್ನು ಹೊರುವವರು ಯಾರು ? ಖನಿಜಗಳಲ್ಲಿ ಕಬ್ಬಿಣ ಮತ್ತು ಮ್ಯಾಂಗನೀಸ್ ಅದರು ಎಷ್ಟು ಯಥೇಚ್ಛವಾಗಿ ದೊರಕಿದರೂ ಅದು ಸ್ಥಳೀಯರಿಗೆ ಯಾವ ಲಾಭವನ್ನು ತಂದು ಕೊಡಲಿಲ್ಲ, ಯಾಕೆ ? ಬಹುಶಃ ಈ ಪ್ರಶ್ನೆ ಗಳೆಲ್ಲಾ ಮುಂದುವರಿದ ಕನವರಿಕೆಗಳಾಗಿಯೇ ಉಳಿಯುತ್ತಾವೇನೊ ?

ತಾಲ್ಲೂಕಿನ ಸಾಕ್ಷರತೆ ಶೇ 33.57. ಇದು ಓದು ಬರೆಹ ಬರುವವರ ಸಂಖ್ಯೆ, ವಿದ್ಯಾಭ್ಯಾಸದಲ್ಲಿ ಗಣನೀಯ ಪ್ರಗತಿ ಸಾಧ್ಯವಾಗಿಲ್ಲ ಎಂಬುದಕ್ಕೆ ಇದು ಸಾಕ್ಷಿ. ಹೆಣ್ಣು ಮಕ್ಕಳ ವಿದ್ಯಾಭ್ಯಾಸವಂತೂ ಅತಿ ಕಡಿಮೆ. ಚಿಕ್ಕನಾಯಕನ ಹಳ್ಳಿಯಲ್ಲಿ ಇತ್ತೀಚಿನ ವರೆಗೆ ಪ್ರೌಢಶಾಲಾ ಶಿಕ್ಷಣ ಮಾತ್ರ ಸಾಧ್ಯವಿತ್ತು, ಆದರೆ ಗ್ರಾಮಾಂತರ ಪ್ರದೇಶ ಗಳಲ್ಲಿ ಅದು ಸದ್ಯಗಲ್ಲಿ ಸಾಧ್ಯವಿಲ್ಲ ? ಚಿಕ್ಕನಾಯಕನಹಳ್ಳಿಗೆ ಇಂದಿಗೂ ಎಂಟು ಹತ್ತು ಮೈಲಿಯಿಂದ ವಿದ್ಯಾರ್ಥಿಗಳು ನಡೆದು ಬಂದು ಪ್ರೌಢಶಾಲೆಯ ಶಿಕ್ಷಣವನ್ನು ಮುಗಿಸ ಬೇಕು. ಈ ತುರ್ತು ಅವಶ್ಯಕತೆಯನ್ನೂ ಗಮನಿಸದಷ್ಟು ರಾಜಕಾರಣ ದುರ್ಬಲ ವಾಗಿದೆ. ಸಾಮಾನ್ಯ ಶಿಕ್ಷಣಕ್ಕೆ ಈ ಗತಿ ಒದಗಿರುವಾಗ ವೃತ್ತಿ ಮತ್ತು ಶಿಕ್ಷಣ ತರಬೇತಿ ಶಾಲೆಗಳ ಹೆಸರೇ ಕೇಳಿಬರುವ ಸಾಧ್ಯತೆ ಇಲ್ಲ. ತಮ್ಮ ಅದಮ್ಯ ಉತ್ಸಾಹದ ಮಧ್ಯೆ ಪದವಿಯೋ ಬೇರೆ ತಾಂತ್ರಿಕ ಶಿಕ್ಷಣದ ತರಬೇತಿಯೋ ಮಾಡಿಕೊಂಡ ಯುವಕರಿಗೆ ಈ ತಾಲ್ಲೂಕಿನಲ್ಲಿ ಕಾದಿಟ್ಟ ಬುತ್ತಿ ಎಂದರೆ ನಿರಾಶೆ. ಹೀಗಾಗಿ ಅಲ್ಪ ಸ್ವಲ್ಪ ವಿದ್ಯಾವಂತರೂ ಕೂಡ ಅಂತರವನ್ನು ಕಾಪಾಡಿಕೊಳ್ಳಲು ಎಚ್ಚರಿಕೆ ವಹಿಸುತ್ತಿದ್ದಾರೆ. ಆಂತರಿಕ ಒತ್ತಾಸೆ ದಿನದಿನಕ್ಕೆ ಕ್ಷೀಣಿಸುತ್ತಿದೆ. ಆದರೆ ಚಿ. ನಾ. ಹಳ್ಳಿಯಲ್ಲಿ ಶಿಕ್ಷಣಕ್ಕೆ ಬ್ರಾಹ್ಮಣರು ನೀಡಿದ ಒತ್ತಾಸೆ ಮತ್ತು ಇತ್ತೀಚಿಗೆ ವ್ಯಾಪಾರಿಗಳು ನೀಡಿದ ಧನಸಹಾಯ ಅಲ್ಲಲ್ಲಿ ಆಸೆಯ ಬತ್ತಿಗಳನ್ನು ಹೊಸೆಯುವಂತೆ ಮಾಡುತ್ತಿದೆ.

ನಾನು ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಕಿರುಗ್ರಾಮವೊಂದಕ್ಕೆ ಸೇರಿದವನು. ಗ್ರಾಮವೆಂದರೆ ಮಾದರಿ ಗ್ರಾಮವೇನೂ ಅಲ್ಲ. ಯಾವುದೇ ಸ್ಥಿತಿಯಲ್ಲೂ ಒಗ್ಗೂಡದ ಒಬ್ಬನ ಏಳಿಗೆಯನ್ನು ಕಂಡು ಕರುಬುತ್ತಲೋ ಇನ್ನೊಬ್ಬನ ಹೀನಸ್ಥಿತಿಯನ್ನು ಕಂಡು ಗೇಲಿ ಮಾಡುತ್ತಲೋ ಚಲನಶೀಲವಲ್ಲದ ಬದುಕಿನ ಹಂದರದಲ್ಲಿ ಕೈಕಾಲಾಡಿಸುತ್ತಾ ಬದುಕುತ್ತಿರುವ ಅನೇಕ ಹಳ್ಳಿಗಳಂತೆ ಇದೂ ಒಂದು. ಇಂಥ ಹಳ್ಳಿಗಳು ಈ ತಾಲ್ಲೂಕಿ ನಲ್ಲಿ ಅನೇಕ.

---

ಈ ಲೇಖನಕ್ಕೆ ಬೇಕಾದ ಅಂಶಗಳನ್ನು ಒದಗಿಸುವಲ್ಲಿ ಚಿಕ್ಕನಾಯಕನಹಳ್ಳಿಯ ತಹಶೀಲ್ದಾರ್ ಹಾಗೂ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳ ಸಹಕಾರ ಪಡೆಯಲಾಗಿದೆ.

ಚಿಕ್ಕನಾಯಕನಹಳ್ಳಿ

# ಶೈಕ್ಷಣಿಕ ಚಟುವಟಿಕೆ

ಕೆ. ಪಿ. ಶಿವಲಿಂಗಯ್ಯ

**ಪೂರ್ವೇತಿಹಾಸ:—**

ಪೂರ್ವಕಾಲದಲ್ಲಿ ಭಾರತ ಹಾಗೂ ಕರ್ನಾಟಕದ ಅನೇಕ ಭಾಗಗಳಲ್ಲಿದ್ದಂತೆ ಗುರುಕುಲವಾಸ ಪದ್ಧತಿಯು ಚಿಕ್ಕನಾಯಕನಹಳ್ಳಿಯ ಪ್ರಾಂತ್ಯದಲ್ಲಿಯೂ ರೂಢಿಯಲ್ಲಿದ್ದಿತು. ವೇದ ವೇದಾಂಗಗಳು ಮಾತ್ರವಲ್ಲದೆ ವ್ಯಾಕರಣ, ಗಣಿತ, ತರ್ಕ, ಮೀಮಾಂಸ, ಜ್ಯೋತಿಷ್ಯ ಇವೇ ಮೊದಲಾದ ಶಾಸ್ತ್ರ ವಿಷಯಗಳೂ ಕಾವ್ಯಾಭ್ಯಾಸವೂ ಪಠ್ಯವಿಷಯಗಳಲ್ಲಿ ಸಂಯೋಜಿತವಾಗಿದ್ದವು.

ಈ ತಾಲ್ಲೂಕಿನ ಯಳನಾಡು ಸಂಸ್ಥಾನ ಮಠ, ಪಂಕಜನಹಳ್ಳಿಯ ಮಲ್ಲಿಕಾರ್ಜುನ ದೇವಸ್ಥಾನ, ಒಡೇರಹಳ್ಳಿ ಶಾಂತಮಲ್ಲಪ್ಪನ ದೇವಸ್ಥಾನ, ಕುಪ್ಪೂರು ಮರುಳಸಿದ್ಧೇಶ್ವರ ಗದ್ದಿಗೆ, ಕಂದಿಕೆರೆಯ ಕಲ್ಯಾಣದೇವರ ಮಠ, ಹುಳಿಯೂರು ಅಗ್ರಹಾರ, ಶೆಟ್ಟಿಕೆರೆ ಅಗ್ರಹಾರ–ಇವುಗಳೆಲ್ಲ ವಿದ್ಯಾನಿಕೇತನಗಳನ್ನೊಳಗೊಂಡ ಘಟಿಕಾಸ್ಥಾನಗಳಾಗಿದ್ದವೆಂದು ಸ್ಥಳ ಪುರಾಣಗಳಿಂದ ತಿಳಿದು ಬರುತ್ತದೆ.

ಬ್ರಾಹ್ಮಣರು ಮಾತ್ರವಲ್ಲದೆ ಕ್ಷತ್ರಿಯರು ಹಾಗೂ ವೈಶ್ಯರು ಕೂಡ ತಂತಮ್ಮ ಸಂಪ್ರದಾಯದಂತೆ ವಿದ್ಯಾಭ್ಯಾಸ ಕಾರ್ಯದಲ್ಲಿ ನಿರತರಾಗಿದ್ದರು. ಕರಕುಶಲಕಲೆಗಳೂ ಆಯಾ ವಂಶಾನುಕ್ರಮವಾಗಿ ಬರುತ್ತಿದ್ದುದುಂಟು. ಇಂದಿಗೂ ಚಿಕ್ಕನಾಯಕನಹಳ್ಳಿಯ ಕಂಬಳಿಯ ನೇಯ್ಗೆ ದೇಶದಲ್ಲೇ ಪ್ರಸಿದ್ಧಿ ಪಡೆದಿರುವುದನ್ನು ಈ ಬಗೆಗೆ ನಿದರ್ಶಿಸಬಹುದಾಗಿದೆ.

ಹೈದರ್ ಆಲಿ ಮತ್ತು ಟಿಪ್ಪುಸುಲ್ತಾನರ ಆಡಳಿತಕಾಲದಲ್ಲಿ ಮುಸ್ಲಿಮರಿಗೆ ಯೋಗ್ಯವಾದ ವಿದ್ಯಾಭ್ಯಾಸವು ಈ ಭಾಗದಲ್ಲಿಯೂ ಕೆಲವೆಡೆ ನಡೆದಿದೆ. 'ಕುರಾನ್' ಕಲಿಯುವಿಕೆಯೂ ಇದರಲ್ಲಿ ಸೇರಿದ್ದಿತು.

**ಆಧುನಿಕ ಶಿಕ್ಷಣ ಪ್ರಾರಂಭ :—**

ಕ್ರಿ. ಶ. 1833ರ ವರೆಗೆ ಖಾಸಗಿ ಚಟುವಟಿಕೆಯಾಗಿಯೇ ವಿದ್ಯಾಭ್ಯಾಸವು ಬಹುಮಟ್ಟಿಗೆ ಇದ್ದಿತು. ಮೇಲೆ ತಿಳಿಸಿರುವಂತೆ ಧಾರ್ಮಿಕಮುಖಂಡರೇ ಶಿಕ್ಷಣ ಸಂಸ್ಥೆಗಳನ್ನು ವ್ಯವಸ್ಥೆಗೊಳಿಸುತ್ತಿದ್ದರು. 1833ರಲ್ಲಿ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರು ಮೈಸೂರಿನಲ್ಲಿ ಸ್ಥಾಪಿಸಿದ ಉಚಿತ ಇಂಗ್ಲೀಷ್ ಸ್ಕೂಲ್‌ನಿಂದ ಶಿಕ್ಷಣಕ್ಷೇತ್ರದಲ್ಲೊಂದು ಕ್ರಮಬದ್ಧತೆಯುಂಟಾಯಿತೆನ್ನಬಹುದು .1854ರಲ್ಲಾದ ಸರ್ ಚಾರ್ಲ್ಸ್ ವುಡ್ಸ್ ಡೆಸ್ಪ್ಯಾಚ್ ಅನುಲಕ್ಷಿಸಿ ಈಸ್ಟ್ ಇಂಡಿಯಾ ಕಂಪನಿಯ ನಿರ್ದೇಶಕರುಗಳು ಶಿಕ್ಷಣ ಹೇಗಿರಬೇಕೆಂಬುದರ ಬಗೆಗೆ ಯೋಜನೆಯೊಂದನ್ನು ರೂಪಿಸಿದರು. ಅದರ

ಪ್ರಕಾರ 1868ರಲ್ಲಿ ಹೋಬಳಿ ಶಾಲಾ ಪದ್ಧತಿ ಜಾರಿಗೆ ಬಂದು ಪ್ರತಿ ಹೋಬಳಿಯಲ್ಲಿಯೂ (ಎಲ್ಲಿ ಜನರು ಅಪೇಕ್ಷಿಸುತ್ತಿದ್ದರೋ ಅಲ್ಲಿ)-ಶಾಲೆಯೊಂದನ್ನು ತೆರೆಯುವ ಪದ್ಧತಿ ಜಾರಿಗೆ ಬಂದಿತು. 1871–72ರ ಹೊತ್ತಿಗೆ ಪ್ರತಿ ತಾಲ್ಲೂಕಿನ ಮುಖ್ಯಸ್ಥಳದಲ್ಲಿಯೂ ಒಂದೊಂದು 'ವರ್ನಾಕ್ಯುಲರ್' ಸ್ಕೂಲ್ ಸ್ಥಾಪಿಸುವಷ್ಟರ ಮಟ್ಟಕ್ಕೂ ಏರಿತು,

1900ರ ವೇಳೆಗೆ ತುಮಕೂರಿನಲ್ಲಿ ಡಿಸ್ಟ್ರಿಕ್ಟ್ ನಾರ್ಮಲ್ ಸ್ಕೂಲ್(ಉಪಾಧ್ಯಾಯರ ತರಬೇತಿ-ಶಾಲೆ)ಸ್ಥಾಪಿತವಾಯಿತು. ಹಾಗೆಯೇ ಎಂಪ್ರೆಸ್ ಗರ್ಲ್ಸ್ ಸ್ಕೂಲ್ ತೆರೆಯಲಾಗಿದ್ದು, ಸರ್ಕಾರದ ಈ ಶಾಲೆ 1922–23ರಲ್ಲಿ ಹೈಸ್ಕೂಲ್ ಮಟ್ಟಕ್ಕೆ ಬರುವಷ್ಟು ದಾಂಗುಡಿಯಿಟ್ಟಿತು.

ಹೀಗೆ ಜಿಲ್ಲೆಯಲ್ಲಿ ಆಗತೊಡಗಿದ ಶಿಕ್ಷಣಾಭಿವೃದ್ಧಿಯ ಪ್ರಭಾವವು ಚಿಕ್ಕನಾಯ್ಕನಹಳ್ಳಿ ತಾಲ್ಲೂಕಿನ ಮೇಲೆ ಕೂಡ ಕ್ರಮಕ್ರಮವಾಗಿ ಬೀರತೊಡಗಿದ್ದನ್ನು ನಾವು ಕಾಣಬಹುದಾಗಿದೆ. 1941ರವರೆಗೆ ಇಡೀ ಜಿಲ್ಲೆಯಲ್ಲಿಯೇ ಬಹಳ ಕಡಿಮೆಯಿದ್ದ ಶಿಕ್ಷಣ ಪ್ರಸಾರವು ಇದ್ದಕ್ಕಿದ್ದಂತೆ 1941–1951 ಈ ದಶಕದಲ್ಲಿ ಬಹಳಷ್ಟು ಪ್ರಗತಿ ಹೊಂದಿದ್ದನ್ನು ಕಂಡು ಆಶ್ಚರ್ಯ ಪಡುವಂತಾಗುತ್ತದೆ.

ಈ ಅವಧಿಯಲ್ಲಿಯೇ ಈ ತಾಲ್ಲೂಕಿನ ಕೇಂದ್ರದಲ್ಲಿ ಶ್ರೀ ಜಿ. ವಿ. ನಾರಾಯಣ ಮೂರ್ತಿಯವರು ದಿ। ಲಿಂಗದೇವರು ಮೊದಲಾದ ಮಿತ್ರರ ನೆರವಿನಿಂದ ದೇಶೀಯ ವಿದ್ಯಾ ಪೀಠವೆಂಬ ಪ್ರೌಢಶಾಲೆಯನ್ನು ಸ್ಥಾಪಿಸಿದ್ದು, ಇಂದು ಅದು ಎಷ್ಟು ಅಭಿವೃದ್ಧಿ ಹೊಂದಿದೆಯೆನ್ನುವುದು ಸರ್ವವಿದಿತ. ಸ್ತ್ರೀಯರ ಶಿಕ್ಷಣವೂ ಸಹ ಜಿಲ್ಲೆಯಲ್ಲಿ ಸುಧಾರಿಸುತ್ತಿರುವುದರಿಂದ, ಈ ತಾಲ್ಲೂಕಿನ ಹೆಣ್ಣುಮಕ್ಕಳೂ ಈಚೀಚೆಗೆ ಉನ್ನತ ಶಿಕ್ಷಣಕ್ಕೆ ಅಡಿಯಿಡುತ್ತಿದ್ದಾರೆ.

ತುಮಕೂರು ಜಿಲ್ಲೆಯಲ್ಲಿ (ಇತರ ಜಿಲ್ಲೆಗಳಲ್ಲಿರುವಂತೆ) ಶಿಕ್ಷಣ ಇಲಾಖೆಯ ಉಪನಿರ್ದೇಶಕರ ನೇತೃತ್ವದಲ್ಲಿ ಪ್ರತಿ ತಾಲ್ಲೂಕಿನ ಸಹಾಯಕ ಶಿಕ್ಷಣಾಧಿಕಾರಿಗಳು ಇದೀಗ ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಅವರ ನೆರವಿಗೆ ಪದವೀಧರ ಶಾಲಾ ತನಿಖಾಧಿಕಾರಿಗಳು (Graduate Inspectors of Schools) ಪ್ರಾಥಮಿಕ ಶಾಲಾ ಶಿಕ್ಷಣವನ್ನು ಪರಿವೀಕ್ಷಿಸುತ್ತಾರೆ. ಪ್ರಾಥಮಿಕ ಪೂರ್ವ ಶಾಲೆಗಳೂ ಅಲ್ಲಲ್ಲಿ ತಲೆಯೆತ್ತುತ್ತಿವೆಯಾದರೂ ಅವುಗಳಲ್ಲಿ ಬಹಳಷ್ಟು ಖಾಸಗಿಯವಾಗಿದ್ದು ಎಲ್ಲೆಡೆಯಲ್ಲಿರುವಂತೆ ಒಂದು ಬಗೆಯ ಸುಲಿಗೆಗೊಳಗಾಗಿರುವುದು ಶೋಚನೀಯ.

**ಕಿರಿಯ ಪ್ರಾಥಮಿಕ ಶಾಲೆಗಳು** —

ಚಿಕ್ಕನಾಯಕನಹಳ್ಳಿ ತಾಲ್ಲೂಕಿನಲ್ಲಿ 162ಕಿರಿಯ ಪ್ರಾಥಮಿಕ ಶಾಲೆಗಳಿದ್ದು 198ಜನ ಗಂಡಸರೂ 9 ಮಂದಿ ಹೆಂಗಸರೂ ಉಪಾಧ್ಯಾಯರಿದ್ದಾರೆ. 6532 ಹುಡುಗರೂ 3584 ಹುಡುಗಿಯರೂ ಒಟ್ಟು 10,116 ವಿದ್ಯಾರ್ಥಿಗಳು ಕಲಿಯುತ್ತಿ

ದ್ದಾರೆ. ಈ ಪೈಕಿ ಕನ್ನಡ ಮಾಧ್ಯಮವನ್ನು ಹೊಂದಿದ ಹೆಣ್ಣುಮಕ್ಕಳ ಶಾಲೆಗಳೂ ಉರ್ದು ಮಾಧ್ಯಮದ ಗಂಡುಮಕ್ಕಳ, ಹೆಣ್ಣುಮಕ್ಕಳ ಶಾಲೆಗಳೂ ಇವೆ.

**ಹಿರಿಯ ಪ್ರಾಥಮಿಕ ಶಾಲೆಗಳು —**

ಈ ತಾಲ್ಲೂಕಿನಲ್ಲಿ i ರಿಂದ vii ಅಥವಾ v ರಿಂದ vii ತರಗತಿಗಳುಳ್ಳ ಹಿರಿಯ ಪ್ರಾಥಮಿಕ ಶಾಲೆಗಳು 37 ಇದ್ದು 125ಜನ ಗಂಡಸರೂ 14 ಜನ ಹೆಂಗಸರೂ ಶಿಕ್ಷಕರಿರುತ್ತಾರೆ. 2215 ಹುಡಗರೂ 2178 ಹುಡುಗಿಯರೂ ಒಟ್ಟು 4303 ವಿದ್ಯಾರ್ಥಿಗಳಿರುತ್ತಾರೆ. ಇವುಗಳಲ್ಲಿ 8 ಶಾಲೆಗಳು ನೂತನ ಮಾದರಿ ಮಾಧ್ಯಮಿಕ ಶಾಲೆಗಳಾಗಿದ್ದು(New Type Middle Schools), ಈಚೆಗೆ ಅವು ಹಿ॥ಪ್ರಾ॥ ಶಾಲೆಗಳಲ್ಲಿಯೇ ಸೇರಿ ಹೋಗಿವೆ.

**ಪ್ರೌಢಶಾಲೆಗಳು : —**

ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಗೋಡೆಕೆರೆ ಮತ್ತು ಹುಳಿಯೂರು ಈಯೆರಡು ಗ್ರಾಮಗಳಲ್ಲಿಯೂ ತಾಲ್ಲೂಕು ಬೋರ್ಡ್ ಹೈಸ್ಕೂಲ್‌ಗಳಿದ್ದು, ಈಚೆಗೆ ಅವು ಸರ್ಕಾರಿ ಹೈಸ್ಕೂಲ್‌ಗಳಾಗಿ ಮಾರ್ಪಟ್ಟಿವೆ. ಸರಕಾರದ ಧನ ಸಹಾಯ ಪಡೆಯುವ 6 ಪ್ರೌಢ ಶಾಲೆಗಳಿವೆ.

**ಪದವಿ-ಪೂರ್ವ ಶಿಕ್ಷಣ : —**

ಸರಕಾರದವರೇ ನೇರವಾಗಿ ನಡೆಸುವ (ಹೈಸ್ಕೂಲ್ ಜತೆಯಲ್ಲಿಲ್ಲದ) ಕಿರಿಯ ಕಾಲೇಜು ಚಿಕ್ಕನಾಯಕನಹಳ್ಳಿಯಲ್ಲಿ ನಡೆಯುತ್ತಿದೆ. ಪಿ. ಯು. ಸಿ. ಎರಡೂ ತರಗತಿಗಳು ನಡೆಯುವ ಈ ವಿದ್ಯಾಲಯವು ರಾಜ್ಯದ ಕೆಲವೇ ಸಂಸ್ಥೆಗಳಲ್ಲಿ ಒಂದಾಗಿದೆ.

**ಪದವಿ ಶಿಕ್ಷಣ (ಸ್ನಾತಕ) :—**

ತಿಪಟೂರಿನ ಕಲ್ಪತರು ಕಾಲೇಜು. ತುಮಕೂರಿನ ಸರಕಾರಿ ಕಾಲೇಜು, ಸಿದ್ಧಗಂಗಾ ಕಾಲೇಜುಗಳಲ್ಲಿ ಈ ಪ್ರಾಂತ್ಯದ ವಿದ್ಯಾರ್ಥಿ ವಿದ್ಯಾರ್ಥಿನಿಯರು ಉನ್ನತ ಶಿಕ್ಷಣವನ್ನು ಪಡೆಯುತ್ತಿದ್ದಾರೆ. ತುಮಕೂರಿನ ಮೂರು ಸ್ನಾತಕೋತ್ತರ ತರಬೇತಿ ಕಾಲೇಜು ಗಳಲ್ಲಿ, ಎರಡು ಎಂಜಿನಿಯರಿಂಗ್ ಕಾಲೇಜುಗಳಲ್ಲಿ ಒಂದು ಲಾ ಕಾಲೇಜಿನಲ್ಲಿ ಸಹ ಕೆಲವರು ವಿದ್ಯಾಭ್ಯಾಸ ಮಾಡುತ್ತಿದ್ದಾರೆ.

**ಗ್ರಂಥಾಲಯ :—**

ದಿನಾಂಕ 1-1-196 ರಲ್ಲಿದ್ದಂತೆ ತುಮಕೂರು ಜಿಲ್ಲೆಯ ಹತ್ತು ಸಾರ್ವಜನಿಕ ಗ್ರಂಥಾಲಯಗಳಲ್ಲಿ ಚಿಕ್ಕನಾಯಕನಹಳ್ಳಿಯ ಗ್ರಂಥಾಲಯ ಮತ್ತು ವಾಚನಾಲಯವೂ ಒಂದು.

**ಇನ್ನಿತರ ಶಿಕ್ಷಣ :—**

ವಯಸ್ಕರ ಶಿಕ್ಷಣ, ವಾಣಿಜ್ಯ ವಿದ್ಯೆ, ಸಂಗೀತ, ನೃತ್ಯ ಮುಂತಾದವುಗಳಲ್ಲಿ ಅಷ್ಟಾಗಿ ಪ್ರಗತಿ ಸಾಧಿಸದ ಚಿಕ್ಕನಾಯಕನಹಳ್ಳಿಯು ಈಚೀಚೆಗೆ ಆಯಾಕ್ಷೇತ್ರಗಳಲ್ಲಿ ಪ್ರವೇಶಿಸತೊಡಗಿರುವುದು ಸಮಾಧಾನದ ಸಂಗತಿ,

**ಸಾಹಿತ್ಯ–ಸಂಸ್ಕೃತಿ :—**

ಪೀಠಿಕೆಯಲ್ಲಿ ಅರಿಕೆ ಮಾಡಿರುವಂತೆ ಸಾಕಷ್ಟು ಪೂರ್ವೇತಿಹಾಸ ಹೊಂದಿರುವ ಚಿಕ್ಕನಾಯಕನಹಳ್ಳಿಯು ಆಧುನಿಕ ಶಿಕ್ಷಣದಲ್ಲಿ ಕೊಂಚ ಮಟ್ಟಿಗೆ ಹಿಂದೆ ಬಿದ್ದಿರ ಬಹುದು, ಆದರೂ ನಾಟಕ ಪ್ರಪಂಚದಲ್ಲಿ ಹೆಸರು ಮಾಡಿದ ದಿ॥ ಸಿ. ಬಿ. ಮಲ್ಲಪ್ಪ ಮತ್ತು ಗೆಳೆಯರನ್ನು ನಾವು ಮರೆಯುವಂತಿಲ್ಲ.

ಕನ್ನಡ ಸಾಹಿತ್ಯದಲ್ಲಿ ಚಿರಸ್ಥಾಯಿಯಾಗಿರುವ(ಇನ್ನೊಂದು) ಹೆಸರು ದಿ॥ 'ಶ್ರೀನಂಶ್ರೀ' ಅವರದು. ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ತೀರ್ಥಪುರದ ನಂಜುಂಡಯ್ಯ ಶ್ರೀಕಂಠಯ್ಯ ಅವರು ಹಲವು ಹಣತೆಗಳನ್ನು ಹೊತ್ತಿಸಿ ಬೆಳಗಿದ ಜ್ಯೋತಿ, ಕನ್ನಡ, ಇಂಗ್ಲಿಷ್, ಭಾಷಾ ಶಾಸ್ತ್ರಗಳಲ್ಲಿ ತನ್ನದೇ ಆದ ಸೇವೆ ಸಲ್ಲಿಸಿದ ಪ್ರೊ॥ ಶ್ರೀಕಂಠಯ್ಯ ಅವರು ಭಾರತೀಯ ಕಾವ್ಯಮೀಮಾಂಸೆ, ಕಾವ್ಯಸಮೀಕ್ಷೆ, ಒಲುಮೆ, ರಾಕ್ಷಸನ ಮುದ್ರಿಕೆ, ಮಧ್ಯಮ ಶಾಲೆಯ ವ್ಯಾಕರಣ, ನಂಬಿಯಣ್ಣನರಗಳೆ– ಇವುಗಳ ಕರ್ತೃವೂ ಹೌದು.

**ಉಪಸಂಹಾರ :—**

ಮೈಸೂರು, ಬೆಂಗಳೂರು ಜಿಲ್ಲೆಗಳೊಂದಿಗೆ ಸಾಂಸ್ಕೃತಿಕ ಮತ್ತು ಸಾಹಿತ್ಯಕ ಚಟುವಟಿಕೆಗಳ ವಿಷಯದಲ್ಲಿ ತುಮಕೂರು ಜಿಲ್ಲೆಯನ್ನು ಹೋಲಿಸಲಾಗುವುದಿಲ್ಲ. ಎನ್ನುವ ಗೆಜಿಟಿಯರ್ ಕರ್ತರ ಹೇಳಿಕೆಯನ್ನು ನಾವು ಒಪ್ಪಲು ಸಾಧ್ಯವಿಲ್ಲ (Page 500, Mysore state Gagetteer Tumkur district, 1969)

ಏಕೆಂದರೆ ಹಿಂದಿನ ಹಾಗೂ ಈಗಿನ ರಾಜಧಾನಿಗಳಾದ ಆಯೆರಡು ಪ್ರಾಂತ್ಯಗಳಲ್ಲಿ ಆಧುನಿಕ ಶಿಕ್ಷಣಪ್ರಗತಿ ಸಾಕಷ್ಟು ಮುಂದುವರಿದಿರುವುದು ಹೆಚ್ಚುಗಾರಿಕೆಯಲ್ಲ. ಆದರೆ ಪ್ರಾಚೀನಕಾಲದಿಂದಲೂ ಒಳ್ಳೆಯ ಪರಂಪರೆಯನ್ನು (ಶಿಲ್ಪಕಲೆಯಲ್ಲಿ ಕೂಡ) ಹೊಂದಿ ರುವುದು ತುಮಕೂರಿನ ಹೆಮ್ಮೆ.

ಪೂರ್ವಕಾಲದ ಘಟಿಕಾಸ್ಥಾನಗಳನ್ನು ಹೊಂದಿದ್ದ ಈ ಜಿಲ್ಲೆಯು ಇಂದೂ ಸಹ 'ಸಿದ್ಧಗಂಗಾಕ್ಷೇತ್ರ' ದಂತಹ ಗುರುಕುಲವನ್ನೂ 'ಗುರುದೇವ' ಡಾ॥ ಶ್ರೀ ಶಿವಕುಮಾರ ಸ್ವಾಮಿಗಳಂತಹ ಕುಲಪತಿಗಳನ್ನು ಪಡೆದಿರುವುದು ಪರಮ ಸೌಭಾಗ್ಯವೇ ಸೈ.

ಆಶ್ಚರ್ಯದ ಸಂಗತಿಯೆಂದರೆ ಅಂತಹ ಮಹಾಸ್ವಾಮಿಗಳು ತಮ್ಮ ಚಿರಂತನವಾದ 'ದಾಸೋಹ' ಕಾಯಕದಲ್ಲಿ ಹಾಗೂ ಸಂಸ್ಕೃತ ಶಿಕ್ಷಣ ಸಂಸ್ಥೆಗಳ ಅಭಿವೃದ್ಧಿಯಲ್ಲಿ ತನ್ಮಯರಾಗಿದ್ದಾಗ ಕ್ರಿ. ಶ. 1940ರಷ್ಟು ಹಿಂದೆಯೇ ಚಿಕ್ಕನಾಯಕನಹಳ್ಳಿಯಲ್ಲಿ ನೆಲೆಸಿದ ಶಿಕ್ಷಣ ತಜ್ಞರಾದ ಗೂಳೂರು ನಾರಾಯಣ ಮೂರ್ತಿಯವರು ಖಾಸಗಿ ಪ್ರೌಢಶಾಲೆಯನ್ನು ಸಂಸ್ಥಾಪಿಸಬೇಕೆಂದು ಬಿನ್ನವಿಸಿ, ಇಂದಿನ ಮೇರೆವರಿಯದ ಶಿಕ್ಷಣ ಸಂಸ್ಥೆಗಳ ವೃದ್ಧಿಗೆ(ಅಪ್ರತ್ಯಕ್ಷವಾಗಿ) ಕಾರಣರಾದದ್ದು.

ಪ
ರಿ
ಸ
ರ

ಚಿಕ್ಕನಾಯಕನಹಳ್ಳಿ

# ಭೂವೈಜ್ಞಾನಿಕ ಸಮೀಕ್ಷೆ

**ಟಿ. ವಿ. ಶಿವರುದ್ರಪ್ಪ**

ತುಮಕೂರು ಜಿಲ್ಲೆಯ "ಖನಿಜದ ಕಣಜ"ವೆಂದರೆ ಚಿಕ್ಕನಾಯಕನಹಳ್ಳಿ. ಕರ್ನಾಟಕದ ಖನಿಜ ಸಂಪತ್ತಿಗೆ ಚಿಕ್ಕನಾಯಕನಹಳ್ಳಿಯು ಉತ್ತಮ ದರ್ಜೆಯ ಮ್ಯಾಂಗನೀಸ್ ಮತ್ತು ಕಬ್ಬಿಣದ ಅದುರುಗಳ ಕೊಡುಗೆಯನ್ನು ಕೊಡುತ್ತಾ ಬಂದಿದೆ. ಇಲ್ಲಿಯ ಗಣಿ ಉದ್ಯಮ ನಿನ್ನೆಮೊನ್ನೆಯದಲ್ಲ, ಸುಮಾರು 2000 ವರ್ಷಗಳಷ್ಟು ಪುರಾತನವಾದುದು. ಈ ಹಳ್ಳಿಯ ಪಶ್ಚಿಮಕ್ಕೆ ಬೆಳ್ಳಾರ ಮತ್ತು ಪೂರ್ವಕ್ಕೆ ಸಮೀಪವಿರುವ ಹೊನ್ನೆಬಾಗಿಯಲ್ಲಿ ಇಂದಿಗೂ ಕಾಣುವ ಅತ್ಯಂತ ಪುರಾತನ ಚಿನ್ನದಗಣಿಗಳ ಕಂದಕ ಮತ್ತು ಗಣೀಕಾರ್ಯಾಚರಣೆಗಾಗಿ ತೋಡಿರುವ ಆಳವಾದ ಗುಳಿಗಳೇ ಇದಕ್ಕೆ ಸಾಕ್ಷಿಯಾಗಿ ನಿಂತಿವೆ. ಚಿಕ್ಕನಾಯಕನಹಳ್ಳಿಯ ($13^0$ $18^1$ ಮತ್ತು $76^0$ $47^1$) ಸುತ್ತಮುತ್ತಲ ಭೂಇತಿಹಾಸವು ಕುತೂಹಲಕಾರಿ ಮತ್ತು ವಿಶಿಷ್ಟವಾದುದರಿಂದಲೇ ಹತ್ತಾರು ಭೂವಿಜ್ಞಾನಿಗಳು, ಹಲವಾರು ವರ್ಷಗಳವರೆಗೆ ಭೂ ಸರ್ವೇಕ್ಷಣೆ ಮತ್ತು ಸಮೀಕ್ಷೆಗಳನ್ನು ನಡೆಸಿ, ಅಲ್ಲಿ ದೊರೆಯುವ ಶಿಲೆ, ಖನಿಜ ಮತ್ತು ಭೂ–ಜಲ ಸಂಪತ್ತುಗಳನ್ನು ಭೂವೈಜ್ಞಾನಿಕ ನಕ್ಷೆಯಲ್ಲಿ ಗುರುತಿಸಿದ್ದಾರೆ. ಈ ನಕ್ಷೆಯನ್ನು ವೀಕ್ಷಿಸಿದಾಗ, ಈ ಭೂಭಾಗದ ಮೇಲ್ಮೈಸ್ವರೂಪ ಲಕ್ಷಣಗಳು ಅಂದರೆ ಬೆಟ್ಟ, ನದಿ-ಕಣಿವೆಗಳು ಎದ್ದು ಕಾಣುತ್ತವೆ. ಅವು ಹೇಗೆ ಉಂಟಾದವು ಎಂಬುದರ ಬಗ್ಗೆ ಯೋಚಿಸಿದಾಗ, ನೆಲ-ಜಲಗಳಲ್ಲಿ ಉಂಟಾದ ವೈಪರೀತ್ಯತೆಗಳು ತಮ್ಮ ವಿಲಕ್ಷಣ ಮೇಲ್ಮೈ ಸ್ವರೂಪವನ್ನು ಹೀಗೆ ಅಚ್ಚೊತ್ತಿದೆ ಎಂಬುದನ್ನು ಗಮನಿಸಬಹುದಾಗಿದೆ. ಈಗಿರುವ ಮೇಲ್ಮೈ ಸ್ವರೂಪವನ್ನು ವಿಶ್ಲೇಷಿಸಿದರೆ, ತಾಲ್ಲೂಕಿನ ಪೂರ್ವದಲ್ಲಿ, ದಕ್ಷಿಣೋತ್ತರವಾಗಿ ಸಮಾನಾಂತರವಾಗಿ ಹಬ್ಬಿಕೊಂಡಿರುವ ಬೆಟ್ಟಗಳ ಮೂರು ಸಾಲುಗಳನ್ನು ಕಾಣುವೆವು. ವೇದಾವತಿನದಿಯು ಈ ಬೆಟ್ಟಗಳಲ್ಲಿ ಹುಟ್ಟಿ, ಉತ್ತರಕ್ಕೆ ಹರಿಯುತ್ತದೆ. ಬೆಟ್ಟಕಣಿವೆಗಳ ವನರಾಶಿ, ಖನಿಜ, ಜಲಸಂಪತ್ತು ಮತ್ತು ವಿವಿಧಮಣ್ಣು. ಬೆಣಚು ಮಿಶ್ರಿತ ನೊರಜುಮಣ್ಣು ಸವಿಸ್ತಾರವಾಗಿ ಮೈಲಿ ಮೈಲಿಗಟ್ಟಲೆ ಹರಡಿಕೊಂಡಿವೆ. ತೊರೆ, ಕಣಿವೆಗಳಲ್ಲಿ ಕಾಣುವ, ಹಾಲಿನ ನೊರೆಯಂಥ ರಾಶಿ ರಾಶಿಯಾದ ಬೆಳ್ಳಿಯ ಮರಳು ಈ ಬೆಟ್ಟಗಳಿಗಿಟ್ಟ ಶೃಂಗಾರದ ಬೊಟ್ಟಿನಂತಿವೆ. ಇದೂ ಅಲ್ಲದೆ, ಅಲ್ಲಲ್ಲಿ ನಿಸರ್ಗವು ಓಕಳಿಯಾಡಿ, ಬೆಳ್ಳಿಮರಳಿಗೆ ಓರಣ ಒಪ್ಪವನ್ನು ಕೊಟ್ಟು, ರಂಗೋಲೆ ಇಟ್ಟಂತೆ ಕಾಣುವ ಕೆಂಪು, ಕಪ್ಪು, ಬಿಳಿ ಮತ್ತು ಕಾವಿಬಣ್ಣದ ಮಣ್ಣುಗಳನ್ನು ನೋಡುವುದೇ ಕಣ್ಣಿಗೆ ಹಬ್ಬ, ಈ ಊರಿಗೆ ಬರುವವರಿಗೆ, ಸುಸ್ವಾಗತವನ್ನು ಬಯಸುವ ತಳಿರು ತೋರಣದಂತಿರುವ ತೆಂಗು, ಅಡಿಕೆ ಮತ್ತು ಬಾಳೆಯ ಮರಗಳ ಅಚ್ಚ ಹಸಿಹಸಿರು ಪಟ್ಟಿಗಳು ಊರನ್ನು ಸುತ್ತುವರಿದಿವೆ.

ಚಿಕ್ಕನಾಯಕನಹಳ್ಳಿಯ ಸುತ್ತಮುತ್ತಲ ಶಿಲೆಗಳನ್ನು ಭೂವಿಜ್ಞಾನಿಗಳು, ಧಾರವಾಡ ಶಿಲಾಸ್ತೋಮದ ಪೂರ್ವಾರ್ಧಭಾಗವಾಗಿ ವರ್ಗೀಕರಿಸಿದ್ದಾರೆ. ಈ ಶಿಲೆಗಳು ಆರ್ಷೇಯ ಅಥವಾ ನಿರ್ಜೀವಿ ಕಲ್ಪಕ್ಕೆ ಸೇರಿದುವೆಂದು, ಅಂದರೆ ಇವು 3(0 ರಿಂದ 230 ಕೋಟಿ ವರ್ಷಗಳಷ್ಟು ಹಳೆಯ ಶಿಲೆಗಳು. ಈ ಶಿಲೆಗಳು ಬಹುತೇಕ ಅಗ್ನಿಶಿಲೆ, ಎಂದರೆ ಅಗ್ನಿಪರ್ವತಗಳಿಂದ ಹೊರಹೊಮ್ಮಿದ ಕಾದಕೆಂಡದಂಥ ಶಿಲಾಪಾಕವು ತಣ್ಣಗಾದುದರಿಂದ ಶಿಲೆಗಳಾದುವು. ಉದಾಹರಣೆಗೆ ಕಣಶಿಲೆ (ಗ್ರಾನೈಟ್), ಕರೀಕಲ್ಲು (ಡಾಲರೈಟ್) ಇತ್ಯಾದಿಗಳು. ಇಂತಹ ಮೂಲಶಿಲೆಗಳು ಗಾಳಿ, ನೀರು, ಮಳೆ ಬಿಸಿಲುಗಳಿಗೆ ಸಿಕ್ಕಿ ಸವೆದು ಮರಳು ಮಣ್ಣುಗಳಾಗುತ್ತವೆ. ನದಿಯ ನೀರು ಅವನ್ನು ಸಾಗಿಸಿ ತಂದು ಮೆಕ್ಕಲಿನಂತೆ ಹರಡಿ ಇಲ್ಲವೆ ಸಮುದ್ರ ತಳದಲ್ಲಿ ಸಂಚಯನವಾಗುತ್ತ ಶೇಖರವಾಗಿ ಪದರ, ಪದರವಾಗಿ ಗಟ್ಟಿಸಿಕೊಂಡು ಮರಳು ಶಿಲೆ, ಜೇಡುಶಿಲೆ, ಸುಣ್ಣ ಶಿಲೆ ಇವೇ ಮುಂತಾದ ಜಲಜಶಿಲೆಗಳಾದವು. ಎರಡೂ ವಿಧದ ಶಿಲೆಗಳು ಅಂದರೆ ಅಗ್ನಿ ಮತ್ತು ಜಲಜ ಶಿಲೆಗಳು ಭೂಮಿಯ ಆಳದಲ್ಲಿ ಶಾಖ, ಒತ್ತಡಗಳಿಗೆ ಸಿಲುಕಿಕೊಂಡು ರೂಪಾಂತರ ಶಿಲೆಗಳಾದುವು, ಅವುಗಳೇ ಪಟ್ಟಿಶಿಲೆ, ಸ್ಲೇಟುಶಿಲೆ, ಅಮೃತಶಿಲೆ, ಕ್ವಾರ್ಟ್‌ಜೈಟ್. ಇವು ಮೂಲತಹ ಕಣಶಿಲೆ, ಜೇಡುಶಿಲೆ, ಸುಣ್ಣಶಿಲೆ ಮತ್ತು ಮರಳುಶಿಲೆಗಳ ರೂಪಾಂತರ ಸ್ವರೂಪಗಳು, ಮೇಲೆ ವಿವರಿಸಿದ ಅಗ್ನಿಶಿಲೆ, ರೂಪಾಂತರ ಜಲಜಶಿಲೆ ಮತ್ತು ಜಲಜಶಿಲೆಗಳು ಚಿಕ್ಕನಾಯಕನಹಳ್ಳಿ ಶಿಲಾ ಸಮುದಾಯದಲ್ಲಿ ಸೇರಿವೆ. ಈ ಶಿಲೆಗಳು ಹೇಗೆ ಉದ್ಭವಿಸಿದವು, ಅವುಗಳ ವಯಸ್ಸು, ಖನಿಜಗಳುಂಟಾಗುವಿಕೆ, ಶಿಲೆಗಳು ಬಾಗಿಬಳುಕಿ ಬೆಟ್ಟಗಳಾಗುವಿಕೆ, ಶಿಲೆಗಳು ಸವೆದು ಮರಳು ಹಾಗೂ ಮಣ್ಣಾಗುವಿಕೆಗಳ ವಿಧಾನವನ್ನು ಹಂತ ಹಂತವಾಗಿ ವಿವರಿಸಬಹುದಾಗಿದೆ. ಒಟ್ಟಿನಲ್ಲಿ, ಚಿಕ್ಕನಾಯಕನಹಳ್ಳಿಯಲ್ಲಿ ದೊರೆಯುವ ವಿವಿಧ ಶಿಲೆಗಳಲ್ಲಿ ರೂಪಾಂತರ ಶಿಲಾವಿಧಗಳೇ ಹೆಚ್ಚು. ಇವುಗಳಾವರೂ, ಪಟ್ಟಿಶಿಲೆ, ಹಾರ್ನ್‌ಬ್ಲೆಂಡ್ ಮತ್ತು ಕ್ಲೋರೈಟ್ ಶಿಸ್ಟ್ ಪದರುಶಿಲೆಗಳು, ಕ್ವಾಡ್ಜೈಟ್, ಪಟ್ಟಿಯುತ ಕಬ್ಬಿಣ ಕ್ವಾಡ್ಜ್‌ಶಿಲೆ ಹಾಗೂ ಅಲ್ಲಲ್ಲಿ ದೊರೆಯುವ ಮ್ಯಾಂಗನೀಸ್ ಪದರಗಳು, ಮತ್ತು ಬೆಣಚಿನಸಿರಬಳ್ಳಿ : ಅಮೃತಶಿಲೆಗಳು, ಮುಂತಾದುವು. ಊದಾಬಣ್ಣದ ಬೆಣಚು ಸಿರಗಳೇ ಚಿನ್ನಕ್ಕೆ ಆಶ್ರಯಸ್ಥಾನ. ಚಿಕ್ಕನಾಯಕನಹಳ್ಳಿಯಲ್ಲಿ ದೊರೆಯುವ ಶಿಲೆಗಳನ್ನೆಲ್ಲ ಭೂವಿಜ್ಞಾನಿಗಳು ಒಟ್ಟಾರೆ ಸೇರಿಸಿ–''ಚಿಕ್ಕನಾಯಕನಹಳ್ಳಿ ಶಿಸ್ಟ್'ವಲಯ ಎಂದು ಹೆಸರಿಸಿದ್ದಾರೆ. ಇಂತಹ ವಲಯಗಳಲ್ಲಿ ಪುರಾತನ ಶಿಲೆಗಳಿರುತ್ತವೆ. ಈ ತೆರನಾದ ಹಲವಾರು ಶಿಲಾವಲಯಗಳನ್ನು ಅಂದರೆ, ಸಾಮ್ಯತೆ ಮತ್ತು ಸಮದೂಗುವಿಕೆಯನ್ನೊಂದಿರುವ ಪ್ರದೇಶವನ್ನು ಚಿತ್ರದುರ್ಗ ಶಿಸ್ಟ್‌ಗಳಲ್ಲಿ, ಶಿವಮೊಗ್ಗ ಶಿಸ್ಟ್, ಕೋಲಾರ ಶಿಸ್ಟ್ ವಲಯ, ಕುಣಿಗಲ್ ಶಿಸ್ಟ್, ಹಾಗೂ ದೊಡ್ಡಗುಣಿಯಲ್ಲಿರುವ ಶಿಸ್ಟ್ ಶಿಲೆಗಳನ್ನು ಉಪಹರಿಸಬಹುದು. ಭಾರತದಲ್ಲೆ ಮೇಲೆ ಹೇಳಿದಂತಹ ಹತ್ತಾರು ಶಿಸ್ಟ್‌ವಲಯಗಳಿವೆ. ಇವನ್ನು ರಾಜಾ

ಸ್ಥಾನದ ಆರಾವಳಿ ಶಿಲಾಸ್ತೋಮ, ಒರಿಸ್ಸಾ, ಸಿಂಗಭೂಂ, ಆಂಧ್ರಪ್ರದೇಶದ ನೆಲ್ಲೂರು ಶಿಸ್ಟ್ ವಲಯಗಳಲ್ಲೂ ಕಾಣಬಹುದಾಗಿದೆ. ಹಿಮಾಲಯದಲ್ಲೂ ಚಿಕ್ಕನಾಯ್ಕನಹಳ್ಳಿ ಶಿಸ್ಟ್ ಶಿಲೆಗಳಿವೆ. ಕರ್ನಾಟಕದ ಗದಗ್ ಸಮೀಪವಿರುವ ಡಂಬಲ್‌ನಿಂದ ಹಿಡಿದು ಚಿಕ್ಕನಾಯ್ಕನಹಳ್ಳಿಯವರೆಗೂ ಒಂದೇ ಸಮನಾಗಿ ಸುಮಾರು ಮುನ್ನೂರು ಮೈಲಿ ಉದ್ದವಿರುವ, ಐದರಿಂದ ನೂರು ಮೈಲಿಗಳಷ್ಟು ಅಗಲವಿರುವ ಶಿಸ್ಟ್ ಶಿಲಾವಲಯವು ವಿಸ್ತರಿಸಿದೆ. ಮೇಲೆ ಹೇಳಿದ ಶಿಲಾ ಸಮುದಾಯಗಳು ಯಾವ ದೇಶದಲ್ಲೆ ಇರಲಿ, ಅವನ್ನು ಬೇರೆ, ಬೇರೆ ಹೆಸರಿನಿಂದ ಕರೆದಾಗ್ಯೂ, ಅವುಗಳ ವಯಸ್ಸು, ಉತ್ಪತ್ತಿಯಾದ ರೀತಿ, ಅವುಗಳ ರಚನೆ, ವಿನ್ಯಾಸ ಮತ್ತು ಅವುಗಳಲ್ಲಿಯ ಖನಿಜಾಂಶಗಳೆಲ್ಲವೂ ಒಂದೇ ತೆರನಾಗಿವೆ. ಆದುದರಿಂದ ಭೂವಿಜ್ಞಾನಿಗಳು ಭೂಗೋಳದ ವಿವಿಧ ಭಾಗಗಳ ಶಿಲೆಗಳನ್ನೆ ಅಲ್ಲದೆ, ಸಾಗರಗಳ ತಳಭಾಗದ ಶಿಲೆಗಳನ್ನೂ ಒಂದರೊಡನೊಂದು ಹೋಲಿಸಿ, ಅವುಗಳ ಸಾಮ್ಯತೆ ಮತ್ತು ವ್ಯತ್ಯಾಸಗಳನ್ನು ಪಟ್ಟಿ ಮಾಡಿರುತ್ತಾರೆ. ಇದರಿಂದಾಗಿ ನಾವು ಒಂದು ಪ್ರದೇಶದ ಶಿಲೆಗಳನ್ನು ಮತ್ತೊಂದು ಪ್ರದೇಶದ ಶಿಲೆಗಳೊಡನೆ ಸರಿದೂಗಿಸಬಹುದಾಗಿದೆ. ಇಂತಹ ಅಧ್ಯಯನದಿಂದ ಭೂವಿಜ್ಞಾನಿಗಳು ಪ್ರಪಂಚದ ವಿವಿಧ ಶಿಲೆಗಳ ಹೋಲಿಕೆ ವ್ಯತ್ಯಾಸಗಳ ಮತ್ತು ನಿಖರ ವಯಸ್ಸಿನ ಭೂಕಾಲ ಕೋಷ್ಟಕ ಯಾದಿಯನ್ನು ಸಿದ್ಧಪಡಿಸಿದ್ದಾರೆ. ಚಿಕ್ಕನಾಯ್ಕನಹಳ್ಳಿ ಶಿಸ್ಟ್ ಶಿಲೆಗಳನ್ನು ಪ್ರಪಂಚದ ಇತರ ಭಾಗಗಳಲ್ಲೂ ಕಾಣುವೆವು. ಉದಾಹರಣೆಗೆ ಉತ್ತರ ಅಮೆರಿಕದ ಸುಪೀರಿಯರ್ ಸರೋವರದ ಸುತ್ತಲೂ ಇರುವ ಶಿಸ್ಟ್ ವಲಯದಲ್ಲೂ ಇಂತಹ ಶಿಲೆಗಳೇ ಇವೆ : ಅಲ್ಲಿ ಅವನ್ನು ಅನಿಮಿಕಿ ಎಂದು ಕರೆಯುತ್ತಾರೆ. ದಕ್ಷಿಣ ಆಫ್ರಿಕಾದಲ್ಲೂ ಸಹ ಚಿಕ್ಕನಾಯ್ಕನಹಳ್ಳಿಯಲ್ಲಿರುವಂಥ ಶಿಲೆಗಳಿವೆ : ಅವನ್ನು ಟ್ರಾನ್ಸ್‌ವಾಲ್ ಶಿಲಾವರ್ಗ ಎಂದು ಕರೆಯುತ್ತಾರೆ. ಪಶ್ಚಿಮ ಆಸ್ಟ್ರೇಲಿಯದ ಈ ತೆರನಾದ ಶಿಲೆಗಳನ್ನು ಹೈಮರ್‌ಲೇ ಎಂದು ಹೆಸರಿಸಿದ್ದಾರೆ. ಮೇಲೆ ಹೇಳಿದ ಎಲ್ಲ ಶಿಲಾವರ್ಗಗಳಲ್ಲೂ ಕಬ್ಬಿಣ, ಮ್ಯಾಂಗನೀಸ್, ಚಿನ್ನ, ಸುಣ್ಣದಕಲ್ಲು, ಜೇಡಿ, ಕಾವಿಮಣ್ಣು, ಬೆಣಚು ಇತ್ಯಾದಿಗಳು ಇದ್ದೇ ಇರುತ್ತವೆ.

ಇತ್ತೀಚಿನ ವರ್ಷಗಳಲ್ಲಿ ಭೂವಿಜ್ಞಾನಿಗಳು ಮೇಲೆ ಹೇಳಿದ ಶಿಲಾ ಸಮುದಾಯಗಳ ಉತ್ಪತ್ತಿ ಮತ್ತು ಅವುಗಳ ವಯೋನಿರ್ಣಯಗಳಲ್ಲಿ ಹೆಚ್ಚು ಆಸಕ್ತಿವಹಿಸಿ ಪ್ರಪಂಚಾದ್ಯಂತ ಇರುವ ಇಂಥ ಶಿಲೆಗಳ ಅಧ್ಯಯನವನ್ನು ಹಾಗೂ ಸಂಘಟಿತ ಸಂಶೋಧನೆಗಳನ್ನು ಕಳೆದ ಎರಡು ದಶಕಗಳಿಂದ ಮುಂದುವರಿಸುತ್ತಿದ್ದಾರೆ. ಇಂತಹ ಸಂಶೋಧನೆಗಳ ಫಲವಾಗಿ ಈ ಶಿಲೆಗಳ ಉತ್ಪತ್ತಿಯ ಬಗ್ಗೆ ನಿರ್ದಿಷ್ಟವಾದ ಅಭಿಪ್ರಾಯವನ್ನು ನೂರಾರು ಸಂಶೋಧನಾ ಪ್ರಬಂಧಗಳ ಮೂಲಕ ವ್ಯಕ್ತಪಡಿಸಿದ್ದಾರೆ. ಗ್ರೀನ್‌ಲ್ಯಾಂಡ್, ಕೆನಡ, ಸೈಬೀರಿಯ, ಮತ್ತು ಹಿಂದೆ ನಮೂದಿಸಿರುವ ಉ. ಅಮೆರಿಕ, ದ. ಅಮೆರಿಕ, ಆಫ್ರಿಕ, ಆಸ್ಟ್ರೇಲಿಯ ಮತ್ತು ದಕ್ಷಿಣ ಇಂಡಿಯಾಗಳಲ್ಲಿ ನಡೆಸಿರುವ ಸಂಶೋಧನೆಗಳು ಈ ಶಿಲೆಗಳ ಬಗ್ಗೆ ಹೆಚ್ಚು ಮಾಹಿತಿ ಸಂಗ್ರಹಿಸಿ, ಅವುಗಳ ಉತ್ಪತ್ತಿಯ ಬಗ್ಗೆ ಸಹ ಬೆಳಕು ಚೆಲ್ಲಿವೆ.

ಹೊಸ ತಿಳಿವಿನ ಬೆಳಕಿನಲ್ಲಿ ಚಿಕ್ಕನಾಯ್ಕನಹಳ್ಳಿ ಶಿಲೆಗಳ ಭೂ ಇತಿಹಾಸ ಮತ್ತಷ್ಟು ಕುತೂಹಲಕಾರಿಯಾಗಿದೆ. ಇವನ್ನು, ಇದೀಗ "ಚಿಕ್ಕನಾಯ್ಕನಹಳ್ಳಿ ಹಸಿರುಕಲ್ಲು ಪಟ್ಟಿತ ವಲಯ" ಎಂದು ಕರೆಯಬೇಕಾಗಿದೆ. ಕಾರಣ ಗ್ರೀನ್‌ಲ್ಯಾಂಡಿನ ಅಮಿಟ್ಸಾಕ್ಸ್, ಆಫ್ರಿಕಾದ ಬಾರ್ಬರ್‌ಟನ್, ಆಸ್ಟ್ರೇಲಿಯಾದ ಪಿಲ್ಬಾರ, ಅಮೆರಿಕಾದ ಅನಿಮಿಕಿಗಳಂತೆಯೆ ಇರುವ, ತದ್ರೂಪುಶಿಲೆಗಳು ಈ ಹಳ್ಳಿಯವು. ಭಾರತದಲ್ಲಿ ಇವನ್ನು ಸಗೂರು ಮತ್ತು ಧಾರ್ವಾಡ ಶಿಲಾಸ್ತೋಮವೆಂದು ಕರೆಯುವೆವು. ಇವುಗಳಲ್ಲಿ ಅತ್ಯಂತ ಹಳೆಯ ಶಿಲೆಗಳು ಅಂದರೆ ೨70 ಕೋಟಿ ವರ್ಷಗಳಷ್ಟು ಹಳೆಯ ಶಿಲೆಗಳಿವೆ. ಇವುಗಳ ಉತ್ಪತ್ತಿಯ ಹಂತ ಹೀಗಿದೆ ; ಗದಗ್‌ನಿಂದ ಚಿಕ್ಕನಾಯ್ಕನಹಳ್ಳಿಯ ದಕ್ಷಿಣಕ್ಕೆ ಹತ್ತಿರತ್ತಿರ ಮೈಸೂರಿನ ಕರೀಘಟ್ಟದ (ಶ್ರೀರಂಗಪಟ್ಟಣ) ವರೆಗೆ ಸುಮಾರು 400 ಮೈಲಿ ಉದ್ದವಿರುವ ಭೂಭಾಗವು 350 ಕೋಟಿ ವರ್ಷಗಳ ಹಿಂದೆ ವಿಸ್ತಾರವಾದ, ಆಳವಾದ ಸಮುದ್ರವಿತ್ತು. ಎಂದರೆ ಚಿಕ್ಕನಾಯ್ಕನ ಹಳ್ಳಿಯು ಆರ್ಷೇಯ ಕಾಲದಲ್ಲಿ ಸಮುದ್ರದ ತಳವಾಗಿತ್ತು. ಅಂತಹ ಸಮುದ್ರಕ್ಕೆ, ಈಗ ಕಾಣುವ ಶಿಲೆಗಳ ಮಡ್ಡಿಯು, ರಾಳು, ಮಣ್ಣು, ಮರಳು ಮತ್ತು ಗಸಿಯಾಗಿ ಹತ್ತಾರು ಮೈಲಿ ಆಳದ ಸಮುದ್ರ ತಳದಲ್ಲಿ ಸಂಚಯನವಾಗುತ್ತಾ ಬಂದಿತು. ಇಂತಹ ಮೈಲುಗಟ್ಟಲೆ ಮಂದದ ಮಡ್ಡಿಯು ಗಟ್ಟಿಸಿಕೊಳ್ಳುತ್ತಾಬಂದಿತು. ಸಮುದ್ರ ತಳದಲ್ಲಾದ ಅಲ್ಲೋಲ ಕಲ್ಲೋಲಗಳು, ಅಗ್ನಿಪರ್ವತದ ಸಿಡಿತಗಳು. ಶಿಲಾಪಾಕದ ಅಂತಸ್ಸರಣ ಮತ್ತು ಬಹಿಸ್ಸರಣಗಳಿಂದ ಗ್ರಾನೈಟ್ ಕಣಶಿಲೆ ಮತ್ತು ಡಾಲರೈಟ್ ಕರಿಕಲ್ಲುಗಳಾದುವು. ಸಂಚನಗೊಂಡಿದ್ದ ಮಡ್ಡಿಯ ಭಾರವು ತಳದಲ್ಲಿದ್ದ ಪದರಗಳನ್ನು ಗಟ್ಟಿಸಿ ಶಿಲೆಯಾಗುವಂತೆ ಮಾಡಿದವು. ಅವು ಶಾಖ, ಒತ್ತಡಗಳಿಗೆ ಓಗೊಟ್ಟು ಮಡಿಸಿಕೊಂಡವು. ಇವು ಸಾಗರತಳದ ಮಹಾ ಕಂದರಗಳಿಂದ ಮೇಲೊತ್ತಲ್ಪಟ್ಟವು. ಇವೇ ಬೆಟ್ಟಗುಡ್ಡಗಳಾದುವು. ವಿದ್ವಾಂಸರು ಈ ಪ್ರದೇಶದ ಶಿಲೆಗಳನ್ನು ಕುರಿತು ಉತ್ತಮ ಪ್ರಬಂಧಗಳನ್ನು ರಚಿಸಿ ಡಾಕ್ಟರೇಟ್ ಪದವಿಗಳನ್ನು ಪಡೆದಿದ್ದಾರೆ. ಚಿಕ್ಕನಾಯ್ಕನಹಳ್ಳಿಯು ಇಡೀ ತುಮಕೂರು ಜಿಲ್ಲೆಯ 'ಖನಿಜದ ಕಣಜ'ವಾಗಿದೆ. ಅವುಗಳ ಆಧಾರದ ಮೇಲೆ ಇಲ್ಲಿ ಹಲವಾರು ಕೈಗಾರಿಕೆಗಳನ್ನು ಸ್ಥಾಪಿಸಬಹುದಾಗಿದೆ.

ಕೋಲಾರ ಮತ್ತು ಹಟ್ಟಿಚಿನ್ನದ ಗಣಿಗಳನ್ನು ಬಿಟ್ಟರೆ, ಅತ್ಯಂತ ಪುರಾತನ ಚಿನ್ನದ ಗಣಿಗಳು ಚಿಕ್ಕನಾಯ್ಕನಹಳ್ಳಿಯಲ್ಲಿವೆ. ಸುಮಾರು 2000 ವರ್ಷಗಳಷ್ಟು ಹಳೆಯ ಗಣಿಗಳು. ಈ ಹಳ್ಳಿಯ ಸಮೀಪಕ್ಕೆ ಪೂರ್ವಭಾಗದಲ್ಲಿ ಹೊಸ್ನಬಾಗಿ ಮತ್ತು ಪಶ್ಚಿಮಕ್ಕಿರುವ ಬೆಳ್ಳಾರ ಗಣಿಗಳಲ್ಲಿ ಈವೊತ್ತಿಗೆ 26 ವರ್ಷಗಳ ಹಿಂದೆ ಗಣಿಕಾರ್ಯವನ್ನು ನಿಲ್ಲಿಸಿದರಾದರೂ, 1902 ರಿಂದ 1905 ರವರೆಗೆ ಇಂಡಿಯನ್ ಮೈನ್ಸ್ ಸಿಂಡಿಕೇಟು. ಹಾಗೂ ಅನಂತರ ಕರ್ನಾಟಕ ಭೂವಿಜ್ಞಾನ ಇಲಾಖೆ 1944 ರಿಂದ 1954 ರವರೆಗೆ ಈ ಪ್ರದೇಶಗಳಲ್ಲಿ ಗಣೀ ಕಾರ್ಯಾಚರಣೆ ನಡೆಸಿ ಲಕ್ಷಾಂತರ ರೂಪಾಯಿಗಳ ಮೌಲ್ಯದ ಚಿನ್ನವನ್ನು ಮೇಲೆ ಹೇಳಿದ ವರ್ಷಗಳಲ್ಲಿ ಪಡೆದರು. ಆದರೆ 1954

ರಿಂದೀಚೆಗೆ ಬೆಳ್ಳಾರ ಗಣಿಯಲ್ಲಿ ಆಳವು ಹೆಚ್ಚಿದಂತೆಲ್ಲ ಚಿನ್ನದ ಅಂಶವು ಕಡಿಮೆಯಾಗುತ್ತಾ ಬಂದಿತ್ತಾದ್ದರಿಂದ ಗಣೀಕಾರ್ಯವನ್ನು ಸಂಪೂರ್ಣವಾಗಿ ನಿಲ್ಲಿಸಿದರು. ಆದರೆ ಈಗ ನಮ್ಮಲ್ಲಿರುವ ಉನ್ನತ ತಾಂತ್ರಿಕ ನೆರವಿನಿಂದ ಹಾಗೂ ಪ್ರಸ್ತುತವಾಗಿ ಚಿನ್ನದ ಬೆಲೆಯು ಏರಿರುವುದರಿಂದ, ಇಲ್ಲಿ ಮತ್ತೆ ಗಣೀಕಾರ್ಯವನ್ನು ಆರಂಭಿಸಬಹುದಾಗಿದೆ.

ಕಬ್ಬಿಣದ ಅದುರು ಮುಖ್ಯವಾಗಿ ಹಿಮಟೈಟ್ (ಕೆಮ್ಮಣ್ಣು) ಲಿಮೋನೈಟ್ (ಹಳದಿ ಬಣ್ಣದ ಕಬ್ಬಿದಾಹೈಡ್ರಾಕ್ಸೈಡು) ಮತ್ತು ಲ್ಯಾಟರೈಟ್ (ಜಂಬಿಟ್ಟಿಗೆ) ಜಾತಿಗೆ ಸೇರಿದ ಮೂರು ವಿಧದ ಅದುರುಗಳಾಗಿ ದೊರೆಯುತ್ತವೆ. ಚಿಕ್ಕನಾಯ್ಕನ ಹಳ್ಳಿಯು ಕಬ್ಬಿಣ ಮತ್ತು ಮ್ಯಾಂಗನೀಸ್ ಅದುರುಗಳಿಗೆ ಪ್ರಖ್ಯಾತವಾಗಿದೆ. ಕಾರಣ ಉತ್ತಮವಾದ ಉಕ್ಕುತಯಾರಿಕೆಗೆ ಬೇಕಾದ ಅದುರಿನಲ್ಲಿ ಯಾವ ಕಲ್ಮಶವೂ ಇರಬಾರದು. ಅದರಲ್ಲಿ ಫಾಸ್ಫರಸ್ ಅಂಶವೇನಾದರೂ ಇದ್ದಲ್ಲಿ ಅಂತಹ ಕಬ್ಬಿಣ ಮತ್ತು ಮ್ಯಾಂಗನೀಸ್ ಅದುರಗಳಿಂದಾದ ಉಕ್ಕು, ಹೆಚ್ಚು ಕಾಠಿಣ್ಯತೆ ಮತ್ತು ಹೆಚ್ಚು ಭಾರವನ್ನೆ ಆಗಲಿ ತಡೆಯಲಾರದು. ಬದಲಾಗಿ ಸ್ವಲ್ಪ ಒತ್ತಡದಲ್ಲಿಯೇ ಪುಡಿಪುಡಿಯಾಗುವುದು. ಈ ಹಳ್ಳಿಯ ಅದುರುಗಳಲ್ಲಿ ಉತ್ತಮ ಕಬ್ಬಿಣಾಂಶವಿದೆ. ಅಂದರೆ 55 ರಿಂದ 62%ಗೂ ಮೀರಿದ್ದು. ಕೆಮ್ಮಣ್ಣಿನಂತಹ ಹಿಮೋಟೈಟ್ ಅದುರು ಹೆಚ್ಚು ಕಬ್ಬಿಣಾಂಶ ಹೊಂದಿದ ಉತ್ತಮ ಅದುರು. ಇದು ಮುಖ್ಯವಾಗಿ ಕಾರೈಕುರ್ಚಿ, ಮತ್ತು ಜಾನೇಹಾರ್ ಸಮೀಪದಲ್ಲಿ ದೊರೆಯುತ್ತದೆ. ಮೂರು ಸಮಾನಾಂತರವಾಗಿರುವ ಬೆಟ್ಟದ ಸಾಲುಗಳಗಳಲ್ಲೂ ಕಬ್ಬಿಣ ಮತ್ತು ಮ್ಯಾಂಗನೀಸ್ ದೊರೆಯುತ್ತದೆ. ಈ ಬೆಟ್ಟಗಳ ತಪ್ಪಲು ಪ್ರದೇಶ ಹಾಗೂ ಅವುಗಳ ಮೈಗೆ ಅಂಟಿಕೊಂಡಂತಿರುವ ಇಳಿಜಾರು ಪ್ರದೇಶಗಳಲ್ಲಿ ಲಿಮೋನೈಟ್ ಮತ್ತು ಲ್ಯಾಟರೈಟ್ ಜಾತಿಯ ಕಬ್ಬಿಣದ ಅದುರು ದೊರೆಯುತ್ತವೆ. ಇವು ಅಷ್ಟೇನು ಉತ್ಕೃಷ್ಟವಾದ ಅದುರುಗಳಲ್ಲ. ಮೇಲೆ ಹೇಳಿದ ಅದುರುರುಗಳು ಮಳೆ ಗಾಳಿಯಲ್ಲಿ ತೊಂದು ಸವೆದು ನುಣ್ಣನೆಯ ಮಣ್ಣಾಗಿ ಮಾರ್ಪಾಡಾಗುತ್ತವೆ. ಇವೇ ಬಣ್ಣದ ಮಣ್ಣುಗಳು. ಇಲ್ಲಿಯ ಕಬ್ಬಿಣ ಮತ್ತು ಮ್ಯಾಂಗನೀಸ್ ಅದುರನ್ನು ಬೇರೆ ದೇಶಗಳಿಗೂ ಹಾಗೂ ದೇಶದ ಹಲವಾರು ಉಕ್ಕಿನ ಕಾರ್ಖಾನೆಗಳಿಗೆ ರವಾನಿಸುತ್ತಿದ್ದಾರೆ. ಚಿಕ್ಕನಾಯ್ಕನ ಹಳ್ಳಿಯ ಕಬ್ಬಿಣ ಮತ್ತು ಮ್ಯಾಂಗನೀಸ್ ಅದುರು ಭದ್ರಾವತಿಯ ಉಕ್ಕಿನ ಕಾರ್ಖಾನೆಗೆ, ಟಾಟಾ ಸಂಸ್ಥೆಗಳಿಗೆ, ಬೆಂಗಳೂರು ಮತ್ತು ಮೈಸೂರುಗಳಲ್ಲಿರುವ ಮಧ್ಯಮ ಇಲ್ಲವೆ ಸಣ್ಣ ಉಕ್ಕಿನ ಕುಲುಮೆಗಳಿಗೂ ಸರಬರಾಜಾಗುತ್ತದೆ. ಇದು ಉತ್ತಮ ಗುಣಮಟ್ಟದ ಅದುರಾಗಿರುದರಿಂದ ಜಪಾನ್ ಹಾಗೂ ಹಲವಾರು ವಿದೇಶೀ ಸಂಸ್ಥೆಗಳಿಂದ ಇದಕ್ಕೆ ಹೆಚ್ಚು ಬೇಡಿಕೆ ಇದ್ದೇ ಇದೆ. ಇಂತಹ ಅದುರುಗಳ ರವಾನೆಯಿಂದ ಹೆಚ್ಚು ವಿದೇಶಿ ವಿನಿಮಯ ಹಣವು ದೊರೆಯುತ್ತಿದೆ.

ಮ್ಯಾಂಗನೀಸ್ ಅದುರು ಕಬ್ಬಿಣದಂತೆಯೇ ಬಹಳ ಉಪಯುಕ್ತವಾದುದು. ಇದರ ಉಪಯೋಗವನ್ನು ನಮ್ಮ ದಿನ ನಿತ್ಯದ ಹಲವಾರು ವಸ್ತುಗಳಲ್ಲಿ ಕಾಣುವೆವು.

ಟಾರ್ಚಿನ ಬ್ಯಾಟರಿ ಸೆಲ್‌ನಿಂದ ಹಿಡಿದು ಹಲವು ಬಣ್ಣ ಮತ್ತು ರಾಸಾಯನಿಕ ವಸ್ತುಗಳ ತಯಾರಿಕೆಯಲ್ಲಿ, ಇದು ಉಪಯುಕ್ತ. ಕಬ್ಬಿಣಕ್ಕೆ ಉಕ್ಕಿನಂತಹ ಶಕ್ತಿಯನ್ನು ಕೊಡಬಲ್ಲ ಧಾತುವೆಂದರೆ ಮ್ಯಾಂಗನೀಸ್. ತುಕ್ಕು ಹಿಡಿಯುವ ಸ್ಟೈನ್‌ಲೆಸ್ ಸ್ಟೀಲ್‌ಗೂ ಮ್ಯಾಂಗನೀಸ್ ಬೇಕು. ಮ್ಯಾಂಗನೀಸ್ ಅದುರು ಪಿಲ್ಲೈಟ್, ಚೆರ್ಟ್ ಮತ್ತು ಲ್ಯಾಟರೈಟ್ ವಿಧಗಳಾಗಿ ದೊರೆಯುತ್ತದೆ. ಚಿಕ್ಕನಾಯ್ಕನಹಳ್ಳಿಯಲ್ಲಿ ಈ ಅದುರು ಕಾರೈಕುರ್ಚಿ, ಜಾನೇಹಾರ್, ಹೊನ್ನೆಬಾಗಿ, ನರಸೀಹಳ್ಳಿ, ಸೊಂದೇನಹಳ್ಳಿ ಮತ್ತು ಕುದುರೆಕಣಿವೆಯ ಅರಣ್ಯ ಪ್ರದೇಶದ ವಜ್ರಗಣಿಗಳಲ್ಲಿ ಹೇರಳವಾಗಿ ದೊರೆಯುತ್ತದೆ. ಇಲ್ಲಿಯ ಉತ್ಕೃಷ್ಟವಾದ ಅದುರಿನಲ್ಲಿ 45%ಗಿಂತಲೂ ಹೆಚ್ಚು ಮ್ಯಾಂಗನೀಸ್ ಇರುತ್ತದೆ. ಇದರ ಬೆಲೆಯೂ ಅಧಿಕ. ಕನಿಷ್ಠವಾದ ಅದುರೆಂದರೆ 25% ಮ್ಯಾಂಗನೀಸ್ ಉಳ್ಳದ್ದು. ಹಗಲಿರುಳೆನ್ನದೆ ಕೆಲವು ಗಣಿಗಳಿಂದ, ಗಣಿಕಾರ್ಯವು ಪೂರ್ಣಪ್ರಮಾಣದಲ್ಲಿ ನಡೆದುದರಿಂದ ಅವನ್ನು ಮುಚ್ಚುವ ಸ್ಥಿತಿ ಬಂದಿದೆ. ಮೂವತ್ತು ವರ್ಷಗಳ ಹಿಂದಿನಿಂದಲೂ ಲಕ್ಷಾಂತರ ಹಾಗೂ ಕೋಟ್ಯಂತರ ಟನ್ ಮ್ಯಾಂಗನೀಸ್ ಅದುರನ್ನು ಸಾಗಿಸಿರುವುದರಿಂದ, ಇದೀಗ ಅದು ಕೆಲವೇ ಸಹಸ್ರ ಟನ್‌ಗಳಷ್ಟಿದೆ. ಕುದುರೆ ಕಣಿವೆಯ ವನ್ಯ ಪ್ರದೇಶದಲ್ಲಿನ ವಜ್ರಗಣಿಗಳಲ್ಲಿ 45% ಹೆಚ್ಚು ಮ್ಯಾಂಗನೀಸ್ ಅದುರನ್ನು ತೆಗೆದು ನಮ್ಮ ದೇಶದ ಹಲವಾರು ಉಕ್ಕಿನ ಕಾರ್ಖಾನೆಗಳಿಗೆ ಹಾಗೂ ವಿದೇಶಗಳಿಗೂ ರವಾನಿಸಿದ್ದರಿಂದ ಸರ್ಕಾರದ ಬೊಕ್ಕಸಕ್ಕೆ ಲಕ್ಷಾಂತರ ರೂಪಾಯಿಗಳಷ್ಟು ಲಾಭವಿದೆ.

ಸುಣ್ಣದ ಕಲ್ಲಿನಲ್ಲಿ ಎರಡು ವಿಧ. ಒಂದು ಸಿಮೆಂಟ್ ತಯಾರಿಕೆ ಬೇಕಾಗುವ ಮೂಲ ವಸ್ತು, ಮತ್ತೊಂದು ಗೋಡೆಹಚ್ಚುವ, ಗಾರೆಗೆ ಹಾಕುವ, ಅಡಿಕೆ ಎಲೆಗೆ ಹಾಕಿಕೊಳ್ಳುವ, ಔಷಧಗಳಿಗೆ, ಬಣ್ಣ ಮತ್ತು ರಾಸಾಯನಿಕ ವಸ್ತುಗಳಿಗೆ ಬೇಕಾಗುವ ಸುಣ್ಣ. ಬಟ್ಟೆ ಮತ್ತು ಕಾಗದಗಳಿಗೆ ಹೊಳಪು ಮತ್ತು ಬಿಳುಪು ಕೊಡಲು ಸುಣ್ಣ ಬಹಳ ಉಪಯುಕ್ತ. ಗಾಜಿನ ತಯಾರಿಕೆಗೆ ಸುಣ್ಣ ಬೇಕು. ಚಿಕ್ಕನಾಯ್ಕನಹಳ್ಳಿಯಲ್ಲಿ ಈ ಎರಡೂ ವಿಧದ ಸುಣ್ಣದಕಲ್ಲಿನ ನಿಕ್ಷೇಪಗಳು ಹೇರಳವಾಗಿವೆ. ಈ ಹಳ್ಳಿಗೆ ಪೂರ್ವದಲ್ಲಿರುವ ದೊಡ್ಡಗುಣಿ ಸಮೀಪದಲ್ಲಿ ಉತ್ಕೃಷ್ಟವಾದ ಸುಣ್ಣದ ಕಲ್ಲು ದೊರೆಯುತ್ತದೆ. ಕುದುರೆಕಣಿವೆ, ಮೇಲಣಹಳ್ಳಿಯ ದಕ್ಷಿಣ ಭಾಗಕ್ಕೆ ಲಕ್ಷಾಂತರ ಟನ್ ಒಳ್ಳೆಯ ದರ್ಜೆಯ ಸಿಮೆಂಟ್ ಸುಣ್ಣದ ಕಲ್ಲು ದೊರೆಯುತ್ತದೆ. ಈ ಸುಣ್ಣದ ಕಲ್ಲಿನಲ್ಲಿ (Cao) ಕ್ಯಾಲ್ಸಿಯಂ ಆಕ್ಸೈಡ್ ಅಂಶವು 46% ರಿಂದ 56% ರವರೆಗೆ ಇರುತ್ತದೆ. ಇಂತಹ ಸುಣ್ಣಶಿಲೆಯನ್ನು ಅಮ್ಮಸಂದ್ರ ಸಿಮೆಂಟ್ ಕಾರ್ಖಾನೆಗೆ ಸರಬರಾಜು ಮಾಡುತ್ತಿದ್ದಾರೆ. ಮತ್ತೊಂದು ವಿಧದ ಸುಣ್ಣಕಲ್ಲೆಂದರೆ ''ಕಂಕರ್'' ಇದನ್ನು ಇದ್ದಲಿನೊಡನೆ ಸುಟ್ಟು ಗೋಡೆಗೆ ಹಚ್ಚುವ ಸುಣ್ಣ, ಗಾರೆಸುಣ್ಣ, ಔಷಧಿಸುಣ್ಣ ಇತ್ಯಾದಿಗಳನ್ನು ಪಡೆಯಬಹುದು. ಚಿಕ್ಕನಾಯ್ಕನಹಳ್ಳಿ ಹಸಿರುಕಲ್ಲು ವಲಯದಲ್ಲಿ ದೊರೆಯುವ ವಿವಿಧ ಶಿಲೆಗಳಾದ ಕ್ಲೋರೈಟ್ ಶಿಲೆ, ಆಂಫಿಬೋಲೈಟ್‌ಶಿಲೆಗಳು ಸಗ್ನೀಕರಣ ಹೊಂದಿ,

ಗಾಳಿ ಮಳೆ ಬಿಸಿಲಿನಿಂದ ರಾಸಾಯನಿಕ ಬದಲಾವಣೆ ಹೊಂದಿ ಗಂಟು ಗಂಟಾಗಿ ಉಳಿದು ಕೊಳ್ಳುವುದೆ 'ಕಂಕರ್', ಉಜ್ವಲ ಬಿಳುಪನ್ನು ಕೊಡುವ 'ಹುಳಿಯಾರ್ ಸುಣ್ಣ' ಬಹಳ ಪ್ರಸಿದ್ಧವಾದುದು.

ಕಟ್ಟಡಗಳಿಗೆ ಉಪಯೋಗಿಸುವ ಅಗ್ನಿಶಿಲೆಗಳಾದ ಗ್ರಾನೈಟ್ (ಕಣಶಿಲೆ), ಡಾಲ ರೈಟ್ (ಕರಿಕಲ್ಲು) ಶಿಲೆಗಳು ಈ ಹಳ್ಳಿಯಲ್ಲಿ ಹೇರಳವಾಗಿವೆ. ಈ ಶಿಲೆಗಳು ಗೃಹ ನಿರ್ಮಾಣ ; ಸೇತುವೆ ಮತ್ತು ರಸ್ತೆಯ ಜೆಲ್ಲಿಕಲ್ಲಿಗೂ ಉತ್ತಮವಾದವು. ಹಳೆಯ ಕೋಟೆಯಲ್ಲಿ ಕಾಣುವ ಹಿರಿದಾದ ಗ್ರಾನೈಟ್ ಕಣಶಿಲೆಯ ಬಂಡೆಗಳನ್ನು ಸಮೀಪದ ಹೊನ್ನೆಬಾಗಿ. ಯಳನೊಡು ಇವೇ ಮುಂತಾದ ಸ್ಥಳಗಳಿಂದ ಒಡೆದು ಸಾಗಿಸಿರಬಹುದು. ಅಸಿಪಾಯಕ್ಕೆ ಉಪಯೋಗಿಸುವ ಸೈಜುಕಲ್ಲುಗಳಿಗೆ ಕಣ ಶಿಲೆಗಳು ಅತ್ಯುತ್ತಮ. ಇದೂ ಅಲ್ಲದೆ, ಈ ಶಿಲೆಗಳು ಉತ್ತಮವಾದ ನಯ ಮತ್ತು ಹೊಳಪನ್ನು ಹೊಂದುವುದರಿಂದ ವಿದೇಶಗಳಲ್ಲಿ ಇದಕ್ಕೆ ಹೆಚ್ಚು ಬೇಡಿಕೆ ಇದೆ. ಇಂತಹ ಒಂದು ಮೀಟರು ಸಲೆಯುಳ್ಳ ಒಂದು ಸೈಜುಕಲ್ಲಿಗೆ ವಿದೇಶಗಳಲ್ಲಿ 2000 ರಿಂದ 3000 ರೂಪಾಯಿಗಳಾಗಬಹುದು. ಡಾಲರೈಟ್ ಶಿಲೆ ಮುಖ್ಯವಾಗಿ ಒಡ್ಡು ಅಥವಾ ಗುಂಡು ಬಂಡೆಗಳಂತೆ ಕಾಣಬರುತ್ತವೆ. ಇಂತಹ ಒಡ್ಡುಗಳು ಭೂಮಿಯ ಬಹು ಆಳದಿಂದ ಅಂದರೆ 30 ಅಥವಾ 40 ಕಿಲೋ ಮೀಟರ್ ಆಳದಿಂದಲೂ ಮೇಲಕ್ಕೆ ಗೋಡೆಗಳಂತೆ ಬಂದಿರುತ್ತವೆ. ಮೇಲೆ ಹೇಳಿದ ಕಣಶಿಲೆಯು ಶಿಥಿಲೀಕರಣ ಹೊಂದಿ ನೊರಜು ಕೆಂಪು ಮಣ್ಣಾಗುತ್ತದೆ. ಡಾಲರೈಟ್ ನಿಂದ ಬಂದದ್ದೇ ಕಪ್ಪು ಎರೆಮಣ್ಣು. ಪಟ್ಟಿಶಿಲೆಗಳು (ನ್ಶ್ಯೆಸ್) ಗೃಹನಿರ್ಮಾಣಕ್ಕೆ ಒಳ್ಳೆಯ ಶಿಲೆಗಳು. ಇವುಗಳ ಸವೆತದಿಂದ ಕೆಂಪು ಮಿಶ್ರಿತ ಕಂದು ಬಣ್ಣದ ಮಣ್ಣು ಉತ್ಪತ್ತಿಯಾಗುತ್ತದೆ.

ಚಿಕ್ಕನಾಯ್ಕನಹಳ್ಳಿಯ ಸುತ್ತ ಮುತ್ತ ಹರಿಯುವ ತೊರೆಗಳಲ್ಲಿ ಮರಳು ಯಥೇಚ್ಛವಾಗಿ ದೊರೆಯುತ್ತದೆ. ಈ ಮರಳು ಉತ್ಪತ್ತಿಯಾಗಲು ಕಾರಣ ಶಿಸ್ಟ್ ಶಿಲೆಗಳ, ಗ್ರಾನೈಟ್ ಕಣಶಿಲೆಯ, ಬೆಣಚು ಸಿರಗಳ ಹಾಗೂ ಪಿಗ್ಮಟೈಟ್ ಎಂಬ ಶಿಲೆ ಗಳು ರಾಸಾಯನಿಕ ಕ್ರಿಯೆಗಳಿಂದ, ಮಳೆ, ಗಾಳಿ, ಬಿಸಿಲುಗಳಲ್ಲಿ ಜರ್ಝರಿತವಾಗಿ ಸವೆದು ಶಿಥಿಲೀಕರಣ ಹೊಂದಿ ಆ ಶಿಲೆಗಳಲ್ಲಿನ ಇತರ ಖನಿಜಗಳು ಮಣ್ಣಾಗಿ ಹೋಗಿ, ಕೊನೆಯಲ್ಲಿ ಶೇಷವಾಗಿ ಉಳಿಯುವ ವಸ್ತುವೇ ಆಗಿದೆ. : ಅಂದರೆ ಬೆಣಚು ಕಣಗಳು. ಈ ಮರಳನ್ನು ಸ್ಥಳೀಯವಾಗಿ 'ಬೆಳ್ಳಿಮರಳು' ಎಂದೇ ಕರೆಯುತ್ತಾರೆ. ಸಾಮಾನ್ಯ ವಾಗಿ ಮರಳಿನಲ್ಲಿರಬಹುದಾದ ಕಬ್ಬಿಣ, ಮ್ಯಾಂಗನೀಸ್, ಪೊಟ್ಯಾಸಿಯಂ, ಹಾಗೂ ಸೋಡಿಯಂಗಳು ದೂರದ ಸಾಗಾಣಿಕೆಯಲ್ಲಿ ಕರಗಿ ಮತ್ತು ತೊರೆಯ ನೀರಿನಲ್ಲಿ ಬಹು ದೂರ ಜಾಲಾಡಿಕೊಂಡು ಬರುವುದರಿಂದ ಅವುಗಳನ್ನೆಲ್ಲಾ ಕಳೆದುಕೊಂಡು, ಶುಭ್ರ ವಾದ ಬೆಣಚು ಮರಳು ದೊರೆಯುತ್ತದೆ. ಇಂತಹ ಮರಳನ್ನು ಕಾಯಿಸಿ ಕರಗಿಸಿದರೆ ಪಾರದರ್ಶಕವಾದ ಗಾಜು ದೊರೆಯುವುದು. ಆದ್ದರಿಂದ ಇದನ್ನು ಬರಿಯ ಗೃಹ

ನಿರ್ಮಾಣಕ್ಕೆಂದೇ ವ್ಯಯ ಮಾಡುವುದಕ್ಕಿಂತ ಗಾಜು ತಯಾರಿಕೆಗೆ ಬಳಸುವುದು ಉತ್ತಮ.

ನಾಲ್ಕಾರು ವಿಧದ ಹಾಗೂ ಬಣ್ಣಗಳ ಮಣ್ಣು ಚಿಕ್ಕನಾಯಕನಹಳ್ಳಿಯಲ್ಲಿ ಸಿಗುತ್ತವೆ. ಈ ಮೊದಲೇ ವಿವರಿಸಿರುವಂತೆ ಶಿಲೆಯು ಶಿಥಿಲೀಕರಣ ಹೊಂದಿ ಅದೇ ಕಾಲಾನು ಕ್ರಮದಲ್ಲಿ ಮಣ್ಣಾಗುತ್ತದೆ. ಇದಕ್ಕೆ ಒಳ್ಳೆಯ ಉಪಮೆ ಹಾಗೂ ನಾಣ್ಣುಡಿ ಎಂದರೆ ತಾಯಿಯಂತೆ ಮಗಳು, ನೂಲಿನಂತೆ ಸೀರೆ ಎಂಬುದು. ಇದನ್ನೇ ಭೂ ವಿಜ್ಞಾನಕ್ಕೆ ಅಳವಡಿಸಿದರೆ, "ಶಿಲೆಯಂತೆ ಮಣ್ಣು, ಮಣ್ಣಿನಂತೆ ಬೆಳೆ" ಎಂದು ಹೇಳ ಬಹುದು. ಗ್ರಾನೈಟ್ ಕಣಶಿಲೆ ಮತ್ತು ಗ್ನೈಸ್ ಪಟ್ಟಿಶಿಲೆಗಳಿಂದ ಕೆಂಪು ನೊರಜು ಮಣ್ಣು ಇಲ್ಲವೆ ಕಡು ಕಂದು ಊದಾ ಬಣ್ಣದ ಮಣ್ಣು ಉಂಟಾಗುವುದು. ಇಂತಹ ಮಣ್ಣು ತೆಂಗಿನ ಬೆಳೆಗೆ ಉತ್ಕೃಷ್ಟವಾದದ್ದು. ಕಾರಣ ಈ ಮಣ್ಣು ನೀರನ್ನು ಬೇಗ ಹೀರಿಕೊಂಡು ತನ್ನಲ್ಲಿರುವ ಕಬ್ಬಿಣ ಮ್ಯಾಂಗನೀಸ್ ಮತ್ತು ಪೊಟಾಸಿಯಂ ಅನ್ನು ಸಹಜ ರಸಗೊಬ್ಬರದ ದ್ರಾವಣ ರೂಪದಲ್ಲಿ ಆಳದಲ್ಲಿರುವ ತೆಂಗಿನ ಬೇರಿಗೆ ಉಣಿಸು ತ್ತದೆ. ಇದರ ಫಲ ಎಳನೀರಿನ ರುಚಿಯಲ್ಲೂ ಆಹ್ಲಾದತೆ ಮೂಡುತ್ತದೆ. ಸ್ವಲ್ಪ ಪ್ರಮಾಣದಲ್ಲಿ ದೊರೆಯುವ ಕರಿಮಣ್ಣು ಅಥವಾ ಎರೆಮಣ್ಣು ಉಂಟಾದದ್ದು ಡಾಲ ರೈಟ್ ಮತ್ತು ಆಂಫಿಭೋಲೈಟ್ ಶಿಲೆಗಳ ಶಿಥಿಲೀಕರಣದಿಂದ. ಇದು ಜಿಗುಟಾದ ಜೇಡಿ ಮಣ್ಣು ಹಾಗೂ ತೇವಾಂಶ ಮತ್ತು ನೀರನ್ನು ಹೆಚ್ಚು ಕಾಲ ಹಿಡಿದಿರಬಲ್ಲುದು. ತೀವ್ರತಮ ರಾಸಾಯನಿಕಕ್ರಿಯೆ, ಬಿಸಿಲು, ಮಳೆಗಾಳಿಗಳ ಕಾರ್ಯಾಚರಣೆಯಿಂದ ನಗ್ನೀಕರಣ ಹೊಂದಿದ ಗ್ರಾನೈಟ್ ಮತ್ತು ಪೆಗ್ಮಟೈಟ್ ಶಿಲೆಗಳಲ್ಲಿಯ ಖನಿಜಗಳು ಜೀರ್ಣಹೊಂದಿ ಬಿಳಿಯ ಜೇಡು, ಸುದ್ದೆಮಣ್ಣು, ಇಲ್ಲವೆ ರಂಗೋಲಿ ಮಣ್ಣಾಗುತ್ತದೆ. ಬಿಳಿಯಜೇಡು ಪಿಂಗಾಣಿ, ಕಾಗದ ಹಾಗೂ ಬಟ್ಟೆಗಳಿಗೆ ಚಿಲುಮೆಮಾಡಿ ಬಿಳುಪು ಮತ್ತು ಹೊಳಪನ್ನು ಕೊಡಲು ಬಹಳ ಅವಶ್ಯಕವಾದ ವಸ್ತು. ಈ ಹಳ್ಳಿಯಲ್ಲಿ ದೊರೆಯುವ ವಿವಿಧ ಬಣ್ಣದ ಮಣ್ಣುಗಳನ್ನು ಹಲವಾರು ಗೃಹಕೈಗಾರಿಕೆಯಲ್ಲಿ ಬಳಸಬಹುದಾಗಿದೆ. ಕೆಂಪು, ಕಾವಿಮಣ್ಣುಗಳು ಕಬ್ಬಿಣದ ಆಕ್ಸೈಡುಗಳು ; ಸಿಮೆಂಟಿನೊಡನೆ ಸೇರಿದ ಈ ಮಣ್ಣು ಆಕರ್ಷಕವಾದ ಶಾಶ್ವತ ನೆಲಹಾಸು ಬಣ್ಣವಾಗುವುದು. ಇನ್ನು ಹಳದಿಮಣ್ಣು, ಇದು ಲಿಮೋನೈಟ್‌ನಿಂದ ಬಂದದ್ದು. ಇದೇ ಹಳದಿ ಗೋಪಿಮಣ್ಣು. ಸುಣ್ಣದೊಡನೆ ಬೆರೆತ ಗೋಪಿ ಹಳದಿಸುಣ್ಣವಾಗುತ್ತದೆ. ರೆಡ್‌ಆಕ್ಸೈಡು ಮತ್ತು ಗೋಪಿ ಮಣ್ಣಿ ಗೇನು ಬೆಲೆಕಡಿಮೆ ಇಲ್ಲ. ಸಕ್ಕರೆಯಷ್ಟೆ ಬೆಲೆ. ಇಂತಹ ಮಣ್ಣುಗಳನ್ನು ಅಗೆದು ತೆಗೆದು ನುಣ್ಣಗೆ ಬೀಸಿ ಜಾಲಂದರಗಳಲ್ಲಿ ಜಾಲಾಡಿಸಿ ಚೀಲಗಳಿಗೆ ತುಂಬಿದರೆ ಸಾಕು ರೆಡ್‌ಆಕ್ಸೈಡು ಮತ್ತು ಗೋಪಿ ಸಿದ್ಧವಾದಂತೆಯೆ. ಈ ಮಣ್ಣಿಗೂ ರಾಜಧನ ಮತ್ತು ಸುಂಕವಿರುವುದರಿಂದಲೇ ರಾಜ್ಯ ಸರ್ಕಾರಕ್ಕೆ ಸಾವಿರಾರು ರೂಪಾಯಿಗಳ ಆದಾಯವಿದೆ.

ಚಿಕ್ಕನಾಯಕನಹಳ್ಳಿಯಲ್ಲಿ ಕೆಂಪು ಹರಳುಗಳೂ ದೊರೆಯುತ್ತವೆ. ಒಮ್ಮೊಮ್ಮೆ

ಉತ್ಕೃಷ್ಟವಾದ ಕೇಪುರತ್ನಗಳೂ ದೊರೆತಿವೆ. ಬಳಪದಕಲ್ಲಿಗೂ ಈ ಹಳ್ಳಿಯು ಪ್ರಸಿದ್ಧ ವಾಗಿದೆ. ಇದರಿಂದ ಅನೇಕಾನೇಕ ಉಪಯೋಗಗಳಿವೆ. ಉದಾಹರಣೆಗೆ ಇದು ಶಾಖಕ್ಕೆ ಕರಗುವುದಿಲ್ಲ ಮತ್ತು ವಿದ್ಯುತ್‌ವಾಹಕವಲ್ಲವಾದ್ದರಿಂದ ಕುಲುಮೆಯ ಇಟ್ಟಿಗೆಗಳಾಗಿ, ಟಾಲ್ಕಂ ಪೌಡರ್ ಆಗಿ, ಅಗ್ನಿನಿರೋಧಕ ವಸ್ತುವಾಗಿ ಹೀಗೆ ಹಲವಾರು ಉಪಯುಕ್ತ ವಸ್ತುಗಳ ತಯಾರಿಕೆಗೆ ಇದು ಮೂಲ ವಸ್ತುವಾಗಿದೆ.

ಚಿಕ್ಕನಾಯ್ಕನಹಳ್ಳಿಯ ಸುತ್ತಮುತ್ತ ಹಾಗೂ ಇಡೀ ತಾಲ್ಲೂಕಿನಲ್ಲಿ ಹಲವಾರು ದೊಡ್ಡ ಇಲ್ಲವೆ ಸಣ್ಣಪ್ರಮಾಣದ ಕೆರೆಗಳಿವೆ. ಆದರೆ ಇವುಗಳ ಬಗ್ಗೆ ಭೂವಿಜ್ಞಾನಿ ಅಷ್ಟಾಗಿ ಗಮನ ಹರಿಸುವುದಿಲ್ಲ. ಕಾರಣ ಇವು ಮಾನವನಿರ್ಮಿತ ಮತ್ತು ಬೇಸಿಗೆ ಯಲ್ಲಿ ಬತ್ತಿಹೋಗಬಹುದಾಗಿವೆ, ಆದ್ದರಿಂದ ಭೂವಿಜ್ಞಾನಿಯ ಆಸಕ್ತಿ ನೆಲ–ಜಲಗಳ ಸಾಮರಸ್ಯತೆಯನ್ನು ಅಭ್ಯಸಿಸುವುದೇ ಆಗಿದೆ. ಈ ದಿಸೆಯಲ್ಲೂ ಚಿಕ್ಕನಾಯ್ಕನಹಳ್ಳಿ ಯಲ್ಲಿ ಹೆಚ್ಚು ಜಲ ಸಂಪನ್ಮೂಲಗಳಿವೆ. ಅವುಗಳಾದರೂ ಚಿಲುಮೆ, ಬುಗ್ಗೆ ಹಾಗೂ ದೊಣೆಗಳು ಮತ್ತು ಅಂತರ್ಜಲ. ಇಂತಹ ಜಲ–ಸಂಪನ್ಮೂಲವು ನಿಸರ್ಗದತ್ತವಾದುದು ಮತ್ತು ನಡು ಬೇಸಿಗೆಯಲ್ಲೂ ನೀರನ್ನು ಕೊಡಬಲ್ಲವು. ಝರಿಗಳು, ಬುಗ್ಗೆಗಳು ಬೆಟ್ಟದ ಇಳಿಮೇಡಿನಲ್ಲಿ ಜಿನುಗಿ ಹರಿದು ವೃಥಾ ವ್ಯರ್ಥವಾಗುತ್ತಿರಬಹುದು; ಅದರಲ್ಲೂ. ಪತ್ತಾಳ ಬೆಟ್ಟದ ಹಿಂಬದಿಯಲ್ಲಿ ಹಲವಾರು ನಿದರ್ಶನಗಳಿವೆ. ಇಂತಹ ನೀರಿನಲ್ಲಿ ಖನಿಜಾಂಶವೂ ಇರುವುದರಿಂದ 'ಖನಿಜಯುಕ್ತ ನೀರು' ಕುಡಿಯಲೂ ರುಚಿ, ಶುಚಿ ಮತ್ತು ಆರೋಗ್ಯದ ದೃಷ್ಟಿಯಿಂದಲೂ ಹಿತ ಅನೇಕ ರೋಗರುಜಿನಗಳನ್ನು ವಾಸಿಮಾಡು ವಂಥ ದ್ರವ ಸಂಜೀವಿನಿ. ಇದರ ಬಗ್ಗೆಯೂ ನಮ್ಮ ಗಮನ ಹರಿಯಬೇಕಾಗಿದೆ. ಆ ನೀರನ್ನು ರಾಸಾಯನಿಕ ಮತ್ತು ಇತರ ಪರೀಕ್ಷೆಗಳಿಗೆ ಒಳಪಡಿಸಿ ಅದರ ಗುಣಪರೀಕ್ಷೆ ನಡೆಸಿ ಉತ್ತಮವಾಗಿದ್ದರೆ ಶೀಷೆಗಳಲ್ಲಿ ತುಂಬಿ "ಖನಿಜಯುತ ನೀರು" ಎಂದು ಮಾರಲೂ ಬಹುದು. ಕಾರೈಕುರ್ಚಿ ಸಾಲು ಗುಡ್ಡಗಳಲ್ಲಿಯೂ ಇಂತಹುದೇ ಬುಗ್ಗೆಗಳಿವೆ. ಅಲ್ಲಿ ಗಂಗಮ್ಮನೆಂದು ಪೂಜಿಸುವುದು ಪವಿತ್ರತೆಯ ಸಂಕೇತವಾಗಿದ್ದರೂ, ವೈಜ್ಞಾನಿಕವಾಗಿ ಅದರ ಉಪಯುಕ್ತತೆಯನ್ನು ಪಡೆಯದೆ ಗಂಗಮ್ಮನನ್ನು ವೃಥಾ ಹರಿಸುತ್ತಿದ್ದೇವೆ ಯಲ್ಲಾ ಎನಿಸುತ್ತದೆ. ಅದೇ ತೆರನಾದ ಬುಗ್ಗೆಗಳನ್ನು ವಜ್ರಗಣಿಪ್ರದೇಶಗಳಲ್ಲಿಯೂ ನೋಡಬಹುದಾಗಿದೆ. ಎಳನೊಡು ಸಿದ್ಧರಾಮನ ಸನ್ನಿಧಿಯಲ್ಲಿ ಒಳಕಲ್ಲು ತೀರ್ಥವನ್ನು ವೈಜ್ಞಾನಿಕ ದೃಷ್ಟಿ ಹರಿಸಿ, ಅದರ ಉದ್ಭವನ್ನೂ ಪತ್ತೆಹಚ್ಚಬಹುದು. ಇಂತಹ ಕೌತುಕಗಳ ಬಗ್ಗೆ ಅವ್ಯಕ್ತವಾದ ಭಯಭಕ್ತಿಗಳಿದ್ದರೂ, ಆ ಜಲ ಉದ್ಭವಿಸುವುದರ ಹಿಂದಿರುವ ವೈಜ್ಞಾನಿಕ ಹಿನ್ನೆಲೆಯನ್ನು ತಿಳಿದರೆ ಇನ್ನೂ ಹೆಚ್ಚಿನ ಭಕ್ತಿ, ಆಸಕ್ತಿ ಮೂಡು ತ್ತದೆ. ಈ ಹಳ್ಳಿಯಲ್ಲಿರುವ ಎಲ್ಲಾ ಬುಗ್ಗೆ, ಝರಿ, ದೊಣೆಗಳ ಬಗ್ಗೆ ಕೆಲವೇ ಮಾತು ಗಳಲ್ಲಿ ಹೇಳುವುದಾದರೆ: ಅವು ಅಂತರ್ಜಲ, ಭೂಮಿಯ ಅಂತರಾಳದಲ್ಲಿ ಶಿಲೆಗಳ ರಂಧ್ರದಿಂದ ಒಳಹೊಕ್ಕ ಮಳೆಯ ನೀರು, ಭೂಮಿಯ ಒಳಗೆ ನದಿಯಂತೆ ಹರಿಯು

ತ್ತಿರುತ್ತದೆ. ಅಂತಹ ನೀರು ಭೂಮಿಯ ಮೇಲ್ಮೈ ಮಟ್ಟವನ್ನೆ ಅನುಸರಿಸಿರುತ್ತದೆ. ಕೆಲವು ವೇಳೆ ಇಳಿಜಾರಿನಲ್ಲಿ, ಕಣಿವೆಗಳಲ್ಲಿ ಕಾಣುವ ಶಿಲಾಬಿರುಕುಗಳು ಅಂತರ್ಜಲವು ಹೊರಬರುವುದಕ್ಕೆ ದಾರಿಗಳಾಗಿರುತ್ತವೆ. ಜಲಕ್ಷಾಮ ಬರದಂತೆ ಮುನ್ನೆಚ್ಚರಿಕೆಯಾ ಕ್ರಮವಾಗಿ ಅಂತರ್ಜಲವನ್ನೂ ಸೀಮಿತ ಮತ್ತು ನಿಯಮಿತವಾಗಿ ಉಪಯೋಗಿಸು ವುದು ಉತ್ತಮ.

ಚಿಕ್ಕನಾಯಕನಹಳ್ಳಿಯ ಭೂವೈಜ್ಞಾನಿಕ ಸಮೀಕ್ಷೆಯ ಪಕ್ಷಿನೋಟವನ್ನು ವಿವರಿ ಸಿದ ಮೇಲೆ ಪುರೋಭಿವೃದ್ಧಿಗೆ ಯೋಜಿಸಬೇಕಾದ ಅಂಶಗಳನ್ನು ಸ್ಥೂಲವಾಗಿ ಪರಿಗಣಿಸಬಹುದು. ಮೊದಲಿಗೆ "ಖನಿಜದ ಕಣಜ"ವನ್ನು ನಿಷ್ಠಾವಂತ ಕೈಗಾರಿಕೋ ದ್ಯಮಿಗಳು ಮುಂದೆ ಬಂದು, ಆ ಖನಿಜಗಳನ್ನು ಪರಿಷ್ಕರಿಸಿ ಹಲವಾರು ಕೈಗಾರಿಕೆಗಳನ್ನು ಸ್ಥಾಪಿಸುವುದರಿಂದ ನಿರುದ್ಯೋಗ ಸಮಸ್ಯೆಗಳು ದೂರವಾಗುತ್ತವೆ. ನೂರಾರು ಜನರು ಸ್ವಾವಲಂಬನೆಯಿಂದ ಅಭಿವೃದ್ಧಿ ಪಥದ ಕಡೆಗೆ ಹೋಗುವುದು ಸುಲಭಸಾಧ್ಯ. ಉದಾ ಹರಣೆಗೆ ಚಿಕ್ಕ ಸಿಮೆಂಟ್ ಕಾರ್ಖಾನೆ, ಗಾಜಿನ ಕಾರ್ಖಾನೆ: ಹೆಂಚು ಇಟ್ಟಿಗೆ ಕಾರ್ಖಾನೆ. ಸಣ್ಣ ಕಬ್ಬಿಣ ಉಕ್ಕಿನ ಕುಲುಮೆಗಳು, ಮಣ್ಣನ್ನು ಅರೆದು ಸಿದ್ಧಪಡಿಸುವ ಯಂತ್ರಗಳಿಂದ ರೆಡ್ಆಕ್ಸೈಡ್ ಮತ್ತು ಗೋಪಿಮಣ್ಣಿನ ಗೃಹಕೈಗಾರಿಕೆ, ಇವೇ ಮುಂತಾದ ಹಾಗೂ ನೆಲ-ಜಲ ಮತ್ತು ನಿಸರ್ಗದತ್ತವಾದ ತೆಂಗಿನಿಂದ ಹತ್ತಾರು ಉಪಲಬ್ಧ ವಸ್ತುಗಳನ್ನವ ಲಂಬಿಸಿದ ಕೈಗಾರಿಕೆ ಕಲ್ಪವೃಕ್ಷವೇ ಆದೀತು, ಸುಣ್ಣ ಬಣ್ಣಗಳ ತಯಾರಿಕೆಗೂ ಸೂಕ್ತ ಸ್ಥಳವಾಗಿದೆ. ಒಟ್ಟಿನಲ್ಲಿ ತಾಲ್ಲೂಕಿನ ಗೃಹಕೈಗಾರಿಕೆಗಳು ಬೆಳೆದು ನೂತನವಾಗಿ ಖನಿಜ ಗಳನ್ನವಲಂಬಿಸಿದ ಒಂದೆರಡು ಕೈಗಾರಿಕೆಗಳು ಆರಂಭವಾದರೆ ಅವು ಹತ್ತಾಗಿ ನೂರಾಗಿ ಬೆಳೆದು ಹೆಮ್ಮರವಾದೀತು ಆಗ ಈ ತಾಲ್ಲೂಕು ಜಿಲ್ಲೆಯ ಖನಿಜದ ಕಣ ಎನ್ನುವುದಕ್ಕೂ ಸಾರ್ಥಕತೆ, ಚಿಕ್ಕನಾಯಕನಹಳ್ಳಿಯು ಕರ್ನಾಟಕದ ಸ್ವಿಟ್‌ಜರ್‌ಲ್ಯಾಂಡ್ ಆಗುವುದರಲ್ಲಿ ಸಂಶಯವಿಲ್ಲ. ಇದರಲ್ಲಿ ಎಲ್ಲರ ಸೇವೆಯೂ ಮುಖ್ಯ. ನಿಸ್ವಾರ್ಥ ಸೇವೆಗೆ ಪ್ರತಿಫಲ ಇದ್ದೇ ಇರುವುದು. ಭೂವಿಜ್ಞಾನಿಗಳ ಅಳಿಲಸೇವೆಯೂ ಸದಾ ಲಭ್ಯವಿರುತ್ತದೆಂದು ಆಶಿಸಿ ಈ ಕಿರು ಸಮೀಕ್ಷೆಯನ್ನು ಪೂರ್ಣಗೊಳಿಸುವೆ.

**ಚಿಕ್ಕನಾಯಕನಹಳ್ಳಿ**

# ಕೃಷಿ ಮತ್ತು ಕುರಿ ಸಾಕಣೆ

**ಟಿ. ಹೆಚ್. ಹೊನ್ನಗಂಗಪ್ಪ**

ಯಾವುದೇ ಒಂದು ಊರಿನ ಪ್ರಗತಿ ಅಥವಾ ಕೃಷಿ ಅಥವಾ ಉದ್ಯಮ, ಜನ ಜೀವನ ಇತ್ಯಾದಿಗಳನ್ನು ನೋಡಲು ಹೊರಟಾಗ ಮೊದಲು ನೋಡ ಬೇಕಾದುದು ಆ ಊರಿನ ಭೌಗೋಳಿಕ ಲಕ್ಷಣಗಳು, ಸನ್ನಿವೇಶ, ಪರಿಸರ, ವಾತಾವರಣ, ಕೆರೆಕಟ್ಟೆಗಳು, ಭೂಗುಣ ಇತ್ಯಾದಿಗಳನ್ನು ಆಮೂಲಾಗ್ರವಾಗಿ ಪರೀಕ್ಷಿಸಿದಾಗ ಆ ಪ್ರದೇಶದ ಕೃಷಿ, ಜನಜೀವನವನ್ನು ಕಾಣಲು ಸಾಧ್ಯ. ಈ ಹಿನ್ನೆಲೆಯಲ್ಲಿ ಚಿಕ್ಕನಾಯಕನಹಳ್ಳಿಯನ್ನೂ ಪರಿಶೀಲಿಸಬೇಕಾಗುತ್ತದೆ.

ಚಿಕ್ಕನಾಯಕನಹಳ್ಳಿ ಕರ್ನಾಟಕ ರಾಜ್ಯದ ತುಮಕೂರು ಜಿಲ್ಲೆಗೆ ಸೇರಿದ ಒಂದು ತಾಲ್ಲೂಕು ಹಾಗೂ ಅದರ ಕಸಬೆ. ಇದಕ್ಕೆ ಚಿಕ್ಕನಾಯಕನಹಳ್ಳಿಯಲ್ಲದೆ ಶೆಟ್ಟಿಕೆರೆ, ಕಂದಿಕೆರೆ, ಹಂದನಕೆರೆ ಮತ್ತು ಹುಳಿಯಾರು ಈ ತಾಲ್ಲೂಕಿನ ಹೋಬಳಿಗಳು. ಈ ತಾಲ್ಲೂಕಿನ ವಿಸ್ತೀರ್ಣ 1142.2 ಚಕಿಮೀ ಇದ್ದು 234 ಗ್ರಾಮಗಳನ್ನು ಒಳಗೊಂಡಿದೆ. ಜನಸಂಖ್ಯೆ 1,44,396 (1971).

ಈ ತಾಲ್ಲೂಕಿನ ಪೂರ್ವದಲ್ಲಿ ದಕ್ಷಿಣೋತ್ತರವಾಗಿ ಸಮಾಂತರದಲ್ಲಿ ಸಾಗಿರುವ ಕಣಜಶಿಲೆಯ ಬೆಟ್ಟಗಳ ಮೂರು ಸಾಲುಗಳಿವೆ. ಈ ಬೆಟ್ಟಗಳ ಮೇಲೆ ಬಿದ್ದ ಮಳೆ ನೀರು ಹರಿದು ಶಿರಾ ತಾಲ್ಲೂಕಿನ ವೇದವತಿ ನದಿಯನ್ನು ಸೇರುತ್ತದೆ. ಈ ತಾಲ್ಲೂಕಿನಲ್ಲಿ ಎರಡು ತೊರೆಗಳು ಹರಿಯುತ್ತವೆ. ಒಂದು ಶೆಟ್ಟಿಕೆರೆಯ ದಕ್ಷಿಣದಿಂದ ಉತ್ತರಕ್ಕೆ ಹುಳಿಯಾರು ಕಡೆಗೂ ಇನ್ನೊಂದು ಯಳನಾಡಿನಿಂದ ಬೂದಿಹಾಳಿನ ವಾಯುವ್ಯದ ಕಡೆಗೂ ಹರಿಯುತ್ತವೆ. ಈ ತಾಲ್ಲೂಕಿನ ಪ್ರದೇಶ ತಳಶಿಲೆ ಶಿಸ್ಟ್ ಜಾತಿಯದಾಗಿದ್ದು ಹೆಚ್ಚು ಪ್ರದೇಶ ಮರಳುಮಿಶ್ರಿತ ಕೆಂಪು ಮಣ್ಣಿನ ದಿರುತಗ್ಗುಗಳಿಂದ ಕೂಡಿದೆ ಈ ತಾಲ್ಲೂಕಿನ ಜಾಣೆಹಾರ್ ಬೆಟ್ಟಗಳಲ್ಲಿ ಮ್ಯಾಂಗನೀಸ್ ನಿಕ್ಷೇಪಗಳುಂಟು. ಪಶ್ಚಿಮಭಾಗ ದಲ್ಲಿ ಸುಣ್ಣಕಲ್ಲಿನ ಹರಹುಗಳಿವೆ. ಈ ಸುಣ್ಣಕಲ್ಲು ಹತ್ತಿರದಲ್ಲಿಯೇ ಇರುವ ಅಮ್ಮಸಂದ್ರ ಸೀಮೆಂಟ್ ಫ್ಯಾಕ್ಟರಿಗೆ ಸಾಗುತ್ತಿದೆ.

ಈ ತಾಲ್ಲೂಕಿನಲ್ಲಿ ಮಳೆ ಸಾಮಾನ್ಯ. ವಾರ್ಷಿಕ ಸರಾಸರಿ 814.81 ಮಿಮೀ. ಇಲ್ಲಿನ ಬಹುತೇಕ ವ್ಯವಸಾಯವೆಲ್ಲ ಮಳೆನೀರು, ಕೆರೆ ಮತ್ತು ಬಾವಿಗಳನ್ನು ಆಶ್ರಯಿಸಿವೆ. ಸುವರ್ಣಮುಖೀ ನದಿಗೆ ಅಡ್ಡಲಾಗಿ 1892ರಲ್ಲಿ ರಚಿತವಾದ ಬೋರನ ಕಣಿವೆ ಜಲಾಶಯ ಈ ತಾಲ್ಲೂಕಿನ ದೊಡ್ಡಕೆರೆ. ಬೆಟ್ಟದ ನಡುವಿನ ಪ್ರದೇಶವೆಲ್ಲ ಫಲವತ್ತಾದುದು. ಇಲ್ಲಿ ತೆಂಗು ಮತ್ತು ಅಡಕೆ ತೋಟಗಳೇ ಹೆಚ್ಚು. ರಾಗಿ, ಹುರುಳಿ, ಜೋಳ, ತೊಗರಿ, ಬತ್ತ ಇಲ್ಲಿನ ಇತರ ಬೆಳೆಗಳು. ತೆಂಗಿನ ಉತ್ಪತ್ತಿಯಲ್ಲಿ ತಿಪಟೂರು ಬಿಟ್ಟರೆ ಈ ಪ್ರದೇಶ ಎರಡನೆಯದಾಗುತ್ತದೆ.

ಎಲ್ಲೆಲ್ಲೂ ತೆಂಗು–ಅಡಿಕೆ ತೋಟಗಳಿಂದ ಕಂಗೊಳಿಸುತ್ತಿದ್ದು ಸದಾ ಹಸಿರು ಮಡಿಯುಟ್ಟು ಗರಿಗಳು ಕೈಬೀಸಿ ಕರೆಯುತ್ತಿರುವಂಥ ನಿಸರ್ಗ ರಮಣೀಯವಾದ ಈ ತಾಲ್ಲೂಕು ಒಂದು ಚೆಲುವಿನ ತಾಣವಾಗಿದೆ. ತಂಪಾದ ಹಿತಕರವಾದ ಈ ತೋಟಗಳನ್ನು ನೋಡುವುದೇ ಕಣ್ಣಿಗೊಂದು ಹಬ್ಬ. ಇನ್ನು ಈ ಸ್ಥಳದಲ್ಲಿ ಒಂದೆರಡು ದಿನ ತಂಗುವುದಾದರೆ ಪೂರ್ವಜನ್ಮದ ಸುಕೃತ ಮೇಳೈಸಿ ಬಂದಂತೆ. ಇಲ್ಲಿಯ ಕೃಷಿಕರು ಕಷ್ಟ ಜೀವಿಗಳು. ಮಕ್ಕಳಿಗಿನ್ನ ಹೆಚ್ಚಾಗಿ ತಮ್ಮ ತೋಟ–ಜಮೀನುಗಳನ್ನು ಕಾಪಾಡಿಕೊಂಡು ಬರುತ್ತಾರೆ. ದಿನದ ಬಹಳಷ್ಟು ಕಾಲವನ್ನು ತಮ್ಮ ಸಾಗುವಳಿ ಭೂಮಿಯಲ್ಲಿ ಕಳೆಯುತ್ತಾರೆ. ಇಲ್ಲಿ ಶ್ರೀಮಂತ ರೈತರು ಕಡಿಮೆ. ಮಧ್ಯಮ ಹಾಗೂ ಸಾಮಾನ್ಯವರ್ಗದ ರೈತರೇ ಹೆಚ್ಚು. ಆಕಾಶದಷ್ಟು ಉತ್ಪತ್ತಿ ; ಆಕಾಶದಷ್ಟು ಲಯ ; ನಾರಾಯಣ ಕೊಡುತ್ತಾನೆ, ಗೋವಿಂದ ಉಣ್ಣುತ್ತಾನೆ ಎನ್ನುವ ಮನೋಭಾವದವರು ಇಲ್ಲಿನ ರೈತಾಪಿ ವರ್ಗ. ದಾನ-ಧರ್ಮ–ಅತಿಥಿ ಸತ್ಕಾರಗಳಿಗೆ ಎತ್ತಿದ ಕೈ. ಮೋಸ–ತಗುಲೂಪಿತನ ತೀರ ಕಡಿಮೆ ಎನ್ನಬೇಕು. ತಾನೂ ಬದುಕಬೇಕು ಜೊತೆಯವರೂ ಬದುಕಬೇಕು ಎನ್ನುವವರು. ಏಕೆ ಈ ಮಾತುಗಳನ್ನು ಬರೆಯುತ್ತಿದ್ದೇನೆ ಎಂದರೆ ರೈತ ಭೂಮಿತಾಯಿಯನ್ನು ನೆಚ್ಚಿದವ. ಅವನು ತನ್ನ ಆದಾಯವನ್ನು ಇಂತಿಷ್ಟೇ ಎಂದು ಮೊದಲೇ ಹೇಳಲಾರ. ಎಷ್ಟೋ ವೇಳೆ ಕಣ್ಣಿಗೆ ಕಂಡ ಬೆಳೆ ಕೈಗೆ ಸಿಗದೆ ಹೋಗಬಹುದು. ಕೈಗೆ ಸಿಕ್ಕ ಬೆಳೆ ಬೆಲೆಗಳ ಏರುಪೇರುಗಳಿಂದ ಅಂತರ್ಲಾಗ ಹಾಕಬಹುದು. ಹೀಗಾಗಿ ರೈತ ಯಾವಾಗಲೂ ನೀತಿ-ನಿಯಮ–ಧರ್ಮದ ಜಾಡಿನಲ್ಲಿಯೇ ಹೋಗಲು ಇಚ್ಛಿಸುತ್ತಾನೆ. ಅಂಥ ಹಾಲು ಮನಸ್ಸಿನ ಜನರನ್ನು ಇಲ್ಲಿ ಕಾಣಬಹುದು.

ಇನ್ನು ಇಲ್ಲಿಯ ಕೃಷಿ ಉತ್ಪನ್ನಗಳ ಕಡೆ ಗಮನ ಹರಿಸಿದರೆ ಇಲ್ಲಿ ರಾಗಿ, ಅವರೆ, ತೊಗರಿ, ಜೋಳ, ಬತ್ತ ಇತ್ಯಾದಿ ಬೆಳೆಗಳನ್ನು ಬೆಳೆಯುತ್ತಾರೆ. ಇವೆಲ್ಲ ಅವರವರ ಸಂಸಾರ ಪೂರ್ತಿಗೆ ಆದೀತು. ಆದರೆ ಇಲ್ಲಿನ ಮುಖ್ಯವಾದ ಬೆಳೆ ತೆಂಗು ಮತ್ತು ಅಡಿಕೆ. ತೆಂಗಿಗೆ ಹೇಳಿ ಮಾಡಿಸಿದಂಥ ಭೂಮಿಯನ್ನು ಚಿಕ್ಕನಾಯಕನಹಳ್ಳಿಯ ಸುತ್ತಮುತ್ತ ನೋಡಬಹುದು. ಅಂಕಿ–ಅಂಶಗಳ ಪ್ರಕಾರ ಚಿಕ್ಕನಾಯಕನಹಳ್ಳಿ ತಾಲ್ಲೂಕಿನಲ್ಲಿ 1959–60ರಲ್ಲಿ 19,984 ಎಕರೆ ಭೂಮಿ ತೆಂಗಿನ ವ್ಯವಸಾಯದಲ್ಲಿತ್ತು. ಅದು 1966–67 ರಲ್ಲಿ 25,223 ಎಕರೆಗೆ ವಿಸ್ತರಣೆಗೊಂಡಿತ್ತು. ಈಗ 35,000 ಎಕರೆಗಿಂತ ಹೆಚ್ಚು ಭೂಮಿಯಲ್ಲಿ ತೆಂಗು ಬೆಳೆಯುತ್ತಿದ್ದಾರೆ. ಇಲ್ಲಿಯ ಮರಳು ಮಿಶ್ರಿತ ಕೆಂಪುಮಣ್ಣು ಹಾಗೂ ತೊರೆ ಹರಿಯುವ ಅಕ್ಕಪಕ್ಕದ ಪ್ರದೇಶ ಈ ಬೆಳೆಯ ವೃದ್ಧಿಗೆ ಬಹುತೇಕ ಕಾರಣವಾಗಿದೆ. ಚಿತ್ರದುರ್ಗ ಜಿಲ್ಲೆಯ ಹಿರಿಯೂರಿನ ಹತ್ತಿರವಿರುವ ಬಬ್ಬೂರುನಲ್ಲಿ ಸರಕಾರದ ಒಂದು ಫಾರಂ ಇದೆ. ಇಲ್ಲಿ ತೆಂಗು ಬೆಳೆಗೆ ಚಿಕ್ಕನಾಯಕನಹಳ್ಳಿಯ ಮಣ್ಣು ತುಂಬ ಉತ್ತೇಜನಕಾರಿಯಾದುದೆಂದು ಪ್ರಯೋಗಗಳನ್ನು ನಡೆಸಿ ತೀರ್ಮಾನಕ್ಕೆ ಬಂದಿದ್ದಾರೆ. ಕಣಿವೆ ಹಾಗೂ ಬೆಟ್ಟಗಳ ತಪ್ಪಲಲ್ಲಿ ಈ ಬೆಳೆ ಚೆನ್ನಾಗಿ ಬರುತ್ತದೆಂದು ಪ್ರಯೋಗ ನಡೆಸಿ ಅರಿತಿದ್ದಾರೆ.

ತೆಂಗಿನ ಬೆಳೆಗೆ ಕೆರೆ–ತೊರೆ–ಹಳ್ಳಗಳು ಹೇರಳವಾಗಿರಬೇಕು. ಎಲ್ಲಕ್ಕೂ ಹೆಚ್ಚಿನದಾಗಿ ಭೂಮಿಯು ಒಳಗೆ ಮಣ್ಣು ತೇವಾಂಶವನ್ನು ಹಿಡಿದಿಟ್ಟುಕೊಂಡಿರುವಂತಿರಬೇಕು. ಭೂಮಿಯ ಮೇಲೆ ಬಿದ್ದ ನೀರು ಇಂಗಿ ಒಳಗೆ ಅಂತರ್ಜಲವಾಗಿ ಹರಿಯಬೇಕು. ಈ ರೀತಿ ಹರಿಯುವುದು ಕಲ್ಲು ಮರಳು ಮಿಶ್ರಿತ ಭೂಮಿಯಲ್ಲಿ ಮಾತ್ರ ಸಾಧ್ಯ. ಮಳೆಗಾಲದಲ್ಲಿ ಬಿದ್ದ ನೀರು ತೊರೆಗಳಲ್ಲಿ ಹರಿದು ಸಾಕಷ್ಟು ನೀರು ಭೂಮಿಯಲ್ಲಿ ಇಂಗಿ ಅಂತರ್ಜಲವಾಗಿ ಹರಿಯುವುದರಿಂದ ತೆಂಗಿಗೆ ಸದಾ ಕಾಲ ನೀರು ಒದಗುವುದಲ್ಲದೆ ತಂಪಾಗಿಟ್ಟಿರುತ್ತದೆ. ಅಲ್ಲದೆ ಕಣಿವೆ ಬೆಟ್ಟದ ತಪ್ಪಲುಗಳಲ್ಲಿ ತೆಂಗನ್ನು ಹೆಚ್ಚಾಗಿ ಬೆಳೆಯುವುದರಿಂದ ನೀರಿಗೆ ಯಾವ ಕೊರತೆಯೂ ಇರುವುದಿಲ್ಲ. ಅಲ್ಲದೆ ಹೀಗೆ ಮಳೆಗಾಲದಲ್ಲಿ ಬಿದ್ದ ನೀರು ಭೂಮಿಯ ಒಳಗಡೆ ಹೋಗಿ ಹರಿಯುವುದರಿಂದ ಈ ಬೆಳೆಯ ವೃದ್ಧಿಗೆ ತುಂಬ ಸಹಾಯವಾಗಿದೆ. ಹಲವುಕಡೆ ತೆಂಗಿನ ತೋಟಗಳಲ್ಲಿ ತೆಂಗು ಅಲ್ಲದೆ ಅಡಕೆ ಹಾಗೂ ಹಲಸು–ಮಾವಿನ ಮರಗಳನ್ನು ಬೆಳೆಸಿರುತ್ತಾರೆ. ಇದರಿಂದಾಗಿ ಸಣ್ಣ ಹಿಡುವಳಿದಾರನಾದ ರೈತನಿಗೆ ತೆಂಗಿನ ಬೆಳೆ ಇಳುವರಿ ಕೊಡದೇ ಹೋದರೂ ಉಳಿದ ಬೆಳೆಗಳಿಂದಾಗಿ ಅವನ ಜೀವನನಿರ್ವಹಣೆ ನಡೆದು ಬದುಕಬಹುದು. ಹೀಗಾಗಿ ರೈತ ಒಂದು ಬೆಳೆ ಕೈಕೊಟ್ಟರೂ ಇನ್ನೊಂದು ಬೆಳೆಯಿಂದಾಗಿ ತನ್ನ ಬದುಕನ್ನು ಭಾರ ಮಾಡಿಕೊಳ್ಳಲಾರ. ಈ ತರಹದ ಮಿಶ್ರ ಬೆಳೆಯಿಂದಾಗಿ ತೆಂಗಿನ ಬೇಸಾಯ ಕುಗ್ಗಿ ಫಸಲೂ ಕುಗ್ಗುತ್ತದೆ ಎಂಬ ಮನೋಭಾವವೂ ಇದೆ. ಏಕೆಂದರೆ ಉಳಿದ ಮರಗಳು ದೊಡ್ಡವಾಗಿ ಬೇರು ಬಿಟ್ಟು ತೆಂಗಿನ ಮರಗಳು ಬಡಕಲಾಗಿ ಫಸಲು ಕಡಿಮೆಯಾಗುವುದಲ್ಲದೆ ಬಿಟ್ಟ ಕಾಯಿಗಳೂ ಸಣ್ಣವಿರುತ್ತವೆ.

ತೆಂಗಿನ ಸಸಿಗಳ ನಾಟಿಯಲ್ಲಿಯೇ ಒಂದು ವೈವಿಧ್ಯವಿದೆ. ಚೆನ್ನಾಗಿ ಸೊಂಪಾಗಿ ಬೆಳೆದ ಮರದಲ್ಲಿ ರೈತ ಮಾಗಿದ ಗೊನೆಯನ್ನು ಬೀಜದ ಸಲುವಾಗಿ ಬಿಡುತ್ತಾನೆ. ಸಾಮಾನ್ಯವಾಗಿ ಈ ತರಹದ ಕಾಯಿಗಳನ್ನು ಅಕ್ಟೋಬರ್–ನವೆಂಬರ್ ಕಳೆದ ನಂತರ ಕೀಳುತ್ತಾರೆ. ಮಾಗಲು ಬಿಟ್ಟ ಮರದ ಗೊನೆಯಿಂದ ಕಾಯಿಗಳು ಬಲಿತು ತಾವಾಗಿ ಉದುರಲು ಆರಂಭಿಸಿದಾಗ ಆ ಗೊನೆಯ ಇತರೆ ಕಾಯಿಗಳನ್ನು ಕೀಳುತ್ತಾರೆ. ಹೀಗೆ ಕಿತ್ತ ಕಾಯಿಗಳನ್ನು ಒಂದು ಅಥವಾ ಎರಡು ತಿಂಗಳು ಒಣಗಲು ಬಿಡುತ್ತಾರೆ. ಮೊಟ್ಟೆ ಸಹಿತವಾದ ಕಾಯಿಯ ಒಳಗಿನ ನೀರು ಪೂರ ಆರಲಾರದು. ಕಾಯನ್ನು ಅಲ್ಲಾಡಿಸಿದರೆ ಒಳಗಿನ ನೀರು ಅಲುಗುವುದು ಗೊತ್ತಾಗಬೇಕು. ಅಂಥ ಕಾಯಿಗಳನ್ನು ಕಾಯಿ ನಾಟಿ ಹಾಕಲು ವಿಶೇಷವಾಗಿ ಮಾಡಿದ ಜಾಗದಲ್ಲಿ ನೆಡಲಾಗುತ್ತದೆ. ಸಾಮಾನ್ಯವಾಗಿ ಈ ಜಾಗ 5 ಅಡಿ ಅಗಲವಿದ್ದು ಭೂಮಿಯ ಮೇಲೆ 1½ ಅಡಿ ಎತ್ತರ ಮಣ್ಣನ್ನು ಗುಡ್ಡೆ ಮಾಡಲಾಗುತ್ತದೆ. ಒಂದರ ಪಕ್ಕದಲ್ಲಿ ಒಂದರಂತೆ ಕಾಯಿಗಳನ್ನು ನಾಟಿಹಾಕಿ ರೈತ ತಾನು ನೆಡುವ ಕಾಯಿಗಳ ಸಂಖ್ಯೆಯ ಮೇಲೆ ಜಾಗವನ್ನು ಗೊತ್ತುಮಾಡಿಕೊಳ್ಳುತ್ತಾನೆ. ಈ ತರಹ ನಾಟಿ ಹಾಕುವುದು ಸಾಮಾನ್ಯವಾಗಿ ಮಾರ್ಚಿ ಅಥವಾ ಆಗಸ್ಟ್ ತಿಂಗಳಲ್ಲಿ ನಡೆಯುತ್ತದೆ. ಹೀಗೆ ನಾಟಿ ಹಾಕಿದ ಕಾಯಿಗಳಿಗೆ ತೇವಾಂಶ ಆರದಂತೆ ನೀರು ಹಾಯಿ

ಸುತ್ತ ಬರುತ್ತಾರೆ. ನಾಟಿ ಹಾಕಿದ ಆರು ತಿಂಗಳಿಗೆ ಮೊಳಕೆ ಮೂಡುತ್ತದೆ. ಮೊಳಕೆ ಮೂಡಿದ ಸಸಿಗಳನ್ನು ಅವರವರ ಅನುಕೂಲ ತಕ್ಕಂತೆ ಉಪಯೋಗಿಸಿಕೊಳ್ಳುತ್ತಾರೆ. ಸಸಿ ನೆಡುವುದೆ ಒಂದು ವಿಧಾನ. 3 ಅಡಿ ಅಗಲ 3 ಅಡಿ ಉದ್ದಕ್ಕೆ ಹಳ್ಳ ತೋಡಿ ಆದಕ್ಕೆ ಲಗತ್ತಾಗಿ ಮರಳು–ಗೊಬ್ಬರ–ಕೆಮ್ಮಣ್ಣನ್ನು ತುಂಬಿ ಅನಂತರ ಸಸಿ ನೆಡುತ್ತಾರೆ. ಎಕರೆಗೆ 40 ಸಸಿಗಳನ್ನು ಹಾಕಬಹುದು. ಕೆಲವರು 1 ವರ್ಷದ ಸಸಿಗಳನ್ನು ನೆಟ್ಟರೆ ಇನ್ನೂ ಕೆಲವರು ಮಳೆಗಾಲ ಕಾದಿದ್ದು 3–4 ವರ್ಷಗಳ ಕೆಬ್ಬೆ ಸಸಿಗಳನ್ನು ನೆಟ್ಟು ಪೋಷಿಸುತ್ತಾ ಬರುತ್ತಾರೆ. ಸಸಿ ನೆಟ್ಟ 6 ರಿಂದ 8 ವರ್ಷಗಳಲ್ಲಿ ಹೊಂಬಾಳೆ ಹೊರಟು ಕಾಯಿ ಕಟ್ಟಲು ಆರಂಭವಾಗುತ್ತದೆ.

ಈ ತಾಲ್ಲೂಕಿನಲ್ಲಿ ವಿವಿಧ ಜಾತಿಯ ತೆಂಗನ್ನು ಬೆಳೆಯಲಾಗುತ್ತಿದೆ. ಕಾಯಿ ಗಳಲ್ಲೂ ವೈವಿಧ್ಯ ಕಾಣಬಹುದು. ಕಾಯಿಗಳಲ್ಲಿ ಕೆಲವು ಹಸಿರು ಬಣ್ಣಕ್ಕಿದ್ದರೆ ಇನ್ನು ಕೆಲವು ಕಂದು ಅಥವಾ ಕಪ್ಪು ಮಿಶ್ರಿತ ಕಂದು ಬಣ್ಣದವಾಗಿರುತ್ತವೆ. ಬಣ್ಣವಲ್ಲದೆ ಕಾಯಿಯ ಗಾತ್ರದಲ್ಲೂ ವ್ಯತ್ಯಾಸವಿರುತ್ತದೆ. ಕೆಲವು ದೊಡ್ಡವು ಕೆಲವು ಸಾಮಾನ್ಯ ಗಾತ್ರದವು. ಇನ್ನು ಕೆಲವು ತುಂಬ ಸಣ್ಣವು. ಹಲವು ವೇಳೆ ಸಿಪ್ಪೆ ಸಮೇತವಾದ ಕಾಯಿಯ ಗಾತ್ರ ಲೆಕ್ಕಕ್ಕೆ ಬರುವುದಿಲ್ಲ. ಸಿಪ್ಪೆ ಸುಲಿದಾಗ ಒಳಗಿನ ಕಾಯಿಯ ಗಾತ್ರ ಮುಖ್ಯ. ಅಲ್ಲದೆ ತೆಂಗಿನಕಾಯಿ ಒಡೆದಾಗ ಒಳಗಿನ ತಿರುಳು ಎಷ್ಟು ಮಂದ ಇರುತ್ತದೆ. ರುಚಿ ಹೇಗೆ? ಎಣ್ಣೆ ಅಂಶ ಎಷ್ಟಿರುತ್ತದೆ, ಎಂಬುದನ್ನೆಲ್ಲ ಗಣನೆಗೆ ತೆಗೆದುಕೊಳ್ಳ ಬೇಕಾಗುತ್ತದೆ. ಕೆಲವು ಮರಗಳ ಕಾಯಿಯ ನೀರಿನಲ್ಲೂ ಸಿಹಿ ಅಂಶ ವ್ಯತ್ಯಾಸಗೊಳ್ಳು ತ್ತದೆ. ಹಲವು ಜಾತಿಯ ಗಿಡಗಳನ್ನು ಎಳನೀರಿಗಾಗಿಯೇ ಬೆಳೆಸುತ್ತಾರೆ. ಅವುಗಳಲ್ಲಿ ಕೆಂದಳನೀರು ಪ್ರಮುಖವಾದುದು.

ಈ ತಾಲ್ಲೂಕಿನಲ್ಲಿ ಗಂಗಪಾಣಿ ಎಂಬ ಹೆಸರಿನ ಎಳನೀರಿನ ಗಿಡ ತುಂಬ ಪ್ರಸಿದ್ಧಿ ಪಡೆದಿದೆ. ಇದರ ನೀರು ಅಮೃತಕ್ಕೆ ಸಮಾನ. ಈ ತಾಲ್ಲೂಕಿನಲ್ಲಿ ಬೆಳೆಯುವ ತೆಂಗಿನಕಾಯಿ ಗಾತ್ರದಲ್ಲಿ ಪ್ರಮುಖವಾಗಿದೆ. ಇನ್ನು ಯಾವುದೇ ಜಿಲ್ಲೆಯಲ್ಲಿ ಈ ಗಾತ್ರದ ಕಾಯಿಗಳನ್ನು ನೋಡುವುದು ಕಷ್ಟವಾಗುತ್ತದೆ. ಬರೀ ಗಾತ್ರವೇ ಅಲ್ಲ ಒಳಗಿನ ಮಂದವಾದ ತಿರುಳು ಮತ್ತು ಸಿಹಿ ಅಂಶದಲ್ಲೂ ಉನ್ನತ ಸ್ಥಾನ ಪಡೆದಿದೆ. ಈ ಗಾತ್ರದ ಕಾಯಿಗಳಿಂದ ಆದ ಕೊಬರಿಗೆ ಉತ್ತರ ಭಾರತದಲ್ಲಿ ತುಂಬ ಬೇಡಿಕೆಯಿದೆ. ಈ ತಾಲ್ಲೂಕಿನ ಸಮೀಪದಲ್ಲಿರುವ ತಿಪಟೂರು ಕೊಬರಿ ಮಾರಾಟಕ್ಕೆ ಕೇಂದ್ರ ಸ್ಥಾನ ವಾಗಿದೆ. ಇಲ್ಲಿಂದ ಕೊಬರಿ ಭಾರತದ ನಾನಾ ಭಾಗಗಳಿಗೆ ಹೋಗುತ್ತದೆ.

ಇಲ್ಲಿ ಆಗುವ ಕೊಬರಿ ಅಡಿಗೆ ಹಾಗೂ ಎಣ್ಣೆ ತೆಗೆಯಲು ಉಪಯೋಗಿಸುತ್ತಾರೆ. ಚಿಕ್ಕನಾಯಕನಹಳ್ಳಿ ಹಾಗೂ ತುಮಕೂರು ಜಿಲ್ಲೆಯಲ್ಲಿನ ಕೊಬರಿಯನ್ನು ಹೆಚ್ಚಾಗಿ ಅಡಿಗೆಗೆ ಉಪಯೋಗಿಸುತ್ತಾರೆ. ಏಕೆಂದರೆ ಇಲ್ಲಿನ ಕೊಬರಿಯಲ್ಲಿ ಮೃದು, ಸಿಹಿ ಹಾಗೂ ರುಚಿ ಮುಪ್ಪುರಿಗೊಂಡಿದೆ.

ತೆಂಗಿನಕಾಯಿ ಬರಿಕೊಬರಿ ಮತ್ತು ಎಣ್ಣೆ ಇಷ್ಟಕ್ಕೆ ಸೀಮಿತಗೊಂಡಿಲ್ಲ, ಇದೂ ಇನ್ನೂ ಒಂದಕ್ಕೆ ವಿಶೇಷ ಆದ್ಯತೆ ಪಡೆದಿದೆ. ಇದರ ನಾರಿನಿಂದ ಅನೇಕ ಗೃಹೋಪಯೋಗಿ ಸಾಮಾನುಗಳನ್ನು ಸಿದ್ಧಪಡಿಸುತ್ತಾರೆ. ಒಂದು ದೃಷ್ಟಿಯಿಂದ ಇದರಲ್ಲಿ ತೆಗೆಯುವ ಎಣ್ಣೆಗಿನ್ನ ಇದರಲ್ಲಿ ಬರುವ ನಾರಿನ ಉಪಯೋಗವೇ ಜಾಸ್ತಿಯಾಗಿದೆ.

ತೆಂಗಿನ ತಳಿ ಅಭಿವೃಧ್ಧಿಗಾಗಿ ಇಲ್ಲಿ ಸರಕಾರ ಎಲ್ಲ ವಿಧವಾದ ಯೋಜನೆ ಹಮ್ಮಿಕೊಂಡಿದೆ. ತುಮಕೂರಿನಲ್ಲಿ ಸಹಾಯಕ ತೆಂಗಿನ ಅಭಿವೃದ್ಧಿ ಅಧಿಕಾರಿಯವರ ಕಛೇರಿಯಿದೆ. ಅಲ್ಲದೆ ಸಹಕಾರ ಸಂಘಗಳು ರೈತರಿಗೆ ಅಲ್ಪಾವಧಿ, ಮಧ್ಯಮಾವಧಿ, ದೀರ್ಘಾವಧಿ ಸಾಲಗಳನ್ನೂ ನೀಡಿ ತೆಂಗಿನ ತೋಟದ ಆಬಾದಿಗೆ ಅನುಕೂಲವಾಗುವಂತೆ ಕಾರ್ಯ ಪ್ರವೃತ್ತವಾಗಿದೆ.

ಈ ತಾಲ್ಲೂಕಿನಲ್ಲಿ ತೆಂಗಿನ ಬೆಳೆಯ ಉದ್ಯಮದಷ್ಟೇ ಪ್ರಮುಖವಾದ ಇನ್ನೊಂದು ಉದ್ಯಮವಿದೆ. ಅದು ಕುರಿಸಾಕಣೆ ಮತ್ತು ಉಣ್ಣೆ, ಕಂಬಳಿ ನೇಯ್ಗೆಯ ಉದ್ಯಮ. ಇಲ್ಲಿಯ ಭೂಮಿ ಕುರಿಸಾಕಣೆಗೆ ತುಂಬ ಯೋಗ್ಯವಾಗಿದೆ ಇಲ್ಲಿ ಕುರಿಗಳ ತಳಿಗಳು ಅಭಿವೃದ್ಧಿಯಾದಂತೆ ಬೇರೆಲ್ಲೂ ಆಗಲಾರದು. 1966ನೆಯ ಸೆನ್ಸಸ್ ಪ್ರಕಾರ ತುಮಕೂರು ಜಿಲ್ಲೆಯಲ್ಲಿ ಸುಮಾರು 7,27,499 ಕುರಿಗಳಿದ್ದವು. ಇವುಗಳಲ್ಲಿ ಬಹುತೇಕ ಚಿಕ್ಕನಾಯಕನಹಳ್ಳಿ ತಾಲ್ಲೂಕಿಗೆ ಸೇರಿದವೆ ಆಗಿವೆ. ಇಲ್ಲಿ ಕುರಿಯೊಂದು ವರ್ಷಕ್ಕೆ ಸರಾಸರಿ ಎರಡು ಕಟಾವಿನಿಂದ 1 ಪೌಂಡಿನಷ್ಟು. ಉಣ್ಣೆಯನ್ನು ಕೊಡುತ್ತದೆ. ವರ್ಷದಲ್ಲಿ ಜನವರಿ ಮತ್ತು ಜೂನ್ ತಿಂಗಳಲ್ಲಿ ಉಣ್ಣೆಯನ್ನು ಕತ್ತರಿಸಲಾಗುತ್ತದೆ. ಹೀಗೆ ಕತ್ತರಿಸಿದ ಉಣ್ಣೆಯನ್ನು ಚೆನ್ನಾಗಿ ಶುದ್ಧಿಮಾಡಿ ಕೊಳ್ಳುತ್ತಾರೆ. ಇದನ್ನೆಲ್ಲ ಬಹುತೇಕ ಮನೆಯಲ್ಲಿ ಹೆಂಗಸರುಗಳೇ ಮಾಡುತ್ತಾರೆ. ಇದು ಇಲ್ಲಿಯ ಹಲವರಿಗೆ ತಮ್ಮ ಕೃಷಿಕ ಜೀವನದ ಉಪಕಸಬಾಗಿದೆ ಅನಂತರ ಅದನ್ನು ವಿವಿಧ ಬಗೆಯ ಕಂಬಳಿಗಳಾಗಿ ನೇಯ್ದು ಮಾರಾಟ ಮಾಡುತ್ತಾರೆ. ಇಲ್ಲಿ ವಾರಕೊಮ್ಮೆ ಸೇರುವ ಸಂತೆಯಲ್ಲಿ ಕಂಬಳಿ ಮಾರಾಟ ಪ್ರಮುಖ ಸ್ಥಾನವನ್ನು ಪಡೆದಿದೆ. ಒಟ್ಟಿನಲ್ಲಿ ಚಿಕ್ಕನಾಯಕನಹಳ್ಳಿ ಕಂಬಳಿಗಳು ಪ್ರಸಿದ್ಧವಾದವು. ಈ ತಾಲ್ಲೂಕಿನ ಯಳನಾಡು ಮತ್ತು ಚಿಕ್ಕನಾಯಕನಹಳ್ಳಿಯಲ್ಲಿ ಉಣ್ಣೆ ನೂಲುವ ಪರಸ್ಪರ ಸಹಾಯಕ ಸಂಘಗಳಿವೆ.

ಹೀಗೆ ಅಭಿವೃದ್ಧಿ ಶೀಲವಾದ ಚಿಕ್ಕನಾಯಕನ ಹಳ್ಳಿ ತೆಂಗು-ಅಡಕೆ ತೋಟಗಳಿಂದ ಸುತ್ತುವರಿದಿರುವುದಲ್ಲದೆ ಉಣ್ಣೆ ಮತ್ತು ಕಂಬಳಿಗಳಿಗೆ, ಪ್ರಸಿದ್ಧಿ ಪಡೆದಿದೆ. ಶುಭಕಾರ್ಯಗಳಿಂದ ಹಿಡಿದು ದೇವ ಮಾನವರಿಗೆಲ್ಲ ಬೇಕಾದ ಕಲ್ಪ ವೃಕ್ಷ ಬೆಳೆಯುವ ಈ ತಾಲ್ಲೂಕು ನಿಜಕ್ಕೂ ದೇವೇಂದ್ರನ ಅಮರಾವತಿ ಎನ್ನಿಸದೆ ಇರದು.

ಕೈಗಾರಿಕೆ ಮತ್ತು ಬೇಸಾಯಗಳಿಂದ ಈ ತಾಲ್ಲೂಕು ಮುಂದಿದ್ದರೂ ಇಲ್ಲಿ ಬಡ ಜನರೇ ಹೆಚ್ಚು. ಸರ್ಕಾರ ಇಲ್ಲಿ ಇನ್ನು ಹೆಚ್ಚು ಗೃಹಕೈಗಾರಿಕೆಗಳನ್ನು ಸ್ಥಾಪಿಸಿದರೆ ಈ ಜನರ ಜೀವನ ಬಹುಮಟ್ಟಿಗೂ ಉತ್ತಮವಾಗುವುದರಲ್ಲಿ ಸಂಶಯವಿಲ್ಲ. ಅಂಥ ಮುಂಬರುವ ಸುದಿನಗಳನ್ನು ಎದುರು ನೋಡೋಣ !

ಚಿಕ್ಕನಾಯಕನಹಳ್ಳಿ

# ಗೃಹಕೈಗಾರಿಕೆ ಮತ್ತು ವಾಣಿಜ್ಯೋದ್ಯಮ

**ಎಸ್. ಕೆ. ವೇಣುಗೋಪಾಲ್**
**ಎಂ. ಗಂಗಾಧರಯ್ಯ**

ನಮ್ಮ ದೇಶದ ಅನೇಕ ಮಹನೀಯರು ಇಂಗ್ಲೆಂಡ್, ಜಪಾನ್, ಫ್ರಾನ್ಸ್ ಮುಂತಾದ ವಿದೇಶಗಳಿಗೆ ಹೋದಾಗ್ಗೆ ಅಲ್ಲಿನ ವೈಭವವನ್ನು, ಪ್ರಗತಿಯನ್ನು ಮೈಮರೆತು ವರ್ಣಿಸುವುದುಂಟು. ಇಂದಿನ ಅವರ ಸ್ಥಿತಿಗಳಿಗೆ ಆದೇಶಗಳು ವ್ಯಾಪಾರ, ವಾಣಿಜ್ಯೋದ್ಯಮಗಳಲ್ಲಿ ಸಾಧಿಸಿದ ಅಭಿವೃದ್ಧಿಯೇ ಕಾರಣ. ಇಂಗ್ಲೆಂಡ್‌ನವರು ಭಾರತ, ಚೀನಾ, ಬರ್ಮ, ಸಿಲೋನ್ ಮುಂತಾದ ರಾಷ್ಟ್ರಗಳಲ್ಲಿ ತಮ್ಮ ವ್ಯಾಪಾರ ವಹಿವಾಟುಗಳಿಂದ ಅಪಾರ ಸಂಪತ್ತುಗಳಿಸಿದ್ದಾರೆ. ಕಾಲಕ್ರಮದಲ್ಲಿ ಆಯಾ ದೇಶಗಳ ಅಧಿಕಾರ ಸೂತ್ರ ಹಿಡಿದು ಅಲ್ಲಿನ ಕಚ್ಚಾ ಮತ್ತು ತಯಾರಿಸಿದ ವಸ್ತುಗಳ ಸೂರೆ ಹೊಡೆದಿದ್ದಾರೆ. ಕೈಗಾರಿಕಾಕ್ರಾಂತಿಯ ಸಮಯದಲ್ಲಿ ವಸಾಹತು ರಾಷ್ಟ್ರಗಳು ಆ ದೇಶಗಳಿಗೆ ಕಚ್ಚಾ ಮಾಲನ್ನು ಒದಗಿಸುವ ಹಾಗೂ ಸಿದ್ಧ ವಸ್ತು ಕೊಳ್ಳುವ ಜವಾಬ್ದಾರಿ ಹೊತ್ತವು. ಹೀಗಾಗಿ ಪಾಶ್ಚಾತ್ಯ ರಾಷ್ಟ್ರಗಳ ಆಯವ್ಯಯ ಎಂದೂ ಉಳಿತಾಯವನ್ನೇ ತೋರಿಸುತ್ತಿತ್ತು. ಹೆಚ್ಚುವರಿ ಹಣದಿಂದ ಈ ರಾಷ್ಟ್ರಗಳು ಅನೇಕ ಅಭಿವೃದ್ಧಿಪರ ಯೋಜನೆಗಳನ್ನು ಕೈಗೊಂಡವು. ಹೀಗಾಗಿ ಆ ರಾಷ್ಟ್ರಗಳ ಪ್ರಗತಿಗೆ ವಸಾಹತು ರಾಷ್ಟ್ರಗಳು ಬಂಡವಾಳವಾದವು. ಅಂತಹ ಸೌಲಭ್ಯ ಭಾರತೀಯರಿಗೆ ದೊರೆಯಲಿಲ್ಲ. ಅಲ್ಲದೆ ಇಲ್ಲಿನ ವರ್ತಕರು ಸಾಹಸ ಮನೋಭಾವ ತೋರಿಸಲಿಲ್ಲ. ವಿದೇಶಿಯರಿಗೆ ತಮ್ಮ ವಸ್ತುಗಳನ್ನು ಅಲ್ಪ ಲಾಭಕ್ಕೆ ಮಾರಿದರೇ ವಿನಃ ನೇರವಾಗಿ ತಾವೇ ವಿದೇಶೀ ವ್ಯಾಪಾರಕ್ಕೆ ಕೈಹಾಕಲಿಲ್ಲ. ಹೀಗಾಗಿ ಕೆಲವೇ ವರ್ಷಗಳಲ್ಲಿ ತಮ್ಮ ಆರ್ಥಿಕ ಪ್ರಗತಿ ವಿಮುಖವಾಯಿತು.

ಅಂದರೆ ಯಾವುದೇ ಪ್ರಗತಿಪರ ರಾಷ್ಟ್ರದ ಆರ್ಥಿಕ ಪ್ರಗತಿಯನ್ನು, ಏಕೆ ಸರ್ವತೋಮುಖ ಅಭಿವೃದ್ಧಿಯನ್ನು ವಿಸ್ತರಿಸುವಲ್ಲಿ ಆಯಾ ದೇಶದ ವ್ಯವಸಾಯ ಮತ್ತು ಕೈಗಾರಿಕೆಗಳು ಪ್ರಮುಖ ಹೆದ್ದಾರಿಗಳಾಗಿವೆ ಎನ್ನಬಹುದು. ಅವು ಎರಡೂ ಒಂದಕ್ಕೊಂದು ಪೂರಕವಾಗಿ ಪ್ರಗತಿಗೆ ಸಹಾಯಕವಾಗಿವೆ.

ಚಿಕ್ಕನಾಯ್ಕನಹಳ್ಳಿ ಪ್ರಾಚೀನ ಕಾಲದಿಂದಲೂ ಜನವಸತಿಯ ಬೀಡು. ಶಿಲಾಯುಗದಿಂದಲೂ ಇಲ್ಲಿ ಮಾನವನ ಚಟುವಟಿಕೆಗಳು ಕಾಣಬರುತ್ತವೆ. ಹೊಯ್ಸಳರ ಕಾಲದಲ್ಲಿ ಇದೊಂದು ಪ್ರಮುಖ ಸ್ಥಳವಾಗಿತ್ತು. ಹಾಗಲವಾಡಿ ಪಾಳೆಯಗಾರರಂತೂ ಇಲ್ಲಿಯ ಮಣ್ಣಿನ ಮಕ್ಕಳು. ಹಾಗಾಗಿ ಪ್ರಾರಂಭದಿಂದಲೂ ಅವಶ್ಯಕತೆಗನುಗುಣವಾಗಿ ಕುಶಲಗಾರಿಕೆ ಕಂಡುಬರುತ್ತದೆ. ಕೈಗಾರಿಕೆಗಳ ದಿಕ್ಕಿನಲ್ಲಿ ಇಲ್ಲಿನ ಉಜ್ಜುಕಂಬಳಿ ವಿಶ್ವ ಮಾರುಕಟ್ಟೆಯಲ್ಲಿ ಸ್ಥಾನಗಳಿಸಿದೆ.

ವಿಶೇಷ ಬೃಹತ್ಪ್ರಮಾಣದ ಕೈಗಾರಿಕೆಗಳೇನೂ ಇಲ್ಲಿ ಕಂಡು ಬರದಿದ್ದರೂ, ಅಂತಹ ಕೈಗಾರಿಕೆಗಳಿಗೆ ಬೇಕಾಗಬಲ್ಲ ಕೆಲವು ಕಚ್ಚಾವಸ್ತುಗಳನ್ನೊದಗಿಸುವ ಅರ್ಹತೆಯನ್ನು ಈ ಪ್ರದೇಶ ಪಡೆದಿದೆ. "ಮೈಸೂರು ಸಿಮೆಂಟ್ ಲಿಮಿಟೆಡ್" ಕಾರ್ಖಾನೆ ವಾಸ್ತವವಾಗಿ ತುರುವೇಕೆರೆ ತಾಲೂಕಿನಲ್ಲಿದ್ದರೂ, ಚಿಕ್ಕನಾಯ್ಕನಹಳ್ಳಿ ಮತ್ತು ತಿಪಟೂರು ತಾಲ್ಲೂಕುಗಳಿಂದ ಸಾಕಷ್ಟು ಉಪಕೃತವಾಗಿದೆ. ಅದಕ್ಕೆ ಬೇಕಾಗುವ ಸುಣ್ಣದಕಲ್ಲನ್ನು ಈ ಪ್ರದೇಶ ಸಾಕಷ್ಟು ಒದುಗಿಸುತ್ತದೆ. ಚಿಕ್ಕನಾಯ್ಕನಹಳ್ಳಿ ತಾಲ್ಲೂಕಿನ ಅನೇಕ ಮಂದಿ ಕಾರ್ಮಿಕರಾಗಿ ಆ ಕಾರ್ಖಾನೆಯಲ್ಲಿ ದುಡಿಯುತ್ತಿದ್ದಾರೆ.

ಚಿಕ್ಕನಾಯ್ಕನಹಳ್ಳಿ ತಾಲೂಕಿಗೆ 1953ರಲ್ಲಿ ವಿದ್ಯುಚ್ಛಕ್ತಿಯನ್ನು ದೊರಕಿಸಿಕೊಡಲಾಯ್ತು. ವಿದ್ಯುಚ್ಛಕ್ತಿ ಪಡೆದ ನಂತರ ಈ ತಾಲ್ಲೂಕು ಎಣ್ಣೆಯ ತಯಾರಿಕೆಯಲ್ಲಿ ಮಹತ್ವ ಸ್ಥಾನ ಪಡೆದಿದೆ. ಜೊತೆಗೆ ಎಣ್ಣೆ ತಯಾರಿಸುವ ಅನೇಕ ಗಾಣಗಳೂ ಇಲ್ಲಿವೆ.

ಪ್ರಾಚೀನ ದಿನಗಳಲ್ಲಿ ಬೆಳ್ಳಾರ ಮತ್ತು ಅಜ್ಜನಹಳ್ಳಿಗಳಲ್ಲಿ ಚಿನ್ನ ನಿಕ್ಷೇಪಗಳನ್ನು ಗುರುತಿಸಲಾಗಿತ್ತು. ಈ ಪ್ರದೇಶಗಳಲ್ಲಿ ಎರಡು ಸಾವಿರ ವರ್ಷಗಳ ಹಳತಾದ ಚಿನ್ನ ದೊರಕಿದೆ. ಬೆಳ್ಳಾರ ಪ್ರದೇಶದಲ್ಲಿ 2½ಲಕ್ಷಟನ್ ಚಿನ್ನ ವಿರಬಹುದೆಂದು ಅಂದಾಜು ಮಾಡಲಾಗಿದೆ. ಆದರೆ ಅದರ ಗುಣಮಟ್ಟ ತೀರಕಡಿಮೆಯಿದ್ದು ಉತ್ಪನ್ನ ವೆಚ್ಚ ಹೆಚ್ಚು.

ಈ ತಾಲೂಕಿನ ಕೈಗಾರಿಕೆಗಳ ಸ್ಥಿತಿಗತಿಗಳ ಬಗ್ಗೆ ಅಧ್ಯಯನ ಮಾಡಲು ತುಮಕೂರು ಜಿಲ್ಲೆಯ ಒಟ್ಟು ಅಭಿವೃದ್ಧಿಯ ಬಗ್ಗೆ ಬಂದಿರುವ ಭಾರತ ಸರ್ಕಾರದ ಎರಡೂ ವರದಿಗಳು ತುಂಬಾ ಉಪಯುಕ್ತವಾಗಿವೆ. 1) ತುಮಕೂರು ಜಿಲ್ಲೆಯ ಕೈಗಾರಿಕಾ ಅಭಿವೃದ್ಧಿ ಸತ್ವಗಳ ವರದಿ(1962–63) 2) ತುಮಕೂರು ಗುಬ್ಬಿ ಗ್ರಾಮೀಣ ಕೈಗಾರಿಕಾ ಸಾಧ್ಯತೆಗಳ ಅಧ್ಯಯನದ ವರದಿ (1963–64).

1962–63ರಲ್ಲಿ ಇಡೀ ಜಿಲ್ಲೆಯಲ್ಲಿ ಒಟ್ಟು 41 ಎಣ್ಣೆ ಮತ್ತು ಅಕ್ಕಿ ಗಿರಣಿಗಳಿದ್ದವು. ತಿಪಟೂರಿನಲ್ಲಿ ಹನ್ನೊಂದು ಗಿರಣಿಗಳಿದ್ದರೂ ಅವುಗಳಿಗೆ ಕಚ್ಚಾವಸ್ತು ಚಿಕ್ಕನಾಯ್ಕನಹಳ್ಳಿಯಿಂದಲೇ ಒದಗುತ್ತಿತ್ತು. ಈ ತಾಲೂಕಿನಲ್ಲಿ ತಯಾರಾದ ಒಟ್ಟು ಎಣ್ಣೆಯ ಬಹುಭಾಗ ಇತರ ಜಿಲ್ಲೆಗಳಿಗೆ ಕಳುಹಿಸಲ್ಪಡುತ್ತದೆ. ಇದರ ಹಿಂದೆ ಈ ಕಾರ್ಯವನ್ನು ಗಾಣಗಳು ನೆರವೇರಿಸುತ್ತಿದ್ದವು. ಕಡಿಮೆ ದರ್ಜೆಯ ಕೊಬ್ಬರಿಯನ್ನು ತಲೆಎಣ್ಣೆಗೂ ಮತ್ತು ಸೋಪುಉತ್ಪಾದನೆಗೂ ಬಳಸುತ್ತಿದ್ದರು. ಕಡಲೆಕಾಯಿಯನ್ನು ಕೂಡ ಇಲ್ಲಿ ಬೆಳೆಯುವುದರಿಂದ ಅದರಲ್ಲಿ ಎಣ್ಣೆ ತೆಗೆಯುತ್ತಾರೆ. ಇಪ್ಪೆ ಮತ್ತು ಹೊಂಗೆ ಬೀಜಗಳಿಂದಲೂ ಎಣ್ಣೆ ತೆಗೆದು ಮಾರುವುದುಂಟು, ಮರಕೊಯ್ಯುವ ಕಾರ್ಖಾನೆ ಈ ತಾಲೂಕಿನ ಮತ್ತೊಂದು ಸಣ್ಣ ಕೈಗಾರಿಕಾ ಘಟಕ. ತಿಪಟೂರಿನಲ್ಲಿ ಬೆಂಕಿಪೆಟ್ಟಿಗೆ ಕಾರ್ಖಾನೆ ಇದ್ದರೂ ಅದಕ್ಕೆ ಕಚ್ಚಾವಸ್ತುವನ್ನು ಒದಗಿಸುವ ಕಾರ್ಯ ಈ ತಾಲೂಕಿನದು. ಅದೇ ತಿಪಟೂರಿನ ಸಾಬೂನು ಕಾರ್ಖಾನೆಗೂ ಕಚ್ಚಾಎಣ್ಣೆಗಳ ಸರಬರಾಜು ಈ ತಾಲೂಕಿನಿಂದಲೂ ಆಗುತ್ತದೆ.

ಈ ತಾಲೂಕಿನ ಮತ್ತೊಂದು ಪ್ರಮುಖ ಉದ್ಯೋಗ ಮಡಕೆ ತಯಾರಿಕೆ. ಚಿಕ್ಕನಾಯ್ಕನಹಳ್ಳಿಯಲ್ಲಿ ಉತ್ತಮ ಮಟ್ಟದ ಜೇಡಿಮಣ್ಣು ದೊರೆಯುತ್ತದೆ. ಕುಂಬಾರರು ಹೆಚ್ಚಿನ ಸಂಖ್ಯೆಯಲ್ಲಿದ್ದರೂ ಅವರ ಜೀವನಕ್ಕೆ ಆಧಾರ ಅದೇ ಉದ್ಯೋಗ. ಹಂದನಕೆರೆಯಲ್ಲಿ ಅವರದೇ ಆದ 'ಕುಂಬಾರ ಕೈಗಾರಿಕಾ ಸಹಕಾರ ಸಂಘ' ಎಂಬ ಸಂಘವೂ ಇದೆ. ಕೈಮಗ್ಗ ತಾಲೂಕಿನ ಪ್ರಮುಖ ಕಸುಬು. ತುಮಕೂರು ಜಿಲ್ಲೆಯಲ್ಲಿ 9,000 ಮಗ್ಗಗಳು ನೋಂದಾವಣೆ ಮಾಡಲ್ಪಟ್ಟಿವೆ. 33% ರಷ್ಟು ಹತ್ತಿನೇಯ್ಗೆ, 25% ರಷ್ಟು ರೇಷ್ಮೆನೇಯ್ಗೆ, 42% ರಷ್ಟು ಉಣ್ಣೆನೇಯ್ಗೆಗಳನ್ನು ಈ ಜಿಲ್ಲೆಯಲ್ಲಿ ಕಾಣಬಹುದು.

ಚಿಕ್ಕನಾಯ್ಕನಹಳ್ಳಿಯಲ್ಲಿ 'ಹತ್ತಿನೇಕಾರರ ಸಹಕಾರ ಸಂಘ' ವಿದೆ. ಅವರಲ್ಲಿ 314ಜನ ಸದಸ್ಯರಿದ್ದಾರೆ. ಅಷ್ಟೇ ಸಂಖ್ಯೆಯ ಮಗ್ಗಗಳು ತಾಲೂಕಿನಲ್ಲಿವೆ.

ಉಣ್ಣೆನೇಯ್ಗೆ ತಾಲೂಕಿನ ಪ್ರಮುಖ ಉದ್ಯಮ. ಚಿಕ್ಕನಾಯ್ಕನಹಳ್ಳಿ ಮತ್ತು ಯಳನಡುಗಳಲ್ಲಿ ಅದರ ಸಹಕಾರ ಸಂಘಗಳಿವೆ. ಒಟ್ಟು 545 ಜನ ಸದಸ್ಯರಿದ್ದಾರೆ. 950 ಮಗ್ಗಗಳಿವೆ. ಉತ್ತಮ ಗುಣಮಟ್ಟದ ಉಜ್ಜು ಗಂಬಳಿ ಈ ಉದ್ಯಮದಲ್ಲಿ ಹೆಸರುವಾಸಿಯಾದುದು. ಕುರಿ ಸಾಕಾಣಿಕೆಗೆ ಹಿಂದೆ ಈ ಪ್ರದೇಶದಲ್ಲಿ ಹೆಚ್ಚು ಪ್ರೋತ್ಸಾಹ ದೊರಕಿದುದರಿಂದಾಗಿ ಈ ಉದ್ಯಮ ಇಲ್ಲಿ ಚೆನ್ನಾಗಿ ಬೆಳೆದಿದೆ. ಇದರ ಪೋಷಕರೇ ಇಲ್ಲಿ ಬಹುಸಂಖ್ಯಾತರು. ಇವರ ಅಭಿವೃದ್ಧಿಗೆ ರಾಜ್ಯ ಸರ್ಕಾರ ಪ್ರತ್ಯೇಕ ಮಂಡಲಿಯೊಂದನ್ನು ನೇಮಿಸಿ ಪ್ರೋತ್ಸಾಹ ಕೊಡುತ್ತಿದೆ. ಒಂದೊಂದು ಭಾಗವನ್ನು ಈ ಮಂಡಲಿ ತನ್ನ ಅಧ್ಯಯನ ಕೇಂದ್ರ ಮಾಡಿಕೊಂಡಿದೆ. ಉಣ್ಣೆಯ ಉತ್ಪಾದನೆಗೆ ಕೊಟ್ಟಷ್ಟು ಗಮನವನ್ನು ಮಂಡಲಿ ಅದರ ಮಾರಾಟದ ಕಡೆಗೆ ಕೊಟ್ಟಿಲ್ಲ. ಇದರ ಮಾರುಕಟ್ಟೆ ತುಂಬಾಸೀಮಿತವಾಗಿದೆ. ರಾಷ್ಟ್ರದ ವಿವಿಧಕಡೆಗಳಿಗೆ ಹೋಗಲು ಸಮರ್ಥವಾಗಿರುವ ಇಲ್ಲಿನ ಪದಾರ್ಥಗಳ ಉದ್ಯಮವೇಕೊ ಕುಂಟುತ್ತಾ ಸಾಗಿದೆ, ಸರಿಯಾದ ಬೆಂಬಲ ಅದಕ್ಕೆ ದೊರೆಯುತ್ತಿಲ್ಲ.

ರೇಷ್ಮೆ ನೇಯ್ಗೆಯೂ ತಾಲೂಕಿನ ಉದ್ಯಮಗಳ ಪ್ರಮುಖ ಅಂಗ. ಚಿಕ್ಕನಾಯ್ಕನ ಹಳ್ಳಿ ಮತ್ತು ಕಾಡೇನಹಳ್ಳಿಗಳಲ್ಲಿ "ರೇಷ್ಮೆ ಉತ್ಪಾದಕರ ಸಹಕಾರಿ ಸಂಘ"ಗಳಿವೆ ಅದರ ಮೂಲಕ 184 ಸದಸ್ಯರು 262 ಮಗ್ಗಗಳಿಂದ ರೇಷ್ಮೆ ಬಟ್ಟೆ ತಯಾರಿಸುತ್ತಾರೆ. ಕಚ್ಚಾವಸ್ತುವಿಗೆ ಮಾತ್ರ ಜಿಲ್ಲಾ ಕೇಂದ್ರವಾದ ತುಮಕೂರಿಗೇ ಹೋಗಬೇಕು.

ಈ ತಾಲೂಕಿನ ಪ್ರಮುಖ ಗೃಹ ಉದ್ಯಮವೆಂದರೆ, ತೆಂಗಿನನಾರು ತಯಾರಿಕೆ. ಚಿಕ್ಕನಾಯ್ಕನಹಳ್ಳಿ ತೆಂಗಿನನಾಡು ಕಲ್ಪತರುವಿನ ಬೀಡಾಗಿದ್ದರೂ ಈ ಜನತೆಗೆ ಮಾತ್ರ ಕೆಲವೊಮ್ಮೆ ಅರೆಹೊಟ್ಟೆಯೇ ಹೌದು. ತೆಂಗಿನಕಾಯಿ ಸಂಪೂರ್ಣ ವಾಣಿಜ್ಯಬೆಳೆ. ತೆಂಗಿನ ಮರ ಸಂಪೂರ್ಣ ಲಾಭ ಕೊಡುತ್ತದೆ. ಅನೇಕ ಕೈಗಾರಿಕೆಗಳಿಗೆ ಕಚ್ಚಾವಸ್ತುವನ್ನೊದಗಿಸುತ್ತದೆ. ತೆಂಗಿನಕಾಯಿಯ ಸಿಪ್ಪೆ ಹಗ್ಗ, ಹುರಿ, ತಯಾರಿಕೆಗೆ ಹೆಚ್ಚು ಉಪಯುಕ್ತ. ತೆಂಗಿನಕಾಯಿಯನ್ನು ಸುಲಿದ ನಂತರ ಸಿಪ್ಪೆಯನ್ನು ನೀರಿನಲ್ಲಿ ಹಾಕಬೇಕು, ಐದಾರು

ತಿಂಗಳ ನಂತರ ಅದನ್ನು ತೆಗೆದು ಚನ್ನಾಗಿ ಬಡಿದು ಹದಗೊಳಿಸಿಕೊಳ್ಳಬೇಕು. ಒಂದೆರಡು ದಿನ ಒಣಗಿದ ನಂತರ ಹಗ್ಗ ಹೊಸೆಯಲು ಬರುತ್ತದೆ. ನೂರು ತೆಂಗಿನ ಸಿಪ್ಪೆ 17 ಪೌಂಡುಗಳಷ್ಟು ನಾರು ಒದಗಿಸುತ್ತದೆ. ಇದರ ಸಂಬಂಧದ ಸಹಕಾರಿ ಸಂಘ ಈ ತಾಲೂಕಿನ ಹುಳಿಯಾರ್‌ನಲ್ಲಿದ್ದರೂ ಮುನ್ನೂರಕ್ಕೂ ಮೇಲ್ಪಟ್ಟು ಸದಸ್ಯರಿದ್ದಾರೆ.

ತೆಂಗಿನಕಾಯಿ ಕೊಬ್ಬರಿಯಾದ ನಂತರ ಅದರ ಕರಟವನ್ನು ಈಗ ನಿರುಪಯುಕ್ತವಾಗಿ ಬಳಸಲಾಗುತ್ತಿದೆ. ಇಲ್ಲವೆ ಹೊರರಾಜ್ಯಕ್ಕೆ ಕಳುಹಿಸಲಾಗುತ್ತದೆ. ಆ ಕರಟದಲ್ಲೂ ಕಿಂಚಿತ್ತು ಎಣ್ಣೆ ಅಂಶವಿರುವುದರಿಂದ ಅದನ್ನು ಪುಡಿಮಾಡಿ ಸಣ್ಣಕೈಗಾರಿಕೆಗಳಿಗೆ ಕಚ್ಚಾ ವಸ್ತುವನ್ನಾಗಿ ಉಪಯೋಗಿಸಬಹುದು. ಚಿಕ್ಕನಾಯಕನಹಳ್ಳಿಯಲ್ಲಿ ಇದು ಯಥೇಚ್ಛವಾಗಿ ದೊರಕುವುದರಿಂದ ಇಲ್ಲಿ ಅದರ ಸಂಬಂಧವಾದ ಸಣ್ಣ ಕಾರ್ಖಾನೆ ಸ್ಥಾಪಿಸಬಹುದು.

ಈ ತಾಲ್ಲೂಕು ಎಲ್ಲ ಸೌಲಭ್ಯಗಳಿದಲೂ ವಂಚಿತವಾಗಿದೆಯೆಂದೇ ಹೇಳಬೇಕು. ಆದರೆ ಬ್ಯಾಂಕ್ ಉದ್ಯಮದಲ್ಲಿ ಪ್ರತ್ಯೇಕಸ್ಥಾನ ಈ ತಾಲ್ಲೂಕಿಗಿದೆ. 1909 ರಲ್ಲಿ ಚಿಕ್ಕನಾಯ್ಕನಹಳ್ಳಿಯಲ್ಲಿ ಸ್ಥಾಪಿತವಾದ 'ಸಹಕಾರಿ ಬ್ಯಾಂಕ್' ಬ್ಯಾಂಕುಗಳ ಬೆಳವಣಿಗೆಯಲ್ಲೇ ಮೈಲುಗಲ್ಲು. ಇದಕ್ಕೆ ಮೊದಲು ಹಣಕಾಸಿನ ಕ್ಷೇತ್ರದಲ್ಲಿ ಲೇವಾದೇವಿಗಾರರ ಕೈವಾಡ ಹೆಚ್ಚಿತ್ತು. ವೈಶ್ಯರಲ್ಲ, ಜೈನರು, ಮಾರುವಾಡಿಗಳ. ಪಾತ್ರ ಮಹತ್ವವಾಗಿತ್ತು. 'ಸಹಕಾರ ಆಂದೋಲನ' ಪ್ರಾರಂಭವಾದ ಮೇಲೆ ಅವರ ಮಹತ್ವ ಕಡಿಮೆಯಾಗಿದೆ. ಇದರ ಜೊತೆ ಜಿಲ್ಲಾ ಸಹಕಾರಿ ಕೇಂದ್ರ ಬ್ಯಾಂಕ್ ಕೂಡ ತನ್ನ ಕಾರ್ಯ ನಿರ್ವಹಿಸುತ್ತದೆ. 1909 ರಲ್ಲಿ ಸ್ಥಾಪಿತವಾದ ಸಹಕಾರೀ ಬ್ಯಾಂಕ್ ಪ್ರಾರಂಭದಲ್ಲಿ ಕೇವಲ 67 ಜನ ಸದಸ್ಯರನ್ನು ಹೊಂದಿತ್ತು, 1966–67 ರಲ್ಲಿ ಅದರ ಸದಸ್ಯರ ಸಂಖ್ಯೆ 3,150, ಅದೇ ವರ್ಷ ಅದು 11, 73. 646 ರೂ. ಸಾಲ ಕೊಟ್ಟಿದೆ. ಗ್ರಾಮೀಣ ಭೂ ಅಭಿವೃದ್ಧಿ ಬ್ಯಾಂಕ್, ಮೈಸೂರು ರಾಜ್ಯ ಬ್ಯಾಂಕ್ ಮೊದಲಾದ ಬ್ಯಾಂಕ್‌ಗಳೂ ಕಾರ್ಯ ನಿರ್ವಹಿಸುತ್ತಿವೆ. ರೈತರಿಗೆ ಮತ್ತು ಕೈಗಾರಿಕೋದ್ಯಮಿಗಳಿಗೆ ಸಾಲದ ನೆರವು ನೀಡಲಾಗುತ್ತಿದೆ.

1941 ರಲ್ಲಿ ಜನಗಣತಿ ಇಲಾಖೆ ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಗೋಪಾಲನಹಳ್ಳಿ, ತಿಮ್ಮನಹಳ್ಳಿ ಕೆಂಕೆರೆ ಹಳ್ಳಿಗಳನ್ನು 'ಆಯ್ದ ಹಳ್ಳಿಗಳ ಆರ್ಥಿಕ ಅಧ್ಯಯನ' ಯೋಜನೆಯಲ್ಲಿ ಒಳಪಡಿಸಿತು. ಇಡೀ ತಾಲ್ಲೂಕಿನ ಆರ್ಥಿಕ ಚಿತ್ರವನ್ನು ನೀಡುವಲ್ಲಿ ಈ ಯೋಜನೆ ಯಶಸ್ವಿಯಾಗಿದೆ. ಈ ತಾಲ್ಲೂಕಿನ ವ್ಯವಹಾರದಲ್ಲಿ ಹೆಸರಿಸಬೇಕಾದ ಮತ್ತೊಂದು ಸಂಸ್ಥೆಯೆಂದರೆ, ಪಾಂಗಾಳ್ ನಾಯಕ್ ಬ್ಯಾಂಕ್.

ವ್ಯಾಪಾರದಲ್ಲಿ ಪ್ರಮುಖ ಪಾತ್ರ ವಹಿಸುವುದು ಸಾಗಾಣಿಕೆ. ಅನೇಕ ಸಂದರ್ಭದಲ್ಲಿ ಸಾಗಾಣಿಕೆ ಸರಕಿನ ಬೆಲೆ ನಿರ್ಧರಿಸುವುದುಂಟು. ಸಾರಿಗೆ ವ್ಯವಸ್ಥೆಯ ಮೇಲೆ ವಾಣಿಜ್ಯ ಕ್ಷೇತ್ರದ ಇಡೀ ಪ್ರಗತಿ ನಿಂತಿರುತ್ತದೆ. ಈ ಇಡೀ ಜಿಲ್ಲೆಯಲ್ಲೇ ತುಮಕೂರು ಮತ್ತು ತಿಪಟೂರು, ಅತ್ಯುತ್ತಮ ಸಾರಿಗೆ ಅನುಕೂಲ ಪಡೆದಿರುವ ಕೇಂದ್ರಗಳಾಗಿವೆ.

ಚಿಕ್ಕನಾಯಕನಹಳ್ಳಿಗೆ ಅಂತಹ ಸಾರಿಗೆ ವ್ಯವಸ್ಥೆ ಇಲ್ಲದಿರುವುದು ವಾಣಿಜ್ಯ ಕ್ಷೇತ್ರದಲ್ಲಿ ಅದರ ಹಿಂದುಳಿಯುವಿಕೆಗೆ ಕಾರಣವಾಗಿದೆ. ಗ್ರಾಮೀಣ ಪ್ರದೇಶದಲ್ಲಿ ಇನ್ನೂ ಅವ್ಯವಸ್ಥೆ ಇದೆ.

1965ರಲ್ಲಿ ಹುಳಿಯಾರುವಿನಲ್ಲಿ ರೆಗ್ಯುಲೇಟೆಡ್ ಮಾರುಕಟ್ಟೆ ಪ್ರಾರಂಭವಾಗಿದೆ. ಚಿಕ್ಕನಾಯಕನಹಳ್ಳಿಯಲ್ಲಿ ರೆಗ್ಯುಲೇಟೆಡ್ ಮಾರುಕಟ್ಟೆ 1966 ರಲ್ಲಿ ಪ್ರಾರಂಭ ವಾಗಿದೆ. ವಾಣಿಜ್ಯ ಕ್ಷೇತ್ರದಲ್ಲಿ ಇದರ ಪ್ರಗತಿ ಆಶಾದಾಯಕ.

'ಸಂತೆ'ಗಳು ವ್ಯಾಪಾರದ ಗತಿಯನ್ನು ಸೂಚಿಸುತ್ತವೆ. ಸೋಮವಾರ ಚಿಕ್ಕ ನಾಯ್ಕನಹಳ್ಳಿಯ ಸಂತೆದಿನ, ಹುಳಿಯೂರು, ಹಂದನಕೆರೆ, ಕಂದನಕೆರೆ, ಮತಿಘಟ್ಟ, ದೊಡ್ಡಲಣ್ಣೆಗೆರೆ, ದಾಸೂಡಿ ಮೊದಲಾದ ಕಡೆ ಸಂತೆಗಳು ಜರುಗುತ್ತವೆ.

ಈ ತಾಲ್ಲೂಕಿನಲ್ಲಿ 1961 ರಲ್ಲಿ 57 ನ್ಯಾಯಬೆಲೆ ಅಂಗಡಿಗಳಿದ್ದವು.

ಚಿಕ್ಕನಾಯ್ಕನಹಳ್ಳಿ ತಾಲ್ಲೂಕು ವಾಣಿಜ್ಯ ಕ್ಷೇತ್ರದಲ್ಲಿ ಕಣ್ಣು ಕೋರೈಸುವಂತಹ ಪ್ರಗತಿ ಸಾಧಿಸಿಲ್ಲ. ಪ್ರಾಯಶಃ ಅದು ಹೆಸರಿಗೆ ತಕ್ಕಂತೆ ಇನ್ನೂ ಹಳ್ಳಿಯಾಗೇ ಉಳಿ ದಿದೆ. ಆದರೆ ಹಿಂದುಳಿಯುವಿಕೆಗೆ ಕಾರಣ ಜಿಲ್ಲಾಕೇಂದ್ರ ಸಾಕಷ್ಟು ದೂರವಿರುವುದು. ಕೈಗಾರಿಕೆ, ವಾಣಿಜ್ಯೋದ್ಯಮಕ್ಕೆ ಬೆನ್ನೆಲುಬಾದ ಸಾರಿಗೆ ವ್ಯವಸ್ಥೆ ಉತ್ತಮವಾಗಿಲ್ಲದಿರು ವುದು, ಅಲ್ಲದೆ ಈ ಪ್ರದೇಶದ ಜನ ಸಾಕಷ್ಟು ಹಿಂದುಳಿದವರು; ದೊಡ್ಡ ಬಂಡವಾಳ ವಿಲ್ಲ. ಸರ್ಕಾರ ಬೃಹತ್ ಯೋಜನೆಗಳತ್ತ ಗಮನ ಹರಿಸಿದರೆ ಪ್ರಯೋಜನವೇನೂ ಇಲ್ಲ. ತೆಂಗಿನಮರ, ಜೇಡಿಮಣ್ಣು, ಮತ್ತು ಕುರಿ ಇವೇ ಕೈಗಾರಿಕೋದ್ಯಮಕ್ಕೆ, ವಾಣಿಜ್ಯಕ್ಕೆ ಆಧಾರಗಳು, ಇವರಿಗೆ ಸಾಕಷ್ಟು ಹಣಕಾಸಿನ ನೆರವು, ಉತ್ತಮ ಮಾರುಕಟ್ಟೆ ಸೌಲಭ್ಯ ದೊರೆಯಬೇಕು, ಹೆಚ್ಚಿನ ಜನರಿಗೆ ಒಪ್ಪೊತ್ತಿನ ಕೆಲಸ ನೀಡುವ ಕಾರ್ಯಕ್ರಮವನ್ನು ಸರ್ಕಾರ ಕೈಗೊಂಡರೆ ಉತ್ತಮ.[1]

———

1 ಇಲ್ಲಿನ ಅಂಕಿ–ಅಂಶಗಳಿಗೆ ಶ್ರೀ ಅಭಿಶಂಕರ ಸಂಪಾದಿಸಿರುವ ತುಮಕೂರು ಜಿಲ್ಲೆಯ ಗೆಜೆಟಿಯರ್‌ಗೆ ಲೇಖಕರು ಋಣಿಗಳು.

ಚಿಕ್ಕನಾಯಕನಹಳ್ಳಿ

# ಪ್ರಮುಖ ಸಾಹಿತಿಗಳು

ನಂ. ಚನ್ನಬಸವಯ್ಯ

**ತೀ.ನಂ.ಶ್ರೀ :—** ತೀರ್ಥಪುರ ನಂಜುಂಡಯ್ಯ ಶ್ರೀಕಂಠಯ್ಯ: ಭಾರತೀಯ ಭಾಷಾಶಾಸ್ತ್ರ ಪ್ರಪಂಚದಲ್ಲಿ, ದ್ರಾವಿಡ ಭಾಷಾವಿಜ್ಞಾನದಲ್ಲಿ ಹಾಸು ಹೊಕ್ಕಾದ ಹೆಸರು. ಚಿಕ್ಕನಾಯ್ಕನಹಳ್ಳಿಗೆ ಪೂರ್ವದಿಕ್ಕಿನಲ್ಲಿನ ಮ್ಯಾಂಗನಿಸ್ ಗಣಿಯ ಗಿರಿಸಾನುವಿನ ತೀರ್ಥ ಪುರ ಇವರದು. ತಂದೆ ಶ್ಯಾನುಭೋಗ ನಂಜುಂಡಯ್ಯನವರು; ತಾಯಿ ಭಾಗೀರಥಮ್ಮ ನವರು. ಹುಟ್ಟಿದ್ದು 1906, ಬದುಕಿದ್ದು 1966ರ ವರಗೆ. ಈ ಅರವತ್ತು ವರ್ಷ ಗಳ ಸಾಧನೆ ಅಪಾರ. ಇವರ ಊರಿಗೆ ಹೋಗುವ ದಾರಿಯಲ್ಲಿ 'ಮದಲಿಂಗನಕಣಿವೆ' ಒಂದಿದೆ. ಮಾಸ್ತಿಯವರ ಕಥೆಗೆ ಇದು ವಸ್ತು. ಅದರಲ್ಲಿ 'ಮದಲಿಂಗನ' ವರ್ಣನೆ ತೀ.ನಂ.ಶ್ರೀ ಅವರಿಗೆ ಒಪ್ಪುವಂಥದು. ಮಾಸ್ತಿಯವರು ಇವರನ್ನು ಮದಲಿಂಗ ನಂ. 1 ಎನ್ನುತ್ತಾರೆ. ಮದಲಿಂಗ ಎಂದರೆ ಮದುವೆಯ ಗಂಡು. ಕೋಟು. ಪೇಟ, ಕಚ್ಚೆ ಪಂಚೆ– ಧರಿಸಿದ ತೀ.ನಂ.ಶ್ರೀ ಅರವತ್ತರ ವಯಸ್ಸಿನಲ್ಲೂ ಮದುವೆಯ ಗಂಡೇ. ಮಿರಿ ಮಿಂಚುವ ಮೈಕಟ್ಟು.

ತುಮಕೂರಿನಲ್ಲಿ ಪ್ರೌಢ ಶಿಕ್ಷಣ ಮುಗಿಸಿ ಅನಂತರ ಮೈಸೂರಿನಲ್ಲಿ ಮಹಾರಾಜ ಕಾಲೇಜಿನ ವಿದ್ಯಾರ್ಥಿ. ಅಲ್ಲಿಂದ ಎಂ.ಎ. ವರೆಗೆ ಸ್ವರ್ಣಪದಕಗಳ ಸುರಿಮಳೆ. ರೆವಿನ್ಯೂ ಇಲಾಖೆಯ ಫಲವತ್ತಾದ ಕೆಲಸ ಬಿಟ್ಟು ಪ್ರಿಯವಾದ ಅಧ್ಯಾಪಕ ವೃತ್ತಿ, ಅವರನ್ನು ಕರೆಯಿತು. ಕನ್ನಡ ಮಧ್ಯಮ ವ್ಯಾಕರಣ, ಭಾರತೀಯ ಕಾವ್ಯಮೀಮಾಂಸೆ ಇವುಗಳೊಂದಿಗೆ ತೀ.ನಂ.ಶ್ರೀ ಮನೆಮಾತು. ಧ್ವನಿಗೆ ಉದಾಹರಣೆ ಕೊಡುವಲ್ಲಿ 'ತೀ.ನಂ.ಶ್ರೀ ಅವರು ಕೊಟ್ಟ ಉದಾಹರಣೆಗಳನ್ನೆ ಬಳಸಬೇಕು' ಅನ್ನುವಷ್ಟು ಸಮಂಜಸ ನಿದರ್ಶನಗಳು ಅವರ ಗ್ರಂಥವನ್ನು ಉತ್ತಮವಾಗಿಸಿವೆ. 'ಕೆರೆಗೆ ಹಾರ'ದ ಚಿತ್ತಲಗುದುರಿ– ಪ್ರಸಂಗ ಎಲ್ಲ ಕನ್ನಡ ವ್ಯಾಸಂಗಿಗಳಿಗೆ ಚಿರಪರಿಚಿತ.

'ಬಾಳುವಷ್ಟು ಕಾಲವೂ ಕಲಿಯುತ್ತಲೇ ಇರಬೇಕು. ಇದು ಅವರ ದಿನಚರಿಯ ಲ್ಲಿನ ಒಂದು ಮಾತು. ಸಂಶೋಧನೆ,ಶಾಸ್ತ್ರಾಭ್ಯಾಸ, ಅಚ್ಚುಕಟ್ಟು–ಇವುಗಳಿಗೆ ಪರ್ಯಾಯ ಪದ ತೀ.ನಂ.ಶ್ರೀ. ಇವರ ಗುರುಗಳು ಪ್ರೊ. ಹಿರಿಯಣ್ಣ, ಬಿ.ಎಂ.ಶ್ರೀ, ಟಿ.ಎಸ್.ವೆಂ. ಅಮೇರಿಕಾ, ಯುರೋಪ್ ರಾಷ್ಟ್ರಗಳ ಪ್ರವಾಸದಿಂದ ಅವರೊಬ್ಬ 'ವಿಶ್ವಭಾರತಿ' ಆಗಿದ್ದಾರೆ.

ಕರ್ನಾಟಕ ವಿಶ್ವವಿದ್ಯಾಲಯದ ಪ್ರಥಮ ಕನ್ನಡ ಪ್ರಧಾನರಾಗಿ ಅಲ್ಲಿಗೆ ಹೋದಾಗ ತಮ್ಮ ಮನೆಗಳಿಗೆ ಅಲ್ಲಿನ ಗಣಿತ ಶಾಸ್ತ್ರದ ಬಗೆಗೆ, ತಾವೇ ಓದಿ ತಿಳಿದು ಹೇಳುತ್ತಿದ್ದ ಸ್ವಾಹಸ. ಕನ್ನಡ ನಿಘಂಟು ಸಮಿತಿ ಅಧ್ಯಕ್ಷರು, ಅಖಿಲ ಭಾರತ ಭಾಷಾ ವಿಜ್ಞಾನ ಸಂಘದ

ಅಧ್ಯಕ್ಷರು– ಹೀಗೆ ಪಂಡಿತರಿಗೆ ಯೋಗ್ಯಸ್ಥಾನಗಳನ್ನು ಸಾರ್ಥಕಗೊಳಿಸಿದ ಹಿರಿತನ ಅವರದ್ದು. ತಾವು ಬರೆದದ್ದು ಹೆಚ್ಚಲ್ಲವಾದರೂ (ಸಂಖ್ಯೆಯಲ್ಲಿ), ಗೆಳೆಯರಾದ ಪು.ತಿ.ನ. ಗೊರೂರು, ಎ.ಎನ್. ಮೂರ್ತಿರಾವ್, ನಂ. ಶಿವರಾಮಯ್ಯ–ಇವರ ಬರವಣಿಗೆಗಳನ್ನು ಕಂಡು ಆನಂದಿಸಿದವರು. ಗೆಳೆಯರ ಗುಂಪಿನ ಅವರ ಸಲ್ಲಾಪಗಳೆಲ್ಲ, ಜ್ಞಾನದ ಚಿಲುಮೆ.

ಒಲುಮೆ, ಪಂಪ, ರಾಕ್ಷಸ ಮುದ್ರಿಕೆ, ಸಮಾಲೋಕನ, ನಂಟರು. ಜಿಡಿಮುತ್ತು. ಕಾವ್ಯಾನುಭವ ಇವರ ಸ್ವಂತ ಕೃತಿಗಳು. ಹೆಣ್ಣುಮಕ್ಕಳ ಪದಗಳು, ನಂಬಿಯಣ್ಣನರಗಳೆ. ಗದಾಯುದ್ಧ ಸಂಗ್ರಹ–ಇವರ ಸಂಪಾದಿತ ಕೃತಿಗಳು. ಅನೇಕ ಪ್ರಬಂಧಗಳು 'ಸಾಹಿತ್ಯ' ಮೌಲ್ಯಗಳನ್ನು ಕುರಿತವು.

ಈ ಭಾಷಾತೀರ್ಥದ ಹಿರಿಮೆ ಗರಿಮೆಗಳನ್ನರಿಯಲು ಅವರ ನೆನಪಿಗಾಗಿ ಪ್ರಕಟಿತವಾಗಿರುವ 'ಶ್ರೀಕಂಠತೀರ್ಥ' ಹೆಚ್ಚು ಸಹಕಾರಿ. ಅವರೊಡನಿದ್ದು ಸಾಹಿತ್ಯ ಸಲ್ಲಾಪ ನಡೆಸಿದ ಗೆಳೆಯರ ಜ್ಞಾನ ಲಾಭದ ಪರಿಚಯ ಆ ಗ್ರಂಥದಲ್ಲಿದೆ. ಪ್ರಸ್ತುತ ಲೇಖನವೂ ಆ ಗ್ರಂಥಕ್ಕೆ ಋಣಿ.

**ವಿದ್ವಾನ್ ಎಂ. ಎಸ್. ಬಸವರಾಜಯ್ಯ :—** ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚ್ಯಸಂಶೋಧನಾಲಯದ ನಿವೃತ್ತ ಹಿರಿಯ ಉಪಸಂಪಾದಕರು. ಮಲ್ಲಗೊಂಡನಹಳ್ಳಿಯ ಮಠದ ಸಿದ್ಧಬಸವಯ್ಯ ಹಾಗೂ ಚನ್ನವ್ವ–ಇವರ ಮಗ. ಹುಟ್ಟಿದ್ದು 1924ರಲ್ಲಿ. ಕೂಲಿಮಠದಲ್ಲಿ ಆರಂಭದ ಓದು. ವಿವಿಧ ಮಠಗಳ ಗುರುಗಳಿಂದ, ದಾನಿಗಳಿಂದ ನೆರವು ಪಡೆದು ಜ್ಞಾನಗಿರಿಯನ್ನೇರಿದ್ದು ಇವರ ಸಾಹಸ. ಬೆಂಗಳೂರಿನ ಶ್ರೀ ಜಯಚಾಮರಾಜೇಂದ್ರ ಸಂಸ್ಕೃತ ಮಹಾವಿದ್ಯಾಲಯದಲ್ಲಿ 1951ರಲ್ಲಿ ಅಲಂಕಾರ ಶಾಸ್ತ್ರ ವಿದ್ವಾನ್ ಪದವಿ. 1952ರಲ್ಲಿ ಸಂಶೋಧನಾಲಯದ ಪ್ರವೇಶ.

ವೀರಮಾಹೇಶ್ವರಾಚಾರಸಂಗ್ರಹ, ಸೋಮನಾಥಭಾಷ್ಯಂ, ಷಡಕ್ಷರಿದೇವಕೃತ ಕವಿಕರ್ಣರಸಾಯನಂ, ಶಿವಭುಜಂಗಮಾಲಾಸ್ತೋತ್ರಂ, ತ್ರಿಷಷ್ಟಿ ಪುರಾತನ ಗಣ ಸ್ತೋತ್ರಂ–ಇವರ ಸಂಗ್ರಹಗಳು.

ಪಿ. ಮರಿಬಸವಾರಾಧ್ಯರು, ಡಾ॥ ಚಿದಾನಂದಮೂರ್ತಿ, ಪ್ರೊ॥ ವೃಷಭೇಂದ್ರ ಸ್ವಾಮಿ, ಡಾ॥ ಸಾ. ಶಿ. ಮರುಳಯ್ಯ. ಜಿ. ಎಸ್. ಪರಶಿವಮೂರ್ತಿ, ಇವರುಗಳು ಇವರಲ್ಲಿ ವ್ಯಾಸಂಗ ಮಾಡಿದವರು.

ನಾಡನ್ನು ಸುತ್ತಿ ಸಂಸ್ಕೃತಿ ಪ್ರಚಾರ, ಹಸ್ತಪ್ರತಿಗಳ ಸಂಗ್ರಹ ಮೆಚ್ಚುವಂತಹ ಕಾರ್ಯ. ವೇದ, ಆಗಮ, ಸಂಸ್ಕೃತ–ಕನ್ನಡ ಇವುಗಳಲ್ಲಿ ಬಲ್ಲಿದರು. ವೀರಶೈವ ಮುದ್ರಿತ ಅಮುದ್ರಿತ ಗ್ರಂಥಗಳ ಪೂರ್ಣಪರಿಚಯ ಹೊಂದಿದವರು. ನಿವೃತ್ತರಾಗಿ ಈಗ ತಿಪಟೂರಿನಲ್ಲಿ ನೆಲಸಿದ್ದಾರೆ.

**ಜಿ.ವಿ.ನಾ. :—** ಹುಟ್ಟೂರು ಗೂಳೂರು, ಬೆಳೆದದ್ದು ಚಿಕ್ಕನಾಯಕನಹಳ್ಳಿ, ಕಾರ್ಯಕ್ಷೇತ್ರ ಕನಕಪುರ, ಚಿಕ್ಕನಾಯಕನಹಳ್ಳಿ ಮತ್ತು ಮಾಯಸಂದ್ರ, ಸ್ವಾತಂತ್ರ್ಯ

ಹೋರಾಟ, ದೇಶೀಯ ಶಿಕ್ಷಣ, ಗಾಂಧೀ ವಿಚಾರಗಳು, ಸರ್ವೋದಯ ಸಿದ್ಧಾಂತ ಹಾಗೂ ಕಾರ್ಯಕ್ರಮಗಳು–ಇವೆಲ್ಲಾ ಜಿ. ವಿ. ನಾ. ಅವರ ಜೀವನದೊಂದಿಗೆ ನಿಕಟವರ್ತಿಗಳು. ಈ ದಿಕ್ಕಿನಲ್ಲಿ ಜಿ. ವಿ. ನಾ. ಅವರೊಬ್ಬ ಅಪೂರ್ವ ನಿದರ್ಶನ. ಶುದ್ಧ ಬಿಳಿಯ ಖಾದೀಧಾರಿ ಆದ ಇವರ ಬರವಣಿಗೆ ನೇರ, ಸ್ಪಷ್ಟ, ಅವರನಡೆ, ನುಡಿಗಳೂ ಅಷ್ಟೆ. ಅಕ್ಷರಗಳು ಕಾಗದದ ಮೇಲೆ ಮೂಡಿರುವ 'ಗಂಭೀರ, ಧೀರ' ನೋಟ ಆನಂದವುಂಟುಮಾಡುತ್ತದೆಂದ ಮೇಲೆ, ವಿಚಾರ ಅದಕ್ಕಿಂತ ಮಿಗಿಲು.

ಗಾಂಧೀ ಗ್ರಂಥಮಾಲೆಯಲ್ಲಿ ಉಪಸಂಪಾದಕರಾಗಿ ಪ್ರೊ॥ ಯಾಮುನಾಚಾರ್ಯರೊಂದಿಗೆ ಕೆಲಸ ಮಾಡಿದರು. ಸ್ವತಂತ್ರವಾಗಿ- ಮಹಾತ್ಮಾಗಾಂಧೀ, ವಿನೋಬಾ, ಶರಣರ ಸಂಗ, ಸಾಧನಪಥ, ನಾರಾಯಣಗುರು–ಇವುಗಳನ್ನೂ ರಚಿಸಿದ್ದಾರೆ. ವಿಶ್ವ ವಿದ್ಯಾಲಯಗಳಿಗಾಗಿ ಕೆಲವು ಪಠ್ಯ ಪುಸ್ತಕಗಳನ್ನು ಕನ್ನಡಿಸಿದ್ದಾರೆ. ಅಪ್ಪಾದೊರೈ ಅವರ 'ರಾಜಕೀಯ ಶಾಸ್ತ್ರ' ಮತ್ತು ಪಣಿಕ್ಕರ್ ಅವರ 'ಭಾರತೀಯ ಇತಿಹಾಸ ಸಮೀಕ್ಷೆ' ಇವು ಭಾಷಾಂತರದ ಕೆಲವು ಕೃತಿಗಳು.

ಬರೆಯುವ ಕಲೆಯನ್ನು ಹತ್ತಿರದವರಿಗೆ ಅಚ್ಚುಕಟ್ಟಾದಂತೆ ಕಲಿಸುವ ಆಸಕ್ತಿ ಇವರದು. 'ನೋಡು. ಈ ಪತ್ರಕ್ಕೆ ಇಲ್ಲಿ ಪೂರ್ಣವಿರಾಮ, ಇಲ್ಲಿ ಈ ಸಂಕೇತ...' ಎಂದು 1956ರಲ್ಲಿ ಈ ಲೇಖಕನಿಗೆ ಹೇಳಿದ್ದು ಇನ್ನೂ ನೆನಪಿದೆ. ಬರೆಯಲು ಒಪ್ಪಿಕೊಂಡ 'ಅವಧಿ'ಯನ್ನು ಚಾಚೂತಪ್ಪದ ಖ್ಯಾತಿ ಅವರದ್ದು.

"ನೋಡು–ಇಷ್ಟನ್ನು ಬರೆದು ಮುದ್ರಣಕ್ಕೆ ಕಳಿಸಬೇಕು, ನಾನೇ ಬರೆದರೆ ಹಾಯ್ ಎನಿಸುತ್ತದೆ, ಅಲ್ಲಲ್ಲಿ ದೋಷ ಬಂದರೆ, ಗ್ರಂಥವೂ ದೋಷಪೂರಿತವಾಗುತ್ತದೆ. ಅಂತಹ ಗ್ರಂಥ ಪಠ್ಯಪುಸ್ತಕವಾಗಿ ಆಗಲಿ, Reference ಪುಸ್ತಕವಾಗಿ–ಆಗಲಿ ಆಗಿ ಬಿಟ್ಟರೆ ಹೇಗೆ" ಇದು ಅವರು ಗ್ರಂಥಗಳ ಬಗೆಗೆ ತೋರುವ ಆಸಕ್ತಿ.

ಬರೆದಷ್ಟೂ ನೇರ, ಅಚ್ಚುಕಟ್ಟು. ಪುಸ್ತಕ, ಹಾಳೆ ಇವುಗಳನ್ನು ಮುರಿಯದ, ಮಡಿಸದ– 'ಇಸ್ತ್ರಿ' ಮಾಡಿದ ಹಾಗೆ ಇಡುವ ಕಲೆ ಅಪರೂಪ. ಶ್ರೀ.ನಂ.ಶ್ರೀ. ಅವರ ಬಗೆಗೆ ಈ ಮಾತೂ ಅನೇಕರು ತಿಳಿಸಿದ್ದಾರೆ.

**ಡಾ॥ ಸಾ. ಶಿ. ಮ :**— ಸಾಸಲು ಗ್ರಾಮದಲ್ಲಿ ಹುಟ್ಟಿಬೆಳೆದ ಸಾಸಲು ಶಿವರುದ್ರಯ್ಯ ಮರುಳಯ್ಯನವರು ಸರಳ ವ್ಯಕ್ತಿ. ತಿಪಟೂರು–ಮೈಸೂರುಗಳಲ್ಲಿ ವ್ಯಾಸಂಗ. ನಂತರ ಕಾಲೇಜು ಅಧ್ಯಾಪಕವೃತ್ತಿ. ಹುಟ್ಟೂರಿನ ಸುತ್ತಮುತ್ತಿನ ಬಗೆಗೆ ತುಂಬಾ ಕಾಳಜಿ. ಅದರ ಫಲವೇ 'ಕೆಂಗನಕಲ್ಲು' ಕವನಸಂಕಲನ, ಇದಕ್ಕೆ 1962ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ. 'ಕೆಳದಿಯ ಅರಸರ ಕಾಲದ ಸಾಹಿತ್ಯ, ಪ್ರೌಢ ಪ್ರಬಂಧಕ್ಕೆ ಕರ್ನಾಟಕ ವಿಶ್ವವಿದ್ಯಾಲಯದ ಪಿ.ಎಚ್‌ಡಿ ಪದವಿ. ಬರೆದಿರುವ ಕೃತಿಗಳು 20ಕ್ಕೂ ಹೆಚ್ಚು. ಕವನ, ಕಥೆ, ನಾಟಕ, ಕಾದಂಬರಿ, ವಿಮರ್ಶೆ, ಸಂಪಾದನಕೃತಿ, ಜೀವನಚರಿತ್ರೆ–ಎಲ್ಲಾ ಪ್ರಾಕಾರಗಳಲ್ಲೂ ಸಿದ್ಧಹಸ್ತ. ಶಿವತಾಂಡವ,

ಕೆಂಗನಕಲ್ಲು, ಘೋಷವತಿ, ವಿಪರ್ಯಾಸ–ಕವನಗಳು, 'ನೆಲದಸೊಗಡು' ಕಥೆ. ಹೇಮ ಕೂಟ, ಪುರುಷಸಿಂಹ– ಕಾದಂಬರಿಗಳು; ವಿಭೂತಿ ಪುರುಷರು, ಭಾರತರತ್ನ, ಮೂವರು ಕನ್ನಡ ಕಡುಗಲಿಗಳು–ಜೀವನ ಚರಿತ್ರೆಗಳು, ಭಾಸನ ಮಕ್ಕಳು–ವಿಮರ್ಶೆ, ಮರೀ ಬೇಡಿ, ವಿಜಯವಾತಾಪಿ, ಭಕ್ತಿಭಾವುಕಿ, ಕನ್ನಡ ಸ್ವಪ್ನವಾಸವದತ್ತ–ನಾಟಕಗಳು; ಶ್ರೀ ಗುರು ಮುರುಳಸಿದ್ದೇಶ್ವರ ಪುರಾಣ, ಬೆಟ್ಟದ ಸಿದ್ದೇಶ್ವರ ಪುರಾಣ–ಸಂಪಾದಿತ ಕೃತಿಗಳು, ಈಗ ಜ್ಞಾನಗಂಗೋತ್ರಿಯ ಎಂಟನೆಯ ಭಾಗಕ್ಕೆ ಪ್ರಧಾನ ಸಂಪಾದಕರು.

ಹುಟ್ಟೂರಿನ ಎಲ್ಲಾ ವರ್ಗದ ಜನರೊಂದಿಗೆ ಬೆರೆತು ಸಾಹಿತ್ಯ ಮೌಲ್ಯದ 'ನಾಟಕ' ಗಳಲ್ಲಿ ಅಭಿನಯ. ಎಚ್ಚಮನಾಯಕ ನಾಟಕದಲ್ಲಿ 'ಬುಡನ್‌ಶಾಸ್ತ್ರಿ', ಜಗಜ್ಯೋತಿ ಬಸವೇಶ್ವರದಲ್ಲಿ ಬಸವಣ್ಣ. ಯಾವ ಪಾತ್ರಬೇಕು, ಅದಕ್ಕೆ ಸಿದ್ಧ.

ಸಾಹಿತಿ, ನಟ, ಸರಸಿ ಡಾ॥ ಸಾ. ಶಿ. ಮ. ಕುವೆಂಪು ಕಾಲೇಜು ಚನ್ನಪಟ್ಟಣದಲ್ಲಿ ಪ್ರಿನ್ಸಿಪಾಲರೂ ಆಗಿದ್ದರು. ಸಿಂಗಪುರ, ಮಲೇಷಿಯಾ ಪ್ರವಾಸ, ಇದರ ಅನುಭವ ಅವರ ಆಕಾಶವಣೀಯಲ್ಲಿನ ಚಿಂತನದಲ್ಲಿ ಓತ ಪ್ರೋತ. ''ಏನ್ರಿ............ಅಗಾ ಯಾವಾಗ್ಬಂದ್ರಿ........ಇನ್ನೇನು........ರು ಚೆನ್ನಾಗಿದಾರಾ ನಮಸ್ಕಾರತಿಳಿಸ್ರಿ'' ಇಂತಹ ಆತ್ಮೀಯ ಮಾತು ಭೇಟಿಯಾದವರೊಂದಿಗೆ. ಸಾಹಿತ್ಯ ಗೋಷ್ಠಿಗಳಲ್ಲಿ ವಾಗ್ಧಾರೆ, ಜೋಗದಜಲಪಾತ, ಕಾವ್ಯ, ಕಾದಂಬರಿ–ಗಳ ಬಗೆಗೆ ಮೇಲ್ಮಟ್ಟದ ಉಪನ್ಯಾಸ, ಕವನ ಗಳಲ್ಲಿನ ವಿಡಂಬನೆ ಮೊನಚು. ''ನನಗಂತೂ ಮಲೆನಾಡು ಅಚ್ಚುಮೆಚ್ಚು... ಏಕೆನ್ನು ವಿರಾ....... ದುಷ್ಟಮೃಗಗಳಿಗೆ ದೌಷ್ಟ್ಯವೇ ಗೊತ್ತಿಲ್ಲ–ಎಲ್ಲವನ್ನು ಪೋಲೀಸ್ ಠಾಣೆಗೆ ಮಾರಿಕೊಂಡು ಸುಮ್ಮನೆ ಗಸ್ತುತಿರುಗುತ್ತಿವೆ. ಇಂತಹ ಹಲವು ನಿದರ್ಶನಗಳು.

ಕಲ್ಪವೃಕ್ಷದನಾಡಿನಲ್ಲಿ ಹುಟ್ಟಿದ ಅವರದು ಕೃತಜ್ಞತೆಯ ಸ್ವಭಾವ. ತನಗೆ ನೆರವಾದವರನ್ನು ಮನತುಂಬಿ ನೆನೆವ ಸೌಜನ್ಯ ಶೀಲರು.

**ಜೆ. ಎಸ್. ಪರಶಿವಮೂರ್ತಿ** :— ಊರು ಜಯಚಾಮರಾಜಪುರ. ತಂದೆ ಎನ್. ಕೆ. ಶಿವಪ್ಪಗೌಡರು. ಶ್ರೀಮಂತರು. ಶ್ರೀಮಂತಿಕೆ ಅವರ ವ್ಯಾಸಂಗಕ್ಕೆ ಮಾರಕ ವಾಗಲಿಲ್ಲ ಪೂರಕವಾಯಿತು. ಚಿಕ್ಕನಾಯಕನಹಳ್ಳಿ ತಿಪಟೂರು, ತುಮಕೂರು ಮೈಸೂರು– ವ್ಯಾಸಂಗ ಮಾಡಿದ ಊರುಗಳು. ಇಂಟರ್‌ನಲ್ಲಿ ವಿಜ್ಞಾನ ಕಲಿಕೆ, ನಂತರ ಕನ್ನಡ ಆನರ್ಸ್, ತದನಂತರ ಎಂ.ಎ, 1959ರಲ್ಲಿ ಉಪನ್ಯಾಸಕರು. ವಿದ್ಯಾರ್ಥಿಗಳಿಗೆ ಅಚ್ಚುಮೆಚ್ಚಿನ ಅಧ್ಯಾಪಕರು, ಉತ್ತಮವಾಗ್ಮಿಗಳು ವಿದ್ಯಾರ್ಥಿಗಳಾಗಿದ್ದಾಗಲೇ ಸಾಹಿತ್ಯ ಸೇವೆ ಕನ್ನಡ ಸಂಘಗಳ ಕಾರ್ಯದರ್ಶಿ, ಸಾಹಿತ್ಯ ಸಂಚಿಕೆಗಳು, ಪ್ರಬುದ್ಧಕರ್ನಾಟಕ, ಕನ್ನಡ ವಿಶ್ವಕೋಶ–ಇವುಗಳಲ್ಲಿ ಪ್ರಬಂಧಗಳನ್ನು ಪ್ರಕಟಿಸಿದ್ದಾರೆ. ವಿವಿಧ ವಿಷಯಗಳನ್ನು ಕುರಿತು ಆಕಾಶವಾಣಿಯಲ್ಲೂ ಮಾತನಾಡುವ ಕಲೆಗಾರರು. 1970ರಿಂದ ಅಂಚೆ ತೆರಪಿನ ಶಿಕ್ಷಣ ಸಂಸ್ಥೆಯಲ್ಲಿ ವಿವಿಧ ಹುದ್ದೆಗಳಲ್ಲಿದ್ದು, ಇದೀಗ ನಿರ್ದೇಶಕರೂ ಆಗಿದ್ದಾರೆ ಸಹಸ್ರಾರು ಸಂಖ್ಯೆ 'ವಿದ್ಯಾರ್ಥಿ'ಗಳಿಗೆ ನೆರವೀಯುವ ಸಂಸ್ಥೆಯ ಹೊಣೆ ಹೊತ್ತ ಅವರ

ಕೆಲಸದ ಹೊರೆ ಬಹಳ. ಇಷ್ಟೆಲ್ಲಾ ಜವಾಬ್ದಾರಿಯಿದ್ದರೂ ಸಾಹಿತ್ಯ ಚಟುವಟಿಕೆಯಲ್ಲಿ ನಿರತರಾಗಿದ್ದಾರೆ.

**ವಿ. ಎಚ್. ಮರಿದೇವರು:—** ವಡ್ಡರಹಳ್ಳಿ ಹೆಂಜೇಗೌಡ ಮರಿದೇವರು, ಸಿದ್ಧರಾಮನಗರದವರು, ಶ್ರೀಮಾಸ್ತಿಯವರು ಕಂದಾಯ ಇಲಾಖೆಯಲ್ಲಿದ್ದಾಗ 'ವಡ್ಡರಹಳ್ಳಿ' ಊರು 'ಸಿದ್ಧರಾಮನಗರ'ವಾಯಿತು. ಕಾರಣ ಆ ಊರಬಳಿ ಇರುವ ಗುಡ್ಡದಲ್ಲಿ ಸಿದ್ಧರಾಮ ದೇವಾಲಯ. ಆ ಹೆಸರೇ ವಡ್ಡರಹಳ್ಳಿಯನ್ನು ಸಿದ್ಧರಾಮನಗರ ಮಾಡಿಸಿದೆ. ಇವರೂ ಅಷ್ಟೇ. ಮರಿಸಿದ್ದಪ್ಪ ಮರಿದೇವರು ಆಗಿದ್ದಾರೆ. ಕಟ್ಟುಮಸ್ತಾದ ಆಳು. ತಾನು ನಡೆದದ್ದೇ ದಾರಿ. ಜೊತೆಗೆ ಕನ್ನಡದದೀಕ್ಷೆ, ಎಂ. ಎ (ರಾಜಕೀಯಶಾಸ್ತ್ರ) ಪರೀಕ್ಷೆಯಲ್ಲಿ ಮೊದಲಿಗೆ ಕನ್ನಡದಲ್ಲಿ ಉತ್ತರ. ಎಂ ಎಡ್‌ನಲ್ಲೂ ಅಷ್ಟೇ, ಅದಕ್ಕಾಗಿ ಅದರ ಮುಖ್ಯಸ್ಥರೊಂದಿಗೆ ಹೋರಾಟ. ಕಾನೂನು ಪದವಿಪರೀಕ್ಷೆಯಲ್ಲೂ ಕನ್ನಡದ ಬಳಕೆ. ಈ ಕನ್ನಡಾಭಿಮಾನ ಅಷ್ಟಕ್ಕೇನಿಲ್ಲದೆ, ಶಿಕ್ಷಣಕಾಲೇಜಿನ ಶಿಕ್ಷಣ ಶಾಸ್ತ್ರಕ್ಕೆ ಸಂಬಂಧಿಸಿದ ಎರಡು ಗ್ರಂಥಗಳನ್ನು ರಚಿಸಿ, ದೇವರಾಜ ಬಹದ್ದೂರರ ಪ್ರಶಸ್ತಿಯನ್ನು ಪಡೆದದ್ದು ಇವರ ಕ್ರಿಯಾಶೀಲ ವ್ಯಕ್ತಿತ್ವಕ್ಕೆ ನಿದರ್ಶನ. ಪಂಪನನ್ನೋ, ರನ್ನನನ್ನೋ ಕುವೆಂಪುರವರ ಕೃತಿಗಳನ್ನೋ ಓದುವಾಗ ಅವರ ಶೈಲಿ ಪ್ರಶಂಶನೀಯ, ಶಿಕ್ಷಣದಲ್ಲಿ ಕ್ರಾಂತಿಯ ದಾರಿತುಳಿಯುವ ಹಂಬಲ. ಶ್ರೀ ಸಿದ್ಧಗಂಗಾ ಶಿಕ್ಷಣ ಕಾಲೇಜಿನಲ್ಲಿ ಅಧ್ಯಾಪಕರಾಗಿರುವ ಇವರು 'ನಿವಾಸ ಆದರ್ಶ ಶಿಕ್ಷಣ ಸಂಸ್ಥೆ ಸ್ಥಾಪಿಸುವ' ಆಲೋಚನೆ ಹೊಂದಿದ್ದಾರೆ. ಬಿ.ಎ. ತರಗತಿಗಳ ಪಠ್ಯಪುಸ್ತಕಗಳನ್ನು ಕನ್ನಡದಲ್ಲಿ ರಚಿಸುವಯತ್ನ ಮಾಡುತ್ತಿದ್ದಾರೆ.

**ಡಾ|| ತೀ.ನಂ. ಶಂಕರನಾರಾಯಣ:—** ತೀನಂಶ್ರೀ ಅವರ ಹತ್ತಿರದ ಬಂಧುಗಳು. ಮೂವತ್ತರ ಹರೆಯದ ಇವರಿಗೆ ಒಳ್ಳೆಯ ಭವಿಷ್ಯವಿದೆ. ಜಾನಪದ ಸಾಹಿತ್ಯದತ್ತ ತುಂಬಾ ಒಲವು. ಮೂರ್ತಿಚಿಕ್ಕದು ಕೀರ್ತಿದೊಡ್ಡದು ಸಂಶೋಧನೆಯ ಬಗೆಗೆ ತೀವ್ರ ಆಸಕ್ತಿ. ತಾತ ತೀ ನಂ ಶ್ರೀ ಅವರ ದಾರಿಯನ್ನು ತುಳಿಯುತ್ತಿದ್ದಾರೆನ್ನಬಹುದು. ಗ್ರಾಮೀಣ 'ಗೊಲ್ಲಜನಾಂಗ' ಕುರಿತು ಪ್ರಬಂಧ ಇವರಿಗೆ ಡಾಕ್ಟರೇಟ್ ಪದವಿ ತಂದಿದೆ. ಭದ್ರಾ ಪ್ರಾಜೆಕ್ಟಿನಲ್ಲಿರುವ ಸ್ನಾತಕೋತ್ತರ ಕನ್ನಡ ವಿಭಾಗದಲ್ಲಿ ಅಧ್ಯಾಪಕರಾಗಿದ್ದಾರೆ. ಅನೇಕ ಸಾಹಿತ್ಯಗೋಷ್ಠಿಗಳಲ್ಲಿ ಪ್ರಬುದ್ಧ ಪ್ರಬಂಧಗಳನ್ನು ಮಂಡಿಸಿ ಮೆಚ್ಚುಗೆ ಗಳಿಸಿದ್ದಾರೆ.

**ಲಿಂಗದೇವರು ಹಳೆಮನೆ:—** ಊರು ಹಾಲುಗೊಣ. ಆರಂಭದ ಶಿಕ್ಷಣ ತಿಪಟೂರಿನಲ್ಲಿ. ತಮಿಳುನಾಡಿನ ಅಣ್ಣಾಮಲೈ ವಿಶ್ವವಿದ್ಯಾಲಯದ ಭಾಷಾ ವಿಜ್ಞಾನ ಎಂ.ಎ. ಮಾನಸಗಂಗೋತ್ರಿಯ ದಕ್ಷಿಣ ಪ್ರಾಂತಗಳ ಭಾಷಾ ಕೇಂದ್ರದಲ್ಲಿ ಅಧ್ಯಾಪಕರು. ವಿಮರ್ಶ ಲೇಖನಗಳು 'ಸಂಕ್ರಮಣ. ಸಾಕ್ಷಿ, ಶೂದ್ರ'ಗಳಲ್ಲಿ ಅಚ್ಚಾಗಿವೆ. 'Sty listic Analysis of a Vacana.' ಬೇಂದ್ರೆಯವರ ಪದ್ಯಗಳ ಬಗ್ಗೆ ಬರೆದ 'The

double Virtue of a Poetic word' ಎಂಬ ಲೇಖನಗಳು ಉತ್ತಮವಾಗಿವೆ ಬಂಡಾಯ ಸಾಹಿತ್ಯದ ಸಂಘಟನೆಯಲ್ಲಿ ಆಸಕ್ತಿ, ಮಾರ್ಕ್ಸ್‌ವಾದದ ಪ್ರಭಾವಿತ ಸಾಹಿತಿ. ಕವನಗಳನ್ನು ರಚಿಸಿದ್ದಾರೆ. ನಾಟಕದಲ್ಲಿಯೂ ಆಸಕ್ತಿ. 'ಸಮುದಾಯ' ಬಳಗದವರು ಎಂ. ಎಸ್. ಸತ್ಯು ಅವರೊಂದಿಗೆ ನಿರ್ದೇಶನ ಕೆಲಸವೂ ಸಾಗಿದೆ. ಮಾತುಕತೆ'– ಮಕ್ಕಳಿಗೆ ನೆರವಾಗುವ ಭಾಷಾವಿಜ್ಞಾನದ ಸರಳಕೃತಿ, ಷೇಕ್ಸ್‌ಪಿಯರನಪ್ರಣ್ಯ.– ಏಕಾಂಕ ಹಾಗೂ ತಮಿಳು, ತೆಲುಗಿನ ಕಥೆಗಳನ್ನು ಅನುವಾದ ಮಾಡಿ ಅಚ್ಚು ಮಾಡಿಸಿ ದ್ದಾರೆ. ಪಿ ಎಚ್‌ಡಿಗಾಗಿ ವ್ಯಾಸಂಗ ಮಾಡುತ್ತಿರುವ ಇವರು, ಭಾರತೀಯ ಸಮ ಕಾಲೀನ ವಿಚಾರಗಳಲ್ಲಿ ಆಸಕ್ತಿ ತಳೆದಿದ್ದಾರೆ. ಜಾತಿವಿಷಮತೆ, ರಾಜಕೀಯ ವರ್ಗ ಸಂಘರ್ಷ– ಇತ್ಯಾದಿಗಳ ಬಗೆಗೆ ಲೇಖನಿ ಹರಿದಿದೆ. ಇವರ ಹೆಸರು ಉತ್ತರ ಕರ್ನಾಟಕದ ಮಾದರಿಯಲ್ಲಿರುವುದು ಸೋಜಿಗ. ಮೈಸೂರಿನ ಕಡೆಯ ಮಾತಿನಲ್ಲಿ 'ಹಳೇಮನೆಲಿಂಗ ದೇವರು' ಇರಬಹುದು.

**ಇತರ ಲೇಖಕರು** :– ಎಂ. ವಿ. ನಾಗರಾಜು. ಕಾಲೇಜಿನ ಉಪನ್ಯಾಸಕರು, ಭಾರತ–ಭಾರತಿ ಐ. ಬಿ. ಎಚ್ ಪ್ರಕಾಶನದ ವ್ಯಕ್ತಿ ಚಿತ್ರಗಳನ್ನು ಬರೆದಿದ್ದಾರೆ, ಸಾಪ್ತಾಹಿಕ ಪುರವಣಿಯಲ್ಲಿ ಲೇಖನ ವ್ಯವಸಾಯ ಚೆನ್ನಾಗಿ ನಡೆದಿದೆ. ಹಿಂದಿಯ 'ದೀಕ್ಷಾ'ವನ್ನು ಜೊತೆಗೂಡಿ ಕನ್ನಡಿಸಿದ್ದಾರೆ. ಕೆಲವು ಸಂಚಿಕೆಗಳಲ್ಲಿ ಪ್ರಬಂಧಗಳನ್ನು ಬರೆದಿದ್ದಾರೆ.

ಸಿ. ಕೆ. ಪರಶುರಾಮಯ್ಯ–ರಾಜ್ಯದ ಸಂಸ್ಕೃತಿ ಮತ್ತು ಪ್ರವಾಸೋದ್ಯಮ ಇಲಾಖೆಯಲ್ಲಿದ್ದಾರೆ. ಸ್ಮರಣ ಸಂಚಿಕೆಗಳಲ್ಲಿ ಬರೆದಿದ್ದಾರೆ. ಜನಪದ ಸಾಹಿತ್ಯದತ್ತ ಒಲವು ಹೆಚ್ಚು. 'ಚೌಡಿಕೆ' ಬಗೆಗೆ ಹೆಚ್ಚು ತಿಳಿದಿದ್ದಾರೆ. ಆಕಾಶವಾಣಿಯಲ್ಲಿ ಈ ಕುರಿತ ಕಾರ್ಯಕ್ರಮವೊಂದು ಈಚೆಗೆ ಪ್ರಸಾರಗೊಂಡಿತು,

**ಶಿವಕುಮಾರ**– ಶೆಟ್ಟೀಕೆರೆಯವರು, ಕಾಲೇಜೊಂದರಲ್ಲಿ ಅಧ್ಯಾಪಕರು. 'ಹಿತ್ತಿಲ ಬಾಗಿಲ ಸನ್ನೆ'– ಇವರ ಕವನ ಸಂಗ್ರಹ.

ಶೆಟ್ಟೀಕೆರೆ ನಂಜುಂಡಯ್ಯ ದೊಡ್ಡಬಸವಯ್ಯ ಯಕ್ಷಗಾನದ ಬಗೆಗೆ ಆಸಕ್ತಿ ಹೊಂದಿ ರುವ ಕನ್ನಡ ಅಧ್ಯಾಪಕರು. ಮೈಸೂರು ವಿಶ್ವವಿದ್ಯಾಲಯದ ಪ್ರಕಟಣೆ 'ಆಯ್ದ ಕಥೆ ಗಳಲ್ಲಿ' ಒಂದು ಜಾನಪದ ಕಥೆ ಸಂಗ್ರಹಿಸಿದ್ದಾರೆ. 'ಸಮುದಾಯ' ನಾಟಕದ ಬಳಗದಲ್ಲಿ ನಟರು ಹೌದು.

ಎಂ. ಎಚ್. ಲಕ್ಷ್ಮೀನರಸಮ್ಮ ಅಧ್ಯಾಪಕಿ. ಗೋಷ್ಠಿಗಳಲ್ಲಿ ಪ್ರಬಂಧಗಳನ್ನು ಮಂಡಿಸಿದ್ದಾರೆ. 'ಕನ್ನಡ ಸಾಹಿತ್ಯಕ್ಕೆ ಮಹಿಳೆಯರ ಕೊಡುಗೆ' ಎಂಬ ಪ್ರಬಂಧವನ್ನು ಬರೆದಿದ್ದಾರೆ.

ಸುಶೀಲಾ ಕೃಷ್ಣರಾವ್– ಗೋಷ್ಠಿಗಳಲ್ಲಿ ಪ್ರಬಂಧಗಳನ್ನು ಬರೆದು ಓದಿರುವ, ಆಗಾಗ್ಗೆ ಸಂಚಿಕೆಗಳಲ್ಲಿ ಬರೆಯುವ ಹವ್ಯಾಸ ಇಟ್ಟುಕೊಂಡಿದ್ದಾರೆ, ದೇಶೀಯ ವಿದ್ಯಾ ಪೀಠದ ಪ್ರೌಢಶಾಲೆಯ ಪ್ರಧಾನರು.

ಶ್ರೀ ಎಸ್. ವಿ. ಚಂದ್ರಶೇಖರ್, ವಿದ್ಯಾರ್ಥಿಯಾಗಿದ್ದಾಗ ಕನ್ನಡ ಸಂಘಗಳಲ್ಲಿ ಕ್ರಿಯಾಶೀಲ ವ್ಯಕ್ತಿ. ರತ್ನಾಕರವರ್ಣಿಯ 'ಭರತೇಶ ವೈಭವ'ವನ್ನು ಸಂಗ್ರಹಿಸುವ ಕಾರ್ಯದಲ್ಲಿ ತೊಡಗಿದ್ದು ಪೂರ್ಣಗೊಂಡಿಲ್ಲ. ಬಿ.ಎಡ್ ರ್‍ಯಾಂಕ್ ವಿಜೇತ. ಇವರು ಉತ್ತಮ ಕನ್ನಡ ಅಧ್ಯಾಪಕರು. ಸಂಚಿಕೆಗಳಲ್ಲಿ ಉತ್ತಮ ವ್ಯಕ್ತಿ ಚಿತ್ರಗಳನ್ನು ಬರೆದಿದ್ದಾರೆ.

ಹುಳಿಯಾರಿನ ತಾರಾ ಸಾಗರಾಜ್ ದಂಪತಿಗಳು ಸಾಹಿತ್ಯ ಪ್ರಕಾಶನದಲ್ಲಿ ಆಸಕ್ತಿ ಹೊಂದಿದವರು. ಇವರ ಸೇವೆಯನ್ನು ಪುರಸ್ಕರಿಸಿ ತುಮಕೂರಿನ ಜಿಲ್ಲಾ ಸಾಹಿತ್ಯ ಸಮ್ಮೇಳನದಲ್ಲಿ ಗೌರವಿಸಲಾಯಿತು.

ಯಳನಡು ಗ್ರಾಮದ ನ. ಗೋವಿಂದರಾಯರು ಉತ್ತಮ ಗಮಕಿಗಳು. ಜಾನಪದ ಹಾಡುಗಳು. ಭಾವ ಪೂರ್ಣವಾಗಿ ಹೊಮ್ಮುತ್ತವೆ ಶ್ರೀಯುತರ ಕಂಠದಶ್ರೀಯಿಂದ. ಮೂವತ್ತು ವರ್ಷಗಳ ಹಿಂದೆಯೇ 'ಸೇವಾದಲ' ಪತ್ರಿಕೆಯ ಉಪ ಸಂಪಾದಕರಾಗಿದ್ದ ಇವರಿಗೆ ಪತ್ರಿಕಾ ವ್ಯವಸಾಯದ ಪರಿಚಯವೂ ಇದೆ. ನೆಹರೂ ವಿದ್ಯಾಶಾಲಾ ಪ್ರಾಚಾರ್ಯರಾಗಿ ಇದೀಗ ವಿಶ್ರಾಂತರಾಗಿದ್ದಾರೆ. ಶಿಕ್ಷಣಕ್ಕೆ ಸಂಬಂಧಿಸಿದ ಸಂಚಿಕೆಗಳಲ್ಲಿ ಕೆಲವು ಪ್ರಬಂಧಗಳನ್ನು ಬರೆದಿದ್ದಾರೆ.

ತರಬೇನಹಳ್ಳಿಯ ದಕ್ಷಿಣಾಮೂರ್ತಿ ಅವರು ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ ಇಲಾಖೆಯ ಅಧಿಕಾರಿಗಳು ಸಾಹಿತ್ಯದಲ್ಲಿ ಆಸಕ್ತಿ, ಕೆಲವು ಲೇಖನಗಳನ್ನು ಪ್ರಕಟಿಸಿದ್ದಾರೆ.

ಸಿಂಗಾಪುರದ ಎಸ್. ಸಿದ್ಧರಾಮಯ್ಯನವರು ಮಡಕೇರಿ ಕಾಲೇಜಿನ ಅಧ್ಯಾಪಕರು, ಇತ್ತೀಚೆಗೆ ಒಂದು ಕವನಸಂಕಲನ ಬಿಡುಗಡೆ ಮಾಡಿದ್ದಾರೆ.

ಅಸತೋಮಾ ಸದ್ಗಮಯ
ತಮಸೋಮಾ ಜ್ಯೋತಿರ್ಗಮಯ
ಮೃತ್ಯೋರ್ಮಾ ಅಮೃತಂಗಮಯ.

**ಉಪನಿಷತ್–**

## ಪಥದರ್ಶನ

ಮಾರ್ಗದರ್ಶಕ ಪಥಿಕನು ನಡೆದ ಪಥ ಅನಂತ ಮತ್ತು ಅವಿಸ್ಮರಣೀಯ. ಅದು ಸದಾ ಸುಸ್ಪಷ್ಟ, ಸ್ವಯಂ ಪ್ರಭಾಪೂರ್ಣ, ಆಕರ್ಷಕ, ಮನೋಹರ ಹಾಗೂ ಪರಿಶುದ್ಧ. ಆಕಾಶದ ಜ್ಯೋತಿಷ್ಪಥದಂತೆ, ಲೋಕದ ಪತಿತಪಾವನೆ ಗಂಗೆಯಂತೆ. ಅದರಲ್ಲಿ ಹೆಜ್ಜೆಯಿಡುವುದು ಪುಣ್ಯದ ಕೆಲಸ, ಅದರಲ್ಲಿ ಮುನ್ನಡೆಯುವುದು ಒಂದು ಸೌಭಾಗ್ಯ. ಅದರ ದರ್ಶನ ಭಾಗ್ಯವೂ ಸುಲಭ ಸಾಧ್ಯವಲ್ಲದ್ದು.

ತಾನು ತನ್ನನ್ನುದ್ಧರಿಸಿಕೊಳ್ಳುವುದು ಮಾನವ ಕರ್ತವ್ಯವೆಂದಾದರೆ ಮಹಾನ್ ಪಥದರ್ಶನ ಮಾಡುವುದೂ ಅನಿವಾರ್ಯಕಾರ್ಯ, ದರ್ಶಿಸಿ ಸ್ಪರ್ಶಿಸಿ ನಾಲ್ಕು ಮಾರಾದರೂ ನಡೆದಾಗ ಪಥದ ಮಹತ್ವ, ದಿವ್ಯತ್ವಗಳ ಅರಿವಾಗುತ್ತದೆ. ಅಗಲ ವಿಸ್ತಾರಗಳ ದರ್ಶನವಾಗಿ ಹೃದಯ ವಿಸ್ತಾರವೂ ಆಗುವುದು ಸಾಧ್ಯ. ಆದುದರಿಂದಲೇ ಪಥದರ್ಶನವು ಅವಶ್ಯ–ಅದಕ್ಕಾಗಿ ಕಾಯುವುದು ಕಾತರಿಸುವುದು ಒಂದು ಕಡೆಯ ಅಭೀಪ್ಸೆಯಾದರೆ ಅದನ್ನು ಕೈಯೆತ್ತಿ ತೋರುವುದು ಮತ್ತೊಂದೆಡೆಯ ಔದಾರ್ಯ. ಈ ಎರಡರ ಪಾರಸ್ಪರಿಕ ಸಂಬಂಧವೇ ಪಥದರ್ಶನದ ಪದಗುಚ್ಛ.

ಚಿರಂತನ.

ಸರ್ವೋದಯವೇ ಸ್ವಾತಂತ್ರ್ಯದ ಶ್ರೀತಂತ್ರ
**—ಕುವೆಂಪು.**

ಕರ್ನಾಟಕದಲ್ಲಿ

# ಗಾಂಧೀಜಿ ಅವರ ರಾಜಕೀಯ ಸಿದ್ಧಾಂತದ ಪ್ರಭಾವ

(ಸ್ವಾತಂತ್ರ್ಯನಂತರ)

**ಕೆ. ವಿ. ಶಂಕರಗೌಡ**

ಶ್ರೀಯುತ ಜಿ. ವಿ. ನಾರಾಯಣಮೂರ್ತಿ ನಿಷ್ಠಾವಂತ ಗಾಂಧಿ ಅನುಯಾಯಿಗಳು ಸ್ವಾತಂತ್ರ್ಯ ಹೋರಾಟಗಾರರು. ಗಾಂಧೀಜಿ ಹೇಳಿದಂತೆ ಗ್ರಾಮಾಂತರ ಪ್ರದೇಶದಲ್ಲಿ ಕೆಲಸಮಾಡಿದವರು. ಅನೇಕ ಶಿಕ್ಷಣ ಸಂಸ್ಥೆಗಳನ್ನು ನಿರ್ಮಿಸಿದವರು. ಕನ್ನಡದಲ್ಲಿ ಅಚ್ಚುಕಟ್ಟಾಗಿ ಗಾಂಧಿಕೃತಿಗಳು ಬರುವಂತೆ ದುಡಿದವರು. ಉತ್ತಮ ಬರಹಗಾರರು. ಸ್ವಾತಂತ್ರ್ಯ ಹೋರಾಟಕ್ಕೆ ಯಾವ ಪ್ರತಿಫಲವನ್ನು ಅಪೇಕ್ಷಿಸದೇ ಸಂಪೂರ್ಣವಾಗಿ ರಚನಾತ್ಮಕ ಕೆಲಸಗಳಿಗೆ ತಮ್ಮನ್ನು ತೆತ್ತುಕೊಂಡವರು. ಅಂತಹವರಿಗೆ ಅಭಿನಂದನೆ ಮಾಡುವುದೆಂದರೆ, ಗಾಂಧಿತತ್ವಗಳನ್ನು ಗೌರವಿಸಿದಂತೆಯೇ ಸರಿ. ಅಂತಹ ಮಹಾನ್ ವ್ಯಕ್ತಿಗಳ ಅವಶ್ಯಕತೆ ಹಿಂದಿಗಿಂತ ಇಂದು ಹೆಚ್ಚಾಗಿರುವುದರಿಂದ ಈ ಕೆಲಸ ಅರ್ಥ ಪೂರ್ಣವೆನಿಸಿದೆ.

ಯಾವುದೇ ದೇಶವಾಗಲಿ ತನ್ನ ನೆಲದ ಜಾಯಮಾನಕ್ಕನುಗುಣವಾದ ಸರ್ಕಾರ ಹೊಂದಿರುತ್ತದೆ. ಆದಿವಾಸಿಗಳಲ್ಲೂ ಇಂತಹ ವ್ಯವಸ್ಥೆಯನ್ನು ಕಾಣಬಹುದಾಗಿದೆ. ಪ್ರಾಚೀನ ಕಾಲದಲ್ಲೇ ಗ್ರೀಕ್, ರೋಮನ್, ಚೀಣಾ, ಭಾರತ ಮುಂತಾದ ದೇಶಗಳು ಉತ್ತಮ ಪದ್ಧತಿಯ ಜನಹಿತ ಸರ್ಕಾರದ ವ್ಯವಸ್ಥೆಯನ್ನು ಹೊಂದಿದ್ದವು. ಇಲ್ಲಿದ್ದ ದ್ರಾವಿಡರಾಗಲಿ ಅಥವಾ ಹೊರಗಿನಿಂದ ಬಂದ ಆರ್ಯರಾಗಲಿ ಸಾಂಸ್ಕೃತಿಕವಾಗಿ ಹಿಂದೆ ಉಳಿದಿರಲಿಲ್ಲ. ಇಬ್ಬರಲ್ಲೂ ಪರಸ್ಪರ ಪೂರಕ ಅಂಶಗಳು ಅನೇಕವಿದ್ದವು. ಕೆಲವು ಕಾಲ ದಲ್ಲಿ ಅವುಗಳ ಸಮನ್ವಯ ಕಾಣುವಂತಾಯಿತು. ವೇದಗಳ ಕಾಲದನಂತರ ಅನೇಕ ಗಣರಾಜ್ಯಗಳ ಉತ್ತಮ ಆಳ್ವಿಕೆಯನ್ನು ಕಾಣಬಹುದಾಗಿದೆ. ನಂದನರ ನಂತರ ಮೌರ್ಯರ ಕಾಲದಲ್ಲಂತೂ ಅತ್ಯುತ್ತಮ ರಾಜಕೀಯ ಸಿದ್ಧಾಂತಗಳು ಹೊರಬಂದವು.

ಒಂದನೆಯ ಚಂದ್ರಗುಪ್ತನ ಕಾಲದಲ್ಲಿ ರಚಿತವಾದ ಚಾಣಕ್ಯನ 'ಅರ್ಥಶಾಸ್ತ್ರ' ಮುಂದಿನ ತಲೆಮಾರಿನವರಿಗೆ ರಾಜಕೀಯ ಸಿದ್ಧಾಂತದ ಕೈಪಿಡಿಯಾಯಿತು. 'ಅಶೋಕ' ನಂತಹ ಆದರ್ಶ ಚಕ್ರವರ್ತಿ 'ಸುಖೀರಾಜ್ಯ'ದ ಕನಸು ಕಂಡ. ಅಧಿಕಾರಕ್ಕಾಗಿ ಕಚ್ಚಾಡಿ, ಬಡಿದಾಡಿದ ಅನೇಕ ಸನ್ನಿವೇಶಗಳು ನಮಗೆ ದೊರೆತರೂ, ಸಾಮ್ರಾಜ್ಯದ ಸಾಮಾನ್ಯ ಪ್ರಜೆ

---

1. ಈ ಲೇಖನ ಸಿದ್ಧಪಡಿಸುವಲ್ಲಿ ಸಹಕರಿಸಿದ ಶ್ರೀ ಎಲ್. ನಾರಾಯಣ ಅವರಿಗೆ ಕೃತಜ್ಞತೆಗಳು.

ಸಂತುಷ್ಟನಾಗಿದ್ದನೆಂದೇ ಹೇಳಬಹುದು. ಗ್ರಾಮಘಟಕಗಳ ಕಾರ್ಯವಂತೂ ಇಂದಿನ ವರನ್ನು ಸಹ ಅಚ್ಚರಿಗೊಳಿಸುತ್ತದೆ. ಆದರೆ ಮುಸ್ಲಿಂ ಆಕ್ರಮಣ ಹಾಗೂ ಜನತೆಯ ಸಂಪ್ರದಾಯಶರಣತೆಯ ಮನೋಭಾವದಿಂದ ನಮ್ಮ ಚಿಂತನಾಪ್ರವಾಹ ಮಡುವಿನ ನೀರಾಗಿ, ಕೊಳೆತು ನಾರುವಂತಾಯಿತು. ವ್ಯಾಪಾರಿಗಳಾಗಿ ಬಂದ ಬ್ರಿಟಿಷರು ಕಾಲ ಕ್ರಮದಲ್ಲಿ ಸಾಮ್ರಾಜ್ಯದಾಹಿಗಳಾಗಿ, ಜನತೆಯನ್ನು ಗುಲಾಮರನ್ನಾಗಿಸಿದರು. ಪಾಚಿಯನ್ನು ಸರಿಸಿ ಶುದ್ಧನೀರನ್ನು ಕಾಣುವ ಪ್ರಯತ್ನ ಪಾಶ್ಚಾತ್ಯ ಶಿಕ್ಷಣದ ದೆಸೆಯಿಂದ ಒದಗಿತು. ಸಿಪಾಯಿಗಳ ಹೋರಾಟದನಂತರ, ಜನತೆಯಲ್ಲಿ ಸ್ವಾತಂತ್ರ್ಯದಾಹ ಹೆಚ್ಚಿತು. ಕಾಂಗ್ರೆಸ್ ಸಂಸ್ಥೆ ಜನ್ಮತಾಳಿತು. ಪ್ರಾರಂಭದಲ್ಲಿ ಝರಿಯಾಗಿದ್ದ ಕಾಂಗ್ರೆಸ್ ಕಾಲಕ್ರಮದಲ್ಲಿ ತೊರೆಯಾಗಿ, ಗಾಂಧಿನಾಯಕತ್ವ ಪಡೆದನಂತರ ಪ್ರವಾಹವಾಯಿತು. ಕಾಂಗ್ರೆಸ್ ಸಂಸ್ಥೆಗೆ ಗಾಂಧಿ ಅವರ ಪ್ರವೇಶವನ್ನು ಕುರಿತು ಜವಹರಲಾಲ್ ನೆಹರು ಅವರು ಹೀಗೆ ಹೇಳುತ್ತಾರೆ. ''ನಿಶ್ಚೇತನ ದೇಹಕ್ಕೆ ಜೀವದುಸಿರು ಕೊಟ್ಟು ಅಂಗಾಂಗಗಳಿಗೆ ಚಲನಶಕ್ತಿ ಕೊಡುವ ಶುಭ್ರಗಾಳಿಯಂತೆ ಕತ್ತಲೆ ಗುಡಿಯೊಳಗೆ ತೂರಿ ಬಂದು ನಮ್ಮ ಕಣ್ಣಿನ ಪೊರೆ ತೆಗೆದ ಬೆಳಕಿನ ಕಿರಣದಂತೆ, ಅನೇಕ ಚೇತನಗಳನ್ನರಳಿಸಿ ಜನಮನವನ್ನು ಅಲ್ಲೋಲಕಲ್ಲೋಲ ಮಾಡಿದ ಬಿರುಗಾಳಿಯಂತೆ ಗಾಂಧೀಜಿ ಭಾರತದ ರಾಜಕೀಯದಲ್ಲಿ ಪ್ರವೇಶ ಮಾಡಿದರು.'' ಪ್ರಾರಂಭದಲ್ಲಿ ಕಾಂಗ್ರೆಸ್ ನಿರ್ಣಯ ಮಂಡಿಸಿ,ಸರ್ಕಾರವನ್ನು ಪ್ರಾರ್ಥಿಸುವ ನಿರ್ಜೀವ ಪಕ್ಷವಾಗಿತ್ತು. ಗಾಂಧೀಜಿಯಿಂದ ಅದು ಬದಲಾಗಿ ಅದು ಸತ್ಯ, ಅಹಿಂಸೆಗಳ ಪ್ರತಿಪಾದಿತ ಸಂಸ್ಥೆಯಾಗಿ ಪರಿವರ್ತನೆಗೊಂಡು, ಸಮರ್ಪಕವಾಗಿ 'ಸತ್ಯಾಗ್ರಹ' ನಡೆಸುವ ಸಂಸ್ಥೆಯಾಯಿತು. ಹೀಗಾಗಿ ಗಾಂಧೀಜಿ ಸ್ವಯಂ ಹೋರಾಟಗಾರರಾಗಿ, ಸಮಾಜಸೇವಕರಾಗಿ ದಾರ್ಶನಿಕರಾಗಿ ಅನುಪಮ ಸ್ಥಾನ ಪಡೆದಿದ್ದಾರೆ. ಅವರು ಭಾರತೀಯ ಸಂಸ್ಕೃತಿಯ ಹಿನ್ನೆಲೆ ಮತ್ತು ಪಾಶ್ಚಾತ್ಯ ಶಿಕ್ಷಣದ ಉತ್ತಮ ಪರಿಜ್ಞಾನಗಳಿಂದ ಆದರ್ಶ ರಾಜಕೀಯ ಸಿದ್ಧಾಂತ ನಿರೂಪಿಸಿದರು. ಕೇವಲ ಬೋಧನಾಪ್ರಿಯರಾಗದೆ, ಆಚರಣಶೀಲರಾದದ್ದು ಗಾಂಧಿ ವೈಶಿಷ್ಟ್ಯ. ಅಧಿಕಾರಕ್ಕಾಗಿ ಆಸೆಪಡದೆ ಗಾಂಧಿ ನಡೆಸಿದ ಹೋರಾಟ ಎಲ್ಲರಿಗೂ ಆದರ್ಶಪ್ರಾಯವಾದುದು. ಇಷ್ಟಾದರೂ ಗಾಂಧೀಜಿ ''ನನ್ನಿಂದ ಯಾವ ಸಿದ್ಧಾಂತವೂ ಪ್ರತಿಪಾದಿತವಾಗಿಲ್ಲ. ಇತರರ ಪ್ರಯೋಜನಕ್ಕಾಗಿ ನಾನು ಯಾವ ತತ್ವವನ್ನೂ ಬಿಟ್ಟಿಲ್ಲ. ನನಗೆ ತೋರಿದ ರೀತಿಯಲ್ಲಿ ಸತ್ಯಾಂಶಗಳೇನೆಂಬುದನ್ನು ನನ್ನ ದೈನಂದಿನ ಜೀವನದಲ್ಲಿ ಕಂಡುಹಿಡಿದಿರುವೆನು ಮತ್ತು ಜೀವನದ ಸಮಸ್ಯೆಗಳನ್ನು ಬಗೆಹರಿಸಲು ಪ್ರಯತ್ನಿಸಿರುವೆನು. ನನ್ನ ಅಭಿಪ್ರಾಯಗಳು ನಿರ್ದಿಷ್ಟವಾದವುಗಳಲ್ಲ. ಬದಲಾಯಿಸುವ ಸಂದರ್ಭಗಳು ಒದಗಿದಾಗ ಬದಲಾಯಿಸಿರುವೆನು'' ಎಂದಿದ್ದಾರೆ. ಗಾಂಧಿ ಮಾನವ ವರ್ಗವನ್ನು ಪ್ರೀತಿಸುವಂತೆ ಮತ್ತಾವ ನಾಯಕನೂ ಪ್ರೀತಿಸಲಿಲ್ಲ. ಅವರ ಕಣಕಣದಲ್ಲೂ ಮಾನವವರ್ಗದ ಬಗ್ಗೆ ಅಪಾರ ಪ್ರೀತಿಯನ್ನು ಕಾಣಬಹುದಾಗಿದೆ. ಹೀಗಾಗಿ ಅದಮ್ಯ ಮಾನವ ಪ್ರೀತಿ, ವ್ಯಾಪಕವಾದ ಅಧ್ಯಯನ, ಪೂರ್ವಾಗ್ರಹ ರಹಿತವಾದ ಬುದ್ಧಿ, ಹಳತು ಹೊಸತುಗಳ ಸಮನ್ವಯ ಶಕ್ತಿ

ವಾಸ್ತವಿಕಪ್ರಜ್ಞೆ, ಮುಂತಾದ ಗುಣಗಳುಳ್ಳ ಗಾಂಧೀಜಿ ಭಾರತಕ್ಕೆ ಮಾತ್ರವಲ್ಲ, ವಿಶ್ವಕ್ಕೆ ವಿನೂತನವಾದ ಹೊಸ ರಾಜಕೀಯ ಸಿದ್ಧಾಂತವನ್ನು ರೂಪಿಸಿದರು. "ಅವರು ತೋರಿದ ಕೆಲಸ ರಾಜಕೀಯ ಸ್ವಾತಂತ್ರ್ಯ ಸಾಧನೆ ಮಾತ್ರವಲ್ಲ, ಸತ್ಯ ಮತ್ತು ಅಹಿಂಸೆಗಳ ಅಡಿಪಾಯದ ಮೇಲೆ ಸಮಾನತಾವಾದದ ಆಧಾರದ ಮೇಲೆ ನಿಂತ ಸಮಾಜವ್ಯವಸ್ಥೆ" ಎಂದು ಡಾ. ಬಾಬುರಾಜೇಂದ್ರ ಪ್ರಸಾದ್ ಬರೆಯುತ್ತಾರೆ. ಗಾಂಧೀಜಿ ತಾವು ತಂದ ತತ್ವಗಳನ್ನು ಅನುಷ್ಠಾನಗೊಳಿಸಿದ ಆದರ್ಶಪುರುಷರೆಂದೂ, ಯುಗಪುರುಷರೆಂದೂ ಹೊಸ ತತ್ವಗಳ ನಾಯಕರೆಂದೂ ಅನೇಕರು ಪ್ರಶಂಶಿಸಿಸುವುದುಂಟು.

ಗಾಂಧೀಜಿ ರಾಜಕೀಯ ಸಿದ್ಧಾಂತ ಕ್ಲಿಷ್ಟತೆಯ ಗೂಡಲ್ಲ, ಕಲುಷತೆಯ ಬೀಡಲ್ಲ. ಅದು ಸತ್ಯ ಅಹಿಂಸೆಗಳೊಡನೆ ಬಿಡಿಸಲಾಗದಷ್ಟು ಘನವಾಗಿ ಹೆಣೆದುಕೊಂಡಿರುವ ಸರಳ ಮಾರ್ಗ. ಗಾಂಧೀಜಿ ಗೋಖಲೆ ಅವರ "ರಾಜಕೀಯ ಆಧ್ಯಾತ್ಮೀಕರಣ" ತತ್ವವನ್ನು ಆಗುಗೊಳಿಸಿದ ವ್ಯಕ್ತಿ. ರಾಜನೀತಿಗೂ ಧರ್ಮಕ್ಕೂ ಯಾವ ಸಂಬಂಧವೂ ಇಲ್ಲವೆನ್ನುವವರಿಗೆ ಧರ್ಮ ಎಂದರೆ ಏನೆಂಬುದು ತಿಳಿಯದೆಂದೂ ಗಾಂಧಿ ಹೇಳುತ್ತಾರೆ. ಧ್ಯೇಯ ಮಾತ್ರ ಶುದ್ಧವಿದ್ದರೆ ಸಾಲದು, ಮಾರ್ಗಸಹ ಶುದ್ಧವಾಗಿರಬೇಕು. ಭಾರತ ಸ್ವತಂತ್ರವಾದೆ ಬಾಳುವುದಕ್ಕಿಂತ ಮಡಿಯುವುದೇ ಲೇಸೆಂಬುದು ಗಾಂಧೀಜಿ ಅಭಿಪ್ರಾಯ. ಹತ್ತು ಜನರ ಕೈಗೆ ಅಧಿಕಾರ ಬಂದಾಗ ಮಾತ್ರ ನಮಗೆ ನಿಜವಾದ ಸ್ವರಾಜ್ಯ ದೊರಕಿತೆನ್ನಬಹುದೆಂದೂ ಅವರು ಹೇಳುತ್ತಿದ್ದರು. ಅದು ಯಾವ ರೀತಿಯೆಂಬುದನ್ನು ಸಹ ಯೋಚಿಸಿದ್ದರು. "ರಾಜಕೀಯ ಸ್ವಾತಂತ್ರ್ಯ ಎಂದರೆ ಬ್ರಿಟಿಷ್ ಪಾರ್ಲಿಮೆಂಟ್. ರಷಿಯಾದ ಸೋವಿಯತ್ ಆಡಳಿತ, ಇಟಲಿಯ ಫ್ಯಾಸಿಸ್ಟ್ ಅಥವಾ ಜರ್ಮನಿಯ ನಾಜಿ ಪ್ರಭುತ್ವಗಳ ಅನುಕರಣ ನನ್ನ ಅಭಿಪ್ರಾಯವಲ್ಲ. ಅವರ ಪ್ರತಿಭೆಗೆ ಅವರಪದ್ಧತಿ, ನಮಗೆ ತಕ್ಕಂತೆ ನಮ್ಮದು ಇರಬೇಕು" ರಾಜಕೀಯ ವಿಮೋಚನೆಯ ಗುರಿ ಜನತೆಯ ಜಾಗೃತಿಯಾಗಿರಬೇಕು, ನಮ್ಮ ರಾಜಕೀಯ ವ್ಯವಸ್ಥೆಯಲ್ಲಿ ವ್ಯಕ್ತಿಗೆ ಪ್ರಾಧಾನ್ಯತೆ ಇರಬೇಕೆಂಬುದು ಅವರ ಧ್ಯೇಯ 'ಜನತೆಯಲ್ಲಿ ಜಾಗೃತಿ ಬೆಳೆದು, ಸರ್ಕಾರದ ಹಸ್ತಕ್ಷೇಪವಿಲ್ಲದೆ, ಜನತೆಯ ಸ್ವಸಾಮರ್ಥ್ಯದಿಂದ ಸ್ವಾವಲಂಬಿಗಳಾಗಿ ತಮ್ಮ ಜೀವನ ಕಾರ್ಯ ನಿರ್ವಹಿಸುವುದೇ ಗಾಂಧೀಜಿ ಅವರ ಸ್ವರಾಜ್ಯದ ಕಲ್ಪನೆಯಾಗಿತ್ತು. ಮತ್ತೊಂದು ರೀತಿಯಲ್ಲಿ ಅವರ ಮಾತುಗಳನ್ನು ಉಲ್ಲೇಖಿಸುವುದಾದರೆ "ಸ್ವರಾಜ್ಯ ಎಂದರೆ ಸ್ವದೇಶಿಯಾಗಲಿ ಅಥವಾ ವಿದೇಶಿಯಾಗಲಿ ಸರ್ಕಾರದ ನಿಯಂತ್ರಣದಿಂದ ಮುಕ್ತರಾಗಿರುವುದು."

ಗಾಂಧೀಜಿ ಅವರಿಗೆ ಪಕ್ಷರಹಿತ ಪ್ರಜಾಪ್ರಭುತ್ವದಲ್ಲಿ ಹೆಚ್ಚು ನಂಬಿಕೆ. ವಿಧಾನಸಭೆಗಳ ಮೂಲಕವೇ ಅಧಿಕಾರ ಬರುತ್ತದೆಂಬುದನ್ನು ಅವರು ಭ್ರಾಂತಿ ಎಂದು ಕರೆದಿದ್ದಾರೆ. ಈ ಸಂದರ್ಭದಲ್ಲಿ ಜೆ. ಪಿ. ಅವರ ದಿನಚರಿಯಲ್ಲಿ ಬರುವ ಮತ್ತೊಂದು ಉಲ್ಲೇಖಾರ್ಹ "ಮಂತ್ರಿಮಂಡಲವೊಂದರ ರಾಜೀನಾಮೆ ಅಥವಾ ವಿಧಾನಸಭೆಯೊಂದರ ವಿಸರ್ಜನೆ ಮಾತ್ರದಿಂದಲೇ ಏನೂ ಸಾಧನೆಯಾಗಲಾರದು. ಅಗತ್ಯವಾಗಿ

ರುವುದು ಉತ್ತಮ ರಾಜಕೀಯ ವ್ಯವಸ್ಥೆ"[1] ಗಾಂಧೀಜಿ ಅವರ ಪ್ರಜಾಪ್ರಭುತ್ವ ಎಂಬುದು ಧರ್ಮ ಮತ್ತು ನೈತಿಕ ಧ್ಯೇಯಗಳಿಗೆ ಮನ್ನಣೆಕೊಟ್ಟ 'ಧಾರ್ಮಿಕ ಪ್ರಜಾ ಪ್ರಭುತ್ವ'ವಾಗಿತ್ತು. ನಿಜವಾದ ಪ್ರಜಾಪ್ರಭುತ್ವ ಅಥವಾ ಜನತಾಸ್ವರಾಜ್ಯ ಎಂದಿಗೂ ಅಸತ್ಯ-ಹಿಂಸೆಗಳಿಂದ ಬಾರದೆಂದೂ ಅವರು ಭಾವಿಸಿದ್ದರು. ಗಾಂಧೀಜಿ ಅವರ ಪ್ರಜಾ ಪ್ರಭುತ್ವ ಗ್ರಾಮ, ಹೋಬಳಿ, ತಾಲ್ಲೋಕ್, ಜಿಲ್ಲೆ, ಪ್ರಾಂತ ಮತ್ತು ರಾಷ್ಟ್ರ ಸರ್ಕಾರಗಳ ಸಂಯುಕ್ತ ರಾಜ್ಯವಾಗಿತ್ತು. ಗ್ರಾಮ ಪ್ರತಿನಿಧಿಗಳು ,ಜಿಲ್ಲೆಯ ಪ್ರತಿನಿಧಿಗಳನ್ನು, ಜಿಲ್ಲೆಯ ಪ್ರತಿನಿಧಿಗಳು ಪ್ರಾಂತ ಪ್ರತಿನಿಧಿಗಳನ್ನು. ಪ್ರಾಂತ ಪ್ರತಿನಿಧಿಗಳು ಕೇಂದ್ರ ಪ್ರತಿನಿಧಿಗಳನ್ನು ಚುನಾಯಿಸಬೇಕು ಗ್ರಾಮಗಳು ರಾಷ್ಟ್ರದ ರಾಜಕೀಯವನ್ನು ನಿರ್ಣಯಿ ಸುವ ಪ್ರಮುಖ ಘಟಕವಾಗಬೇಕು. ಗಾಂಧಿ ಅವರ ಮಾತುಗಳಿಗೆ ಜೆ. ಪಿ. ಹೀಗೆ ಬೆಂಬಲ ಸೂಚಿಸುತ್ತಾರೆ. "ಗ್ರಾಮಸ್ವರಾಜ್ಯ ಕಾರ್ಯಕ್ರಮ ನನ್ನ ಒಂದು ವರ್ಷದ ಅನುಭವ. ಈ ಕಾರ್ಯಕ್ರಮ ಕೇವಲ ಕಾಗದದ ಮೇಲೆ ಮೂಡದೆ ನಿಜವಾಗಿಯೂ ಜಾರಿಗೆ ಬಂದರೆ ಸ್ವತಃ ಇದೇ (ಗ್ರಾಮಸ್ವರಾಜ್ಯ) ಅಮೂಲ್ಯ ರಾಜಕೀಯ ಸಂಸ್ಥೆಯಾಗಬಲ್ಲದೆಂದು ನನಗೆ ಮನವರಿಕೆಯಾಗಿದೆ."

ಜೆ. ಪಿ. ತಮ್ಮ ಬದುಕಿನ ಸಂಧ್ಯಾಕಾಲದಲ್ಲಿ ಗಾಂಧಿ ಅವರ ಗ್ರಾಮಸ್ವರಾಜ್ಯ ಮಹತ್ವ ಕಂಡವರು. ಗಾಂಧಿ ತಮ್ಮ ಮರಣದ ಹಿಂದಿನ ದಿನ ಬರೆದ 'ಮರಣ ಶಾಸನ' ಅಥವಾ 'ಇಷ್ಟಾನುಪತ್ರ'ದಲ್ಲಿ ಗ್ರಾಮಸ್ವರಾಜ್ಯ ಧ್ಯೇಯವುಳ್ಳ "ಲೋಕ ಸೇವಕ ಸಂಘ"ದ ವಿಚಾರ ಹೇಳಿದ್ದಾರೆ. ಅಲ್ಲಿ ಗ್ರಾಮ ಪ್ರಬಲ ರಾಜಕೀಯ ಸಂಸ್ಥೆಯಾಗಬಲ್ಲು ದೆಂದೂ ಅವರು ಅಭಿಪ್ರಾಯಪಟ್ಟಿದ್ದಾರೆ.

ಗಾಂಧೀಜಿ ಪ್ರಜಾಪ್ರಭುತ್ವದ ಯಶಸ್ಸಿಗೆ ಹಕ್ಕು ಮತ್ತು ಕರ್ತವ್ಯದ ನಿಜವಾದ ಪ್ರಜ್ಞೆಯುಳ್ಳ ಆದರ್ಶ 'ಪ್ರಜೆ' ಇರಬೇಕೆಂದೂ ಹೇಳುತ್ತಾರೆ. ನಮ್ಮ ಕರ್ತವ್ಯ ಮಾಡು ತ್ತಿದ್ದರೆ ಹಕ್ಕುಗಳಿಗಾಗಿ ಬಹುಕಾಲ ಕಾಯಬೇಕಾಗಿಲ್ಲವೆಂಬುದು ಅವರ ಅಭಿಮತ. 'ಗಾಂಧೀಜಿ—ಆದರ್ಶ ಪ್ರಜೆ'ಯ ಮತ್ತೊಂದು ಗುಣವಾದ 'ಕರ್ತವ್ಯ'ದ ಬಗ್ಗೆ ಜೆ. ಪಿ. ಹೀಗೆ ಹೇಳುತ್ತಾರೆ. "ಪ್ರಜಾಪ್ರಭುತ್ವ ಎಂದರೆ ಜನತೆ ಸ್ಥಾಪಿಸಿದ ಸರ್ಕಾರ ಎಂದಷ್ಟೇ ಆಗಿರದೆ, ಅದರಲ್ಲಿ ತಮ್ಮ ಆಳ್ವಿಕೆಗಾರರು ಆಳಲು ಅನರ್ಹವೆನಿಸಿದಲ್ಲಿ ಅವರನ್ನು ಕೆಳಗಿಳಿಸುವ ಅಧಿಕಾರವೂ ಅಡಗಿರುವುದು ಎಂದು ಬಾಪು ಹೇಳುತ್ತಿದ್ದರು."[2]

ಸರಿಯಾದ ಶಿಕ್ಷಣವನ್ನು ಮತದಾರರಿಗೆ ಕೊಡದಿದ್ದರೆ ಪ್ರಜಾಪ್ರಭುತ್ವ ಮರಳಿನ ಮನೆಯಂತೆ ಎಂದೂ ಗಾಂಧೀಜಿ ಸ್ಪಷ್ಟಪಡಿಸಿದ್ದಾರೆ. ವಯಸ್ಕರ ಮತದಾನ ಅವಶ್ಯಕ

---

1. ಜೆ. ಪಿ. ಸೆರೆಮನೆ ದಿನಚರಿ; ಅನು: ಡಿ. ಎಸ್. ನಾಗಭೂಷಣ್ ಪುಟ. 50

2. ಜೆ, ಪಿ. ದಿನಚರಿ: ಪುಟ 163

ವೆಂದರೂ ಸಹ ನಿರಕ್ಷರಕುಕ್ಷಿ ಬೀಡಾದ ಈ ದೇಶದಲ್ಲಿ ಕುಟಿಲ ರಾಜಕಾರಣಿ ಮತಗಳನ್ನು ತನ್ನದೇ ಆದ ಮಾರ್ಗದಿಂದ ಕೊಂಡು ಪ್ರಜಾಪ್ರಭುತ್ವದ ಅವನತಿಗೆ ಸಹಾಯಕನಾಗಬಹುದೆಂದೂ ಅವರು ಊಹಿಸಿದ್ದರು. ಆದ ಕಾರಣ ವಯಸ್ಕರ ಮತದಾನ ದುರುಪಯೋಗವಾಗದ ರೀತಿಯಲ್ಲಿ ಸರಿಯಾದ ಗುರಾಣಿ ಒದಗಿಸಿಕೊಡಬೇಕೆಂಬುದು ಅವರ ಧ್ಯೇಯವಾಗಿತ್ತು.

ಪ್ರಜಾಪ್ರಭುತ್ವದಲ್ಲಿ ಪ್ರಜೆಗೆ ಸವಿನಯಶಾಸನ ಭಂಗದ (Civil disobedience) ಅಧಿಕಾರವಿರಬೇಕು. ಅದು ಮತದಾರರ ಅಧಿಕಾರದ ಕಣಜ ಎನ್ನುತ್ತಾರೆ. ಸವಿನಯ ಶಾಸನಭಂಗವೆಂದರೆ ಅನ್ಯಾಯಕರವಾದ ಶಾಸನಗಳನ್ನು ಶಾಸಕವರ್ಗದವರಿಗೆ ಮನವರಿಕೆಮಾಡಿಕೊಡುವುದು. ಏಳು ಸಾಮಾಜಿಕ ಮಹಾಪಾಪಗಳಲ್ಲಿ ಗಾಂಧಿ ಅವರು 'ತತ್ವರಹಿತ ರಾಜಕೀಯ' ಮೊದಲೆಂದು ಹೆಸರಿಸಿರುವುದು ಗಮನಾರ್ಹ ಅಂಶ. ಜೆ. ಪಿ. ಗಾಂಧಿ ಅವರ ರಾಜಕೀಯ ಸಿದ್ಧಾಂತವನ್ನು 'ಮೂರು' ಮಾತಿನಲ್ಲಿ ಅಡಕವಾಗಿಸಿದ್ದಾರೆ. 1) ಮೂಲಭೂತ ಸ್ವಾತಂತ್ರ್ಯ 2) ವಿಕೇಂದ್ರೀಕರಣ 3) ಸಾಮೂಹಿಕ ಜವಾಬ್ದಾರಿ.

ಗಾಂಧೀಜಿ ಅವರು "ಸತ್ಯಸಂಧರು, ನಿಸ್ಪೃಹಸೇವಾದೃಷ್ಟಿಯುಳ್ಳವರು, ಧಾರ್ಮಿಕಬುದ್ಧಿಯುಳ್ಳವರು, ತ್ಯಾಗಿಗಳು, ದೇಶಭಕ್ತರು ಪ್ರಜಾಪ್ರತಿನಿಧಿಗಳಾದರೆ ಮಾತ್ರ ಪ್ರಜಾಪ್ರಭುತ್ವ ಯಶಸ್ವಿಯಾಗುತ್ತೆಂದೂ" ಅಭಿಪ್ರಾಯಪಟ್ಟರು. ತಾವು ಅನುಸರಿಸದ ಯಾವುದೇ ತತ್ವವನ್ನು ಗಾಂಧೀಜಿ ತಮ್ಮ ಅನುಯಾಯಿಗಳಿಗೆ ಹೇಳಲಿಲ್ಲ. ಜನಹಿತವಾದುದನ್ನು ಬಿಟ್ಟು ಮತ್ತೊಂದನ್ನು ಯೋಚಿಸಲಿಲ್ಲ. ಸ್ಥಾನಮಾನಕ್ಕಾಗಿ ಹೋರಾಟ ಮಾಡಲಿಲ್ಲ. ಸಮೂಹದ ಹಿತಕ್ಕಾಗಿ ಮಾತ್ರ ಅವರು ದುಡಿಯುತ್ತಿದ್ದರು. 1946 ಸೆಪ್ಟಂಬರ್ 2ರಂದು ರೂಢಿಗೆ ಬಂದ ಜವಾಬ್ದಾರಿ ಸರ್ಕಾರಕ್ಕೆ ಗಾಂಧಿ ಕೊಟ್ಟ "ಆಜ್ಞೆಯು ವಿಧಿಬದ್ಧವಾದ ಸತ್ಯ" ಇಂದಿಗೂ ಚಿಂತಿಸಲು ಸಾಮಾಗ್ರಿ ಒದಗಿಸುತ್ತದೆ. ಇಂದಿನ ನಮ್ಮ ರಾಜಕಾರಣಿಗಳು ಸಾಗಬೇಕಾದ ದಿಕ್ಸೂಚಿ ಅದಾಗಿದೆ. "ಪ್ರಾರ್ಥನೆಯ ಕಾಲದಿಂದಲೂ ನಾನು ನಿಮ್ಮನ್ನು ಕುರಿತು ಯೋಚಿಸುತ್ತಿದ್ದೇನೆ. ಉಪ್ಪಿನ ತೆರಿಗೆಯನ್ನು ರದ್ದುಮಾಡಿ, ದಂಡಿ ಚಳುವಳಿಯನ್ನು ಜ್ಞಾಪಕದಲ್ಲಿಟ್ಟುಕೊಳ್ಳಿ, ಹಿಂದೂ ಮುಸ್ಲಿಂರಲ್ಲಿ ಐಕ್ಯತೆಯನ್ನುಂಟು ಮಾಡಿ, ಅಸ್ಪೃಶ್ಯತೆಯನ್ನು ತೊಡೆದುಹಾಕಿ, ಖಾದಿಗೆ ಉತ್ತೇಜನ ಕೊಡಿ."[1] ಇದಕ್ಕಾಗಿಯೇ ಅವರು ನಮ್ಮ ದೇಶದ 'ರಾಷ್ಟ್ರಪಿತ'ನೆಂದು ಗುರುತಿಸಲ್ಪಟ್ಟರು. ಪಾಶ್ಚಾತ್ಯದೇಶಗಳಲ್ಲಿ ಆಯಾಯ ರಾಷ್ಟ್ರನಾಯಕರಿಗೆ ಬೋಧಿಸಿದ ತತ್ವಗಳನ್ನು ಆಚರಣೆಗೆ ತಂದು, ಅವರಿಗೆ ಶ್ರದ್ಧಾಂಜಲಿ ಅರ್ಪಿಸುವುದುಂಟು. ಅಮೆರಿಕಾದ ಅಬ್ರಾಹಿಂಲಿಂಕನ್, ರಷ್ಯಯಾದ ಲೆನಿನ್, ಚೀಣಾದ ಮಾವೋ ಅವರುಗಳನ್ನು ಆ ದೇಶದ

1. ಪ್ಯಾರೆಲಾಲ್ ಅವರ ಮಹಾತ್ಮನ: ಅಂತಿಮ ಹಂತ; ಅನು: ಕೆ, ವಿ, ಶಂಕರಗೌಡ, ಪುಟ 6

ಜನ ಮರೆತಿಲ್ಲ. ಆದರೆ ನಮ್ಮಲ್ಲಿ ಅಕ್ಟೋಬರ್ ಎರಡರಂದು ಮಾತ್ರ ಗಾಂಧಿಯ ಬಗ್ಗೆ ಉದ್ದುದ್ದ ಭಾಷಣಗಳು ನಡೆದು, ಅವರ ತತ್ವಗಳು ಪ್ರದರ್ಶನಕ್ಕೆ ಮೀಸಲಾಗಿವೆ.

ಸ್ವಾತಂತ್ರ್ಯೋತ್ತರ ಕರ್ನಾಟಕದಲ್ಲಿ ಗಾಂಧಿ ರಾಜಕೀಯ ಸಿದ್ಧಾಂತದ ಪ್ರಭಾವವನ್ನು ಗುರುತಿಸುವುದು ಸಮುದ್ರದ ನಡುವಿದ್ದು ಸಿಹಿನೀರು ಅಪೇಕ್ಷಿಸಿದಂತೆಯೇ ಸರಿ. ಇಡೀ ಭಾರತವೇ ಗಾಂಧಿ ತತ್ವದಿಂದ ಅತ್ತ ಸರಿದಿರುವಾಗ, ಸಣ್ಣ ರಾಜ್ಯವೊಂದೇಕೆ ಅದಕ್ಕೆ ಅಪವಾದವಾಗುತ್ತದೆ ? ಗಾಂಧಿ ತಮ್ಮ ಉತ್ತರಾಧಿಕಾರಿಯೆಂದೂ ಘೋಷಿಸಿದ ನೆಹರು ಅವರೇ ಗಾಂಧಿ ಅವರ 'ಗ್ರಾಮಸ್ವರಾಜ್ಯ'ವನ್ನು ರೂಢಿಗೆ ತರುವುದರಲ್ಲಿ ವಿಫಲರಾದರು. ವಿಕೇಂದ್ರೀಕರಣವಂತೂ ಇನ್ನೂ ಸಾಧ್ಯವಾಗಿಲ್ಲ. ರಾಜಕಾರಣ ದೇಶ ಸೇವೆಯ ಬದಲು ಉದ್ಯೋಗವಾಯಿತು. ಬ್ರಿಟಿಷ್ ಪ್ರಭುಗಳಿಂದ ದೇಶದ ಜನ ನಮ್ಮ ಆಳುಪ್ರಭುಗಳಿಗೆ ಬದಲಾವಣೆಗೊಂಡರು. ಸ್ವಾತಂತ್ರ್ಯ ಬಂದ ತರುಣದಲ್ಲಿ ಗಾಂಧಿ ನಿಧನರಾದ ಆಜುಬಾಜಿನಲ್ಲಿ ರಾಜಕಾರಣ ತತ್ವ ಆಧಾರಿತವಾಗಿ ಕೆಲಸ ಮಾಡುತ್ತಿತ್ತು. ಅನಂತರ ಯಾರೋ ಕಾಂಗ್ರೆಸ್ ಸೇರಿ ಅಥವಾ ಕಾಂಗ್ರೆಸ್‌ನವರೇ ಅಧಿಕಾರಲಾಲಸೆಗೆ ಒಳಗಾಗಿ ದೇಶದ ಅಧಃಪತನಕ್ಕೆ ಕಾರಣರಾದರು. ಈ ಅಂಶವನ್ನು ಬಹು ಹಿಂದೆಯೇ ವಿರೋಧ ಪಕ್ಷದ ಧುರೀಣರಾಗಿದ್ದ ದಿ॥ ಶಂಕರಲಿಂಗೇಗೌಡ ಅವರು ವಿಧಾನಸಭೆಯಲ್ಲಿ ವ್ಯಂಗ್ಯವಾಗಿ ಹೀಗೆ ನುಡಿದಿದ್ದರು. ''ಇಂಗ್ಲೀಷ್‌ನವರು ಇಷ್ಟು ಬೇಗ ಸುಲಭವಾಗಿ ಭಾರತವನ್ನು ಬಿಟ್ಟು ಹೋಗುತ್ತಾರೆಂದು ನನಗೆ ತಿಳಿದಿದ್ದರೆ ನಾನು ಮೊದಲೇ ಕಾಂಗ್ರೆಸ್ ಸೇರಿ ಈ ಹೊತ್ತಿಗೆ ಮಂತ್ರಿಯಾಗುತ್ತಿದ್ದೆ.'' ಮುಂದೆ ಕಾಂಗ್ರೆಸ್ ಸಂಸ್ಥೆ ಜಡತ್ವ ಮತ್ತು ಸ್ವಾರ್ಥ ದೆಸೆಯಿಂದ 'ತನ್ನತನ' ಕಳೆದುಕೊಂಡು ಜೆ. ಪಿ. ಅವರಿಗೆ 'ನರಸತ್ತ ಸಂಸ್ಥೆ' ಎನಿಸಿತು. ಇಡೀ ದೇಶಕ್ಕೆ ಸ್ವಾತಂತ್ರ್ಯ ಬಂದರೆ ನಮ್ಮ ಜನಗಳೇ ನಾಯಕರಾಗುವವರು. ಮಹತ್ತರವಾದ್ದನ್ನು ಸಾಧಿಸುವರೆಂದೂ ಜನ ನಂಬಿದ್ದರು. ಭಾರಿ ನಿರಾಶೆ ಅವರ ಪಾಲಿಗಾಯಿತು. ನಿರಾಶೆಯಲ್ಲಿ ಜನತೆ ಗಾಂಧಿ ಹೇಳಿದ 'ಸವಿನಯ ಶಾಸನಭಂಗ'ಕ್ಕೆ ಮಾತ್ರ ಮನಕೊಡದೆ, ಒಂದು ಹೆಜ್ಜೆ ಮುಂದೆ ಹೋಗಲು ಯತ್ನಿಸಿದಾಗ ಜೆ. ಪಿ. ಹೀಗೆ ಆಲೋಚಿಸುತ್ತಾರೆ. ''ಭಾರತ ಕೂಡ ಮತ್ತೊಂದು ಪಾಕಿಸ್ತಾನವೋ ಅಥವಾ ಬಾಂಗ್ಲಾದೇಶವೋ ಆಗುತ್ತದೆಯೋ ಅದೆಂತಹ ಅಪಮಾನ ! ಈ ದೇಶಗಳಲ್ಲಿ ಒಬ್ಬ ಗಾಂಧೀ, ಒಬ್ಬ ನೆಹರು, ಒಬ್ಬ ಪಟೇಲ್, ಒಬ್ಬ ರಾಜೇಂದ್ರಪ್ರಸಾದ್, ಒಬ್ಬ ಮೌಲನಾ ಆಜಾದ್, ಒಬ್ಬ ರಾಜಗೋಪಾಲಾಚಾರಿ ಇರಲಿಲ್ಲ......''.

ಸ್ವಾತಂತ್ರ್ಯಾನಂತರ ಕರ್ನಾಟಕದಲ್ಲಿ ನಡೆದ 'ಮೈಸೂರು ಚಲೋ' ಮತ್ತು 'ಅರಮನೆ ಸತ್ಯಾಗ್ರಹ' ಅತ್ಯಂತ ಪ್ರಮುಖವಾದ ಘಟನೆ. ಗಾಂಧೀಜಿ ಮಾತಿನಂತೆ ಪ್ರಜಾಪ್ರಭುತ್ವಕ್ಕಾಗಿ ನಡೆದ ಹೋರಾಟವಿದು. 1946ರ ಸೆಪ್ಟೆಂಬರ್ 1ರಂದು ಚಳುವಳಿ ಪ್ರಾರಂಭವಾಯಿತು. ಪ್ರಥಮ ಸರ್ವಾಧಿಕಾರಿಯಾದ ಕೆ. ಸಿ ರೆಡ್ಡಿ ಅವರು. ಬೃಹತ್ ಜಾಥವನ್ನು ಉದ್ಘಾಟಿಸುತ್ತಾ ''ಮೈಸೂರು ಭಾರತದ ಗಣರಾಜ್ಯದಲ್ಲಿ ಸೇರ

ಬೇಕು. ಮೈಸೂರು ಅರಮನೆಯ ಮೇಲೆ ಅಶೋಕಚಕ್ರಧ್ವಜ ಹಾರಬೇಕು" ಎಂಧರು, ಕೆ. ಟಿ. ಭಾಷ್ಯಂ ಅವರು "ನಾವು ಧರ್ಮಯುದ್ಧವನ್ನು ಆರಂಭಿಸಿದ್ದೇವೆ, ಎಂದರು ಎಚ್. ಸಿ. ದಾಸಪ್ಪನವರ ವಿರುದ್ಧ ಮಂಡ್ಯದ ಸಕ್ಕರೆ ಕಾರ್ಮಿಕರು ಹರತಾಳ ಆಚರಿಸಿದರು. ಮದ್ರಾಸ್ ಕಾಂಗ್ರೆಸ್ ಪ್ರಾಂತ್ಯದ ಅಧ್ಯಕ್ಷ ಕೆ. ಕಾಮರಾಜ್, ಮುಂಬಯಿ ಪ್ರಾಂತದ ಕಾಂಗ್ರೆಸ್ ಅಧ್ಯಕ್ಷ ಎಸ್. ಕೆ. ಪಾಟೀಲ್ ಈ ಚಳುವಳಿಗೆ ಬೆಂಬಲ ನೀಡಿದರು. ಅಕ್ಟೋಬರ್ 11ರಂದು ಕಾಂಗ್ರೆಸ್ ನಾಯಕರಿಗೂ ಮಹಾರಾಜರಿಗೂ ಒಪ್ಪಂದವಾಯಿತು. ಅಕ್ಟೋಬರ್ 17ರಂದು ಬಿರ್ಲಾ ಭವನದಲ್ಲಿ ಸಂಜೆ ವೇಳೆಯಲ್ಲಿ ನಡೆಯುತ್ತಿದ್ದ ಪ್ರಾರ್ಥನಾಸಭೆಯಲ್ಲಿ ಮೈಸೂರಿನ ಬೆಳವಣಿಗೆಗಳನ್ನು ತಿಳಿದು ಮಹಾರಾಜರನ್ನೂ ಮತ್ತು ಮೈಸೂರಿನ ಕಾಂಗ್ರೆಸ್ ನಾಯಕರನ್ನೂ ಗಾಂಧೀಜಿ ಅಭಿನಂದಿಸಿದರು.

ಮೈಸೂರು ಸಂಸ್ಥಾನ ಮಾದರಿ ಸಂಸ್ಥಾನವೆಂದೂ ಇಡೀ ರಾಷ್ಟ್ರದಲ್ಲೇ ಹೆಸರು ಗಳಿಸಿತು. ಜನೋಪಕಾರಿ ಆಡಳಿತಗಾರರ ದೆಸೆಯಿಂದಾಗಿ ವ್ಯವಸಾಯ. ಕೈಗಾರಿಕೆ, ಶಿಕ್ಷಣ ಕ್ಷೇತ್ರದಲ್ಲಿ ಇದು ಅಸಾಧಾರಣ ಪ್ರಗತಿ ಸಾಧಿಸಿತ್ತು. 1947ರ ಜುಲೈನಲ್ಲಿ ಹೊರ ಬಂದ ಅಂದಾಜು ಪಟ್ಟಿಯ ಪ್ರಕಾರ 36 ಕೋಟಿ ನಿಧಿಯು ಕೆ. ಸಿ. ರೆಡ್ಡಿ ಸರ್ಕಾರದ ವಶಕ್ಕೆ ಕೊಡಲ್ಪಟ್ಟಿತು. ಆರ್ಥಿಕಸ್ಥಿತಿ ಸುಭದ್ರವಾಗಿದ್ದಿತು.[1]

1948ರಲ್ಲಿ ಕೆ.ಸಿ. ರೆಡ್ಡಿ ಅವರು ಪ್ರಥಮ ಮುಖ್ಯಮಂತ್ರಿಯಾದರು. ಪ್ರಾರಂಭದಲ್ಲಿ ಆರು ಸಚಿವರಿದ್ದರು. ಮೂರು ಕಾಂಗ್ರೆಸ್ ಮಂತ್ರಿಗಳು, ಇನ್ನುಳಿದ ಮೂವರು ಕಾಂಗ್ರೆಸ್ಸೇತರ ಮಂತ್ರಿಗಳು. ಅಂದರೆ ವಿರೋಧ ಪಕ್ಷದವರು. ವಿರೋಧಪಕ್ಷದವರಾಗಿದ್ದ ಡಿ. ಎಚ್. ಚಂದ್ರಶೇಖರಯ್ಯ ಅವರು ವಿದ್ಯಾಮಂತ್ರಿಗಳಾಗಿ ನಾನೂರು (400) ಪ್ರಾಥಮಿಕ ಶಾಲೆ ಹಾಗೂ ಅರವತ್ತು (60) ಮಾಧ್ಯಮಿಕ ಶಾಲೆಗಳನ್ನು ತೆರೆದರು. ಕಡ್ಡಾಯ ಶಿಕ್ಷಣ ನೀತಿ ಜಾರಿಗೆ ಬಂತು. ಕೆ.ಸಿ. ರೆಡ್ಡಿ ಸರ್ಕಾರ ಪಾನನಿರೋಧವನ್ನು ಜಾರಿಗೆ ತರುವ ಪ್ರಯತ್ನ ಮಾಡಿತು. ಮಾರ್ಗ ಅನುಸರಣೆಯಲ್ಲಿದ್ದ ದೋಷದಿಂದ ಅದು ವಿಫಲವಾಯಿತು. ಇಡೀ ಸಂಸ್ಥಾನದಲ್ಲಿ ಒಂದೇ ಸಲ ಪಾನನಿರೋಧ ಜಾರಿಗೆ ತರದೆ ಚಿತ್ರದುರ್ಗ, ತುಮಕೂರು, ಕೋಲಾರ ಮುಂತಾದವುಗಳಲ್ಲಿ ಮೊದಲು ತಂದು ಇತರ ಜಿಲ್ಲೆಗಳಲ್ಲಿ ಜನತೆಗೆ ನೀಡಿದ ರಿಯಾಯ್ತಿಯಿಂದಾಗಿ ಅತೃಪ್ತಿ ಹೆಚ್ಚಾಗಿ ಇಡೀ ನೀತಿಯೇ ವಿಫಲವಾಗುವಂತಾಯಿತು. ಈ ಸರ್ಕಾರದಲ್ಲಿ ಹೆಚ್. ಸಿ. ದಾಸಪ್ಪನವರು ಅರ್ಥಮಂತ್ರಿಗಳಾಗಿದ್ದರು. ಕೋಲಾರದ ಚಿನ್ನದ ಗಣಿಯ ಮೇಲೆ ರಾಜ್ಯ ವಿಧಿಸಿದ್ದ ಸುಂಕವನ್ನು ತೆಗೆದು ಮುಂದೆ ಅದು ರಾಜ್ಯದಿಂದ ಕೈತಪ್ಪಿಹೋಗುವಂತೆ ಮಾಡಿದರು. ಇದರಿಂದ ಆಗ ರಾಜ್ಯ ಬೊಕ್ಕಸಕ್ಕೆ ಒಂದು ಲಕ್ಷ ರೂಪಾಯಿ ನಷ್ಟವಾಯಿತು.

---

1. ಮೈಸೂರು ಆಗ ಮತ್ತು ಈಗ : ಜೆ. ಎಂ. ಇಮಾಂ. ಪು. 119.

ಕೆ. ಸಿ. ರೆಡ್ಡಿ ಅವರು ಸ್ವಯಂ ಸ್ವಾತಂತ್ರ್ಯ ಹೋರಾಟಗಾರರು. ಮೇಲಾಗಿ ರೈತರ ಕಷ್ಟಸುಖಗಳನ್ನು ತಿಳಿದವರು. ರೈತರಿಗೆ ಬಾವಿ ತೋಡಿಸಲು ಸರ್ಕಾರದಿಂದ ಅನೇಕ ರೀತಿಯ ಯೋಜನೆಗಳಿಂದ ಧನಸಹಾಯ ಒದಗಿಸಿದರು. ಸಂಗೇನಹಳ್ಳಿ, ತುಪ್ಪದಪಳ್ಳಿ ಕಾಮಗಾರಿ ಕೆಲಸಗಳು ಪೂರ್ಣಗೊಂಡಿದ್ದುದು ಬಹುಜನರಿಗೆ ಅನುಕೂಲ ವಾಯಿತು. ರಾಜ್ಯದ 1952-53ರ ಆರ್ಥಿಕ ಚಿತ್ರಣ ತುಂಬಾ ಆಸಕ್ತಿ ಪೂರ್ಣ ವಾದುದು.

| ವರ್ಷ | ಆದಾಯ | ಖರ್ಚು | ಉಳಿತಾಯ |
|---|---|---|---|
| 1952-53 | 18.78 ಕೋಟಿ | 18.03 ಕೋಟಿ | 0.75 ಕೋಟಿ |

ಗಾಂಧೀಜಿ ಬೋಧಿಸಿದ ಸರಳ ಸಚಿವಮಂಡಲ ಇವರದಾಗಿತ್ತು. ಇಲ್ಲೂ ಅಸಮಾಧಾನ, ವೈಯಕ್ತಿಕ ಬೆಳವಣಿಗೆಯ ಆಸಕ್ತಿ ಕಂಡುಬಂದರೂ ಯಾವುದೂ ಜನ ಹಿತಕ್ಕೆ ಧಕ್ಕೆ ಬರುತ್ತಿರಲಿಲ್ಲ. 1951-52ರಲ್ಲಿ ಕೆ. ಹನುಮಂತಯ್ಯನವರು ಕಾಂಗ್ರೆಸ್ ಅಧ್ಯಕ್ಷರಾಗಿದ್ದರು. 1952ರಲ್ಲಿ ಮೊದಲ ಮಹಾ ಚುನಾವಣೆ ನಡೆದು ಹಣದ ಪ್ರಭಾವ ಅಷ್ಟಾಗಿ ಕಾಣಬರಲಿಲ್ಲ. ಒಟ್ಟು 104 ಜನ ಶಾಸಕರಿದ್ದರು. 84 ಆಡಳಿತ ಪಕ್ಷ ಎಂದರೆ ಕಾಂಗ್ರೆಸ್ ಪಕ್ಷದವರು. 20 ವಿರೋಧ ಪಕ್ಷಕ್ಕೆ ಸೇರಿದವರು. (ಕೆ.ಯಂ.ಸಿ. ಮತ್ತು ಸ್ವತಂತ್ರ) ವಿರೋಧ ಪಕ್ಷದಿಂದ ಗೆದ್ದು ಒಂದು ಇಬ್ಬರು ಆಡಳಿತ ಪಕ್ಷಕ್ಕೆ ಸೇರಿದರು. ಪ್ರಜಾಪ್ರಭುತ್ವದ ತತ್ವಕ್ಕನುಗುಣವಾಗಿ ಕೆ. ಹನುಮಂತಯ್ಯ ಅವರು ಮುಖ್ಯಮಂತ್ರಿಗಳಾದರು. ಕೆಂಗಲ್ ಹನುಮಂತಯ್ಯನವರು ಉತ್ತಮ ಆಡಳಿತಗಾರರು. ಮೇಲಾಗಿ ಕಲೆ, ಸಾಹಿತ್ಯ, ಸಂಸ್ಕೃತಿಗಳಲ್ಲಿ ಆಸಕ್ತಿಯುಳ್ಳವರು. "ಅವರು ಆಡಳಿತ ಕಾರ್ಯದಲ್ಲಿ ಹೆಚ್ಚಿಗೆ ಪಾರ್ಟಿ ಮನೋಭಾವ ತೋರುತ್ತಿರಲಿಲ್ಲ. ಆದರೆ ಅವರು ಆಡಂಬರ ಮತ್ತು ಕಲಾಪ್ರಿಯರಾಗಿದ್ದರು" ಎಂಬ ಜೆ. ಎಂ. ಇಮಾಂ ಮಾತು ಉಲ್ಲೇಖಾರ್ಹ. ಇದೊಂದೇ ಕೆಂಗಲ್ ಹನುಮಂತಯ್ಯನವರ ಆಡಳಿತ ಚಿತ್ರವನ್ನು ನೀಡುತ್ತದೆ. ಇಲ್ಲೂ ಸಹ 'ಆರು' ಜನ ಸಚಿವರು. ಜೆ. ಎಂ. ಇಮಾಂ ವಿರೋಧ ಪಕ್ಷದ ನಾಯಕರಾಗಿ ಅತ್ಯುತ್ತಮ ಸೇವೆ ಸಲ್ಲಿಸಿದರು. ರಾಜ್ಯದ ಮುಖ್ಯಮಂತ್ರಿ ಹಾಗೂ ವಿರೋಧ ಪಕ್ಷದ ನಾಯಕರಿಬ್ಬರೂ ಜೊತೆ ಜೊತೆಯಲ್ಲೇ ಪ್ರವಾಸ ಕೈಗೊಂಡು ಉತ್ತಮ ಸಂಪ್ರದಾಯ ಹಾಕಿಕೊಟ್ಟರು. ಉತ್ತರ ಕರ್ನಾಟಕದಲ್ಲಿ ಇವರಿಬ್ಬರೂ ಒಟ್ಟಿಗೆ ಪ್ರಯಾಣ ಮಾಡಿ, ಏಕೀಕರಣದ ಬಗ್ಗೆ ಸಹಕಾರ ಮನೋಭಾವ ತೋರಿಸಿದರು.

'ಮಟ್ಟೆ ದೊಡ್ಡಿ ಪ್ರಕರಣ', ಟಿ. ಸಿದ್ದಲಿಂಗಯ್ಯನವರ ತಾಮ್ರತಂತಿ ಪ್ರಕರಣ, ವಿಧಾನಸೌಧದ ನಿರ್ಮಾಣ. ಮೊದಲಾದ ವಿಚಾರದಲ್ಲಿ ಕೆಂಗಲ್ ಹನುಮಂತಯ್ಯ ನವರು ತೀವ್ರ ಟೀಕೆ ಕೇಳಬೇಕಾಯಿತು. ಕೆಂಗಲ್ ಹನುಮಂತಯ್ಯ ಅವರ ಪ್ರಾಮಾಣಿಕ ಹೇಳಿಕೆಯನ್ನು ಪರಿಗಣಿಸಿ 'ಮಟ್ಟೆ ದೊಡ್ಡಿ ಪ್ರಕರಣ' ತನ್ನ ಇತಿಶ್ರೀ ಹಾಡಿತು. ಟಿ. ಸಿದ್ದಲಿಂಗಯ್ಯನವರು ತಮ್ಮ ರಾಜೀನಾಮೆ ಕೊಟ್ಟರು. ವಿಧಾನಸೌಧದ

ಅವಶ್ಯಕತೆ ಎಷ್ಟಿತ್ತೆಂಬುದು ಅಂದಿನ ಆಡಳಿತಗಾರರಿಗೆಲ್ಲಾ ತಿಳಿದ ವಿಷಯವಾಗಿದೆ. ಪ್ರಾರಂಭದಲ್ಲಿ ಐವತ್ತು ಲಕ್ಷ ರೂಪಾಯಿಗಳ ಯೋಜನೆಯಾದ ಇದು ತನ್ನ ಕೊನೆಯ ಹಂತದಲ್ಲಿ 'ಎರಡು ಕೋಟಿಗೆ' ತಲುಪಿತು. ಮಂತ್ರಿಮಂಡಲದ ಸಭೆ ನಡೆಯುವ ಕೊಠಡಿಗೆ ಗಂಧದ ಬಾಗಿಲು ಹಾಕಿರುವುದು ಕೆಂಗಲ್ ಹನುಮಂತಯ್ಯ ಅವರ ಆಡಂಬರ ಪ್ರಿಯತೆಯನ್ನು ತೋರಿಸುತ್ತದೆ. ಆದರೆ ಕೆಂಗಲ್ ಹನುಮಂತಯ್ಯ ಅವರಿಗೆ ರೈತ ಸಮಾಜದ ಮೇಲೆ ತುಂಬಾ ಆಸಕ್ತಿ ಇತ್ತು. ಸಂಸ್ಕೃತಿಯ ಶ್ರೇಷ್ಠ ಗುಣ ಅವರ ಹೃದಯದಲ್ಲಿತ್ತು. ಅವರು ಒಂದೊಂದು ಸಾರಿ ಹೀಗೆ ಹೇಳುತ್ತಿದ್ದರು. "ಇದರ (ವಿಧಾನಸೌಧ) ಉದ್ಘಾಟನೆಯ ಸಮಾರಂಭಕ್ಕಾಗಿ ಪ್ರತಿಯೊಂದು ಪಂಚಾಯಿತಿ ಯಿಂದಲೂ ಇಬ್ಬರು ರೈತರನ್ನು ಆಹ್ವಾನಿಸುತ್ತೇನೆ. ರಾಷ್ಟ್ರಪತಿಗಳ ಸಮ್ಮುಖದಲ್ಲಿ ಕನಿಷ್ಠ ಹತ್ತು ಸಾವಿರ ಜನರಿಗೆ ಮೇಲ್ಪಟ್ಟ ಆಹ್ವಾನಿತರಿಗೆ ಸುಖಭೋಜನ ಮಾಡಿಸು ತ್ತೇನೆ."

ವಿಧಾನಸಭೆಯಲ್ಲಿ ಕೆಂಗಲ್ ಹನುಮಂತಯ್ಯ ಅವರನ್ನು ತರಾಟೆಗೆ ತೆಗೆದುಕೊಳ್ಳು ತ್ತಿದ್ದ ವಿರೋಧಪಕ್ಷದ ನಾಯಕ ಜೆ. ಎಂ. ಇಮಾಂ ಈ ಸಂಬಂಧವಾಗಿ ಹೀಗೆನ್ನುತ್ತಾರೆ. "ಆಗ ನಾನು ವಿರೋಧಪಕ್ಷದ ನಾಯಕನಾಗಿದ್ದೆನು. ಶ್ರೀ ಹನುಮಂತಯ್ಯನವರ ಹಣಕಾಸಿನ ನೀತಿಯನ್ನು ತೀವ್ರವಾಗಿ ಖಂಡಿಸುತ್ತಿದ್ದೆ. ಆದರೆ ಇಂತಹ ಕಟ್ಟಡದ (ವಿಧಾನಸೌಧ) ಅವಶ್ಯಕತೆ ಇದೆ ಎಂದು ನನಗೆ ಮನವರಿಕೆಯಾಗಿತ್ತು."

ಹನುಮಂತಯ್ಯನವರಲ್ಲಿ ಆಡಂಬರ ಹೆಚ್ಚಾಗಿತ್ತು. ಆದರೆ ಜನಜಾಗೃತಿಯ ಬಗ್ಗೆ ಅವರಿಗೆ ವಿಶೇಷವಾದ ಕಾಳಜಿ. ಸಂಸ್ಕೃತಿಯ ಇಲಾಖೆಯ ಮೂಲಕ ಅನೇಕ ಉತ್ತಮ ಕೆಲಸ ಮಾಡಲು ಹೊರಟವರು. ಸ್ವಾರ್ಥಪೀಡಿತ ಕೆಲವು ಜನ ಹನುಮಂತಯ್ಯ ಅವರ ಅನೇಕಯೋಜನೆಗಳು ಕಾರ್ಯಗತವಾಗಲು ಬಿಡಲಿಲ್ಲ. ಗಾಂಧೀಜಿ ಹೇಳುತ್ತಿದ್ದ ರಚನಾತ್ಮಕ ಕೆಲಸಗಳ ಬಗ್ಗೆಕೆಂಗಲ್ ಹನುಮಂತಯ್ಯ ಸಾಕಷ್ಟು ಆಸಕ್ತಿ ವಹಿಸಿದ್ದರು. ಆದರೆ ವೈಯಕ್ತಿಕ ಸರಳತೆ ಆದರ್ಶ ನಾಯಕನಲ್ಲಿರಬೇಕಾದ ಅವಶ್ಯಕ ಗುಣವೆಂದೂ ಗಾಂಧಿ ಹೇಳುತ್ತಿದ್ದರು.

ಕಡಿದಾಳ್ ಮಂಜಪ್ಪ, ಎ. ಜಿ. ರಾಮಚಂದ್ರರಾಯರು ಮುಂತಾದವರ ಅಸಂತೃಪ್ತಿಯಿಂದಾಗಿ ಕೆಂಗಲ್ ಹನುಮಂತಯ್ಯ ಮುಖ್ಯಮಂತ್ರಿಪದವಿ ಕಳೆದು ಕೊಂಡರು. ಕಡಿದಾಳ್ ಮಂಜಪ್ಪ ಸ್ವಲ್ಪಕಾಲ ಮುಖ್ಯಮಂತ್ರಿಯಾದರು. ಏಕೀ ಕರಣದನಂತರ ವಿಶಾಲ ಮೈಸೂರು ರಾಜ್ಯದ ಮುಖ್ಯಮಂತ್ರಿಗಳಾಗಿ ಸಿದ್ದವನಹಳ್ಳಿ ನಿಜಲಿಂಗಪ್ಪನವರು ಆಯ್ಕೆಯಾದರು. ನಿಜಲಿಂಗಪ್ಪನವರು ಮೂಲತಃ ಗ್ರಾಮಾಂತರಪ್ರದೇಶದಿಂದ ಬಂದವರು. ವಿದ್ಯಾರ್ಥಿ ದೆಸೆಯಲ್ಲಿ ಗಾಂಧಿ ಪ್ರಭಾವದಿಂದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ದುಡಿದವರು, ಹೀಗಾಗಿ ಗಾಂಧೀಜಿ ಹೇಳಿದ ರೈತ ಸಮೂಹದ ಯೋಜನೆಗಳನ್ನು ಇವರು ರೂಢಿಗೆ ತರಲು ಪ್ರಯತ್ನಿಸಿದರು. ಅನೇಕ

ನೀರಾವರಿ ಯೋಜನೆಗಳು ಇವರ ಕಾಲದಲ್ಲಿ ಪ್ರಾರಂಭ ವಾದವು. ಕಾಳಿ, ಶರಾವತಿ, ಕಬಿನಿ, ತಾರಕ ಇತ್ಯಾದಿ ಅನೇಕ ನೀರಾವರಿ ಯೋಜನೆಗಳು ಪ್ರಾರಂಭವಾದವು, ಗ್ರಾಮಾಂತರ ಪ್ರದೇಶದಲ್ಲಿ ಕುಡಿಯುವ ನೀರು, ಶಿಕ್ಷಣ ಪ್ರಸಾರ ಮುಂತಾದ ವಿಚಾರಗಳಿಗೆ ಇವರು ಆದ್ಯತೆ ಕೊಟ್ಟರು. ಇಷ್ಟು ಹೊತ್ತಿಗಾಗಲೇ ರಾಜಕೀಯ ಕ್ಷೇತ್ರದಲ್ಲಿ ನಿಷ್ಠೆ, ಯೋಗ್ಯತೆ ಮುಂತಾದ ವಿಚಾರಗಳಿಗಿಂತ ಇತರೆಯವು ಪ್ರಭಾವ ಬೀರತೊಡಗಿದ್ದವು. ಗಾಂಧೀಜಿ ಹೇಳಿದ 'ಆದರ್ಶಪ್ರಜೆ'ಯ ಹಾಗೂ 'ಆದರ್ಶನಾಯಕ'ರ ಅಭಾವ ಕಾಣಬರುತ್ತಿತ್ತು. ನಿಜಲಿಂಗಪ್ಪ ವೈಯಕ್ತಿಕವಾಗಿ ತುಂಬ ಪ್ರಾಮಾಣಿಕರು. ಶ್ರದ್ಧಾವಂತರು. ತತ್ವನಿಷ್ಠರು. ದೇಶದ ಬಗ್ಗೆ ಅದರಲ್ಲೂ ರೈತ ಜನಾಂಗದ ಬಗ್ಗೆ ತುಂಬಾ ಕಾಳಜಿ ಇರುವ ವ್ಯಕ್ತಿ. ಆದರೆ ಇವರ ಮಂತ್ರಿಮಂಡಲ ಗಾಂಧೀಜಿ ಹೇಳಿದ ಸರಳ ಮಂತ್ರಿ ಮಂಡಲವಾಗಿರಲಿಲ್ಲ. ಅನೇಕರ ತೃಪ್ತಿಗಾಗಿ ನಿಜಲಿಂಗಪ್ಪನವರು ಕೆಲವೊಮ್ಮೆ ಕೆಲಸಮಾಡ ಬೇಕಾಗಿ ಬಂತು. ಹೀಗೆ ಭ್ರಷ್ಟಾಚಾರ ಇವರಿಗೆ ಅರಿಯದೆ ಹೊಗೆಯಾಡಲಾರಂಭಿಸಿತು.

ಇವರುಗಳಲ್ಲದೆ ಅನೇಕ ನಾಯಕರು ಗಾಂಧೀವಾಣಿಯಂತೆ ಕೆಲಸ ಮಾಡಿದ್ದಾರೆ. ಅದರಲ್ಲೂ ವಿರೋಧಪಕ್ಷದ ಜೆ. ಎಂ. ಇಮಾಂ, ಶಾಂತವೇರಿ ಗೋಪಾಲಗೌಡ. ಎಸ್. ಶಿವಪ್ಪ, ಮುಂತಾದವರು ಕಾಂಗ್ರೆಸ್ ಪಕ್ಷದವರಲ್ಲದಿದ್ದರೂ, ಜನನಾಯಕರಾಗಿ, ಸತ್ಯ ಧೀರರುಗಳಾಗಿ, ಸರ್ಕಾರಕ್ಕೆ ಸವಾಲಾಗಿ ಜನತೆಯ ಎಚ್ಚೆತ್ತ ಶಕ್ತಿಯಾಗಿ ತಮ್ಮ ಪಾತ್ರ ನಿರ್ವಹಿಸಿದ್ದಾರೆ.

ಪಾನನಿರೋಧ ಕಡ್ಡಾಯವಾಗಿ ಜಾರಿಗೆ ತರಲಿಲ್ಲವೆಂಬ ಕಾರಣಕ್ಕಾಗಿಯೇ ಯಶೋಧರಾ ದಾಸಪ್ಪ ಅವರು ಮಂತ್ರಿಪದವಿಗೆ ರಾಜೀನಾಮೆ ಕೊಟ್ಟರು. ಎಚ್. ಸಿ. ದಾಸಪ್ಪ, ಕೆ. ಟಿ. ಭಾಷ್ಯಂ, ಹೆಚ್. ಸಿದ್ದಯ್ಯ, ಟಿ. ಸುಬ್ರಹ್ಮಣ್ಯಂ, ಪಟ್ಟಾಭಿರಾಮನ್. ಎಸ್. ಕರಿಯಪ್ಪ ಮುಂತಾದವರು ಗಾಂಧಿ ಅವರ ರಾಜಕೀಯ ಸಿದ್ಧಾಂತವನ್ನು ಅನುಸರಿಸಲು ಸಾಕಷ್ಟು ಪ್ರಯತ್ನಿಸಿದ್ದಾರೆ.

ಕರ್ನಾಟಕ ರಾಜಕೀಯ ಪರಿಸ್ಥಿತಿಯನ್ನು ವೀಕ್ಷಿಸುವಾಗ ಒಂದೆರಡು ಅಂಶಗಳನ್ನು ಪ್ರತ್ಯೇಕವಾಗಿ ಹೇಳಬೇಕಾಗುತ್ತದೆ. ಕಾಂಗ್ರೆಸ್ ಸಂಸ್ಥೆ ಯಾವಾಗಲೂ ಪ್ರಜಾ ಪ್ರಭುತ್ವದ ಹೆಸರಿನಲ್ಲಿ ಭಿನ್ನಮತೀಯರನ್ನು ಪೋಷಿಸಿಕೊಂಡು ಬಂದಿದೆ. 1934ರಲ್ಲೇ ಕಾಂಗ್ರೆಸ್‌ನಲ್ಲಿ 'ಸಮಾಜವಾದಿಗಳ' ಗುಂಪು ಪ್ರಬಲವಾಗಿತ್ತು. ಪ್ರಾರಂಭದಲ್ಲಿ ಈ ಭಿನ್ನ ಮತ ಕೇವಲ ಅಭಿಪ್ರಾಯವಾಗಿತ್ತೇ ಹೊರತು ವೈಯಕ್ತಿಕ ಕೀರ್ತಿ ಪ್ರತಿಷ್ಠೆಯ ಸಾಧನವಾಗಿರಲಿಲ್ಲ, ಸ್ವಾತಂತ್ರ್ಯಾನಂತರದಲ್ಲಿ ಈ ತರಹದ ಅಭಿಪ್ರಾಯ ತತ್ವ ಆಧಾರಿತ ವಾಗಿರದೆ ವೈಯಕ್ತಿಕ ಪ್ರತಿಷ್ಠೆಯಾಗಿ, ಅಧಿಕಾರಗಳಿಸುವ ಸಾಧನವಾಗಿ ಪರಿಣಮಿಸಿತು. ಇದಲ್ಲದೆ ದೆಹಲಿಯ ಆಳುಪ್ರಭುಗಳು ತಮ್ಮ ಉಳಿವಿಗಾಗಿ ಬ್ರಿಟಿಷ್‌ರ ಒಡೆದು ಆಳುವ ನೀತಿಯನ್ನು ಅನುಸರಿಸಿ, ಅದಕ್ಕಾಗಿ ಸದಾ ಎರಡು ಗುಂಪುಗಳನ್ನು ರಾಜ್ಯದಲ್ಲಿ ಪೋಷಿಸಿ

ಕೊಂಡು ಬಂದರು. ಉದಾ : ಕೆ.ಸಿ. ರೆಡ್ಡಿ ವಿರುದ್ಧ ಹನುಮಂತಯ್ಯ, ಹನುಮಂತಯ್ಯ ನವರ ವಿರುದ್ಧ ನಿಜಲಿಂಗಪ್ಪ, ನಿಜಲಿಂಗಪ್ಪನವರ ವಿರುದ್ಧ ಜತ್ತಿ ಹೀಗೆ ಮುಂದುವರಿಸ ಬಹುದು, ಎರಡನೆಯ ಅಂಶವೆಂದರೆ ನಮ್ಮ ಮಹಾನಾಯಕರು ತಮ್ಮ ಸ್ವಾರ್ಥದಿಂದಾಗಿ ಎರಡನೆಯ ದರ್ಜೆಯ ನಾಯಕರನ್ನು ಬೆಳಸಲಿಲ್ಲ. ಅವರು ಒಂದು ರೀತಿಯಲ್ಲಿ ಆಲದ ಮರವಾಗಿ, ಅಡಿಯಲ್ಲಿ ಏನೂ ಬೆಳೆಯದಂತೆ ನೋಡಿಕೊಂಡರು. ಇಲ್ಲವೆ ಉತ್ತರಾಧಿಕಾರಿ ಆಯ್ಕೆಯಲ್ಲಿ ಪಕ್ಷಪಾತ ತೋರಿಸಿದರು. ಮೂರನೆಯ ಅಂಶ ನಮ್ಮ ಜನತೆಗೆ ಸಂಬಂಧ ಪಟ್ಟಿರುವುದು. ಈ ರಾಜ್ಯದಲ್ಲಿ ನಾಯಕರನ್ನು ಬೆಳೆಸುವ ರೀತಿಯೇ ಜನತೆಗೆ ಗೊತ್ತಿಲ್ಲ. ಜಾತಿ, ಹಣ, ಕೃತಕ ನಡೆ–ನುಡಿ ಹಾಗೂ ತಾತ್ಕಾಲಿಕ ಪ್ರಲೋಭನೆಗೆ ಒಳಗಾಗಿ ನಮ್ಮ ಜನ ಅನೇಕ ನಾಯಕರನ್ನು ಹಾಳು ಮಾಡಿದ್ದಾರೆ. ರಾಷ್ಟ್ರದ ಭವಿಷ್ಯ ನಿರ್ಮಿಸುವ ಶಕ್ತಿ ಯುಳ್ಳ ನಾಯಕರಿಗೆ ಜನ ಅನೇಕ ರೀತಿಯಲ್ಲಿ ವಿಶ್ವಾಸದ್ರೋಹವೆಸಗಿದ್ದಾರೆ. ಈ ಜನ ತೆಗೆ ಭವಿಷ್ಯದ ಕಲ್ಪನೆ ಇಲ್ಲ. ಗಾಂಧೀಜಿ ಹೇಳುವ 'ಪ್ರಬುದ್ಧ ಮತದಾರರ' ರಂತೂ ಇವರಾಗದಿರುವುದು ನಮ್ಮ ರಾಜಕಾರಣದ ಅನೇಕ ನಿರ್ಧಾರಗಳು ದೆಹಲಿಯಲ್ಲಿ ತೀರ್ಮಾನವಾಗುವಂತಾಯಿತು.

1969ರ ನಂತರ ಕಾಂಗ್ರೆಸ್‌ಪಕ್ಷ ಮಕ್ಕಳ ಬೆಲೂನಿನಂತೆ ಸಲಸಲಕ್ಕೂ ಒಡೆ ಯುತ್ತಾ ಛಿದ್ರಛಿದ್ರವಾಗುತ್ತಿದೆ. ಇದಕ್ಕೆ ಕರ್ನಾಟಕದ ನಾಯಕರು ಕಾರಣವಾಗುತ್ತಿರು ವುದು ದುರ್ದೈವದ ಸಂಗತಿ. ಸಂಸ್ಥೆಯ ಒಡಕು, ಅನೈಕ್ಯತೆಗೆ ದಾರಿ, ಅನೈಕ್ಯತೆ ಅರಾಜಕತೆಗೆ ಬುನಾದಿ. ಅರಾಜಕತೆ ಸರ್ವಾಧಿಕಾರಕ್ಕೆ ಸಹಾಯಕ. ಸರ್ವಾಧಿಕಾರವೆಂದರೆ ಜನತೆಯ ಮೇಲೆ ದಬ್ಬಾಳಿಕೆ ನಡೆಸುವ ವ್ಯವಸ್ಥೆ. ಗಾಂಧೀಜಿ ತಮಗಿಂತ ಸಂಸ್ಥೆ ದೊಡ್ಡ ದೆಂದೂ, ಸಂಸ್ಥೆಗಿಂತ ದೇಶ ದೊಡ್ಡವೆಂದೂ ಭಾವಿಸಿದ್ದರು. ಇಡೀ ಮಾನವ ಸಮೂಹದ ಹಿತಕ್ಕಾಗಿ ಸರ್ವತ್ಯಾಗಕ್ಕೆ ಸಿದ್ಧರಾಗಿದ್ದರು. ಗಾಂಧೀಜಿಯನಂತರ ನಾಯ ಕರು ಅವರ ತತ್ವಗಳಿಂದ ಅತ್ತ ಸರಿದದ್ದೇ ಎಲ್ಲಾ ಅನಾಹುತಗಳಿಗೂ ಮೂಲ. ಗಾಂಧಿ ಹೇಳಿದಂತೆ ಕಾಂಗ್ರೆಸ್ ಸಂಸ್ಥೆಯನ್ನು ವಿಸರ್ಜಿಸದೆ, ಗ್ರಾಮಸ್ವರಾಜ್ಯ ಸ್ಥಾಪಿಸದೆ, ಮಹತ್ತರ ಗುರಿಗೆ ಹೋರಾಡದೆ ಇದ್ದುದರಿಂದಲೇ "ತುರ್ತುಪರಿಸ್ಥಿತಿ"ಯ ಹೇರಿಕೆ. ಜೆ. ಪಿ. ಅಂತಹ ಮಹಾನುಭವರು ನಾಯಕತ್ವದ ಕೊರತೆ ನೀಗಿಸಿ ಮತ್ತೊಮ್ಮೆ ಜನತಾ ಆಂದೋಲನ ಪ್ರಾರಂಭಿಸಿ, ಗಾಂಧೀಜಿ ಹೇಳಿದ್ದ 'ಸವಿನಯ ಶಾಸನ ಭಂಗ' ಎಂದೆಂದಿಗೂ ಜನತೆಯ ಹಕ್ಕು ಎಂಬುದನ್ನು ತೋರಿಸಿ ಕೊಟ್ಟರು. ಈ ಹೋರಾಟದಲ್ಲಿ ಕರ್ನಾಟಕದ ಪಾತ್ರ ಅತ್ಯಲ್ಪವೇನಲ್ಲ. ನಮ್ಮ ಅನೇಕ ತರುಣರೂ ಜೆ.ಪಿ. ವಾಣಿಗೆ ಅರ್ಥಾತ್ ಗಾಂಧೀ ಮಾರ್ಗಕ್ಕೆ ಓಗೊಟ್ಟು ಹೋರಾಟದ ಕಣಕ್ಕೆ ಇಳಿದರು. ಪರಿಸ್ಥಿತಿ ತಿಳಿಯಾದಂತೆ ಕಾಣಬಂದರೂ ಮತ್ತೊಮ್ಮೆ ಮೋಡ ಕವಿದಂತೆ ಕಾಣಬರುತ್ತಿದೆ. ಇದೇಕೆ ಹೀಗೆಂದರೆ ಗಾಂಧೀಜಿ ಹೇಳುವಂತೆ ಸತ್ಯ–ಅಹಿಂಸೆಗಳಿಗೆ ಹಠಾತ್ ಜಯ ಲಭಿಸುವುದಿಲ್ಲ. ದೀರ್ಘ ಹೋರಾಟ, ಅಪಾರ ಪರಿಶ್ರಮ, ಹಾಗೂ ತ್ಯಾಗದೊಡನೆ ಪೂರ್ಣ ಜಯ ದೊರೆಯು

ತ್ರದೆ. ಗಾಂಧೀಜಿ ಅವರ ಕರೆಗೆ ಓಗೊಟ್ಟು ವಿಶ್ವ ಕಂಡರಿಯದ ಸಾತ್ವಿಕ ಹೋರಾಟ ನಡೆಸಿದ ಈ ಜನ ಜಡರಾಗುವುದಿಲ್ಲ. ಈ ನನ್ನ ಅಭಿಪ್ರಾಯಕ್ಕೆ ಜೆ. ಪಿ. ಅವರ ಈ ಕೆಳಗಿನ ಮಾತುಗಳು ಪುಷ್ಟಿಕೊಡಬಲ್ಲವು. "ಬ್ರಿಟಿಷ್ ಸಾಮ್ರಾಜ್ಯದ ವಿರುದ್ಧ ಹೋರಾಡಿ ಅದರ ಸೊಕ್ಕಡಗಿಸಿದ ಜನಾಂಗ ಬಹಳ ಕಾಲ ಈ ದಮನ ಹಾಗೂ ಅಪಮಾನವನ್ನು ಸಹಿಸಲಾರದು. ಭಾರತೀಯ ಪ್ರಜಾಪ್ರಭುತ್ವ ಸಮಾಧಿಯಿಂದ ಎದ್ದೇಳುವುದು ಖಚಿತ."[1]

---

1. ಗಾಂಧಿ ಸಿದ್ಧಾಂತಕ್ಕನುಗುಣವಾಗಿ ನಡೆಯದೆ, ಹಾದಿ ತಪ್ಪಿದ ಕರ್ನಾಟಕದ ರಾಜಕಾರಣದಲ್ಲಿ ನನ್ನ ವೈಯಕ್ತಿಕ ಪಾತ್ರ ಸಾಕಷ್ಟಿದ್ದರೂ. ಅದರ ಬಗ್ಗೆ ನನಗೀಗ ಪಶ್ಚಾತ್ತಾಪವೆನಿಸಿದರೂ ನನ್ನ ಅಭಿಪ್ರಾಯಗಳನ್ನು ಬರಹಗಾರನ ದೃಷ್ಟಿಯಲ್ಲಿ ವಿವೇಚಿಸಿದ್ದೇನೆ. —ಲೇಖಕ.

ಕರ್ನಾಟಕದಲ್ಲಿ

# ಸಾಮಾಜಿಕ ಪರಿಸ್ಥಿತಿಯ ಮೇಲೆ ಗಾಂಧೀಜಿ ಪ್ರಭಾವ

ವಿ. ಜಿ. ಕೃಷ್ಣಮೂರ್ತಿ

ಭಾರತದ ಸಮಾಜವನ್ನು ಉದ್ಧರಿಸಲು ಅವತರಿಸಿದ ಯುಗಪುರುಷನೆಂದು ಮಹಾತ್ಮ ಗಾಂಧಿಯವರನ್ನು ಕೊಂಡಾಡಿದ ದಿನಗಳು ಈ ಶತಮಾನದ ಪೂರ್ವಾರ್ಧದಲ್ಲಿ. ಬೋಯರ್ ಯುದ್ಧದಲ್ಲಿ ರೆಡ್‌ಕ್ರಾಸ್ ಪಡೆಯ ಶಿಬಿರಗಳಲ್ಲಿ ಸೇವೆಸಲ್ಲಿಸಿ ದಕ್ಷಿಣ ಆಫ್ರಿಕಾದಿಂದ ಭಾರತಕ್ಕೆ 1914ರಲ್ಲಿ ಹಿಂದಿರುಗಿದ ಗಾಂಧಿಯವರು ಭಾರತವನ್ನು ಪರಕೀಯರ ದಬ್ಬಾಳಿಕೆ ಹಾಗೂ ಗುಲಾಮಗಿರಿಯಿಂದ ಬಿಡಿಸಲು ಪಣತೊಟ್ಟು ನಿಂತರು. ಈ ಕಾರ್ಯದಲ್ಲಿ ಅವರು ನಿರಾಯುಧನಾದ ಯೋಧನಾಗಿ ನಿಂತರು : ಕಾಂಗ್ರೆಸ್ ಅವರ ಸಾಧನೆಗೆ ನೆರವಾಗಿ ನಿಂತ ಸಂಸ್ಥೆ. ಇಡೀ ಭಾರತದ ಜನ ಅವರ ನಾಯಕತ್ವದಲ್ಲಿ ಗಾಢನಂಬಿಕೆಯನ್ನು ಹೊಂದಿ ಅವರ ಆದೇಶಗಳನ್ನು ಪಾಲಿಸಲು ಸಿದ್ಧರಾದರು. ಕರ್ನಾಟಕದ ಜನ ಈ ಮಹಾಕಾರ್ಯದಲ್ಲಿ ಹಿಂದುಳಿಯದೆ ಮಹಾತ್ಮರ ಆಣತಿಯನ್ನು ಪಾಲಿಸಿತು. ಈ ಹೋರಾಟದ ಕಾಲದಲ್ಲಿ ಗಾಂಧೀಜಿಯವರ ವ್ಯಕ್ತಿತ್ವ ಕರ್ನಾಟಕದ ಜನರ ಮೇಲೆ ಮಹತ್ತರ ಪರಿಣಾಮವನ್ನುಂಟು ಮಾಡಿತು, ಅವರ ಆಧ್ಯಾತ್ಮಿಕ ಬಲ ದೇಶವನ್ನು ಬೆರಗುಗೊಳಿಸಿತು.

ಮೊದಲ ಜಾಗತಿಕ ಯುದ್ಧದ ತರುವಾಯ (1914–18) ಗಾಂಧೀಜಿ ದೇಶದ ಪರಿಸ್ಥಿತಿಯನ್ನು ಸ್ವತಃ ತಿಳಿಯಲು ಭಾರತದ ಎಲ್ಲ ಕಡೆಗಳಲ್ಲೂ ಸಂಚರಿಸಿದರು. ಆಗ ಅವರಿಗೆ ಪ್ರಧಾನವಾಗಿ ಕಂಡು ಬಂದುದು ದೀನ–ದಲಿತರ ದುಃಸ್ಥಿತಿ ಹಾಗೂ ಜಾತಿಭೇದಗಳಿಂದ ಸಮಾಜದಲ್ಲಿನ ತಾರತಮ್ಯಗಳು. ಡಿಸೆಂಬರ್ 1920ರಲ್ಲಿ ಅಖಿಲ ಭಾರತ ಕಾಂಗ್ರೆಸ್, ಪ್ರಾದೇಶಿಕ ಮಂಡಲಿಗಳನ್ನು ಸ್ಥಾಪಿಸಿದಾಗ ಕರ್ನಾಟಕದ ಬಗ್ಗೆ ಗದಗ್‌ನಲ್ಲಿ ಕೇಂದ್ರವನ್ನು ಏರ್ಪಡಿಸಿತು. ಹಿಂದೂಮುಸಲ್ಮಾನರ ಐಕ್ಯತೆ, ಖಾದಿ ವಸ್ತ್ರಗಳ ಪ್ರಚಾರ. ಪಾನನಿರೋಧ, ಅಸ್ಪೃಶ್ಯತೆಯ ನಿವಾರಣೆ—ಈ ಸಾಮಾಜಿಕ ಕಾರ್ಯಗಳಿಗಾಗಿ ಬೆಂಗಳೂರು, ಮೈಸೂರು, ತುಮಕೂರ ಮತ್ತು ಕಡೂರು ನಗರಗಳಲ್ಲಿ ಕಾಂಗ್ರೆಸ್ ಸಮಿತಿಗಳು ರಚನೆಯಾದವು. ಬ್ರಿಟಿಷರ ಆಳ್ವಿಕೆಯಲ್ಲಿ ಹರಿದು ಹಂಚಿಹೋಗಿದ್ದ ಕರ್ನಾಟಕದ ಭಾಗಗಳನ್ನು ಸಂಘಟಿಸುವ ಆಸೆ ಕರ್ನಾಟಕದ ಜನರಲ್ಲಿ ಅಂಕುರಿಸಿತು.

1926–27ರ ಸಮಯದಲ್ಲಿ ಗಾಂಧಿಯವರು ಕರ್ನಾಟಕದ ಜನರನ್ನು ಸಂಧಿಸಿ ಬೃಹತ್‌ಸಭೆಗಳಲ್ಲಿ ತಮ್ಮ ಸಂದೇಶವನ್ನು ನೀಡಿದರು. ಅವರ ಸಾಮಾಜಿಕ ಚಟುವಟಿಕೆಗಳಿಂ

ದೈವಭಕ್ತಿ, ಸರಳಜೀವನ, ಅಹಿಂಸಾತತ್ತ್ವ, ಧರ್ಮನಿಷ್ಠೆ ಜನರನ್ನು ಆಕರ್ಷಿಸಿದವು. ಚರಕದಿಂದ ನೂಲು ತೆಗೆದು ಸ್ವದೇಶಿ ಬಟ್ಟೆಯನ್ನು ತಯಾರಿಸುವುದನ್ನು ಗಾಂಧಿ ಪ್ರೋತ್ಸಾಹಿಸಿದರು. ಅವರ ಅನುಯಾಯಿಗಳು ದೇಶಸೇವೆಯ ಸಂಬಂಧದಲ್ಲಿ ಚರಕದಿಂದ ನೂಲು ತೆಗೆಯುವುದನ್ನು ಮುಖ್ಯ ಅರ್ಹತೆಯನ್ನಾಗಿ ಕಂಡರು. ಕರ್ನಾಟಕದ ಜನ ಖಾದಿ ಬಟ್ಟೆಯನ್ನು ಧರಿಸಲಾರಂಭಿಸಿದರು, ಖಾದಿಯಿಂದ ತಯಾರಿಸಿದ 'ಗಾಂಧಿ ಟೋಪಿ'ಯನ್ನು ಧರಿಸುವುದು ರೂಢಿಗೆ ಬಂದಿತು. ನಿಟ್ಟೂರು ಶ್ರೀನಿವಾಸರಾಯರು ಬೆಂಗಳೂರು ಕೋಟೆ ಆಂಜನೇಯ ಸ್ವಾಮಿಗುಡಿಯ ಪಕ್ಕದಲ್ಲಿ ಖಾದಿ ಭಂಡಾರವನ್ನು ಸ್ಥಾಪಿಸಿದರು, ಪಿ. ಸೀತಾರಾಮ ಭಟ್ಟರು ಮಕ್ಕಳಿಗಾಗಿ "ಚರಕ ಹಾಗೂ ಬಾಪೂಜಿ" ಎಂಬ ಪುಸ್ತಕವನ್ನು ಬರೆದರು. ಪದ್ಮನಾಭ ಆಚಾರ್ಯರು "ನಮ್ಮ ರಾಟೆ" "ನೂಲುವುದು, ನೂಲು ಹಿಂಜುವುದು" ಎಂಬ ಪುಸ್ತಕಗಳನ್ನು ಬರೆದರು. 1930ರ ದಶಕದಲ್ಲಿ ಕರ್ನಾಟಕಾದ್ಯಂತ ಖಾದಿ ಪ್ರಚಾರ ವ್ಯಾಪಕವಾಗಿ ನಡೆಯಿತು. 1942ರಲ್ಲಿ ಬ್ರಿಟೀಷರನ್ನು ತೊಲಗಿಸುವ ಚಳುವಳಿಯಲ್ಲಿ ಇಂಗ್ಲಿಷರು ರೂಢಿಗೆ ತಂದಿದ್ದ ಉಡುಪುಗಳನ್ನು ಸುಡುವ ಚಳುವಳಿ ನಡೆಯಿತು. ಸ್ವಾತಂತ್ರ್ಯ ಚಳುವಳಿಯ ಕಾಲದಲ್ಲಿ ಗಾಂಧಿಯವರ ಪ್ರಭಾವದಿಂದ ಕರ್ನಾಟಕದ ಜನರಲ್ಲಿ ಹರಿಜನೋದ್ಧಾರ, ಹಿಂದೂ–ಮುಸ್ಲಿಂ ಐಕ್ಯತೆ, ಸಮಾಜವಾದ, ಖಾದಿ ಪ್ರಚಾರ ಮೊದಲಾದವುಗಳ ಬಗ್ಗೆ ಆಸಕ್ತಿ ಹೆಚ್ಚಿತು. ಕರ್ನಾಟಕದಲ್ಲಿ ಖಾದಿ ಭಂಡಾರಗಳು, ಗಾಂಧೀ ಸೇವಾ ಸದನಗಳು, ಮಹಿಳಾ ಸೇವಾ ಸಮಾಜಗಳು ಸ್ಥಾಪನೆಯಾದವು. ಬೆಂಗಳೂರಿನಲ್ಲಿ ತಿರುಮಲೆತಾತಾಚಾರ್ಯ ಮೊದಲಾದವರ ಆಸಕ್ತಿಯಿಂದ ಸ್ಥಾಪಿತವಾದ ಮಲ್ಲೇಶ್ವರದ ಗಾಂಧಿ ಭವನ ಇಂದಿಗೂ ಮಹಾತ್ಮರ ಆದರ್ಶಗಳನ್ನು ಮುಂದಿಟ್ಟುಕೊಂಡು ಕಾರ್ಯನಿರತವಾಗಿದೆ.

ಗಾಂಧಿಯವರಿಂದ ಪ್ರಭಾವಿತರಾಗಿ ಅವರ ಬಗ್ಗೆ ಗ್ರಂಥಗಳನ್ನು ಬರೆದ ಸಾಹಿತಿಗಳು ಎಷ್ಟೋಮಂದಿ : ಹಾರ್ಡೇಕರ್ ಮಂಜಪ್ಪನವರೂ "ಖಾದಿ ಶಾಸ್ತ್ರ" ಎಂಬ ಗ್ರಂಥದಲ್ಲಿ ಗಾಂಧಿಯವರ ಖಾದಿ ಕಲ್ಪನೆಯ ಬಗ್ಗೆ ಮಾಹಿತಿಗಳನ್ನು ನೀಡಿದ್ದಾರೆ, ಗ್ರಾಮಗಳ ಪುನರ್‌ರಚನೆಯ ಬಗ್ಗೆ ಗಾಂಧಿಯವರ ಅಭಿಪ್ರಾಯಗಳನ್ನು ಗೋರೂರು ರಾಮಸ್ವಾಮಿಐಯಂಗಾರ್ಯರು "ಪೂರ್ಣಸ್ವದೇಶಿ" ಎಂಬ ಗ್ರಂಥದಲ್ಲಿ ತಿಳಿಸಿದ್ದಾರೆ. ವಿ. ಎಸ್. ನಾರಾಯಣರಾಯರು "ಗಾಂಧೀವಾದ" ಮತ್ತು "ಗಾಂಧಿಯವರ ಆರ್ಥಿಕ ವಾದ" ಎಂಬ ಪುಸ್ತಕಗಳಲ್ಲಿ ಆರ್ಥಿಕ ವಿಷಯಗಳಲ್ಲಿ ಗಾಂಧಿಯವರ ನೀತಿಯನ್ನು ವರ್ಣಿಸಿದ್ದಾರೆ. ಗಾಂಧೀಜಿ ಅವರ ಸತ್ಯಾಗ್ರಹ ಸಿದ್ಧಾಂತದ ಬಗ್ಗೆ ಆರ್. ಆರ್. ದಿವಾಕರ್ ತಮ್ಮ "ಸತ್ಯಾಗ್ರಹ" ಎಂಬ ಕೃತಿಯನ್ನು ಪೂರ್ಣವಿವರಗಳನ್ನು ನೀಡಿದ್ದಾರೆ. ಗಾಂಧಿಯವರ ಜೀವನ ಚರಿತ್ರೆಯನ್ನು ಹಾರ್ಡೇಕರ್ ಮಂಜಪ್ಪನವರು "ಮಹಾತ್ಮ ಗಾಂಧಿಯವರ ಚರಿತ್ರೆ"ಯಲ್ಲಿ ವಿವರವಾಗಿ ವರ್ಣಿಸಿದ್ದಾರೆ, ಬಿ. ಎಲ್. ಆಚಾರ್ಯರ "ಮಹಾತ್ಮಗಾಂಧಿ" ಗೋರೂರು ರಾಮಸ್ವಾಮಿ ಐಯಂಗಾರ್ಯರ "ಭಾರತ ಭಾಗ್ಯ

ವಿಧಾತ'' ಗಾಂಧಿಯವರ ಜೀವನವನ್ನು ಕುರಿತ ಜನಪ್ರಿಯ ಕೃತಿಗಳು, ದೇವುಡು ನರಸಿಂಹ ಶಾಸ್ತ್ರಿಗಳು ಮಕ್ಕಳಿಗಾಗಿ ಹೊರಡಿಸುತ್ತಿದ್ದ ''ಮಕ್ಕಳ ಪುಸ್ತಕ''ದಲ್ಲಿ ಗಾಂಧಿಯವರ ವ್ಯಕ್ತಿ ಪರಿಚಯವನ್ನು 1927ರಲ್ಲಿ ಮಾಡಿಕೊಟ್ಟರು. ಪತ್ರಿಕೋದ್ಯಮದಲ್ಲಿ ಸಹ ಕನ್ನಡ ಪತ್ರಿಕೆಗಳ ಮೇಲೆ ಮಹಾತ್ಮಗಾಂಧಿಯವರು ಪ್ರಭಾವ ಬೀರದೆ ಇರಲಿಲ್ಲ. ಅವರ ಸತ್ಯಾಗ್ರಹದ ತಳಪಾಯದ ಮೇಲೆ ಪ್ರಾರಂಭವಾದ ಸ್ವಾತಂತ್ರ್ಯ ಚಳುವಳಿಯ ಬಗ್ಗೆ ಜನರಿಗೆ ರಾಜಕೀಯ ಮತ್ತು ಸಾಮಾಜಿಕ ಪ್ರಜ್ಞೆಯನ್ನು ತರಲು ನಮ್ಮ ಪತ್ರಿಕೆಗಳು ದುಡಿದವು. ಬ್ರಿಟಿಷರ ಕಾಲದಲ್ಲಿ ''ರಾಷ್ಟ್ರೀಯ ಪತ್ರಿಕೆ'' ಎಂಬ ಹೆಸರನ್ನು ಕನ್ನಡ ದಿನಪತ್ರಿಕೆಗಳು ಸೂಚಿಸಿಕೊಂಡು ಬ್ರಿಟಿಷರ ಆಡಳಿತದ ಬಗ್ಗೆ ನಿರ್ಭೀತವಾಗಿ ಸಂಪಾದಕೀಯಗಳನ್ನು ಪ್ರಕಟಿಸುತ್ತಿದ್ದವು. ಅಂಥ ರಾಷ್ಟ್ರೀಯ ಪತ್ರಿಕೆಗಳಲ್ಲಿ ಪ್ರಧಾನವಾದವು ದೇಶಬಂಧು, ವಿಶ್ವಕರ್ಣಾಟಕ, ಸಂಯುಕ್ತ ಕರ್ಣಾಟಕ, ತಾಯಿನಾಡು, ಪ್ರಜಾಮತ, ಈ ಪತ್ರಿಕೆಗಳು ಪ್ರಕಟಿಸುತ್ತಿದ್ದ ವಿಷಯಗಳಿಂದ ಕರ್ಣಾಟಕದ ಜನ ರಾಜಕೀಯವಾಗಿ ಎಚ್ಚೆತ್ತರು: ಸಾಮಾಜಿಕವಾಗಿ ತಮ್ಮ ಸ್ಥಾನಮಾನಗಳೇನೆಂಬುದನ್ನು ಗ್ರಹಿಸಿದರು,

ಮಹಾತ್ಮಗಾಂಧಿಯವರ ಸಮಾಜವಾದ ಸರ್ವೋದಯ ರೂಪದಲ್ಲಿ ಪ್ರಕಟಿಸಿಕೊಂಡಿತು. ಅದು ಅಹಿಂಸಾಲಕ್ಷಣವನ್ನು ಹೊಂದಿದ ಮಾರ್ಕ್ಸ್‌ವಾದವೆಂದೂ ಹೇಳಲಾಗಿದೆ. ಜಾತಿ ಭೇದಗಳಿಲ್ಲದ ಸಮಾಜ ಕಲ್ಪನೆ ಹಿಂದುಳಿದ ಜನರಿಗೆ ಹಿತವಾಗಿ ಕಂಡರೂ ಮೇಲುವರ್ಗದ ಜನರಿಗೆ ಅದರಿಂದ ಸಮಾಧಾನವಾಗಲಿಲ್ಲ. ಸಮಾಜದಲ್ಲಿ ಹೀನಸ್ಥಿತಿಗೆ ಬಂದಿದ್ದ ನಿಮ್ನ ಜಾತಿಗಳವರ ಉದ್ಧಾರ ಅವರ ಆದ್ಯ ಕೆಲಸವಾಯಿತು. ಗಾಂಧೀಜಿ ತಾವು ಅನುಷ್ಠಾನಕ್ಕೆ ತಂದ ಪ್ರತಿಯೊಂದು ಯೋಜನೆಯನ್ನು ತಾವೇ ಪ್ರಯೋಗಮಾಡಿ. ಅದು ಸಾಧ್ಯವೆಂದು ತಮಗೆ ತೃಪ್ತಿಕರವಾಗಿ ಕಂಡ ಮೇಲೆ ಜನರ ಆಚರಣೆಗೆ ಒಪ್ಪಿಸುತ್ತಿದ್ದರು. ಅವರ ಅಭಿಪ್ರಾಯದಲ್ಲಿ ವರ್ಣಾಶ್ರಮ ಧರ್ಮದಲ್ಲಿ 'ವರ್ಣ' ಕೇವಲ ವೃತ್ತಿವರ್ಗಗಳನ್ನು ಸೂಚಿಸುವುದೇ ಹೊರತು ಜಾತಿಗಳನ್ನಲ್ಲ, ಆದ್ದರಿಂದ ಸಮಾಜದಲ್ಲಿ ಅಸ್ಪೃಶ್ಯತೆಯನ್ನು ತೊಡೆದು ಹಾಕುವ ಮೊದಲ ಕ್ರಮವಾಗಿ ಅವರು ನಿಮ್ನ ವರ್ಗದವರನ್ನು ಹರಿಜನರೆಂದು ಕರೆದರು. ಇತರರಿಗೆ ಮಾರ್ಗದರ್ಶನವಾಗಿ ಹರಿಜನ ಮಗುವನ್ನು ತಮ್ಮ ಸ್ವಂತ ಮಗುವಂತೆ ಬೆಳೆಸಿದರು. ಹರಿಜನರ ಉದ್ಧಾರಕ್ಕಾಗಿ ದೇಶದಲ್ಲಿ ಹರಿಜನ ಸೇವಾ ಸಂಘಗಳನ್ನು ಸ್ಥಾಪಿಸುವಂತೆ ಜನರಿಗೆ ಕರೆಕೊಟ್ಟರು ಸರ್ವೋದಯ ಸುಖೀರಾಜ್ಯದಲ್ಲಿ ಪ್ರತಿಯೊಬ್ಬ ವ್ಯಕ್ತಿಯೂ ಆರ್ಥಿಕ ಸ್ವಾತಂತ್ರ್ಯ ಹೊಂದಿ ಸಮಾಜದಲ್ಲಿ ಶೋಷಣೆಯಿಲ್ಲದೆ ರಾಜಕೀಯ ಪ್ರಜ್ಞೆಯಿಂದ ಜೀವಿಸಬೇಕೆಂಬ ಆಕಾಂಕ್ಷೆ ಗಾಂಧೀಜಿಯವರದಾಗಿದ್ದಿತು. ವ್ಯಕ್ತಿ ವಿಕಾಸಕ್ಕೆ ಇಡೀ ಸಮಾಜವು ಬದಲಾವಣೆಗೊಳ್ಳಬೇಕೆಂದು ಅವರು ತಿಳಿದಿದ್ದರು. ಗ್ರಾಮಜೀವನವೇ ಪ್ರಧಾನವಾದ ಭಾರತದಲ್ಲಿ ಗ್ರಾಮ ಸಮಾಜದ ಪ್ರಗತಿಗೆ ಆಡಳಿತ ವಿಕೇಂದ್ರೀಕರಣ ಅಗತ್ಯವೆಂದೂ ಭಾವಿಸಿದ್ದರು.

ಮಹಾತ್ಮಗಾಂಧಿಯವರ ಶಿಕ್ಷಣಯೋಜನೆಯನ್ನು ವಾರ್ಧಾ ರಾಷ್ಟ್ರೀಯ ಮೂಲ ಶಿಕ್ಷಣಯೋಜನೆಯೆಂದೂ ಕರೆಯಲಾಗಿದೆ. 7 ರಿಂದ 14 ವರ್ಷಗಳ ನಡುವಣ ವಯಸ್ಸಿನ ಮಕ್ಕಳಿಗೆ ಉಚಿತ ವಿದ್ಯಾಭ್ಯಾಸ, ಶಿಕ್ಷಣಕಾಲದಲ್ಲಿ ಮಕ್ಕಳಿಗೆ ಕೈಗಾರಿಕೆಗಳನ್ನು ಕಲಿಸಿ ಅವು ಅವರ ಜೀವನದಲ್ಲಿ ಉಪಯುಕ್ತವಾಗುವಂತೆ ಮಾಡುವುದು ಹಾಗೂ ಆ ಮೂಲಕ ನಿರುದ್ಯೋಗ ನಿರ್ಮೂಲನ— ಇವು ಗಾಂಧಿಯವರ ಶಿಕ್ಷಣಯೋಜನೆ. ಮಕ್ಕಳಿಗೆ ಮಾತೃಭಾಷೆಯಲ್ಲಿ ಶಿಕ್ಷಣ ನೀಡಿ ಅವರನ್ನು ಉತ್ತಮ ಪ್ರಜೆಗಳಾಗುವಂತೆ ಮಾಡುವ ಪಠ್ಯಕ್ರಮವನ್ನು ಅವರು ಅನುಮೋದಿಸಿದ್ದರು. ಸ್ವಾತಂತ್ರ್ಯಾನಂತರ ಭಾರತದಲ್ಲಿ ಅವರ ಶಿಕ್ಷಣಯೋಜನೆಗಳನ್ನು ರೂಢಿಗೆ ತರಲು ಪ್ರಯತ್ನಗಳಾಗಿವೆ. ಸ್ವಾತಂತ್ರ್ಯಪೂರ್ವದಲ್ಲಿಯೇ ಗಾಂಧೀಜಿಯವರಿಂದ ಪ್ರಭಾವಿತರಾದ ಕನ್ನಡಿಗರು ದೇಶೀಯ ವಿದ್ಯಾಶಾಲೆಗಳನ್ನು ತೆರೆದು ಅವರ ಶಿಕ್ಷಣ ಯೋಜನೆಯನ್ನು ರೂಢಿಗೆ ತಂದಿದ್ದರು. ಸ್ವಾತಂತ್ರ್ಯ ಹೋರಾಟದ ದಿನಗಳಲ್ಲಿ ಬೆಂಗಳೂರಿನ ನ್ಯಾಷನಲ್ ಹೈಸ್ಕೂಲ್ ಗಾಂಧಿಯವರ ಆದರ್ಶಗಳನ್ನು ವಿದ್ಯಾರ್ಥಿಗಳಿಗೆ ಬೋಧಿಸಿ. ರಾಷ್ಟ್ರಸೇವೆಗೆ ನಿಂತಿದ್ದಿತು.

ಸ್ವಾತಂತ್ರ್ಯದ ಹೋರಾಟದಲ್ಲಿ ಕರ್ನಾಟಕದ ಪಾತ್ರ ಗಮನಾರ್ಹವಾದದ್ದು. ಕರ್ನಾಟಕದ ಜನ ಮಹಾತ್ಮಗಾಂಧಿಯವರನ್ನು ದೇವಮಾನವನಂತೆ ಕಂಡರು. ಅವರನ್ನು ಗೌತಮ ಬುದ್ಧ, ಏಸುಕ್ರಿಸ್ತರಿಗೆ ಸಮಾನರೆಂದೂ ಪೂಜಿಸತೊಡಗಿದರು. ಅವರ ಸರಳ ಜೀವನವನ್ನು ಕಂಡು ಬೆರಗಾಗಿ ಅವರನ್ನು ದರಿದ್ರನಾರಾಯಣನೆಂದು ಕರೆದರು. ಗಾಂಧೀಜಿ ಸಮಾಜದ ಮೇಲೆ ಬೀರಿದ ಪ್ರಭಾವ ಆಧ್ಯಾತ್ಮಿಕವಾದದ್ದು. ನೀತಿಯುತವಾದದ್ದು. ಅವರ ಆದರ್ಶಗಳ ಬಗ್ಗೆ ಕನ್ನಡ ಕವಿಗಳು ಕವನ ಕಟ್ಟಿದರು. ಸಾಹಿತಿಗಳು ವಿಪುಲವಾಗಿ ಬರೆದರು. ಕೈಲಾಸಂರವರು ತಮ್ಮ ಸಹಜಸಿದ್ಧವಾದ ಹಾಸ್ಯ ಪ್ರವೃತ್ತಿಯಲ್ಲಿಯೇ ಕಡಲೆಕಾಯಿ ಬೀಜ ಮತ್ತು ಆಡಿನ ಹಾಲಿನಲ್ಲಿ ಜೀವಿಸುತ್ತಿದ್ದ ಗಾಂಧೀಯವರ ವ್ಯಕ್ತಿತ್ವವನ್ನು ಹಿಮಾಲಯ ಪರ್ವತಕ್ಕೆ ಹೋಲಿಸಿದರು. ಮಹಾತ್ಮಗಾಂಧಿಯವರು 1927ರಲ್ಲಿ ಆರೋಗ್ಯ ನಿಮಿತ್ತ ನಂದಿಬೆಟ್ಟದ ಮೇಲೆ ವಿಶ್ರಮಿಸಿಕೊಳ್ಳುತ್ತಿದ್ದಾಗ ಮಾಸ್ತಿಯವರು ಅವರನ್ನು ಕಂಡು ಅವರ ಸರಳ ಸ್ವಭಾವವನ್ನು ಕವನಿಸಿದರು. 1934ರಲ್ಲಿ ಗಾಂಧಿಯವರು ಮೈಸೂರಿಗೆ ಬಂದಾಗ ಕವಿ ಕುವೆಂಪು ಆ ಮಹಾ ಮಹಿಮನ ಮೇಲೆ ಕವನ ಕಟ್ಟಿದರು. ಗಾಂಧಿಯವರು 1930ರಲ್ಲಿ ಹೂಡಿದ ಸತ್ಯಾಗ್ರಹದಲ್ಲಿ ಕರ್ನಾಟಕದ ಜನ ಭಾಗವಹಿಸಿದರು. ಖಾದಿ ಪ್ರಚಾರಕ್ಕಾಗಿ ಬದನವಾಳದಲ್ಲಿ ಒಂದು ಕೇಂದ್ರ ಸ್ಥಾಪನೆಯಾಯಿತು. 1938ರಲ್ಲಿ ಮೈಸೂರು ಕಾಂಗ್ರೆಸ್ ಅಸ್ತಿತ್ವಕ್ಕೆ ಬಂದು ಮದ್ದೂರು ತಾಲ್ಲೂಕು ಶಿವಪುರಿಯಲ್ಲಿ ಸಭೆಸೇರಿತು. ರಾಜಕೀಯ ಸ್ವಾತಂತ್ರ್ಯ ಮತ್ತು ಸಮಾಜ ಸುಧಾರಣೆಗಳು ಕಾಂಗ್ರೆಸ್‌ನ ಧ್ಯೇಯಗಳಾದವು.

ಗಾಂಧೀಜಿ ಅವರ ಅಸ್ಪೃಶ್ಯತೆಯ ನಿರ್ಮೂಲನ, ಪಾನ ನಿರೋಧ, ಸಮಾಜ ಸೇವೆ, ಹಿಂದೂ ಮುಸ್ಲಿಮ್ ಐಕ್ಯತೆ— ಈ ಆದರ್ಶಗಳನ್ನು ಕಾರ್ಯರೂಪಕ್ಕೆ ತರಲು

ಸ್ವಾತಂತ್ರ್ಯಪೂರ್ವ ಕರ್ನಾಟಕ ಸಮಾಜದಲ್ಲಿ ಪಯತ್ನಗಳಾದವು. ಗಾಂಧೀಜಿ 1929ರ ವೇಳೆಗಾಗಲೇ ಪೂರ್ಣಸ್ವರಾಜ್ಯ ಮತ್ತು ಹಿಂದೂ–ಮುಸ್ಲಿಂ ಐಕ್ಯತೆಗೆ ಪ್ರಚಾರ ಕಾರ್ಯಕ್ರಮಗಳನ್ನು ಕೈಕೊಂಡಿದ್ದರು. ದೇಶಕ್ಕೆ ಪೂರ್ಣಸ್ವಾತಂತ್ರ್ಯ ಲಭಿಸಿತು. ಆದರೆ ಗಾಂಧೀಜಿಯವರು ನೆನೆಸಿದಂತೆ ಹಿಂದೂ ಮುಸಲ್ಮಾನರು ರಾಜಕೀಯವಾಗಿ ಸಂಘಟಿಸದೆ ಹೋದ ಕಾರಣ, ಬ್ರಿಟಿಷ್ ಇಂಡಿಯಾ ಪಾಕಿಸ್ತಾನ ಮತ್ತು ಭಾರತ ಎಂದು ವಿಭಜಿತವಾಯಿತು. ವಿಭಜನೆಯ ತರುವಾಯ ಹಿಂದೂ ಮುಸ್ಲಿಮರ ಘರ್ಷಣೆಗಳಿಂದ ಭಾರತದಲ್ಲಿ ಅಶಾಂತಿ ಮೂಡಿತು. ಮಹಾತ್ಮಗಾಂಧಿಯವರು ಅತೃಪ್ತರ ಹಾಗೂ ಹಾನಿಗೊಂಡವರ ನಿಂದೆಗೊಳಗಾದರು.

ಮಹಾತ್ಮಗಾಂಧಿಯವರ ಪ್ರಭಾವ ಸ್ವಾತಂತ್ರ್ಯಪೂರ್ವದಿನಗಳಲ್ಲಿ ಇಡೀ ಭಾರತದ ಮೇಲೆ ಉಂಟಾದಂತೆ. ಭಾರತದ ಅಂಗವಾದ ಕರ್ನಾಟಕದ ಸಮಾಜದ ಮೇಲೆಯೂ ಉಂಟಾಯಿತು. ಅಹಿಂಸಾತತ್ತ್ವ, ಸರ್ವೋದಯ, ಸ್ವದೇಶಿ ಮತ್ತು ಸ್ವರಾಜ್ಯ ಕಲ್ಪನೆಗಳು ಅವರಿಂದಲೇ ಉಗಮಿಸಿ ಭಾರತ ಮತ್ತು ಭಾರತೀಯರ ಘನವಾದ ಬಾಳಿಗೆ ತಳಪಾಯ ಹಾಕಿದವು. ಆದರೆ ಈ ಪ್ರಭಾವ ಸ್ವಾತಂತ್ರ್ಯದ ತರುವಾಯ ಸ್ಥಿರವಾಗಿ ನಿಂತಂತೆ ಕಾಣುವುದಿಲ್ಲ. ಗಾಂಧೀಜಿಯವರು ರಾಜಕೀಯ, ಆರ್ಥಿಕ, ಧಾರ್ಮಿಕ, ನೈತಿಕ, ವಿಷಯಗಳನ್ನಲ್ಲದೆ ಸಮಾಜ ಸುಧಾರಣೆಗಾಗಿ, ಸಾಮಾಜಿಕ ಸಮಸ್ಯೆಗಳನ್ನು ಪರಿಹರಿಸುವುದಕ್ಕಾಗಿ ಅನೇಕ ಪರಿಹಾರೋಪಾಯಗಳನ್ನು ಜನರಮುಂದೆ ಇಟ್ಟರು, ಅವರ ಉಪದೇಶಗಳೆಲ್ಲವೂ ಲೌಕಿಕ ಜೀವಿಗಳಿಗೆ ಒಬ್ಬಯತಿಯ ಬೋಧನೆಗಳಂತೆ ಆದವು, ಗಾಂಧಿಯವರದು ಆಶ್ರಮ ಜೀವನ, ಆಹಾರ, ಉಡುಪು ಹಾಗೂ ಜೀವನದ ಅಗತ್ಯಗಳ ಬಗ್ಗೆ ಅವರು ಗಮನಕೊಟ್ಟವರಲ್ಲ. ಸಮಾಜದಲ್ಲಿ ಅವರನ್ನು ಅನುಕರಿಸಿ ಜೀವನವೆಸಗಲು ಪ್ರಯತ್ನಿಸಿದವರು ಇಲ್ಲದಿಲ್ಲ. ಸಮಾಜವನ್ನು ನಿಯಂತ್ರಿಸುವ ಸರ್ಕಾರ, ಸಮಾಜದ ಜನರಿಗೆ ಆರ್ಥಿಕವಾಗಿ ನೆರವು ನೀಡುವ ವಾಣಿಜ್ಯ ವ್ಯಾಪಾರ ಸಂಸ್ಥೆಗಳು ಧರ್ಮದ ತಳಹದಿಯ ಮೇಲೆ ಸ್ಥಾಪಿತವಾಗಿ ಸೇವಾನಿರತವಾಗಬೇಕೆಂಬ ಧ್ಯೇಯ ಅವರದು. ಸ್ವತಂತ್ರ ಭಾರತದ ಒಬ್ಬ ಮಂತ್ರಿ ತನ್ನಂತೆಯೇ ಪರ್ಣಶಾಲೆಯಲ್ಲಿ ಜೀವಿಸುತ್ತ, ರಾಟೆಯಿಂದ ಸ್ವತಃ ತೆಗೆದ ನೂಲಿನಿಂದ ಬಟ್ಟೆಯನ್ನು ನೇಯ್ದು ಧರಿಸುತ್ತ, ಕಾಲುನಡಿಗೆಯಲ್ಲಿ ಮಂತ್ರಿ ಸದನಕ್ಕೆ ಹೋಗಿ ಚಾಪೆಯ ಮೇಲೆ ಕುಳಿತು ಕಾರ್ಯನಿರತನಾಗಿ ಸ್ವಯಮಾಭಿವೃದ್ಧಿಗೆ ಗಮನಕೊಡದೆ, ನಿಷ್ಕಾಮಕರ್ಮಿಯಾದರೆ ಕೆಳಗಿನ ಅಧಿಕಾರಿಗಳಲ್ಲಿ ಲಂಚರುಷುವತ್ತುಗಳ ಬಗ್ಗೆ ಭೀತಿ ತಾನಾಗಿಯೇ ಹುಟ್ಟಿ ಸರ್ಕಾರದ ಕೆಲಸ ಸತ್ಯಧರ್ಮಗಳಿಂದ ಸಾಗುವುದೆಂದು ಅವರು ನಂಬಿದ್ದರು.

ಗಾಂಧೀಜಿಯವರು ಗತಿಸಿದ ಮೇಲೆ ಅವರ ಧ್ಯೇಯಗಳೆಲ್ಲವನ್ನು ಜನರು ಮರೆತರು. ಯಾರನ್ನು ಗಾಂಧಿ ಹರಿಜನರೆಂದು ಕರೆದರೋ ಅವರು ಅನುಸೂಚಿತ (ಷೆಡ್ಯೂಲ್ಡ್) ಜಾತಿ ಹಾಗೂ ಪಂಗಡದ ಜನರೆನಿಸಿಕೊಂಡರು, ಸರ್ಕಾರ ವಿಶೇ

ಪ್ರಯತ್ನಪಟ್ಟರು ಸಹ ಅನುಸೂಚಿತ ಪಂಗಡಗಳವರು ಇತರ ಜನರೊಂದಿಗೆ ಸಮಾನ ಸ್ಥಾನವನ್ನು ಸಮಾಜದಲ್ಲಿ ಪಡೆಯದೆ ದೂರವಾಗಿಯೇ ಉಳಿದರು. ದೇವಾಲಯ ಪ್ರವೇಶ, ಪಂಕ್ತಿ ಭೋಜನ ಮೊದಲಾದವು ಕೇವಲ ತೋರಿಕೆಯಾದುವೇ ಹೊರತು, ಮನುಜ ಪ್ರೇಮದಿಂದ ಹರಿಜನರನ್ನು ಕಾಣುವ ಮನಸ್ಸು ಸಮಾಜದಲ್ಲಿ ಮೂಡಲಿಲ್ಲ. ಇತ್ತೀಚೆಗೆ ಹರಿಜನರು ಇಸ್ಲಾಂ ಧರ್ಮವನ್ನು ಸ್ವೀಕರಿಸುತ್ತಿರುವ ಸುದ್ದಿ ಕೇಳಿಬರುತ್ತಿದೆ.

ಸ್ವಾತಂತ್ರ್ಯವನ್ನು ಗಳಿಸಿದ ಕಾಂಗ್ರೆಸ್ ಸಂಸ್ಥೆ ರಾಜಕೀಯ ಪಕ್ಷವಾಗಿ ಉಳಿದರೆ ದೇಶದ ಕ್ಷೇಮಾಭಿವೃದ್ಧಿಗೆ ಹಾನಿಕರವೆಂದು ಗಾಂಧೀಜಿ ಭಾವಿಸಿದ್ದರು. ಅವರು ಭಾವಿಸಿದ್ದಂತೆಯೇ ಅಧಿಕಾರಲಾಲಸೆ, ಅಸಮಾಧಾನ, ಪಕ್ಷಾಂತರ ಹಾಗೂ ವೈಷಮ್ಯಗಳಿಂದ ಕಾಂಗ್ರೆಸ್ ಛಿದ್ರವಾದ ಕಥೆ ಜನಕ್ಕೆ ತಿಳಿದ ವಿಷಯ. ಗಾಂಧೀಜಿಯವರು ಮೃತರಾಗುವದಕ್ಕೆ ಮೂರುತಿಂಗಳ ಹಿಂದೆಯೇ ಕಾಂಗ್ರೆಸ್ ರಾಜಕೀಯ ಸಂಸ್ಥೆಯಾಗಿ ಉಳಿಯದೆ ರದ್ದಾಗಿ ಪ್ರಜಾಸತ್ತಾತ್ಮಕ ರಾಷ್ಟ್ರದ ಆಡಳಿತವನ್ನು ಚುನಾವಣೆಯ ಮೂಲಕ ಸ್ಥಾಪಿಸಲು ಅನುಕೂಲವಾಗುವಂತೆ ರಾಜಕೀಯ ಪಕ್ಷಗಳು ಸ್ಥಾಪನೆಯಾಗುವುದು ಯುಕ್ತವೆಂಬ ಅಭಿಪ್ರಾಯವನ್ನು ಸೂಚಿಸಿದ್ದರು. ಅವರ ಮಾತುಗಳಿವು—

"I am convinced that no patchwork treatment can cure the Congress. It will only prolong the agony. The best Thing for the Congress would be that it should dissolve itself before the rot sets in further. Its voluntary liquidation would brace up and purify the political climate."

ತಮ್ಮ ಮರಣಕ್ಕೆ ಕೆಲವು ದಿನಗಳ ಹಿಂದೆ ಗಾಂಧೀಜಿ ಹೀಗೆಂದು ಅಭಿಪ್ರಾಯ ಪಟ್ಟರು ;

"If the congress engages in the ungainly skirmish for power, it will find one morning that it is no more in power."

ಗಾಂಧೀಜಿಯವರು ಮೃತರಾಗಿ ಮೂರು ದಶಕಗಳ ಮೇಲಾಯಿತು. ಈ ಅಲ್ಪ ಕಾಲಾವಧಿಯಲ್ಲಾಗಲೇ ಅವರನ್ನು ಪ್ರತ್ಯಕ್ಷವಾಗಿ ಕಂಡವರಿಗೆ ಅವರು ಒಬ್ಬ ಕನಸವ್ಯಕ್ತಿಯಾಗಿಯೂ. ಅವರನ್ನು ಕಾಣದ ಪೀಳಿಗೆಗಳಿಗೆ ಒಬ್ಬ ಐತಿಹ್ಯ ಪುರುಷನಾಗಿಯೂ ಆಗಿರುವುದು ಸೋಜಿಗದ ವಿಷಯ. ಗಾಂಧಿ ಮಹಾತ್ಮನ ಮರಣವನ್ನು ಕವಿ ಕುವೆಂಪು ಅವರು ದುರ್ಮರಣವೆಂದು ಭಾವಿಸಲಿಲ್ಲ. ಗಾಂಧಿಯವರ ಮರಣ ದೈವಕೃಪೆಯಿಂದ ಆದದ್ದು: ಅವರು ವ್ಯಾಧಿಯಿಂದ ನರಳಲಿಲ್ಲ. ಔಷಧಿ ಹಾಗೂ ಶಸ್ತ್ರಚಿಕಿತ್ಸೆಗಳಿಗೆ ಒಳಗಾಗಲಿಲ್ಲ. ಲಿಂಕನ್ ಮತ್ತು ಮುಸಲೋನಿಗಳಂತೆ ಮಡಿಯಲಿಲ್ಲ: ಮಾನವ ಸೇವೆಯಲ್ಲಿ

ನಿರತರಾಗಿ, ಮಾನವರ ಹಿತಚಿಂತನೆಯಲ್ಲಿ ದೇವತಾಪ್ರಾರ್ಥನೆಯನ್ನು ಸಲ್ಲಿಸಲು ಹೋದಾಗ ಸಾಕ್ರೇಟಿಸನಂತೆ, ಏಸುಕ್ರಿಸ್ತನಂತೆ ಪ್ರಶಾಂತತೆಯ ಮಡಲಲ್ಲಿ ಸಾವನ್ನಪ್ಪಿದರು. ಈ ಮಹಾಪುರುಷನು ಬೋಧಿಸಿದ ನೀತಿ, ಸಾರಿದ ಆದರ್ಶಗಳು ಎಷ್ಟರ ಮಟ್ಟಿಗೆ ನಮ್ಮ ಇಂದಿನ ಸಮಾಜದಲ್ಲಿ ಉಳಿದಿವೆಯೆಂಬುದನ್ನು ನಿರ್ಧರಿಸಲು ಯಾವ ಅಳತೆಗೋಲೂ ಇಲ್ಲ. ಅವೆಲ್ಲವೂ ಶಾಲೆಯ ಉಪಾಧ್ಯಾಯರು ಬೋರ್ಡಿನ ಮೇಲೆ ಬರೆದ ಪಾಠದಂತೆ ಎಂದೋ ಅಳಿಸಿಹೋಗಿವೆ. ಅವರನ್ನು ಸ್ಮರಿಸುವುದು ಸಹ ಎಂದೋ ವರ್ಷಕ್ಕೊಮ್ಮೆ ಆಗಿರುವಾಗ ಅವರ ಪ್ರಭಾವ ಸಮಾಜದ ಮೇಲೆ ಹೇಗೆ ತಾನೆ ಉಳಿದೀತು ?

ಪ್ರದರ್ಶನ

**ಕರ್ನಾಟಕದಲ್ಲಿ**

# ಖಾದಿ ಬೆಳವಣಿಗೆ

**ಕೆ. ಎಂ. ಶಿವಲಿಂಗಯ್ಯ**

"ತಿನ್ನಲು ಆಹಾರ, ಉಡಲು ಬಟ್ಟೆ, ಇರಲು ಮನೆ. ಇವುಗಳಿಗಾಗಿ ನಾವು ಏಕೆ ಪರದೇಶೀಯರನ್ನು ಅವಲಂಬಿಸಬೇಕು. 150ವರ್ಷಗಳ ಹಿಂದೆ ಪರದೇಶೀಯರ ಒಂದಂಗುಲ ಬಟ್ಟೆಯೂ, ನಮಗೆ ಬೇಕಾಗಿರಲಿಲ್ಲ, ಇದಕ್ಕೆ ಸ್ವಾವಲಂಬನೆ ಅಗತ್ಯ. ಕರ್ನಾಟಕದಲ್ಲಿ ಗ್ರಾಮಸೇವಾ ಸಂಘ, ಮತ್ತು ಚರಕಾ ಸಂಘಗಳು ಖಾದಿಗೆ ಪ್ರೋತ್ಸಾಹ ಕೊಡುತ್ತಿರುವುದು ಸಂತೋಷದ ವಿಚಾರ." ಹೀಗೆಂಬುದಾಗಿ ಕನ್ನಡ ನೆಲವಾದ ಹರಿಹರದ ಕಾಂಗ್ರೆಸ್ ಅಧಿವೇಶನ ಸಂಬಂಧ ಏರ್ಪಡಿಸಿದ್ದ, ಖಾದಿವಸ್ತು ಪ್ರದರ್ಶನ ಮತ್ತು **"ಮಹಾತ್ಮರ ಪೂರ್ಣಸ್ವದೇಶಿ ಗ್ರಂಥ"** ಬಿಡುಗಡೆ ಸಮಾರಂಭದಲ್ಲಿ ತಾ 6-4-1941 ರಂದು ಡಾ॥ ಬಾಬುರಾಜೇಂದ್ರಪ್ರಸಾದ್‌ರವರು ಘೋಷಿಸಿದ್ದು ಕರ್ನಾಟಕಕ್ಕೆ ಸಂದಗೌರವ.

ಕರ್ನಾಟಕದಲ್ಲಿ ಅದರಲ್ಲೂ ಮೈಸೂರು ಸಂಸ್ಥಾನದಲ್ಲಿ ಖಾದಿ ಬೆಳವಣಿಗೆಗೆ ಅನೇಕ ಮಹನೀಯರು ಮಾರ್ಗದರ್ಶಕರಾಗಿದ್ದುದುಂಟು. ಅಖಿಲಭಾರತ ಚರಕಾ ಸಂಘದ ಅಧ್ಯಕ್ಷರಾಗಿದ್ದ, ಜೆ. ಸಿ. ಕುಮಾರಪ್ಪ, ಕೆ. ಎಫ್. ನಾರೀಮನ್, ಡಾ॥ ಪಟ್ಟಾಭಿ ಸೀತಾರಾಮಯ್ಯ, ಹರ್ಡೇಕರ ಮಂಜಪ್ಪ, ಇವರುಗಳು ಮುಖ್ಯರು. ಅಂದು ಖಾದಿ ತಯಾರಿಕೆ ಏಳುಸಾವಿರ ಕೆಲಸಗಾರರಿಂದ 400 ಕೈಮಗ್ಗಗಳಿಂದ ನಡೆಯುತ್ತಿತ್ತು. 1921ರ ಅಹಮದಾಬಾದ್ ಕಾಗ್ರೆಸ್ಸಿನನಂತರ, ಖಾದಿ ಪ್ರಚಾರ ಚುರುಕಾಯಿತು ಅನೇಕರು ಮೊದಮೊದಲು ಅಹಮದಾಬಾದಿನಿಂದ ಖಾದಿತಂದು ಮನೆಮನೆಗೆ ಮಾರುತ್ತಿದರು. ಈ ಕಾರಣ ನೂಲುವುದು, ನೇಯುವುದಕ್ಕೆ ಇಲ್ಲೇ ಉತ್ತೇಜನಕೊಡುವ ಆಲೋಚನೆ ಕಾರ್ಯಕರ್ತರಲ್ಲಿ, ಮೂಡಿತು. ಅದರ ಪರಿಣಾಮ, ಅನೇಕ ಖಾದಿ ಕೇಂದ್ರಗಳು, ಚರಕಾ ತರಗತಿ, ನೂಲುವ ಕೇಂದ್ರಗಳು ಸ್ಥಾಪಿಸಲ್ಪಟ್ಟವು. ಖಾದಿವಸ್ತು ಪ್ರದರ್ಶನಗಳನ್ನೂ ಪ್ರಾರಂಭಿಸಲಾಯಿತು.

**ಮಹಾತ್ಮರಿಂದ ಪ್ರಾರಂಭ**

1927ರಲ್ಲಿ ಬೆಂಗಳೂರಿನ ದೇಶೀಯ ವಿದ್ಯಾಶಾಲೆಯಲ್ಲಿ ಪ್ರಥಮತಹ ಖಾದಿ ವಸ್ತು ಪ್ರದರ್ಶನವನ್ನು ಮಹಾತ್ಮಾಗಾಂಧಿಯವರು ಪ್ರಾರಂಭಿಸಿದರು. ಕೋಟೆ ಖಾದಿ ವಸ್ತ್ರಾಲಯವೆಂದು. ಪ್ರಸಿದ್ಧ ಖಾದಿ ಮಾರಾಟ ಮಳಿಗೆಯೂ ಅಂದೇ ಪ್ರಾರಂಭವಾಯಿತು. ಕ್ರಮೇಣ ಈ ಸಂಸ್ಥೆಯು ಖಾದಿ ವ್ಯಾಪಾರ ತುಟ್ಟತುದಿಗೆ ಮುಟ್ಟಿದ್ದು. ಕೊನೆ ಕೊನೆಗೆ ಖಾದಿಬೇಡಿಕೆ ಈಡೇರಿಸಲಾರದ ಸ್ಥಿತಿಯನ್ನೂ ಮುಟ್ಟಿತ್ತು, (ಆದರೆ

ಇಂದು ಇದರ ಸ್ಥಿತಿ ಶೋಚನೀಯ) ಖಾದಿ ಪ್ರಚಾರದ ಅಂಗವಾಗಿ ಅಖಿಲಭಾರತ ಚರಕಾ ಸಂಘದವರು, ನೂಲುವ ಸ್ಪರ್ಧಾಕೇಂದ್ರಗಳನ್ನು ತೆರೆದು ಸ್ಪರ್ಧೆ ಏರ್ಪಡಿಸುತ್ತಿದ್ದರು. ಇಂಥ ಒಂದು ಸ್ಪರ್ಧೆಯಲ್ಲಿ ಜಯಶೀಲರಾದ ಅರಕಲಗೂಡು ವೆಂಕಟರಾಮಯ್ಯನವರಿಗೆ, ಚಿನ್ನದ ಪದಕವನ್ನು ಮಹಾತ್ಮಾಗಾಂಧಿಯವರ ಸ್ವಹಸ್ತದಿಂದ ಕೊಡಿಸಲಾಗಿತ್ತು.

ಮಹಾತ್ಮಾಗಾಂಧಿಯರು ತಗಡೂರು ಗ್ರಾಮಕ್ಕೆ ಭೇಟಿಕೊಟ್ಟ ಜ್ಞಾಪಕಾರ್ಥ ಅಲ್ಲಿ ಖಾದಿತಯಾರಿಕೆ, ನೂಲುವಕೇಂದ್ರವನ್ನು "ಮೈಸೂರಿನ ಗಾಂಧಿ" ಎಂದು ಸುಪ್ರಖ್ಯಾತ ತಗಡೂರು ರಾಮಚಂದ್ರರಾಯರು ತೆರೆದರು. ಪ್ರಾರಂಭದಲ್ಲಿಯೇ ಈ ಕೇಂದ್ರದಲ್ಲಿ ಎಂಟು ಸಾವಿರ ರೂಪಾಯಿ ಖಾದಿಉತ್ಪನ್ನವಾಯಿತು. ಮಹಾತ್ಮಾಗಾಂಧಿಯವರ ಆಶೀರ್ವಾದ ಸಹ ಈ ಕೇಂದ್ರಕ್ಕೆ ದೊರಕಿದ್ದು, ಇಲ್ಲಿ ತಯಾರಾದ ಬಟ್ಟೆ ಮೈಸೂರು ನಗರದಲ್ಲಿದ್ದ ಖಾದಿ ಪರಸ್ಪರ ಸಹಕಾರ ಸಂಘಕ್ಕೆ ಮಾರಾಟಕ್ಕೆ ಕಳುಹಿಸಲಾಗುತ್ತಿತ್ತು. 1925ನೆ ಜೂನ್ 12ನೆ ತಾರೀಖು ಮೈಸೂರು ನಗರದಲ್ಲಿ ಮಿರ್ಲೆ ಲಕ್ಷ್ಮೀನಾರಾಯಣ ರಾಯರು ಮತ್ತು ಪಿ. ಗೋಪಾಲಕೃಷ್ಣಶೆಟ್ಟರು ಇವರ ಶ್ರಮದ ಫಲವಾಗಿ "ಖದ್ದರ್ ಪರಸ್ಪರ ಸಹಕಾರ ಸಂಘ ಪ್ರಾರಂಭಿಸಲ್ಪಟ್ಟು ಖಾದಿ ಮಾರಾಟದಲ್ಲಿ ಈ ಸಂಘ ಗಣನೀಯ ಯಶಸ್ಸನ್ನು ಪಡೆಯಿತು. ಈ ಸಂಘಕ್ಕೆ ರಾಷ್ಟ್ರನಾಯಕರೆಲ್ಲರೂ ಭೇಟಿ ಇತ್ತು ತಮ್ಮ ಮೆಚ್ಚಿಕೆ ವ್ಯಕ್ತಪಡಿಸಿದ್ದರು.

ಮೈಸೂರಿನಲ್ಲಿ ಖಾದಿ ಬೆಳವಣಿಗೆಗೆ ಸಾರ್ವಜನಿಕರಿಂದಲ್ಲದೆ ರಾಜಾಶ್ರಯವೂ ದೊರಕಿತ್ತು. ಇದರ ಪರಿಣಾಮ ಅರಮನೆಗೆ ಸೇರಿದ ಕರೊಟ್ಟಿ ಕಟ್ಟದಲ್ಲಿ 1930ರಲ್ಲಿ ಸೇಲಂ ವಿಜಯಾ ರಾಘವಾಚಾರ್‌ರವರಿಂದ ಖಾದಿ ವಸ್ತುಪ್ರದರ್ಶನ ಉದ್ಘಾಟಿಸಲ್ಪಟ್ಟಿತ್ತು. ಮೈಸೂರು ಸಂಸ್ಥಾನದಲ್ಲಿ ಪ್ರಥಮತ: ಖಾದಿ ಮತ್ತು ನೂಲು ತೆಗೆಯುವ ಕೈಗಾರಿಕೆಗೆ ಪ್ರೋತ್ಸಾಹ ಕೊಟ್ಟವರು ದಿವಾನ್ ಸರ್ ಮಿರ್ಜಾ ಸರ್ಕಾರದವರು. ಇವರು ಮಹಾತ್ಮ ಗಾಂಧಿಯವರ ಪ್ರೀತಿಗೆ ಪಾತ್ರರಾಗಿದ್ದವರು. ಬೆಂಗಳೂರಿನ ವೈಶ್ಯಾಬ್ಯಾಂಕ್ ಸಮಾಂಭ ಒಂದರಲ್ಲಿ ಮಹಾತ್ಮಾಗಾಂಧಿಯವರು ತಮ್ಮ ಪಾದರಕ್ಷೆಯನ್ನು ಮರೆತು ಸಭೆಯೊಂದಕ್ಕೆ ಬಂದಿದ್ದರು. ಇದನ್ನು ತಿಳಿದ ದಿವಾನ್ ಮಿರ್ಜಾರವರು ತಮ್ಮ ಮಗ ಹುಮಾಯೂನ್ ಮಿರ್ಜಾರವರಿಂದ ತರಿಸಿ ಮಹಾತ್ಮರಿಗೆ ಒಪ್ಪಿಸಿದರು, ಮಿರ್ಜಾರವರು ದಿವಾನ್‌ರಾಗಿದ್ದರೂ ಮಹಾತ್ಮರಲ್ಲಿ ಅಭಿಮಾನವಿಟ್ಟಿದ್ದಕ್ಕೆ ಇದೊಂದು ಉದಾಹರಣೆ. ಇವರ ಕಾಲದಲ್ಲಿ ಬದನವಾಳು ನೂಲುವ ಪ್ರಾಂತ್ಯವೆಂಬ ಪ್ರಸಿದ್ಧ ಖಾದಿ ಸೆಂಟರನ್ನು ಪ್ರಾರಂಭಿಸಲಾಯಿತು. ಈ ಸೆಂಟರಿನ ಅಭಿವೃದ್ಧಿಗೆ ಶ್ರೀ ಎಸ್. ವಿ. ರಾಜಾರಾಯ ಐಯ್ಯಂಗಾರ್ ರವರು ಅಹರ್ನಿಶಿದುಡಿದರು. ಇದರ ಪರಿಣಾಮವಾಗಿ ಈ ಸೆಂಟರಿನಲ್ಲಿ ಖಾದಿ ಉತ್ಪನ್ನ 80 ಸಾವಿರ ರೂಪಾಯಿಗಳಿಗೆ ಏರಿತ್ತು.

"ಖಾದಿಯ ಗತವೈಭವ ನೆನೆಸಿದಲ್ಲಿ 1920ರಲ್ಲಿ ಕರ್ನಾಟಕದಲ್ಲಿ 55 ಸಾವಿರ ಕೈಮಗ್ಗಗಳಿದ್ದವು. ಗ್ರಾಮಾಂತರ ಜನರ ಉದ್ಧಾರಕ್ಕಾಗಿ, ಖಾದಿಪ್ರಸಾರ, ಖಾದಿ ಬೆಳವಣಿಗೆ

ಈ ಮಗ್ಗಗಳಮೂಲಕವಾಗುತ್ತಿತ್ತು. ಈ ಕೈಗಾರಿಕೆಯ ಉಳಿವಿಗಾಗಿ ರಾಷ್ಟ್ರ ಜೀವನದ ಅಭಿವೃದ್ಧಿಗೆ, ವಿದ್ಯಾವಂತರು ಲಾಯರುಗಳು, ಪ್ರಜಾಮುಖಂಡರುಗಳು ಹಳ್ಳಿಗಳ ಕಡೆ ಗಮನವಿತ್ತು ಖಾದಿ ಬೆಳವಣಿಗೆಮಾಡಿ ಕೀರ್ತಿ ಪಡೆಯಿರಿ" ಕಾಂಗ್ರೆಸ್ ಅಧ್ಯಕ್ಷರಾದ ದೀನಬಂಧು ಪೆಟ್. ಸಿದ್ದಯ್ಯನವರು ಕಾಂಗ್ರೆಸ್ ಅಧ್ಯಕ್ಷರಾಗಿದ್ದಾಗ ಕಾಂಗ್ರೆಸ್ಸಿನವರಿಗೆ ಇತ್ತ ಸಂದೇಶವಿದು. ಅಂದು ನಾಯಕರ ಆಜ್ಞೆಯನ್ನು ಶಿರಸಾವಹಿಸಿ ಕಾರ್ಯ ಕರ್ತರಾದವರು. ಮುಖಂಡರು ಪಾಲಿಸುತ್ತಿದ್ದುದಕ್ಕೆ ಇದು ಸಾಕ್ಷಿ.

ಖಾದಿ ಕೈಗಾರಿಕೆಗೆ ಸರ್ಕಾರ ನೇರವಾಗಿ ಪ್ರೋತ್ಸಾಹ ಕೊಟ್ಟಿದ್ದಲ್ಲದೆ ಸ್ಥಳೀಯ ಸಂಸ್ಥೆಗಳೂ ಸೂಕ್ತ ಕಾರ್ಯಕ್ರಮ ಹಾಕಿಕೊಂಡಿದ್ದವು. 1934ರಲ್ಲಿ ಚಿಕ್ಕಮಗಳೂರಿನಲ್ಲಿ ಶ್ರೀ ವೆಂಕಟರಾಮಯ್ಯನವರ ನೇತೃತ್ವದಲ್ಲಿ ಜಿಲ್ಲಾ ಬೋರ್ಡು ಅಧ್ಯಕ್ಷರಿಂದ ಹೊಸಕೊಪ್ಪ ಕೃಷ್ಣರಾಯರು ಖಾದಿ ಭಂಡಾರ ಮತ್ತು ಖಾದಿ ವಸ್ತುಪ್ರದರ್ಶನ ಏರ್ಪಾಡು ಮಾಡಿದ್ದರು. ಅಜ್ಜಂಪುರದ ಖಾದಿತಯಾರಿಕೆ ಕೇಂದ್ರ ಸುಪ್ರಸಿದ್ಧ ದೇಶಭಕ್ತ ಪಿ. ಸಿ. ರಾಯ್‌ರವರಿಂದ ಪ್ರಾರಂಭಿಸಲ್ಪಟ್ಟಿತ್ತು. ಅಜ್ಜಂಪುರದ ಪ್ರಸಿದ್ಧ ಹೋರಾಟಗಾರ ಸುಬ್ರಹ್ಮಣ್ಯಶೆಟ್ಟಿ. ಬೀರೂರಿನ ಕೆ.ಟಿ. ಸತ್ಯನಾರಾಯಣಶೆಟ್ಟಿಯವರು ಶ್ರೀ ಕೃಷ್ಣರಾಯರ ಪ್ರಯತ್ನಕ್ಕೆ ಹೃತ್ಪೂರ್ವಕ ಸಹಕಾರವಿತ್ತವರು. ಮೈಸೂರು ಸರ್ಕಾರದ ಕೃಪಾಶ್ರಯದಲ್ಲಿ 1927ರಲ್ಲಿಯೇ, ಚಿತ್ರದುರ್ಗದ ಜಿಲ್ಲಾ ಬೋರ್ಡಿನವರು ವಿಶೇಷವಾಗಿ ಅದರ ಅಧ್ಯಕ್ಷರಾಗಿದ್ದ, ಇಂದಿಗೂ ಸತ್ಯ ಸಂಧರಾಗಿಯೇ ಉಳಿದಿರುವ ಜಗಳೂರಿನ ಮಹಮದ್ ಇಮಾಂರವರು ಖಾದಿಪ್ರಚಾರಕ್ಕೆ ತಮ್ಮ ಹೃತ್ಪೂರ್ವಕ ಸಹಾಯ ಸಹಕಾರಗಳನ್ನಿತ್ತ ಫಲವಾಗಿ ಚಿತ್ರದುರ್ಗ ಜಿಲ್ಲೆ ಖಾದಿತಯಾರಿಕೆಗೆ ಪ್ರಸಿದ್ಧಿ ಪಡೆಯಿತು, "**ಹೊಸುರಪ್ಪ**" ಎಂಬ ಬಡಗಿ ಸರಳರೀತಿಯ ಚರಕಾ ತಯಾರಿಸಿಕೊಟ್ಟ. ಇದರ ಪ್ರಾರಂಭೋತ್ಸವ ಗಾಂಧಿಯವರಿಂದ 1927ರಲ್ಲಿ ನಡೆಸಲ್ಪಟ್ಟಿತು. ಈ ಜಿಲ್ಲೆಯ ಹೆಸರಾಂತ ನಾಯಕರುಗಳಾದ ಶ್ರೀ ಎಸ್. ವಾಸುದೇವರಾವ್, ಖಾಸಲ ಶ್ರೀನಿವಾಸಶೆಟ್ಟಿ, ಹರಿಹರದ ಗುಂಡೂರಾವ್. ಹುಳ್ಳೂರು ಶ್ರೀನಿವಾಸಜೋಯಿಸ್, ಖಾದಿಸಿದ್ಧಪ್ಪ (ಈಗಲೂ ಇವರು ನವಭಾರತ ಖಾದಿ ಗ್ರಾಮೋದ್ಯೋಗ ಸಂಘ ನಡೆಸುತ್ತಿದ್ದಾರೆ) ಇವರುಗಳು ತಮ್ಮ ಜೀವಿತ ಕಾಲವನ್ನೆಲ್ಲಾ ಖಾದಿಪ್ರಚಾರಕ್ಕೆ ವಿನಿಯೋಗಿಸಿದರು, ಇದರ ಪರಿಣಾಮ ಚಿತ್ರ ದುರ್ಗಜಿಲ್ಲೆಯಲ್ಲಿ ಹೊಸಕೆರೆ ದೇವರಪುರ, ತುರುವನೂರು, ದೊಡ್ಡ ಸಿದ್ಧವ್ವನಹಳ್ಳಿ, ರಾಮಜೋಗಿಹಳ್ಳಿ ಐಮಂಗಲಿ, ಇಟಕ ದಿಬ್ಬನಹಳ್ಳಿ. ಬಾಗೇಶಪುರ ಖಾದಿತಯಾರಿಸುವ ಪ್ರಸಿದ್ಧ ಕೇಂದ್ರಗಳಾದವು. ತುರುವನೂರಂತೂ ಅಖಿಲಭಾರತ ಪ್ರಖ್ಯಾತಿಯನ್ನೇ ಪಡೆಯಿತು.

ಮೈಸೂರು ಸಂಸ್ಥಾನದಲ್ಲಿ ಗ್ರಾಮಸೇವಾಸಂಘವೆಂಬ ಮತ್ತೊಂದು ಸಂಸ್ಥೆ 1931 ರಲ್ಲಿ ಅಸ್ತಿತ್ವಕ್ಕೆ ಬಂದಿತು. ತಾಳಕೆರೆ ಸುಬ್ರಹ್ಮಣ್ಯಂರವರು ಇದರ ಪ್ರಥಮ ಅಧ್ಯಕ್ಷರು. ವಾಸುದೇವರಾಯರು ಕಾರ್ಯದರ್ಶಿ. ಈಸಂಸ್ಥೆ ಹೊಸೂರು, ಗೋಲಾರ, ಗೊರೂರು,

ಕೆಂಗೇರಿ, ಶುದ್ಧಕುಂಟೆ, ಕಡಬಗಳಲ್ಲಿ ಖಾದಿ ಉತ್ಪಾದನಾಕೇಂದ್ರಗಳನ್ನು ತೆರೆದು ಯಶಸ್ವಿ ಕೆಲಸ ನಡೆಸಿತು. ಬಿ. ಕಾಮಾಕ್ಷಮ್ಮ ಎಂಬುವರು ಮಹಿಳಾ ಸ್ವಯಂಸೇವಕಿಯುವರು. ಸತ್ಯಾಹಃ ನೂಲುವುದನ್ನು ಚರಕಾ ತರಗತಿಗಳಮೂಲಕ ಸಾರ್ವಜನಿಕರಿಗೆ ಹೇಳಿಕೊಡುತ್ತಿದ್ದರು. ಕಂದಾಡಿ ಕೃಷ್ಣಐಯ್ಯಂಗಾರ್, ಕೋಲಾರದ ಸಂಪದ್ಗಿರಿರಾವ್. ಟಿ. ಟಿ. ಶರ್ಮ. ಮೊದಲಾದವರು ಬೆಂಗಳೂರು ಭಾಗದಲ್ಲಿ ಖಾದಿಪ್ರಚಾರವನ್ನು ಯಶಸ್ವಿಯಾಗಿ ನಡೆಸಿದ ಪ್ರಮುಖರುಗಳು.

1933ರಲ್ಲಿ ಗಾಂಧಿಯವರು ಕರ್ನಾಟಕ ಪ್ರವಾಸಕ್ಕೆ ಮತ್ತೆ ಬಂದಾಗ ತುಮಕೂರಿನ ಏಕಮಾತ್ರ ಹರಿಜನ ಕಾರ್ಯಕರ್ತ. ಸಿ. ಟಿ. ಹನುಮಂತಯ್ಯನವರು ನೂಲುವುದು, ಖಾದಿಪ್ರಚಾರ ಕೈಗೊಳ್ಳುವುದಾಗಿ ಗಾಂಧಿಯವರ ಸಮ್ಮುಖದಲ್ಲಿ ಪ್ರತಿಜ್ಞೆ ಕೈಗೊಂಡರು. ತಲೆಹೊರೆಯಲ್ಲಿ, ಮನೆ ಮನೆಗೆ ಖಾದಿಬಟ್ಟೆ ಹೊತ್ತು ಖಾದಿಮಾರಟ ಮಾಡಿದರು. ಚರಕಾ ತರಗತಿಗಳನ್ನು ನಡೆಸಿ ನೂಲುವುದನ್ನು ಹೇಳಿಕೊಡುತ್ತಿದ್ದರು.

ಈ ಮೊದಲು ಕಾಂಗ್ರೆಸ್ ಅಧಿವೇಶನಗಳ ಅಂಗವಾಗಿ ಖಾದಿವಸ್ತುಪ್ರದರ್ಶನಗಳನ್ನು ಏರ್ಪಡಿಸಿ ರಾಷ್ಟ್ರದ ಹಿರಿಯ ಗಾಂಧೀವಾದಿಗಳಿಂದ ಪ್ರಾರಂಭೋತ್ಸವ ನಡೆಸಲಾಗುತ್ತಿತ್ತು. ಇಂಥ ಪ್ರದರ್ಶನಗಳನ್ನು ಪ್ರಾರಂಭಿಸಿದ ಮಹನೀಯರುಗಳು, ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯ (ವಿದುರನಗರ) ಡಾ॥ ಬಾಬುರಾಜೇಂದ್ರಪ್ರಸಾದ್ (ವಿನೋಬನಗರ) ಡಾ॥ ಪಟ್ಟಾಭಿಸೀತಾರಾಮಯ್ಯ (ಅಜಾದ್‌ನಗರ) ಕೋಟರೆಡ್ಡಿ (ಸುಭಾಷ್‌ನಗರ) ಕಾಳಾವೆಂಕಟರಾವ್ (ನೆಹ್ರೂನಗರ)

ಕರ್ನಾಟಕದ ಗಂಟುಮುಂಟ್ಟಿನ ನೆಲವೆಂದು ಸುಪ್ರಖ್ಯಾತವಾದದ್ದು ದಾವಣಗೆರೆ, ಈ ಊರಿನಲ್ಲಿ ಹರ್ಡೇಕರ ಮಂಜಪ್ಪನವರು, ಶಿರೂರು ಲಕ್ಷಣರಾಯರು, ಬಾಳಪ್ಪನವರ ಸಹಾಯದಿಂದ, ಜ್ಞಾನಪ್ರಸಾರ ಸಂಘವನ್ನು ಪ್ರಾರಂಭಿಸಿ ಖಾದಿತತ್ವ ಬೋಧನೆಗೆ ಪ್ರಾರಂಭಿಸಿದರು. 1920ನೆ ಆಗಷ್ಟ್ ಒಂದನೆ. ತಾರೀಖು ಅಖಂಡಭಾರತಕ್ಕೆ ಮಹತ್ವದಿನ. ಒಂದು ಕಡೆ ಹಿರಿಯ ನಾಯಕ ಬಾಲಗಂಗಾಧರತಿಲಕ್‌ರವರು ನಿಧನರಾಗಿ ರಾಷ್ಟ್ರ ಶೋಕ ಪಡುತ್ತಿದ್ದ ದಿನ, ತಿಲಕರ ಯುಗ ಮುಗಿದು ಮಹಾತ್ಮಗಾಂಧಿಯವರು ಅಹಿಂಸಾ ಯುದ್ಧವನ್ನು ತಮ್ಮದೇ ಆದ ರೀತಿಯಲ್ಲಿ ನಡೆಸಲು ಘೋಷಿಸಿದ ದಿನವೂ ಅಹುದು. ಶ್ರೀ ಮಂಜಪ್ಪನವರು ತಿಲಕರ ಸ್ಮರಣಾರ್ಥ ಖಾದಿ ಧಾರಣೆ ಪ್ರತಿಜ್ಞೆ ಕೈಗೊಂಡರು. ಮಂಜಪ್ಪನವರು "**ಏಕದಾರಿ**" ಬಾರಿಸಿಕೊಂಡು ಖಾದಿಪ್ರಚಾರ ಮಾಡುತ್ತಿದ್ದ ಅಗ್ರಗಣ್ಯ ಖಾದಿ ಪುರಸ್ಕೃತರು. ಅವರು "**ಖಾದಿವಿಜಯ**" ಎಂಬ ಪತ್ರಿಕೆಯನ್ನು ಪ್ರಾರಂಭಿಸಿ ಅದರ ಮೂಲಕ ಖಾದಿ ಪ್ರಚಾರಕೈಗೊಂಡರು. ಇವರಿಗೆ ಖಾದಿಮೇಲೆ ಇದ್ದ ಸ್ವದೇಶಿಮೋಹ ಆಲೂರು ವೆಂಕಟರಾಯರಂಥವರನ್ನೂ ಬೆರಗು ಗೊಳಿಸಿತ್ತು. ಮಂಜಪ್ಪನವರಿಂದ ಬರೆಯಲ್ಪಟ್ಟ "ಖಾದಿಶಾಸ್ತ್ರ" ಗ್ರಂಥವನ್ನು ಆಲೂರರು ತಮ್ಮ ನವಜೀವನ ಗ್ರಂಥಮಾಲೆಯಲ್ಲಿ ಪ್ರಕಟಿಸಿದರು, ಖಾದಿ ಹೊಟ್ಟೆಗಿಲ್ಲದವರಿಗೆ ಹೊಟ್ಟೆಗೆ, ಉದ್ಯೋಗ

ವಿಲ್ಲದವರಿಗೆ ಉದ್ಯೋಗ ಕೊಡುವ ಕಾಮಧೇನು. ನಾವು ಉಸಿರಾಡದೆ ಊಟಮಾಡದೆ ಹೇಗೆ ಬದುಕಲಾರೆವೋ ಹಾಗೆ ನಾವು ನೂಲುವುದನ್ನು ನಿತ್ಯಕಸಬಾಗಿ ಮಾಡಿಕೊಳ್ಳ ದಿದ್ದರೆ ಬದುಕುವುದು ನಿರರ್ಥಕವೆಂದು ಸಾರಿದವರು ಮಂಜಪ್ಪನವರು. ಇದೇ ಗಾಂಧಿ ತತ್ವ, ಖಾದಿ ತತ್ವ ಎಂಬುದನ್ನು ಜನತೆಗೆ ತಿಳಿಸಿಕೊಟ್ಟರು. ಮಹಾತ್ಮಗಾಂಧಿಯವರಿಂದ ಕರ್ನಾಟಕ ಗಾಂಧಿ ಎಂದು ಕರೆಯಲ್ಪಟ್ಟು ಸುಪ್ರಖ್ಯಾತರಾದವರು ಮಂಜಪ್ಪನವರು.

ಮಹಾತ್ಮಗಾಂಧಿಯವರ ಮಹಾತಪಸ್ಸಿನ ಫಲವಾಗಿ ಸಾವಿರಾರು ಮಂದಿ ದೇಶಭಕ್ತರ, ಮಾರಣ ಹೋಮದಿಂದಾಗಿ, ಖಾದಿತತ್ವಕ್ಕನುಗುಣವಾಗಿ ನಮಗೆ ಸ್ವಾತಂತ್ರ್ಯವೇನೋ ಬಂದಿತು. ಆದರೆ ದುರ್ದೈವವಶಾತ್ ಸ್ವಾತಂತ್ರ್ಯಾನಂತರ ಬಂದ ಸರ್ಕಾರಗಳು ಖಾದಿಯ **'ಮಾನಭಂಗ'** ಮಾಡಿದರು. ಗಾಂಧಿಯವರ ಖಾದಿತತ್ವವನ್ನು ಗಾಳಿಗೆ ತೂರಿದರು. ತಮ್ಮ ರಾಜಕೀಯ ಚೆಲ್ಲಾಟಕ್ಕಾಗಿ ಖಾದಿ ಬೋರ್ಡುಗಳನ್ನು ರಚಿಸಿದರು. ಅನೀತಿವಂತರು, ಭ್ರಷ್ಟಾಚಾರಿಗಳಾದವರನ್ನು ಅದರ ಅಧ್ಯಕ್ಷ ಮತ್ತು ಸದಸ್ಯರನ್ನಾಗಿ ಮಾಡಲಾಯಿತು. ಖಾದಿ ತತ್ವವೇ ತಿಳಿಯದವರು ಖಾದಿಉದ್ಧಾರ ಹೇಗೆ ಮಾಡ್ತಾರು ? ಯಾರ ಮೈಬೆವರಿನಿಂದ ಚಕ್ರವರ್ತಿಗಳ ಕಿರೀಟಗಳು ಬೆಳಗಿದವೊ, ರಾಜಮಹಾರಾಜರುಗಳ ಸಿಂಹಾಸನ ಗಳು ಮೆರೆದವೋ ಅಂಥವನ್ನು ಕೊನೆಗೊಳಿಸಿದ ಖಾದಿತತ್ವವನ್ನು, ನೀತಿಭ್ರಷ್ಟರು ಮುಗಿಸಿದರು. ಯಾವ ಬ್ರಿಟಿಷ್‌ಸರ್ಕಾರದ, ಕೈಗೊಂಬೆ ಎಂದು ನಾವು ಹೀಯಾಳಿಸು ತ್ತಿದ್ದೆವೋ ಅದೇ ದಿವಾನ್ ಸರ್‌ಮಿರ್ಜಾರವರು ಸಾಕಿ ಸಲಹಿ, ಅಭಿವೃದ್ಧಿಪಡಿಸಿದ್ದ ಖಾದಿ ಉದ್ಯಮ, ಘಟಿಂಗರಾದ ದೇಶಸೇವಕರಿಂದ ನಾಶವಾಗುತ್ತದೆಂದು ಯಾರೂ ಎಣಿಸಿರಲಿಲ್ಲ. ಅಂತೂ ಮಹಾತ್ಮರ **''ಪ್ರೀತಿಯ ಖಾದಿ''** ತತ್ವ ಕರ್ನಾಟಕದಲ್ಲಿ ಈ ರೀತಿ ನಿರ್ನಾಮವಾಗುತ್ತದೆಂದು ಇದಕ್ಕಾಗಿ ಪ್ರಾಣತೆತ್ತವರು, ಜೈಲಿಗೆ ಹೋದವರು, ಪದಭ್ರಷ್ಟರಾದವರು, ಆಸ್ತಿಪಾಸ್ತಿ ಕಳೆದುಕೊಂಡು ಬೀದಿ ಭಿಕಾರಿಗಳಾದವರು ಹೆಚ್ಚಾಗಿ ಖಾದಿ ಪ್ರಚಾರಕ್ಕಾಗಿ ದುಡಿದ ಮಹಿಳೆಯರು ಯಾರೂ ಕನಸಿನಲ್ಲಿ ಕಂಡಿರಲಿಲ್ಲ.

ಕರ್ನಾಟಕ ಭಾಗದಲ್ಲಿ ಕಾಂಗ್ರೆಸ್ಸೂ ಖಾದಿತಯಾರಿಕೆಗಾಗಿ ಪ್ರಯತ್ನ ಕೈಗೊಂಡಿ ದ್ದುಂಟು. 1940ರಲ್ಲಿ ಮೈಸೂರು ಕಾಂಗ್ರೆಸ್ಸು ತಗಡೂರು ರಾಮಚಂದ್ರರಾಯರನ್ನು ಖಾದಿ ತಯಾರಿಕೆ ಮೇಲ್ವಿಚಾರಕರನ್ನಾಗಿ ಮಾಡಿತು. ಅಖಿಲ ಭಾರತ ಚರಕಾ ಸಂಘ ಸಹ ಖಾದಿ ಅಭಿವೃದ್ಧಿಗೆ ಗಮನಕೊಟ್ಟಿತು.

1941ರಲ್ಲಿ ಖಾದಿಬೆಳವಣಿಗೆ ಬಗ್ಗೆ ಭಾರತ ಸರ್ಕಾರದವರು ನೇಮಿಸಿದ್ದ ''ಸತ್ಯಾಂಶ ಪರಿಶೋಧನಾಸಮಿತಿ''ಯ ರಿಪೋರ್ಟು ಉಪಯುಕ್ತವಾಗಿದ್ದರೂ, ಸ್ವಾತಂತ್ರ್ಯದ ನಂತರ ಬಂದ ಸರ್ಕಾರಗಳು, ಖಾದಿಅಭಿವೃದ್ಧಿ ಕಡೆ ಗಮನ ಹರಿಸಲಿಲ್ಲ. ಆದರೊಡನೆ ಚೆಲ್ಲಾಟಕ್ಕೆ ನಿಂತವು.

1949ರಲ್ಲಿ ಎ. ವಿ. ಗಣಪತಿ ಐಯ್ಯರ್‌ರವರು ಕೈಗಾರಿಕೆ ಇಲಾಖೆ ಡೈರೆಕ್ಟರಾಗಿದ್ದಾಗ, ಗೃಹ ಕೈಗಾರಿಕೆಗಳಿಗೆ, ಉತ್ತೇಜನ ಕೊಡುವ ಒಂದು ಯೋಜನೆಯನ್ನು ತಯಾರಿಸಿದ್ದರು. ದಿವಗಂತ ಕೆ. ಟಿ. ಭಾಷ್ಯಂರವರು ಕೈಗಾರಿಕಾ ಮಂತ್ರಿಗಳಾಗಿದ್ದಾಗ ಈ ಯೋಜನೆಗೆ ಪೂರ್ಣಬೆಂಬಲಕೊಟ್ಟು ಅಂದು 3½ಲಕ್ಷ ರೂಪಾಯಿ ಮುಂಜೂರು ಸಹ ಮಾಡಿದ್ದರು, ದುರದೃಷ್ಟವಶಾತ್ ಅವರ ಅಧಿಕಾರಾವಧಿ ಮುಗಿದ ಪರಿಣಾಮ ಈ ಯೋಜನೆ ಅಲಕ್ಷಿಸಲ್ಪಟ್ಟಿತು. ಅನಂತರ ಈ ಯೋಜನೆ ಪ್ರಕಾರ ಕೈಗೆತ್ತಿಕೊಂಡವರು 16ಕೈಗಾರಿಕೆಗಳಲ್ಲಿ ಖಾದಿ ತಯಾರಿಕೆ ಸೇರಿಸಲೇ ಇಲ್ಲ.

ಸ್ವಾತಂತ್ರ್ಯ ಪೂರ್ವಖಾದಿಗೆ, ಪ್ರಸಿದ್ಧವಾಗಿದ್ದ ಬದನವಾಳು. ಸ್ವಾತಂತ್ರ್ಯಾನಂತರದ (1947) ಸರ್ಕಾರಗಳ ದುರಾಡಳಿತದ ಫಲವಾಗಿ, ನಷ್ಟಪಟ್ಟು ಮುಚ್ಚುವಂತಾಯಿತು. ಇದೇ ವೇಳೆಗೆ ಮಹಾತ್ಮರ ಆಶೀರ್ವಾದದಿಂದ ಬದುಕಿದ್ದ ತಗಡೂರು ಕೇಂದ್ರ ಸಹ ಮುಚ್ಚಲ್ಪಟ್ಟಿತು. ಈ ಕೇಂದ್ರದಿಂದ ಬರುತ್ತಿದ್ದ ಲಾಭದಲ್ಲಿ ನಡೆಸುತ್ತಿದ್ದ ಹೈಸ್ಕೂಲ್ ಸಹ. ಖಾದಿಜತೆಯಲ್ಲೇ ಸತ್ತು ಹೋಯಿತು.

1950ರಲ್ಲಿ ಶ್ರೀ ಜೆ. ಬಿ. ಮಲ್ಲಾರಾಧ್ಯರು ಪ್ಲಾನಿಂಗ್ ಕಮೀಷನರ್ ಆಗಿದ್ದಾಗ, ಬಿ. ಬೀರಪ್ಪನವರು ಕೈಗಾರಿಕೆ ಇಲಾಖೆ ಡೈರೆಕ್ಟರಾಗಿದ್ದಾಗ ಖಾದಿ ಬೆಳವಣಿಗೆಗೆ ಒಂದು ಬೃಹತ್ ಯೋಜನೆ ಸಿದ್ಧಪಡಿಸಿದ್ದರು. ಅವರ ಯೋಜನೆ ಪ್ರಕಾರ

1. ಬಟ್ಟೆಗಿರಣಿ ಕೈಗಾರಿಕೆ ಕಡಿಮೆ ಮಾಡುವುದು.
2. ಗಿರಣಿಯನ್ನು ಬರೀ ನೂಲುತೆಗೆಯಲು ಉಪಯೋಗಿಸುವುದು.
3, ಕ್ರಮೇಣ ನೂಲುತೆಗೆಯುವುದನ್ನೂ ನಿಲ್ಲಿಸುವುದು.
4. ಗಿರಣಿಬಟ್ಟೆ ತಯಾರಿಕೆ, ರಫ್ತು ಮಾಡುವುದಕ್ಕೆ ಮಾತ್ರ ತಯಾರಿಕೆ ಮಾಡುವುದು.
5. ಒಳನಾಡಿನಲ್ಲಿ ಗಿರಣಿಬಟ್ಟೆ ಉಪಯೋಗಿಸದಂತೆ ಮಾಡುವುದು.

ಆದರೆ ಈ ಯೋಜನೆ ಖಾದಿಮಹತ್ವ ತಿಳಿಯದವರ ಕೈಯಲ್ಲಿ ಸಿಕ್ಕಿದ ಫಲವಾಗಿ ಪ್ರಾರಂಭದಲ್ಲಿಯೇ ಸತ್ತು ಹೋದದ್ದು ವಿಷಾದಕರ. ಸರ್ಕಾರದ ಉದಾಸೀನವೂ ಈ ಯೋಜನೆ ವಿಫಲವಾಗಲು ಕಾರಣವಾಯಿತು.

1950ರಲ್ಲಿ ಶ್ರೀ ವಿಶ್ವೇಶ್ವರಯ್ಯನವರ ಗ್ರಾಮಾಂತರ ಕೈಗಾರಿಕೆ ಯೋಜನೆ ಮತ್ತು 1952ನೆ ಅಕ್ಟೋಬರ್ ಎರಡನೆ ತಾರೀಖು ಮಹಾತ್ಮ ಗಾಂಧಿಯರ ಜನ್ಮದಿನದಂದು ರಾಷ್ಟ್ರೀಯ ವಿಸ್ತರಣಾ ಯೋಜನೆ ಜಾರಿಗೆ ಬಂದ ಫಲವಾಗಿ ವಿವಿಧ ಕೇಂದ್ರಗಳಲ್ಲಿ ಖಾದಿಗೆ ಉತ್ತೇಜನ ಕೊಡಲಾಗಿತ್ತು. ಪರಿಣಾಮ 1953ರಲ್ಲಿ 60ಲಕ್ಷ ರೂ ಖಾದಿ ಉತ್ಪನ್ನ ಆಯಿತು.

ಪ್ರಥಮ ಪಂಚವಾರ್ಷಿಕ ಯೋಜನಾವಧಿಯಲ್ಲಿ ಗ್ರಾಮಕೈಗಾರಿಕೆಗಳಿಗಾಗಿ 31 ಕೋಟಿ ಒದಗಿಸಲಾಗಿದ್ದರೂ, ಈ ಹಣವನ್ನು ಖರ್ಚುಮಾಡುವ ವ್ಯವಸ್ಥಿತವಾದ

ಉತ್ಪಾದನಾ ಸಂಸ್ಥೆಯಿಲ್ಲದ್ದರಿಂದ. ಈ ಹಣಖರ್ಚಾಗದೆ ಬೇರೆ ಕೈಗಾರಿಕೆಗಳಿಗೆ ವರ್ಗಾಯಿಸಲಾಯಿತು.

ಎರಡನೇ ಪಂಚವಾರ್ಷಿಕ ಯೋಜನೆಯಲ್ಲೂ ಸಹ 680 ಲಕ್ಷ ಖಾದಿ ಉತ್ಪಾದನೆಗೆ ಒದಗಿಸಲಾಗಿದ್ದರೂ ಈ ಹಣವನ್ನು ಖಾದಿ ತಯಾರಿಕೆಗೆ ಬಳಸಲೇ ಇಲ್ಲ.

ಆದರೂ ಮೈಸೂರು ಸರ್ಕಾರ ಶಾಸ್ತ್ರೀಯವಾದ ನೂಲುವ ಚರಕಾವನ್ನು ಪರಿಣತ ರಿಂದ ಪರಿಷ್ಕರಿಸಿದ ಪರಿಣಾಮ ನೂತನ ಹೆಸರಿನ (H. M. ಚನ್ನಬಸಪ್ಪನವರು ಕೈಗಾರಿಕೆ ಮಂತ್ರಿಯಾದ ಮೇಲೆ) ಅಂಬರ್ ಚರಕವನ್ನು ಬಳಕೆಯಲ್ಲಿ ತರಲಾಯಿತು. ಮುಚ್ಚಿಹೋಗಿದ್ದ ಬದನವಾಳು, ತಗಡೂರು ಕೇಂದ್ರಗಳು ತೆರೆದವು. 80 ತರಪೇತಿ ಕೇಂದ್ರಗಳು ಪ್ರಾರಂಭವಾದುವು. ಹಾಗೂ ಹೀಗೂ ಈ ಕೇಂದ್ರಗಳು 1960ರವ ರೆಗೂ ನಡೆದು ಕೆಲಸಗಾರರಿಗೆ ಅಂಬರ್ ಚರಕಾ ಹಿಡಿಸವ ಕಾರಣ ಈ ನೂತನ ವ್ಯವಸ್ಥೆ ಕುಸಿದುಬಿದ್ದಿತು.

ಖಾದಿ ತಯಾರಿಕೆ ಕುಂಟುತ್ತಿದ್ದ ಈ ಸಂದರ್ಭದಲ್ಲಿ ಖಾದಿಗೆ ಉತ್ತೇಜನ ಕೊಡುವ ಸಲುವಾಗಿ ರಾಜ್ಯಸರ್ಕಾರ 1957ರಲ್ಲಿ "ಖಾದಿಬೋರ್ಡು" ಎಂಬ ಒಂದು ಸ್ವಾಯತ್ತೆಯ ಸಂಸ್ಥೆಯನ್ನು ಸ್ಥಾಪಿಸಿತು. ಈ ಯೋಜನೆಗಾಗಿ 90 ಲಕ್ಷ ಹಣ ಒದಗಿಸಲಾಗಿತ್ತು. ಈವರೆಗೂ ಕೈಗಾರಿಕೆ ಇಲಾಖೆಯ ಆಶ್ರಯಲ್ಲಿದ್ದ ಖಾದಿಕೈಗಾರಿಕೆ ಯನ್ನು ಬೇರ್ಪಡಿಸಿ ಖಾದಿಬೋರ್ಡುವಶಕ್ಕೆ ಒಪ್ಪಿಸಿತು ಸರ್ಕಾರ. ಆದರೆ ಈ ಬೋರ್ಡಿನಿಂದ ಖಾದಿ ಉತ್ಪಾದನೆಗೆ ಉತ್ತೇಜನ ದೊರಕಲಿಲ್ಲ. ಈ ಸಂಸ್ಥೆಗೂ ಅಖಿಲಭಾರತ ಖಾದಿ ಆಯೋಗಕ್ಕೂ ಹೊಂದಾಣಿಕೆ ಬರಲಿಲ್ಲ. ಮೈಸೂರು ಸರ್ಕಾರ ಖಾದಿ ಅಭಿವೃದ್ಧಿ ವಿಚಾರದಲ್ಲಿ ಆಸಕ್ತಿ ತೋರಲಿಲ್ಲ.

ಖಾದಿ ತಯಾರಿಕೆ ತ್ಯಜಿಸಿದರೂ "ಖಾದಿಬೋರ್ಡೆಂಬ" ಹೆಸರಿನಿಂದಲೇ ಮುಂದು ವರಿದ ಈ ಸಂಸ್ಥೆ ವನಸ್ಪತಿ, ಪಾದರಕ್ಷೆ, ಚರ್ಮಹದಮಾಡುವುದು, ಖಂಡಸಾರಿ, ಬೆಲ್ಲ ತಯಾರಿಕೆ, ಛತ್ರಿಕಟ್ಟುವುದು, ಹೊಟ್ಟಿನಿಂದ ಎಣ್ಣೆ ತೆಗೆಯುವ ಪ್ರಯೋಗ, ಬೆಂಕಿಕಡ್ಡಿ ಮತ್ತು ಸಾಬೂನು ತಯಾರಿಕೆಗೆ ಉತ್ತೇಜನ ಕೊಡುತ್ತಾ ಬಂತು.

ಅನಂತರ ಖಾದಿಬೋರ್ಡಿನಿಂದ ಬೇರ್ಪಟ್ಟ ಖಾದಿಕೇಂದ್ರಗಳನ್ನು ಗ್ರಾಮೋದ್ಯೋಗ ಸಂಘಗಳಿಗೆ ವಹಿಸಿಕೊಡಲಾಯಿತು. ಇವುಗಳ ಆಡಳಿತಕಾಲದಲ್ಲಿ N.M.C. ಎಂಬ ನೂತನ ಯೋಜನೆಯನ್ನು ಜಾರಿಗೆ ತಂದು ಸುಧಾರಿತ ಚರಕಾಗಳನ್ನು ನೂಲುತೆಗೆಯುವ ವರಿಗೆ ಒದಗಿಸಿ, ಮಗ್ಗಗಳಿಗೆ ಉತ್ತೇಜನ ಕೊಡಲಾಯಿತು.

ಆದರೂ ಕುಂಟುತ್ತಾ ಎಡವುತ್ತಾ ನಡೆಯುತ್ತಿದ್ದ ಈ ಕೈಗಾರಿಕೆ 1972ರ ಮೇಲೆ ನೆಲಕಚ್ಚಿತು. ಈ ಯೋಜನೆಗಳ ಕೆಳಗೆ 300ರಿಂದ 400 ಕೈಮಗ್ಗಗಳಿಂದ ತಯಾರಿಸು ತ್ತಿದ್ದ ಖಾದಿಉತ್ಪನ್ನವೂ ನಿಂತುಹೋಯಿತು. 1972ರಿಂದ ಈ ಅವಧಿವರೆಗೆ ಸರ್ಕಾರ ಖಾದಿ ಉತ್ಪಾದನೆಗೆ ಏನೇನೂ ಕ್ರಮ ತೆಗೆದುಕೊಳ್ಳಲಿಲ್ಲ, ಖಾದಿಬೋರ್ಡುನಾವು

ಮಾತ್ರ ಉಳಿಯಿತು. ಸರ್ಕಾರ ಒದಗಿಸುವ ಹಣವೆಲ್ಲಾ ಬೇರೆಬೇರೆ ಕೈಗಾರಿಕೆಗಳ ಬೆಳವಣಿಗೆಗೆ ಖರ್ಚಾದುವು. 6ನೇ ಪಂಚವಾರ್ಷಿಕ ಯೋಜನೆಯಲ್ಲಿ ಸಣ್ಣ ಕೈಗಾರಿಕೆಗೆ 1300ಕೋಟಿ ಹಣ ಒದಗಿಸಿದ್ದರೂ ಖಾದಿತತ್ವವನ್ನೇ ಅರಿಯದ ಜನರ ಕೈಯ್ಯಲ್ಲಿ ಅಧಿಕಾರ ಸಿಕ್ಕಿ ಆ ಹಣ ಅಂಥ ಜನರ ಇಚ್ಛೆಯ ಕೈಗಾರಿಕೆಗೆ ಖರ್ಚಾಗುತ್ತಿರುವುದು ನಿತ್ಯಸತ್ಯ.

ಸ್ವಾತಂತ್ರ್ಯ ಪೂರ್ವದಲ್ಲಿ ಮಹಾತ್ಮಾಗಾಂಧಿಯವರು ಕಾಂಗ್ರೆಸ್ಸಿನ ನಾಯಕತ್ವ ವಹಿಸಿದ 1920ರಿಂದಲೂ ಪ್ರತಿ ಜನವರಿ 26ನೇ ತಾರೀಖು "ಸ್ವಾತಂತ್ರ್ಯ ದಿನಾಚರಣೆ" ಅಖಿಲಭಾರತದಲ್ಲಿ ಆಚರಿಸಲಾಗುತ್ತಿತ್ತು. 1930ರನಂತರ 'ಜಲಿಯನ್ ವಾಲಾಬಾಗ್' ದಿನಾಚರಣೆ, ಎಂದು ಏಪ್ರಿಲ್ ತಿಂಗಳಲ್ಲಿ ಆಚರಿಸಲಾಗುತ್ತಿತ್ತು. 1942ರನಂತರ "ಕ್ವಿಟ್ ಇಂಡಿಯಾ" ಚಳುವಳಿಯ ದಿನವನ್ನಾಗಿ ಅಗಸ್ಟ್ 9, ಆಚರಣೆಯಲ್ಲಿತ್ತು. ಮಹಾತ್ಮಾಗಾಂಧಿಯವರ ಜನ್ಮದಿನವಾಗಿ ಅಕ್ಟೋಬರ್ ಎರಡು ರಾಷ್ಟ್ರಾದ್ಯಂತ ಆಚರಣೆಯಲ್ಲಿತ್ತು. ಈ ಎಲ್ಲಾ ದಿನಾಚರಣೆಗಳೂ, ಕರ್ನಾಟಕದಲ್ಲಿದ್ದ ಖಾದಿಭಂಡಾರಗಳು, ಚರಕಾಸಂಘ, ಗ್ರಾಮೋದ್ಯೋಗ ಸಂಘ, ಕಾಂಗ್ರೆಸ್ ಸಮಿತಿಗಳಿಂದ ಆಚರಿಸಲ್ಪಡುತ್ತಿದ್ದವು, ಅಂದು ಇಂದಿನ ಹಾಗೆ ದಿನಾಚರಣೆಗಳು ಬರೀ ಭಾಷಣಗಳಿಂದ ಮುಗಿಯುತ್ತಿರಲಿಲ್ಲ, ಬೆಳಿಗ್ಗೆ ಪ್ರಭಾತ್‌ಫೇರಿ, ಹೆಂಡದ ಅಂಗಡಿಗಳ ಪಿಕೆಟಿಂಗ್, ನೂಲುವಯಜ್ಞ, ಖಾದಿಮಾರಾಟ, ಸಾಯಂಕಾಲ ಮುಖಂಡರುಗಳಿಂದ ಭಾಷಣಗಳಿಂದ ಕೊನೆಗೊಳ್ಳುತ್ತಿದ್ದವು. ಬೆಳಿಗ್ಗೆ ರಾಷ್ಟ್ರಧ್ವಜಾರೋಹಣ ಶಿಸ್ತಿನಿಂದನಡೆಸಿ ಅಷ್ಟೇ ಶಿಸ್ತಿನಿಂದ ಸಾಯಂಕಾಲ ಸೂರ್ಯಾಸ್ತಮಯ ವೇಳೆಗೆ ಅವರೋಹಣ ಮಾಡುತ್ತಿದ್ದುದುಂಟು. ಅಂಥ ಸಮಾರಂಭಗಳು ಇನ್ನೂ ಎಲ್ಲಿ. ಪವಿತ್ರ ಖಾದಿಯ ಸ್ಮರಣೆ ಎಲ್ಲಿ. ಅವೆಲ್ಲಾ ಕನಸಿನ ಮಾದರಿಯಾಗಿವೆ.

ಕರ್ನಾಟಕದಲ್ಲಿ

# ಆಡಳಿತ ವಿಕೇಂದ್ರೀಕರಣ

**ಸತ್ಯವ್ರತ**

ಐತಿಹಾಸಿಕವಾಗಿ ಜನ ಸಮೂಹಗಳು ರಾಜ್ಯಸಂಸ್ಥೆಗಳಿಗಿಂತ ಮೊದಲೇ ಉದಯವಾದವು. ರಾಜ್ಯ ಸಂಸ್ಥೆಗಳು ಹುಟ್ಟುವುದಕ್ಕೆ ಬಹು ಮುಂಚೆಯೇ ಜನ ಸಮೂಹಗಳು ತಮ್ಮ ವ್ಯವಹಾರಗಳನ್ನೆಲ್ಲ ತಾವೇ ನೋಡಿಕೊಳ್ಳುತ್ತಿದ್ದವು. ಆದುದರಿಂದ ಆಡಳಿತ ವಿಕೇಂದ್ರೀಕರಣದ ಬಹು ಮುಖ್ಯ ಅರ್ಥ ಈ ಜನ ಸಮೂಹಗಳಿಂದ ತೆಗೆದುಕೊಂಡಿದ್ದ ಹಕ್ಕುಗಳನ್ನು ಅದಕ್ಕೆ ಹಿಂತಿರುಗಿಸುವುದೇ ಆಗಿದೆ. ಹೀಗೆ ತಮ್ಮ ಆಡಳಿತವನ್ನು ತಾವೇ ನಡೆಸಿಕೊಳ್ಳುವ ಮೂಲಭೂತ ಹಕ್ಕು ರಾಜ್ಯ ಸಂಸ್ಥೆಗಿರುವಷ್ಟು ಜನಸಮೂಹಕ್ಕೂ ಇದೆ. ಮೇಲು ಮೇಲಿನ ಭಾಷೆಯಲ್ಲಿ ಅದನ್ನು ವಿಕೇಂದ್ರೀಕರಣವೆಂದೋ ಅಥವಾ ಬೇರೆ ಹೇಗೆ ಬಣ್ಣಿಸಿದರೂ ಸರಿಯೇ. ಈ ಎರಡರ ಹಕ್ಕುಗಳೂ ಒಂದೇ ಬಗೆಯವು ಮತ್ತು ಈ ಎರಡೂ ತಮ್ಮ ತಮ್ಮ ಎಲ್ಲೆಯಲ್ಲಿ ಸಾರ್ವಭೌಮವೇ. ಪ್ರಜಾತಂತ್ರದ ನಿಲುವಿನಿಂದ ವಿಚಾರ ಮಾಡುವುದಾದರೆ ಜನಸಮೂಹಗಳು ತಾವಾಗಿಯೇ ವಹಿಸಿಕೊಟ್ಟ ಕಾರ್ಯಗಳನ್ನು ರಾಜ್ಯ ಸಂಸ್ಥೆಯು ನಿರ್ವಹಿಸಬೇಕೆ ಹೊರತು ರಾಜ್ಯ ಸಂಸ್ಥೆಯು ವಹಿಸಿಕೊಟ್ಟವನ್ನು ಜನಸಮೂಹ ನಿರ್ವಹಿಸಬೇಕಾದುದಲ್ಲ. ಆದ್ದರಿಂದ ಜನ ಸಮೂಹಗಳು ಸ್ವಾಯತ್ತತೆಗೆ ಹಕ್ಕುದಾರರೇ ಆಗಿವೆ. ಸ್ವಾಯತ್ತತೆಯು ಜನಸಮೂಹಗಳಲ್ಲಿ ಅಭಿಕ್ರಮವನ್ನು ಬೆಳೆಸುವುದು ಅಥವಾ ಅದರಿಂದ ಆರ್ಥಿಕ ವಿಕಾಸವು ವೇಗವಾಗಿ ಆಗಬಲ್ಲದು, ಎಂದು ಮುಂತಾದ ಏನೇ ಅಭಿಪ್ರಾಯಗಳಿರಲಿ ಅಥವಾ ಇಲ್ಲದಿರಲಿ ಸ್ವಾಯತ್ತತೆ ಇವು ಯಾವುದನ್ನೂ ಅವಲಂಬಿಸದೆ ಅಬಾಧಿತ ಅಥವಾ ನಿರಾವಂಬಿಯಾಗಿದೆ. ಸುರಾಜ್ಯ ಎನ್ನುವುದೂ ಸ್ವರಾಜ್ಯಕ್ಕೆ ಬದಲಿ ವ್ಯವಸ್ಥೆಯಲ್ಲವಾದ್ದರಿಂದ, ಆಡಳಿತದಲ್ಲಿ ಅದಕ್ಷತೆ ಮತ್ತು ಆರ್ಥಿಕಾಭಿವೃದ್ಧಿಯು ಮುಂದಗೊಳ್ಳುವ ಭಯವನ್ನು ಎದುರಿಸಿಯೂ ಸಹ ಪ್ರಜಾತಾಂತ್ರಿಕ ವಿಕೇಂದ್ರೀಕರಣವನ್ನು ಜಾರಿಗೆ ತರಲೇ ಬೇಕಾದುದು ಅಗತ್ಯ. ವಿಕೇಂದ್ರೀಕರಣ ಸ್ವಯಮೇವ ಈ ಪರಿಣಾಮಗಳಿಗೆಡೆಮಾಡಿಕೊಡುವುದೆಂದು ಹೇಳುವಂತಿಲ್ಲ. ವಾಸ್ತವವಾಗಿ, ಅಧಿಕಾಧಿಕ ಪ್ರಕರಣಗಳಲ್ಲಿ ಈ ಎರಡು ವಿಷಯಗಳಲ್ಲೂ ಉತ್ತಮ ಪರಿಣಾಮವೇ ತೋರಿಬರಬಹುದು. ಕೆಲವೊಂದು ಕಡೆ ಈ ಎರಡೂ ಕಾರಣಗಳಿಂದಾಗಿ ಅಹಿತಕರ ಪರಿಣಾಮಗಳು ತಲೆದೋರುವುದೆಂದು ಊಹಿಸಬಹುದು. ಇಂಥ ಪ್ರಸಂಗಗಳಲ್ಲೂ ಸಹ ಪ್ರಜಾತಾಂತ್ರಿಕ ವಿಕೇಂದ್ರೀಕರಣಕ್ಕೆ ಹೆಚ್ಚು ಪ್ರಾಶಸ್ತ್ಯ ದೊರೆಯಬೇಕಾದುದು ಅಗತ್ಯ.

ಹೀಗೆ ಹೇಳಿದ ಮಾತ್ರಕ್ಕೆ ರಾಜ್ಯ ಸಂಸ್ಥೆ (Nation-State)ಯನ್ನು ವಿರೋಧಿ

ಸಬೇಕೆಂದಾಗಲಿ, ಅಥವಾ ಅದರ ಅಂಗಭೂತ ಘಟಕಗಳ ಯೋಗ-ಕ್ಷೇಮದ ಹೊಣೆ ಹೊರುವ ಹಕ್ಕು ಅಥವಾ ಅಧಿಕಾರ ರಾಜ್ಯಸಂಸ್ಥೆಗಳಿಗಿರಬಾರದೆಂದಾಗಲಿ ಪ್ರತಿಪಾದಿಸ ಬೇಕಾಗಿಲ್ಲ. ಗ್ರಾಮೀಣ ಜನತೆಯ ಇಂದಿನ ಸ್ಥಿತಿಗತಿಯನ್ನು ನೋಡಿದರೆ, ಈಗ ಅವರಿಗೆ ಆರ್ಥಿಕ, ತಾಂತ್ರಿಕ ಮುಂತಾದ ಎಲ್ಲ ಬಗೆಯ ನೆರವನ್ನು ಹೊರಗಿನಿಂದ ಎಂದರೆ ವಿಕೇಂದ್ರಿತ ಘಟಕಗಳಿಗೆ ಒಳಪಡದ ಹೊರಗಿನ ಅಥವಾ ಮೇಲಿನ ಘಟಕಗಳಿಂದ ತಂದೊದಗಿಸಬೇಕಾದುದು ಆವಶ್ಯಕ, ಕೊಟ್ಟಕೊನೆಗೆ ಇಂಥ ನೆರವು ಬರುವುದು ರಾಜ್ಯ ಸಂಸ್ಥೆಯಿಂದಲೇ. ಅಷ್ಟೇ ಏಕೆ, ನಾವಿನ್ನೂ ಒಂದು ಮಾತನ್ನು ಒಪ್ಪ ಬೇಕಾಗುತ್ತದೆ. ಶಂಕಾತೀತ ಶುದ್ಧ ಚಾರಿತ್ರ್ಯ ಉಳ್ಳ, ಪ್ರಾಮಾಣಿಕರಾದ ಅನೇಕ ವ್ಯಕ್ತಿಗಳಿಗೆ ಗ್ರಾಮೀಣ ಕ್ಷೇತ್ರದಲ್ಲಿರುವ ಕಡುಬಡತನ ಅಜ್ಞಾನಗಳನ್ನು ಕಂಡು ಚಿಂತೆ ಮತ್ತು ತಳಮಳ ಉಂಟಾ ಗಿರುವುದು ಸಹಜ. ಅಂಥವರು ಗ್ರಾಮದ ಜನ ತಾವೇ ಸ್ವಶಕ್ತಿಯಿಂದ ತಮ್ಮ ಸ್ಥಿತಿ ಗತಿಗಳಲ್ಲಿ ಯಾವುದೇ ಬದಲಾವಣೆಗಳನ್ನು ತಂದು ಕೊಳ್ಳುವುದು ಸಾಧ್ಯವಿಲ್ಲವೆಂದೂ ಯೋಚಿಸಿ ಅವರಿಗಿಂತ ಹೆಚ್ಚು ತಿಳಿದ ಮತ್ತು ಪ್ರಾಮಾಣಿಕರಾಗಿ ಅವರ ಹಿತಚಿಂತನ ಮಾಡುವಂಥ ಹಿತೈಷಿಗಳು ಅವರಿಗಾಗಿ ಗೊತ್ತುಮಾಡಿದ ಕೆಲವು ಕರ್ತವ್ಯಗಳನ್ನು ಮಾಡಲು ಗ್ರಾಮಸ್ಥರು ಸಿದ್ಧರಿರಬೇಕೆಂದು ತರ್ಕಿಸಿದರೆ ಅದನ್ನೂ ಒಪ್ಪಬೇಕಾದುದೇ. ಒಂದು ಆದರ್ಶ ಸಮಾಜದಲ್ಲಿ ರಾಜ್ಯಸಂಸ್ಥೆಯೂ ಮತ್ತು ಅದರ ವಿವಿಧ ಘಟಕಗಳೂ ಪರಸ್ಪರ ಪೂರಕವಾಗಿ ಕೆಲಸಮಾಡಬೇಕು. ರಾಜ್ಯಸಂಸ್ಥೆ ತನ್ನ ಅಂಗಭೂತ ಘಟಕಗಳ ಅಭಿಕ್ರಮ ಹೆಚ್ಚುವಂತೆ, ಸ್ವಾವಲಂಬಿಯಾಗುವಂತೆ ಅದಕ್ಕೆ ಬೇಕಾದ ಸೌಲಭ್ಯ ಒದಗಿಸ ಬೇಕಾದ, ಹಾಗೂ ಕರ್ತವ್ಯ ನಿರ್ವಹಣೆಗೆ ಅನುಕೂಲ ಸನ್ನಿವೇಶವನ್ನುಂಟು ಮಾಡುವ ಹೊರೆ ಹೊರಬೇಕು. ಹಾಗೆಯೇ ಅಂಗಭೂತ ಘಟಕಗಳು ತಮ್ಮ ವ್ಯವಹಾರ ಮತ್ತು ಆಡಳಿತವನ್ನು ಹೇಗೆ ನಿರ್ವಹಿಸಬೇಕೆಂದರೆ ತತ್ಪರಿಣಾಮವಾಗಿ ರಾಜ್ಯಸಂಸ್ಥೆಯೂ ಬಲ ಗೊಳ್ಳುವಂತಿರಬೇಕು, ಅಧಿಕ ಬಲ ಮತ್ತು ಅಧಿಕತರ ಸಂಪನ್ಮೂಲಗಳನ್ನು ಹೊಂದಿ ರುವ ರಾಜ್ಯ ಸಂಸ್ಥೆ ಅಂಗಭೂತ ಘಟಕಗಳ ಮಿತ್ರನಂತೆ, ಮಾರ್ಗದರ್ಶಕನಂತೆ ಮತ್ತು ಶಿಕ್ಷಕನಂತೆ ವರ್ತಿಸಬೇಕು, ಮತ್ತು ಪರಸ್ಪರ ಯೋಗಕ್ಷೇಮದ ಚಿಂತೆ ಮಾಡಬೇಕು.

ಇದೇ ರೀತಿ ಕೇಂದ್ರೀಕೃತ ಯೋಜನೆ ಮತ್ತು ವಿಕೇಂದ್ರೀಕರಣಗಳು ಒಂದು ಇನ್ನೊಂದರ ಫಲಿತಾರ್ಥವಾಗಿ ಬರುತ್ತವೆ. ಆದರೆ ರಾಜ್ಯಸಂಸ್ಥೆಯ ಸಹಜ ಪ್ರವಾಹ ಕೇಂದ್ರೀಕರಣದ ಕಡೆಯೇ ಇರುತ್ತದೆ. ಅಲ್ಲದೆ ಇದು ತನಗೆ ತಿಳಿಯದೆಯೇ, ಮತ್ತು ಗುಪ್ತ ಅಥವಾ ವಂಚಕತನದಿಂದ ಆಗಿಬಿಡಬಹುದು. ಆದುದರಿಂದ ವಿಕೇಂದ್ರೀಕರಣದ ದೃಷ್ಟಿಯನ್ನು ನಿರಂತರವಾಗಿ ಮುಂದಿರಿಸಿಕೊಳ್ಳಬೇಕಾದುದು ಅನಿವಾರ್ಯವಾಗುತ್ತದೆ.

ಆಧುನಿಕ ಔದ್ಯೋಗೀಕರಣ, ವಿಜ್ಞಾನ ಮತ್ತು ತಂತ್ರಜ್ಞಾನಗಳ ಬೆಳವಣಿಗೆಯ ಪರಿಣಾಮವಾಗಿ ಭಾರಿ ಭಾರೀ ಘಟಕಗಳಲ್ಲಿ ಉತ್ಪಾದನೆಯನ್ನು ಕೇಂದ್ರೀಕರಿಸುವ ಕಡೆ ಒಲವು ಹೆಚ್ಚಿದೆ. ತತ್ಪರಿಣಾಮವಾಗಿ. ಆಡಳಿತ ಕೇಂದ್ರೀಕರಣ ಪ್ರಕ್ರಿಯೆಯು [illegible]ವ್ರ

ಗೊಂಡಿದೆ. ಆದ್ದರಿಂದ ಇಂದಿನ ಪರಿಸ್ಥಿತಿಯಲ್ಲಿ ಶಕ್ತಿ ಮತ್ತು ಅಧಿಕಾರವನ್ನು ಕ್ರಮೇಣ ಕೇಂದ್ರದಿಂದ ಅನ್ಯಘಟಕಗಳಿಗೆ ಹಂಚುವುವೇ ವಿಕೇಂದ್ರೀಕರಣ ಎನಿಸಿಕೊಳ್ಳುವುದು. ರಾಜ್ಯಸಂಸ್ಥೆ ಮತ್ತು ಅದರ ಅನ್ಯ ಘಟಕಗಳ ಮಧ್ಯೆ ಇರುವ ಸಂವೈಧಾನಿಕ ಸಂಬಂಧವೇ ಕೊಟ್ಟಕೊನೆಯಲ್ಲಿ ವಿಕೇಂದ್ರೀಕರಣದ ಪ್ರಮಾಣ ಮತ್ತು ಗುಣವನ್ನು ನಿರ್ಧರಿಸುವುದು.

ಪ್ರಜಾತಂತ್ರದಲ್ಲಿ ಈ ಪ್ರಕ್ರಿಯೆಗೆ ಒಂದು ವಿಶೇಷ ಮಹತ್ವವೂ ಇದೆ. ಆದರ್ಶ ರೂಪದ ಪ್ರಜಾತಂತ್ರದಲ್ಲಿ ಆಡಳಿತದ ಎಲ್ಲ ಹಂತಗಳಲ್ಲಿಯೂ ಜನತೆ ನೇರವಾಗಿ ಭಾಗ ವಹಿಸುವುದು ಮತ್ತು ಹಂತ ಹಂತಗಳ ಮಧ್ಯೆ ಹಿತವಿರೋಧವೂ ಇರದು. ವಿಕೇಂದ್ರೀ ಕರಣವು ಇಂಥ ಪ್ರಕ್ರಿಯೆಗೆ ತುಂಬ ಸಹಾಯಕ. ದೇಶ ಎಷ್ಟು ವಿಶಾಲವೋ ಎಷ್ಟು ಅಧಿಕ ಜನ ಬಾಹುಳ್ಯದ್ದೋ ವಿಕೇಂದ್ರೀಕರಣದ ಪ್ರಕ್ರಿಯೆಯೂ ಅಷ್ಟೇ ಹೆಚ್ಚು ಆವ ಶ್ಯಕ ಮತ್ತು ಅಷ್ಟೇ ಸಮರ್ಥನೀಯ ಆಗುತ್ತದೆ.

ಇಂದು ದೇಶದಲ್ಲಿ ನಡೆಯುತ್ತಿರುವ ರಾಜನೈತಿಕ ಚಿಂತನದ ಪ್ರಕಾರ ಯಾವುದೇ ಒಂದು ಪ್ರಚಲಿತ ವಿಚಾರಧಾರೆಯೇ ಆಗಲಿ ಅಥವಾ ಸಾಮಾಜಿಕ ಆರ್ಥಿಕ ಮಾದರಿಯೇ ಆಗಲಿ ನಮ್ಮ ಅಗತ್ಯಗಳಿಗೆ ಹೊಂದದು. ಇಲ್ಲಿಯೇ ವಿಕೇಂದ್ರೀಕರಣವು ಮಹತ್ವದ ಪಾತ್ರವನ್ನು ನಿರ್ವಹಿಸಬಲ್ಲದು. ಕೇವಲ ಪ್ರತಿನಿಧಿಗಳನ್ನಷ್ಟೇ ಅಲ್ಲದೆ, ಎಲ್ಲ ಜನ ಗಳನ್ನು ಎಲ್ಲ ಹಂತಗಳಲ್ಲಿ ಆಡಳಿತದಲ್ಲಿ ಭಾಗವಹಿಸುವಂತೆ ಮಾಡುತ್ತದಾದ್ದರಿಂದ ಎಲ್ಲ ಜನತೆಯ ವಿಶ್ವಾಸವನ್ನು ಗಳಿಸುವಂಥ ಒಂದು ನಮೂನೆ ವಿಕಸಿಸುವ ಸಾಧ್ಯತೆ ಇದರಲ್ಲೇ ಹೆಚ್ಚಾಗಿದೆ. ಹೀಗಾಗ ಬೇಕಾದರೆ ವಿಕೇಂದ್ರೀಕರಣಕ್ಕೆ ಅವಕಾಶ ದೊರೆಯಬೇಕು. ಎಂದರೆ, ಜನತೆಗೆ ಪೂರ್ಣವಾಗಿ ಯೋಗ್ಯರೀತಿಯಿಂದ ತಮ್ಮ ಪಾತ್ರವನ್ನು ನಿರ್ವಹಿ ಸುವ ಅವಕಾಶ ದೊರೆಯಬೇಕು, ಐದು ವರ್ಷಗಳಿಗೊಮ್ಮೆ ಓಟು ಹಾಕುವ ಅವಕಾಶ ವಷ್ಟೇಅಲ್ಲ. ದಿನನಿತ್ಯದ ತಮ್ಮ ವಾಸ್ತವಿಕ ಜೀವನವನ್ನು ರೂಪಿಸಿಕೊಳ್ಳುವುದರಲ್ಲಿ ಅವರಿಗೆ ನೇರ ಕರ್ತವ್ಯ ನಿರ್ವಹಣೆ ಮತ್ತು ಅಧಿಕಾರ ಇರಬೇಕು. ಹೀಗೆ ಆಗಬೇಕಾದರೆ ಮೊದಲನೆಯದಾಗಿ ಕೇಂದ್ರ ತೆಗೆದುಕೊಳ್ಳುವ ನಿರ್ಣಯಗಳ ಕ್ಷೇತ್ರ ಕಮೇಣ ಕಡಿಮೆ ಯಾಗಿ ಅವನ್ನು ಕೆಳಗಿನ ಘಟಕಗಳಿಗೆ ವರ್ಗಾಯಿಸಬೇಕು. ಅಲ್ಲಿ ಜನತೆ ಹೆಚ್ಚು ಪ್ರತ್ಯಕ್ಷ ವಾಗಿ ಆಡಳಿತದಲ್ಲಿ ಪಾಲುಗೊಳ್ಳುವುದು ಸಾಧ್ಯ. ಎರಡನೆಯದಾಗಿ, ಕೇಂದ್ರ ತೆಗೆದು ಕೊಳ್ಳಬೇಕಾದ ನಿರ್ಣಯಗಳ ಬಗ್ಗೆ ಈ ಎಲ್ಲ ಘಟಕಗಳ ಸಮ್ಮತಿಯನ್ನು ಪಡೆದಂತಾ ಗುತ್ತದೆ. ವಿಕೇಂದ್ರೀಕರಣದ ಬಗ್ಗೆ ಆಗಬೇಕಾದ ಪ್ರಗತಿಯು ಇನ್ನು ಈ ದಿಶೆಯಲ್ಲಿ ಸಾಗಬೇಕಾಗುತ್ತದೆ.

**ಆಕ್ಷೇಪಣೆಗಳು :—**

ಪ್ರಜಾತಾಂತ್ರಿಕ ವಿಕೇಂದ್ರೀಕರಣವನ್ನು ಸಾಧಿಸಲು ಅನೇಕ ಅಡಚಣೆಗಳು ಎದು ರಾಗುತ್ತವೆ. ಗ್ರಾಮಗಳಲ್ಲಿ ಸಮೂಹಭಾವನೆ ಮತ್ತು ಏಕತೆಯ ಅಭಾವ, ಸರ್ಕಾರಾವ ಲಂಬನೆಯ ಮನೋವೃತ್ತಿ, ಕಲ್ಯಾಣಕಾರಿ ರಾಜ್ಯದ ಕಲ್ಪನೆಯ ಹೇರಿಕೆಯ ಪರಿಣಾಮ

ನೌಕರಶಾಹಿಯ ಮೇಲುಗೈ ಮತ್ತು ಆಧಿಕ್ಯ ಮತ್ತು ತೆರಿಗೆಗಳಿಂದ ಬರುವ ವರಮಾನದ ಬಹು ಪಾಲು ಈ ಬಿಳಿಯಾನೆಗಾಗಿಯೇ ವಿನಿಯೋಗವಾಗುತ್ತಿರುವ ವಿಕಟಸ್ಥಿತಿ, ಸ್ಥಾನಿಕ ಹೊಣೆಗಾರಿಕೆಯ ಪೂರಾ ಅಭಾವ, ಅದಕ್ಷತೆ, ಗ್ರಾಮೀಣ ಜನರಲ್ಲಿ ತಲೆಹಾಕಿರುವ ಪರಿಶ್ರಮ ವಿಮುಖತೆ ಇವೇ ಮುಖ್ಯ ಅಡ್ಡಿ ಆತಂಕಗಳು.

ಪ್ರಜಾತಾಂತ್ರಿಕ ವಿಕೇಂದ್ರೀಕರಣದ ರೂಪರೇಷೆ ಈ ಎಲ್ಲ ಅಡ್ಡಿ ಆತಂಕಗಳನ್ನು ಪರಿಣಾಮಕಾರಿಯಾಗಿ ಪರಿಹರಿಸುವಂತಿರಬೇಕು, ಎಂಬುದು ಸ್ಪಷ್ಟ.

ವಿಕೇಂದ್ರೀಕರಣದ ಇಡೀ ಕಲ್ಪನೆಗೇ ಮಸಿ ಬಳಿಯುವ ಇನ್ನೂ ಒಂದೆರಡು ಆಕ್ಷೇಪಣೆಗಳನ್ನು ಇಲ್ಲಿ ಪ್ರಸ್ತಾಪಿಸಬೇಕಾದುದು ಅವಶ್ಯಕ. ಇಂಥ ಒಂದು ಯೋಜನೆಯನ್ನು ಜಾರಿಗೆ ತಂದರೆ ರಾಷ್ಟ್ರೀಯ ಏಕತೆಗೆ ಧಕ್ಕೆ ತಗಲುವುದಲ್ಲದೆ ವಿಘಟನಕಾರಿಯಾಗಿ ಪರಿಣಮಿಸೀತು ಎಂಬ ಒಂದು ವಾದವೂ ಇದೆ. ನಾನಾ ಹಂತಗಳಲ್ಲಿ ವೈವಿಧ್ಯತೆಗಳನ್ನು ತಂದು ಹಾಕುವುದರಿಂದ ಒಟ್ಟು ಚಿತ್ರವೇ ಗೊಂದಲಮಯವಾಗಬಹುದು ಎಂದು ಸಹ ಯೋಚಿಸುವವರಿದ್ದಾರೆ.

ರಾಷ್ಟ್ರದ ಪ್ರತಿನಿಧಿಗಳೆಲ್ಲರ ಸಮ್ಮಿಲಿತ ವಿವೇಕದಿಂದ ರಚಿಸಲ್ಪಟ್ಟ ಸಂವಿಧಾನ ದೇಶದ ಏಕತೆಯನ್ನು ಕಾಯ್ದಿಟ್ಟಿದೆ. ಈ ಏಕತೆಯನ್ನು ಕಾಪಾಡಲು ನೆರವಾಗುವ ಸಂವಿಧಾನದ ಕಾರ್ಯಗಳು ಹೀಗಿವೆ."—

1) ರಕ್ಷಣೆ.
2) ವಿದೇಶಾಂಗ ನೀತಿ,
3) ವಿದೇಶ ವ್ಯಾಪಾರ ಮತ್ತು ಕಸ್ಟಮ್ಸ್
4) ಸಂಪರ್ಕ.

ಯಾವುದೇ ವಿಶೇಷ ಕಾರಣಕ್ಕಾಗಿ ಅಥವಾ ತುರ್ತು ಪರಿಸ್ಥಿತಿ ಉದ್ಭವಿಸಿದರೆ ಒಂದು ರಾಜ್ಯದ ಆಡಳಿತವನ್ನು ಕೇಂದ್ರವು ನೇರಾಗಿ ವಹಿಸಿಕೊಳ್ಳಬಹುದು. ವಿಕೇಂದ್ರೀಕರಣದಿಂದ ಇಂಥ ಯಾವ ಅಧಿಕಾರವನ್ನೂ ಪಲ್ಲಟಗೊಳಿಸಬೇಕಾಗಿಲ್ಲ. ಜಿಲ್ಲೆ ಅಥವಾ ಬ್ಲಾಕ್ ಮಟ್ಟದಲ್ಲಿ ಗೊಂದಲದ ಸ್ಥಿತಿ ಇದ್ದರೆ ಮೇಲೆ ಹೇಳಿದ ಕ್ರಮಗಳನ್ನು ಅನುಸರಿಸಲು ರಾಜ್ಯಗಳು ಸ್ವತಂತ್ರವೇ ಇವೆ. ಯಾವುದೇ ಘಟಕದಲ್ಲಿ ಮೇಲೆ ಹೇಳಿದ ಸ್ಥಿತಿ ಉದ್ಭವಿಸಿದರೆ ಕೇಂದ್ರ ತನ್ನ ಪ್ರತಿನಿಧಿಯೊಬ್ಬರನ್ನು ಕಳಿಸಿ ಅವರ ವರದಿಯ ಆಧಾರದ ಮೇಲೆ ಸರಿತೋರಿದ ಕ್ರಮಗಳನ್ನು ತೆಗೆದುಕೊಳ್ಳಬಹುದು. ಆದ್ದರಿಂದ ವಿಕೇಂದ್ರೀಕರಣವೆನ್ನುವುದು ದೇಶದ ಏಕತೆಯನ್ನು ತೊಂದರೆಗೀಡು ಮಾಡುವಂಥ ಸಲಹೆ ಎಂದು ಯೋಚಿಸಬಾರದು. ವಿಕೇಂದ್ರೀಕರಣ ವಿಘಟನಕಾರಿಯಲ್ಲ.

ಎರಡನೆಯ ಆಕ್ಷೇಪಣೆ ಒಂದೊಂದು ಘಟಕವೂ ತನ್ನ ತನ್ನ ರೀತಿಯಲ್ಲಿ ತನಗೆ ಸರಿದೋರಿದುದನ್ನು ಮಾಡ ಹೊರಟರೆ ಒಂದು ವಿಧದ ಅರಾಜಕತೆಯೇ ಉಂಟಾಗ

ಬಹುದು. ಉದಾಹರಣೆಗೆ ಭೂಮಿ ಸಮಸ್ಯೆಯನ್ನು ತೆಗೆದುಕೊಳ್ಳೋಣ. ಒಂದೊಂದು ಘಟಕ ತನ್ನದೇ ಆದ ಉಪಾಯವನ್ನು ಪ್ರಯೋಗಿಸಿ ನೋಡ ಹೊರಟರೆ ಏನಾದೀತು ; ಏಕ ಸೂತ್ರತೆ ಇರದಲ್ಲ ಎಂದು ಆಕ್ಷೇಪಿಸುವವರಿದಾರೆ. ಆಳವಾಗಿ ಪರ್ಯಾಲೋಚಿಸಿದರೆ ಇದು ವಾಸ್ತವಿಕವಲ್ಲ. ಮೇಲು ಮೇಲಿನ ಟೀಕೆ ಎಂದು ಗೊತ್ತಾಗುತ್ತದೆ. ಇಂಥ ಸಾಧ್ಯತೆ ತಲೆದೋರಿದಾಗ ಮೊಟ್ಟಮೊದಲು ಗ್ರಾಮಸಭೆಗಳಲ್ಲಿ ವಿಚಾರ ಮಂಥನ ಮೊದಲಾಗುವುದು. ಭೂಮಿ ಸಮಸ್ಯೆಯ ಪರಿಹಾರಕ್ಕೆ ಪ್ರಚಲಿತ ಉಪಾಯಗಳ ಬಗ್ಗೆ ಚರ್ಚೆ ನಡೆಯುವುದೇ ಹೊರತು ಇವುಗಳಿಂದ ತೀರ ಭಿನ್ನವಾದುದೋ ಅಥವಾ ಹೊಸದೋ ಆದ ಸಲಹೆ ಚರ್ಚೆಗೆ ಬರಲಾರದು. ಪ್ರತಿಗ್ರಾಮಸಭೆಯಲ್ಲಿ ಚರ್ಚೆ ವಿಚಾರ ಮಂಥನ ಆರಂಭವಾಗುವುದು. ಒಂದಲ್ಲ ಒಂದು ಉಪಾಯ ಅಥವಾ ಸಲಹೆಯ ಪ್ರತಿಪಾದಕರು ಹಳ್ಳಿಗಳಲ್ಲಿ ತಿರುಗಾಡಿ ತಮ್ಮ ವಿಚಾರದ ಪ್ರಚಾರ ಮಾಡುವರು. ಹೀಗಾಗಿ ಸಮಸ್ಯೆಯ ಪರಿಹಾರಕ್ಕೆ ದೊರಕುವ ಉಪಾಯಗಳಲ್ಲಿ ಕೆಲವು ಮಾತ್ರವೇ ವಿಚಾರಾರ್ಹ ಮತ್ತು ಸ್ವೀಕಾರಾರ್ಹವೆನಿಸುವುವು. ಅಲ್ಲದೆ ಬೇರೆ ಗ್ರಾಮಗಳು ಹೇಗೆ ಪರಿಹರಿಸುವುವು ಎಂದು ಕಾದು ನೋಡುವ ಅಥವಾ ಕುತೂಹಲದ ಮನೋವೃತ್ತಿ ಇದ್ದೇ ಇದೆ. ಇದೇ ಪ್ರಕಾರ ಮೇಲಿನ ಘಟಕಗಳಿಂದ ಬ್ಲಾಕ್ ಸಭೆ, ಜಿಲ್ಲಾ ಪರಿಷತ್ತುಗಳಲ್ಲಿಯೂ ಚರ್ಚೆ ನಡೆಯುವುದು. ಅವರ ಚರ್ಚೆಯ ಪ್ರಭಾವ ಗ್ರಾಮಸಭೆಗಳ ಮೇಲೆ ಆಗದಿರದು. ಅಷ್ಟೇ ಅಲ್ಲ, ಒಟ್ಟು ದೊರಕುವ ಉಪಾಯಗಳ ಸಂಖ್ಯೆ ಈ ಮಂಥನದ ಪರಿಣಾಮವಾಗಿ ಸಂಕುಚಿತಗೊಂಡು ಕೊನೆಗೆ ಸ್ವೀಕಾರಾರ್ಹವಾಗುವಂಥವುಗಳಲ್ಲಿ ಒಂದೆರಡೇ ಉಳಿಯುವುವು. ಇವನ್ನೇ ಆಧಾರಭೂತವಾಗಿಟ್ಟುಕೊಂಡು ಕೊನೆಗೊಂದನ್ನು ಎಲ್ಲ ಘಟಕ ಅಥವಾ ಬಹು ಸಂಖ್ಯೆಯ ಘಟಕಗಳು ಆರಿಸಿಕೊಳ್ಳುವುವು. ಇಂಥ ವಿಚಾರ ಮಂಥನ ಆವಶ್ಯಕವಷ್ಟೇ ಅಲ್ಲ ಅನಿವಾರ್ಯ. ಇದನ್ನು ಸ್ವಾಗತಿಸಬೇಕಾದುದು :

ನಿಜವಾಗಿ ಮೇಲಿನ ಆಕ್ಷೇಪಣೆಗಳಿಗಿಂತ ಗಂಭೀರ ಮತ್ತು ತೀವ್ರ ಸ್ವರೂಪದ ಅಡ್ಡಿ ಆತಂಕಗಳು ಎದುರಾಗುವುದು ಬೇರೊಂದು ಕ್ಷೇತ್ರದಲ್ಲಿ. ಅದೆಂದರೆ ಕಾರ್ಯಾನ್ವಯವಾಗುವ ಹಂತ, ನಾನಾ ಹಿತಾಸಕ್ತಿಗಳು ಬಲವಾದ ವಿರೋಧ, ಅಡ್ಡಿ ಆತಂಕಗಳನ್ನೊಡ್ಡಬಹುದು. ಗ್ರಾಮೀಣಕ್ಷೇತ್ರದಲ್ಲಿ ಈ ಕಾರಣದಿಂದ ಕಾನೂನು ಸುವ್ಯವಸ್ಥೆಯೇ ಕಲಕಿಹೋಗಬಹುದು. ಅಂಥ ಸಂದರ್ಭದಲ್ಲಿ ಎರಡು ಸುರಕ್ಷತೆಯ ಕ್ರಮಗಳನ್ನವಲಂಬಿಸಬಹುದು. ಒಂದನೆಯದಾಗಿ ಗ್ರಾಮಸಭೆಗಳ ಇಂಥ ಅತಿ ಮಹತ್ವದ ನಿರ್ಣಯಗಳು ಸರ್ವಾನುಮತಿಯಿಂದಾಗುವುದರಿಂದ ವಿರೋಧ ಆತಂಕಗಳು ಗಂಭೀರ ರೂಪವನ್ನು ತಳೆಯಲಾರವು: ತಳೆದರೂ ಸ್ಥಿತಿಯನ್ನು ನಿಯಂತ್ರಿಸಬಹುದು. ಎರಡನೆಯದಾಗಿ ಮೇಲಿನ ಘಟಕಗಳು ಇಂಥ ನಿರ್ಣಯಗಳನ್ನು ಜಾರಿಗೆ ಬರದಂತೆ ತಡೆಯಬಹುದು, ಅಥವಾ ರದ್ದು ಪಡಿಸಬಹುದು.

ಈ ಎರಡು ಸುರಕ್ಷತಾಕ್ರಮಗಳನ್ನಿರಿಸಿಕೊಂಡು ಮೇಲಿನ ಚೌಕಟ್ಟಿನಲ್ಲಿ ಇಂದಿನ ಕೇಂದ್ರಿತ ರಚನೆಯಿಂದ ವಿಕೇಂದ್ರಿತ ರಚನೆಗೆ ಹೆಚ್ಚು ತುಮುಲ–ಗೋದಲಗಳಿಗೆಡೆಗೊಡದಂತೆ ಸಾಗಬಹುದು. ಅನಂತರ ಹೆಚ್ಚು ಪುರೋಗಾಮಿ ಮತ್ತು ಸಮತಾ ಸಮಾಜ ರಚನೆಯ ಕಡೆಗೆ ಧಾವಿಸಲು ಸಾಧ್ಯವಾಗಬಹುದು.

**ವಿಕೇಂದ್ರೀಕರಣದ ವ್ಯಾವಹಾರಿಕ ಸ್ವರೂಪ :**

ಆಡಳಿತವನ್ನು ಕೇಂದ್ರೀಕರಿಸಿ ಐದು ಹಂತಗಳಲ್ಲಿ ಅಧಿಕಾರ ಹಂಚಲ್ಪಟ್ಟಿದೆ. ಮೇಲಿನ ಎರಡು ಹಂತಗಳು ಈಗ ಅಧಿಕಾರವನ್ನು ಕೇಂದ್ರೀಕರಿಸಿಕೊಂಡು ಕೆಲಸ ಮಾಡುತ್ತಲೇ ಇವೆ. ಕೇಂದ್ರ ಮತ್ತು ರಾಜ್ಯಗಳು ಈಗ ತಮ್ಮಲ್ಲಿ ಕೇಂದ್ರೀಕರಿಸಿಕೊಂಡಿರುವ ಬಹುಪಾಲು ಅಧಿಕಾರವನ್ನು ಕೆಳಗಿನ ಮೂರು ಘಟಕಗಳಿಗೆ ಬಿಟ್ಟುಕೊಡಲು ಮುಂದಾಗಬೇಕು, ಜಿಲ್ಲೆಯ ಮಟ್ಟದಲ್ಲಿ ಜಿಲ್ಲಾಸಭೆ, ತಾಲ್ಲೂಕ್ ಅಥವಾ ಬ್ಲಾಕ್ ಮಟ್ಟದಲ್ಲಿ ತಾಲ್ಲೂಕ್ ಅಥವಾ ಬ್ಲಾಕ್‌ಸಭೆ, ಮತ್ತು ಗ್ರಾಮದಲ್ಲಿ ಗ್ರಾಮಸಭೆ, ಹೀಗೆ ಈ ಮೂರು ಹಂತದಲ್ಲಿ ಆಡಳಿತವನ್ನು ವಿಕೇಂದ್ರೀಕರಿಸಿ ಅತ್ಯಧಿಕ ಸ್ಥೂಲ ಅಧಿಕಾರಗಳು ಈ ಹಂತಗಳಲ್ಲಿ ನೆಲೆಸುವಂತೆ ಮಾಡಬಹುದು. ಈಗ ಒಂದೊಂದನ್ನಾಗಿ ನೋಡೋಣ.

**ಗ್ರಾಮಸಭೆ :** ಮೊಟ್ಟ ಮೊದಲ ಘಟಕ ಗ್ರಾಮಸಭೆ. ಗ್ರಾಮದ ಪ್ರತಿ ಪರಿವಾರದಿಂದ ಒಬ್ಬ ವಯಸ್ಕ ಪ್ರತಿನಿಧಿಯನ್ನು ಸೇರಿಸಿ ಗ್ರಾಮಸಭೆ ರಚಿಸಲ್ಪಡಬೇಕು. ಇದಕ್ಕೂ ಹೆಚ್ಚು ಪ್ರಾತಿನಿಧಿಕವಾಗಿರಬೇಕೆನಿಸಿದರೆ ಗ್ರಾಮದ ಪ್ರತಿಯೊಬ್ಬ ವಯಸ್ಕನನ್ನೂ ಒಳಗೊಂಡು ಗ್ರಾಮಸಭೆಯ ರಚನೆಯಾಗಬಹುದು. ಗ್ರಾಮಸಭೆಗೆ ವಹಿಸಬೇಕಾದ ಕಾರ್ಯಗಳನ್ನು ಮತ್ತು ಅಧಿಕಾರಗಳನ್ನು ಸಹ ನಿರ್ಧರಿಸಬಹುದು. ಈಗಿನ ಪಂಚಾಯತಿಗಳಿಗಿರುವುದಕ್ಕಿಂತ ಹೆಚ್ಚು ಅಧಿಕಾರ ಮತ್ತು ಕರ್ತವ್ಯವನ್ನು ಗ್ರಾಮಸಭೆಗಳಿಗೆ ವಹಿಸಿಕೊಡಬೇಕಾಗುವುದೆಂದು ಬೇರೆ ಹೇಳಬೇಕಾಗಿಲ್ಲ. ಇಂಥ ಕಾರ್ಯ ಮತ್ತು ಅಧಿಕಾರಗಳ ಪಟ್ಟಿಯನ್ನೆ ತಯಾರಿಸಬಹುದು. ಸರ್ವೋದಯ ಆಂದೋಳನದ ನೇತೃತ್ವವಹಿಸಿರುವ ಸರ್ವಸೇವಾಸಂಘವು ಈ ವಿಷಯಕ್ಕಾಗಿಯೇ ನೇಮಿಸಿದ್ದ ಸಮಿತಿ ಈ ಕೆಳಗಿನ ಪಟ್ಟಿಯನ್ನು ತಯಾರಿಸಿದೆ.

ಲೋಕಸ್ವರಾಜ್ಯ ದೃಷ್ಟಿಯಿಂದ ಗ್ರಾಮ ಸಭೆಗಳಿಗೆ ವಹಿಸಿಕೊಡಬಹುದಾದ ಆಡಳಿತ ಮತ್ತು ಆರ್ಥಿಕ ಅಧಿಕಾರಗಳು :—

1. ಗ್ರಾಮ ಭೂ ವ್ಯವಸ್ಥೆ ಮತ್ತು ಭೂಗಂದಾಯಕ್ಕೆ ಸಂಬಂಧಪಟ್ಟ ಅಧಿಕಾರ ಹಾಗೂ ಜಮೀನಿನ ಮಾರಾಟ ಗ್ರಾಮಸಭೆಯ ಅಧೀನಕ್ಕೆ ಒಳಪಡಬೇಕು.

2. ಗ್ರಾಮಕ್ಕೆ ಸಂಬಂಧಿಸಿದ ಎಲ್ಲ ತೆರಿಗೆಗಳ ವಸೂಲಿ ಗ್ರಾಮಸಭೆಯ ಮೂಲಕ ನಡೆಯಬೇಕು. ಅದರಲ್ಲಿಯ ಶೇ. 10 ಭಾಗ ವಸೂಲಿಯ ಖರ್ಚಿಗಾಗಿ ಗ್ರಾಮಸಭೆಗೆ ಕೊಡಬೇಕು. ಭೂಗಂದಾಯದ ಒಟ್ಟು ಮೊತ್ತ ಗ್ರಾಮಸಭೆಗೇ ಸೇರತಕ್ಕದ್ದು.

3. ಗ್ರಾಮ ಸಭೆಯು, ಪ್ರತಿಕುಟುಂಬದ ವರಮಾನದಲ್ಲಿ ನಿಶ್ಚಿತಗೊಳಿಸಿದ ಭಾಗವನ್ನು ಗ್ರಾಮವಿಕಾಸಕಾರ್ಯಕ್ಕಾಗಿ 'ಗ್ರಾಮಕೋಶ'ದಲ್ಲಿ ಸಂಗ್ರಹಿಸಿಡತಕ್ಕದ್ದು.

4. ಗ್ರಾಮವಿಕಾಸಕ್ಕಾಗಿ ಸಾಲ ತೆಗೆದುಕೊಳ್ಳುವ ಮತ್ತು ಬಂಡವಾಳ ಹೂಡುವ ಅಧಿಕಾರ ಗ್ರಾಮಸಭೆಯದೆ.

5. ನೀರಾವರಿ, ಅರಣ್ಯ, ಗೋಪಾಳ, ಶಿಕ್ಷಣ, ಆರೋಗ್ಯ ಮತ್ತು ರಕ್ಷಣೆಯ ವ್ಯವಸ್ಥೆ ಎಲ್ಲದರ ಮೇಲೂ ಗ್ರಾಮ ಸಭೆಯದೆ ಅಧಿಕಾರ.

6. ಗ್ರಾಮಕ್ಕೆ ಸಂಬಂಧಿಸಿದ ಲೆಕ್ಕಿಗರು, ಶಿಕ್ಷಕರು, ಟ್ಯೂಬ್‌ವೆಲ್ ಚಾಲಕ, ಅರಣ್ಯರಕ್ಷಕ, ಗ್ರಾಮಸೇವಕ, ಪಂಚಾಯತಿ ಸದಸ್ಯರು, ಆರೋಗ್ಯ ನಿರೀಕ್ಷಕರು ಮತ್ತು ಗ್ರಾಮಕ್ಕೆ ಸಂಬಂಧಿಸಿದ ಎಲ್ಲ ಕಾರ್ಯಕರ್ತರು ಗ್ರಾಮಸಭೆಯ ನಿರ್ಣಯಕ್ಕನುಸಾರ ಕೆಲಸ ಮಾಡಬೇಕು. ಅವರ ಪದೋನ್ನತಿ, ವೇತನದಲ್ಲಿ ವೃದ್ಧಿ, ಚಾರಿತ್ರ್ಯ ಮುಂತಾದ ವಿಷಯಗಳ ಬಗ್ಗೆ ತೀರ್ಮಾನ ಮಾಡುವ ಅಧಿಕಾರ ಗ್ರಾಮಸಭೆಗೆ ಸೇರಿದ್ದು.

7. ಗ್ರಾಮಸ್ಥರಿಗೆ ಪೂರಾ ಅಥವಾ ಬಿಡುವಿನ ಸಮಯದಲ್ಲಿ ಕೆಲಸ ಕೊಡಲು ಗ್ರಾಮಸಭೆಯು, ಗ್ರಾಮೋದ್ಯೋಗ, ಕುಟೀರ ಉದ್ಯೋಗಗಳನ್ನು ಆರಂಭಿಸಿ ನಡೆಸುತ್ತದೆ. ಗ್ರಾಮದಲ್ಲಿ ಬೆಳೆದ ಕಚ್ಚಾವಸ್ತುವನ್ನು ಸಿದ್ಧ ವಸ್ತುವನ್ನಾಗಿ ಮಾಡುವುದು ಅದರ ಉದ್ದೇಶ. ಗ್ರಾಮದ ಬೆಳೆ ಕಚ್ಚಾವಸ್ತುವಿನ ರೂಪದಲ್ಲಿ ಹೊರಹೋಗ ತಕ್ಕದ್ದಲ್ಲ. ಅದು ಸಿದ್ಧವಸ್ತುವಾಗಿಯೆ ಹೋಗತಕ್ಕದ್ದು.

8 ಗ್ರಾಮಕ್ಕೆ ಹೊರಗಿನಿಂದ ಬರುವ ಹಾನಿಕಾರಕ, ಅಹಿತಕರ, ಅಥವಾ ಅಲಾಭಕರ ವಸ್ತುಗಳನ್ನು ಪ್ರತಿಬಂಧಿಸುವ ಅಧಿಕಾರ ಗ್ರಾಮಸಭೆಗಿದೆ.

9 ಪೋಲೀಸರು ಹಸ್ತಕ್ಷೇಪ ಮಾಡುವ ಕೆಲವು ವಿಶಿಷ್ಟ ಸಮಸ್ಯೆಗಳನ್ನು ಬಿಟ್ಟು ಗ್ರಾಮಕ್ಕೆ ಸಂಬಂಧಿಸಿದ ಎಲ್ಲ ಹಣಕಾಸು, ಸಿವಿಲ್ ಮತ್ತು ಕ್ರಿಮಿನಲ್ ಕೇಸುಗಳ ಬಗ್ಗೆ ನಿರ್ಣಯ ಕೈಗೊಳ್ಳುವ ಅಧಿಕಾರ ಗ್ರಾಮಸಭೆಯಿಂದ ಚುನಾಯಿಸಲ್ಪಟ್ಟ ಜನತಾ-ನ್ಯಾಯಾಲಯ (ಕೋರ್ಟ್)ಕ್ಕೆ ಸೇರಿದ್ದು.

10 ತನ್ನ ಚೌಕಟ್ಟಿನೊಳಗೆ ಬಗೆಹರಿಯದ ಸಮಸ್ಯೆಗಳನ್ನು ಗ್ರಾಮಸಭೆಯು ತನ್ನ ನೆರೆಯ ಗ್ರಾಮಸಭೆಗಳ ಸಹಯೋಗದಿಂದ ಪರಿಹರಿಸಿಕೊಳ್ಳುವುದು.

11 ಗ್ರಾಮೋದ್ಯೋಗಗಳಿಗೆ ಧಕ್ಕೆ ತರುವಂತಹ ವ್ಯವಹಾರಗಳನ್ನು ತಡೆಯುವ ಅಧಿಕಾರ ಗ್ರಾಮಸಭೆಗಿದೆ.

12 ಗ್ರಾಮದಲ್ಲಿ ಸೇರುವ ಸಂತೆ, ಜಾತ್ರೆ, ಟಾಂಗ-ಗಾಡಿಗಳು ನಿಲ್ಲುವ ಸ್ಥಳಗಳನ್ನು ನಿಯಂತ್ರಿಸುವ ಹಕ್ಕು ಗ್ರಾಮಸಭೆಯದು. ಸತ್ರದನಗಳ ಉಪಯೋಗದ ಹೊಣೆಯೂ ಅದರದೆ.

13 ಅಸ್ಪೃಶ್ಯತಾ ನಿವಾರಣೆ, ಮದ್ಯನಿಷೇಧ, ಸ್ತ್ರೀ–ಪುರುಷ ಸಮಾನತೆ, ಸರ್ವಧರ್ಮ-ಸಮಭಾವ, ಗ್ರಾಮರಕ್ಷಣೆಯಂತಹ ಕಾರ್ಯವನ್ನು ಅದು ನೋಡಿಕೊಳ್ಳುತ್ತದೆ.

ಗ್ರಾಮಸಭೆ ತನ್ನ ಕಾರ್ಯನಿರ್ವಹಣೆಗಾಗಿ ಒಂದೊಂದು ವಿಷಯಕ್ಕೆ ಒಂದೊಂದು ಸಮಿತಿಯನ್ನು ಆರಿಸಿ ನಿಯಮಿಸಬಹುದು. ಈ ಸಮಿತಿಗಳ ಪ್ರಮುಖರೆಲ್ಲ ಕೂಡಿ ಮತ್ತಿತರ ಆವಶ್ಯಕ ಜನರನ್ನು ಕೂಡಿಸಿಕೊಂಡು ಒಂದು ಕಾರ್ಯ ಸಮಿತಿಯನ್ನು ರಚಿಸಬೇಕು. ಕಾರ್ಯಸಮಿತಿ ವಿವಿಧ ಸಮಿತಿಗಳ ನಡುವೆ ಏಕಸೂತ್ರತೆ ಮತ್ತು ಸಮನ್ವಯ ಸಾಧಿಸುವ ಕೆಲಸ ಮಾಡುವುದು, ಮತ್ತು ಗ್ರಾಮಸಭೆಯ ಸಮಸ್ತ ನಿರ್ಣಯಗಳನ್ನು ಕಾರ್ಯರೂಪಕ್ಕೆ ತರುವುದು. ಪೂರ್ಣ ವಿಕೇಂದ್ರಿತ ಪದ್ಧತಿಯನ್ನು ಜಾರಿಗೆ ತರುವವರೆಗೆ ಈಗಿನ ಪಂಚಾಯಿತಿಗಳನ್ನು ಗ್ರಾಮಸಭೆಗಳ ಕಾರ್ಯಸಮಿತಿಗಳೆಂದು ಬೇಕಾದರೆ ಪರಿಗಣಿಸಬಹುದು. ಕೂಡಲೇ ವಿಕೇಂದ್ರೀಕರಣ ತರಲು ಕೈಕೊಳ್ಳಬೇಕಾದ ಮಧ್ಯಾವಧಿ ಕ್ರಮಗಳನ್ನು ಯೋಚಿಸುವಾಗ ಮೇಲಿನ ಸಲಹೆ ಕಾರ್ಯಸಾಧು ಮತ್ತು ವ್ಯಾವಹಾರಿಕವೆನಿಸುವುದು.

ತನಗೆ ಲಭ್ಯವಿರುವ ಸಂಪನ್ಮೂಲಗಳನ್ನು ಗಮನಿಸಿ ತನ್ನ ಅಭಿವೃದ್ಧಿ ಯೋಜನೆಯನ್ನು ತಾನೇ ತಯಾರಿಸುವ ಅಧಿಕಾರ ಪ್ರತಿಗ್ರಾಮಕ್ಕು ಇರಬೇಕು. ಈ ಅಧಿಕಾರವಿರದ ಯಾವ ವಿಕೇಂದ್ರಿತ ವ್ಯವಸ್ಥೆಯೂ ಅನ್ವರ್ಥ ಅಥವಾ ಪೂರ್ಣವೆನಿಸದು. ಮೂಲಭೂತ ಅವಶ್ಯಕತೆಗಳಲ್ಲಿ ಸ್ವಾವಲಂಬನೆಯನ್ನು ಸಾಧಿಸುವುದೇ ಯೋಜನೆಗಳ ಮುಖ್ಯ ಗುರಿ. ಒಂದು ವೇಳೆ ಒಂದು ಗ್ರಾಮ ಯೋಜನೆಯನ್ನು ತಯಾರಿಸಿ ಜಾರಿಗೆ ತರುವಷ್ಟು ವ್ಯಾವಹಾರಿಕ ಘಟಕವಲ್ಲವೆನಿಸಿದರೆ ಹಾಗೂ ಒಂದೊಂದು ಗ್ರಾಮ ಸ್ವಾವಲಂಬನೆಯನ್ನು ಸಾಧಿಸುವುದು ಸಾಧ್ಯವಿಲ್ಲವೆಂದು ಕಂಡು ಬಂದರೆ, ಹಲವು ಗ್ರಾಮಗಳ ಸಮೂಹ (cluster of villages) ಕೂಡಿ ಅದನ್ನು ಸಾಧಿಸಲು ಪ್ರಯತ್ನಿಸಲಿ. ಆದರೆ ಯೋಜನೆಯನ್ನು ಜಾರಿಗೆ ತರುವ ಅಧಿಕಾರವಂತೂ ಅವರ ಕೈಯಲ್ಲಿರಬೇಕು.

ಗ್ರಾಮಸಭೆಗಳು ತಮ್ಮ ನಿರ್ಣಯಗಳನ್ನು ಸರ್ವಾನುಮತಿಯ ಆಧಾರದ ಮೇಲೆ ತೆಗೆದುಕೊಳ್ಳುವಂತಿರಬೇಕು.

ಮುಖಾಮುಖಿ ಪ್ರಜಾತಂತ್ರದ ಪ್ರಯೋಗಕ್ಷೇತ್ರ ಇದು. ಈ ಮಾತು ಸದಾ ನೀತಿ ನಿರ್ಧಾರಕರ ಗಮನದಲ್ಲಿರಬೇಕು.

**ತಾಲ್ಲೂಕಸಭೆ:** — ಗ್ರಾಮ ಅಥವಾ ಗ್ರಾಮ ಸಮೂಹ ಸಭೆಗಳ ಪ್ರತಿನಿಧಿಗಳಿಂದ ಕೂಡಿದ ತಾಲ್ಲೂಕು ಅಥವಾ ಬ್ಲಾಕ್ ಘಟಕ. ಕೆಳಗಿನ ಘಟಕವು ನಿರ್ವಹಿಸಲಾಗದಂಥ ಮತ್ತು ಇಡೀ ತಾಲ್ಲೂಕು ಅಥವಾ ಬ್ಲಾಕಿಗೆ ಅನ್ವಯಿಸುವಂಥ ಕಾರ್ಯಗಳು ಮತ್ತು ಅಧಿಕಾರಗಳು ಈ ಮಟ್ಟದಲ್ಲಿ ಇರುವುವು.

ಕೆಲವು ರಾಜ್ಯಗಳಲ್ಲಿ ಈ ಘಟಕವನ್ನು ಪಂಚಾಯತ್ ಸಮಿತಿ ಅಥವಾ ಪಂಚಾಯತ್ ಯೂನಿಯನ್‌ಗಳೆಂದು ಕೆಲಸ ನಿರ್ವಹಿಸುತ್ತಿವೆ. ತಾಲ್ಲೂಕು ದೊಡ್ಡದಿದ್ದ ಕಡೆಗಳಲ್ಲಿ ಒಂದು ತಾಲ್ಲೂಕಿನಲ್ಲಿ ಎರಡು ಸಮಿತಿಗಳು ಇರಬಹುದು : ಕೆಲವೆಡೆ ಇವೆ. ಕರ್ನಾಟಕದಲ್ಲಿ ತಾಲ್ಲೂಕು ಮತ್ತು ಬ್ಲಾಕು ಎರಡೂ ಹೆಚ್ಚು ಕಡಿಮೆ ಒಂದೇ (co-

terminus). ಅದನ್ನು ತಾಲ್ಲೂಕ ಅಭಿವೃದ್ಧಿ ಮಂಡಲವೆಂದು ಕರೆಯುತ್ತೇವೆ. ಅವರಿಗಿರುವ ಜವಾಬ್ದಾರಿ ಮತ್ತು ಅಧಿಕಾರಗಳನ್ನು ಇನ್ನೂ ಹಿಗ್ಗಿಸಬೇಕಾಗಿದೆ.

**ಜಿಲ್ಲಾ ಸಭೆ:—** ಕೆಲವು ರಾಜ್ಯಗಳಲ್ಲಿ ಇದನ್ನು ಜಿಲ್ಲಾ ಪರಿಷತ್ ಎಂದು ಕರೆಯುತ್ತಿದ್ದೇವೆ. ರಾಜಾಸ್ಥಾನ, ಆಂಧ್ರ, ಮಹಾರಾಷ್ಟ್ರ ಮತ್ತು ಒಂದೆರಡು ರಾಜ್ಯಗಳಲ್ಲಿ ಈ ಘಟಕಗಳು ತುಂಬ ಕ್ರಿಯಾಶೀಲವೂ, ಉಪಯುಕ್ತವೂ ಮತ್ತು ಶಕ್ತಿಶಾಲಿಯಾಗಿರುವಂತೆಯೂ ಕಂಡುಬರುತ್ತವೆ. ಆದರೆ ಅವನ್ನು ಇನ್ನಷ್ಟು ಬಲಪಡಿಸಬೇಕಾಗಿದೆಯಲ್ಲದೆ ಯೋಜನೆ, ವಿಕಾಸ ಮತ್ತು ನಿಯಂತ್ರಣಾಧಿಕಾರದ ದೃಷ್ಟಿಯಿಂದ ಇವು ಬಹು ಮುಖ್ಯ, ಸ್ವಾಭಾವಿಕ ಹಾಗೂ ಕಾರ್ಯಕಾರಿ ಘಟಕಗಳೆಂದು ಪರಿಗಣಿಸಲ್ಪಡಬೇಕು.

ಈ ಮೂರು ಘಟಕಗಳ ಎಲ್ಲೆಯಲ್ಲಿ ಕೆಲಸಮಾಡುವ ಸಮಸ್ತ ಅಧಿಕಾರಿಗಳನ್ನು ಇವಕ್ಕೆ ಅಧೀನರು ಮತ್ತು ಜವಾಬ್ದಾರರನ್ನಾಗಿ ಮಾಡಬೇಕು.

ಈ ಮೂರು ಘಟಕಗಳಿಗೆ ಪರೋಕ್ಷ ಚುನಾವಣೆ ಪದ್ಧತಿ ಹೆಚ್ಚು ಸೂಕ್ತವೇ ಹೇಗೆಂದು ಪರೀಕ್ಷಿಸಿ ಒಂದು ತೀರ್ಮಾನಕ್ಕೆ ಬರಬೇಕಾದುದು ಅವಶ್ಯಕ.

ಅಧಿಕಾರ ಮತ್ತು ಕರ್ತವ್ಯಗಳ ಪಟ್ಟಿ ರಾಜ್ಯಕ್ಕೆ (Statelist) ಮತ್ತು (Centrarlist) ಕೇಂದ್ರಕ್ಕಿರುವಂತೆ ಜಿಲ್ಲೆ, ತಾಲ್ಲೂಕ್ ಮತ್ತು ಗ್ರಾಮಗಳಿಗೂ ಇರಬೇಕು. ಹಾಗೂ ಸಂವಿಧಾನದಲ್ಲಿ ಅವನ್ನು ಅಳವಡಿಸಬೇಕಾದುದು ಅನಿವಾರ್ಯವೆನಿಸಿದಲ್ಲಿ ಸೂಕ್ತ ತಿದ್ದುಪಾಡು ಮಾಡಲು ಹಿಂಜರಿಯಬಾರದು. ಸ್ಥಾನಿಕ ಸ್ವರಾಜ್ಯಗಳ ಪಟ್ಟಿ (Local self-Government list) ಎಂದು ಪ್ರತ್ಯೇಕ ಪಟ್ಟಿಯನ್ನೇ ಸೇರಿಸಬೇಕಾದೀತು.

### ಕರ್ನಾಟಕದಲ್ಲಿ ಆಡಳಿತ ವಿಕೇಂದ್ರೀಕರಣ :

ಆಡಳಿತ ವಿಕೇಂದ್ರೀಕರಣವನ್ನು ಸಾಧಿಸುವ ದಿಶೆಯಲ್ಲಿ ಕರ್ನಾಟಕ ನಿಸ್ಸಂದೇಹವಾಗಿ ಹಿಂದೆ ಬಿದ್ದಿದೆ. ಜಿಲ್ಲಾ ಪರಿಷತ್ ಘಟಕ ಈ ರಾಜ್ಯದಲ್ಲಿ ಅಸ್ತಿತ್ವಕ್ಕೆ ಇನ್ನಾವರೂ ಬಂದಿಲ್ಲ. ಹಿಂದೊಮ್ಮೆ ಜಿಲ್ಲಾ ಪರಿಷತ್ ಮಸೂದೆಯನ್ನು ರಚಿಸಿ ವಿಧಾನಸಭೆಯಲ್ಲಿ ಮಂಡಿಸಿ ಚರ್ಚೆಯೇ ಮಾಡದೆ ಹಿಂತೆಗೆದುಕೊಂಡದ್ದು ಗಮನಾರ್ಹಸಂಗತಿ. ಮಂತ್ರಿಮಂಡಲದಲ್ಲಿ ಮಸೂದೆಯ ಬಗ್ಗೆ ಚರ್ಚೆ ನಡೆಯಿತೆಂದೂ, ಆದರೆ ವಿರೋಧ ಕಂಡುಬಂದದ್ದರಿಂದ ಹಿಂತೆಗೆಯಬೇಕಾಯಿತೆಂದೂ ಅನೇಕರಿಗೆ ಗೊತ್ತಿದೆ. ಆಗಿನ ಮಂತ್ರಿಗಳ ನೇಕರಿಗೆ ತಮಗಿರುವ ಅಧಿಕಾರಗಳಲ್ಲಿ ಕಡಿತವಾಗುವುದು ಮತ್ತು ತಮ್ಮ ಉಪಯುಕ್ತತೆಯೇ ಎಲ್ಲಿ ಸಂಕುಚಿತವಾಗಿ ಹೋದೀತೋ ಎಂಬ ಭಯವೇ ಹೀಗೆ ಹಿಮ್ಮೆಟ್ಟಲು ಕಾರಣವಾಯಿತೆಂದು ತಿಳಿದುಬಂದಿದೆ. ಸತ್ಯಸಂಗತಿಯಾಗಿದ್ದಲ್ಲಿ ಇದನ್ನು ಪ್ರತಿಗಾಮಿ ಮತ್ತು ಪ್ರಗತಿವಿರೋಧಿ ಹೆಜ್ಜೆ ಎನ್ನದೆ ವಿಧಿಯಿಲ್ಲ. ಈಗಲಾದರೂ ರಾಜ್ಯ ಪುನರ್ವಿಚಾರ ಮಾಡಿ ಜಿಲ್ಲಾ ಪರಿಷತ್ ಮಸೂದೆಯನ್ನು ತರಲು ಯೋಚಿಸಬೇಕಾದುದು ರಾಜ್ಯದ ಹಿತದೃಷ್ಟಿಯಿಂದ ಅಗತ್ಯ.

ಹಾಗೆ ಮಸೂದೆಯನ್ನು ತರುವಾಗ ಬೇರೆ ರಾಜ್ಯಗಳಲ್ಲಿ ಈ ಘಟಕ ಕೆಲಸ ಮಾಡಿರುವ ರೀತಿಯನ್ನು ವಿಮರ್ಶಕ ಬುದ್ಧಿಯಿಂದ ಪರೀಕ್ಷಿಸಿ, ಅವರ ಅನುಭವ ಮತ್ತು ಪ್ರಯೋಗದ ಲಾಭ ಪಡೆಯುವ ದೃಷ್ಟಿಯನ್ನಿರಿಸಿಕೊಳ್ಳಬೇಕು. ಜಿಲ್ಲಾ ಪರಿಷತ್ತುಗಳ ಕಾರ್ಯ ವಿಧಾನವನ್ನು ಕುರಿತು ಅಧ್ಯಯನ ನಡೆಸಿದ ಸಂಸ್ಥೆಗಳ ವರದಿಗಳೂ ತೀರ್ಮಾನಗಳೂ ಸಹಾಯಕವಾಗಬಲ್ಲವು.

ಪಂಚಾಯಿತಿ ರಾಜ್ಯದ ಸಂಸ್ಥೆಗಳ ಸದಸ್ಯರಿಗೆ ತರಬೇತಿ ನೀಡುವ ಶಿಕ್ಷಣ ಶಿಬಿರಗಳನ್ನು ಸಹ ಹಿಂತೆಗೆಯಲಾಯಿತು. ಈ ದಿಶೆಯಲ್ಲೂ ಸರ್ಕಾರ ಹಿಮ್ಮೆಟ್ಟಿದಂತಾಗಿದೆ. ಪಂಚಾಯತಿ ಮತ್ತು ತಾಲ್ಲೂಕು ಅಭಿವೃದ್ಧಿ ಮಂಡಲಗಳ ಚುನಾಯಿತ ಸದಸ್ಯರಿಗೆ ತರಬೇತಿ ನೀಡುವ ಮತ್ತೊಂದು ವ್ಯವಸ್ಥೆ ಈಗ ಇಲ್ಲ. ತರಬೇತಿಯ ಅವಶ್ಯಕತೆ ಇದೆ ಎಂಬುದಂತೂ ನಿಜ. ಈ ಅವಶ್ಯಕತೆಯನ್ನು ಎಲ್ಲರೂ ಒತ್ತಿ ಹೇಳುತ್ತಾರೆ. ಚುನಾಯಿತ ಸದಸ್ಯರಲ್ಲಿ ಉತ್ಸಾಹ, ಅಭಿಕ್ರಮ, ತಮ್ಮ ಕರ್ತವ್ಯದ ಬಗ್ಗೆ ಸ್ಪಷ್ಟ ಕಲ್ಪನೆ ತಂದು ಕೊಡುವ ಹೊಸದೊಂದು ವ್ಯವಸ್ಥೆ ಆಗಬೇಕು. ಅದಕ್ಕಾಗಿ ಮತ್ತೊಮ್ಮೆ ಸರ್ಕಾರ ಪ್ರಯತ್ನಿಸಲೆಂದು ಒತ್ತಾಯಿಸಬೇಕು. ಅಷ್ಟೇ ಏಕೆ, ಪಂಚಾಯಿತಿ ರಾಜ್ಯ ಸಂಸ್ಥೆಗಳ ಕೆಲಸಕಾರ್ಯ, ವಿಧಿ-ವಿಧಾನಗಳು ಮತ್ತು ಅವು ಇದುವರೆಗೆ ನಡೆದು ಬಂದ ರೀತಿಯನ್ನು ಒಮ್ಮೆ ಆಮೂಲಾಗ್ರವಾಗಿ ಪರಿಶೀಲಿಸಿ ಯೋಗ್ಯ ತಿದ್ದುಪಾಡುಗಳನ್ನು ಮಾಡುವುದು, ಕೊರತೆಯನ್ನು ತುಂಬುವುದು ಹಾಗೂ ಕ್ರಾಂತಿಕಾರಿ ಸುಧಾರಣೆಗಳನ್ನು ತರುವ ಅಗತ್ಯ ತಲೆದೋರಿದೆ ಎಂದು ಮಾತ್ರ ಹೇಳಬಹುದು.

**ಕೊನೆಗೊಂದು ಹೋರಾಟ ಕಾದಿದೆ: —**

ಪ್ರಜಾತಂತ್ರ ಎಂದರೆ ಪ್ರಜೆಗಳ, ಪ್ರಜೆಗಳಿಂದ ಮತ್ತು ಪ್ರಜೆಗಳಿಗಾಗಿ ಅಧಿಕಾರ. ಇದೇನೋ ಭವ್ಯ ಕಲ್ಪನೆಯಾಗಿಯೇ ಉಳಿದಿದೆ. ಕಲ್ಪನೆಯನ್ನು ಕೃತಿಗಿಳಿಸಲು ಅಧಿಕಾರ ವಿಕೇಂದ್ರೀಕರಣವೊಂದೇ ನೇರ ಹಾಗೂ ಸರಳ ಉಪಾಯ. ಮುಖಾಮುಖಿ ಪ್ರಜಾತಂತ್ರದ ಸ್ಥಾಪನೆಗೂ ಇದೇ ದಾರಿ ಆದರೆ ಪ್ರಜಾತಂತ್ರ ಕಿರುಳೇ ಪ್ರಜೆಗಳ ಆಡಳಿತ ಎಂದಿದ್ದರೂ ಇಡೀ ಜಗತ್ತಿನಲ್ಲಿರುವ ಎಲ್ಲ ಪ್ರಜಾತಂತ್ರಗಳಲ್ಲಿ ಕಂಡುಬರುವ ಸಾಮಾನ್ಯಾಂಶವನ್ನು ಇಲ್ಲಿ ಸ್ಮರಿಸಲೇಬೇಕು. ಪ್ರಸಿದ್ಧ ಆಂಗ್ಲ ಪತ್ರಕರ್ತ ಮೆರ್ವಿನ್ ಜೋನ್ಸರ ಮಾತುಗಳಲ್ಲಿ ಹೇಳುವುದಾದರೆ, "One Commonfactor the world over has been and remains, a reluctance to give democracy its full and literal meaning of the rule of the people..... ....no Country where people in the majority take an active part in governing. Speaking of a democratic Couutry means elections once in a certain period democracy Can survive provided it is real."

Mervyn Jones.

[ In three historical Points on democracy. ]

ಜಗತ್ತಿನ ಎಲ್ಲ ಪ್ರಜಾತಂತ್ರಗಳಲ್ಲಿ ಕಂಡುಬರುವ ಔದಾಸೀನ್ಯವೆಂದರೆ ಪ್ರಜಾತಂತ್ರಕ್ಕಿರುವ ಪೂರ್ಣಾರ್ಥ ಮತ್ತು ಶಬ್ದಾರ್ಥವನ್ನು ವಿಕಸಿಸಿ ಅವನ್ನು ಕೃತಿಗಿಳಿಸುವುದರಲ್ಲಿ ಯಾವ ಪ್ರಜಾತಂತ್ರವೂ ಮುಂದಾಗುತ್ತಿಲ್ಲ. ಮೇಲಿನ ಘಟಕ ಕೆಳಗಿನ ಘಟಕದೊಡನೆ ಅಧಿಕಾರ ಹಂಚಿಕೊಳ್ಳಲು ಮುಂದಾಗದು. ಹಾಗೆಯೇ ಜನತೆ ನೇರಾಗಿ ಆಡಳಿತದಲ್ಲಿ ಪಾಲುಗೊಳ್ಳಲಿ ಎಂಬ ಕಳಕಳಿಯೇ ಇಲ್ಲ. ಅಧಿಕಾರ ಹಂಚಿಕೊಳ್ಳುವ ಮಾತು ಬಂದಾಗ ಇಂಗ್ಲಿಷರು ಭಾರತಕ್ಕೆ ಸ್ವಾತಂತ್ರ್ಯ ಕೊಡದಿರಲು ಹೂಡುತ್ತಿದ್ದ ತರ್ಕವನ್ನೇ ಮೇಲಿನ ಘಟಕದವರು ಕೆಳಗಿನ ಘಟಕದವರೊಡನೆ ಹೂಡುವುದನ್ನು ಕೇಳುತ್ತೇವೆ. ಇದೇ ಸಂದರ್ಭದಲ್ಲಿ ಹಲವು ವರ್ಷಗಳಿಂದ ಎದ್ದಿರುವ ರಾಜ್ಯಗಳಿಗೆ ಸ್ವಾಯತ್ತತೆ (State Autonomy)ಯ ಕೂಗನ್ನು ಪರಿಶೀಲಿಸಿದರೆ ಖೇದಜನಕ ಸಂಗತಿಯೊಂದು ಹೊರಬೀಳದಿರದು. ಕೇಂದ್ರ ರಾಜ್ಯಗಳಿಗೆ ಅಧಿಕಾರ ಬಿಟ್ಟುಕೊಡಲು ಹಿಂಜರಿಯುತ್ತಿದ್ದರೆ ರಾಜ್ಯಗಳೇನು ಮಾಡುತ್ತಿವೆ ಎಂಬುದನ್ನು ನೋಡಿರಿ. ಅವು ಈಗ ತಮಗಿರುವ ಅಧಿಕಾರದಲ್ಲಿ ಕೆಲವಂಶ ಬಿಟ್ಟುಕೊಡಲು ಸಹ ಹಿಂಜರಿಯುತ್ತಿವೆ. ಒಂದು ವೇಳೆ ಅವಕ್ಕೆ ಕೇಂದ್ರದಿಂದ ಹೆಚ್ಚು ಅಧಿಕಾರ ದೊರೆಯಿತೆನ್ನಿ. ಆಗ ರಾಜ್ಯಗಳು ತಮಗೆ ದೊರೆತ ಹೆಚ್ಚುವರಿ ಅಧಿಕಾರದಲ್ಲಿ ಸ್ವಲ್ಪವನ್ನು ಇತರ ಘಟಕಗಳಿಗೆ ಬಿಟ್ಟುಕೊಡಲು ಮುಂದಾಗುವುವೇ ಅಥವಾ ಎಲ್ಲವನ್ನು ತಮ್ಮ ಬಿಗಿ ಮುಷ್ಟಿಯಲ್ಲಿಟ್ಟುಕೊಳ್ಳುವುವೇ ? ಈ ದೃಷ್ಟಿಯಿಂದ ರಾಜ್ಯಗಳ ಸ್ವಾಯತ್ತತೆಯ ಬೇಡಿಕೆಯನ್ನು ಪರಿಶೀಲಿಸಿದರೆ ಅದೊಂದು ಕೇವಲ ರಾಜಕೀಯ ಘೋಷಣೆಯೇ ಹೊರತು ಬೇರೇನೂ ಅಲ್ಲ ಎಂದು ಕಂಡು ಬರುವುದು. ತಮಗನುಕೂಲವಲ್ಲದ ಅಥವಾ ವಿರೋಧಿ ನಿಲವನ್ನು ತಳೆದಿರುವ ಅನ್ಯಪಕ್ಷಗಳು ಕೇಂದ್ರಾಡಳಿತ ನಡೆಸುತ್ತಿದ್ದಾಗಲೆಲ್ಲ ರಾಜ್ಯಸ್ವಾಯತ್ತತೆಯ ಬೇಡಿಕೆ ಗರಿಗೆದರಿ ನಿಲ್ಲುತ್ತದೆ. ಕೇಂದ್ರವನ್ನು ಪೇಚಿಗೆ ಸಿಲುಕಿಸುವ, ಅದರ ಬಗ್ಗೆ ಜನತೆಯಲ್ಲಿ ಸಂಶಯ ಹುಟ್ಟುವಂತೆ ಮಾಡುವ ತಂತ್ರ ಇದು. ಕೇಂದ್ರದಿಂದ ಹೆಚ್ಚು ಸವಲತ್ತು, ಹೆಚ್ಚು ಅರ್ಥಿಕಾನುಕೂಲಗಳನ್ನು ಸೆಳೆದುಕೊಳ್ಳಲು ಇದೊಂದು ಬೆದರಿಕೆಯಾಗಿಯೂ ಸಹ ಪರಿಣಮಿಸಬಹುದು. ಏನೇ ಇರಲಿ, ಈ ಘೋಷಣೆ ಆಡಳಿತ ವಿಕೇಂದ್ರೀಕರಣದಲ್ಲಾಗಲೀ ಅಥವಾ ಅಧಿಕಾರ ಸ್ವಾಯತ್ತತೆಯಲ್ಲಾಗಲಿ ಘೋಷಣಕಾರರಿಗೆ ನಂಬಿಕೆಯಿದೆಯೆಂದೇನ ತೋರಿಸುವುದಿಲ್ಲ. ಅಥವಾ ಅಧಿಕಾರ ಹಂಚಿಕೊಳ್ಳುವ ಕಳಕಳಿಯನ್ನೂ ಪ್ರದರ್ಶಿಸದು.

ಒಟ್ಟು ಸ್ಥಿತಿ ಹೀಗಿರುವಾಗ, ಮೇಲ್ಮಟ್ಟದಲ್ಲಿ ಕಂಡುಬರುವ ಔದಾಸೀನ್ಯ ಮತ್ತು ಕೆಳಮಟ್ಟದಲ್ಲಿ ತಲೆಹಾಕಿರುವ ದೋಷಗಳನ್ನು ಹೋಗಲಾಡಿಸಿ ಅಡ್ಡಿ ಆತಂಕಗಳನ್ನು ಎದುರಿಸಿ ವಿಕೇಂದ್ರೀಕರಣವನ್ನು ಸಾಧಿಸುವುದು ಸುಲಭದ ಕಾರ್ಯವೇನಾಗಲಾರದು. ಅದಕ್ಕೊಂದು ಗಂಭೀರ ಹೋರಾಟವೇ ನಡೆಯಬೇಕಾಗುತ್ತದೆ. ಹೋರಾಟದ ಸ್ವರೂಪ ಮಾತ್ರ ಬೇರೆ. ಯಾಕೆಂದರೆ ಇದು ಮೂಲತಃ ತನ್ನ ಜನತೆ, ಆಡಳಿತಗಾರರು,

ರಾಜನೀತಿಜ್ಞರು ಮತ್ತು ವಿವಿಧ ಹಿತಾಸಕ್ತಿಗಳಲ್ಲಿ ಮನೆ ಮಾಡಿರುವ ತಪ್ಪುಗ್ರಹಿಕೆಯನ್ನು ತಿದ್ದಿ ಬದಲಿಸುವ ಪ್ರಕ್ರಿಯೆಯನ್ನು ಅವಲಂಬಿಸಿ ನಡೆಯಬೇಕಾದ ಹೋರಾಟವಾದ್ದರಿಂದ ಉಗ್ರತೆ ಅಥವಾ ಹಿಂಸೆ ಎಳ್ಳಷ್ಟು ನಡೆಯದು. ಆದರೆ ಅಹಿಂಸಾತ್ಮಕ ಹೋರಾಟದಲ್ಲಿ ಸಾತ್ವಿಕ ಕೋಪ ಇದ್ದೇ ಇರುವುದು. ಇದು ಒಂದು ಬಗೆಯ ಹೋರಾಟವಾದರೆ ಇನ್ನೊಂದೆಡೆ ಗ್ರಾಮೀಣ ಜೀವನದ ನಾನಾ ಕ್ಷೇತ್ರದಲ್ಲಿ ಬೇರೂರಿರುವ ಶೋಷಕ ವರ್ಗ ಏಕಸ್ವಾಮ್ಯದ ಶಕ್ತಿಗಳು ಸ್ಥಾಪಿತಹಿತಗಳು ವಿಕೇಂದ್ರಿಕೃತ ಘಟಕಗಳಿಗೆ ಒಡ್ಡುವ ಆತಂಕಗಳನ್ನು ಎದುರಿಸಬೇಕಾದ ಹೋರಾಟ ಬೇರೆ ಇದೆ. ಈ ಘಟಕಗಳು ಬಲಯುತವಾಗಬೇಕಾದರೆ ಮೇಲೆ ಹೇಳಿದ ಬಲಿಷ್ಠ ಶಕ್ತಿಗಳನ್ನು ನಿಷ್ಕ್ರಿಯಗೊಳಿಸಲೇ ಬೇಕು, ಇಲ್ಲವೇ, ಈ ಶಕ್ತಿಗಳು ಘಟಕಗಳನ್ನೇ ನುಂಗುತ್ತವೆ. ಈ ಘಟಕಗಳು ಶಕ್ತಿಶಾಲಿಯಾಗಿದ್ದರೆ ಮಾತ್ರ ಇಂಥ ಶಕ್ತಿಗಳನ್ನು ಎದುರಿಸಬಲ್ಲವು. ಇದೊಂದು ವಿಷಚಕ್ರ. ವಿಷಚಕ್ರವನ್ನು ಭೇದಿಸಿ ಮುಖಾಮುಖಿ ಪ್ರಜಾತಂತ್ರದ ಹಾದಿಯನ್ನು ಪ್ರಶಸ್ತಗೊಳಿಸಬೇಕಾಗಿದೆ. ಅಂತೂ ವಿಕೇಂದ್ರೀಕರಣವಾದಿಗಳಿಗೆ ಇಬ್ಬಗೆಯ ಹೋರಾಟಕಾದಿದೆ.

ಕರ್ನಾಟಕದಲ್ಲಿ

# ಗಾಂಧೀಜಿ ಪ್ರವಾಸ

**ಬಿ. ಆರ್. ಪ್ರಾಣೇಶರಾವ್**

ರಾಷ್ಟ್ರಪಿತ ಮಹಾತ್ಮಗಾಂಧಿಯವರು ದೇಶದಲ್ಲಿ ಜನರ ನಾಡಿ ಹೇಗೆ ಮಿಡಿಯುತ್ತಿದೆಯೆಂಬುದನ್ನು ಸದಾ ಗಮನಿಸುತ್ತಿದ್ದರು. ಜನತೆಯೊಂದಿಗೆ ಅವರು ಹೊಂದಿದ್ದ ಅತ್ಯಂತ ನಿಕಟವಾದ ಸಂಪರ್ಕದಿಂದ ಜನರ ಆಶೋತ್ತರಗಳನ್ನು ಸ್ಥಿತಿಗತಿಗಳನ್ನು ನೈಜವಾಗಿ ಅರಿಯಲು ಅವರಿಗೆ ಸಾಧ್ಯವಾಗುತ್ತಿತ್ತು. ತಮ್ಮ ವಿಚಾರಗಳನ್ನು ಜನರಿಗೆ ಸತತವಾಗಿ ತಿಳಿಸಲು ಮತ್ತು ತಾವು ಕೈಗೊಂಡ ರಾಷ್ಟ್ರವಿಮೋಚನಾ ಸಂಗ್ರಾಮ ಹಾಗೂ ಸಮಾಜ ಸುಧಾರಣೆಯ ಹೋರಾಟದಲ್ಲಿ ಜನರನ್ನು ಸಂಘಟಿಸಲು ಗಾಂಧೀಜಿ ಸತತವಾಗಿ ದೇಶಾದ್ಯಂತ ಪ್ರವಾಸಮಾಡುತ್ತಿದ್ದರು. ಅವರಷ್ಟು ವ್ಯಾಪಕವಾಗಿ ಪ್ರವಾಸ ಮಾಡಿದವರು ಹಾಗೂ ಜನರಲ್ಲಿ ಅಷ್ಟೊಂದು ಆತ್ಮೀಯ ಸಂಬಂಧವನ್ನು ಬೆಳಸಿಕೊಂಡಿದ್ದ ನಾಯಕರು ಭಾರತದ ಇತಿಹಾಸದಲ್ಲಿ ಇನ್ನೊಬ್ಬರು ಕಾಣಬರುವುದಿಲ್ಲ.

ಕರ್ನಾಟಕದಲ್ಲಿ ಗಾಂಧೀಜಿ ಹಲವಾರು ಸಾರಿ ಪ್ರವಾಸ ಮಾಡಿದ್ದಾರೆ. ಆಗ ಕರ್ನಾಟಕ ವಿವಿಧ ಆಡಳಿತಗಳಲ್ಲಿ ಸಿಕ್ಕಿಕೊಂಡಿತ್ತು. ಗಾಂಧೀಜಿ ಈ ಎಲ್ಲ ಭಾಗಗಳಿಗೂ ಭೇಟಿ ಕೊಟ್ಟಿದ್ದರು. ಕರ್ನಾಟಕದೊಂದಿಗೆ ಗಾಂಧೀಜಿಯ ಸಂಬಂಧ ಎಷ್ಟು ನಿಕಟವಾಗಿತ್ತೆಂದರೆ ಕರ್ನಾಟಕವನ್ನು " ಗಾಂಧೀ ಪ್ರಾಂತ " ಎಂದು ಕರೆಯುವುದು ರೂಢಿಯಾಗಿಬಿಟ್ಟಿತ್ತು. 1924ರಲ್ಲಿ ಬೆಳಗಾವಿಯಲ್ಲಿ ನಡೆದ ಅಖಿಲಭಾರತ ರಾಷ್ಟ್ರೀಯ ಕಾಂಗ್ರೆಸ್‌ನ ಅಧಿವೇಶನಕ್ಕೆ ಗಾಂಧೀಜಿ ಅಧ್ಯಕ್ಷರಾಗಿದ್ದುದು ಕರ್ನಾಟಕಕ್ಕೆ ಹಿರಿಮೆಯನ್ನು ತಂದುಕೊಟ್ಟ ಮಹತ್ವ ಘಟನೆ. ಕರ್ನಾಟಕದಲ್ಲಿ ನಡೆದ ಸತ್ಯಾಗ್ರಹಗಳು ಬಹುಮಟ್ಟಿಗೆ ಗಾಂಧೀಜಿಯವರ ಆದರ್ಶಕ್ಕೆ ಅನುಗುಣವಾಗಿದ್ದು ಸತ್ಯ, ಅಹಿಂಸೆ ಮತ್ತು ಅನುಪಮ ತ್ಯಾಗದಿಂದ ಕೂಡಿರುತ್ತಿದ್ದವು. ರಚನಾತ್ಮಕ ಕಾರ್ಯಗಳಲ್ಲಿ ಕರ್ನಾಟಕದ ಸಂಘ ಸಂಸ್ಥೆಗಳು ತೋರಿಸುತ್ತಿದ್ದ ನಿಷ್ಠೆ, ಕಾರ್ಯದಕ್ಷತೆ ಮತ್ತು ಯಶಸ್ಸು ಗಾಂಧೀಜಿಯವರ ಮೆಚ್ಚುಗೆಗೆ ಪಾತ್ರವಾಗಿದ್ದವು. ಹಳೆಯ ಮೈಸೂರು ಸಂಸ್ಥಾನದ ಆಗಿನ ಮಹಾರಾಜರಾಗಿದ್ದ ಶ್ರೀ ನಾಲ್ಮಡಿ ಕೃಷ್ಣರಾಜ ಒಡೆಯರು. ದಿವಾನರುಗಳಾಗಿದ್ದ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು ಮತ್ತು ಮಿರ್ಜಾ ಇಸ್ಮೇಲ್ ಅವರುಗಳು ಗಾಂಧೀಜಿಯವರಲ್ಲಿ ಅನುಪಮ ಗೌರವ ಇಟ್ಟುಕೊಂಡಿದ್ದರಷ್ಟೇ ಅಲ್ಲದೆ ಗಾಂಧೀಜಿಯವರ ಖಾದಿ, ಗ್ರಾಮೋದ್ಯೋಗ, ಅಸ್ಪೃಶ್ಯತಾ ನಿವಾರಣೆ ಮುಂತಾದ ಕಾರ್ಯಕ್ರಮಗಳನ್ನು ಸರ್ಕಾರದ ಅಧಿಕೃತ ಕಾರ್ಯಕ್ರಮಗಳನ್ನಾಗಿ ಕೈಗೊಂಡು ಬೆಳೆಸಿದ್ದರು. ಮಹಾರಾಜರು ಸ್ವತಃ ಚರಖಾದಲ್ಲಿ ನೂಲುತ್ತಿದ್ದುದು ಮಹಾತ್ಮರ ಮೆಚ್ಚುಗೆಗೆ ಪಾತ್ರವಾಗಿತ್ತು. ಮಹಾತ್ಮರು

ಮೈಸೂರು ಸಂಸ್ಥಾನದಲ್ಲಿ ಪ್ರವಾಸ ಮಾಡಿದಾಗಲೆಲ್ಲ ಅವರ ಪ್ರವಾಸ ಯಶಸ್ವಿಯಾಗಲು ಮಹಾರಾಜರು ಮತ್ತು ದಿವಾನರು ಖುದ್ದಾಗಿ ಗಮನ ನೀಡುತ್ತಿದ್ದುದು ಉಂಟು. ಆಗಿನ ಕಾಂಗ್ರೆಸ್ ಕಾರ್ಯಕರ್ತರು, ಸಾರ್ವಜನಿಕ ಮುಖಂಡರು, ಜನ ಸಾಮಾನ್ಯರು ಗಾಂಧೀಜಿಯವರ ಪ್ರವಾಸದಿಂದಾಗಿ ತುಂಬಾ ಪ್ರಭಾವಿತರಾಗಿದ್ದರು. ಸ್ವಾತಂತ್ರ್ಯ ಹೋರಾಟದಲ್ಲೂ ಸಮಾಜ ಸುಧಾರಣಾ ಕಾರ್ಯದಲ್ಲೂ ರಚನಾತ್ಮಕ ಕಾರ್ಯಕ್ರಮದಲ್ಲಿ ಸಹಸ್ರಾರು ಜನ ಭಾಗವಹಿಸಿ ಅನುಪಮ ತ್ಯಾಗಮಾಡಿ ರಾಷ್ಟ್ರೀಯ ಹೋರಾಟದಲ್ಲಿ ಕರ್ನಾಟಕದವರು ಬೇರೆ ಯಾವ ಪ್ರಾಂತದವರಿಗೂ ಕಡಿಮೆ ಇಲ್ಲ ಎಂಬುದನ್ನು ತೋರಿಸಿಕೊಟ್ಟರು.

ಗಾಂಧೀಜಿ ಪ್ರಪ್ರಥಮ ಕರ್ನಾಟಕಕ್ಕೆ ಬಂದದ್ದು 1915ರ ಮೇ ತಿಂಗಳಲ್ಲಿ. ದಕ್ಷಿಣ ಆಫ್ರಿಕಾದಿಂದ ಆಖೈರಾಗಿ ಭಾರತಕ್ಕೆ 1914ರಲ್ಲಿ ವಾಪಸು ಬಂದ ಮೇಲೆ ಗೋಖಲೆಯವರ ಸೂಚನೆಯ ಮೇರೆಗೆ ಅಂದಿನ ಭಾರತದ ಸಮಸ್ಯೆಗಳನ್ನು ಅಧ್ಯಯನ ಮಾಡಲು ಗಾಂಧೀಜಿ ದೇಶಾದ್ಯಂತ ಪ್ರವಾಸ ಕೈಗೊಂಡರು. ಮದ್ರಾಸಿಗೆ ಬಂದು ಅಲ್ಲಿ ಶ್ರೀ ಜಿ. ಎ. ನಟೇಶನ್‌ರವರ ಅತಿಥಿಯಾಗಿದ್ದರು. ಶ್ರೀ ಡಿ. ವಿ. ಗುಂಡಪ್ಪನವರು ನಟೇಶನ್‌ರವರ ಮೂಲಕ ಪ್ರಯತ್ನಮಾಡಿ ಗಾಂಧೀಜಿಯವರು ಬೆಂಗಳೂರಿಗೆ ಭೇಟಿ ನೀಡುವಂತೆ ಏರ್ಪಾಟು ಮಾಡಿದರು.

ಗಾಂಧೀಜಿಯವರು ಕಸ್ತೂರ ಬಾ ಗಾಂಧಿ ಮತ್ತು ಶ್ರೀ ನಟೇಶನ್‌ರೊಂದಿಗೆ 1915ರ ಮೇ 8ರಂದು ಬೆಳಿಗ್ಗೆ ಬೆಂಗಳೂರಿಗೆ ಬಂದರು ಗಾಂಧೀಜಿಯವರನ್ನು ಸ್ವಾಗತಿಸಲು ಸಹಸ್ರಾರು ಜನ ರೈಲು ನಿಲ್ದಾಣದಲ್ಲಿ ಸೇರಿದ್ದರು. ಕುದುರೆ ಸಾರೋಟಿನಲ್ಲಿ ಗಾಂಧೀಜಿಯವರ ಮೆರವಣಿಗೆ ನಿಯೋಜಿತವಾಗಿತ್ತು. ಅಲ್ಲಿ ನೆರೆದಿದ್ದ ಅಸಂಖ್ಯಾತ ವಿದ್ಯಾರ್ಥಿಗಳು ತುಂಬಾ ಉತ್ಸಾಹ ಪ್ರಕಟಿಸಿದರು. ಅವರುಗಳು ಸಾರೋಟಿಗೆ ಕಟ್ಟಿದ್ದ ಕುದುರೆಗಳನ್ನು ಬಿಚ್ಚಿ ಮಹಾತ್ಮರಿರುವ ಸಾರೋಟನ್ನು ತಾವೇ ಎಳೆದುಕೊಂಡು ಹೋಗಲು ಆಸೆಪಟ್ಟರು. ಮಹಾತ್ಮರು ಒಪ್ಪಲಿಲ್ಲ. " ಮನುಷ್ಯರು ಮನುಷ್ಯರನ್ನು ಎಳೆಯುವುದೆ ! ಇದು ಮಾನವತೆಗೆ ಅಪಚಾರ ನಾನು ಸಾರೋಟಿನಲ್ಲಿ ಕುಳಿತುಕೊಳ್ಳುವುದಿಲ್ಲ " ಎಂದರು. 'ವಸತಿಗೃಹ ಎಷ್ಟುದೂರ ಇದೆ ?' ಎಂದು ಕೇಳಿದರು. ರೈಲು ನಿಲ್ದಾಣದಿಂದ ಅರ್ಧ ಮೈಲಿ ಎಂದು ಗೊತ್ತಾಯಿತು. 'ನಾನೂ ನಿಮ್ಮೊಡನೆ ನಡೆದು ಬರುತ್ತೇನೆ' ಎಂದು ಎಲ್ಲರ ಜೊತೆಯಲ್ಲಿ ಗಾಂಧೀಜಿ ನಡದೇ ಹೊರಟರು.

ಅದೇ ದಿನ ಸಂಜೆ ಬೆಂಗಳೂರು ಪೌರಸಭೆಯವರು ಲಾಲ್‌ಬಾಗಿನಲ್ಲಿ ಏರ್ಪಡಿಸಿದ್ದ ಸನ್ಮಾನ ಸಮಾರಂಭದಲ್ಲಿ ಗಾಂಧೀಜಿ ಮಾತನಾಡುತ್ತ ಬೆಳಿಗ್ಗೆ ನಡೆದ ಪ್ರಕರಣವನ್ನು ಪ್ರಸ್ತಾಪಿಸಿದರು.

" ಬೆಳಿಗ್ಗೆ ಸಾರೋಟಿನಲ್ಲಿ ನನ್ನನ್ನು ಕೂಡಿಸಿ ನೀವು ಎಳೆದುಕೊಂಡು ಹೋಗಲು ನಾನ ಒಪ್ಪಲಿಲ್ಲ. ಅದಕ್ಕೆ ಒಂದು ಅರ್ಥವಿದೆ. ನಮ್ಮ ಸಾರ್ವಜನಿಕ ಸೇವಕರನ್ನು

ಹೀಗೆ ಗಾಡಿಯಲ್ಲಿ ಕೂಡಿಸಿ ಮೆರವಣಿಗೆಯಲ್ಲಿ ಕರೆದುಕೊಂಡು ಹೋಗಿ ಅವರನ್ನು ಕೆಡಿಸಬಾರದು. ಸ್ವಲ್ಪವೂ ಸದ್ದುಗದ್ದಲವಿಲ್ಲದೆ ಕೆಲಸಮಾಡಲಿ ಅವರು. ಸಾರ್ವಜನಿಕ ಕ್ಷೇತ್ರದಲ್ಲಿ ಕೆಲಸ ಮಾಡಿದರೆ ನನಗೂ ಇದೇ ರೀತಿ ಗೌರವ ದೊರಕೀತು ಎಂಬ ಭಾವನೆ ಅವರಲ್ಲಿ ಮೂಡಬಾರದು. ಸೇವೆ ಸಲ್ಲಿಸುವವರಿಗೆ ಕಲ್ಲಿನೇಟು ಬೀಳುತ್ತದೆ. ಜನರು ಅವರನ್ನು ಕಸಕ್ಕಿಂತ ಕಡೆಯಾಗಿ ಕಾಣುತ್ತಾರೆ, ಎಂಬ ಭಾವನೆ ಬರಲಿ. ಆದರೂ ನನ್ನ ದೇಶ ಪ್ರೇಮವನ್ನು ನಾನು ಬಿಡಲಾರೆ ಎನಿಸಲಿ. ಅವರ ಸೇವೆಗೆ ಸೇವೆಯೇ ಪ್ರತಿಫಲ" ಎಂದು ಗಾಂಧೀಜಿ ಹೇಳಿದರು.

ಅದೇ ದಿನ ಇನ್ನೊಂದು ಸಮಾರಂಭ. ಶ್ರೀ ಡಿ. ವಿ. ಗುಂಡಪ್ಪನವರು ನಡೆಸುತ್ತಿದ್ದ ಸೋಷಿಯಲ್ ಕ್ಲಬ್‌ನಲ್ಲಿ ಗಾಂಧೀಜಿಯವರು ಗೋಪಾಲ ಕೃಷ್ಣ ಗೋಖಲೆಯವರ ಭಾವಚಿತ್ರವನ್ನು ಅನಾವರಣ ಮಾಡಿದರು. ತಮ್ಮ ರಾಜಕೀಯ ಗುರುವಾಗಿದ್ದ ಗೋಖಲೆಯವರ ರಾಜಕೀಯ ಆದರ್ಶಗಳ ಪರಿಪಾಲನೆಯ ಅಗತ್ಯವನ್ನು ಒತ್ತಿ ಹೇಳಿದರು. ಆಧ್ಯಾತ್ಮಿಕ ತಳಹದಿಯ ಮೇಲೆ ರಾಜಕೀಯ ಚಟುವಟಿಕೆಗಳನ್ನು ನಡೆಸಬೇಕೆಂಬ ಗೋಖಲೆಯವರ ಆದರ್ಶ ಮಹನೀಯ ಎಂದರು. ಅದೇ ಸಂದರ್ಭದಲ್ಲಿ ಜನ್ಮತಾಳಿದ ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ ಇಂದಿನವರೆಗೆ ಉನ್ನತ ಮಟ್ಟದಲ್ಲಿ ಸಾರ್ವಜನಿಕ ಸೇವೆ ಮಾಡಿಕೊಂಡು ಬಂದಿದೆ.

ಗಾಂಧೀಜಿ ಬೆಂಗಳೂರಿನಲ್ಲಿ ತಂಗಿದ್ದಾಗ ಅವರನ್ನು ಕಾಣಲು ಅಂದಿನ ದಿವಾನರಾಗಿದ್ದ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು ಮೈಸೂರಿನಿಂದ ಧಾವಿಸಿ ಬಂದಿದ್ದರು. ವೃದ್ಧ ಪಿತಾಮಹ ವೆಂಕಟಕೃಷ್ಣಯ್ಯನವರೂ ಬಂದಿದ್ದರು. ಬೆಂಗಳೂರಿನ ಅನೇಕ ಗಣ್ಯ ಮಹನೀಯರು ಮಹಾತ್ಮರನ್ನು ನೋಡಿ ವಿಚಾರ ವಿನಿಮಯ ಮಾಡಿಕೊಂಡರು.

ಮತ್ತೆ ಅವರು ಕರ್ನಾಟಕಕ್ಕೆ ಬಂದದ್ದು 1916ರ ಏಪ್ರಿಲ್‌ನಲ್ಲಿ. ಬೆಳಗಾವಿಯಲ್ಲಿ ಮುಂಬಯಿ ಪ್ರಾಂತೀಯ ಪರಿಷತ್ತಿನಲ್ಲಿ ಭಾಗವಹಿಸಲು ಬಂದಿದ್ದರು. ಆಗ ಕಾಂಗ್ರೆಸ್‌ನಲ್ಲಿದ್ದ ಮಂದಗಾಮಿಗಳಿಗೂ ಉಗ್ರವಾದಿಗಳಿಗೂ ಸಾಮರಸ್ಯವನ್ನುಂಟು ಮಾಡುವ ಪ್ರಯತ್ನ ಆ ಪರಿಷತ್ತಿನಲ್ಲಿ ನಡೆಯಿತು. ಲೋಕಮಾನ್ಯ ತಿಲಕರು ಪರಿಷತ್ತಿಗೆ ಆಗಮಿಸಿದ್ದರು. ಗಾಂಧೀಜಿ ಮತ್ತು ತಿಲಕರು ಈ ಸಂದರ್ಭದಲ್ಲಿ ಭೇಟಿಮಾಡಿ ಅವರಿಬ್ಬರ ದೃಷ್ಟಿಕೋನದ ಬಗ್ಗೆ ಪರಸ್ಪರ ಅರಿತುಕೊಳ್ಳಲು ಪ್ರಯತ್ನಪಟ್ಟರು. 1918ರಲ್ಲಿ ಇದೇ ರೀತಿ ಮತ್ತೊಂದು ಪರಿಷತ್ತು ಬಿಜಾಪುರದಲ್ಲಿ ನಡೆಯಿತು. ಪರಿಷತ್‌ಗೆ ತಿಲಕ್ ಮತ್ತು ಗಾಂಧೀ ಇಬ್ಬರೂ ಬರುತ್ತಾರೆಂದು ಪ್ರಕಟಿಸಲಾಗಿತ್ತು. ಮೊದಲನೆಯ ಮಹಾಯುದ್ಧದಲ್ಲಿ ಬ್ರಿಟಿಷರಿಗೆ ಸಹಾಯಮಾಡಬೇಕೆಂಬುದು ಗಾಂಧೀಜಿಯ ನಿಲುವಾಗಿತ್ತು. ಅದಕ್ಕಾಗಿ ಸಿಪಾಯಿಗಳನ್ನು ಸೈನ್ಯಕ್ಕೆ ಸೇರಿಸುವ ಕೆಲಸದಲ್ಲೂ ಗಾಂಧೀಜಿ ಕೈಹಾಕಿದ್ದರು. ತಿಲಕರು ಇದನ್ನು ವಿರೋಧಿಸಿದ್ದರು. ಪರಸ್ಪರ ವಿರೋಧಾಭಿಪ್ರಾಯಗಳುಳ್ಳ ಇಬ್ಬರು ನಾಯಕರುಗಳ ವಿಚಾರ ಸರಣಿಯನ್ನು ಕೇಳಲು ಅನೇಕ ಮಂದಿ ಕುತೂಹಲ

ದಿಂದ ಬಂದಿದ್ದರು. ಆದರೆ ತಿಲಕ್ ಪರಿಷತ್ತಿಗೆ ಬರಲಿಲ್ಲ. ಜನರಿಗೆ ನಿರಾಸೆ ಆಯಿತು. ಗಾಂಧೀಜಿ ತಮ್ಮ ನಿಲುವನ್ನು ಸಮರ್ಥಿಸಿ ಮಾತನಾಡಬೇಕಾಗಿತ್ತು. ಮೊದಲು ತಮ್ಮ ವಿಚಾರವನ್ನು ವಿರೋಧಿಸಿ ತಿಲಕರ ಪರವಾಗಿ ಮಾತನಾಡಿ ಎಂದು ಗಂಗಾಧರ ರಾವ್ ದೇಶಪಾಂಡೆಯವರನ್ನು ಕೇಳಿದರು. ದೇಶಪಾಂಡೆ ಒಪ್ಪಲಿಲ್ಲ, ಪ್ರತಿವಾದಿಯ ವಾದ ವನ್ನು ಮಂಡಿಸುವವರು ಇರಲಿಲ್ಲವಾದ್ದರಿಂದ ಗಾಂಧೀಜಿ ತಮ್ಮ ನಿಲುವನ್ನು ಏಕ ಪಕ್ಷೀಯವಾಗಿ ಸಮರ್ಥಿಸಿಕೊಳ್ಳಲು ಇಷ್ಟಪಡಲಿಲ್ಲ, ಆದುದರಿಂದ ಆ ವಿಷಯವನ್ನೇ ಪ್ರಸ್ತಾಪಿಸದೆ ಬೇರೆ ವಿಷಯಗಳ ಬಗ್ಗೆ ಮಾತನಾಡಿದರು.

ಗಾಂಧೀಜಿ ಮುಂದೆ 1920ರಲ್ಲಿ ಖಿಲಾಫತ್ ಚಳವಳಿಯನ್ನು ಸಂಘಟಿಸುವ ಸಲುವಾಗಿ ದೇಶಾದ್ಯಂತ ಪ್ರವಾಸ ಕೈಗೊಂಡಿದ್ದರು. ಆ ಸಂಬಂಧವಾಗಿ ಕರ್ನಾಟಕದ ವಿವಿಧ ಭಾಗಗಳಲ್ಲಿ ಸಂಚಾರ ಮಾಡಿದರು. ಅವರ ಜತೆಯಲ್ಲಿ ಖಿಲಾಫತ್ ನಾಯಕರಾದ ಶೌಕತ್ ಆಲಿ ಅವರೂ ಇದ್ದರು. ಈ ಚಳವಳಿಯ ಅಂಗವಾಗಿ ಬಿರುದುಗಳನ್ನು ತ್ಯಜಿಸುವುದು, ಶಾಸನ ಸಭೆಗಳಿಗೆ ಬಹಿಷ್ಕಾರ ಹಾಕುವುದು. ಸರ್ಕಾರಿ ಶಾಲೆ ಕಾಲೇಜುಗ ಳಿಂದ ವಿದ್ಯಾರ್ಥಿಗಳು ನಿರ್ಗಮಿಸುವುದು ಮತ್ತು ನ್ಯಾಯಾಲಯಗಳಿಗೆ ವಕೀಲರು ಬಹಿ ಷ್ಕಾರ ಹಾಕುವುದು ಇತ್ಯಾದಿ ಕಾರ್ಯಕ್ರಮಗಳನ್ನು ಜನರ ಮುಂದೆ ಇಟ್ಟರು. ಗಾಂಧೀಜಿ ಕರೆಗೆ ಓಗೊಟ್ಟು ಅನೇಕರು ಈ ಚಳವಳಿಯಲ್ಲಿ ಭಾಗವಹಿಸಿದರು.

1921ರ ಅಸಹಕಾರ ಚಳವಳಿಯ ನಂತರ ಗಾಂಧೀಜಿ 1922ರಲ್ಲಿ ದಸ್ತಗಿರಿ ಮಾಡಲ್ಪಟ್ಟು ಕಾರಗೃಹ ಶಿಕ್ಷೆಗೆ ಒಳಗಾಗಿದ್ದರು. ಅವರಿಗೆ ಆರುವರ್ಷಗಳ ಕಠಿಣ ಶಿಕ್ಷೆಯೂ ವಿಧಿಸಲ್ಪಟ್ಟಿತ್ತು. ಆದರೆ ಅವರಿಗೆ ಉಂಟಾದ ಅನಾರೋಗ್ಯದ ನಿಮಿತ್ತ ಅವರನ್ನು 1924ರ ಫೆಬ್ರುವರಿಯಲ್ಲಿ ಬಿಡುಗಡೆ ಮಾಡಲಾಯಿತು. ಅದೇ ವರ್ಷದ ಕೊನೆಯಲ್ಲಿ ಕರ್ನಾಟಕದ ಬೆಳಗಾವಿಯಲ್ಲಿ ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್‌ನ ಮಹಾಧಿವೇಶನ ನಡೆಯಿತು. ಈ ಅಧಿವೇಶನಕ್ಕೆ ಗಾಂಧೀಜಿಯವರನ್ನೇ ಅಧ್ಯಕ್ಷರನ್ನಾಗಿ ಚುನಾಯಿಸಲಾಗಿತ್ತು.

ಬೆಳಗಾವಿ ಕಾಂಗ್ರೆಸ್ ಅಧಿವೇಶನ ಎಲ್ಲ ರೀತಿಯಲ್ಲಿಯೂ ಅಪೂರ್ವವಾಗಿತ್ತು. ಅಧಿವೇಶನದ ಜಾಗಕ್ಕೆ 'ವಿಜಯನಗರ' ಎಂದು ಹೆಸರಿಡಲಾಗಿತ್ತು. ಅಧಿವೇಶನದ ಏರ್ಪಾಟು ಎಲ್ಲ ರೀತಿಯಲ್ಲೂ ಸಮರ್ಪಕವಾಗಿತ್ತು. ಊಟದ ವ್ಯವಸ್ಥೆ, ನೈರ್ಮಲ್ಯ ವ್ಯವಸ್ಥೆ ತುಂಬಾ ಅಚ್ಚುಕಟ್ಟಾಗಿದ್ದು ಗಾಂಧೀಜಿಯವರ ಮೆಚ್ಚುಗೆಗೆ ಪಾತ್ರವಾಗಿತ್ತು.

ಗಾಂಧೀಜಿ ಕಟ್ಟುನಿಟ್ಟಾಗಿ ಸಮಯವನ್ನು ಪಾಲಿಸಿ ಮೂರುದಿನಗಳಕಾಲ ನಡೆಯ ಬೇಕಾಗಿದ್ದ ಅಧಿವೇಶನದ ಕೆಲಸವನ್ನು ಎರಡೇ ದಿನಗಳಲ್ಲಿ ಯಶಸ್ವಿಯಾಗಿ ಮುಗಿಸಿದರು.

ಗಾಂಧೀಜಿಯವರನ್ನು ಇಳಿಸಲು ಪೂರ್ಣ ಖಾದಿಯಿಂದ ಒಂದು 'ಅರಮನೆ' ಯನ್ನು ನಿರ್ಮಿಸಲಾಗಿತ್ತು. ಅದರ ನಿರ್ಮಾಣಕ್ಕೆ ಆಗಿದ್ದ ಖರ್ಚು ಸ್ವಲ್ಪ ದುಬಾರಿ ಯೆಂದು ಗಾಂಧೀಜಿ ಟೀಕಿಸಿದ್ದುಂಟು. ಆದರೆ ಸ್ವಾಗತ ಸಮಿತಿಯ ಅಧ್ಯಕ್ಷರಾಗಿದ್ದ

ಗಂಗಾಧರರಾವ್ ದೇಶಪಾಂಡೆಯವರು ಸಮಾಧಾನ ನೀಡಿ 'ಖಾದಿ ಅರಮನೆಗೆ' ಆಗಿದ್ದ ಖರ್ಚು ಕೇವಲ 350ರೂಪಾಯಿಗಳೆಂದು ತಿಳಿಸಿದರು. ಅಧಿವೇಶನ ಮುಗಿದ ಮೇಲೆ 'ಖಾದಿ ಅರಮನೆ'ಗೆ ಉಪಯೋಗಿಸಿದ್ದ ಸಲಕರಣೆಗಳನ್ನು ಮಾರಾಟ ಮಾಡಿದ್ದರಿಂದ ಬಹುಭಾಗ ಹಣ ವಾಪಾಸು ಬಂದಿತೆಂದು ತಿಳಿಸಿದರು.

ಕಾಂಗ್ರೆಸ್ ಅಧಿವೇಶನದ ಸಂದರ್ಭದಲ್ಲೇ ಸಾಂಸ್ಕೃತಿಕ ಸಮ್ಮೇಳನಗಳು ಸಮಾಜ ಸುಧಾರಣಾ ಮೇಳಗಳು, ಅಸ್ಪೃಶ್ಯತಾ ನಿವಾರಣಾ ಸಮ್ಮೇಳನ ಇತ್ಯಾದಿ ನಡೆದುವು. ಸಾಂಸ್ಕೃತಿಕ ಕಾರ್ಯಕ್ರಮವನ್ನೊದಗಿಸಲು ಮೈಸೂರಿನಿಂದ ಶ್ರೀ ವೀಣೆಶೇಷಣ್ಣನವರ ನೇತೃತ್ವದಲ್ಲಿ ಒಂದು ತಂಡವೇ ಹೋಗಿತ್ತು. ಶೇಷಣ್ಣನವರ ವೀಣಾವಾದನ ಕೇಳಿ ಎಲ್ಲರೂ ಬೆರಗಾದರು. ಗಾಂಧೀಜಿಯವರು ಸುಮಾರು ಒಂದೂವರೆ ಗಂಟೆ ಕುಳಿತಿದ್ದು ಏಕಾಗ್ರತೆಯಿಂದ ಕೇಳಿದರು.

ಬೆಳಗಾವಿಯ ಕಾಂಗ್ರೆಸ್ ಅಧಿವೇಶನದಲ್ಲಿ ಗಾಂಧೀಜಿಯವರ ಪ್ರಭಾವದಿಂದಾಗಿ ಕಾಂಗ್ರೆಸ್‌ನ ಒಳಗಿದ್ದ ಅಪರಿವರ್ತನ ವಾದಿಗಳಿಗೂ (No-Changers) ಸ್ವರಾಜ್ಯ ಪಕ್ಷದವರಿಗೂ ಒಂದು ಒಡಂಬಡಿಕೆ ಮೂಡಿಸಲು ಸಾಧ್ಯವಾಯಿತು. ಆ ದೃಷ್ಟಿಯಿಂದ ಬೆಳಗಾವಿ ಅಧಿವೇಶನ ರಾಷ್ಟ್ರದ ಸ್ವಾತಂತ್ರ್ಯ ಹೋರಾಟದ ಇತಿಹಾಸದಲ್ಲಿ ಒಂದು ಪ್ರಮುಖ ಮೈಲಿಗಲ್ಲಾಯಿತು.

ಗಾಂಧೀಜಿಯವರು 1927 ರಲ್ಲಿ ದೇಶಾದ್ಯಂತ ಖಾದಿ ಪ್ರಚಾರಕ್ಕಾಗಿ ಪ್ರವಾಸ ಕೈಗೊಂಡಾಗ ಮಧ್ಯದಲ್ಲಿ ಅವರಿಗೆ ಅನಾರೋಗ್ಯ ಉಂಟಾಯಿತು. ಅವರು ವಿಶ್ರಾಂತಿ ತೆಗೆದುಕೊಳ್ಳಬೇಕೆಂದು ವೈದ್ಯರು ಆಗ್ರಹಪಡಿಸಿದರು. ಮೈಸೂರು ಸಂಸ್ಥಾನಕ್ಕೆಬಂದು ನಂದಿ ಬೆಟ್ಟದಲ್ಲಿ ವಿಶ್ರಾಂತಿ ತೆಗೆದುಕೊಳ್ಳಬೇಕೆಂದು ಅಂದಿನ ಮೈಸೂರು ಸರ್ಕಾರವೂ ಮಹಾತ್ಮರಿಗೆ ಆಹ್ವಾನ ನೀಡಿತು. ಗಾಂಧೀಜಿಯವರು ಕಸ್ತೂರಬಾಗಾಂಧಿ, ಮಹದೇವ ದೇಸಾಯಿ, ರಾಜಗೋಪಾಲಾಚಾರಿ, ಗಂಗಾಧರರಾವ್ ದೇಶಪಾಂಡೆ ಮತ್ತಿತರರೊಡನೆ ನಂದಿಯಲ್ಲಿ ಸುಮಾರು ಎರಡು ತಿಂಗಳುಗಳ ಕಾಲ ತಂಗಿದ್ದು ವಿಶ್ರಾಂತಿ ಪಡೆದರು. ಅನಂತರ ಹಳೆಯ ಮೈಸೂರು ಸಂಸ್ಥಾನದ ಅನೇಕ ಊರುಗಳಿಗೆ ಭೇಟಿಕೊಟ್ಟು ಖಾದಿ ಪ್ರಚಾರ ಮಾಡಿದರು.

ನಂದಿಬೆಟ್ಟದಲ್ಲಿ 1927 ರ ಏಪ್ರಿಲ್ ಮತ್ತು ಮೇ ತಿಂಗಳು ಪೂರ್ತಿ ಗಾಂಧೀಜಿಯವರು ತಂಗಿದ್ದರು. ಆ ಸಂದರ್ಭದಲ್ಲಿ ಅನೇಕ ಗಣ್ಯಮಹನೀಯರೂ ಸಾರ್ವಜನಿಕ ಕಾರ್ಯಕರ್ತರೂ ಸಾಮಾನ್ಯಜನರೂ ಹೋಗಿ ಗಾಂಧೀಜಿಯವರ ದರ್ಶನ ಪಡೆದು ಬರುತ್ತಿದ್ದರು. ವಿಶ್ರಾಂತಿಗಾಗಿ ತಂಗಿದ್ದರೂ ಕೆಲವು ಸಂದರ್ಭಗಳಲ್ಲಿ ಗಾಂಧೀಜಿಯವರು ಬಂದವರೊಡನೆ ಸಂಭಾಷಣೆ ನಡೆಸುವುದು ಅನಿವಾರ್ಯವಾಗಿತ್ತು.

ಅಂದಿನ ದಿವಾನರಾಗಿದ್ದ ಸರ್‌ಮಿರ್ಜಾ ಇಸ್ಮೇಲ್‌ರವರನ್ನು ಕರೆದುಕೊಂಡು ಮಾಜಿದಿವಾನರಾದ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು ನಂದಿಬೆಟ್ಟಕ್ಕೆ ಬಂದಿದ್ದರು.

ಮಿರ್ಜಾರವರನ್ನೂ ಪರಿಚಯಮಾಡಿ ಕೊಟ್ಟರು. ಹಾಗೇ ಮಾತನಾಡುತ್ತಿರುವಾಗ ಶ್ರೀ ವಿಶ್ವೇಶ್ವರಯ್ಯನವರು ಗಾಂಧೀಜಿಯವರನ್ನು ಕೇಳಿದರು.

"ನೀವು ಮೈಸೂರಿನ ಆಡಳಿತವನ್ನು ಒಮ್ಮೆ ರಾಮರಾಜ್ಯ ಎಂದಿದ್ದಿರಿ ಅದು ಯಾವ ಕಾಲ ?"

ಗಾಂಧೀಜಿ "ನೀವು ದಿವಾನರಾಗಿದ್ದಾಗ ರಾಮರಾಜ್ಯವಾಗಿತ್ತು; ಆ ಮೇಲೆ ಹಾಗೆ ಉಳಿಯಲಿಲ್ಲ ಎನ್ನುತ್ತೀರೇನು ನೀವು ?" ಎಂದು ನಗುತ್ತಾ ಹೇಳಿದರು. ಹಿಂದೆ ಗಾಂಧೀಜಿ ಯಾವ ಸಂದರ್ಭದಲ್ಲಿ ಹೇಳಿದ್ದರೆಂಬುದು ನೆನಪಾಗಲಿಲ್ಲ.

ಇನ್ನೊಂದು ದಿನ ಹಿರಿಯ ಅಧಿಕಾರಿಯೊಬ್ಬರು ಬಂದಿದ್ದಾಗ್ಗೆ ಒಂದು ಪ್ರಶ್ನೆ ಮುಂದಿಟ್ಟರು.

"ಜನರ ಆಧ್ಯಾತ್ಮಿಕ ದಾಹ ಹೆಚ್ಚಿನದು ಎಂದು ನಿಮಗೆ ಗೊತ್ತಿದೆ. ಆದರೂ ಏಕೆ ಆರ್ಥಿಕ ದಾಹದ ವಿಷಯವನ್ನು ಒತ್ತಿ ಹೇಳುತ್ತೀರಿ? ವಾತಾವರಣದಲ್ಲಿ ವಿದ್ವೇಷ, ವಿರಸ, ಕಲಹ, ವಂಚನೆ ತುಂಬಿದೆ ಬಡವರಿಗಂತೂ ಈ ಜನ್ಮದಲ್ಲಿ ಯಾವ ಆಸೆಯೂ ಇಲ್ಲ. ಮುಂದಿನ ಜನ್ಮಕ್ಕು ಇಲ್ಲ ನಿಮ್ಮಂಥ ಉನ್ನತ ಆಧ್ಯಾತ್ಮಿಕ ವ್ಯಕ್ತಿಗಳು ಆಧ್ಯಾತ್ಮಿಕ ಅವಶ್ಯಕತೆಯನ್ನು ತುಂಬ ಬೇಕು."

ಗಾಂಧೀಜಿ: "ನೀವು ಹೇಳುವುದು ವಿದ್ಯಾವಂತ ವರ್ಗದ ಬಗ್ಗೆ ನಿಜವಿರಬಹುದು. ಅವರ ಮುಂದೆ ರಾಟಿಯ ಆರ್ಥಿಕ ವಿಷಯವನ್ನು ನಾನು ಪ್ರಸ್ತಾಪಿಸುವುದೇ ಇಲ್ಲ. ಅವರು ಈ ವಿಷಯದ ಆಧ್ಯಾತ್ಮಿಕ ಭಾಗವನ್ನು ಅರಿತುಕೊಂಡರೆ ಸಾಕು, ರಾಟಿಯಿಂದ ನೂತು ಖಾದಿ ಧರಿಸಿದರೇನೇ ಬಡವರಲ್ಲಿ ಅವರಿಗೆ ಇರುವ ಸಹಾನುಭೂತಿ ಪ್ರಕಟವಾಗುತ್ತದೆ, ಬಡವರಪಾಲಿಗೆ. ಆರ್ಥಿಕ ವಿಷಯವೇ ಆಧ್ಯಾತ್ಮಿಕ ವಿಷಯ. ಹೊಟ್ಟೆಗಿಲ್ಲದೆ ಸಾಯುತ್ತಿರುವ ಈ ಬಡಜನರಿಗೆ ಬೇರೆಯಾವ ಬಗೆಯ ಪ್ರಚೋದನೆಯೂ ಇಲ್ಲ. ಹಾಗೆ ಮಾಡಿದರೆ ನಿರರ್ಥಕ. ಅದೇ ಅವರಿಗೆ ಆಹ ರ ತೆಗೆದುಕೊಂಡು ಹೋಗಿ ನಿಮ್ಮನ್ನು ದೇವರು ಎನ್ನುತಾರೆ"

ನಂದಿಬೆಟ್ಟದಿಂದ ಇಳಿದು ಬೆಂಗಳೂರಿಗೆ ಬಂದು ಅನಂತರ ಖಾದಿ ಪ್ರಚಾರಕ್ಕಾಗಿ ಪ್ರವಾಸ ಮುಂದುವರಿಸಿದರು ಬೆಂಗಳೂರಿನಲ್ಲಿದ್ದಾಗ ಸರ್ ಬ್ರಜೇಂದ್ರನಾಥ್ ಸೀಲ್ ಅವರು ಗಾಂಧೀಜಿಯವರನ್ನು ಭೇಟಿಮಾಡಿದರು. ಬ್ರಜೇಂದ್ರನಾಥ್ ಅವರು ಆಗ ಮೈಸೂರು ವಿಶ್ವವಿದ್ಯಾಲಯದ ಕುಲಪತಿ ಆಗಿದ್ದರು. ಪ್ರಕಾಂಡ ಪಂಡಿತರು ಅವರಿಬ್ಬರ ನಡುವೆ ಸಂವಾದ ಹೀಗೆ ನಡೆಯಿತು.

ಗಾಂಧೀಜಿ: ಬಂಗಾಳದ ಯುವಕರಿಗೂ ಈ ಪ್ರದೇಶದ ಯುವಕರಿಗೂ ಏನು ವ್ಯತ್ಯಾಸ, ತಿಳಿಸುತ್ತೀರಾ?

ಬ್ರಜೇಂದ್ರನಾಥ್: ಬಂಗಾಳಿ ಯುವಕ ಭಾವನಾ ಪೂರ್ಣ, ಧ್ಯೇಯವಾದಿ. ಅವನಿಗೆ ಊಹಾಶಕ್ತಿ ಇದೆ, ಅದರ ಜತೆಯಲ್ಲಿ ಒಂದು ರೀತಿ ಕೋಮಲಭಾವವೂ ಇದೆ, ಆದರೆ ಆದರೆ ಮನೋದಾರ್ಢ್ಯ ಕಡಿಮೆ, ಇದರಿಂದ ಅವನ ಜೀವನ

ಪಾಪಕ್ಕೆ ಥಕ್ಕೆ ಬರಬಹುದೆಂದು ತೋರುತ್ತದೆ. ದಕ್ಷಿಣದ ಯುವಕ ಹೆಚ್ಚು ವ್ಯವಹಾರ ಸಮರ್ಥ. ಎಲ್ಲವನ್ನು ಕಲಿಯಬಯಸುತ್ತಾನೆ, ವ್ಯವಹಾರದ ಸೂಕ್ಷ್ಮವೆಲ್ಲವನ್ನು ವಶ ಮಾಡಿ ಕೊಳ್ಳ ಬಯಸುತ್ತಾನೆ.

ಗಾಂಧೀಜಿ: ನಿಮ್ಮ ಅಭಿಪ್ರಾಯ ಇದೇನೆ?

ಬ್ರಜೇಂದ್ರನಾಥ್: ಹೌದು. ಇದಕ್ಕೆ ಒಂದು ಕಾರಣವಿದೆ. ಬಂಗಾಳ ಬೌದ್ಧ ಪ್ರಭಾವಕ್ಕೆ ಒಳಗಾಗಿತ್ತು. ಒಂದು ಸಾವಿರ ವರ್ಷ ಬೌದ್ಧ ಸಂಸ್ಕೃತಿಯ ಪ್ರಭಾವ ಅದರ ಮೇಲೆ ಬಿದ್ದಿತ್ತು. ಬಂಗಾಳದವರ ಮನಸ್ಸಿನ ಮೇಲೆ ಇದನ್ನು ನೋಡಬಹುದು. ಆ ಪ್ರಭಾವ ಉದಾರ, ವಿಶಾಲ. ಈ ಭಾಗದಲ್ಲಿ ಕಾಣುವ ಅಸ್ಪೃಶ್ಯತೆಯ ಬಿರುಸು ಅಲ್ಲಿ ಕಾಣುವುದಿಲ್ಲ. ಆದರೆ ಬಂಗಾಳಿ ಯುವಕರು ಬೇರೆಯವರೊಂದಿಗೆ ಸುಲಭವಾಗಿ ಬೆರೆಯುವುದಿಲ್ಲ. ಆದರೆ ಆಗಾಗ ಕೆಲವು ವಿಶೇಷ ಅಪವಾದವಾಗಿ ಪ್ರತಿಭಾವಂತರು ಉದಯಿಸುತ್ತಾರೆ. ಸಾಧಾರಣ ಯುವಕ ಇತರ ಭಾಗಗಳ ಯುವಕರಿಗಿಂತ ಸ್ವಲ್ಪ ಕಡಿಮೆಯೇ......ದಕ್ಷಿಣ ಭಾರತದ ಯುವಕನಿಗೆ ಒಂದು ವಿಶಿಷ್ಟ ವ್ಯಕ್ತಿತ್ವವಿದೆ. ಒಂದು ದಾರ್ಷ್ಟ್ಯ. ದೊಡ್ಡ ದೊಡ್ಡ ಸಮಸ್ಯೆಗಳನ್ನು ಬಿಡಿಸುವ ಶಕ್ತಿ ಇದೆ. ಗಣಿತ ಶಾಸ್ತ್ರ, ನ್ಯಾಯ ಶಾಸ್ತ್ರ ಇಂತಹ ವಿಷಯಗಳಲ್ಲಿ ಮುಳುಗಿತೇಲುತ್ತಾನೆ. ಸ್ವಲ್ಪ ಹಟವೂ ಇದೆ, ಧೈರ್ಯವೂ ಇದೆ. ಉಳಿದ ಕಡೆ ಇದು ಕಾಣುವುದಿಲ್ಲ. ಇದರಿಂದ ಹೋರಾಟದ ಮನೋಭಾವವು ಅವನಲ್ಲಿ ಬರುತ್ತದೆ.

ಗಾಂಧೀಜಿ: ದಕ್ಷಿಣ ಭಾರತದವರ ಧೈರ್ಯದ ಬಗ್ಗೆ ನೀವು ಹೇಳುತ್ತೀರಿ. ಬಂಗಾಳದ ಅದ್ಭುತ ತ್ಯಾಗ. ಅದ್ಭುತ ಧೈರ್ಯ ಇವುಗಳ ಬಗ್ಗೆ ಏನು ಅನ್ನೋಣ?

ಬ್ರಜೇಂದ್ರನಾಥ್: ಸಾಯುವ ಧೈರ್ಯ ಎಂದು ನಿಮ್ಮ ಅಭಿಪ್ರಾಯವೇ?

ಗಾಂಧೀಜಿ: ಹೌದು

ಬ್ರಜೇಂದ್ರನಾಥ್: ಆದರೆ ಬಂಗಾಳದಲ್ಲಿ ಬದುಕುವ ಧೈರ್ಯವಿದೆಯೇ?

ಗಾಂಧೀಜಿಯವರೊಡನೆ ಡಾ. ಶಾಮಾಶಾಸ್ತ್ರಿಗಳು ಮೈಸೂರಿನಲ್ಲಿ ನಡೆಸಿದ ಸಂವಾದ ಈ ಧಾಟಿಯಲ್ಲಿ ನಡೆಯಿತು. ಶಾಮಾಶಾಸ್ತ್ರಿ ಹಿಂದಿನ ಕಾಲದ ಆಶ್ರಮ ಗಳಂತೆ ಕೆಲವು ಸಾಂಸ್ಕೃತಿಕ ಕೇಂದ್ರಗಳನ್ನು ಸ್ಥಾಪನೆ ಮಾಡಬೇಕು. ಅಶೋಕನಿಗೆ ಒಬ್ಬ ಉಪಗುಪ್ತನಿದ್ದ. ಪುಷ್ಯಮಿತ್ರನಿಗೆ ಒಬ್ಬ ಪತಂಜಲಿ. ಕುಮಾರ ಪಾಲನಿಗೆ ಹೇಮ ಚಂದ್ರ, ವಿಜಯನಗರದ ದೊರೆಗಳಿಗೆ ವಿದ್ಯಾರಣ್ಯರು ಇದ್ದರು. ಅಂಥವರೆಲ್ಲ ಆಗಿನ ಕಾಲದ ರಾಜರುಗಳಿಗೆ ಮಾರ್ಗದರ್ಶನ ಮಾಡುತ್ತಿದ್ದರು. ಅದೇ ರೀತಿ ಸುಶಿಕ್ಷಿತರೂ ಸಂಸ್ಕೃತಿ ಸಂಪನ್ನರೂ ನಿಸ್ವಾರ್ಥಿಗಳೂ ಆದ ವ್ಯಕ್ತಿಗಳ ಒಂದು ದಂಡು ಕಟ್ಟಿ ಅವರು ಹೋದಲ್ಲೆಲ್ಲಾ ಸ್ವಾರ್ಥತ್ಯಾಗದ ಆದರ್ಶವನ್ನು ಉಪದೇಶ ಮಾಡಬಾರದೆ.

ಗಾಂಧೀಜಿ (ನಗುತ್ತಾ) : ಸರಿ, ನೀವು ಹೇಳುವುದೇನೋ ಸರಿ. ಆದರೆ ಬೆಕ್ಕಿನ ಕೊರಳಿಗೆ ಗಂಟೆ ಕಟ್ಟುವವರು ಯಾರು ?

ಶಾಮಾಶಾಸ್ತ್ರಿ : '' ಬುದ್ಧನ ಕಾಲದಲ್ಲಿ ಐದು ಸಾವಿರ ವಿಹಾರಗಳಿದ್ದುವಂತೆ, ಈಗ ಏಕೆ ಸಾಧ್ಯವಾಗಬಾರದು ?

ಗಾಂಧೀಜಿ : ನನಗಂತೂ ಸಾಧ್ಯವಿಲ್ಲ. ನನ್ನ ತತ್ವ ಭದ್ರ ಎಂಬುದರ ಬಗ್ಗೆ ನನಗೆ ಸಂದೇಹವಿಲ್ಲ. ಆದರೆ ನಾನು ಅದನ್ನು ಆಚರಣೆಗೆ ಬರುವಂತೆ ಮಾಡಲಾರೆ. ಜನಗಳ ಮೇಲೆ ಪ್ರಭಾವ ಬೀರಲು ನನ್ನ ತಪಸ್ಸು ಸಾಲದು. ಅಲ್ಲದೆ ಆಗಿನ ಕಾಲಕ್ಕೂ ಈಗಿನ ಕಾಲಕ್ಕೂ ಎಷ್ಟೋ ವ್ಯತ್ಯಾಸವಿದೆ. ಆಗ ಜೀವನ ಸುಗಮವಾಗಿತ್ತು. ಆಗ ಮಕ್ಕಳು ತಂದೆ ತಾಯಿಗಳ ಕಾಮದ ಸಂತಾನವಾಗಿರಲಿಲ್ಲ. ಇಂದು ಅವರ ಮೈ ಹೊಲಸು, ಅವರ ಮನಸ್ಸು ಇನ್ನೂ ಕೆಟ್ಟಿರುವಂತಹುದು, ಎಲ್ಲಾ ಮುರಿದು ಬಿದ್ದಿದೆ. ಈ ತುಂಡುಗಳಿಂದ ಏನೋ ಒಂದನ್ನೂ ಮತ್ತೆ ನಿರ್ಮಿಸಬೇಕೆಂದು ನೋಡುತ್ತಿದ್ದೇನೆ.

ಶಾಮಾಶಾಸ್ತ್ರಿ : ಆ ಕೆಲಸಕ್ಕೆ ನೀವೇ ಸರಿ, ಬೇರೆ ಯಾರೂ ಇಲ್ಲ.

ಗಾಂಧೀಜಿ : ನನ್ನ ಆಶ್ರಮವನ್ನೇ ತೆಗೆದುಕೊಳ್ಳಿರಿ. ಅದನ್ನು ಒಂದು ವಿಹಾರ ಎಂದು ಕರೆದರೂ ಕರೆಯಬಹುದು. ಅದಕ್ಕೆ ತಕ್ಕ ಸ್ತ್ರೀಪುರುಷರನ್ನು ಹುಡುಕಲು ನನಗೆಷ್ಟು ಕಷ್ಟವೋ ಹೇಳಲಾರೆ. ಇವರುಗಳನ್ನೆಲ್ಲ ಒಟ್ಟಿಗೆ ಹಿಡಿದಿಡುವುದು ಎಷ್ಟು ಕಷ್ಟ ! 1906ರಲ್ಲಿ ಫೀನಿಕ್ಸ್‌ನಲ್ಲಿ ಪ್ರಾರಂಭಿಸಿದ ಆಶ್ರಮದಲ್ಲೂ ಅದೇಗತಿ. ಮೂರು ಪೌಂಡು ತೆರಿಗೆ ಹೋಗಬೇಕು ಮುಂತಾದ ತಾತ್ಕಾಲಿಕ ಗುರಿಗಳನ್ನು ಇಟ್ಟುಕೊಂಡು ಜನ ಬಂದರು. ಅವ್ಯಕ್ತವಾದ, ಅಗೋಚರವಾದ ಆದರ್ಶವನ್ನು ಅವರು ಅನುಸರಿಸ ಲಾರರು. ಈಗ ತಿಳಿದಿದೆ ಎಷ್ಟೊಂದು ಕಷ್ಟ ಎಂಬುದು.

ಚಾಮರಾಜೇಂದ್ರ ಸಂಸ್ಕೃತ ಪಾಠಶಾಲೆಗೆ ಭೇಟಿಕೊಟ್ಟಿದ್ದ ಸಂದರ್ಭ. ಅಲ್ಲಿನ ವಿದ್ವಾಂಸರುಗಳು ಗಾಂಧೀಜಿ ಅವರಿಗೆ ಸಂಸ್ಕೃತದಲ್ಲಿ ಬಿನ್ನವತ್ತಳೆ ಅರ್ಪಿಸಿದರು. ಅದಕ್ಕೆ ಉತ್ತರ ಕೊಡುತ್ತಾ ಗಾಂಧೀಜಿ ಹೇಳಿದರು. '' ಪ್ರತಿಯೊಬ್ಬ ಹಿಂದೂ ಹುಡುಗನೂ ಹುಡುಗಿಯೂ ಸಂಸ್ಕೃತದ ಪರಿಚಯ ಮಾಡಿಕೊಳ್ಳಬೇಕು. ಸಂದರ್ಭ ಬಂದರೆ ಅದರಲ್ಲಿ ಮಾತನಾಡುವಂತೆಯೂ ಇರಬೇಕು. ಮೈಸೂರು ಸಂಸ್ಥಾನದಲ್ಲಿ ಪಂಡಿತರು ಸಂಸ್ಕೃತ ವನ್ನು ಶೂದ್ರರಿಗೆ, ಪಂಚಮರಿಗೆ ಕಲಿಸಲು ಹಿಂಜರಿಯುತ್ತಾರೆ ಎಂದು ಕೇಳಿದ್ದೆ. ಅವರಿಗೆ ಸಂಸ್ಕೃತವನ್ನು ಕಲಿಸಬಾರದೆಂಬುದಕ್ಕೆ ವೇದವನ್ನು ಹೇಳಿ ಕೊಡಬಾರದೆಂಬು ದಕ್ಕೆ ಯಾವ ಶಾಸ್ತ್ರದ ಆಧಾರವೂ ಇಲ್ಲ. ವೇದದ ವಚನವೇ ಆದರೂ ಕೂಡ ನಮ್ಮ ಅನುಭವಕ್ಕೆ ವಿರುದ್ಧವಾಗಿ, ನಮ್ಮ ವಿಚಾರಕ್ಕೆ ಹೊಂದದೇ ಹೋದರೆ ಅದನ್ನು ತ್ಯಜಿಸ ಬೇಕು. ನನ್ನ ಮಟ್ಟಿಗೆ, ಅಸ್ಪೃಶ್ಯತೆಗೆ ಶಾಸ್ತ್ರದ ಆಧಾರವಿಲ್ಲವೆಂದು ನಂಬಿದ್ದೇನೆ. ಎಷ್ಟೋಜನ ಅಸ್ಪೃಶ್ಯರು ಬುದ್ಧಿಯಲ್ಲಾಗಲೀ ನೀತಿಯಲ್ಲಾಗಲೀ ಸ್ಪೃಶ್ಯರಿಗಿಂತ ಏನೂ ಕಡಿಮೆ ಇಲ್ಲ. ನಿಮ್ಮಷ್ಟೇ ನೀತಿವಂತರು ಶುಚಿವಂತರು ಆಗಿದ್ದಾರೆ. ಇತರ ಬಾಲಕ ಬಾಲಕಿಯರು ಹೇಳುವಷ್ಟೇ ಸ್ವಚ್ಛವಾಗಿ ಆದಿಕರ್ನಾಟಕ ಬಾಲಕರು ಹೇಳಿದ್ದನ್ನು ಕೇಳಿದ್ದೇನೆ. ''

ಅಸ್ಪೃಶ್ಯತಾ ನಿವಾರಣೆಯ ಆಂದೋಲನದ ಸಲುವಾಗಿ ಗಾಂಧೀಜಿಯವರು 1934 ಮತ್ತು 1936ರಲ್ಲಿ ದೇಶದಾದ್ಯಂತ ಪ್ರವಾಸ ಕೈಗೊಂಡು ಕರ್ನಾಟಕಕ್ಕೂ ಬಂದಿದ್ದರು. ಹರಿಜನರ ಸೇವೆಗೆ ನಿಧಿ ಕೂಡಿಸಿದರು. ಸಭೆಗಳಲ್ಲಿ ಭಾಗವಹಿಸುತ್ತಿದ್ದ ಮಹಿಳೆಯರು ತಮ್ಮ ಮೈ ಮೇಲಿದ್ದ ಒಡವೆಗಳನ್ನು ಕಳಚಿ ಗಾಂಧೀಜಿಯವರಿಗೆ ಕೊಡುತ್ತಿದ್ದುದು ಗಮನೀಯ ಸಂಗತಿ. ಈ ಒಡವೆಗಳನ್ನೆಲ್ಲ ಹರಿಜನರ ಉದ್ಧಾರಕ್ಕಾಗಿ ಏರ್ಪಡಿಸಿದ್ದ ನಿಧಿಗೆ ಕೊಡುಗೆಯಾಗಿ ಕೊಟ್ಟರು.

ಅಸ್ಪೃಶ್ಯತೆಗೆ ಯಾವ ಶಾಸ್ತ್ರದ ಆಧಾರವೂ ಇಲ್ಲ. ಅಸ್ಪೃಶ್ಯತೆ ಇದ್ದರೆ ಹಿಂದೂ ಧರ್ಮ ನಾಶವಾಗುತ್ತದೆ. ಅಸ್ಪೃಶ್ಯತೆಯನ್ನು ಹಿಂದೂ ಸಮಾಜದಿಂದ ಮೂಲೋತ್ಪಾಟನೆ ಮಾಡಬೇಕು. ಸಹಸ್ರಾರು ವರ್ಷಗಳಿಂದ ಸಮಾಜದ ಒಂದು ಭಾಗವನ್ನು ಅಸ್ಪೃಶ್ಯರೆಂದು ಪರಿಗಣಿಸಿ ಶೋಷಿಸಿರುವ ಸವರ್ಣ ಹಿಂದೂಗಳು ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು. ಪ್ರಾಯಶ್ಚಿತ್ತ ರೂಪವಾಗಿ ಹರಿಜನರ ಸೇವೆ ಮಾಡಬೇಕು– ಹೀಗೆ ಗಾಂಧೀಜಿಯವರ ವಿಚಾರಸರಣಿ ಹರಿದಿತ್ತು.

ಗಾಂಧೀಜಿ ಕಟ್ಟಕಡೆಯದಾಗಿ ಕರ್ನಾಟಕಕ್ಕೆ ಬಂದದ್ದು 1937ರಲ್ಲಿ. ಬೆಳಗಾವಿ ಜಿಲ್ಲೆಯ ಹುದಲಿ ಗ್ರಾಮದಲ್ಲಿ ಗಾಂಧೀ ಸೇವಾ ಸಂಘದ ವಾರ್ಷಿಕ ಸಮ್ಮೇಳನ ಸೇರಿತ್ತು. ಐದು ದಿನಗಳ ಕಾಲ ನಡೆಯಿತು. ಗಾಂಧೀಜಿ ಅಷ್ಟು ದಿನಗಳೂ ಇದ್ದರು. ಗಾಂಧೀ ವಿಚಾರದಲ್ಲಿ ತುಂಬಾ ನಿಷ್ಠೆಯುಳ್ಳ ರಚನಾತ್ಮಕ ಕಾರ್ಯಕರ್ತರ ಸಂಘ ಅದು. ಗಾಂಧೀಜಿ ಈ ಅಧಿವೇಶನದಲ್ಲಿ ಕೆಲವು ವಿಚಾರಗಳನ್ನು ಮಾರ್ಮಿಕವಾಗಿ ನುಡಿದರು. ಈ ವಿಚಾರಗಳು ಜೀವನ ದರ್ಶನದ ಸಾರ ಸಾರಾಂಶ.

"ನೀವು ಸಂಘದ ಜೊತೆಗೆ ನನ್ನ ಹೆಸರು ಸೇರಿಸಿದ್ದೀರಿ. ನಾನು ಒಂದು ಮಾರ್ಗವನ್ನು ತೋರಿಸಿದ್ದೇನೆ, ಅದನ್ನು ನೀವು ಒಪ್ಪಿದ್ದೀರಿ. ಆದರೆ ಮನುಷ್ಯನ ಪೂಜೆ ಮಾಡುವುದು ನಮ್ಮ ಕೆಲಸವಲ್ಲ. ಆದರ್ಶ ಮತ್ತು ಸಿದ್ಧಾಂತದ ಪೂಜೆಯನ್ನು ಮಾಡಬಹುದು. ನೀವು ನನ್ನ ಪೂಜಾರಿಗಳಾಗಬಾರದು. ಸತ್ಯ ಮತ್ತು ಅಹಿಂಸೆಯ ಪೂಜಾರಿಗಳಾಗಬಹುದು. ಯಾವ ವಿಷಯವನ್ನು ನೀವು ಆತ್ಮಸಾಕ್ಷಿಯಾಗಿ ಒಪ್ಪಿಕೊಳ್ಳುತ್ತೀರೋ ಅದು ಸ್ವತಂತ್ರ ರೂಪದಿಂದ ನಿಮ್ಮದೇ ಆಗುತ್ತದೆ. ಯಾವುದು ಸ್ವತಂತ್ರರೂಪದಿಂದ ನಿಮ್ಮದೋ ಅದು ನಿಮ್ಮದು, ಆಹಾರದಂತೆ ನೀವು ಎಷ್ಟು ಜೀರ್ಣಮಾಡಿಕೊಂಡಿರುವಿರೋ ಅದು ಉಪಯೋಗವಾಗುವುದು.

"ಒಬ್ಬ ಮನುಷ್ಯನ ವಿಚಾರಗಳನ್ನೇನೋ ನಾವು ಗ್ರಹಿಸಿದೆವು. ಆದರೆ ಅವುಗಳಿಗ ಹೃದಯದಲ್ಲಿ ಸ್ಥಾನ ಕೊಡಲಿಲ್ಲ. ಅದನ್ನು ಕಾರ್ಯಗತಮಾಡಲಿಲ್ಲ. ಅಂದರೆ ಅದು ಒಂದು ಪ್ರಕಾರದ ಅಜೀರ್ಣವೇ ಸರಿ. ಅದೊಂದು ಬುದ್ಧಿವಿಲಾಸ, ವಿಚಾರಗಳ ಅಪಚನ. ಆಹಾರದ ಅಜೀರ್ಣಕ್ಕಿಂತ ಕೆಟ್ಟದು. ಆಹಾರದ ಅಜೀರ್ಣವಾದರೆ ಅದಕ್ಕೆ ಔಷಧಿ ಇದೆ. ಆದರೆ ವಿಚಾರಗಳನ್ನು ಜೀರ್ಣಿಸಿಕೊಳ್ಳದಿದ್ದರೆ ಆತ್ಮವನ್ನೇ ಕೆಡಿಸುತ್ತವೆ.

"ನಾನು ಪ್ರತಿದಿನ ವಿಕಾಸದ ಕಡೆ ಹೋಗುತ್ತಿದ್ದೇನೆ. ನನ್ನ ವಿಚಾರಗಳ ಪ್ರಯೋಗ ಪ್ರತಿನಿತ್ಯ ನಡೆಯುತ್ತಿದೆ. ಈ ವಿಕಾಸ ಸರಿಯಾಗಿ ಆಗುತ್ತಿದೆಯೋ ಇಲ್ಲವೋ ಎಂಬುದನ್ನೂ ನೀವು ನೋಡಬೇಕು. ನೀವು ಸ್ವತಂತ್ರವಾಗಿ ವಿಚಾರ ಮಾಡದಿದ್ದರೆ ಇದೆಲ್ಲ ನೀವು ಮಾಡಲಾರರಿ.

"ನೀವು ನನ್ನ ಹೆಸರಿಗೆ ಅಂಟಿಕೊಂಡರೆ ಜಗತ್ತು ನಿಮ್ಮನ್ನು ಅಪಹಾಸ್ಯ ಮಾಡ ಬಹುದು. ಇದರಲ್ಲಿ ಇನ್ನೊಂದು ಅಪಾಯವೂ ಇದೆ. ಅದೇನೆಂದರೆ ನಿಮ್ಮ ಸಂಘ ಒಂದು ಸಂಪ್ರದಾಯವಾಗಿ ಬಿಡಬಹುದು. ನಾನು ಜೀವಿಸಿರುವಾಗಲೇ ಹೀಗಾಗಬಹು ದಾದರೆ ನಾನು ಸತ್ತಮೇಲೆ ಏನಾಗಬಹುದು ? ಯಾವುದೋ ಒಂದು ಕಠಿಣ ಸಮಸ್ಯೆ ಯನ್ನು ಎದುರಿಸುವಾಗ ನೀವು ಹೇಳಬಹುದು "ನೋಡು, ಗಾಂಧೀ ಯಂಗ್ ಇಂಡಿಯ ಅಥವಾ ಹರಿಜನದಲ್ಲಿ ಏನು ಹೇಳಿದ್ದಾನೆ. ನೀವು ನಿಮ್ಮೊಳಗಿನ ವಾದ ವಿವಾದದಲ್ಲಿ ಆಣೆ ಇಡುತ್ತ ನನ್ನ ಲೇಖನಗಳ ಪ್ರಮಾಣವನ್ನು ಕೊಡಬೇಡಿ. ಇದಕ್ಕಿಂತ ನನ್ನ ಮೂಳೆ ಗಳ ಜೊತೆಗೇ ನನ್ನ ಲೇಖನಗಳೂ ಸುಟ್ಟುಹೋಗುವುದು ಒಳ್ಳೆಯದು. ಇದನ್ನು ಕೇವಲ ವಿನಯಕ್ಕಾಗಿ ಹೇಳುತ್ತಿಲ್ಲ. ನಾನು ಈ ಮಾತನ್ನು ಹೇಳಿದ್ದೇನೆ, ವೇದಗಳು ನಷ್ಟ ವಾದರೂ ಈಶಾವಾಸ್ಯ ಉಪನಿಷತ್ತಿನ ಕೇವಲ ಮೊದಲನೆಯ ಮಂತ್ರವಷ್ಟೇ ಉಳಿ ದರೂ ಜಗತ್ತಿಗೆ ಯಾವ ಹಾನಿಯೂ ಆಗುವುದಿಲ್ಲ, ಆದರೆ ಅದನ್ನು ನಾವು ತಿಳಿಯದೆ ಮತ್ತು ಅದರಂತೆ ಕೆಲಸ ಮಾಡದಿದ್ದರೆ ಅದರಿಂದಾದರೂ ಯಾವ ಪುರುಷಾರ್ಥ ?

"ನಾನು ಹೇಳಿದ್ದರ ಮತ್ತು ಬರೆದಿದ್ದರ ಉಪಯೋಗವಿಷ್ಟೇ. ಅದರಿಂದ ಸತ್ಯ ಮತ್ತು ಅಹಿಂಸೆಯ ಸಿದ್ಧಾಂತಗಳನ್ನು ಅರಗಿಸಿಕೊಳ್ಳಲು ನಿಮಗೆ ಸಹಾಯವಾಗುತ್ತದೆ.

"ನೀವು ನನ್ನ ಪೂಜಾರಿಯಾಗದೆ ಆದರ್ಶದ ಪೂಜಾರಿಗಳಾಗಬೇಕು. ಆದ ಪಕ್ಷ ದಲ್ಲಿ ನಿಮ್ಮ ಸಂಘದ ಹೆಸರಿನಲ್ಲಿರುವ ನನ್ನ ಹೆಸರನ್ನು ತೆಗೆದು ಹಾಕಿರಿ. ನನ್ನ ಹೆಸರಿನ ಮೋಹದಲ್ಲಿ ಬೀಳಬೇಡಿ. ನಿಮ್ಮ ಪ್ರತ್ಯೇಕ ಪ್ರವೃತ್ತಿಯನ್ನು ಸತ್ಯ ಮತ್ತು ಅಹಿಂಸೆ ಯಿಂದ ಅಳೆಯಿರಿ. ಇವುಗಳನ್ನು ನೀವು ಅಳತೆಗೋಲನ್ನಾಗಿ ಮಾಡಿದರೆ ನಾನು ಸತ್ತ ಮೇಲೆ ಕೂಡ ನಿರ್ಭಯದಿಂದ ಎಲ್ಲ ಪ್ರಶ್ನೆಗಳ ಮೇಲೆ ವಿಚಾರ ಮಾಡಬಲ್ಲಿರಿ."

ಕರ್ನಾಟಕದಲ್ಲಿ

# ಸರ್ವೋದಯ ಪಥ—ಒಂದು ವಿವೇಚನೆ

ಹೆಚ್. ಆರ್. ದಾಸೇಗೌಡ

" ಕರ್ನಾಟಕದಲ್ಲಿ ಸರ್ವೋದಯ ಪಥ "— ಈ ಶೀರ್ಷಿಕೆಯ ವಿಷಯ ಭಾರತ ದಾದ್ಯಂತ ಗಾಂಧೀಜಿ ಮತ್ತು ವಿನೋಬಾಜಿ ಇವರುಗಳ ನೇತೃತ್ವದಲ್ಲಿ ಸಾಗಿದ ಸರ್ವೋದಯ ಆಂದೋಲನದ ಇತಿಹಾಸದಲ್ಲಿ ಒಂದು ಅವಿಭಾಜ್ಯ ಅಂಗ ; ಇದು ಕರ್ನಾಟಕ ದಲ್ಲೇ ಒಂದು ಪೃಥಕ್ಕಾದ ಆಂದೋಲನ ಎಂದು ಕಲ್ಪಿಸಿಕೊಳ್ಳಲು ಸಾಧ್ಯವಿಲ್ಲ, ಈ ಆಂದೋಲನಕ್ಕೆ ಸ್ಫೂರ್ತಿಯ ಚಿಲುಮೆ ಗಾಂಧೀಜಿ ಮತ್ತು ವಿನೋಬಾಜಿ. ಆದುದರಿಂದ ಈ ಅಧ್ಯಯನವನ್ನು ಗಾಂಧೀಜಿ ಮತ್ತು ವಿನೋಬಾಜಿ ಅವರ ನಾಯಕತ್ವದಲ್ಲಿ ನಡೆದ ಆಂದೋಲನಗಳ ಹಿನ್ನೆಲೆಯಲ್ಲಿ ವಿಚಾರ ಮಾಡಬೇಕು.

೧

ಮಹಾತ್ಮ ಗಾಂಧೀಜಿ ತಮ್ಮ ಭವ್ಯ ಜೀವನ ಮತ್ತು ಕ್ರಿಯೆಗಳ ಮೂಲಕ ಮನುಜಕುಲಕ್ಕೆ ಬಿಟ್ಟು ಹೋಗಿರುವ ಸಂದೇಶವನ್ನು ' ಸರ್ವೋದಯ ' ಎಂಬ ಒಂದು ಮಾತಿನಲ್ಲಿ ಸಂಗ್ರಹಿಸಿ ಹೇಳಬಹುದು. ' ಸರ್ವೋದಯ ' ಎಂದರೆ ಸರ್ವರ, ಸಮಸ್ತ ಸೃಷ್ಟಿಯ, ಕ್ಷೇಮಾಭ್ಯುದಯ.

ಗಾಂಧೀಜಿ ವೈರಾಗಿಯೊಬ್ಬನಂತೆ ಜೀವನವನ್ನು ನಿರಾಕರಿಸಲಿಲ್ಲ. ಅವರು ಅದನ್ನು ಸ್ವಾಗತಿಸಿ, ಅದರಿಂದ ಉತ್ಪನ್ನವಾದ ಸವಾಲುಗಳನ್ನು ವೀರಾಗ್ರಣಿಯಂತೆ ಎದುರಿಸಿದರು. ಅವರು ಪ್ರಧಾನವಾಗಿ ಕ್ರಿಯಾಶೀಲ ವ್ಯಕ್ತಿ. ' ಕರ್ಮಯೋಗಿ ' ಆಗಿದ್ದರು. ಅವರ ಕ್ರಿಯೆ ಆತ್ಮೋನ್ನತಿ ಹಾಗು ಸಾಮಾಜಿಕ ಕ್ರಾಂತಿ ಎರಡಕ್ಕೂ ಆಗರವಾಗಿದ್ದಿತು. ಅದು ಮಾನವನ ಇತಿಹಾಸದಲ್ಲಿಯೇ ವಿಶಿಷ್ಟ ರೀತಿಯದಾಗಿತ್ತು. ಸರ್ವೋದಯ ಅವರ ಜೀವನದ ಧ್ರುವತಾರೆಯಾಗಿತ್ತು. ಅವರು ಅದರ ಬಳಿ ಸಾರಲು ತಮ್ಮ ಬಾಳಿನ ಆರಂಭದಲ್ಲಿಯೇ ಪಯಣ ಬೆಳೆಸಿ, ಗುರಿ ಮುಟ್ಟಲು ಮಹೋನ್ನತ ಸಾಹಸ ಮಾಡಿದರು.

ಸರ್ವೋದಯ ಎಂಬ ಮಾತು, ಸುಮಾರು ಎರಡು ಸಾವಿರ ವರ್ಷಗಳ ಹಿಂದೆ ಜೀವಿಸಿದ್ದ ಪ್ರಸಿದ್ಧ ಜೈನ ಆಚಾರ್ಯ ಸಮಂತಭದ್ರನ ಗ್ರಂಥವೊಂದರಲ್ಲಿ ಮೊದಲು ಕಂಡುಬಂದಿತು. ಆತನದೆಂದು ಪ್ರತೀತಿ ಇರುವ ಒಂದು ಶ್ಲೋಕ ಭಾಗ ಹೀಗಿದೆ :

ಸರ್ವಾಪದಂ ಅಂತಕರಂ ನಿರಂತಂ
ಸರ್ವೋದಯಂ ತೀರ್ಥಮಿದಂ ತವೈವ

(ಎಲ್ಲ ಆಪತ್ತುಗಳನ್ನೂ ಎಲ್ಲ ಕಾಲಕ್ಕೂ ಪರಿಹರಿಸುವ ಪವಿತ್ರ ಶಕ್ತಿ ಸರ್ವೋದಯ ಒಂದೇ)

ಆದರೆ, ಸರ್ವೋದಯ ಕಲ್ಪನೆ, ಪವಿತ್ರ ಉಪನಿಷತ್ತುಗಳಷ್ಟೇ ಪುರಾತನವಾದುದು. ಒಬ್ಬ ವೈದಿಕ ಋಷಿಯ ಗಾಢ ಪ್ರಾರ್ಥನೆ ಇದು.

ಸರ್ವತ್ರ ಸುಖಿನಃ ಸಂತು
ಸರ್ವೇ ಸಂತು ನಿರಾಮಯಾಃ
ಸರ್ವಂ ಭದ್ರಾಣಿ ಪಶ್ಯಂತು
ಮಾ ಕಶ್ಚಿತ್ ದುಃಖ ಭಾಗ್‌ಭವೇತ್

(ಎಲ್ಲರೂ ಸುಖಿಗಳಾಗಲಿ, ಎಲ್ಲರೂ ಆರೋಗ್ಯವಂತರಾಗಿರಲಿ, ಎಲ್ಲರೂ ಸುಭಿಕ್ಷದಿಂದ ಬಾಳಲಿ, ಯಾರಿಗೂ ದುಃಖ ಲೇಶವೂ ಬರದಿರಲಿ.)

ಈ ಉದಾತ್ತ ಆದರ್ಶ ಭಾರತವೊಂದೇ ಅಲ್ಲ ಜಗತ್ತಿನ ಎಲ್ಲ ದೇಶಗಳ ಸಾಧುಸಂತರ ಮತ್ತು ಜ್ಞಾನಿಗಳ ಬೋಧೆಯ ಸಾರ ಸರ್ವಸ್ವವಾಗಿದೆ. ಇದು ಆತ್ಮತ್ಯಾಗಕ್ಕೆ ಸಿದ್ಧವಾದ ಪ್ರೇಮದ ಆಧಾರ ಹೊಂದಿದೆ. ಇದರ ವಿಶಾಲ ವ್ಯಾಪಕ ಪ್ರೇಮದ ಮೂಲಕ ಎಲ್ಲರ ಕ್ಷೇಮಾಭ್ಯುದಯಕ್ಕೆ ಕಾರಣವಾಗಬೇಕಾದರೆ ಪ್ರಥಮತಃ ದೀನದಲಿತರ ಬಗೆಗೆ ಕರ್ತವ್ಯ ವಿಧಾಯಕವಾದುದು. ಮಾನವ, ಪ್ರಾಣಿ ಮತ್ತು ಸಸ್ಯ ಇವೆಲ್ಲವುಗಳನ್ನು ಒಳಗೊಂಡ ಸಕಲ ಸಜೀವ ಸೃಷ್ಟಿಗೂ ಇದು ಅನ್ವಯಿಸುತ್ತದೆ.

ಗಾಂಧೀಜಿಗೆ ಈ ದಿವ್ಯಭಾವನೆ ಹೇಗೆ ಅರಿವಾಯಿತೆಂಬುದು ಒಂದು ಸ್ವಾರಸ್ಯವಾದ ವಿಷಯ. ಅವರ ಆತ್ಮಕಥೆಯಲ್ಲಿ "ಮಾಯಾಜಾಲ ಬೀರಿದ ಪುಸ್ತಕ" ಎಂಬ ಶೀರ್ಷಿಕೆಯ ಒಂದು ಅಧ್ಯಾಯವಿದೆ (ಭಾಗ–೪, ಅ–೧೮) ಆ ಅಧ್ಯಾಯದಲ್ಲಿ ಅವರು ಜಾನ್ ರಸ್ಕಿನ್‌ನ "ಅಂಟು ದಿಸ್ ಲಾಸ್ಟ್" ಎಂಬ ಗ್ರಂಥವನ್ನು ಓದಿದ ಮೇಲೆ ತತ್‌ಕ್ಷಣವೇ ತಮ್ಮ ಜೀವನ ಹೇಗೆ ಪರಿವರ್ತನೆ ಹೊಂದಿತು ಎಂಬುದನ್ನು ಉಲ್ಲೇಖಿಸಿದ್ದಾರೆ. ಆ ಗ್ರಂಥವನ್ನು ಅವರೇ ಗುಜರಾತೀ ಭಾಷೆಗೆ ಅನುವಾದಿಸಿ, ಅದಕ್ಕೆ "ಸರ್ವೋದಯ" ಎಂಬ ಹೆಸರನ್ನು ಕೊಟ್ಟರು. ಆ ಪುಸ್ತಕದ ಬೋಧೆ ಅವರ ಜೀವನ ಸಿದ್ಧಾಂತವಾಯಿತು. ಅದನ್ನು ಮೂರು ತತ್ವಗಳಲ್ಲಿ ಸಂಗ್ರಹಿಸಿ ಹೇಳಬಹುದು. (೧) ಸಕಲ ಜೀವದ ಆಧ್ಯಾತ್ಮಿಕ ಏಕತೆ (೨) ಆರ್ಥಿಕ ಸಮತೆ (೩) ಕಾಯಕದ ಮಹತ್ವ.

ಈ ತತ್ವಗಳನ್ನು ಜೀವನದ ವ್ಯಾವಹಾರಿಕ ಪ್ರಸಂಗಗಳಿಗೆ ಅನ್ವಯಿಸಿ, ನವ ಮಾನವನನ್ನು ಸೃಷ್ಟಿಸುವುದಕ್ಕೂ ಮತ್ತು ಇಂದಿನ ಸಮಾಜವನ್ನು 'ಸಮತಾ ಪ್ರಧಾನ ವ್ಯವಸ್ಥೆಗೆ' ಒಳಪಡಿಸುವುದಕ್ಕೂ ಗಾಂಧೀಜಿ ಪ್ರಯತ್ನಿಸಿದರು. ಅವರು ಆತ್ಮಸಾಕ್ಷಾತ್ಕಾರ ಹೊಂದಲು, ಎಂದರೆ 'ಸತ್ಯಸ್ವರೂಪಿ ಭಗವಂತನನ್ನು ಪ್ರತ್ಯಕ್ಷ ದರ್ಶಿಸಲು' ಮಾಡಿದ ಪ್ರಯತ್ನ, ದಕ್ಷಿಣ ಆಫ್ರಿಕಾದಲ್ಲಿದ್ದ ತಮ್ಮ ನಿರ್ಭಾಗ್ಯ ಸೋದರರಿಗೆ ಸಾಮಾಜಿಕ ನ್ಯಾಯ ಮತ್ತು ನಾಗರಿಕ ಹಕ್ಕು ಬಾಧ್ಯತೆಗಳನ್ನು ಗಳಿಸಿಕೊಡಲು ಹಾಗೂ ಭಾರತದಲ್ಲಿ ಕೋಟ್ಯಂತರ ಬಾಂಧವರಿಗೆ ರಾಜಕೀಯ ಮತ್ತು ಆರ್ಥಿಕ ಸ್ವಾತಂತ್ರ್ಯಗಳನ್ನು ಗಳಿಸಿಕೊಡಲು ಮಾಡಿದ ಅವಿರತ ಪ್ರಯತ್ನ. ಇವೆಲ್ಲಾ ಈ ಆದರ್ಶದಿಂದಲೇ ಪ್ರೇರಿತವಾದವು. ಇದೇ ಗುರಿಯನ್ನು ಸಾಧಿಸಲು ಅವರು ಆಧ್ಯಾತ್ಮಿಕ ಸಮರ ನಡೆಸಲು ಒಂದು ಹೊಸ

ಸಾಧನವನ್ನು ಸೃಷ್ಟಿಸಿದರು. ಅದೊಂದು ಘನವೆತ್ತ ಜೀವನದ ಸಾಧನವೂ ಆಗಿದ್ದಿತು. ಅವರು ಅದನ್ನು 'ಸತ್ಯಾಗ್ರಹ' ಎಂದು ಕರೆದರು. ಸತ್ಯಾಗ್ರಹ ಎಂದರೆ ಸತ್ಯವನ್ನೇ ಆತ್ಯಂತಿಕವಾಗಿ ಅರಸುವುದು. ಇದಕ್ಕೆ 'ಅಹಿಂಸೆ' ಅಥವಾ 'ಪ್ರೇಮ' ಸಾಧನವಾಗಿತ್ತು. ಇವರ ಜತೆಜತೆಗೆ 'ರಚನಾತ್ಮಕ ಕಾರ್ಯಕ್ರಮ' ಎಂಬುದನ್ನೂ ಗಾಂಧೀಜಿ ರೂಪಿಸಿದರು. ಈ ಕಾರ್ಯಕ್ರಮ ಪ್ರಚಲಿತ ಸಾಮಾಜಿಕ ಸಮಸ್ಯೆಗಳನ್ನು ಪರಿಹರಿಸುವ ಉದ್ದೇಶದಿಂದ ಕೂಡಿದ್ದಿತು; ಅಹಿಂಸಾತ್ಮಕ ಸೃಜನಾತ್ಮಕ ಕ್ರಾಂತಿ ಅಥವಾ 'ಜನಕೋಟಿಗೆ ಸ್ವರಾಜ್ಯ'ವನ್ನು ತರುವುದು ಇದರ ಉದ್ದೇಶವಾಗಿತ್ತು. ಈ ಕಾರ್ಯಕ್ರಮ ಖಾದಿ ಮತ್ತು ಗ್ರಾಮೋದ್ಯೋಗಗಳ ಪುನರುಜ್ಜೀವನ, ಅಸ್ಪೃಶ್ಯತಾ ನಿವಾರಣೆ, ಕೋಮು ಐಕಮತ್ಯವನ್ನು ಸಾಧಿಸುವುದು, ಮಾದಕ ವಸ್ತುಗಳ ನಿಷೇಧ, ರಾಷ್ಟ್ರಭಾಷೆ ಹಿಂದೂಸ್ತಾನಿಯ ಪ್ರಚಾರ, ಗೋಸೇವೆ, ಸ್ತ್ರೀ-ಪುರುಷರ ಸಮಾನ ಹಕ್ಕುಗಳು, ನಯೀತಾಲೀಂ ಅಥವಾ ಮೂಲಶಿಕ್ಷಣ, ವಯಸ್ಕರ ಸಾಮಾಜಿಕ ಶಿಕ್ಷಣ, ನಿಸರ್ಗೋಪಚಾರ— ಇತ್ಯಾದಿಗಳಿಂದ ಕೂಡಿದ್ದಿತು. ಇವೆಲ್ಲ ಸೇರಿ ಗಾಂಧೀಜಿಯ ದೈವದತ್ತ ನಾಯಕತ್ವದಲ್ಲಿ ರಾಷ್ಟ್ರಾದ್ಯಂತ ಒಂದು ಅದ್ಭುತ ಜೀವನ ಚೇತನ ಪ್ರವಾಹವೇ ಹರಿಯಿತು.

ಕರ್ನಾಟಕದ ಇತಿಹಾಸ ಮತ್ತು ಸಂಸ್ಕೃತಿ ಬಹಳ ಅಪೂರ್ವವಾದುದು. ಮಾನವೀಯತೆಯ ತಿರುಳಾದ ಪ್ರೇಮಸ್ಥಾಪನೆಗಾಗಿ ಆತ್ಮತ್ಯಾಗ ಮಾಡಿದ ನಿದರ್ಶನಗಳಿಗೇನೂ ಕಡಿಮೆಯಿಲ್ಲ. 'ಗೋಮಟ' ಎಂದು ಅಮರತೆ ಪಡೆದಿರುವ ಬಾಹುಬಲಿಯ ಪ್ರತಿಮೆ ಶಿಲೆಯಲ್ಲಿ ಪಾವನತೆ ಮತ್ತು ಚೆಲುವನ್ನು ರೂಪಿಸಿರುವ ನಿದರ್ಶನ, ಅದು ಶತಮಾನಗಳಿಂದ ಮಾನವನ ಹೀನತನಕ್ಕೆ ಸವಾಲನ್ನು ಒಡ್ಡಿರುವುದಲ್ಲದೆ ಸರ್ವೋದಯಕ್ಕಾಗಿ, ಸಕಲರ ಕ್ಷೇಮಾಭ್ಯುದಯಕ್ಕಾಗಿ, ಮಾನವ ಸಾಧಿಸಬಹುದಾದ ಪರಮ ಔನ್ನತ್ಯವನ್ನು ಸಾರುತ್ತಲಿದೆ.

೨

ಆಧುನಿಕ ಕಾಲದಲ್ಲಿ ಸರ್ವೋದಯದ ದೃಷ್ಟಿಯಿಂದ, ಸ್ವರಾಜ್ಯ ಸ್ಥಾಪನೆಗಾಗಿ ಗಾಂಧೀಜಿ ಭಾರತದ ಮಹಾ ಮುಖಂಡತ್ವ ವಹಿಸಿಕೊಂಡು, ರಾಷ್ಟ್ರದ ಕಾರಣ ಪುರುಷರಂತೆ ತ್ಯಾಗ ಬಲಿದಾನಗಳಿಗೆ ಕರೆನೀಡಿದಾಗ ಕರ್ನಾಟಕ ಅದಕ್ಕೆ ಓಗೊಡಲು ಹಿಂದೆ ಮುಂದೆ ನೋಡಲಿಲ್ಲ. ಸಹಸ್ರಾರು ಸ್ತ್ರೀ-ಪುರುಷರು ಹರ್ಷದಿಂದ ಅವರು ತೋರಿದ ಜಾಡಿನಲ್ಲಿ ಸಾಗಿದರು; ಸತ್ಯಾಗ್ರಹ ವಿಧಾನದಿಂದ ನೇರ ಹೋರಾಟದ ಕಾರ್ಯರಂಗದಲ್ಲೋ ಅಥವಾ ರಚನಾತ್ಮಕ ಕಾರ್ಯಕ್ರಮದಲ್ಲೋ ಶ್ರಮಿಸಿದರು. ಈ ಎರಡೂ ಕ್ರಿಯಾಕ್ಷೇತ್ರಗಳಲ್ಲಿ ಕನ್ನಡಿಗರು ನಿಸ್ವಾರ್ಥಸೇವೆ ಸಲ್ಲಿಸಿ, ಕರ್ನಾಟಕವು 'ಗಾಂಧೀಪ್ರಾಂತ' ಎನ್ನುವಂಥ ಪ್ರಶಸ್ತಿಗಳಿಸಿದರು. ಅವರು ಶಾಂತಿವೀರರಾಗಿ, ಶತ್ರುವಿನ ಬಗೆಗೆ ಯಾವ ಕೆಟ್ಟ ಭಾವನೆಯನ್ನೂ ಇಟ್ಟುಕೊಳ್ಳದೆ, ತಾವೇ ಆತ್ಮತ್ಯಾಗಕ್ಕೂ ಸಿದ್ಧರಾಗಿ, ಸಂತಸದಿಂದ ಗುಂಡಿನ ಏಟಿಗೂ, ಭಲ್ಲೆಗೂ ಜಗ್ಗದೆ ಎದೆಯೊಡ್ಡಿ ನಿಂತರು. ಅವರು ತ್ರಿವರ್ಣ ಧ್ವಜವನ್ನು ಆಗಸಕ್ಕೆ ಎತ್ತಿಹಿಡಿದು ಅದರ ಕೀರ್ತಿಗೌರವಗಳನ್ನು ಹಾಡುತ್ತಾ ಹಸನ್ಮುಖ

ತೆಯಿಂದ ಪ್ರಾಣತೆತ್ತರು; ಅಂತೆಯೇ ತುರಂಗವಾಸವನ್ನೂ ಅನುಭವಿಸಿದರು.

ಭಾರತೀಯ ಸ್ವಾತಂತ್ರ್ಯ ಹೋರಾಟದಲ್ಲಿ ಇದೊಂದು ಅಮೋಘ ಅಧ್ಯಾಯ ಎನಿಸಿತು. ಆದರೂ ಕೆಲವರು ವಿಚಾರವಂತ ಸ್ತ್ರೀ-ಪುರುಷರನ್ನು ಈ ಉದ್ಯಮದಲ್ಲಿ ತೊಡಗುವಂತೆ ಮಾಡಿದುದು ಅದು ಅಂದು ಆ ರೀತಿ ಸ್ಪಷ್ಟವಾಗಿ ವ್ಯಕ್ತವಾಗದಿದ್ದರೂ ಗಾಂಧೀಜಿಯ ಜೀವನ ಸಂದೇಶವಾದ ಸರ್ವೋದಯವೇ. ಒಟ್ಟಿನಲ್ಲಿ ಮೂರು ದಶಕಗಳ ಕಾಲ ಸಾಗಿದ ಗಾಂಧೀಯುಗ ನಿರ್ಮಲ ಚಾರಿತ್ರ್ಯದ, ಸ್ವಚ್ಛವರ್ತನೆಯ ಮತ್ತು ನಿಸ್ವಾರ್ಥಸೇವೆಯ ವ್ಯಕ್ತಿಗಳ ತಂಡವನ್ನೇ ಸೃಷ್ಟಿಸಿತು.

ಆ ಕಾಲದ ಕರ್ನಾಟಕವು ಹರಿದು ಹಂಚಿಹೋಗಿ ಮುಂಬೈ ಮತ್ತು ಮದ್ರಾಸ್ ಪ್ರಾಂತಗಳಲ್ಲಿ ಬ್ರಿಟಿಷರ ನೇರ ಆಳ್ವಿಕೆಯೂ, ಮೈಸೂರು ಮತ್ತು ಹೈದರಾಬಾದ್ ಪ್ರಾಂತಗಳಲ್ಲಿ ದೇಶೀಯ ಅರಸರ ಆಳ್ವಿಕೆಯೂ ಇದ್ದಿತು. ಹೀಗಿದ್ದರೂ ಎಲ್ಲೆಲ್ಲೂ ಉದ್ಭವಿಸಿದ ಸಾರ್ವತ್ರಿಕ ಜಾಗೃತಿ ಜನತೆಯನ್ನು ಬಡಿದೆಬ್ಬಿಸಿತು. ಮಂಗಳೂರಿನಲ್ಲಿ ಕಾರ್ನಾಡು ಸದಾಶಿವರಾಯರೂ, ಉತ್ತರ ಕರ್ನಾಟಕದಲ್ಲಿ ಗಂಗಾಧರ ದೇಶಪಾಂಡೆ, ಹರ್ಡೇಕರ್ ಮಂಜಪ್ಪ, ರಂ.ರಾ. ದಿವಾಕರರಾಯರು ಮುಂತಾದವರೂ, ಮೈಸೂರು ರಾಜ್ಯದಲ್ಲಿ ಎಂ. ವೆಂಕಟಕೃಷ್ಣಯ್ಯ, ಹೊಸಕೊಪ್ಪ ಕೃಷ್ಣರಾವ್, ತಗಡೂರು ರಾಮಚಂದ್ರರಾವ್ ಮೊದಲಾದವರೂ, ಹೈದರಾಬಾದಿನಲ್ಲಿ ಜನಾರ್ದನರಾವ್ ದೇಸಾಯಿ, ಬಿ. ರಾಮಕೃಷ್ಣರಾವ್, ಸ್ವಾಮಿ ರಮಾನಂದ ತೀರ್ಥ ಮುಂತಾದವರೂ ಚೇತನಭರಿತ ನಾಯಕರಾದರು. ಹೀಗೆಯೇ ಕೌಜಲಗಿ ಹನುಮಂತರಾವ್, ಕಾಕಾ ಕಾರ್ಖಾನೀಸ್, ಪುಂಡಲೀಕಜೀ, ನಾರಾಯಣ ಸುಬ್ಬರಾವ್ ಹರ್ಡೀಕರ್ ಉಮಾಬಾಯಿ ಕುಂದಾಪುರ ಮುಂತಾದವರು ರಚನಾತ್ಮಕ ಕಾರ್ಯದಲ್ಲಿ ಮುಂದಾಳುಗಳಾದರು. ಅಸಂಖ್ಯ ಕಾರ್ಯಕರ್ತರು, ಇವರುಗಳ ನಾಯಕತ್ವದಲ್ಲಿಯೂ ಮತ್ತು ಗಾಂಧೀಜಿಯಿಂದ ಕಾಲಕಾಲಕ್ಕೆ ರಚಿತವಾದ ರಚನಾತ್ಮಕ ಕಾರ್ಯಗಳ ಸಂಘಗಳಲ್ಲಿಯೂ ಸೇವೆ ಸಲ್ಲಿಸಿದರು.

೧೯೪೭ ರಲ್ಲಿ ರಾಷ್ಟ್ರಕ್ಕೆ ಸ್ವಾತಂತ್ರ್ಯ ಬಂದಾಗ, ಒಂದು ಹೊಸಯುಗ ಆರಂಭವಾಯಿತು. ಅನೇಕ ಕಾರ್ಯಕರ್ತರೂ, ಸಂಘ-ಸಂಸ್ಥೆಗಳೂ ಮುಖ್ಯ ಗುರಿಯಾದ ಸರ್ವೋದಯದ ಬಗೆಗೆ ಖಚಿತವಾದ ಕಲ್ಪನೆ ಹೊಂದಿಲ್ಲವೆಂದು, ಒಬ್ಬೊಬ್ಬರು ತಮ್ಮ ತಮ್ಮ ಸೀಮಿತ ಕಾರ್ಯವಲಯಗಳಲ್ಲಿ ಮಾತ್ರ ನಿರತರಾಗಿದ್ದಾರೆಂದೂ ಗಾಂಧೀಜಿಗೆ ಮನವರಿಕೆಯಾಯಿತು. ಅದೇ ಕಾಲಕ್ಕೆ ಹಿರಿಯ ಅನುಭವ ಪಡೆದ ಕಾರ್ಯಕರ್ತರಲ್ಲಿ ಬಹುಮಂದಿ ರಾಜಕಾರಣವನ್ನೇ ಆರಿಸಿಕೊಂಡುದರಿಂದ, ಅವರು ರಚಿಸಬೇಕೆಂದು ಯೋಜಿಸಿದ್ದ ಅಹಿಂಸಕ ಸೃಷ್ಟ್ಯಾತ್ಮಕ ಕ್ರಾಂತಿಯ ಕಾರ್ಯಕ್ಕೆ, ಒಂದು ಬಗೆಯ ಹಿಂಜರಿಕೆಯಾದುದು ಗಾಂಧೀಜಿಗೆ ಅರಿವಾಯಿತು. ಆದುದರಿಂದ ರಚನಾತ್ಮಕ ಕಾರ್ಯಕ್ಕೆ ಒಂದು ಹೊಸ ಸ್ವರೂಪವನ್ನು ಕೊಟ್ಟು, ಎಲ್ಲ ಕಾರ್ಯಕರ್ತರೂ ಏಕಮಾತ್ರ ಧ್ಯೇಯವಾದ ಸರ್ವೋದಯ ಸಮಾಜ ರಚನೆಗೆ ನೆರವಾಗುವ, ಆರ್ಥಿಕ, ಸಾಮಾಜಿಕ ಪರಿವರ್ತನೆಯ ಕಾರ್ಯದಲ್ಲಿ ನಿರತರಾಗುವಂತೆ ಮಾಡುವ, ವಿಧಾನ

ಕುರಿತು ಅವರು ಚಿಂತಿಸುತ್ತಿದ್ದರು. ಆದರೆ ಅದು ಸಾಧ್ಯವಾಗಲಿಲ್ಲ. ಅವರು ೧೯೪೮ರ ಜನವರಿ 30 ರಂದು ಹಂತಕನ ಗುಂಡಿಗೆ ತುತ್ತಾಗಿ ಅಸು ನೀಗಿದರು. ಆ ದುರಂತದಿಂದ ರಾಷ್ಟ್ರಾದ್ಯಂತ ಶೋಕದ ಮುಸುಕು ಆವರಿಸಿತು. ಸಿಡಿತಲೆಯೊಂದು ಆಸ್ಫೋಟಿಸಿ ಶಾಂತವಾದ ಬಳಿಕ ಕತ್ತಲು ಆವರಿಸುವಂತೆ ಆಯಿತು.

ಈ ಪರಿಸ್ಥಿತಿ ಬಹಳ ಕಾಲ ನಿಲ್ಲಲಿಲ್ಲ. ಸ್ವಲ್ಪ ಕಾಲದಲ್ಲೇ ಹೊಸ ಆಸೆ ಹೊಸ ಭರವಸೆ ಕೊನರಿತು, ೧೯೪೮ ರ ಮಾರ್ಚ್ ತಿಂಗಳಲ್ಲಿ ಸೇವಾ ಗ್ರಾಮದಲ್ಲಿ ಸಭೆ ಸೇರಿದ ವಿಖ್ಯಾತ ಗಾಂಧೀ ಅನುಯಾಯಿಗಳೆಲ್ಲಾ ರಚನಾತ್ಮಕ ಕಾರ್ಯಕ್ಕೂ, ರಚನಾತ್ಮಕ ಕಾರ್ಯ ಸಂಸ್ಥೆಗಳಿಗೂ ಸಾಮಾನ್ಯ ನಿರ್ದೇಶನ ನೀಡುವ ಸಮಿತಿಯೊಂದನ್ನು ರಚಿಸಿದರು. ಅದಕ್ಕೆ 'ಸರ್ವ ಸೇವಾ ಸಂಘ' ಎಂಬ ಹೆಸರನ್ನು ಇಟ್ಟರು. ಅದು ಸತ್ಯ, ಅಹಿಂಸೆ ಇವುಗಳ ಆಧಾರದ ಮೇಲೆ ನಿಂತು ಜಾತಿ, ವರ್ಗ ಮತ್ತು ನಂಬಿಕೆಗಳ ವ್ಯತ್ಯಾಸದಿಂದ ದೂರವಾದ ಎಲ್ಲ ಬಗೆಗಳ ಶೋಷಣೆಯ ಅವಕಾಶದಿಂದ ದೂರವಾದ ಮತ್ತು ವ್ಯಕ್ತಿಗಳ ಹಾಗೂ ಸಮುದಾಯಗಳ ಬೆಳವಣಿಗೆಗೆ ಪೂರ್ಣ ಅವಕಾಶವಿರುವ, ಸರ್ವೋದಯ ಸಮಾಜ ರಚನೆಗೆ ಶ್ರಮಿಸಬೇಕೆಂದೂ ನಿರ್ಧಾರವಾಯಿತು. ಬಾಪುವಿಗೆ ಆಧ್ಯಾತ್ಮಿಕ ವಾರಸುದಾರರಂತಿದ್ದ ಆಚಾರ್ಯ ವಿನೋಬಾಭಾವೆ ಈ ಕಾರ್ಯಕ್ಕೆ ಮಾರ್ಗದರ್ಶನ ಮಾಡಬೇಕೆಂದು ಎಲ್ಲ ನಾಯಕರೂ, ಕಾರ್ಯಕರ್ತರೂ ಸಹಜವಾಗಿಯೇ ಇಚ್ಛಿಸಿದರು.

೩

ವಿನೋಬಾಜಿಯ ಮಾರ್ಗದರ್ಶಿತ್ವದಲ್ಲಿ 'ಸರ್ವ ಸೇವಾ ಸಂಘ' ಸರ್ವೋದಯ ಸಾಮಾಜಕ್ಕೆ ಸೇವೆ ಸಲ್ಲಿಸುವ ಪ್ರಮುಖ ಸಂಸ್ಥೆಯಾಯಿತು. ವಿನೋಬಾ ೧೯೫೧ರಲ್ಲಿ 'ಭೂದಾನಯಜ್ಞ' ಆಂದೋಳನವನ್ನು ಆರಂಭಿಸಿದ ಮೇಲಂತೂ, ಅದರ ಕಾರ್ಯರೂಪ ಸ್ಪಷ್ಟವಾಗಿದ್ದಿತು. ಭೂದಾನಯಜ್ಞ ಆಂದೋಲನದ ಮುಖ್ಯ ಉದ್ದೇಶ, ದೇಶವನ್ನು ಕಾಡುತ್ತಿದ್ದ ಭೂ–ಸಮಸ್ಯೆಯನ್ನು ಪರಿಹರಿಸಿ, ದಿನದಿನಕ್ಕೂ ಹದಗೆಡುತ್ತಿದ್ದ ಆರ್ಥಿಕ ಪರಿಸ್ಥಿತಿಯನ್ನು ಉತ್ತಮಗೊಳಿಸುವುದೇ ಆಗಿದ್ದಿತು. ಅದು ಸತ್ಯಾಗ್ರಹಿಗೆ ವ್ರತದ ರೂಪದಲ್ಲಿ ಗಾಂಧೀಜಿ ವಿಧಾಯಕ ಮಾಡಿದ್ದ 'ಅಸಂಗ್ರಹ' ತತ್ತ್ವದ ವಿಸ್ತೃತ ರೂಪವಾಗಿದ್ದಿತ್ತು. ವಿಶ್ವಸ್ಥ ಸಿದ್ಧಾಂತದ ಕಾರ್ಯರೂಪವಾಗಿದ್ದಿತು. ಬಾಪೂ ರಾಷ್ಟ್ರಕ್ಕೆ ಸ್ವಾತಂತ್ರ್ಯಗಳಿಸಲು ಉಪಯೋಗಿಸಿದ್ದ ಅಹಿಂಸಕ ಕ್ರಾಂತಿಯ ತಂತ್ರ ಸ್ವರೂಪವಾಗಿದ್ದಿತು. ಅದು ಸಾಮ್ಯವಾದೀ–ಮಾರ್ಕ್ಸ್‌ವಾದಿ ವಿಧಾನವಾದ ವರ್ಗಕಲಹ ಮತ್ತು ಹಿಂಸಾಯುತ ಮಾರ್ಗಗಳಿಗೆ ಸತ್ತ್ವಯುತವಾದ ಪ್ರತಿರೂಪವಾಗಿದ್ದಿತು. ಅದು ಭೂಮಿ, ಸಂಪತ್ತು, ವಿಶೇಷಶಕ್ತಿ, ಪ್ರಭುತ್ವ, ಅವಕಾಶ ಇವುಗಳ ಸಮಾನ ವಿತರಣೆ ಮತ್ತು ವಿಕೇಂದ್ರೀಕರಣಗಳನ್ನು ಪ್ರಧಾನವಾಗಿ ಬೋಧಿಸಿತು. ಮಾನವ ಮೂಲತಃ ಲೋಭಿಯಲ್ಲವೆಂದೂ, ಕೆಡುಕಿಯಲ್ಲವೆಂದೂ ಒಳಿತಿನಿಂದ ಕೂಡಿದವನೆಂದೂ ಎಂಬ ತತ್ತ್ವ ವಿಚಾರಕ್ಕೆ ನಿದರ್ಶನವಾಯಿತು,

ಈ ಉದ್ದೇಶ ಸಾಧನೆಗಾಗಿ ವಿನೋಬಾ ಭಾರತ ಪರ್ಯಟನೆ ಮಾಡಲು ಪಾದ ಯಾತ್ರೆ ಕೈಗೊಂಡರು. ಎಲ್ಲೆಲ್ಲಿಯೂ ಪ್ರಚಂಡ ಉತ್ಸಾಹ ಗೋಚರಿಸಿತು. ಬಡ ವರು ಶ್ರೀಮಂತರು ಲಕ್ಷಾಂತರ ಮಂದಿ ಭೂದಾನ ನೀಡಬೇಕೆಂಬ ಕರೆಗೆ ಓಗೊಟ್ಟರು. ವಿನೋಬಾ ನಿಸ್ಸೀಮ ಕಲೆಗಾರನಂತೆ ಭೂದಾನ ಕಲ್ಪನೆಯ ಅರ್ಥವನ್ನು ವಿಸ್ತರಿಸುತ್ತಾ ಹೋದರು. ಅದು 1969 ರ ವೇಳೆಗೆ ಸಂಪತ್ತಿದಾನ, ಸಾಧನದಾನ, ಶ್ರಮದಾನ ಜೀವನದಾನ, ಗ್ರಾಮದಾನ, ಪ್ರಕಂಡದಾನ, ಜಿಲ್ಲಾದಾನ, ಸಂಕಲ್ಪಿತ ಪ್ರದೇಶದಾನ ಎಂಬ ರೂಪಗಳನ್ನು ಪಡೆಯಿತು. ಭಾರತದಾದ್ಯಂತ ಲಕ್ಷಾಂತರ ಎಕರೆ ಭೂದಾನವೂ, 1,00,492 ಗ್ರಾಮದಾನವೂ, 701 ಪ್ರಕಂಡದಾನವೂ, 17 ಜಿಲ್ಲಾದಾನವೂ ಮತ್ತು 7 ಸಂಕಲ್ಪಿತ ಪ್ರದೇಶ ದಾನವೂ ಪ್ರಾಪ್ತವಾದವು. ಇದು ಪ್ರಭುತ್ವ ಮತ್ತು ಅಧಿಕಾರಗಳ ವಿಕೇಂದ್ರೀಕರಣ ತತ್ವದ ಮೇಲೆ ಭಾರತದ ರಾಜ್ಯ ವ್ಯವಸ್ಥೆಯು ಸರ್ವೋದಯಕ್ಕೆ ಸಾಧನವಾಗುವ ಗ್ರಾಮ ಸ್ವರಾಜ್ಯಕ್ಕೆ ಬುನಾದಿಯಾಗಬೇಕಾಯಿತು. ಕರ್ನಾಟಕದಲ್ಲಿ ಒಟ್ಟು 752 ಗ್ರಾಮದಾನ ಪ್ರಾಪ್ತವಾಯಿತು.

ವಿನೋಬಾ ರಾಜ್ಯದಿಂದ ರಾಜ್ಯಕ್ಕೆ ಪರ್ಯಟನ ಮಾಡುತ್ತಿದ್ದಂತೆ. ಸ್ವಾತಂತ್ರ್ಯೋ ತ್ತರ ಭಾರತದ ಇತಿಹಾಸದಲ್ಲಿ ವಿಶಿಷ್ಟ ರೀತಿಯ ಪ್ರಚಂಡ ಆಂದೋಲನ ಮೈವೆತ್ತು ನಿಂತಿತು. ಇದರಲ್ಲಿ ಕರ್ನಾಟಕ ಒಂದು ಮೈಲಿಗಲ್ಲನ್ನು ಸ್ಥಾಪಿಸಿತು. ವಿನೋಬಾ ರಾಜ್ಯದಲ್ಲಿ ಪ್ರವಾಸ ಮಾಡುತ್ತಿದ್ದಾಗ, 1958ರ ಸೆಪ್ಟೆಂಬರ್ ತಿಂಗಳಲ್ಲಿ ರಾಷ್ಟ್ರೀಯ ಗ್ರಾಮದಾನ ಸಮ್ಮೇಳನ ನಡೆಯಿತು. ಅದು ಮೈಸೂರಿನ ಬಳಿ 'ಇಲವಾಲ'ದಲ್ಲಿ ನಡೆ ಯಿತು. ರಾಷ್ಟ್ರದ ಮಹಾನಾಯಕರಾಗಿದ್ದ ರಾಷ್ಟ್ರಾಧ್ಯಕ್ಷ ಬಾಬು ರಾಜೇಂದ್ರ ಪ್ರಸಾದ್, ಪ್ರಧಾನಮಂತ್ರಿ ಜವಾಹರಲಾಲ್ ನೆಹರೂ ಮುಂತಾದವರೂ, ಪ್ರಸಿದ್ಧ ಸರ್ವೋದಯ ನಾಯಕ ಜಯಪ್ರಕಾಶನಾರಾಯಣ ಅವರೂ ಭಾರತದ ಕೆಲವು ರಾಜ ಕೀಯ ಪಕ್ಷಗಳ ಮುಖಂಡರೂ ಅದರಲ್ಲಿ ಭಾಗವಹಿಸಿದರು. ಗ್ರಾಮದಾನ ಆಂದೋ ಲನವು ಒಂದು ಮಹಾಶಕ್ತಿಯೆಂದು ಎಲ್ಲರೂ ಸ್ವಾಗತಿಸಿದರು. ರಾಜಾಜಿ ಅದನ್ನು 'ಕರು ಣೆಯ ಆಂದೋಲನ' ಎಂದು ಸಂಬೋಧಿಸಿದರು. ಜವಾಹರಲಾಲ್ ನೆಹರೂ 'ಸಮ್ಮ ತಿಯಕ್ರಾಂತಿ' ಎಂದು ಕರೆದರು. ಆಂದೋಲನದ ಪರಿಣಾಮವಾಗಿ ಭೂಸುಧಾರ ಣೆಯ ಬಗೆಗೆ ಸಾರ್ವಜನಿಕ ಜಾಗೃತಿ ಉಂಟಾಯಿತು.

೪

ಈ ಆಂದೋಲನ ಆರಂಭವಾದ ಮೇಲೆ 1952 ರಿಂದ ಕರ್ನಾಟಕದಲ್ಲಿ ಹಲ ವಾರು ವ್ಯಕ್ತಿಗಳೂ ಮತ್ತು ಸಂಸ್ಥೆಗಳೂ ಅದರಲ್ಲಿ ಕಾರ್ಯೋನ್ಮುಖವಾಗಿವೆ. ಯುವ ಕರ ಪೈಕಿ ಬೆಳಗುಂಬ ನಾರಣಪ್ಪ, ಬಾದ್ರಿಶಾಮಣ್ಣ, ಜಿ. ಪಿ. ನಾರಾಯಣಮೂರ್ತಿ, ಗರುಡಶರ್ಮ, ಬಾ. ಸು. ಕೃಷ್ಣಮೂರ್ತಿ. ಟಿ. ಎಸ್. ಅನಂತರಂಗಾಚಾರ್, ಗುಂಡಾ ಚಾರ್. ಕುಟ್ಟೀಜಿ, ಅಯ್ಯರ್, ವೆಂಕೋಬರಾವ್, ಕೆ. ಎಸ್. ನಾರಾಯಣಸ್ವಾಮಿ, ಎಸ್. ವಿ. ಮಂಜುನಾಥ್, ಇವರುಗಳೂ ಹಿರಿಯ ಪೀಳಿಗೆಯ ಪೈಕಿ ತಿಮ್ಮಪ್ಪನಾಯಕ್ ಎಚ್. ಆರ್. ವೆಂಕಟರಮಣ ಅಯ್ಯರ್, ಸಿದ್ಧರಾಮ ಗುರೂಜೀ ನೀಲಕಂಠಗಣಾಚಾರಿ

ಅನಂತ ವಾಮನ ಹೊಡಿಕೆ, ಏಣ್ಣೆಕೊಪ್ಪದ ಮಲ್ಲಿಕಾರ್ಜುನಪ್ಪ, ಎಚ್. ಎಸ್. ದೊರೆಸ್ವಾಮಿ, ರಾಮಚಂದ್ರ ವಡವಿ, ಸುಪ್ರಸಿದ್ಧ ಗಾಂಧೀ ಸಾಹಿತಿ ದಿವಂಗತ ಸಿದ್ಧವನಹಳ್ಳಿ ಕೃಷ್ಣಶರ್ಮ. ಮೊದಲಾದವರು ಪ್ರಮುಖ ಕಾರ್ಯಕರ್ತರು. ಇವರು ರಾಜ್ಯದ ಜಿಲ್ಲಾ ಭೂದಾನ–ಗ್ರಾಮದಾನ–ಸರ್ವೋದಯ ಇವುಗಳ ಸಂದೇಶವನ್ನು ಹರಡಿದರು. ಕುಟ್ಟೀಜಿ ಅವರ ಹೆಸರು ವಿಶೇಷ ಉಲ್ಲೇಖಕ್ಕೆ ಪಾತ್ರವಾದುದು. ಅವರು ರಾಜ್ಯಾದ್ಯಂತ ಎರಡು ಬಾರಿ ಪಾದಯಾತ್ರೆ ಮಾಡಿರುವುದಲ್ಲದೆ, ಆಂಧ್ರ ಮತ್ತು ಮದ್ರಾಸ್ ರಾಜ್ಯಗಳಲ್ಲಿಯೂ ಪಾದಯಾತ್ರೆ ಮಾಡಿ ಕರ್ನಾಟಕಕ್ಕೆ ಕೀರ್ತಿ ತಂದಿದ್ದಾರೆ. ಈ ಪರಿವ್ರಾಜಕ, ವಿನೋಬಾ ಅವರ ಅಣತಿಯಂತೆ ಉತ್ತರ ಭಾರತ ಯಾತ್ರೆ ಕೈಗೊಂಡು ಎಲ್ಲ ವರ್ಗದ ಜನರ ಮೆಚ್ಚುಗೆ ಪಡೆದಿದ್ದಾರೆ. ಗುಜರಾತ್ ರಾಜ್ಯದಲ್ಲೂ ಸಂಚರಿಸಿದ್ದಾರೆ. ಇವರು ಹೋದೆಡೆಯಲ್ಲೆಲ್ಲಾ 'ದಕ್ಷಿಣದ ವಿನೋಬಾ' ಎಂದು ಸ್ವಾಗತ ಪಡೆಯುತ್ತಿದ್ದಾರೆ. 'ಸ್ವಾಮಿ ಕುಟ್ಟೀಜಿ' ಎಂದೇ ಜನಪ್ರಿಯರಾಗಿದ್ದಾರೆ.

ಬೆಂಗಳೂರಿನ ಬಳಿ 'ವಿಶ್ವನೀಡಂ' ಎಂಬಲ್ಲಿ 'ಅಂತರ ರಾಷ್ಟ್ರೀಯ ಸರ್ವೋದಯ ಕೇಂದ್ರ'ವೊಂದನ್ನು ಸ್ಥಾಪಿಸಲು ವಿನೋಬಾಜಿ ದಿವಂಗತ ಶ್ರೀ ವಲ್ಲಭಸ್ವಾಮಿಯವರನ್ನು ಕಳಿಸಿದ್ದರು. ಎಲ್ಲರ ಪ್ರೀತಿಗೂ ಪಾತ್ರರಾಗಿದ್ದ ಜೀವಿ ವಲ್ಲಭಸ್ವಾಮಿಯವರು ಕಾರ್ಯತತ್ಪರರಾಗಿಯೇ ಮೃತಿ ಹೊಂದಿದರು. ಬೆಂಗಳೂರನ್ನು 'ಸರ್ವೋದಯ ನಗರ'ವನ್ನಾಗಿ ಪರಿವರ್ತಿಸಬೇಕೆಂಬ ಕಾರ್ಯದಲ್ಲಿ ಇಂಗ್ಲೆಂಡಿನ ಶ್ರೀ ಡೊನಾಲ್ಡ್ ಗ್ರೂಂ ಅವರಿಗೆ ಕೆಲವು ಕಾಲ ನೆರವನ್ನು ಇತ್ತಿದ್ದರು. ಶ್ರೀಯುತರ ಅಚ್ಚು–ಮೆಚ್ಚಿನ ಶಿಷ್ಯ ಈ ಪಿ. ಮೆನನ್ ಸರ್ವೋದಯ ಮತ್ತು ಶಾಂತಿ ಸಂದೇಶ ಹೊತ್ತು ಪಾದಯಾತ್ರಿಯಾಗಿ ವಿಶ್ವಪರ್ಯಟನ ಮಾಡಿ ಬಂದರು.

ಕರ್ನಾಟಕ ವಿನೋಬಾಜಿಯವರಿಗೆ ಇಬ್ಬರು ನೆಚ್ಚಿನ ಆಪ್ತ ಶಿಷ್ಯರನ್ನು–ಶ್ರೀಮತಿ ಮಹಾದೇವಿ ತಾಯಿ, ಶ್ರೀ ಜಯದೇವ್, ಕೊಟ್ಟಿರುವುದು ಹೆಮ್ಮೆಯ ವಿಷಯ.

ವಿನೋಬಾಜಿ ರಾಜ್ಯದಲ್ಲಿ ಪಾದಯಾತ್ರೆ ಕೈಗೊಂಡ ಕಾಲದಲ್ಲಿ ಹಿರಿಯ ಸ್ವಾತಂತ್ರ್ಯ ಹೋರಾಟಗಾರರೂ ಮತ್ತು ಪ್ರಸಿದ್ಧ ಸಮಾಜ ಸುಧಾರಕರೂ, ರಚನಾತ್ಮಕ ಕಾರ್ಯಕರ್ತರೂ ಆದ ತಗಡೂರು ರಾಮಚಂದ್ರರಾಯರೂ, ಆಂದೋಲನಕ್ಕೆ ಸೇರಿದುದು ಒಂದು ಮುಖ್ಯವಾದ ವಿಚಾರ. ಹಲವಾರು ಅಹಿಂಸಕ ಸಮರಗಳ ಈ ಯೋಧ 1961ರಲ್ಲಿ ರಾಜ್ಯ ಶಾಸನ ಸಭೆಯಿಂದ 'ಭೂದಾನ ಮಸೂದೆ'ಯನ್ನು ಅಂಗೀಕಾರ ಮಾಡಿಸಿದರು. ಈ ಶಾಸನದ ಪ್ರಕಾರ ರಚಿತವಾದ ಮಂಡಳಿ, ಭೂದಾನ ಜಮೀನಿನ ವಿತರಣೆ ಕಾರ್ಯದಲ್ಲಿ ತೊಡಗಿದೆ. ಶ್ರೀ ರಾಯರು ಗ್ರಾಮೀಣ ಕರ್ನಾಟಕದಲ್ಲಿ ಸರ್ವೋದಯ ಸಮಾಜ ವ್ಯವಸ್ಥೆಯನ್ನು ತರುವ ಉದ್ದೇಶದಿಂದ 'ಗ್ರಾಮ ಸ್ವರಾಜ್ಯ ಮಸೂದೆ'ಯನ್ನು ತಯಾರಿಸಿ, ಅದನ್ನು ಶಾಸನ ಮಾಡಿಸಲು ತಮ್ಮ ಸರ್ವಶಕ್ತಿಯನ್ನು ವಿನಿಯೋಗಿಸಿದರು.

ಈಚೆಗೆ ವಿನೋಬಾಜಿಯವರ ಎಪ್ಪತ್ತೈದನೆಯ ಜನ್ಮ ದಿನ ಆಚರಣೆಯ ಸಂದ ರ್ಭದಲ್ಲಿ ರಾಜ್ಯ ಸರ್ಕಾರ ಸಂಗ್ರಹಿಸಿದ 'ಗ್ರಾಮ ಸ್ವರಾಜ್ಯ ನಿಧಿ 'ಆಡಳಿತಕ್ಕಾಗಿ' ಗ್ರಾಮ ಸ್ವರಾಜ್ಯ ಸಮಿತಿ' ಎಂಬ ಸಂಸ್ಥೆಯನು ಸ್ಥಾಪಿಸಿದೆ. ಈ ಸಮಿತಿ ವ್ಯಾಪಕ ಕಾರ್ಯ ಕ್ರಮ ಹಾಕಿಕೊಂಡು, ಸರ್ವೋದಯ ಮತ್ತು ಗ್ರಾಮ ಸ್ವರಾಜ್ಯ ವಿಚಾರ ಹರಡಲು ಪ್ರಯತ್ನ ಮಾಡುತ್ತಿದೆ. ಈ ಸಮಿತಿಯಿಂದ ಧನ ಸಹಾಯ ಪಡೆದ ಕರ್ನಾಟಕ ಸರ್ವೋದಯ ಸಾಹಿತ್ಯ ಸಮಿತಿ 'ವಿನೋಬಾ ಗ್ರಂಥ ಮಾಲೆ' ಎಂಬ ಹೆಸರಿನಲ್ಲಿ ಎಂಟು ಸಂಪುಟಗಳಲ್ಲಿ ಪ್ರಕಟಿಸುವ ಯೋಜನೆ ಹಾಕಿಕೊಂಡಿದೆ, ಈಗಾಗಲೇ 'ವಿನೋಬಾ ದರ್ಶನ' 'ಗೀತಾ ಪ್ರವಚನ' ಮತ್ತು 'ನಿತ್ಯ ನೂತನ ಶಿಕ್ಷಣ' ಈ ಮೂರು ಸಂಪುಟ ಗಳನ್ನು ಹೊರತಂದಿದ್ದಾರೆ.

ರಾಷ್ಟ್ರೀಯ ಗಾಂಧೀ ಸ್ಮಾರಕ ನಿಧಿಯ ರಾಜ್ಯಶಾಖೆ ಎಂದಿನಂತೆ ತನ್ನ ಅಂಗ ಸಂಸ್ಥೆಗಳ ಮೂಲಕ ಸೇವೆ ಸಲ್ಲಿಸುತ್ತಿದೆ. ಪ್ರಧಾನವಾಗಿ ಗಾಂಧೀಶಾಂತಿ ಪ್ರತಿಷ್ಠಾನ ಯುವಕರನ್ನೂ. ಬುದ್ಧಿ ಜೀವಿಗಳನ್ನೂ ಸರ್ವೋದಯ ವಿಚಾರದ ದಿಕ್ಕಿನಲ್ಲಿ ಚಿಂತನ ಮಾಡಲು ಅವಕಾಶ ಕಲ್ಪಿಸುತ್ತಿದೆ.

ಇಂದು ರಾಷ್ಟ್ರದಲ್ಲಿ ಸುಮಾರು ಎರಡು ಸಾವಿರ ರಚನಾತ್ಮಕ ಸಂಸ್ಥೆಗಳಿವೆ ಕೆಲ ವಾರು ಕ್ಷೇತ್ರಗಳಲ್ಲಿ ಇವು ಉತ್ತಮವಾಗಿ ಕೆಲಸ ಮಾಡುತ್ತಿವೆ. ಈ ಎಲ್ಲ ಸಂಸ್ಥೆ ಗಳನ್ನೂ ಒಗ್ಗೂಡಿಸಿ ದೇಶದ ಮೇಲ್ಮೆಗಾಗಿ ಇವುಗಳಿಗೆ ಮಾರ್ಗ ಸೂಚಿ ನೀಡಲು 'ಸರ್ವ ಸೇವಾ ಸಂಘ' ರಚಿಸಲಾಯಿತು. ಆದರೆ ಇದು ಮಾರ್ಗದರ್ಶನ ನೀಡುವ ಬದಲು ಅದೇ ರಾಷ್ಟ್ರದಲ್ಲಿ ಕೆಲವು ವಿಶೇಷ ಕಾರ್ಯಕ್ರಮಗಳನ್ನು ನಡೆಸುವ ಸಂಸ್ಥೆಯಾಗಿ ಪರಿಣ ಮಿಸಿತು. ಇದರಿಂದ ರಾಷ್ಟ್ರದ ದೊಡ್ಡ ಸಂಸ್ಥೆಗಳು ತಮ್ಮ ಮಾರ್ಗಗಳಲ್ಲಿ ನಡೆಯಲಾ ರಂಭಿಸಿದವು. ಇದರಿಂದ ಎಲ್ಲ ಈ ಸಂಸ್ಥೆಗಳ ಸಂಚಾಲಕರು ಒಂದೆಡೆ ಸೇರಿ ಒಟ್ಟಿಗೆ ಕೆಲಸ ಮಾಡುವ ಬಗ್ಗೆ ಚಿಂತಿಸುವುದು ಇಂದು ಅತ್ಯಂತ ಆವಶ್ಯಕ.

29 ಮೇ 1981 ರಂದು ಶಿವಮೊಗ್ಗದಲ್ಲಿ 'ಸರ್ವೋದಯ ಸಮ್ಮೇಳನ'ವೊಂದು ನಡೆಯಿತು. ಗಾಂಧೀ ವಿಚಾರದಲ್ಲಿ ಅಪಾರಶ್ರದ್ಧೆ ಯುಳ್ಳವರು, ರಾಜಕೀಯ ವಿಚಾರ ಮಂಥನದಲ್ಲಿ ಪಳಗಿದ ಅನುಭವಶಾಲಿಗಳು ನುರಿತ ರಚನಾತ್ಮಕ ಕಾರ್ಯಕರ್ತರು ಸರ್ವೋದಯ ಕಾರ್ಯಕರ್ತರು ಅಲ್ಲಿ ಸೇರಿದ್ದರು. ವಯೋವೃದ್ಧ ಗಾಂಧೀವಾದಿ ರಚನಾತ್ಮಕ ಕಾರ್ಯಕರ್ತ ಶ್ರೀ ಅರುಣಾಚಲಂ ಅವರು ಸರ್ವೋದಯ ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದರು. ಸರ್ವೋದಯಕ್ಕೆ ಹೊಸ ತಿರುವು ಮತ್ತು ಹೊಸ ಚೈತನ್ಯ ಮೂಡುವಂತೆ ಮಾಡುವುದು, ಹೊಸ ಕಲ್ಪನೆ, ಹೊಸ ಕಾರ್ಯ ವಿಧಾನ ಆವಶ್ಯಕ ವೆಂದು ಒಮ್ಮತ ಅಭಿಪ್ರಾಯ ಅಲ್ಲಿ ಮೂಡಿ ಬಂದಿತು. ಜಗತ್ತಿನಲ್ಲಿ ಮಾನವ ಸಂಸ್ಕೃತಿ ಬೆಳಗಬೇಕಾದರೆ, ಸುಖಶಾಂತಿ ಮಾನವರಿಗೆ ಲಭಿಸಬೇಕಾದರೆ ಗಾಂಧೀ ತತ್ತ್ವಗಳ ಅನುಷ್ಠಾನದಿಂದ ಮಾತ್ರ ಸಾಧ್ಯ ಎಂದು ಘೋಷಿಸಲಾಯಿತು. ಈ ತತ್ತ್ವಗಳನ್ನು

ಪರಿಣಾಮಕಾರಿಯಾಗಿ ಅನುಷ್ಠಾನಕ್ಕೆ ತರಲು ನಿರ್ದಿಷ್ಟ ಆರ್ಥಿಕ, ಸಾಮಾಜಿಕ ಮತ್ತು ನೈತಿಕ ಕಾರ್ಯ ಕ್ರಮಗಳನ್ನು ರೂಪಿಸಿಕೊಳ್ಳಲು ಸಮ್ಮೇಳನ ಮಾರ್ಗದರ್ಶನ ನೀಡಿತು.

❋

ಒಟ್ಟಿನಲ್ಲಿ ಗಾಂಧೀಜಿ ಮತ್ತು ವಿನೋಬಾಜಿ ಇವರುಗಳ ನಾಯಕತ್ವದಲ್ಲಿ ಸರ್ವೋದಯ ಸಾಧಿಸುವ ಪ್ರಯತ್ನ ಜಗತ್ತಿನ ವಿಚಾರವಂತರ ಗಮನವನ್ನು ಬದುಕಿನ ನೈಜ ಮೌಲ್ಯಗಳ ಕಡೆಗೆ ಸೆಳೆದಿದೆ. ಆದರೂ ಭಾರತದಲ್ಲಿ ಈ ಸಾಹಸದ ಫಲಶ್ರುತಿ ಇಂದು ಕೆಳಗಿನ ಸ್ತರಕ್ಕೆ ಇಳಿದಿದೆ. ಜಾತಿ, ವರ್ಗ ಮತ್ತು ಮತಗಳ ವ್ಯತ್ಯಾಸ ಹೆಚ್ಚುತ್ತ ನಡೆದಿದೆ. ಮಾದಕ ವಸ್ತುಗಳ ಸೇವನೆ ಅಧಿಕವಾಗುತ್ತಿದೆ. ನಾಗರೀಕತೆಯ ಮೋಜಿನ ಹೆಸರಿನಲ್ಲಿ ಸ್ತ್ರೀ, ಪುರುಷನ ದಾಸಳಾಗುತ್ತಿದ್ದಾಳೆ. ಶಾಂತಿ ಸಹಕಾರಗಳು ದೂರವಾಗುತ್ತಿವೆ. ಪರಹಿತ ಭಾವನೆಗಿಂತ ಸ್ವಾರ್ಥ ಮೇಲ್ಮೈಯಾಗುತ್ತಿದೆ. ಶೋಷಣೆಯ ಮೂಲಗಳು—ಪ್ರತ್ಯಕ್ಷ—ಪರೋಕ್ಷ—ಎರಡೂ ಅಗಣಿತವಾಗುತ್ತಿವೆ. ಅಧಿಕಾರ—ಪ್ರಭುತ್ವ ದಬ್ಬಾಳಿಕೆಯತ್ತ ಸಾಗುತ್ತಿವೆ. ಸಂಪತ್ತು, ಅಧಿಕಾರ ಸೈನ್ಯ ಇವು ಕೇಂದ್ರೀಕರಣವಾಗುತ್ತಿವೆ.

ರಾಷ್ಟ್ರಭಕ್ತಿಯ ಅಭಾವ ಇಂದು ಎಲ್ಲೆಡೆ ಎದ್ದು ಕಾಣುತ್ತಿದೆ. ಸ್ವರಾಜ್ಯಕ್ಕೆ ಪೂರ್ವ ಜನರಲ್ಲಿದ್ದ ರಾಷ್ಟ್ರಭಕ್ತಿ ಇಂದು ಕ್ರಮೇಣ ಅದೃಶ್ಯವಾಗುತ್ತಿದೆ. ಜನರ ದಿನನಿತ್ಯದ ನಡವಳಿಕೆಗಳಲ್ಲಿ ರಾಷ್ಟ್ರೀಯ ಭಾವನೆ ಕಡಿಮೆಯಾಗುತ್ತಿದೆ. ರಾಷ್ಟ್ರದ ಹಿತಕ್ಕಿಂತ ತಮ್ಮ ಜಾತಿಯ ಅಥವಾ ಧರ್ಮದ ಹಿತವೇ ಪ್ರಾಮುಖ್ಯವೆಂಬ ಭಾವನೆ ಬೆಳೆಯುತ್ತಿದೆ. ಇದಕ್ಕೆಲ್ಲ ಕಾರಣ ಸರಿಯಾದ ನಾಯಕತ್ವದ ಅಭಾವ. "ಅಧಿಕಾರ ಸ್ಥಾನದಲ್ಲಿರುವ ರಾಜಕೀಯ ಮುಖಂಡರು ಚಾರಿತ್ರ್ಯವಂತರಾಗಿ, ಸತ್ಯಸಂಧತೆಯಿಂದ ಕೆಲಸ ಮಾಡಿದರೆ ಜನತೆಗೆ ಮಾರ್ಗದರ್ಶನ ಮಾಡುವ, ಬುದ್ಧಿ ಹೇಳುವ ನೈತಿಕ ಹಕ್ಕು ಲಭಿಸುತ್ತದೆ" ಎಂದು ಬಾಪೂಜೀ ಹೇಳಿದ್ದರು. ಆದರೆ ಅಧಿಕಾರಾರೂಢ ಜನರು ನೈತಿಕ ಅಧಿಕಾರದಿಂದ ಜನತೆಯ ಮಾರ್ಗದರ್ಶನ ನೀಡಲು ವಿಫಲರಾಗಿರುವುದು ದುರದೃಷ್ಟಕರ.

ಈ ವಿಷಮ ಸನ್ನಿವೇಶದಲ್ಲಿ 'ಸರ್ವೋದಯ' ಅನಂತ ದೂರದಲ್ಲಿ ಮಿಣುಗುಟ್ಟುತ್ತಿರುವ ಸಣ್ಣ ಬೆಳಕಿನಂತೆ ಕಂಡು ಬರುತ್ತಿದೆ. ಆದರೂ ಶೋಷಣೆ, ಅಧಿಕಾರವನ್ನೇ ಸರ್ವಸ್ವವೆಂದು ನಂಬಿರುವ ರಾಜಕಾರಣ ಇವುಗಳಿಂದ ಮುಕ್ತವಾದ ಮತ್ತು ಎಲ್ಲ ಮಾನವೀಯ ಸಂಬಂಧಗಳಲ್ಲಿಯೂ ನೈತಿಕ ಹಾಗೂ ಆಧ್ಯಾತ್ಮಿಕ ಮೌಲ್ಯಗಳಿಂದ ಕೂಡಿದ ಮತ್ತು ಗಾಂಧೀಜಿಯ ಅಹಿಂಸಕ, ಸೃಷ್ಟ್ಯಾತ್ಮಕ ಕ್ರಾಂತಿಯ ಸಿದ್ಧಾಂತವನ್ನು ಎತ್ತಿ ಹಿಡಿದು, ಎಂದಿಗಿಂತ ಉತ್ತಮವಾದ ಭಾರತವನ್ನೂ ಆ ಮೂಲಕ ಉತ್ತಮವಾದ ಜಗತ್ತನ್ನೂ ಸೃಷ್ಟಿಸಲು ನೆರವಾಗುವ ಮಹಾ ಆಂದೋಲನ ಮುಂದಿನ ಭವಿಷ್ಯದಲ್ಲಿ ಮೂಡಿ ಬಂದೀತು. ಅಂಥ ಕಾಲ, ಕರೆ ಬಂದಾಗ ಕರ್ನಾಟಕ ಕಾರ್ಯೋನ್ಮುಖವಾಗಲು ಎಂದಿಗೂ ಮೀನ–ಮೇಷ ನೋಡದು.

ಪಥದರ್ಶನ

ಕರ್ನಾಟಕದಲ್ಲಿ

# ಲೋಕಸೇವಕ ಸಂಘ – ಅದರ ಅವಶ್ಯಕತೆ

ಕೆ. ಸಚ್ಚಿದಾನಂದಯ್ಯ

ಮಹಾತ್ಮಗಾಂಧೀಜಿ ಈ ಯುಗದ ಸೀಮಾ ಪುರುಷರು. ಭಾರತಕ್ಕೆ ಮಾತ್ರವಲ್ಲ ಜಗತ್ತಿನ ಅಂಧಕಾರಮಯ ರಾಷ್ಟ್ರಗಳಿಗೆಲ್ಲ ಸ್ವಾತಂತ್ರ್ಯ ಜ್ಯೋತಿಯನ್ನುರಿಸಲು ಸ್ಫೂರ್ತಿಯ ಸೆಲೆಯಾದವರು. ಚೈತನ್ಯಸ್ವರೂಪರಾದವರು. ರಾಜಕೀಯವಾಗಿಯಾಗಲಿ ಸಾಮಾಜಿಕವಾಗಿಯಾಗಲಿ ಯಾವ ರಾಷ್ಟ್ರವೂ ಬೇರೆಯ ಆಧಿಪತ್ಯವನ್ನು, ಶೋಷಣೆಯನ್ನು ಸಹಿಸಲಾರದು ಎಂಬ ಸತ್ಯವನ್ನು ಕಂಡುಕೊಂಡವರು ಮಾತ್ರವಲ್ಲ ಲೋಕಕ್ಕೆ ವರು. ಶೋಷಿತ–ಶೋಷಕ ವರ್ಗ ಬಹುಕಾಲ ಉಳಿಯಲಾರದು ಎಂದು ಸಾರಿದವರು. ಕಾಣಿಸಿದ ಕಾಯಕವೆ ಕಲ್ಯಾಣಕ್ಕೆ ಕಾರಣವೆಂದು ತೋರಿಕೊಟ್ಟವರು. ಅಹಿಂಸೆಯೂ ಅಸ್ತ್ರವಾಗಬಲ್ಲುದು ಎಂಬುದನ್ನು ನಡೆದು ತೋರಿದವರು. ಆದುದರಿಂದಲೇ ಅವರು ಮಹಾತ್ಮರಾದರು, ದ್ರಷ್ಟಾರರಾದರು.

ಭಾರತಕ್ಕೆ ರಾಜಕೀಯ ಸ್ವಾತಂತ್ರ್ಯವನ್ನೊಂದನ್ನೇ ತಂದುಕೊಡುವುದು ಗಾಂಧೀಜಿಯ ಧ್ಯೇಯವಾಗಿರಲಿಲ್ಲ. ಬ್ರಿಟಿಶರನ್ನು ಭಾರತದಿಂದ ತೊಲಗಿಸುವುದು ಮಾತ್ರ ಅವರ ಗುರಿಯಾಗಿರಲಿಲ್ಲ. ರಾಜಕೀಯ ಸ್ವಾತಂತ್ರ್ಯವು ಆರ್ಥಿಕ, ಸಾಮಾಜಿಕ ಸಮಗ್ರ ಅಭಿವೃದ್ಧಿಗೆ ಒಂದು ಸಾಧನಮಾತ್ರ ಎಂದವರು ನಂಬಿದ್ದರು. ಅದರ ಮೂಲಕ ರಾಷ್ಟ್ರದ ಸಮಸ್ಯೆಗಳನ್ನು ಬಗೆಹರಿಸಿ ಉನ್ನತಿಯನ್ನು ಸಾಧಿಸಬಹುದೆಂದು ಅವರು ಯೋಚಿಸಿದರು. ಚಾಣಾಕ್ಷರಾದ ಗಾಂಧೀಜಿ, ಈ 'ಸಾಧನ'ದ ಸಂಪಾದನೆ ಹಾಗೂ ಅದರ ಬಳಕೆ ಈ ಎರಡರಲ್ಲಿ 'ತಂತ್ರ' ಬೇರೆಯೇ ಇದೆಯೆಂಬುದನ್ನು ಸ್ಪಷ್ಟವಾಗಿ ತಿಳಿದಿದ್ದರು (ಖಡ್ಗವನ್ನು ಇನ್ನೊಬ್ಬರ ಕೈಯಿಂದ ಕಿತ್ತುಕೊಳ್ಳಲಿರುವ ತಂತ್ರವೇ ಬೇರೆ. ಅದನ್ನು ಸರಿಯಾಗಿ ಉಪಯೋಗಿಸುವ ತಂತ್ರವೇ ಬೇರೆ.) ಸ್ವಾತಂತ್ರ್ಯವನ್ನು ಗಳಿಸುವಲ್ಲಿ ಅನುಸರಿಸಬೇಕಾದ ರೀತಿಯೇ ಬೇರೆ, ಅದನ್ನು ಸಾರ್ಥಕಗೊಳಿಸುವ ಪರಿಯೇ ಬೇರೆ ಎಂಬ ಸಹಜ ದೂರಾಲೋಚನೆ ಅವರಲ್ಲಿತ್ತು. ಆದುದರಿಂದಲೇ ಅವರು ಸ್ವಾತಂತ್ರ್ಯ ಪೂರ್ವದಲ್ಲಿ ಕೆಲಸಮಾಡಿದ ರಾಷ್ಟ್ರೀಯ ಕಾಂಗ್ರೆಸ್ಸು ಸ್ವಾತಂತ್ರ್ಯ ಸಿಕ್ಕಿದೊಡನೆಯೇ ವಿಸರ್ಜಿಸಲ್ಪಡಬೇಕು ಎಂದು ಘೋಷಿಸಿದರು. ಏಕೆಂದರೆ ಅವರ ಉದ್ದೇಶ 'ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಸುವುದು,' ಅದು ತುಳಿದ ದಾರಿ ಪರದೇಶೀಯರ ಆಡಳಿತವನ್ನು ಕಿತ್ತೊಗೆಯುವುದು, ಅದರ ಗುರಿ ರಾಜಕೀಯವಾಗಿ (ಮುಖ್ಯವಾಗಿ) ಸ್ವಾತಂತ್ರ್ಯವನ್ನು ನಮ್ಮ ಕೈಗೆತ್ತಿಕೊಳ್ಳುವುದು. ಆಡಳಿತವನ್ನು ವಹಿಸಿಕೊಳ್ಳುವುದು. ಈ ಎಲ್ಲ ಧ್ಯೇಯಗಳೂ 1947ನೇ ಆಗಸ್ಟ್ 15ರಂದು ಪೂರ್ಣವಾದುವು. ಎಂದರೆ

ಕಾಂಗ್ರೆಸ್ಸು ತನ್ನ ಗುರಿ ಮುಟ್ಟಿದಂತಾಯಿತು. ಮುಂದಿನ ಕೆಲಸ ಅದರ ಹೊಣೆಯಲ್ಲ, ಗಾಂಧೀಜಿಯವರ ಸ್ಪಷ್ಟ ಅಭಿಪ್ರಾಯವಿದು.

ಸ್ವಾತಂತ್ರ್ಯಾನಂತರದ ಭಾರತದ ಶ್ರೇಯಸ್ಸಿಗಾಗಿ ಗಾಂಧೀಜಿಯವರು ಯೋಚಿಸಿದ ಸಂಸ್ಥೆ "ಲೋಕಸೇವಕ ಸಂಘ". ಕಾಂಗ್ರೆಸ್ಸು ಗಳಿಸಿಕೊಟ್ಟ 'ಸ್ವಾತಂತ್ರ್ಯ'ವನ್ನು ಉಳಿಸಿ ಬೆಳೆಸುವುದಕ್ಕಾಗಿ ಈ ಸಂಘ ಕಾರ್ಯ ಪ್ರವೃತ್ತವಾಗಬೇಕೆಂದು ಗಾಂಧೀಜಿ ಬಯಸಿದರು.

ಹಳ್ಳಿಗಳ ದೇಶವಾದ ಭಾರತದ ಏಳಿಗೆ ಹಳ್ಳಿಯಿಂದ ಹಾಗೂ ಹಳ್ಳಿಯ ಮೂಲಕವೇ ಆಗಬೇಕೆಂಬ ಅಚಲ ವಿಶ್ವಾಸವನ್ನು ಹೊದಿದ್ದ ಗಾಂಧೀಜಿಯವರು 'ಲೋಕ ಸೇವಕ ಸಂಘ'ದಲ್ಲಿ ಹಳ್ಳಿಯನ್ನೇ ರಾಷ್ಟ್ರಾಭಿವೃದ್ಧಿಗೆ ತಳಪಾಯವೆಂದು ಭಾವಿಸಿದ್ದರು.[1]

"ನನ್ನ ಖಚಿತ ಅಭಿಪ್ರಾಯವಿದು. ಭಾರತವು ನಿಜವಾದ ಸ್ವಾತಂತ್ರ್ಯವನ್ನು ಪಡೆಯಬೇಕಾದರೆ (ಭಾರತದ ಮೂಲಕ ಜಗತ್ತು ಕೂಡ) ಇಂದಲ್ಲ ನಾಳೆ ಒಂದು ವಿಷಯವನ್ನು ಗುರುತಿಸಬೇಕು. ಅದೆಂದರೆ ಜನರು ಹಳ್ಳಿಗಳಲ್ಲಿ ಗುಡಿಸಲುಗಳಲ್ಲಿ ವಾಸಿಸಬೇಕಾಗುತ್ತದೆ. ನಗರಗಳಲ್ಲಲ್ಲ-ಅರಮನೆಗಳಲ್ಲಲ್ಲ."

"ನಾನು ಹಳ್ಳಿಯ ಬಗ್ಗೆ ಕನಸು ಕಾಣುತ್ತಿದ್ದೇನೆ. ಆ ಕನಸಿನ ಹಳ್ಳಿ ನನ್ನ ಚಿತ್ತದಲ್ಲಿ ಉಳಿದಿದೆ.— ನನ್ನ ಆದರ್ಶಗ್ರಾಮವು ಬುದ್ಧಿವಂತ ಮಾನವರಿಂದ ಕೂಡಿದ್ದು ಅವರು ಪ್ರಾಣಿಗಳಂತೆ ಅಜ್ಞಾನ ಅಂಧಕಾರಗಳಲ್ಲಿ ಬಾಳಲಾರರು. ಅಲ್ಲಿಯ ಗಂಡು ಹೆಣ್ಣು ಸ್ವತಂತ್ರರು."

"ನಾಗರಿಕತೆಯಲ್ಲಿ ಅನಿವಾರ್ಯವಾದ ಸೈತಾನ ಶಕ್ತಿಯ ಬೀಜ ಬಿತ್ತಲ್ಪಟ್ಟು ಅದು ಬೆಳೆದಿದೆ. ಖಂಡಿತವಾಗಿ ಜಗತ್ತು ಅಥವಾ ಜಗತ್ತಿನ ಬಹುಭಾಗ ಆತ್ಮಹತ್ಯ ಮಾಡಿ ಕೊಳ್ಳಬೇಕಾಗುತ್ತದೆ."

ಗಾಂಧೀಜಿಯವರ ಈ ಅಭಿಪ್ರಾಯಗಳು 'ಲೋಕಸೇವಕ ಸಂಘ'ದ ಧ್ಯೇಯ ಧೋರಣೆಗಳನ್ನು ರೂಪಿಸಿವೆ. ಬೆಳೆಯುತ್ತಿರುವ ನಾಗರಿಕತೆ ಅಥವಾ ನಾಗರೀಕರಣದಿಂದಾಗಿ ಭಾರತವು ಶೋಷಕ-ಶೋಷಿತರ ಗುಂಪನ್ನು ಬೆಳೆಸುವ ಬಂಡವಾಳಶಾಹಿ ರಾಜ್ಯವಾಗಬಹುದೆಂಬ ಹೆದರಿಕೆ ಗಾಂಧೀಜಿಗೆ ಸ್ವಾತಂತ್ರ್ಯ ಪೂರ್ವದಲ್ಲೇ ಇತ್ತೆಂದು ತೋರುತ್ತದೆ. ಸ್ವಾತಂತ್ರ್ಯಾನಂತರದ ಭಾರತದ ರಾಜಕೀಯ ನಡಿಗೆಯನ್ನು ಕೆಲಸಮಯದಲ್ಲೇ ಗುರುತಿಸಿದ ಗಾಂಧೀಜಿ 'ಲೋಕ ಸೇವಕ ಸಂಘ'ದ ರೂಪರೇಖೆಯನ್ನು ದೇಶದ ಮುಂದಿರಿಸಿದರು. 1942ರಿಂದಲೇ ಅವರ ಚಿತ್ತದಲ್ಲಿ ರೂಪಗೊಳ್ಳುತ್ತಿದ್ದ ಅದು ಅವರ ಮರಣದ ಹಿಂದಿನ ದಿನ (1948ರ ಜನವರಿ 29) ಲಿಖಿತರೂಪವಾಗಿ ಹೊರ ಹೊಮ್ಮಿತು. ಗಾಂಧೀಜಿಯಲ್ಲಿ ಸುಪ್ತವಾಗಿದ್ದ ಸಾಮಾಜಿಕ ಕ್ರಾಂತಿಯ ಚೇತನ ಆರ್ಥಿಕ

---

1. ಚಂಪಾರಣದ ನೀಲಿ ಬೆಳೆಗಾರರ ಮುಷ್ಕರ ಚಳುವಳಿ ಗಾಂಧೀಜಿಯವರಿಗೆ ಹಳ್ಳಿಯ ಸಮಸ್ಯೆಯನ್ನು ಮನದಟ್ಟು ಮಾಡಿತು. — ಕೆ. ವಿ. ಸಾರಂಗ

ತಜ್ಞನ ಪರಿಣತಿ, ಹಾಗೂ ಪರಿಪಕ್ವ ರಾಜಕೀಯ ಮುತ್ಸದ್ದಿತನ ಮುಪ್ಪುರಿಗೊಂಡು ಈ ಸಂಘದ ಚಿತ್ರ ಅವರಲ್ಲಿ ಪಡಿಮೂಡಿತೆಂದು ತೋರುತ್ತದೆ. (ದುರ್ದೈವ ವಶಾತ್ ಅದನ್ನು ಅರ್ಥೈಸಬೇಕಾದವರು ಅರ್ಥೈಸಲಿಲ್ಲ, ಅರ್ಥೈಸಿದವರು ಆಡಳಿತ ಸೂತ್ರವನ್ನು ಪಡೆಯಲಿಲ್ಲ.)

"ಲೋಕಸೇವಕ ಸಂಘ"ವು ಗಾಂಧೀಜಿಯ ಆಶಯದಂತೆ ಒಂದು ರಾಜಕೀಯ ಸಂಸ್ಥೆಯಲ್ಲ, ಅದೊಂದು ರಾಷ್ಟ್ರೀಯ ಕಾರ್ಯಕ್ರಮ, ದೇಶದ ಸರ್ವತೋಮುಖ ಅಭಿವೃದ್ಧಿಯ ನೀಲಿನಕಾಶೆ. ಯಾವ ದೇಶದ ಅನುಕರಣೆಯೂ ಅಲ್ಲದ ಶುದ್ಧ ಭಾರತೀಯ ಪ್ರಜಾಪ್ರಭುತ್ವದ ಮಾದರಿ.[1]

ಅದರ ಮುಖ್ಯ ಉದ್ದೇಶ :—

೧. ಆರ್ಥಿಕ ಸಮಾನತೆ

೨. ಸಮಾನ ಹಾಗೂ ಸರ್ವತೋಮುಖ ಅಭಿವೃದ್ಧಿ.

೩. ನೈತಿಕ ಮೌಲ್ಯದಿಂದ ಕೂಡಿದ ಶುದ್ಧರಾಜಕೀಯ ಮತ್ತು ಪರಿಶುದ್ಧ ಆಡಳಿತ

ಹಳ್ಳಿಗೊಂದು ಪಂಚಾಯಿತಿ, ಎರಡು ಹಳ್ಳಿಗಳ ಪಂಚಾಯತಿಯಿಂದ ಆರಿಸಲ್ಪಟ್ಟ ಮೊದಲ ಹಂತದ ನಾಯಕ, ಅಂತಹ ಐವತ್ತು ನಾಯಕರಿಂದ ಆರಿಸಲ್ಪಟ್ಟ ಎರಡನೆ ಹಂತದ ನಾಯಕ– ಹೀಗೆ ಸಾಗಿದ ನಾಯಕವರ್ಗದಿಂದ ಸರಕಾರದ ರಚನೆ, ಗಾಂಧೀಜಿ ಕಂಡ ಪ್ರಜಾಪ್ರಭುತ್ವ ಮಾದರಿ. ಆಯಾ ನಾಯಕರಿಗೂ ತಮ್ಮ ಕ್ಷೇತ್ರದ ಪೂರ್ಣಹೊಣೆಗಾರಿಕೆ, ತಪ್ಪಿದಲ್ಲಿ ಹಿಂದೆಕರೆದುಕೊಳ್ಳುವ ಅಧಿಕಾರ ಪ್ರಜೆಗಳಿಗೆ. ನಾಯಕನಾಗಬೇಕಾದವನಿಗೂ ಒಂದು ನೀತಿಸಂಹಿತೆ– ಆಚಾರ ಸಂಹಿತೆ. ಆಡಳಿತದಲ್ಲಿ ಅಧಿಕಾರದಲ್ಲಿ ಪಾವಿತ್ರ್ಯ– ನಿಸ್ಪೃಹತೆ.[2] ರಾಮರಾಜ್ಯದ ಕನಸು ನೆನಸಾಗುವುದಕ್ಕೆ ಮಾರ್ಗಸೂಚಿ ಇದು.

ಹಳ್ಳಿಗಳಲ್ಲಿ ಕೈಕಸುಬು ಹೆಚ್ಚಬೇಕು, ಪ್ರತಿಯೊಬ್ಬವ್ಯಕ್ತಿಯೂ ಒಂದಲ್ಲ ಒಂದು ಕಸುಬಿನಲ್ಲಿ ನಿರತನಾಗಿರಬೇಕು. ಅವನ ಜೀವನ ಪರಿಪೋಷಣೆಗೆ ತಕ್ಕ ಸಂಪಾದನೆ ಆಗಲೇಬೇಕು. ಮಾನವ ಶಕ್ತಿಯ ಸದುಪಯೋಗವಾಗಬೇಕು 'ಚರಕ' ಎಂಬುದು ಈ ಗ್ರಾಮ ಕೈಗಾರಿಕೆಯ ಸಂಕೇತ– ಸ್ಫೂರ್ತಿ.

ಜಾತಿ ಮತಗಳ ಅಂತರ ಎಲ್ಲಿಯೂ ತಲೆ ಹಾಕಬಾರದು. ನಾಯಕರಾದವರು ಈ

---

1. ಉತ್ತರಮೇರು ಶಾಸನದಲ್ಲಿ 'ಗ್ರಾಮಸಂಘ'ದ ವಿವರಣೆಯಿದೆ. ಗಾಂಧೀಜಿಯವರ ಕಲ್ಪನೆಯ ಲೋಕಸೇವಕ ಸಂಘದ ಮಾದರಿಯೊಂದು ಅಲ್ಲೇ ನಮಗೆ ಕಾಣುತ್ತದೆ.

2. ಇಂದಿನ ನಮ್ಮನಾಯಕರಲ್ಲಿ ಈ ಸಂಹಿತೆಯನ್ನು ಕಾಣ ಬಯಸುವುದು ಹುಚ್ಚುತನವಾದೀತು. ಹಾಗಾಗಿಯೇ ರಾಜಕೀಯ ಇಂದು ಕಲುಷಿತವಾಗಿದೆ. ವಿಷಚಕ್ರದಲ್ಲಿ ಸಿಕ್ಕಿಹೋಗಿದೆ. ಗಾಂಧೀಜಿ (ಪರೋಕ್ಷವಾಗಿ) ವಿರೋಧಿಸಿದ ವಯಸ್ಕಮತದಾನ ಪದ್ಧತಿಯೂ ಇದಕ್ಕೆ ಕಾರಣ.

ಬಗ್ಗೆ ಜಾಗರೂಕತೆ ವಹಿಸಬೇಕು. ಎಲ್ಲ ಹಂತದಲ್ಲೂ– ಎಲ್ಲ ಕ್ಷೇತ್ರದಲ್ಲೂ ಸಮಾನತೆ ಸ್ಪಷ್ಟವಾಗಿ ಕಂಗೊಳಿಸಬೇಕು.

ಹೀಗೆ ವಿಶಾಲವಾದ ಗ್ರಾಮಾಧಾರಿತವಾದ ಸಮಾಜ ಆಡಳಿತವನ್ನು ಸಾರುವ ಲೋಕಸೇವಕ ಸಂಘವು ದೂರದೃಷ್ಟಿಯುಳ್ಳದ್ದೆಂಬುದು ಸ್ಪಷ್ಟ. ಇಂದು ಅದರ ಮಹತ್ವ ಇನ್ನಷ್ಟು ಹೆಚ್ಚು ಹೆಚ್ಚಾಗಿ ಕಾಣತೊಡಗಿದೆ.

ರಷ್ಯಾದಲ್ಲಿ ಲೆನಿನ್– ಚೀನಾದಲ್ಲಿ ಮಾವೋ ಯಾವ ಸುಧಾರಣೆಯನ್ನು ಕ್ರಾಂತಿಯನ್ನು ತಂದಿದ್ದರೋ ಅದೇ ಸುಧಾರಣೆ ಕ್ರಾಂತಿ ಗಾಂಧೀಜಿಯ ಲೋಕ ಸೇವಕದಿಂದ ಸಾಧ್ಯವಾಗುತ್ತಿತ್ತು.[1] ಅದನ್ನು ಅಂದೇ ಕಂಡವರು ಕಡಿಮೆ. ಆದರೆ ಇಂದು ಅದರ ಬಗ್ಗೆ ಚರ್ಚಿಸುವ ಅವಕಾಶ ಬಂದಿದೆ, ಅಗತ್ಯವೂ ಬಂದಿದೆ. ಕರ್ನಾಟಕವೂ ಈ ಅವಶ್ಯಕತೆಯನ್ನು ಮನಗಾಣದಿಲ್ಲ. ಹಾಗೆಂದೇ ಕರ್ನಾಟಕದಲ್ಲಿ ಮಂಡ್ಯದಲ್ಲಿ 1980ರ ಅಕ್ಟೋಬರ್ 2ರಂದು ಶ್ರೀ ಕೆ. ವಿ. ಶಂಕರಗೌಡರಿಂದ "ಕರ್ನಾಟಕ ಲೋಕಸೇವಕ ಸಂಘ" ಸ್ಥಾಪಿತವಾಯಿತು.

ಸ್ವಾತಂತ್ರ್ಯ ಬಂದ ನಾಲ್ಕನೆ ದಶಕದಲ್ಲಿರುವ ಭಾರತವು ಸಮಸ್ಯೆಗಳ ಬೇಗುದಿಯಿಂದ ಮುಕ್ತವಾಗಲಿಲ್ಲ ಮಾತ್ರವಲ್ಲ ಸಮಸ್ಯೆಗಳ ಆಗರವಾಗಿ ಪರಿಣಮಿಸಿದೆ. ನಗರಗಳಲ್ಲಿ ಬೃಹತ್ ಕಾರ್ಖಾನೆಗಳು ತಲೆಯೆತ್ತುತ್ತಿವೆ (ಜೊತೆಗೆ ಕಾರ್ಮಿಕ ಅಶಾಂತಿಯೂ ಹುಟ್ಟುತ್ತಿವೆ) ಸಮಾಜವಾದವೆಂಬ ಘೋಷಣೆಯಿದ್ದರೂ ಬಂಡವಾಳ ಶಾಹಿಗಳ ಕೈಯ ಹಿಡಿತದಿಂದ ವಿಮೋಚನೆ ದೊರೆಯಲಿಲ್ಲ. (ಇಂದಿನ ಚುನಾವಣೆಗಳು ಈ ಬಂಡವಾಳ ಶಾಹಿಗಳ ಬಿಗಿಮುಷ್ಟಿಯಲ್ಲಿವೆಯೆಂಬುದು ಯಾರಿಗಾದರೂ ಸ್ಪಷ್ಟವಾಗದುಳಿಯದು) ಹಳ್ಳಿಗಳು ಹೆಚ್ಚು ಹಾಳಾಗುತ್ತಿವೆ. ಬಡತನದ ರೇಖೆಯಿಂದ ಕೆಳಗಿರುವ ಜನರ ಸಂಖ್ಯೆಯೇ ಹೆಚ್ಚುತ್ತಿದೆ. ಆರ್ಥಿಕ ಉಬ್ಬರ ಪ್ರಬಲವಾಗುತ್ತಿದೆ. "ಸರ್ವೋದಯ" ಘೋಷಣೆಯಾಗಿದೆ. ಸರ್ವಸಮತೆ ಗಗನ ಕುಸುಮವಾಗಿದೆ.

ಈ ಸಂದರ್ಭದಲ್ಲಿ ಲೋಕ ಸೇವಕ ಸಂಘದ ಅವಶ್ಯಕತೆ ಹೆಚ್ಚಾಗಿದೆ ಎಂದರೆ. ತಪ್ಪಾಗದು. ಆದರೆ ಅದಕ್ಕೆ ವಿಮುಖವಾಗಿ ನಾವಿಂದು ಬಲುದೂರ ಸಾಗಿದ್ದೇವೆ ಎನ್ನದೆ ವಿಧಿಯಿಲ್ಲ. ಮೂಲತಃ ಮುಂಚೂಣಿಯಲ್ಲಿ ಸಾಗಬೇಕಾದ ನಾಯಕತ್ವದ ಆಯ್ಕೆಯಲ್ಲಿಯೇ ಈ ವಿಮುಖತೆ ಸ್ಪಷ್ಟವಾಗಿದೆ. ಚುನಾವಣೆಯ ಪಾವಿತ್ರ್ಯ, ಮುಂದಾಳುಗಳ ನಿಸ್ಪೃಹತೆ– ನಿಸ್ವಾರ್ಥ ಪ್ರಶ್ನಾರ್ಹವಾಗಿದೆ. ಲೋಕ ಸೇವಕ ಸಂಘದ ಉದ್ದೇಶಿತ ಮಾದರಿಯ ನಾಯಕತ್ವದಲ್ಲಿ 50 ಪ್ರತಿಶತದತ್ತವಾದರೂ ಇದನ್ನು ತಿರುಗಿಸಬೇಕಾದರೆ ಶತಪ್ರಯತ್ನವೇ ನಡೆಯಬೇಕೇನೋ ಎನ್ನಿಸುತ್ತದೆ. ಆದರೆ

---

1. ಚೀನಾದಲ್ಲಿರುವ ಕಮ್ಯೂನ್ ಮುಂತಾದ ಘಟಕಗಳು ಲೋಕಸೇವಕ ಸಂಘದ ಮಾದರಿಯೇ ಎಂದರೆ ತಪ್ಪಾಗದು. ಗಾಂಧೀಜಿಯ ಕಲ್ಪನೆಯನ್ನು ಚೀನಾ ಕಾರ್ಯರೂಪಕ್ಕಿಳಿಸಿತೆಂದು ಕಾಣುತ್ತದೆ ಅದರ ಪ್ರಗತಿಯ ಮಾರ್ಗವನ್ನು ಕಂಡಾಗ.

ದೇಶದ ಅಭ್ಯುದಯದ ದೃಷ್ಟಿಯಿಂದ ಯುವಜನತೆಯಾದರೂ ಗಾಂಧೀಜಿಯ ಈ ಉದ್ದೇಶವನ್ನು ಅರ್ಥಮಾಡಿಕೊಳ್ಳಲೇಬೇಕು. ಲೋಕ ಸೇವಕ ಸಂಘದ ಮಾದರಿಯ (ಸುಧಾರಿತವಾದರೂ ಸರಿ) ಪ್ರಜಾಪ್ರಭುತ್ವಕ್ಕೆ ಗ್ರಾಮಾಧಾರಿತ ಆಡಳಿತ ಶೃಂಖಲೆಗೆ[1] ದೇಶ ಒಳಪಡುವಂತೆ ಮಾಡುವುದು ಸೂಕ್ತವೆನಿಸುತ್ತದೆ.

ಹಳ್ಳಿಗಳ ಆರ್ಥಿಕ ಪುನಶ್ಚೇತನವೂ ಲೋಕಸೇವಕ ಸಂಘದ ಉದ್ದೇಶವಷ್ಟೆ. ಅದೂ ಇಂದು ಆಗಬೇಕಾಗಿದೆ. ವೈಜ್ಞಾನಿಕವಾಗಿ ಸುಧಾರಣೆಗೊಂಡ ಗ್ರಾಮ ಕೈಗಾರಿಕೆಗಳು, ಚಿಕ್ಕಪ್ರಮಾಣದ ಕೈಗಾರಿಕಾ ಘಟಕಗಳು, ಲಭ್ಯ ಕಚ್ಚಾವಸ್ತುಗಳ ಆಧಾರದ ಸಣ್ಣ ಕೈಗಾರಿಕೆಗಳು, ಹಳ್ಳಿಯಲ್ಲಿ ಮೂಡಿಕೊಂಡು ವೈಜ್ಞಾನಿಕ ಪ್ರಯೋಜನ ಹಾಗೂ ಮಾನವ ಶಕ್ತಿಯ ಸದುಪಯೋಗಗಳೆರಡೂ ಸಮತೋಲನಗೊಂಡು ವ್ಯಷ್ಟಿ ಹಾಗೂ ಸಮಷ್ಟಿ ಏಳಿಗೆಯಾಗುವುದರಿಂದ ಮಾತ್ರ ಹಳ್ಳಿಯ, ದೇಶದ ಆರ್ಥಿಕ ಸ್ಥಿತಿಯೂ ಸಮತೆಯತ್ತ ಸಾಗಬಹುದು,

ಹಳ್ಳಿಯ ಪ್ರತಿವ್ಯಕ್ತಿಗೂ ಶಿಕ್ಷಣ. ಅದು ಕೇವಲ ಕಾರಕೂನ ಕಾರ್ಖಾನೆಯ ಉತ್ಪನ್ನವಲ್ಲ ಅಥವಾ ಜುಟ್ಟಿಗೆ ಮಲ್ಲಿಗೆ ತೊಡಿಸುವ ಕಾರ್ಯಕ್ರಮವಲ್ಲ. ತಮ್ಮ ಹಕ್ಕು ಬಾಧ್ಯತೆಗಳ ಅರಿವಿಗಾಗಿ ಸಾಮಾಜಿಕ ಅಧ್ಯಯನ. ವೈಚಾರಿಕತೆಯ ಮನೋಭಾವಕ್ಕಾಗಿ ವೈಜ್ಞಾನಿಕ ವಿಷಯ ಜ್ಞಾನ– ಸಂತೋಷಕ್ಕಾಗಿ ಸಾಹಿತ್ಯ ಇವೇ ಮುಖ್ಯವಲ್ಲ, ಉತ್ತಮ ಜೀವನಕ್ಕಾಗಿ ಜೀವನೋಪಾಯದ ವಿಷಯ ಶಿಕ್ಷಣದ ಅಗತ್ಯ. ನಿರುದ್ಯೋಗಿಗಳನ್ನು ಸೃಷ್ಟಿಸುವ ಶಿಕ್ಷಣಕ್ಕಿಂತ ಸ್ವಯಂ ಉದ್ಯೋಗದ ಭರವಸೆಯುಳ್ಳ ಶಿಕ್ಷಣ ಇಂದಿನ ಅವಶ್ಯಕ. ಸಾಮಾಜಿಕ ಸಮತೆ ಆರ್ಥಿಕ ಸಮತೆಗಳೆರಡಕ್ಕೂ ಶಿಕ್ಷಣವೇ ಸರಿಯಾದ ಸಾಧನ. ಆದ್ದರಿಂದ ಇಂತಹ ಶಿಕ್ಷಣವೇ ಇಂದಿನ ಬಯಕೆಯಾಗಬೇಕಾಗಿದೆ.

ಈ ದೃಷ್ಟಿಯಿಂದ ಲೋಕಸೇವಕ ಸಂಘ ಇಂದು ಪ್ರಬಲ ಶಕ್ತಿಯಾಗಬೇಕು. ಬರಿಯ ಸ್ಥಾಪನೆಯಿಂದ ಕಾರ್ಯವಾಗದು. ದುಡಿಯುವ, ಅರ್ಥೈಸಿ ಆಚರಿಸುವ ಕೈಗಳ ಸಂಖ್ಯೆ ಹೆಚ್ಚಬೇಕು. ಯುವಪೀಳಿಗೆ ಈ ಬಗ್ಗೆ ಸರಿಯಾಗಿ ಚರ್ಚಿಸಿ ಅರ್ಥಪೂರ್ಣವಾಗಿ ಕಾರ್ಯಪ್ರವೃತ್ತವಾಗಬೇಕು. ಇದನ್ನು ಆಶಿಸೋಣವೆ– ಹಾರೈಸೋಣವೇ[3]

---

1. 'ಶೃಂಖಲೆ' ಎಂಬುದನ್ನು 'Chain' ಎಂಬರ್ಥದಲ್ಲಿ ಬಳಸಲಾಗಿದೆ.
2. ಗಾಂಧೀಜಿ ರೂಪಿಸಿದ ಮೂಲ ಶಿಕ್ಷಣವೂ ಸರಿಯಾದ ಅರ್ಥದಲ್ಲಿ ಕಾರ್ಯರೂಪಕ್ಕೆ ಇಳಿದಾಗಲೇ ವಿದ್ಯಾವಂತರ ಸಂಖ್ಯೆ ಹೆಚ್ಚಿ ನಿರುದ್ಯೋಗಿಗಳ ಸಂಖ್ಯೆ ಇಳಿಯ ಬಲ್ಲದು.
3. ಕರ್ನಾಟಕದ ಶುದ್ಧರಾಜಕೀಯ ವ್ಯಕ್ತಿಗಳಲ್ಲಿ ಒಬ್ಬರಾದ ಮಾನ್ಯ ಕೆ. ವಿ. ಶಂಕರಗೌಡರು ಪ್ರಾರಂಭಿಸಿದ ಲೋಕಸೇವಕ ಸಂಘವು ಕರ್ನಾಟಕದಲ್ಲೆಲ್ಲ ವಿಸ್ತರಿಸಿ ಯಶಸ್ವಿಯಗುವಂತಾಗುವುದೂ ದೇಶದ ಅಗತ್ಯಗಳಲ್ಲಿ ಸ್ವಲ್ಪ ಅಂಶವನ್ನಾದರೂ ಪೂರೈಸಿದಂತಾಗುತ್ತದೆ.

ಪಥದರ್ಶನ

# ಕನ್ನಡದಲ್ಲಿ ಗಾಂಧಿ ಸಾಹಿತ್ಯ

ಎಂ. ಬಿ. ಪದ್ಮ

ಸಾಮಾನ್ಯ ಮಾನವನಾಗಿ ಈ ಜಗತ್ತಿನ ರಂಗಮಂಚವನ್ನು ಪ್ರವೇಶಿಸಿ, ಸತ್ಯ-ಅಹಿಂಸೆ-ಪ್ರೇಮ ಎಂಬ ಅದ್ವಿತೀಯ ಹಾಗೂ ನಿರಂತರವಾದ ನಂದಾದೀಪದ ಬೆಳಕಿನ ಮಾರ್ಗದರ್ಶನದಲ್ಲಿ, ಸ್ವಪ್ರಯತ್ನದಿಂದ ಮುಗಿಲೆತ್ತರಕ್ಕೇರಿ, ಸರ್ವರಿಗೂ ಮಾರ್ಗದರ್ಶಕ ದೀಪಗೃಹವಾಗಿ ಬೆಳಗಿದ ಮಹಾನ್ ವ್ಯಕ್ತಿ ದೇವಮಾನವ ನಮ್ಮ ಮಹಾತ್ಮ ಗಾಂಧಿ. ಮೋಹನದಾಸ್ ಕರಮ್‌ಚಂದ್‌ಗಾಂಧಿ ಎಂಬ ಅಪ್ರಮುಖ ವ್ಯಕ್ತಿ ಮಹಾಸಂತ, ಮಹಾತ್ಮಗಾಂಧಿಯಾಗಿ ಲೋಕಪ್ರಸಿದ್ಧರಾದರು. ಜನರೆಲ್ಲರ ಹೃದಯಗಳಲ್ಲಿ ಖಾಯಂ ಆಗಿ ಮನೆ ಮಾಡಿಕೊಂಡ ಪೂಜ್ಯ ರಾಷ್ಟ್ರಪಿತ, ಪ್ರೀತಿಯ ಬಾಪೂ ಆದರು. ಈ ಅಪೂರ್ವ ಸಾತ್ವಿಕ ಸೈನಿಕ ಅಸಮಾನವಾಗಿರುವ ಸತ್ಯ-ಅಹಿಂಸೆ-ಪ್ರೇಮವೆಂಬ ಸಾತ್ವಿಕ ಶಸ್ತ್ರಾಸ್ತ್ರಗಳನ್ನು ಹಿಡಿದು, ಮಾನವನ ಬಾಳು ಸದಾ ಅಚ್ಚಹಸಿರಾಗಿಯೇ ಇರುವಂತೆ ಮಾಡಲು ಶಕ್ಯವಾಗಿರುವ ಅನುಕಂಪ-ಅನುರಾಗ-ತ್ಯಾಗ-ಶಾಂತಿ-ಔದಾರ್ಯ ಮುಂತಾದ ಹೃದಯಾಂತರ್ಗತವಾಗಿರುವ ಪರಮೋತ್ಕೃಷ್ಟ ಮೌಲ್ಯಗಳ ಮೇಲೆ ಪರದೆಯನ್ನೆಳೆದು ಅವನ ಬದುಕನ್ನು ಬೆಂಗಾಡಾಗಿ ಪರಿವರ್ತಿಸಲು ಸಮರ್ಥವಾಗಿರುವ ಅನ್ಯಾಯ-ಅಕ್ರಮ-ಅಜ್ಞಾನ-ಶೋಷಣೆ-ದಬ್ಬಾಳಿಕೆ-ದೌರ್ಜನ್ಯ ಇತ್ಯಾದಿ ಅತ್ಯಂತ ಅಪಾಯಕಾರಿ ಅಂಶಗಳ ವಿರುದ್ಧ ಯಶಸ್ವಿಯಾಗಿ ಕಾದಾಡುವುದರಲ್ಲಿ ಮಾತ್ರ ಸಮರ್ಥರಾಗಿರಲಿಲ್ಲ; ವೈಯಕ್ತಿಕ ಹಾಗೂ ಸಾಮಾಜಿಕ ಜೀವನದ ಪ್ರತಿಕ್ಷೇತ್ರವನ್ನೂ ಪ್ರಯೋಗ ಶಾಲೆಯನ್ನಾಗಿಸಿಕೊಂಡು, ಸತ್ಯ-ಅಹಿಂಸೆ-ಪ್ರೇಮವೆಂಬ ತತ್ತ್ವಗಳನ್ನು ಬಳಸಿ, ವಸ್ತುನಿಷ್ಠವಾಗಿದ್ದ ರೀತಿಯಲ್ಲಿ ಪ್ರಯೋಗಗಳನ್ನು ನಡೆಸಿ, ವೈಚಾರಿಕವಾಗಿ ವಿಶ್ಲೇಷಿಸಿ, ಸಮಸ್ಯೆಗಳಿಗೆ ತಕ್ಕ ಪರಿಹಾರಗಳನ್ನು ಕಂಡುಹಿಡಿಯುವುದರಲ್ಲಿ ಮಾತ್ರ ದಕ್ಷರಾಗಿರಲಿಲ್ಲ; ಲೇಖಣಿ ಹಿಡಿದು ಅಷ್ಟೇ ಪರಿಣಾಮಕಾರಿಯಾಗಿದ್ದ ರೀತಿಯಲ್ಲಿ ಸಕಲರಿಗೂ ಮನಸ್ಸಿಗೆ ಹಿಡಿಯುವ ಬಗೆಯಲ್ಲಿ ವಿಷಯಗಳನ್ನು ಸರಳವಾಗಿ, ಸ್ಪಷ್ಟವಾಗಿ ವಿವರಿಸುವುದರಲ್ಲೂ ಗಟ್ಟಿಗರಾಗಿದ್ದರು. ಅವರದು ಸಮಷ್ಟಿ ದೃಷ್ಟಿ, ಸತ್ಯ-ಅಹಿಂಸೆಯ ಜ್ಯೋತಿಯಲ್ಲಿ ಜೀವನವನ್ನು ಸಮಗ್ರವಾಗಿ ವೀಕ್ಷಿಸಿ, ಅದರ ಸರ್ವತೋಮುಖ ಊರ್ಧ್ವ ವಿಕಾಸಕ್ಕೆ ಆವಶ್ಯಕವಾಗಿದ್ದ ಪ್ರತಿ ಅಂಶದ ಒಳಹೊಕ್ಕು ನೋಡಿ, ಕೂಲಂಕಷವಾಗಿ ಪರಿಶೀಲಿಸಿ, ಆಳವಾಗಿ ಆಲೋಚಿಸಿ, ದೀರ್ಘವಾಗಿ ಚಿಂತಿಸಿ, ವಸ್ತುನಿಷ್ಠವಾಗಿ ವಿವೇಚಿಸಿದರು, ಸ್ಪಷ್ಟವಾಗಿ ಬರೆದರು: ಸತ್ಯಾನ್ವೇಷಕರಾಗಿ ಸತ್ಯ ತೋರಿದ ದಾರಿಯಲ್ಲಿ ಮುನ್ನಡೆಯಲು ಪ್ರಾಮಾಣಿಕವಾಗಿ ಪ್ರಯತ್ನಿಸಿದರು: ಎಲ್ಲರೂ ನಡೆಯುವಂತೆ ಪ್ರೇರೇಪಿಸಿದರು; ಆಗ

ತಮಗೆ ಸತ್ಯವೆಂದು ಕಂಡುಬಂದುದನ್ನು ಕುರಿತು ಬರೆದರು, ಅದರ ಬಗ್ಗೆ ಮಾತನಾಡಿದರು. ಅವರು ಬರೆಯಬೇಕೆಂದೇ ಬರೆದವರಲ್ಲ. ಬರೆಯುವುದೇ ಅವರ ವೃತ್ತಿಯಾಗಿರಲಿಲ್ಲ, ಹವ್ಯಾಸವಾಗಿರಲಿಲ್ಲ, ಅವರು ಆಡಿದ ಮಾತುಗಳೆಲ್ಲವೂ, ಬರೆದ ವಿಚಾರಗಳೆಲ್ಲವೂ ಸತ್ಯ–ಅಹಿಂಸೆ–ಪ್ರೇಮವೆಂಬ ಶುದ್ಧವಾದ ಮೂಲ ಸ್ಥಾನದಿಂದ ಸಹಜವಾಗಿಯೇ ಹೊರಹೊಮ್ಮಿ ಬಂದ ನಿರ್ಮಲ ಜ್ಞಾನಧಾರೆಯಾಗಿದ್ದವು. ಈ ಧಾರೆಯು ಅವರೇ ಸಂಪಾದಿಸಿದ ಇಂಡಿಯನ್ ಒಪಿನ್ಯನ್, ಯಂಗ್ ಇಂಡಿಯು, ನವಜೀವನ್ ಮತ್ತು ಹರಿಜನ್ ಪತ್ರಿಕೆಗಳ ಮೂಲಕ ನಿರಂತರವಾಗಿ ಪ್ರವಹಿಸುತ್ತಿದ್ದಿತು. ಗಾಂಧಿಯವರು ಲೋಕಹಿತ ಕೆಲಸಗಳಿಗಾಗಿ ವಿನಿಯೋಗಿಸಿದ ತಮ್ಮ ಜೀವನದ ಆರು ದಶಕಗಳಕಾಲದಲ್ಲಿ ತಮ್ಮ ಲೇಖನ ಹಾಗೂ ನಾಲಗೆಯನ್ನು ಪರಸ್ಪರ ಸ್ಪರ್ಧಾತ್ಮಕವಾಗಿ ಬಳಸಿ ಅಸಂಖ್ಯಾತ ಪತ್ರಗಳನ್ನು ಬರೆದರು, ಜೀವನಕ್ಕೆ ಸಂಬಂಧಿಸಿದ ಹೆಚ್ಚು–ಕಡಿಮೆ ಎಲ್ಲಾ ಅಂಶಗಳನ್ನು ಕುರಿತು ಲೇಖನಗಳನ್ನು ರಚಿಸಿದರು, ಭಾಷಣಗಳನ್ನು ಮಾಡಿದರು, ಸಂಭಾಷಣೆಗಳನ್ನು ನಡೆಸಿದರು, ಹೇಳಿಕೆಗಳನ್ನು ಕೊಟ್ಟರು, ಸಂದರ್ಶನಗಳನ್ನು ನೀಡಿದರು. ಇವೆಲ್ಲವನ್ನೂ ಒಟ್ಟಾಗಿ ಗಾಂಧಿ ಸಾಹಿತ್ಯ ಎಂಬುದಾಗಿ ಕರೆಯಬಹುದು. ಸತ್ಯ ಸಾಕ್ಷಾತ್ಕಾರ, ಅಹಿಂಸಾತ್ಮಕ ಚಳುವಳಿಯ ಮೂಲಕ ಭಾರತ ಸ್ವಾತಂತ್ರ್ಯ ಸಾಧನೆ. ವಿಶ್ವಶಾಂತಿ, ಲೋಕ ಕಲ್ಯಾಣ ಮುಂತಾದ ಉದಾತ್ತ ಧ್ಯೇಯಗಳ ಸಾಧನೆಗಾಗಿ ಅವರ ಲೇಖನಿ ಹಾಗೂ ನಾಲಗೆಗಳು ಪರಸ್ಪರ ಸ್ಪರ್ಧಾತ್ಮಕವಾಗಿ ಸಲ್ಲಿಸಿದ ಸೇವೆಯ ಫಲವಾಗಿ ಬೆರಗುಗೊಳಿಸುವಂತಹ ಸಾಟಿಯಿಲ್ಲದ ಸಾಹಿತ್ಯ ಸೃಷ್ಟಿಯಾಯಿತು. ಈ ವಿಪುಲ ಸಾಹಿತ್ಯ ರಾಶಿಯೇ ಗಾಂಧಿ ಸಾಹಿತ್ಯ.

ಗಾಂಧಿ ಸಾಹಿತ್ಯ ಗದ್ಯ ಸಾಹಿತ್ಯ. ಜನಜೀವನವು ಆಗಾಗ್ಗೆ ಕಾವ್ಯಮಯವಾಗಿರುವಂತೆ ಕಂಡು ಬಂದರೂ ಅದು ಪ್ರಧಾನವಾಗಿ ಗದ್ಯಮಯವೇ ಆಗಿರುತ್ತದೆ. ತಮಗಾದ ಸತ್ಯ ದರ್ಶನವನ್ನು ಎಲ್ಲರಿಗೂ ಅರ್ಥವಾಗುವಂತೆ ವಿವರಿಸುವುದೇ ಗಾಂಧಿಯವರ ಉದ್ದೇಶವಾಗಿದದ್ದರಿಂದ, ಅವರು ಎಲ್ಲವನ್ನು ಗದ್ಯರೂಪದಲ್ಲೇ ವಿವರಿಸಿದರು, ಬರೆದರು. ಗಾಂಧಿ ಸಾಹಿತ್ಯವು ಶಾಸ್ತ್ರ ಸಾಹಿತ್ಯವೂ ಅಹುದು, ರಸಸಾಹಿತ್ಯವೂ ಅಹುದು. ಗಾಂಧಿಯವರು ವ್ಯಕ್ತಿಯ ವೈಯಕ್ತಿಕ ಹಾಗೂ ಸಾಮಾಜಿಕ ಜೀವನದ ಬಾಹ್ಯ ಹಾಗೂ ಅಂತರಂಗದ ಮುಖಗಳೆರಡರಲ್ಲೂ ತೀವ್ರವಾಗಿದ್ದ ಆಸಕ್ತಿಯನ್ನು ವಹಿಸಿದ್ದರು. ಅವರಿಗೆ ಬಾಹ್ಯ ಬದುಕು ತ್ಯಾಜ್ಯವಾಗಿರಲಿಲ್ಲ. ಅದು ಶಾಂತಿ- ಸಮೃದ್ಧಿ- ಪುಷ್ಟಿ- ತುಷ್ಟಿ– ನೆಮ್ಮದಿಯ ನೆಲೆಯಾಗಿರಬೇಕು, ಅಂತರಂಗ ಜೀವನದ ಅಪೂರ್ವವಾದ ಪರಿಪೂರ್ಣ ವಿಕಾಸಕ್ಕೆ ಸಹಾಯಕವಾಗಿರಬೇಕು. ಆದ್ದರಿಂದ ಅವರು ಮಾನವನ ಬಾಳಿನ ಪ್ರತಿ ಅಂಶಕ್ಕೂ ಗಮನವನ್ನು ಕೊಟ್ಟರು. ಈ ಕಾರಣದಿಂದ ಅವರ ಸಾಹಿತ್ಯದಲ್ಲಿ ವ್ಯಕ್ತಿ ಹಾಗೂ ಸಮಾಜವನ್ನು ಕುರಿತು ವೈಜ್ಞಾನಿಕವಾಗಿ ವಿಚಾರಮಾಡುವ ಮಾನವಿಕ ಶಾಸ್ತ್ರಗಳ ವಿದ್ಯಾರ್ಥಿಗಳಿಗೆ ತಮ್ಮ ಶಾಸ್ತ್ರಗಳ ಮೂಲ ವಿಚಾರಗಳನ್ನು ಕಾಣಬಹುದು.

ಜೀವನದ ಪ್ರತಿ ವೃತ್ತಗಳಿಗೂ ಸಂಬಂಧಿಸಿದ ಸತ್ತ್ವಯುತವಾಗಿದ್ದ ವಿಚಾರ, ವಿವರ ಹಾಗೂ ಕಾರ್ಯಕ್ರಮವನ್ನು ನೀಡಿದ ಗಾಂಧಿ ಸಾಹಿತ್ಯ ಮುಖ್ಯವಾಗಿರುವ ಮಾನವಿಕ ಶಾಸ್ತ್ರಗಳ ವಿಚಾರದಿಂದ ಕೂಡಿರುವುದರಿಂದ ಅದನ್ನು ಶಾಸ್ತ್ರಸಾಹಿತ್ಯವೆಂಬುದಾಗಿ ಎಣಿಸ ಬಹುದು. ಗಾಂಧಿಯವರು ಮಾನವನ ಸಮಗ್ರ ಜೀವನವೂ ಸತ್ಯವನ್ನು ಮೂಲಾಧಾರ ವಾಗಿ ಕೊಂಡು, ಸರ್ವ ಪರಮೋತ್ಕೃಷ್ಟ ಮೌಲ್ಯಗಳ ಸರ್ವಸಾರಭರಿತವಾಗಿ ಅಪೂರ್ವ ಸೌಂದರ್ಯದಿಂದ ಕೂಡಿದ ಅನುಪಮ ಕಲೆಯಾಗಿ ಅರಳಬೇಕು, ಆನಂದದ ಆಗರವಾಗ ಬೇಕು ಎಂಬುದಾಗಿ ಬಯಸಿದರು. ಆದ್ದರಿಂದ ಸಚ್ಚಿದಾನಂದ ಭಾವನೆ ಅವರ ಸಾಹಿತ್ಯ ದಲ್ಲಿ ಪ್ರಧಾನವಾಯಿತು. ಈ ತೆರನಾದ ಉತ್ತಮ ಭಾವನೆಯಿಂದ ಕೂಡಿರುವ ಸಾಹಿತ್ಯವು ರಸಸಾಹಿತ್ಯವಲ್ಲದೆ ಮತ್ತೇನು? ಅವರ ಬರಹಗಳ ಭಾಷಣಗಳ ವಿಷಯ ಗಳ ಪರವು ಅತ್ಯಂತ ವ್ಯಾಪಕವಾದುದು. ಅವರು ವಿಚಾರ ಮಾಡದ ವಿಷಯವೇ ಇಲ್ಲವೋ ಎನ್ನುವಷ್ಟು ಅವರ ಸಾಹಿತ್ಯದ ವ್ಯಾಪ್ತಿ ವಿಸ್ತಾರವಾಗಿದೆ. ಅವರ ಬರಹ ಗಳನ್ನು ಸುಮಾರು 600 ಶೀರ್ಷಿಕೆಗಳಾಗಿ ವಿಭಾಗಿಸಲಾಗಿದೆ. ಹೀಗೆ ಪ್ರಕಾರ– ಪ್ರಮಾಣ– ಗುಣದಲ್ಲಿ ಅವರ ಸಾಹಿತ್ಯ ಅಸಾಧಾರಣವಾಗಿದೆ.

ಸಾಧಾರಣವಾಗಿ ಗಾಂಧಿ ಸಾಹಿತ್ಯವನ್ನು (೧) ಗಾಂಧಿಯವರೇ ಸ್ವತಃ ಆಡಿದ ಭಾಷಣ ಹಾಗೂ ರಚಿಸಿದ ಬರಹಗಳು ಮತ್ತು (೨) ಗಾಂಧಿಯವರ ಜೀವನ, ತತ್ತ್ವ ಹಾಗೂ ಎಲ್ಲಾ ವಿಚಾರಗಳನ್ನು ಕುರಿತು ಸಾಹಿತ್ಯ ವಿವಿಧ ಪ್ರಕಾರಗಳಲ್ಲಿ ಇತರರು ರಚಿಸಿರುವ ಬರಹಗಳು ಎಂಬುದಾಗಿ ಎರಡು ವಿಭಾಗಗಳಾಗಿ ವಿಂಗಡಿಸಲಾಗಿದೆ. ಗಾಂಧಿಯವರು ಗ್ರಂಥರೂಪದಲ್ಲಿ ರಚನೆಗಳನ್ನು ಮಾಡಿಲ್ಲದಿದ್ದರೂ, ಅವರ ವಿಪುಲ ಬರಹಗಳನ್ನು (೧) ಹಿಂದ್ ಸ್ವರಾಜ್ಯ, (೨) ಸರ್ವೋದಯ, (೩) ನೀತಿಧರ್ಮ, (೪) ಆರೋಗ್ಯ ಮಾರ್ಗದರ್ಶಿನಿ, (೫) ದಕ್ಷಿಣ ಆಫ್ರಿಕಾದಲ್ಲಿ ಸತ್ಯಾಗ್ರಹ, (೬) ಆತ್ಮ ಕಥೆ ಅಥವಾ ನನ್ನ ಸತ್ಯಾನ್ವೇಷಣೆ, (೭) ಅನಾಸಕ್ತಿಯೋಗ, (೮) ಮಂಗಲ ಪ್ರಭಾತ ಮತ್ತು (೯) ನಿರ್ಮಾಣ ಕಾರ್ಯಕ್ರಮ ಎಂಬ ಪುಸ್ತಕಗಳ ರೂಪದಲ್ಲಿ ಕಾಣಬಹು ದಾಗಿದೆ. ಇವುಗಳನ್ನು ಗಾಂಧಿ ಮೂಲ ಸಾಹಿತ್ಯ ಎಂಬುದಾಗಿ ಪರಿಗಣಿಸಬಹುದು. ಬದುಕಿನ ಸಮಗ್ರ ಚಿತ್ರವನ್ನು ಮುಂದಿಟ್ಟುಕೊಂಡು ನ್ಯಾಯ ಸಮ್ಮತವೂ, ತರ್ಕ ಬದ್ಧವೂ ವೈಚಾರಿಕವೂ ಫಲಕಾರಿಯೂ ಆದ ವಿಚಾರಗಳನ್ನು ನಿರೂಪಿಸುವುದರಲ್ಲಿ, ವ್ಯಕ್ತಿಗಳನ್ನು ಒಟ್ಟಾಗಿ ಹಾಗೂ ಬಿಡಿ ಬಿಡಿಯಾಗಿ ತಿದ್ದಿ, ಅವರ ಬೆನ್ನು ತಟ್ಟಿ ಹುರಿ ದುಂಬಿಸಿ, ಕಾರ್ಯೋನ್ಮುಖರನ್ನಾಗಿಸುವುದರಲ್ಲಿ, ಅವರು ಮೇಲ್ಮಟ್ಟದ ವಿಕಾಸವನ್ನು ಸಾಧಿಸುವಂತೆ ಪ್ರೋತ್ಸಾಹಿಸುವುದರಲ್ಲಿ, ಅವರಿಗೆ ಹೊಸ ಬೆಳಕನ್ನು ತೋರಿ ಅನಂತರ ಉತ್ತಮ ಜೀವನವನ್ನು ರೂಪಿಸಿಕೊಡುವುದರಲ್ಲಿ ಎಲ್ಲಾ ಕಾಲ ಹಾಗೂ ದೇಶಗಳಿಗೆ ಅನ್ವಯವಾಗುವಂತಹ ಅತ್ಯುತ್ತಮ ಸಾರ್ವತ್ರಿಕ ಸಾಂಸ್ಕೃತಿಕ ಮೌಲ್ಯಗಳನ್ನು ಎತ್ತಿಹಿಡಿ ಯುವುದರಲ್ಲಿ. ಈ ಎಲ್ಲಾ ರಚನಾತ್ಮಕ ಕಾರ್ಯಕ್ರಮಗಳಲ್ಲಿ ಗಾಂಧಿಯವರಿಗಿದ್ದ

ಮಾನವೀಯ ಧೋರಣೆ ಹಾಗೂ ಮಾನವನ ಒಳ್ಳೆಯ ಸ್ವಭಾವದ ಪ್ರತಿ ಅವರಿಗಿದ್ದ ಅಪಾರ ನಂಬಿಕೆಯ ಸ್ಪಷ್ಟ ಪ್ರತಿಬಿಂಬ ಅವರ ಬರಹಗಳಲ್ಲಿ ಎದ್ದು ಕಾಣುತ್ತದೆ. ಸಾವಿನ ಕರೆ ಬರುವವರೆಗೆ ಲೋಕ ಕಲ್ಯಾಣ ಕಾರ್ಯದಲ್ಲೇ ಸಂಪೂರ್ಣವಾಗಿ ನಿರತರಾಗಿದ್ದ ಗಾಂಧಿಯವರ ಲೇಖನಿಯು ಸೃಷ್ಟಿಸಿದ್ದುದು ಅನಾವಶ್ಯಕವಾದ ಚರ್ವಿತ ಚರ್ವಣ ವಿವರಗಳಿಂದ ಮುಕ್ತವಾದ ; ಸರಳವಾಗಿ, ಸುಲಭವಾಗಿ, ನೇರವಾಗಿ ವಿವರಿಸಲಾದ ವಿಷಯಗಳಿಂದ ಕೂಡಿದ ; ವ್ಯಂಗ್ಯ, ವಿಡಂಬನ, ಹಾಸ್ಯ, ಸರಸ ಮುಂತಾದ ಸಾಹಿತ್ಯ ತಂತ್ರಗಳಿಂದ ಸಮೃದ್ಧವಾದ ಮತ್ತು ಅಲ್ಲಲ್ಲಿ ಕವಿಯ ಮನೋಧರ್ಮದ ಮಿಂಚಿನ ಬೆಳಕನ್ನು ತೋರಿದ ಕಲ್ಯಾಣ ಕೃತಿಗಳೇ. ಅವುಗಳೇ ಅಮೂಲ್ಯ ಸಾಹಿತ್ಯ ನಿಧಿ.

ಈ ತೆರನಾದ ಸಾಹಿತ್ಯ ಹಾಗೂ ಇದನ್ನು ಸೃಷ್ಟಿಸಿದ ಭವ್ಯವ್ಯಕ್ತಿ ಕನ್ನಡದ ಹಾಗೂ ಭಾರತದ ಎಲ್ಲಾ ಭಾಷೆಗಳ ಪಂಡಿತರ ಮತ್ತು ಜಗತ್ತಿನ ಎಲ್ಲಾ ವಿದ್ವಾಂಸರ ಹೃದಯವನ್ನು ಸೂರೆಗೊಂಡುದರಲ್ಲಿ ಆಶ್ಚರ್ಯವೇನಿಲ್ಲ. ಈ ಮುಗಿಲೆತ್ತರಕ್ಕೇರಿದ ಮಹಾತ್ಮ ಹಾಗೂ ಅವರ ಬರಹಗಳ ಬಗ್ಗೆ ತಮ್ಮಲ್ಲಿ ಮೂಡಿ ಬಂದ ಅಭಿಪ್ರಾಯಗಳನ್ನು ಪೂಜ್ಯಭಾವದಿಂದ, ನಮ್ರತೆಯಿಂದ ಮೆಚ್ಚಿಕೆಯಿಂದ ಹಾಗೂ ಪ್ರೀತಿಯಿಂದ ತಮ್ಮ ಮಾತೃಭಾಷೆಯಲ್ಲಿ ಸರಳವಾಗಿ ಹಾಗೂ ಸುಂದರವಾಗಿ ವ್ಯಕ್ತಪಡಿಸುವುದರಲ್ಲಿ ಕನ್ನಡ ಸಾಹಿತಿಗಳು ಇತರ ಭಾಷೆಗಳ ಸಾಹಿತಿಗಳಿಗೆ ಸರಿಸಮವಾಗಿದ್ದಾರೆ. ಕನ್ನಡದಲ್ಲಿ ಗಾಂಧಿ ಸಾಹಿತ್ಯವು ಕವನವೇ ಮುಂತಾದ ಸಾಹಿತ್ಯ ಪ್ರಕಾರಗಳಲ್ಲಿ, ಪ್ರಬಂಧ, ಜೀವನ ಚರಿತ್ರೆ, ವ್ಯಾಖ್ಯಾನ ಹಾಗೂ ಶಿಶು ಸಾಹಿತ್ಯ ರೂಪದಲ್ಲಿ ಮತ್ತು ಅನುವಾದಿತ ಕೃತಿಗಳಲ್ಲಿ ಕಾಣ ಬರುತ್ತದೆ.

ಗಾಂಧಿಯವರನ್ನು ಕುರಿತ ಮೊದಲ ಉಲ್ಲೇಖಗಳಲ್ಲಿ ಅದರ ಹಿಮಾಲಯದ ಔನ್ನತ್ಯವನ್ನು ಮತ್ತು ಸಾಗರದ ಗಹನತೆಯನ್ನು ವಿಚಾರಿಸಿರುವ ಅವರ ಶ್ರೇಷ್ಠತೆಯನ್ನು ಕಂಡು ಪ್ರಶಂಸಿಸಲಾಗಿದೆ. ಶ್ರೀಯುತರಾದ ಡಿ. ವಿ. ಗುಂಡಪ್ಪ, ಮಾಸ್ತಿ ವೆಂಕಟೇಶ ಅಯ್ಯಂಗಾರ್, ಪರಮೇಶ್ವರ ಭಟ್ಟ, ತೀ. ನಂ. ಶ್ರೀಕಂಠಯ್ಯ, ಕೆ. ಎಸ್. ನರಸಿಂಹ ಸ್ವಾಮಿ, ಆನಂದ ಕಂದ, ಕಯ್ಯಾರ ಕಿಞ್ಞಣ್ಣರೈ, ದ. ರಾ. ಬೇಂದ್ರೆ, ಅರ್ಚಿಕ ವೆಂಕಟೇಶ, ಕುವೆಂಪು, ಕಡೆಂಗೋಡ್ಲು ಶಂಕರಭಟ್ಟ, ಪು. ತಿ. ನರಸಿಂಹಾಚಾರ್ಯ, ಗೋಪಾಲ ಕೃಷ್ಣ ಅಡಿಗ, ಗಿರಡ್ಡಿ ಗೋವಿಂದರಾಜ, ವಿ. ಸೀತಾರಾಮಯ್ಯ, ಚನ್ನವೀರ ಕಣವಿ, ಜಿ. ಎಸ್. ಶಿವರುದ್ರಪ್ಪ, ಗೋವಿಂದ ಪೈ, ವಿ. ಕೃ. ಗೋಕಾಕ್, ಎಸ್. ಡಿ. ಇಂಚಲ ನಿಸಾರ ಅಹಮ್ಮದ್, ಸಿದ್ಧಲಿಂಗ ಪಟ್ಟಣಶೆಟ್ಟರು, ಚಂದ್ರಶೇಖರ ಪಾಟೀಲ್ ಮುಂತಾದ ಕವಿಗಳ ಸುಂದರ ಕವನಗಳಲ್ಲಿ ಗಾಂಧಿಯವರ ಅದ್ವಿತೀಯ ವ್ಯಕ್ತಿತ್ವ ಹಾಗೂ ಹಲವಾರು ವಿಚಾರಗಳ ಸ್ಪಷ್ಟ ಪ್ರತಿಬಿಂಬವನ್ನು ಕಾಣಬಹುದು. ಹೀಗೆ ಗಾಂಧಿಯವರನ್ನು ಕುರಿತ ಕವನಗಳು ವಿಪುಲವಾಗಿವೆ.

ಆದರೆ ಗಾಂಧಿಯವರ ವ್ಯಕ್ತಿತ್ವ ಹಾಗೂ ವಿಚಾರಗಳ ಬಗ್ಗೆ ಸಾಹಿತ್ಯದ ಇತರ ಪ್ರಕಾರಗಳಿಗಿರುವ ಕಾದಂಬರಿ, ಕತೆ, ನಾಟಕಗಳಲ್ಲಿ ಅಷ್ಟು ವೈಪುಲ್ಯ ಕಂಡು ಬರುವುದಿಲ್ಲ

ಗದ್ಯಪ್ರಕಾರಗಳಾಗಿರುವ ಕಾದಂಬರಿ, ಕಥೆ, ನಾಟಕಗಳಲ್ಲಿ ಗಾಂಧಿಯವರ ಭವ್ಯ ವ್ಯಕ್ತಿತ್ವದ ಜೀವಂತ ಪಾತ್ರವನ್ನು ಚಿತ್ರಿಸುವುದಾಗಲೀ ಮತ್ತು ಅವರ ಹಿರಿಮೆ ಹಾಗೂ ಬರಹಗಳ ಶ್ರೇಷ್ಠತೆಗೆ ತಕ್ಕ ಪ್ರಾಧಾನ್ಯವನ್ನು ಕೊಡುವುದಾಗಲೀ ಸುಲಭಸಾಧ್ಯವಲ್ಲ. ಗಾಂಧಿಯವರೇ ರೂಪಿಸಿದ ಅಥವಾ ಸ್ಫೂರ್ತಿ ನೀಡಿ ನಡೆಸಿದ ಚಳವಳಿ ಹಾಗೂ ಇತರ ರಚನಾತ್ಮಕ ಕಾರ್ಯಕ್ರಮಗಳನ್ನು ವಿವರಿಸುವ ಕಥೆ, ಕಾದಂಬರಿ, ನಾಟಕಗಳನ್ನು ಕನ್ನಡ ಭಾಷೆಯಲ್ಲಿ ಕಾಣಬಹುದು. ಆದರೆ ಅವುಗಳಲ್ಲಿ ಸಿಗುವುದು ಗಾಂಧಿಯವರ ಶ್ರೇಷ್ಠ ವ್ಯಕ್ತಿತ್ವ ಹಾಗೂ ಜೀವನದ ಪೂರ್ಣದರ್ಶನವಲ್ಲ. ಒಂದೆರಡು ನೋಟಗಳು ಮಾತ್ರ. ಉದಾಹರಣೆಗೆ, ಶ್ರೀಯುತರಾದ ಶಿವರಾಮ ಕಾರಂತರ "ಇದ್ದರೂ ಚಿಂತೆ" ವಿರ್ಜಿ ಅಣ್ಣಾರಾಯರ 'ರಾಷ್ಟ್ರಪುರುಷ' ಹಾಗೂ ಗೊರೂರು ರಾಮಸ್ವಾಮಿ ಅಯ್ಯಂಗಾರರ 'ಮೆರವಣಿಗೆ' ಗೊರೂರರ ಇನ್ನೊಂದು ಕಾದಂಬರಿಯಾಗಿರುವ 'ಹೇಮಾವತಿ'ಯಲ್ಲಿ ಗಾಂಧಿಯವರನ್ನು ಒಂದು ಪಾತ್ರವಾಗಿ ಚಿತ್ರಿಸಲಾಗಿದೆ. ಹಾಗೂ ಅವರನ್ನು ಅತಿ ಹತ್ತಿರದಲ್ಲಿ ವಸ್ತುನಿಷ್ಠವಾಗಿ ತೋರುವ ಪ್ರಯತ್ನವನ್ನು ಮಾಡಲಾಗಿದೆ. ಭಾರತ ಸ್ವಾತಂತ್ರ್ಯ ಹೋರಾಟದ ವರ್ಣನೆ ಹಾಗೂ ಗಾಂಧಿಯವರನ್ನು ಕುರಿತ ಉಲ್ಲೇಖಗಳನ್ನು ತ. ರಾ. ಸು, ಬಸವರಾಜ ಕಟ್ಟೀಮನಿ. ನಿರಂಜನ, ಇನಾಂದಾರ ಮುಂತಾದವರ ಕಾದಂಬರಿಗಳಲ್ಲಿ ಕಾಣಬಹುದು.

ಕನ್ನಡದ ಕಥೆಗಳೂ ಗಾಂಧಿಯವರ ಆದರ್ಶ, ತತ್ತ್ವ ಹಾಗೂ ಕಾರ್ಯಕ್ರಮಗಳನ್ನು ಕುರಿತ ಉಲ್ಲೇಖಗಳನ್ನು ಮತ್ತು ದಾರಿತಪ್ಪಿದ ಅವರ ಸ್ವಾರ್ಥ ಸಾಧಕ ಅನುಯಾಯಿಗಳನ್ನು ಟೀಕಿಸುವ ವಿಡಂಬನೆಗಳನ್ನು ಒಳಗೊಂಡಿವೆ. ಉದಾಹರಣೆಗೆ ನಿರಂಜನರವರ 'ಬಾಪೂಜಿ ! ಬಾಪೂಜಿ !' ಮತ್ತು ಆರ್. ಬಸವರಾಜರ 'ಕುರಿಗಳು ಸಾಕಿದ ತೋಳ'. ಇವುಗಳಲ್ಲದೆ ಗಾಂಧಿಯವರು ಬೀರಿರುವ ಪ್ರಭಾವದ ವ್ಯಾಪಕತೆಯನ್ನು ವಿವರಿಸುವ ಕಥೆಗಳೂ ಇವೆ. ಉದಾಹರಣೆಗೆ. ಜನಾರ್ದನ ಗುರ್ಕಾರರ 'ಬಾಪೂಜಿ'.

ಗಾಂಧಿಯವರ ವ್ಯಕ್ತಿತ್ವ. ಜೀವನ ಹಾಗೂ ತತ್ವಗಳ ಬಗ್ಗೆ ಯಾವ ರೀತಿಯಲ್ಲೂ ಲೋಪ ಬರದಂತೆ ಪಾತ್ರ ರೂಪಿಸುವುದು ನಾಟಕಕಾರನಿಗೆ ಸಾಧ್ಯವಾಗದ ವಿಷಯ. ನಾಟಕಗಳು ಗಾಂಧಿಯವರ ಆದರ್ಶ ಹಾಗೂ ತತ್ತ್ವಗಳ ಪ್ರಚಾರಕ್ಕೆ ಪರಿಣಾಮಕಾರಿಯಾದ ಮಾಧ್ಯಮವಾಗಬಹುದು. ಹಾಗಿದ್ದರೂ ಗಾಂಧಿಯವರಿಗೆ ಸಂಬಂಧಿಸಿರುವ ಹಲವಾರು ಕಿರುನಾಟಕ ಕನ್ನಡದಲ್ಲಿ ತಲೆದೋರಿ ಕನ್ನಡ ಸಾಹಿತ್ಯವನ್ನು ಸಮೃದ್ಧಗೊಳಿಸಿವೆ. ಶ್ರೀಯುತರಾದ ಜಿ. ಪಿ. ರಾಜರತ್ನಂರವರ 'ಸಂಭವಾಮಿ ಯುಗೇ ಯುಗೇ,' ನೀಲತ್ತಳ್ಳಿ ಕಸ್ತೂರಿಯವರ 'ಕ್ರಾಂತಿಮಾರ್ಗ' ಹಾಗೂ "ಇದು ಭಾರತದ ದಾರಿ", ಆನಂದಕಂದರ 'ಅಮೃತಾತ್ಮ,' ಹೆಚ್. ರಾಮಕೃಷ್ಣರಾಯರ 'ಗಾಂಧೀಜಿ ಸ್ವರ್ಗದಲ್ಲಿ' ಪು. ತಿ. ನರಸಿಂಹಾಚಾರ್ಯರ 'ಪಿಕಟಕವಿ ವಿಜಯ' ಎಂ. ವಿ. ದೊರೆಸ್ವಾಮಿ ಅಯ್ಯಂಗಾರರ 'ಧರ್ಮಜ್ಯೋತಿ' ಮುಖ್ಯವಾದವುಗಳು. ಇವುಗಳಲ್ಲದೆ ಗಾಂಧಿ ವಿಚಾರ

ಧಾರೆಯಲ್ಲಿ ಅಣಿಮುತ್ತುಗಳಂತಿರುವ ಅಹಿಂಸಾತ್ಮಕ ಸ್ವಾತಂತ್ರ್ಯ ಸಂಗ್ರಾಮ, ಮದ್ಯಪಾನ ನಿಷೇಧ, ಹರಿಜನೋದ್ಧಾರ, ಖಾದಿ, ಆರ್ಥಿಕ ಸ್ವಾವಲಂಬನೆ ಇತ್ಯಾದಿ ವಿಷಯಗಳನ್ನು ನಿರೂಪಿಸಿರುವ ಹಲವಾರು ನಾಟಕಗಳಿವೆ.

ಇವುಗಳೊಂದಿಗೆ ಗಾಂಧಿಯವರನ್ನು ಕುರಿತ ಶ್ರೇಷ್ಠ ಪ್ರಬಂಧಗಳು ಶ್ರೇಷ್ಠ ರಚನೆಗಳಾಗಿ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿವೆ. ಉದಾಹರಣೆಗೆ, ಶ್ರೀ ಕುವೆಂಪುರವರು ನೀಡಿದ ದಿವಂಗತ ' ರಾಷ್ಟ್ರಪಿತ ' ಹಾಗೂ ' ಬಾಪೂಜಿಗೆ ಪುಷ್ಪಾಂಜಲಿ ' ಎಂಬ ಭಾಷಣಗಳು ಮತ್ತು ' ಪೂರ್ಣದೃಷ್ಟಿಗೆ ಗಾಂಧೀಜಿ ' ಎಂಬ ಅವರ ಪ್ರಬಂಧ, 1948 ರ ಫೆಬ್ರುವರಿ ತಿಂಗಳಲ್ಲಿ ಜೀವನ ಪತ್ರಿಕೆಯಲ್ಲಿ ಪ್ರಕಟವಾದ ಮಾಸ್ತಿಯವರ ' ಮಹಾತ್ಮರ ದೇಹ ಮುಕ್ತಿ ' ಎಂಬ ಲೇಖನ, ತೀ. ನಂ. ಶ್ರೀಯವರ ' ನಂದಾದೀಪ,' ಕೆ. ನರಸಿಂಹ ಶಾಸ್ತ್ರಿಯವರ ' ಗಾಂಧೀಜಿ ಭವನ '. ಗಾಂಧಿ ಜೀವನ ದರ್ಶನದ ಸ್ಪಷ್ಟ ಪರಿಚಯವನ್ನು ನೀಡುವಂತಹ ವ್ಯಾಖ್ಯಾನ ರೂಪದಲ್ಲಿರುವ ಅಸಂಖ್ಯಾತ ಪ್ರಬಂಧಗಳನ್ನು ವೈಶಿಷ್ಟ್ಯಪೂರ್ಣವಾದ ರೀತಿಯಲ್ಲಿ ಕನ್ನಡ ಪತ್ರಿಕೆ ಹಾಗೂ ನಿಯತಕಾಲಿಕೆಗಳಲ್ಲಿ ಪ್ರಕಟಿಸಿರುವ ಲೇಖಕರಲ್ಲಿ ಶ್ರೀಯುತರಾದ ಹರ್ಡೇಕರ್ ಮಂಜಪ್ಪ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಆರ್.ಆರ್. ದಿವಾಕರ್. ಬಿಲಿಗಿರಿ ಬಿಂದು ಮಾಧವ, ಜಿ.ಪಿ. ರಾಜರತ್ನಂ, ಸಿದ್ಧವನಹಳ್ಳಿ ಕೃಷ್ಣಶರ್ಮ, ಪಾಟೀಲ, ಪುಟ್ಟಪ್ಪ ನಾರಾಯಣರಾವ್ ಮುಂತಾದವರ ಲೇಖನಗಳು ಎದ್ದು ಕಾಣುವಂತಿವೆ. ಗಾಂಧಿಯವರಿಗೆ ಸಂಬಂಧಿಸಿದ ಲೇಖನ ಹಾಗೂ ಪ್ರಬಂಧಗಳ ಮಾಲೆಯನ್ನು ಸಂಕಲನ ಗ್ರಂಥಗಳಲ್ಲಿ ನೋಡಬಹುದು. ಉದಾಹರಣೆಗೆ : ಜಿ. ಪಿ. ರಾಜರತ್ನಂರವರ ' ವಿಚಾರತರಂಗ ' ಹಾಗೂ ' ಕೃಷ್ಣಾನುಭವ ' ಸಿದ್ಧವನಹಳ್ಳಿ ಕೃಷ್ಣಶರ್ಮರ ' ಪರ್ಣಕುಟಿ ' ಸುಶೀಲಾ ಕೊಪ್ಪ ಹಾಗೂ ಮಂದಾಕಿನಿಬಾಯಿಯವರ ಮಹಿಳೆಯರನ್ನು ಕುರಿತ ಬರಹಗಳು, ಕೆ. ಎಸ್. ನಾರಾಯಣ ಸ್ವಾಮಿಯವರ ' ಸತ್ಯಾನ್ವೇಷಕನ ಚೈತ್ರಯಾತ್ರೆ ' ಪು. ಗ. ಶೆಟ್ಟಿಯವರ ' ನಾನೇಕೆ ಹಿಂದು ? '

ಈ ಸಂಕಲನ ಗ್ರಂಥಗಳಲ್ಲದೆ ಗಾಂಧಿಯವರ ವಿಚಾರ ದೃಷ್ಟಿ ಆಲೋಚನೆ ಹಾಗೂ ವಿವಿಧ ವಿಷಯಗಳನ್ನು ವಿವರಿಸಿರುವ ಹಲವಾರು ಕೃತಿಗಳು ಕನ್ನಡದಲ್ಲಿವೆ. ಉದಾಹರಣೆಗೆ ಶ್ರೀಯುತರಾದ ಹರ್ಡೇಕರ್ ಮಂಜಪ್ಪನವರ 'ಖಾದಿಶಾಸ್ತ್ರ ಗೊರೂರು ರಾಮಸ್ವಾಮಿ ಅಯ್ಯಂಗಾರ್‌ರವರ 'ಪೂರ್ಣಸ್ವದೇಶಿ' 'ಮಹಾತ್ಮ ಗಾಂಧಿಯವರ ದಕ್ಷಿಣಯಾತ್ರೆ' ಹಾಗೂ ಮಹಾದೇವ್ ದೇಸಾಯಿಯವರ ಕೃತಿಗಳು', ಸಿದ್ಧವನಹಳ್ಳಿ ಕೃಷ್ಣಶರ್ಮರ 'ಸೇವಾಗ್ರಾಮ ಮತ್ತು ಸರ್ವೋದಯ', ವಿ. ಎಸ್. ನಾರಾಯಣ ರಾಯರ ''ಗಾಂಧೀವಾದ' ಹಾಗೂ 'ಗಾಂಧಿಯ ಆರ್ಥಿಕವಾದ', ಕರಗುದರಿ ರಾಮ ರಾಯರ 'ಜೀವನ ಸಮಸ್ಯೆ–ಗಾಂಧೀಜೀ', ಜಿ. ಪಿ. ನಾರಾಯಣಮೂರ್ತಿಯವರ 'ಗಾಂಧೀಜಿಯವರ ಸರ್ವಧರ್ಮಸಮಭಾವ' ಹಾಗೂ 'ಗಾಂಧೀ ಸಾಹಿತ್ಯ', ಗೋವಿಂದ ಮೂರ್ತಿ ದೇಸಾಯಿಯವರ 'ಬಾಪೂಜಿಯ ಬದುಕು', ಕೃ. ನಾ. ಗೋಸಾವಿಯವರ

'ಬಾಪೂಜಿಯವರ ಸತ್ಸಂಗ', ಬಡೆಕ್ಕಿಲ ಕೃಷ್ಣಭಟ್ಟರ 'ಗಾಂಧೀಜಿಯ ಕೊಲೆ', ಎ. ಎಸ್ ನಂಜುಂಡಸ್ವಾಮಿಯವರ 'ಬಾಪು ಬೀರಿದ ಬೆಳಕು'; ಪಿ. ವಿ. ಶಾಸ್ತ್ರಿ, ಕಿಬ್ಬಳ್ಳಿಯವರ 'ಗಾಂಧೀ ದರ್ಶನ', ಕೆ. ಬಸವಯ್ಯ ಹಾಗೂ ಕೆ. ಟಿ. ರಾಮಸ್ವಾಮಿಯವರ 'ಗಾಂಧಿ-ತಿಲಕ್', ಬ. ನ. ಸುಂದರರಾಯರ 'ಗಾಂಧೀ ಜೀವನಪಾಠಗಳು', ಎಂ. ವಿ. ಹೆಗ್ಡೆಯವರ 'ಗಾದೆಯ ಗಾಂಧಿ' ಮತ್ತು ಸಿದ್ಧವನಹಳ್ಳಿ ಕೃಷ್ಣಶರ್ಮರು ಸಂಪಾದಿಸಿರುವ 'ಗಾಂಧಿ ಮತ್ತು ಕರ್ನಾಟಕ' ಡಾ. ಹಾ. ಮಾ. ನಾಯಕರು ಸಂಪಾದಿಸಿರುವ 'ಭಾರತೀಯ ಸಾಹಿತ್ಯದಲ್ಲಿ ಗಾಂಧೀಜಿ' ಮತು ಯು. ಎಸ್. ಮೋಹನರಾಯರು ಸಂಪಾದಿಸಿರುವ 'ಮಹಾತ್ಮ ಗಾಂಧಿಯವರ ಸಂದೇಶ' ಇತ್ಯಾದಿಗಳು. ಜಿ. ಪಿ. ರಾಜರತ್ನಂರವರ 'ಗಾಂಧಿ ವಿದ್ಯಾ' ಮತ್ತು 'ಮಹಾತ್ಮರ ಮರಣ ಹಾಗೂ ಇತರ ಉಪನ್ಯಾಸಗಳು', ಆರ್. ಆರ್ ದಿವಾಕರರ 'ಸತ್ಯಾಗ್ರಹ-ಇತಿಹಾಸ ಮತ್ತು ತಂತ್ರ' ಇತ್ಯಾದಿ ಗ್ರಂಥಗಳಲ್ಲಿ ಗಾಂಧಿಯವರ ತತ್ತ್ವಗಳ ಪೂರ್ಣ ಪರಿಚಯವಾಗುತ್ತದೆ.

ಇವುಗಳು ಮಾತ್ರವಲ್ಲದೆ, ಪರ್ಡೀಕರ್ ಮಂಜಪ್ಪನವರ 'ಮಹಾತ್ಮಗಾಂಧಿಯವರ ಚರಿತ್ರೆ', ಬಿ. ಎಲ್. ಆಚಾರ್‌ರವರ 'ಮಹಾತ್ಮಗಾಂಧಿ', ಪಿ. ಆರ್. ರಾಮಯ್ಯನವರ 'ಗಾಂಧೀಜಿ', ಬಿ. ಎ.ಆರ್. ರವರ 'ಪೂಜ್ಯಗಾಂಧೀಜಿ. ಧನ್ಯೆ ಕಸ್ತೂರ ಬಾ', ವಿ. ಎಸ್ ನಾರಾಯಣರಾಯರ 'ಮಹಾತ್ಮಬಾಪೂಜಿ', ನ. ಘ. ರವರ 'ಗಾಂಧೀಜಿ' ಅ. ನ. ಕೃಷ್ಣ ರಾಯರ 'ಭಾರತದ ಬಾಪೂ', ಗೊರೂರು ರಾಮಸ್ವಾಮಿ ಅಯ್ಯಂಗಾರ್‌ರವರ 'ಭಾರತದ ಭಾಗ್ಯವಿಧಾತ ಮತ್ತು 'ಜೋನ್ ಆಫ್ ಆರ್ಕ್ ಮತ್ತು ಮಹಾತ್ಮ ಗಾಂಧಿ', ಆರ್. ಆರ್ ದಿವಾಕರರ 'ಮಹಾತ್ಮ ಗಾಂಧಿ' ಕರಗುಪ್ಪಿಯವರ ' ಮಹಾತ್ಮ ಗಾಂಧಿ ಚರಿತ್ರೆ' ಸುಬೋಧ ರಾಮರಾಯರ 'ಮಹಾತ್ಮಗಾಂಧಿ.' ಎ. ಎಸ್. ಕುಲಕರ್ಣಿ ಅವರ ' ಮಹಾತ್ಮ ಗಾಂಧಿ ' ಮುಂತಾದುವು ಗಾಂಧಿಯವರ ಜೀವನ ಚರಿತ್ರೆ ಹಾಗೂ ಸ್ತುತ್ಯರ್ಹ ಕಾರ್ಯಗಳನ್ನು ಕುರಿತು ಗಮನಾರ್ಹ ವಾದ ಗ್ರಂಥಗಳಾಗಿವೆ. ಮಹಾಪುರುಷರ ಜೀವನ ಚರಿತ್ರೆಯನ್ನು ಸಂಕ್ಷಿಪ್ತವಾಗಿ ರಚಿಸಿದ ಕೃತಿಗಳಾಗಿರುವ ಶ್ರೀಯುತರಾದ ಕುವೆಂಪುರವರ ' ವಿಭೂತಿ ಪೂಜೆ ' ಹೆಚ್. ಕೃಷ್ಣರಾಯರ ' ಚರಿತ್ರೆಯ ಮಹಾಪುರುಷರು,' ವಿರ್ಜಿ ಅಣ್ಣಾರಾಯರ ' ಭಾರತದ ಬೆಳಕು.' ಕೆ. ಎಸ್. ನಾರಾಯಣ ಸ್ವಾಮಿಯವರ ' ವಿಶ್ವಜ್ಯೋತಿಗಳು,' ತೀ. ನಂ. ಶ್ರೀಯವರ ' ನಂಟರು,' ಸಾ. ಶಿ. ಮರುಳಯ್ಯನವರ ' ವಿಭೂತಿಪುರುಷರು,' 'ದೇಶ ವಿದೇಶದ ಮಹಾಜೀವಿಗಳು ' ಮುಂತಾದುವುಗಳಲ್ಲಿ ಗಾಂಧಿಯವರ ಭವ್ಯ ಬಾಳು ಹಾಗೂ ಸಾಧನೆಯನ್ನು ಕುರಿತ ಅಧ್ಯಾಯಗಳನ್ನು ಕಾಣಬಹುದು.

ಶ್ರೀಯುತರಾದ ಆರ್. ಆರ್. ದಿವಾಕರರ ' ಗಾಂಧೀಜಿ ನಾನು ಕಂಡಂತೆ,' ಕಂಪಾಡಿ ಕೃಷ್ಣ ಅಯ್ಯಂಗಾರ್‌ರವರ ' ಗಾಂಧೀಜಿಯ ಹಾಸ್ಯ ಪ್ರವೃತ್ತಿ,' ಮುಂತಾದ ಕೃತಿಗಳಲ್ಲಿ ಲೇಖಕರು ಗಾಂಧಿಯವರ ಬಗ್ಗೆ ತಾವು ಬೆಳೆಸಿಕೊಂಡ ಭಾವನೆಗಳನ್ನು ವ್ಯಕ್ತಪಡಿಸಲು ಪ್ರಯತ್ನಿಸಿದ್ದಾರೆ.

ಎಲ್ಲಕ್ಕಿಂತ ಹೆಚ್ಚಾಗಿ ಗಾಂಧಿಯವರನ್ನು ಕುರಿತ ಶಿಶು ಸಾಹಿತ್ಯ ಕೃತಿಗಳು ಅತ್ಯಂತ ಮನೋಹರವಾಗಿವೆ. ಶ್ರೀಯುತ ಮಂಜಪ್ಪನವರ 'ಗಾಂಧೀಸಂದೇಶ' ಮುಖ್ಯವಾದ ಪ್ರಮುಖ ಶಿಶುಸಾಹಿತ್ಯ ಗ್ರಂಥ. ದೇವುಡು ನರಸಿಂಹಶಾಸ್ತ್ರಿಗಳ ಕವನ ಹಾಗೂ ಕಥೆಗಳು ಮಕ್ಕಳ ಪುಸ್ತಕ ಎಂಬ ಪತ್ರಿಕೆಯಲ್ಲಿ ಪ್ರಕಟವಾಗಿವೆ. ಶ್ರೀಯುತ ಬ. ನ. ಸುಂದರ ರಾಯರ 'ಮಕ್ಕಳ ಕಹಳೆ'ಯಲ್ಲಿ ಗಾಂಧಿಯವರ ಬಗ್ಗೆ ಒಂದೆರಡು ಕವನಗಳಿವೆ. ಇವುಗಳಲ್ಲದೆ ಶ್ರೀಯುತರಾದ ನಾರಾಯಣಶರ್ಮರ 'ಮಕ್ಕಳ ಮಹಾತ್ಮ ಗಾಂಧಿ,' ರವಿಚಂದ್ರರ 'ಮಹಾತ್ಮಗಾಂಧಿ,' ಪರಿಮಳ ಹಾಗೂ ಟಿ. ಎಂ. ಆರ್. ಸ್ವಾಮಿಯವರ 'ಅಜ್ಜ-ಅಜ್ಜಿ' ವಿ. ಎಸ್. ನಾರಾಯಣರಾಯರ ' ಗಾಂಧೀ ಕಥಾವಳಿ,' ರಾಮಚಂದ್ರ ವಡವಿಯವರ 'ಗಾಂಧೀಜಿಯ ಕಥೆ,' ಸವ್ಯಸಾಚಿಯವರ ' ಭಾರತಭಾಗ್ಯವಿಧಾತ,' ಉಳವೀಶರ ' ಗಾಂಧಿ ಅಜ್ಜ,' ಸೀತಾರಾಮಭಟ್ಟರ ' ಚರಕ ಹಾಗೂ ಬಾಪೂಜಿ' ಮತ್ತು ಎಲ್ಲಕ್ಕಿಂತ ಮುಖ್ಯವಾಗಿ, ಜಿ. ಪಿ. ರಾಜರತ್ನಂ ರಚಿಸಿರುವ ಗಾಂಧಿಯವರ ಜೀವನದ ಸ್ಥೂಲಚಿತ್ರವನ್ನು ನೀಡುವ ' ಗಿಳಿಮರಿಗಳ ಗಾಂಧಿ,' ಕವನ ಸಂಕಲವಾಗಿರುವ ' ವಂದೇ ಗಾಂಧಿ' 'ಮಕ್ಕಳ ಗಾಂಧಿ,' ' ಗಾಂಧಿ ಚರಿತ,' ನಾಟಕಗಳಾಗಿರುವ 'ಬೆಳೆಯುವ ಪೈರು' ಹಾಗೂ ' ಧ್ವಜವಂದನೆ ' ಇತ್ಯಾದಿ ಶಿಶುಸಾಹಿತ್ಯ ಗ್ರಂಥಗಳು ಕನ್ನಡ ಸಾಹಿತ್ಯದಲ್ಲಿ ಅಮೂಲ್ಯ ನಿಧಿಗಳಂತಿವೆ.

ಕನ್ನಡ ಸಾಹಿತ್ಯವು ಇಷ್ಟು ಸಾಹಿತ್ಯ ಪ್ರಕಾರಗಳ ಕೃತಿಗಳಿಗಷ್ಟೇ ಸೀಮಿತವಾಗಿಲ್ಲ. ಗಾಂಧಿಯವರ ಬರಹಗಳನ್ನು ಮತ್ತು ಅವರನ್ನು ಕುರಿತ ಗ್ರಂಥಗಳನ್ನೂ ಸಹ ಕನ್ನಡಕ್ಕೆ ಭಾಷಾಂತರಿಸಲಾಗಿದೆ. ಮೊದಲು ಡಿ.ಕೆ. ಭಾರದ್ವಾಜರು ಗಾಂಧಿಯವರ ಹಿಂದ್ ಸ್ವರಾಜ್ ಹಾಗೂ ಇಂಡಿಯನ್ ಹೋಂ ರೂಲ್ ಎಂಬ ಪುಸ್ತಕವನ್ನು ಕನ್ನಡಕ್ಕೆ ಅನುವಾದಿಸಿದರು. ಅವರು ಗಾಂಧಿಯವರ 'ಅನಾಸಕ್ತಿಯೋಗ' ಎಂಬ ಕೃತಿಯನ್ನು 'ಬ್ರಹ್ಮಚರ್ಯೆಯೋ ಕಾಮಸಾಧನೆಯೋ' ಎಂಬ ಹೆಸರಿನಲ್ಲಿ ಭಾಷಾಂತರಿಸಿದ್ದಾರೆ. 'ಗಾಂಧೀ ಯೋಜನೆ', '1942 ಆಗಸ್ಟ್ 9 ರ ತರುವಾಯ', ಗಾಂಧೀಜಿಯವರ ರಾಜಕೀಯ ಪತ್ರಗಳು' 'ವರ್ಧಾ ಯಾತ್ರೆ', 'ನಿರ್ಮಾಣ ಕಾರ್ಯಕ್ರಮ', 'ನಯೀ–ತಾಲೀಂ', 'ನನ್ನ ಜೊತೆಗಾರರು', 'ವ್ಯಾವಹಾರಿಕ ಅಹಿಂಸೆ', 'ಸಂವಾದ ಮಾಲೆ,' 'ಪರ್ಣಕುಟಿ' ಇತ್ಯಾದಿಗಳು ಶ್ರೀ ಸಿದ್ಧವನಹಳ್ಳಿ ಕೃಷ್ಣ ಶರ್ಮರ ಅನುವಾದಿತ ಕೃತಿಗಳು. 'ಮಹಾತ್ಮ ಗಾಂಧಿ' 'ಸತ್ಯವೇ ದೇವರು' 'ಮೋಹನ ಮಾಲೆ ಹಾಗೂ ನನ್ನ ಕನಸಿನ ಭಾರತ' 'ಗಾಧೀಜಿಯವರ ಸವಿಗತೆಗಳು', 'ದಕ್ಷಿಣ ಆಫ್ರಿಕದಲ್ಲಿ ಸತ್ಯಾಗ್ರಹ' ಹಾಗೂ ಮಹಿಳೆಯರಿಗೆ 'ಗಾಂಧೀ ಕಥಾವಲಿ' ಹಾಗೂ 'ಬಾಪೂ' 'ವಿನೋಬಾ ಕಂಡ ಗಾಂಧೀಜಿ', 'ಎಲ್ಲ ಮನುಷ್ಯರೂ ಸಹೋದರರು', 'ಗಾಂಧೀ ವಿಚಾರ ದೋಹನ', 'ಗೋಖಲೆ ನನ್ನ ರಾಜಕೀಯ ಗುರು', 'ನನ್ನ ಆರಂಭ ಜೀವನ' 'ಇವರು ಬಾಪು–ಮಹಾತ್ಮ ಗಾಂಧೀಜಿಗೆ ಸಂಬಂಧಿಸಿದ 150 ಸಂಗತಿಗಳು' 'ಗಾಂಧಿ ಶತದಲ', 'ಸ್ತ್ರೀಯರ

ಸಮಸ್ಯೆಗಳು', 'ಮಂಗಲ ಪ್ರಭಾತ', 'ಮಹಾತ್ಮ ಗಾಂಧಿ : 100 ವರ್ಷಗಳು' ಇತ್ಯಾದಿ ಗಳನ್ನು ಶ್ರೀಯುತರಾದ ಸ್ವಾಮಿ ಶಂಕರಾನಂದ ಸರಸ್ವತೀ, ನರಸಿಂಹ ಶಾಸ್ತ್ರಿ, ನರಸಿಂಹ ಸ್ವಾಮಿ, ಪಾಂ. ದು. ಶಹಾಣೆ, ಎಸ್.ವಿ. ಕೃಷ್ಣಮೂರ್ತಿರಾವ್. ಆರ್.ಆರ್. ದಿವಾಕರ್, ಬಾದ್ರಿ ಶಾಮಣ್ಣ, ಡಿ. ಎಲ್. ನರಸಿಂಹಾಚಾರ್. ಗುರುನಾಥ ಜೋಶಿ. ಕೂಡಲಿ ಚಿದಂಬರಂ, ಮ. ಗೋವಿಂದರಾಯ, ಸಿಂಪಿ ಲಿಂಗಣ್ಣ, ಪ್ರಹ್ಲಾದ ನರೇಗಲ್ಲು ಹಾಗೂ ವೆಂಕಟೇಶ ಮಳಿಯೆ. ರಾಮಚಂದ್ರ ವೆಂಕಟೇಶ ವಡವಿ, ಡಾ. ಹೆಚ್. ತಿಪ್ಪೇರುದ್ರ ಸ್ವಾಮಿ ಮುಂತಾದವರು ಭಾಷಾಂತರಿಸಿದ್ದಾರೆ.

ಇತರ ಭಾಷೆಗಳಲ್ಲಿ ಗಾಂಧಿಯವರ ಬಗ್ಗೆ ಶ್ರೀಯುತರಾದ ಪಟ್ಟಾಭಿ ಸೀತಾ ರಾಮಯ್ಯ, ಕಾ ಕಾ ಕಾಲೇಲ್ಕರ್ ಮುಂತಾದವರು ರಚಿಸಿರುವ ಕೃತಿಗಳನ್ನು ಕನ್ನಡಕ್ಕೆ ಭಾಷಾಂತರ ಮಾಡಲಾಗಿದೆ. ಶ್ರೀಮತಿ ಹೆಚ್. ವಿ. ಸಾವಿತ್ರಮ್ಮ ಲೂಯಿ ಫಿಶರ್‌ರವರ ಗಾಂಧಿಯವರನ್ನು ಕುರಿತ ಇಂಗ್ಲಿಷ್ ಕೃತಿಯನ್ನು 'ಮಹಾತ್ಮ ಗಾಂಧಿ ಜಗತ್ತಿಗೆ ಅವರ ಸಂದೇಶ' ಎಂಬುದಾಗಿ ಅನುವಾದಿಸಿದ್ದಾರೆ. ವಿ.ಎಸ್. ನಾರಾಯಣರಾಯರು ವಿನ್ಸೆಂಟ್ ಷೀನರ ಕೃತಿಯನ್ನು 'ಮಹಾತ್ಮ ಗಾಂಧಿ' ಎಂಬ ಹೆಸರಿನಲ್ಲಿ ಅನುವಾದ ಮಾಡಿದ್ದಾರೆ. ಶ್ರೀಯುತರಾದ ಡಾ. ಡಿ. ಜವರೇಗೌಡರ 'ನೆನಪು ಕಹಿಯಲ್ಲ' ಹಾಗೂ ಎಸ್. ವಿ. ಕೃಷ್ಣ ರಾಯರ 'ಭಾರತ ದರ್ಶನ' ನಾರಾಯಣ ಫಳಗಿಯವರ 'ಗಾಂಧಿ ಹತ್ಯೆ ಮತ್ತು ನಾನು', ಪ್ರಧಾನ ಗುರುದತ್ತರ 'ಗಾಂಧೀಜಿ—ನಾನು ಕಂಡಂತೆ' ಇತರ ಮುಖ್ಯವಾದ ಅನುವಾದಿತ ಕೃತಿಗಳು.

ಎಲ್ಲಕ್ಕಿಂತ ಹೆಚ್ಚಾಗಿ ಗಾಂಧಿ ಸ್ಮಾರಕ ನಿಧಿಯ ಮೈಸೂರು ಶಾಖೆಯು ಪೂಜ್ಯ ದಿವಂಗತ ಶ್ರೀ ಎಂ. ಯಮುನಾಚಾರ್ಯರ ಪ್ರಧಾನ ಸಂಪಾದಕತ್ವದಲ್ಲಿ ಗಾಂಧಿ ವಿಚಾರ ಧಾರೆಯನ್ನು ಕುರಿತ ಆತ್ಮಕಥೆ (ಸಂಕ್ಷಿಪ್ತ) –ಹಿಂದ್ ಸ್ವರಾಜ್ಯ, ದಕ್ಷಿಣ ಆಫ್ರಿಕದಲ್ಲಿ ಸತ್ಯಾಗ್ರಹ, ಗೀತಾ ಮಾತೆ, ಸತ್ಯ–ಅಹಿಂಸೆ, ಧರ್ಮ–ನೀತಿ, ಸಮಾಜ ಧರ್ಮ, ಜೀವನ ಶಿಕ್ಷಣ, ಅರ್ಥ ವಿಚಾರ, ಸತ್ಯಾಗ್ರಹ, ಮಹಿಳೆಯರು, ಪತ್ರಗುಚ್ಛ–೧, ೨, ೩, ನನ್ನ ಸಮಕಾಲೀನರು, ರಾಜನೀತಿ, ಸಂಭಾಷಣೆ ಭಾಷಣಗಳು ಮತ್ತು ಹೇಳಿಕೆಗಳು ಮುಂತಾದ 20 ಸಂಪುಟಗಳನ್ನು ಬೆಳಕಿಗೆ ತಂದಿದೆ. ಮೈಸೂರು ವಿಶ್ವವಿದ್ಯಾನಿಲಯದ ಗಾಂಧೀ ಭವನವು 'ಗಾಂಧೀ ವಿಚಾರ ಮಾರ್ಗ' ಎಂಬ ವಿಚಾರ ಗೋಷ್ಠಿಯ ಲೇಖನ ಸಂಕಲನ, 'ಶಿಕ್ಷಣ ಕ್ರಾಂತಿ' 'ಮಹಾತ್ಮ ಗಾಂಧಿ-100 ವರ್ಷಗಳು', 'ಭಾರತದ ಭಾಷಾ ಸಮಸ್ಯೆ, 'ಅಂಜಲಿ' ತೆಂಡುಲ್ಕರ್ ಅವರ ಕೃತಿಗಳ ಅನುವಾದವಾಗಿರುವ 'ಮಹಾತ್ಮ–ಸಂಪುಟ ೧, ೨, ೩, ೪, ೬, 'ಮಹಾತ್ಮ ಗಾಂಧಿಯವರ ಹಾಸ್ಯ ಪ್ರವೃತ್ತಿ ಮತ್ತು ಇತರ ಲೇಖನಗಳು', 'ಸರ್ವೋದಯ' ಶ್ರೀ ಶಂಕರೆಗೌಡರು ಭಾಷಾಂತರಿಸಿರುವ 'ಮಹಾತ್ಮ ಗಾಂಧಿ–ಅಂತಿಮ ಹಂತ ಸಂಪುಟ ೧, ೨, ಮುಂತಾದ ಕೃತಿಗಳನ್ನು ಪ್ರಕಟಿಸಿದೆ. ಇಷ್ಟು ಮಾತ್ರವಲ್ಲದೆ,

"ನನ್ನ ಕನಸಿನ ಭಾರತ", 'ದೇವರು ಧರ್ಮ', 'ಸತ್ಯಾಗ್ರಹ', 'ವಿದ್ಯಾರ್ಥಿಗಳು', ಒಳ್ಳೆಯ ಜೀವನ', 'ಸರ್ವೋದಯ', 'ಸತ್ಯ', 'ವಿದ್ಯಾರ್ಥಿ-ಧರ್ಮ', 'ಅಸ್ಪೃಶ್ಯತೆ', 'ಖಾದಿ-ಗ್ರಾಮೋದ್ಯೋಗ', ಪ್ರಾರ್ಥನೆ', 'ಹಿಂದೂ ಧರ್ಮ' ಮುಂತಾದ ಮುಖ್ಯ ವಿಷಯ ಸೂಚಿ ಅತಿ ಪುಟ್ಟ ಪುಸ್ತಕಗಳೂ ಪ್ರಕಟವಾಗಿವೆ. ಪ್ರಬುದ್ಧ ಕರ್ನಾಟಕದ ಗಾಂಧೀ ಶತಾಬ್ದಿ ಸಂಚಿಕೆಯಲ್ಲಿ ಶ್ರೀ ಟಿ.ವಿ. ಸುಬ್ರಹ್ಮಣ್ಯಂ ಹಾಗೂ ಶ್ರೀಮತಿ ಲೀಲಾ ಸುಬ್ರಹ್ಮಣ್ಯಂ ಅವರು

1. ಗಾಂಧೀಜಿಯವರ ಬರಹಗಳ ಕನ್ನಡ ಅನುವಾದಗಳು—75

2. ಗಾಂಧೀಜಿಯವರನ್ನು ಕುರಿತ ಕನ್ನಡ ಬರಹಗಳು ಮತ್ತು ಕನ್ನಡ ಅನುವಾದಗಳು—130

3. ಗಾಂಧೀಜಿಯವರ ಬಗೆಗೆ ಗ್ರಂಥಾಂತರ್ಗತ ಲೇಖನಗಳು — 110

ಎಂಬುದಾಗಿ ಒಂದು ಪಟ್ಟಿಯನ್ನು ಪ್ರಕಟಿಸಿದ್ದಾರೆ.

ವಿಚಾರ ಸಾಹಿತ್ಯ ಪ್ರೈವೇಟ್ ಲಿಮಿಟೆಡ್, ಸತ್ಯಶೋಧನ ಪ್ರಕಟನ ಮಂದಿರ, ಸುಬೋಧ ಪ್ರಕಾಶನ, ಮಿಂಚಿನಬಳ್ಳಿ ಕಾರ್ಯಾಲಯ, ಗಾಂಧಿ ಶಾಂತಿ ಪ್ರತಿಷ್ಠಾನ, ಗಾಂಧಿ ಸ್ಮಾರಕ ನಿಧಿ, ಮನೋಹರ ಗ್ರಂಥ ಭಂಡಾರ, ಕಾವ್ಯಾಲಯ, ಉಷಾ ಸಾಹಿತ್ಯ ಮಾಲೆ, ಅಂತರಂಗ ಕಾರ್ಯಾಲಯ, ಪ್ರತಿಭಾ ಗ್ರಂಥಮಾಲೆ, ಡಿ. ವಿ. ಕೆ. ಮೂರ್ತಿ, ಗಾಂಧೀ ಸಾಹಿತ್ಯ ಭಂಡಾರ, ಹಿಂದ್ ಕಿತಾಬ್ಸ್ ಲಿಮಿಟೆಡ್ ಬೆಂಗಳೂರು ಶಾಖೆ, ರಾಷ್ಟ್ರೋತ್ಥಾನ ಸಾಹಿತ್ಯ, ದುರ್ಗಾ ಪಬ್ಲಿಕೇಶನ್ಸ್, ಸಾಹಿತ್ಯ ಭಂಡಾರ, ಕರ್ನಾಟಕ ಸರ್ವೋದಯ ಸಾಹಿತ್ಯ ಸಮಿತಿ, ನವಯುಗ ಎಂಟರ್‌ಪ್ರೈಸ್ ಲಿಮಿಟೆಡ್, ದಿ ಬೆಂಗಳೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಕಂಪನಿ ಲಿಮಿಟೆಡ್, ಕರ್ನಾಟಕ ಶಿಕ್ಷಣ ಸಮಿತಿ, ಹಂಸಧ್ವನಿ ಪ್ರಕಾಶನ, ಅಧ್ಯಾತ್ಮ ಕಾರ್ಯಾಲಯ, ಭಾರತ ಸರ್ಕಾರದ ಪ್ರಕಾಶನ, ಪ್ರೇಮ ಸಾಹಿತ್ಯ ಕಾರ್ಯಾಲಯ, ಶ್ರೀ ತುಳಸೀದಾಸ ರಾಮಾಯಣ ಕಾರ್ಯಾಲಯ, ಬಿ. ಬಿ. ಡಿ. ಪವರ್ ಪ್ರೆಸ್, ಸುನೀಲ್ ಪ್ರಿಂಟರ್ಸ್, ಗ್ರಾಮ ಸೇವಾ ನಿಲಯ, ವಿಶ್ವ ಕರ್ನಾಟಕ ಪುಸ್ತಕ ಪ್ರಕಟನಾಲಯ, ಗಾಂಧೀ ಸಾಹಿತ್ಯ ಸಂಘ, ಮೋಹನ ಪ್ರಕಾಶನ, ಸಾಧನ ಮುದ್ರಣಾಲಯ, ಶಾರದಾ ಮಂದಿರ, ಸ್ವಾತಂತ್ರ್ಯ ಪ್ರಕಾಶನ, ಶ್ರೀ ಅರವಿಂದ ಗ್ರಂಥಾಲಯ, ಗಾಂಧೀ ಭವನ ಮೈಸೂರು, ಚೇತನ ಪ್ರಕಟನಾಲಯ, ಗೀತಾ ಬುಕ್ ಹೌಸ್, ವಯಸ್ಕರ ಶಿಕ್ಷಣ ಸಮಿತಿ, ತಳುಕಿನ ವೆಂಕಣಯ್ಯ ಸ್ಮಾರಕ ಗ್ರಂಥ ಮಾಲೆ, ಮುಂತಾದ ಪ್ರಕಾಶಕರೆಲ್ಲರು ಕನ್ನಡದಲ್ಲಿ ಗಾಂಧಿ ಸಾಹಿತ್ಯ ಕೃತಿಗಳನ್ನು ಬೆಳಕಿಗೆ ತರುವುದರಲ್ಲಿ ಪ್ರಮುಖ ಪಾತ್ರವನ್ನು ವಹಿಸಿದ್ದಾರೆ.

ಒಟ್ಟಿನಲ್ಲಿ ಗಾಂಧಿಯವರ ಭವ್ಯ ಬದುಕು, ಅಪೂರ್ವ ವ್ಯಕ್ತಿತ್ವ, ಉದಾತ್ತ ತತ್ತ್ವ ಆದರ್ಶ ಹಾಗೂ ಅನುಪಮ ವಿಚಾರಧಾರೆಯನ್ನು ಕನ್ನಡ ಜನತೆಗೆ ಸ್ಪಷ್ಟ ಪಡಿಸಿಕೊಟ್ಟ, ಇವರೆಲ್ಲ ಅಭಿನಂದನಾರ್ಹರು.

ಪಥದರ್ಶನ

# ಹೊಸ ತಿರುವಿನಲ್ಲಿ ಸರ್ವೋದಯ

**ಕೆ. ಎಸ್. ನಾರಾಯಣಸ್ವಾಮಿ**

'ಸರ್ವೋದಯವೇ ಸ್ವಾತಂತ್ರ್ಯದ ಶ್ರೀತಂತ್ರ' ಎಂದರು ಕವಿ ಕುವೆಂಪು. ಸರ್ವೋದಯ ರಾಜ್ಯ ವ್ಯವಸ್ಥೆಯನ್ನು ಆಚಾರ್ಯ ವಿನೋಬಾ 'ಸರ್ವಾಯತನ' ಎಂದು ಕರೆದಿದ್ದಾರೆ. ಎಲ್ಲರೂ ಸೇರಿ ಸಮನಾಗಿ ಹೊಣೆ ಹೊತ್ತು ತಾವೇ ತಮ್ಮ ವ್ಯವಸ್ಥೆ ಮಾಡಿಕೊಳ್ಳುವುದು ಸರ್ವಾಯತನ. ಗ್ರಾಮ ಸಮಾಜ ಈ ಪದ್ಧತಿಗೆ ಆದರ್ಶಕ್ಷೇತ್ರ. ನಿಜವಾದ ಪ್ರಗತಿಶೀಲ, ಪಾರಸ್ಪರಿಕ, ವ್ಯವಸಾಯಾಧಾರಿತ ಚಿಕ್ಕ ಸಮಾಜದಿಂದ ವ್ಯವಸ್ಥಿತವಾಗಿ ಸರ್ವ ಅಧಿಕಾರವೂ ಹೊರ ಹೊಮ್ಮಿದಾಗ ಪ್ರಜಾರಾಜ್ಯ ಸರ್ವೋದಯ ಕಾರ್ಯವಾದೀತು. ಪ್ರಜಾಪ್ರಭುತ್ವ ಎಂಬ ಹೆಸರಿನಲ್ಲಿ ತಾನು ಸರ್ವಾಯತನ ಪದ್ಧತಿ ಎಂದು ತೋರಿಸಿಕೊಳ್ಳುವ ರಾಜ್ಯಪದ್ಧತಿಯ ನಾಟಕ ನಡೆದಿದೆ. ಆದರೆ ಶಾಸನಬಲವನ್ನೇ ನಂಬಿ ಶಸ್ತ್ರ ಶಕ್ತಿಯ ಆಧಾರದ ಮೇಲೆ ನಿಂತ ಯಾವುದೇ ರಾಜ್ಯಪದ್ಧತಿಯಾಗಲೀ ತಲಾ ಒಂದು ಮತ ಎಂದು ನಟನೆ ಮಾಡಿದರೂ ಅದು ನಿಜವಾಗಿ ಸರ್ವಾಯತನವಾಗಲಾರದು. ಹಿಂದುಸ್ತಾನದ ಪ್ರಾಚೀನ ಪಂಚಾಯತಿರಾಜ್ಯ ಪದ್ಧತಿ— ಅರಗಚ್ಚು ಆಗಿದ್ದರೂ ಈ ಬಗೆಯ ಒಂದು ಪ್ರಾಮಾಣಿಕ ಪ್ರಯತ್ನ ಎಂದು ಭಾವಿಸಿದ್ದರು ಗಾಂಧೀಜಿ. ನಮ್ಮ ಹಳ್ಳಿಗಳು ಇಂದಿಗೂ ಜೀವಂತವಾಗಿದ್ದರೆ ಈ ಪದ್ಧತಿಯೇ ಕಾರಣ! ಅದರ ಮೂಲ ಮೌಲ್ಯಗಳು ವಾಸ್ತವವಾಗಿ ಮಾನವೀಯ ಮೌಲ್ಯಗಳು. ಅಗಾಧ ಪ್ರಗತಿ ಸಾಧಿಸಿದರೂ ಅಪರಿಮಿತ ದುಷ್ಪರಿಣಾಮಗಳಿಗೆ ತುತ್ತಾಗಿ ಮಾನವ ಸಮಾಜದ ಅಗಾಧ. ಬಹು ಸಂಖ್ಯಾತರು ಅನುಭವಿಸುತ್ತಿರುವ ದಾರುಣ ದುಃಸ್ಥಿತಿ ನಿವಾರಿಸಲು ಮತ್ತೆ ವ್ಯವಸಾಯ ಕೇಂದ್ರಿತ, ಶ್ರಮನಿಷ್ಠ, ಸಣ್ಣ ಸಮಾಜಕ್ಕೇ ನಾವು ಹಿಂತಿರುಗುವುದು ಅನಿವಾರ್ಯ. ಜಗತ್ತಿನ ವಿಚಾರ ಪರರ ತರ್ಕವೂ ಈಗ ಇತ್ತಕಡೆಯೇ ಸಾಗಿದೆ.

ಈ ಶತಮಾನದ ಪ್ರಾರಂಭದಲ್ಲೇ ಗಾಂಧೀಜಿ ಈ ಬೆಳವಣಿಗೆಯನ್ನು ದ್ರಷ್ಟಾರರಂತೆ ಕಂಡು ಸರ್ವೋದಯ ಪಥದ ಅನಾವರಣ ಮಾಡಿದರು. 1909ರಲ್ಲಿ ಹೀಗೆ ಬರೆದರು :

" ಪಶ್ಚಿಮ ದೇಶಗಳು ಸುಧಾರಿಸಿ ನೂರು, ಇಲ್ಲ ನಿಜವಾಗಿ ಐವತ್ತೇ ವರ್ಷಗಳಾಗಿವೆ ಎಂದು ನೆನಪಿಡಬೇಕು. (1909ರಲ್ಲಿ) ಇಷ್ಟು ಅಲ್ಪ ಕಾಲದಲ್ಲೇ ಅವರಲ್ಲಿ ದಾರುಣ ವರ್ಗ ಮತ್ತು ವರ್ಣ ದ್ವೇಷದ ಸ್ಥಿತಿ ಕಾಣುತ್ತಿದೆ. ಈ ಪಾಡು ಭಾರತಕ್ಕೆ ಬರದಿರಲಿ ಎಂಬುದೇ ನಮ್ಮ ಪ್ರಾರ್ಥನೆ. ಈಗ ಈ ದೇಶಗಳೆಲ್ಲ ಯುದ್ಧ ಸಿದ್ಧತೆಗೆ ತೊಡಗಿವೆ. ಅನಂತರ ಎರಡು ಮಹಾಯುದ್ಧಗಳಾಗಿ ಮತ್ತೆ ಈಗ ಸ್ಫೋಟವಾಗುವ ಭಯ ಕಾಣು

ತ್ತಿದೆ). ಎಲ್ಲವೂ ಶಾಂತವಾಗಿರುವ ಭ್ರಮೆ ನಮಗೆ. ಒಂದು ಕಿಡಿ ಹಾರಿದರೂ ನರಕವೇ ಪ್ರತ್ಯಕ್ಷವಾದೀತು. ಯುರೋಪಿನ (ಈಗ ಅಮೇರಿಕ ರಷ್ಯಗಳೂ ಸೇರೀತು) ರಾಷ್ಟ್ರಗಳು ಜಗತ್ತಿನ ಬಹು ಸಂಖ್ಯಾತರಾದ ಕಪ್ಪುಜನರನ್ನು ತಮ್ಮ ಭಕ್ಷ್ಯ ಎಂದು ತಿಳಿದಿವೆ. ಧನಲೋಭ ತಾಂಡವವಾಡುವ ಕಡೆ ಬೇರೇನು ತಾನೇ ಸಾಧ್ಯ ? ಯಾವುದಾದರೂ ದುರ್ಬಲ ದೇಶ ಕಂಡರೆ ಸಾಕು ಮಾಂಸ ಕಂಡ ಹದ್ದುಗಳಂತೆ ಈ ರಾಷ್ಟ್ರಗಳು ಅದರ ಮೇಲೆ ಎರಗಿ ಬರುತ್ತವೆ. ಕಾರಣ ಈ ದೇಶಗಳ ಗಿರಣಿ-ಕಾರ್ಖಾನೆಗಳು. ಹೀಗೆನ್ನಲು ಸಾಕಷ್ಟು ಕಾರಣಗಳಿವೆ. " (ಹಿಂದ್‌ಸ್ವರಾಜ್ಯ)

ಭಾರತ ಸ್ವಾತಂತ್ರ್ಯೋದಯದೊಡನೆ ಸರ್ವೋದಯದ ಪಥ ನಿಚ್ಚಳವಾದೀತು ಎಂದು ಗಾಂಧೀಜಿ ಭಾವಿಸಿದ್ದರು. ಸಾವಿನ ಮುನ್ನಾದಿನ ಅವರು ಬರೆದಿಟ್ಟ ಉಯಿಲು ಅದಕ್ಕೆ ಸಾಕ್ಷಿ. ರಾಜಕೀಯದ ಅಧಿಕಾರ ಸ್ಪರ್ಧೆ ನಿಂತು ಸೇವಾ ಪ್ರಧಾನ ಲೋಕ ಶಕ್ತಿ ಬೆಳೆದು ಬರಲಿ ಎಂದರು. "ಲೋಕ ಸೇವಾ ಸಂಘ ಕಟ್ಟಿ ಕಾಂಗ್ರೆಸ್ಸನ್ನು ವಿಸರ್ಜಿಸಿ" ಎಂಬ ನಿರ್ಣಯವನ್ನೇ ಕಾಂಗ್ರೆಸ್ ಸಮಿತಿ ಸಭೆಗೆ ಕಳುಹಿಸಿದ್ದರು. ಆ ಮಾತು ದುರದೃಷ್ಟವಶಾತ್ ನಮ್ಮ ನಾಯಕರಿಗೆ ಆಗ ಹಿಡಿಸಲಿಲ್ಲ. ರಾಜ್ಯ ಶಕ್ತಿಯ ಕೈಲಿ ದಂಡವನ್ನು ಕೊಟ್ಟು ಸಮಾಜ ನಿಶ್ಯಸ್ತ್ರವಾಗುತ್ತದೆ ಶಾಸನದ ಕೈಲೇ ದಂಡಶಕ್ತಿಯೂ ಇರುವುದರಿಂದ ಅದನ್ನು ನಿಯಂತ್ರಿಸಲು ಜನತೆಯ ನೈತಿಕ ಅಭಿಕ್ರಮಶಕ್ತಿ, ಅಗತ್ಯ. ಅಂತಹ ಜನನಿಯಂತ್ರಿತ ಸಮಾಜದಲ್ಲಿ ಸೇವೆಯೇ ಸಾರ್ವಭೌಮ ಶಕ್ತಿ. ಅಧಿಕಾರ ಅದರ ಸೇವಕಿ. ಸೇವೆಯಿಂದ ಅದರ ಆಶೀರ್ವಾದ ಪಡೆದೇ ಜನ ಚುನಾವಣೆಗೆ ನಿಲ್ಲುತ್ತಾರೆ. ಲೋಕ ಸೇವಕ ಸಂಘದ ಈ ಅಮೋಘ ಕಲ್ಪನೆ ಕೊಟ್ಟು ರಾಜಕೀಯವನ್ನು ಸರ್ವೋದಯ ಶಕ್ತಿಯನ್ನಾಗಿ ಪರಿವರ್ತಿಸಲು ಗಾಂಧೀಜಿ ಬಯಸಿದ್ದರು. ಅವರು ಸಂಚಯನ ಮಾಡಿದ್ದ ಪುಣ್ಯಕ್ಷೀಣವಾಗಿ ಗೀತೆ ಹೇಳುವ ಹಾಗೆ "ಕ್ಷೀಣೇಪುಣ್ಯೇ ಮರ್ತ್ಯಲೋಕಮ್ ವಿಶಂತಿ" ಆಗಿದ್ದೇವೆ. ಸರ್ವೋದಯದ ಬೆಳಕು ಇನ್ನೂ ದೂರದಲ್ಲೇ ಇದೆ.

**ನಿರಾಶೆಯಲ್ಲಿ ಬೆಳಕು :**

1948ರ ಮಾರ್ಚಿಯಲ್ಲಿ ಸೇವಾಗ್ರಾಮದಲ್ಲಿ ಸಮಸ್ತ ಗಾಂಧೀವಾದಿಗಳ ಸಭೆ ಒಂದು ಸೋದರ ಸಂಘವನ್ನು ಸ್ಥಾಪಿಸಿ "ಸರ್ವೋದಯ ಸಮಾಜ" ಎಂದು ಹೆಸರಿಟ್ಟಿತು. ಪಂಡಿತ ನೆಹರು ಈ ಸಂದರ್ಭದಲ್ಲಿ "ಸ್ವಾತಂತ್ರ್ಯಕ್ಕೆ ನಿಜವಾದ ಅಪಾಯ ಹೊರಗಿನಿಂದಲ್ಲ, ಅದು ಆಂತರಿಕವಾದುದು ಎಂದು ವಿನೋಬಾ ಹೇಳಿದ ಮಾತನ್ನು ಪೂರ್ಣವಾಗಿ ಒಪ್ಪುತ್ತೇನೆ. ಇಂದಿನ ಹಿಂಸಾ ಪ್ರವೃತ್ತಿ ಮತ್ತು ಶೋಷಣೆ ಮುಂದುವರಿದರೆ ರಾಷ್ಟ್ರಶಕ್ತಿ ಛಿದ್ರ ಛಿದ್ರವಾದೀತು. ನಮ್ಮ ಮಾರ್ಗವೂ ಗುರಿಯಷ್ಟೇ ಶುದ್ಧವಾಗಿರಬೇಕು" ಎಂದರು. ರಾಜೇಂದ್ರ ಬಾಬುಗಳು ಈ ಸಮ್ಮೇಳನವನ್ನು ಉದ್ಘಾಟಿಸಿದರು. ವಿನೋಬಾ ಸರ್ವಸಮ್ಮತಿಯಿಂದ ಸರ್ವೋದಯ ಮಾರ್ಗದರ್ಶಕರಾಗಲಿ ಎಂದು ಎಲ್ಲರೂ ಅಂಗೀಕರಿಸಿದರು. ಆದರೆ ವಿಭಜನೆಯ ಆ ರಕ್ತದೋಕುಳಿಯ ಭಯಂಕರ ಪರಿಸ್ಥಿತಿಯಲ್ಲಿ ದೇಶಕ್ಕೆ ದಿಕ್ಕು ತೋರುವುದು ಕಠಿಣವಾಯಿತು.

ರಾಜ್ಯ ಸೂತ್ರ ಹಿಡಿದವರ ಮನವೆಲ್ಲ ಅಮೇರಿಕ, ರಷ್ಯಗಳಲ್ಲಿ ಲೀನವಾಗಿ ಹೋಯಿತು. ಯೋಜನೆಗಳ ಯುಗ ಪ್ರಾರಂಭವಾಯಿತು. 1950ರಲ್ಲಿ ರೂಪಗೊಂಡ ಯೋಜನಾ ಆಯೋಗ ಕರಡು ಸಿದ್ಧಮಾಡಿದಾಗ ಅದರ ಜನಕ ನೆಹರೂ, ವಿನೋಬಾ ಅವರಿಗೆ ಕಳುಹಿಸಿದರು. ಆ ವೇಳೆಗೆ ನಮ್ಮ ಸಂವಿಧಾನ ಜಾರಿಗೆ ಬಂದಿತು. ರಾಷ್ಟ್ರ ಚೇತನದ ಎರಡು ಕಣ್ಣುಗಳಂತೆ ರಾಜ್ಯಾಂಗ ಮತ್ತು ಯೋಜನೆ ಎರಡೂ ಗ್ರಾಮಾಭಿಮುಖವಾಗಬೇಕಾಗಿತ್ತು. ಅನುಕರಣೆಯ ಅತ್ಯುತ್ಸಾಹದ ಭರದಲ್ಲಿ ಆ ಆಶೆ ನಾಶವಾಯಿತು. ವಿನೋಬಾ ಹೀಗೆಂದರು.

"ನೀವು ಸಂವಿಧಾನದಲ್ಲಿ ಸರ್ವರಿಗೂ ಉದ್ಯೋಗ ಮತ್ತು ಅಶನದ ಭರವಸೆ ನೀಡಿದ್ದೀರಿ. ಯೋಜನೆಯಲ್ಲಿ ಅದನ್ನು ಪೂರ್ಣವಾಗಿ ಮರೆತಿದ್ದೀರಿ, ಈ ಹೊಣೆಗಾರಿಕೆಯನ್ನು ತೆಗೆದುಕೊಳ್ಳಲಾಗದಿದ್ದರೆ ಸ್ವರಾಜ್ಯಕೆ ಬೆಲೆಯಿಲ್ಲದಾದೀತು."......

"ಗ್ರಾಮೋದ್ಯೋಗಗಳು ಹೇಗೆ ಸ್ವಾವಲಂಬಿಯಾದಾವು ಈ ಯಂತ್ರಯೋಜನೆಯಲ್ಲಿ ? ಅವುಗಳ ಪಾದ ಕತ್ತರಿಸಿ ಎದ್ದುನಿಲ್ಲಿ ಎನ್ನುತ್ತೀರಿ. ಈ ಉದ್ಯೋಗಗಳು ಎಂದೂ ತಾವಾಗಿ ಜೀವಾಗಲಾರವು: ಅವುಗಳನ್ನು ಬ್ರಿಟಿಷರ ಕಾಲದಿಂದಲೂ ಉದ್ದೇಶ ಪೂರ್ವಕವಾಗಿಯೇ ನಾಶಗೊಳಿಸಲಾಗುತ್ತಿದೆ."........

"ಆಹಾರಕ್ಕಾಗಿ ಭಿಕ್ಷೆ ಬೇಡುತ್ತಾ ನಾವು ಯಾವ ಯೋಜನೆಯನ್ನು ಯಶಸ್ವಿಗೊಳಿಸುವೇವು ? ಸಶಕ್ತ ಸ್ತ್ರೀ-ಪುರುಷರೆಲ್ಲ ಗ್ರಾಮಗಳಲ್ಲಿಯೇ ಪೂರ್ಣ ಉದ್ಯೋಗ ಪಡೆಯುವುದಾದರೆ ನನ್ನ ಚರಕವನ್ನು ಒಲೆಗೆ ಹಾಕಿಯೇನು. ಆದರೆ ಗ್ರಾಮೋದ್ಯೋಗಗಳ ನೆರವಿಲ್ಲದೇ ಜನತೆಗೆ ನೀವು ಉತ್ಪಾದಕ ಉದ್ಯೋಗ ಒದಗಿಸಲಾರಿರಿ ಎಂದು ನನ್ನ ಖಚಿತ ನಂಬಿಕೆ. ಸಾಮ್ಯವಾದಿಗಳೂ ಇದನ್ನು ಒಪ್ಪುತ್ತಿದ್ದಾರೆ."........

"ಶಿಕ್ಷಣದ ಗತಿಯೇನು ? ನಮ್ಮ ಬಾವುಟದೊಡನೆ ಶಿಕ್ಷಣ ಪದ್ಧತಿಯೂ ಬದಲಾಗ ಬೇಡವೆ ? ಅಜ್ಞಾನ, ದಾರಿದ್ರ್ಯ. ನಿರುದ್ಯೋಗಗಳಿಂದ ಪಾರಾಗುವ ಉದ್ಯೋಗ ಶಿಕ್ಷಣ ಸಾರ್ವತ್ರಿಕವಾಗದೆ ನಮಗೆ ಯಾವ ಭವಿಷ್ಯವಿದೆ ?"........

"ಎಲ್ಲಕ್ಕಿಂತಲೂ ಹೆಚ್ಚಾಗಿ ಕೃಷಿಕರ ದೇಶವಾದ ಈ ರಾಷ್ಟ್ರದಲ್ಲಿ ಭೂ ಸಮಸ್ಯೆ ಈ ಕೂಡಲೆ ಪರಿಹಾರವಾಗಬೇಕು. ಸಮಾಜ, ಸರ್ಕಾರ ಮತ್ತು ಸೇವಾ ಕಾರ್ಯಕರ್ತರು ಎಲ್ಲ ಈ ಭೂಯಜ್ಞದಲ್ಲಿ ಧುಮುಕಿ ಕೆಲಸ ಮಾಡಬೇಕು. ಭೂದಾನ ನನಗೆ ತೋರುವ ಅಮೋಘ ಮಾರ್ಗ ಅಹಿಂಸಾಕ್ರಾಂತಿಯ ಮೊದಲ ಹೆಜ್ಜೆ. ನಮ್ಮ ಜನತೆಯ ಅಮರ ಸಾಂಸ್ಕೃತಿಕ ತಳಹದಿಗನುಗುಣ ಕಾರ್ಯಕ್ರಮ. ಪ್ರತಿಶತದಲ್ಲಿ ಎಂಭತ್ತು ಜನಕ್ಕೆ ವ್ಯವಸಾಯವೇ ಆಧಾರ ಅವರಲ್ಲಿ. ಐದನೇ ಒಂದು ಭಾಗ ಭೂಹೀನ ರೈತರು ಇದ್ದಾರೆ ಉತ್ಪಾದನಾ ಉಪಕರಣ ಒಂದೇ, ಭೂಮಿ, ಭೂವಿತರಣೆ ಈ ಆಧಾರದ ಮೇಲೆ ಆಗಬೇಕು. ಭೂಸ್ವಾಮ್ಯ ಕೊನೆಗಾಣಬೇಕು. ಸರ್ವರಿಗೂ ಸಮಬಾಳು ದೊರೆಯುವ ವ್ಯವಸ್ಥೆ ಆಗಬೇಕು."

ಸರ್ವೋದಯ ಕಾರ್ಯಕರ್ತರಿಗೆ ಹೀಗೆ ಹೇಳಿದರು 1953ರ ಚಾಂಡೀಲ್ ಸಮ್ಮೇಳನದಲ್ಲಿ :

" ಹಳ್ಳಿ ಹಳ್ಳಿ ತಿರುಗುವುದಾದೀತೇ. ಅಡ್ಡದಾರಿ ಹಿಡಿದು ಕಾನೂನು ಮಾಡಿಬಿಡಿ ಎಂದು ಹೇಳಿದರೆ ಅದು ನಮ್ಮ ಕೆಲಸವಲ್ಲ. ಕಾನೂನು ಆಗಲಿ ನಮಗೆ ಸಹಕಾರ ಸಿಗಲಿ. ಆದರೆ ಅದು ನಮ್ಮ ಸ್ವಧರ್ಮಾಚರಣೆ ಅಲ್ಲ. ವಿಚಾರ ಕ್ರಾಂತಿಯೇ ಮೊದಲ ಹೆಜ್ಜೆ. ಸರ್ವೋದಯ ವಿಚಾರದಲ್ಲಿ ಶ್ರದ್ಧೆಯಿಟ್ಟು ಹಳ್ಳಿ ಹಳ್ಳಿಗೆ ಹೋಗಲೇ ಬೇಕು. ವಿಚಾರ ಶಾಸನವೆ ನಮ್ಮ ಉಪಕರಣ " ಎಂದರು. ಜಯಪ್ರಕಾಶರು ಸಂಪೂರ್ಣ ಸಮ್ಮತಿಸಿ ಜೀವನದಾನಿಯಾದರು.

1957 ಸರ್ವೋದಯ ಚಳುವಳಿ ಉತ್ತುಂಗ ಶಿಖರ ಮುಟ್ಟಿತ್ತು, ಎಲವಾಲದ ಗ್ರಾಮದಾನ ಪರಿಷತ್ತಿನಲ್ಲಿ ಅಂದಿನ ಸಮಸ್ತ ರಾಷ್ಟ್ರ ನಾಯಕರೂ ಒಕ್ಕೊರಲಿನಿಂದ ವಿನೋಬಾ ಅವರ ಅಮೋಘ ಮಾರ್ಗಕ್ಕೆ ಶರಣು ಬಂದರು. ಸರ್ವೋದಯ ವಿಚಾರ ಮಾರ್ಗಕ್ಕೆ ಎಲ್ಲೆಲ್ಲೂ ಅದ್ಭುತ ಸ್ವಾಗತ ಸಿಕ್ಕಿತ್ತು. ವಿನೋಬಾ-ಜೆ. ಪಿ-ಶಂಕರರಾವ್‌ಜೀ ಧೀರೇಂದ್ರಭಾಯಿ-ಧರ್ಮಾಧಿಕಾರಿ, ಇಂಥವರ ಅಪ್ರತಿಹತ ತಪಶಕ್ತಿ ಪ್ರಾಪ್ತವಾಗಿತ್ತು ಜನತೆ ಅತ್ಯುತ್ಸಾಹದಿಂದ ಪಾಲ್ಗೊಳ್ಳುತ್ತಿದ್ದರು.

ಮೂಲಭೂತ ತಾತ್ವಿಕ ಅಡಿಗಲ್ಲು ಸಿದ್ಧವಾಯಿತು. ಸರ್ವೋದಯ ಚಳುವಳಿಗೆ ಸ್ಪಷ್ಟರೂಪ ಬಂದಿತು, ಸರ್ವಸಮ್ಮತ ಭೂಮಿಕೆಗೆ ಪರಿವರ್ತನೆಯ ಗುರಿಗಳು ಸ್ಪಷ್ಟ ವಾದವು. ಗ್ರಾಮದಾನದ ಅರ್ಥ ಕುರಿತು ವಿನೋಬಾ ಈ ಅಂಶಗಳನ್ನು ಒತ್ತಿ ಹೇಳಿದರು.

೧) ದಾರಿದ್ರ್ಯ ನಿರ್ಮೂಲನ.

೨) ಭೂ ಸ್ವಾಮ್ಯದ ಸಾಮಾಜೀಕರಣಕ್ಕೆ ಭೂ ಒಡೆಯರ ಪ್ರೀತಿಯ ಸಹಕಾರ.

೩) ಪಾರಸ್ಪರಿಕತೆಯ ಶ್ರಮಜೀವನದಲ್ಲಿ ತೊಡಗಿಸಿ ವರ್ಗದ್ವೇಷ ತಪ್ಪಿಸುವುದು.

೪) 'ಯಜ್ಞ' 'ದಾನ' 'ತಪ'ಗಳೆಂಬ ಸಾಂಸ್ಕೃತಿಕ ಅಡಿಗಲ್ಲುಗಳನ್ನು ಆಧುನಿಕ ಗೊಳಿಸುವುದು.

೫) ಅಸಂಗ್ರಹ, ಸಹಕಾರ, ಸ್ವಾವಲಂಬನೆಗಳ ಗ್ರಾಮ ಸಮಾಜ ವ್ಯವಸ್ಥೆ.

೬) ಪಕ್ಷಾತೀತ ಐಕ್ಯತೆ ಸಾಧಿಸಿ ರಾಜಕೀಯವನ್ನು ಶುದ್ಧಗೊಳಿಸುವುದು.

ಈ ಸಂತವಾಣಿ ಎರಡು ದಶಕಗಳಿಗೂ ಮೀರಿ ಪ್ರತಿಧ್ವನಿಸಿ ಜನತೆಯಲ್ಲಿ ಸರ್ವೋದಯದ ಸ್ಥಾಯೀ ಆಕಾಂಕ್ಷೆಯನ್ನು ಶುದ್ಧ ಶ್ರುತಿಯನ್ನಾಗಿ ಪರಿವರ್ತಿಸಿತು. ಅಖಂಡ ಅಜೇಯ ಪಾದಯಾತ್ರೆಗಳಿಂದ ಕೋಟಿ ಕೋಟಿ ಹೃದಯಗಳನ್ನು ತಟ್ಟಿ ಎಚ್ಚರಿಸಿತು. ನಿರಾಶೆಯಲ್ಲಿ ಆಶಾಕಿರಣ ಮೂಡಿತ್ತು.

**ಕಾಲಚಕ್ರ ಹಳಿ ತಪ್ಪಿತು :**

ರಾಜಕೀಯ ಕ್ಷೇತ್ರ ತನ್ನ ಡೊಂಕು ದಾರಿಯಲ್ಲೇ ಸಾಗಿತು. ಯಾವ ಸಮಗ್ರ

ಯೋಜನೆಯೂ ಸರ್ವೋದಯ ಸಿದ್ಧಾಂತಗಳ ಮೇಲೆ ರೂಪಿತವಾಗಲೇ ಇಲ್ಲ. ಪಕ್ಷ
ರಾಜಕಾರಣ, ಜಾತೀಯತೆ, ಅಧಿಕಾರ ಲಾಲಸೆಗಳು ಆವರಿಸಿ ನಿಂತು ರಾಜ್ಯಶಕ್ತಿ ಧನಿಕರ
ದಾಸಿಯಾಯಿತು. ಅಧಿಕಾರ ದಾಹಿಗಳ ರಣರಂಗವಾಯಿತು. ಭ್ರಷ್ಟಾಚಾರ, ಕಳ್ಳಸಂತೆ
ಕಪ್ಪುಹಣ, ಕುಶಿಕ್ಷಣ, ಹಿಂಸಾಚಾರಗಳು ಭಾರತದ ಪ್ರಜಾಸತ್ತಾತ್ಮಕ ಸಂವಿಧಾನವನ್ನೇ
ನಾಶಮಾಡುವ ಅಂಚಿಗೆ ಬಂದು ನಿಂತಿತು. ಸ್ವಾತಂತ್ರ್ಯಗಳು ನಾಶವಾಗುವ ಸರ್ವಾಧಿ
ಕಾರದ ಅನುಭವವೂ ಸ್ವಲ್ಪ ಕಾಲ ಆಯಿತು. ಭೂದಾನ ಗ್ರಾಮದಾನಗಳ ಸಂದೇಶ
ಲಕ್ಷಾಂತರ ಹಳ್ಳಿಗಳನ್ನೇ ಮುಟ್ಟಿದ್ದರೂ ಹೀಗೇಕೆ ಎಂಬ ಯಕ್ಷ ಪ್ರಶ್ನೆ:ಸರ್ವೋದಯ
ಕಾರ್ಯಕರ್ತರನ್ನು ತಲ್ಲಣಿಸಿತು. ಅರವತ್ತರ ದಶಕದಲ್ಲಿ ದೇಶದಲ್ಲೆಲ್ಲಾ ಅಶಾಂತಿ–ಅಶಿಸ್ತು
ದಂಗೆ, ದರೋಡೆಗಳು ತಾಂಡವವಾಡುತ್ತಾ ಯುವಸ್ತೋಮ ಹುಚ್ಚಾಗುವಂತೆ
ಮಾಡಿತು. ನಗರಗಳಲ್ಲಿ ಕೇಂದ್ರಿತವಾದ ವಿಶ್ವವಿದ್ಯಾನಿಲಯಗಳಲ್ಲೆಲ್ಲ ವಿಕೋಪ ಘರ್ಷಣೆ
ಹಿಂಸಾಚಾರಗಳು ನಡೆಯುತ್ತಿದ್ದವು. ಬುದ್ಧಿಜೀವಿಗಳು ನಿಷ್ಕ್ರಿಯರಾದರು. ಭ್ರಷ್ಟ
ರಾಜಕಾರಣಿಗಳೂ, ಕಳ್ಳಸಂತೆಕೋರರೂ, ಅಪಮಾರ್ಗದ ಶ್ರೀಮಂತರೂ ಜನತೆಯ
ಮೇಲೆ ತಮ್ಮ ಸಾಮ್ರಾಜ್ಯವನ್ನು ಸ್ಥಾಪಿಸಿ, ಸರ್ವೋದಯ ಚಳುವಳಿಯನ್ನು
ಹತ್ತಿಕ್ಕಲು ಅಗಾಧ ಪ್ರಯತ್ನ ಮಾಡಿದರು.

ದೇಶದಲ್ಲಿ ಲಕ್ಷಗಟ್ಟಲೆ ಗ್ರಾಮಗಳು ಸರ್ವೋದಯದ ಸಂಕಲ್ಪ ಮಾಡಿದ್ದವು.
43 ಲಕ್ಷ ಎಕರೆ ಜಮೀನು ಭೂದಾನದಲ್ಲಿ ಸಂಗ್ರಹವಾಗಿತ್ತು. 12 ಲಕ್ಷ ಭೂ
ಹೀನರಿಗೆ ವಿತರಣೆ ಆಗಿತ್ತು. 1 ಲಕ್ಷ 68 ಸಾವಿರ ಗ್ರಾಮದಾನ ಸಂಕಲ್ಪಗಳಾಗಿದ್ದವು.
ಬಿಹಾರದಲ್ಲೇ ಇಪ್ಪತ್ತು ಲಕ್ಷ ಎಕರೆ ಜಮೀನು ದಾನವಾಗಿ ಬಂದು, ಎರಡು ಲಕ್ಷ
ಮಾತ್ರವೇ ಹಂಚಿಕೆಯಾಗಿತ್ತು. ಭೂ ಹೀನ ರೈತರ ಪಾಡು ಸುಧಾರಿಸಲಿಲ್ಲ. ಭೂ
ದಾನ, ಗ್ರಾಮದಾನ ಶಾಸನಗಳಾದರೂ ಸಮಗ್ರ ರೀತಿಯ ಭೂ ಸುಧಾರಣೆಯ ಕಾರ್ಯಕ್ಕೆ
ಶಾಸನ ಸಭೆಗಳೇ ಅಡ್ಡಿ ಆತಂಕಗಳನ್ನು ತಂದೊಡ್ಡಿದವು. ಸರ್ವೋದಯ–ಗಾಂಧೀ
ಮಾರ್ಗ–ಗ್ರಾಮರಾಜ್ಯ ಇವು ಪ್ರಗತಿ ವಿರೋಧ ಶಕ್ತಿಗಳೆಂದೇ ಪ್ರಚಾರ ನಡೆಯಿತು.
ಸಹಸ್ರಾರು ಮೇಧಾವಿ ಯುವಕರು ನಕ್ಸಲೀಯ ಹಿಂಸಾಚಾರ ಚಟುವಟಿಕೆಗಳಲ್ಲಿ ತೊಡಗಿ
ದರು. ವಿದೇಶೀ ಸಹಾಯದಿಂದ ಸ್ವತಂತ್ರ ಭಾರತದ ರಾಜ್ಯ ಶಕ್ತಿಯ ಮೇಲೆ ಸರ್ವಾಧಿ
ಕಾರೀ ಶಸ್ತ್ರ ಶಕ್ತಿಯನ್ನು ಹೇರಿಸುವ ಪ್ರಯತ್ನಗಳಿಗೂ ಪ್ರೋತ್ಸಾಹ ದೊರೆಯಿತು.
ಗಾಂಧೀ–ವಿನೋಬಾ–ಜೆ. ಪಿ., ರಾಜಕೀಯದಿಂದ ಪಲಾಯನ ಮಾಡಿದ ಅವ್ಯವಹಾರಿ
ಗಳು, ಅವರು ಅವೈಜ್ಞಾನಿಕರು, ಅವರೆಲ್ಲ ಪ್ರಗತಿ ವಿರೋಧಿಗಳು ಎಂಬ ಪ್ರಚಾರ ನಡೆ
ಯಿತು. ಸರ್ವೋದಯ ಚಳುವಳಿ ಈ ಸವಾಲನ್ನು ಎದುರಿಸಲು ಮತ್ತೆ ಜನ ಶಕ್ತಿ
ಯನ್ನೇ ಮರೆ ಹೋಗಬೇಕಾಯಿತು. ಆದರೆ ಅತ್ಯಗಾಧ ಕೇಂದ್ರಿತ ಅರ್ಥ ವ್ಯವಸ್ಥೆ
ರಾಜಕೀಯ ಕೇಂದ್ರಾಧಿಕಾರ ಸೈನ್ಯಶಕ್ತಿ ಇವನ್ನು ಬಳಸಿಕೊಂಡು ಇಡೀ ಜನತೆಯ
ಕರ್ತೃತ್ವ ಶಕ್ತಿಯನ್ನೇ ನಾಶ ಮಾಡಿ ದಾಸ್ಯಕ್ಕೆ ನೂಕಿತು, ಗ್ರಾಮ ಜೀವನ
ಅಸಹನೀಯವಾಯಿತು. ಭಯ ತುಂಬಿದ ದೇಶ ವಿಹ್ವಲವಾಗುತ್ತಿತ್ತು.

**ಹೊಸ ಪ್ರಕಾಶ :**

ಕಳೆದ ನಾಲ್ಕು ವರ್ಷಗಳಲ್ಲಿ ದೇಶದ ಇತಿಹಾಸದಲ್ಲೇ ಒಂದು ಹೊಸ ತಿರುವು ಸಂಭವಿಸಿತು. ರಾಜಕೀಯ ಪಕ್ಷಗಳೂ, ಬುದ್ಧಿಜೀವಿ ಸಂಸ್ಥೆಗಳೂ, ಶ್ರೀಮಂತ ವರ್ಗದವರೂ ನಿಸ್ಸಹಾಯಕರಾಗಿ ಅಥವಾ ಸ್ವಾರ್ಥ ಬುದ್ಧಿಯಿಂದ ದೇಶದ ಅವನತಿಯನ್ನು ತಡೆಗಟ್ಟಲು ಅಸಮರ್ಥವಾದಾಗ ಯುವಜನ ಸ್ವಾಭಾವಿಕವಾಗಿಯೇ ಸಿಡಿದೆದ್ದು ಗುಜರಾತಿನಲ್ಲಿ, ಬಿಹಾರದಲ್ಲಿ, ಹರಿಯಾನದಲ್ಲಿ, ದೆಹಲಿಯಲ್ಲಿ ಪ್ರಚಂಡ ಚಳುವಳಿಗಳನ್ನು ನಡೆಸಿತು. ಈ ಅಗಾಧ ಶಕ್ತಿ ಹಿಂಸಾಚಾರದ ಅಪಮಾರ್ಗದಲ್ಲಿ ನಾಶವಾಗುವುದನ್ನು ತಪ್ಪಿಸಿ, ರಚನಾತ್ಮಕ ಕ್ರಾಂತಿ ಪೋಷಕ ಗುರಿಗಳೆಡೆಗೆ ಕೊಂಡೊಯ್ದ ಕೀರ್ತಿ ಸರ್ವೋದಯ ನಾಯಕ ಜಯಪ್ರಕಾಶರದು. ಎಲ್ಲ ನಾಯಕತ್ವದಲ್ಲೂ ಜನತೆಗೆ ಭರವಸೆ ತಪ್ಪಿ ಹೋದಾಗ ಜನತಾ ಚಳುವಳಿಗೆ ಆಸರೆಯಾಗಿ ನಿಂತು, ನಿಃಸ್ವಾರ್ಥ ಮಾರ್ಗದರ್ಶನ ಒದಗಿಸಿ, ಸಮಗ್ರ ಜೀವನ ಪರಿವರ್ತನೆ ಮತ್ತು ನೈತಿಕ ಪುನರುತ್ಥಾನ ಸಾಧಿಸುವ ಹೊಸ ದಿಶೆಯ ದರ್ಶನ ಜಯಪ್ರಕಾಶರಿಂದ ದೊರೆಯಿತು. ಸಂಪೂರ್ಣ ಕ್ರಾಂತಿಯ ಕರೆ ಬಿರುಗಾಳಿಯಂತೆ ಆವರಿಸಿ ನಿಂತಿತು. ಸರ್ವೋದಯ ಆಂದೋಳನ ಹೊಸ ಮಜಲನ್ನು ಮುಟ್ಟಿನಿಂತು ಮತ್ತೆ ಗಾಂಧೀ ಪಥದೆಡೆಗೆ ಜನಮಾನಸವನ್ನು ಒಲಿಸಿಕೊಂಡಿತು.

ರಾಜಕೀಯ ಕ್ಷೇತ್ರದಲ್ಲಿ ಆಮೂಲಾಗ್ರ ಬದಲಾವಣೆಗಳಾಗದೆ ಸರ್ವೋದಯ ಚಳುವಳಿ ಗ್ರಾಮಸ್ವರಾಜ್ಯ ಆಂದೋಲನ ಮುಚ್ಚು ಸೂರಾದೀತು. ಆದ್ದರಿಂದ ಸರ್ವಾಧಿಕಾರೀ ಶಕ್ತಿಗಳೆದುರು ಲೋಕಶಕ್ತಿ, ಲೋಕನೀತಿ, ಲೋಕ ಕ್ರಾಂತಿಗಳ ಶಕ್ತಿಯುತ ಸಂಘಟನೆ ಮಾಡಿ ಎಂದರು ಜಯಪ್ರಕಾಶ್. ಆ ಪರ್ವ ಸಮಯದಲ್ಲಿ ಕೇಂದ್ರಿತ ಆಪಕಿತ ವ್ಯವಸ್ಥೆಯೊಡನೆ ನೇರ ಸಂಘರ್ಷ ನಡೆದು ಜನಶಕ್ತಿಯ ಹೊಸ ಅಲೆ ಎದ್ದು ನಿಂತಾಗ ಜಯಪ್ರಕಾಶರು ಅಂದಿನ ವಿರೋಧ ಪಕ್ಷಗಳನ್ನು ಕ್ರೋಢೀಕರಿಸಿ ಜನತೆಯ ಮುಂದೆ ನಿಲ್ಲಿಸುವ ಸಾಹಸ ಮಾಡಿದರು. ಮತಪೆಟ್ಟಿಗೆಯ ಕ್ಷಿಪ್ರಕ್ರಾಂತಿಯಲ್ಲಿ ಸರ್ವಾಧಿಕಾರೀ ಶಕ್ತಿಗಳು ಕೊಚ್ಚಿ ಹೋದವು. ಆದರೆ ಯಾರಲ್ಲಿ ಭರವಸೆಯಿಟ್ಟ ಜನ ಅಧಿಕಾರ ಸ್ಥಾನಕ್ಕೆ ಕಳುಹಿಸಿದರೋ ಅವರು ಸರ್ವೋದಯ ಸಿದ್ಧಾಂತಗಳನ್ನೂ, ಸಂಪೂರ್ಣ ಕ್ರಾಂತಿಯ ಧ್ಯೇಯಗಳನ್ನೂ, ಜಯಪ್ರಕಾಶರ ಉನ್ನತ ಭಾವನೆಗಳನ್ನೂ ಗಾಳಿಗೆ ತೂರಿ ಬಿಟ್ಟರು. ಅಭದ್ರತೆ, ಅರಾಜಕತೆ, ಆರ್ಥಿಕ ದುರವಸ್ಥೆಗಳಿಂದ ನರಳಿದ ಜನ ಮತ್ತಗಟ್ಟೆಯಲ್ಲಿ ಆ ಪಕ್ಷವನ್ನು ಸಂಪೂರ್ಣವಾಗಿ ಸೋಲಿಸಿ ಬಿಟ್ಟರು. ಇತಿಹಾಸ ಚಕ್ರ ಒಂದು ಪೂರ್ಣ ಉರುಳನ್ನು ಉರುಳಿತು. ಚುನಾವಣೆಗಳ ಮುನ್ನವೇ ಜಯಪ್ರಕಾಶರು ದಿವಂಗತರಾದರು. ಸರ್ವೋದಯ ಕಾರ್ಯಕರ್ತರು ಪಕ್ಷರಾಜಕಾರಣದಿಂದ ದೂರವಾಗಿ ಗ್ರಾಮ ಸ್ವರಾಜ್ಯ ಕಾರ್ಯದಲ್ಲಿ ತೊಡಗಿ ಲೋಕಶಕ್ತಿ ನಿರ್ಮಾಣ ಮಾಡಲು ಮತ್ತೆ ಶ್ರಮಿಸಿ ಎಂದರು. ತಮ್ಮ ಕೊನೆಯ ದಿನಗಳಲ್ಲಿ ಜೆ. ಪಿ. ಗಾಂಧೀ ವಿನೋಬಾ ಅವರ ತತ್ವಪ್ರಣಾಲಿ ರಾಜಕೀಯ ಕ್ಷೇತ್ರದ ಅನುಷ್ಠಾನ ತತ್ವವಾಗುವಂತೆ ಶ್ರಮಿಸಿ ಎಂಬ

ಆದೇಶಪತ್ರರು. ಸರ್ವೋದಯ ಆಂದೋಲನ ಮತ್ತೊಂದು ಘಟ್ಟ ಮುಟ್ಟಿ ನಿಂತಿತು.

**ಮುಂದಿನ ಹೆಜ್ಜೆ :**

1970 ರಲ್ಲೀ ಕಾಶಿ ವಿಶ್ವವಿದ್ಯಾನಿಲಯದ ಘಟಿಕೋತ್ಸವ ಭಾಷಣ ಮಾಡುತ್ತಾ ಜಯಪ್ರಕಾಶರು ಹೀಗೆಂದಿದ್ದರು :

" ಈ ದಶಕದ ಮಹತ್ತರ ಪ್ರಶ್ನೆಗಳು ರಾಜಕೀಯ ವಲಯದಲ್ಲಿ ಈಗ ಉದ್ಭವಿಸಿವೆ. ಕೆಲವು ಚಲನೆಗಳು ಸ್ಪಷ್ಟ. ರಾಜಕೀಯ ಅಸಂಘಟನೆ ಹರಡುತ್ತ ಸಾಗಬಹುದು. ತಾತ್ವಿಕ ಪುನಸ್ಸಂಘಟನೆಗಳಿಗಿಂತ ಸ್ವಾರ್ಥ ಬುದ್ಧಿಯ ವಿಚ್ಛೇದನ ಕಾರ್ಯವೇ ಹೆಚ್ಚಾದೀತು. ತತ್ವ ನಿಷ್ಠೆಯ ಅವನತಿ ಉಲ್ಬಣಿಸಬಹುದು. ಗುಂಪುಗಾರಿಕೆ ಪಕ್ಷಾಂತರಗಳು ಹೆಚ್ಚೀತು. ಸರ್ಕಾರಗಳ ಅಭದ್ರತೆ ತಾಂಡವವಾಡೀತು. ಇವೆಲ್ಲ ಲೋಕಶಕ್ತಿಗೆ ಸವಾಲುಗಳು. ಯಾವುದೇ ಪವಾಡದಿಂದ ಇದು ಸರಿ ಹೋಗದು. ಯಾವ ವ್ಯಕ್ತಿಯಾಗಲೀ, ಪಕ್ಷವಾಗಲೀ ತಮಗೆ ರಕ್ಷಕಶಕ್ತಿಯಾಗುವುದಿಲ್ಲ.........ಪಕ್ಷ ರಾಜಕೀಯದಿಂದ ಮೇಲೇರಿ ಯುಕ್ತಾಯುಕ್ತ ವಿವೇಕದ ಧ್ವನಿಯೆತ್ತಿ ಹೇಳಿ, ನೀತಿ–ಅನೀತಿ. ನ್ಯಾಯ–ಅನ್ಯಾಯಗಳನ್ನು ನಿಷ್ಪಕ್ಷಪಾತವಾಗಿ ಎತ್ತಿ ತೋರಿಸುವ ಆರೋಗ್ಯಕರ ಸುದೃಢ ಸಾರ್ವಜನಿಕಾಭಿಪ್ರಾಯ ರೂಪಿಸುವುದೇ ಇಂದಿನ ರಾಷ್ಟ್ರೀಯ ಧರ್ಮ. ಅದೇ ನಮ್ಮ ಕರ್ತವ್ಯ"

ಸರ್ವೋದಯ ಆಂದೋಳನ ಈಗ ಮತ್ತೆ ಜನಾಭಿಮುಖ ರಚನಾತ್ಮಕ ಕ್ರಾಂತಿಯ ಹೆಜ್ಜೆಗಳನ್ನಿಟ್ಟು ಲೋಕ ಕ್ರಾಂತಿಯ ಅಭಿಕ್ರಮಕ್ಕೆ ಶ್ರಮಿಸಬೇಕಾಗಿದೆ. ವಿಚಾರ ಶಾಸನ, ಸ್ವತಂತ್ರ ವ್ಯಕ್ತಿ ನಿಷ್ಠೆ, ಗ್ರಾಮ ಸ್ವರಾಜ್ಯ ಆಂದೋಲನ ಈ ಕ್ರಾಂತಿ ಪಥದ ಅಹಿಂಸಾತ್ಮಕ ಅನುಷ್ಠಾನ ಮಾರ್ಗವೇ ಸರ್ವೋದಯದ ರಾಜ ಮಾರ್ಗ. ಆ ದಿಶೆಯಲ್ಲಿ ಹೆಜ್ಜೆ ಹಾಕಲು ಗಾಂಧೀಜೀವನ ಮೌಲ್ಯಗಳಲ್ಲಿ ನಿಷ್ಠೆಯುಳ್ಳ ಸಮಸ್ತ ಕಾರ್ಯಕರ್ತರಿಗೂ ಎಂಭತ್ತರ ಈ ದಶಕ ಹೊಸ ದಿಗಂತಗಳನ್ನು ಅನಾವರಣ ಮಾಡುತ್ತದೆ. ಕವಿ ಕುವೆಂಪು ಹೃದಯ ತುಂಬಿ ಹಾಡಿರುವಂತೆ ಜನತೆಯಲ್ಲಿ ಶ್ರದ್ಧೆಯಿಟ್ಟು ದುಡಿಯಬೇಕಾಗಿದೆ.

–"ಹನಿ ಹನಿ ಸೇರುತ ಹರಿಯುವ ಜನ ಜನತಾಶಕ್ತಿ
ತಾನದೆ ತಿಳಿಯಯ್ ಸಾಮಾನ್ಯರ ಶ್ರೀ ಶಕ್ತಿ
ಸರ್ವೋದಯವೆಮ್ಮಯ ಗುರುದೀಕ್ಷಾ ಮಂತ್ರಂ
ಸರ್ವ ಪ್ರೇಮದ ಸಮತಾಭಾವಂ ಶಿಕ್ಷಾತಂತ್ರಂ
ಸರ್ವ ಸಮರ್ಪಣ ಯೋಗದ ಮರ್ಮಂ......"!

ಪಥದರ್ಶನ

# ಗಾಂಧೀ ಆರ್ಥಿಕ ಚಿಂತನ : ಎಷ್ಟರ ಮಟ್ಟಿಗೆ ಪ್ರಸ್ತುತ ?

ಎಚ್. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್

ಆಧುನಿಕ ಭಾರತದ ಅರ್ಥವ್ಯವಸ್ಥೆಗೆ ಸಂಬಂಧಿಸಿದಂತೆ ಗಾಂಧೀ ಚಿಂತನ ಎಷ್ಟರ ಮಟ್ಟಿಗೆ ಪ್ರಸ್ತುತ ? ಬೃಹತ್ ಕಾರ್ಖಾನೆ, ಭೂರಿ ಉತ್ಪಾದನೆ, ಆರ್ಥಿಕ ಕೇಂದ್ರೀಕರಣ ಇವುಗಳ ಹಾದಿಯಲ್ಲಿ ನಡೆಯುತ್ತಿರುವ ನಮ್ಮ ದೇಶದಲ್ಲಿ ಗಾಂಧೀಜಿಯ ಅರ್ಥಶಾಸ್ತ್ರ ಎಷ್ಟರ ಮಟ್ಟಿಗೆ ಪರಿಪಾಲಿತ ?

ಸರಳ ಜೀವನ, ಉನ್ನತ ಚಿಂತನ : ಇದು ಗಾಂಧಿಯವರ ಆದರ್ಶ. ಸಂಪತ್ತನ್ನು ಗುಡ್ಡೆ ಹಾಕಿ ಅನಂತರ ಅದರ ವಿತರಣೆಯ ಸಮಸ್ಯೆಯನ್ನು ಎದುರಿಸುವ ಬದಲು ಉತ್ಪಾದನೆಯ ಜತೆಜತೆಗೇ ವಿತರಣೆಯೂ ನಡೆಯುವಂಥ ಸರಳ ಸ್ವಾವಲಂಬಿ ಸಮಾಜವೇ ಗಾಂಧೀಜಿ ಕಂಡ ಕನಸು. ದುಡಿಮೆಯನ್ನು ಕಡಿಮೆ ಮಾಡಿ, ಕೋಟ್ಯಂತರ ಮಂದಿಯನ್ನು ನಿರುದ್ಯೋಗಕ್ಕೆ ತಳ್ಳುವ ದೈತ್ಯ ಯಂತ್ರಗಳಿಗೂ ಗಾಂಧೀಜಿಗೂ ವಿರೋಧ. ಮಾನವನ ಮಾನವತ್ವವನ್ನು ಇಲ್ಲವಾಗಿಸುವ ಯಾವ ವ್ಯವಸ್ಥೆಯೂ ಗಾಂಧಿ ದೃಷ್ಟಿಗೆ ಹೊಂದಿಕೊಳ್ಳದು.

ದೇಶದ ಆರ್ಥಿಕ ಧಮನಿಯ ಮೇಲೆ ಹತೋಟಿ ಪಡೆದುಕೊಂಡು ಇಡೀ ರಾಷ್ಟ್ರವನ್ನೇ ಒಂದು ಬೃಹತ್ ಕಾರ್ಖಾನೆಯಾಗಿ ಪರಿವರ್ತಿಸುವ ಸಾಮಾಜಿಕ ವ್ಯವಸ್ಥೆಗೂ ಗಾಂಧಿಗೂ ಬಹಳ ದೂರ. ಬಲಾತ್ಕಾರದ ಅಡಿಗಲ್ಲಿನ ಮೇಲೆ ಕಟ್ಟಿ ರೂಪಿಸಿದ ಯಾವುದೇ ವ್ಯವಸ್ಥೆ– ಅದರ ಉದ್ದೇಶ ಎಷ್ಟೇ ಒಳ್ಳೆಯದಾಗಿರಲಿ ಗಾಂಧೀಜಿಗೆ ಅಸಮ್ಮತ. ಗುರಿ ಎಷ್ಟು ಮುಖ್ಯವೋ, ಅದನ್ನು ಸಾಧಿಸಲು ಅನುಸರಿಸುವ ಮಾರ್ಗವೂ ಅಷ್ಟೇ ಮುಖ್ಯ. That govrnment is the best which governs the least. ಕನಿಷ್ಠವಾಗಿ ಆಳುವ ಸರಕಾರವೇ ಶ್ರೇಷ್ಠ.

ಗಾಂಧೀ ದೃಷ್ಟಿಗೂ ಯೋಜನಾ ವಿಧಾನಕ್ಕೂ ಎಷ್ಟರ ಮಟ್ಟಿಗೆ ಹೊಂದಾವಣೆ ಸಾಧ್ಯವೆಂಬುದೂ ಸಂದೇಹವೇ. ಗಾಂಧೀಜಿ ಬದುಕಿದ್ದ ಕಾಲದಲ್ಲಿ, ಭಾರತಕ್ಕೆ ಸ್ವಾತಂತ್ರ್ಯ ಬರುವುದಕ್ಕೂ ಹಿಂದೆ, ಗಾಂಧಿಯವರ ಶಿಷ್ಯರಲ್ಲೊಬ್ಬರಾದ ಶ್ರೀಮನ್ನಾರಾಯಣ ಅಗರವಾಲರು ಭಾರತದ ಅಭಿವೃದ್ಧಿಗಾಗಿ ಗಾಂಧೀ ಯೋಜನೆಯೊಂದನ್ನು ರಚಿಸಿದ್ದರು. ಗಾಂಧಿಯೇ ಇದಕ್ಕೆ ಮುನ್ನುಡಿ ಬರೆದಿದ್ದರಾದಾಗ್ಯೂ, ಈ ಕೃತಿಯನ್ನು ತಾವು ಅಲ್ಲಲ್ಲಿ ಮಾತ್ರ ನೋಡಿರುವುದಾಗಿ ಗಾಂಧಿಯವರೇ ಹೇಳಿಕೊಂಡಿದ್ದರು. ಈ ಕೃತಿ ಪ್ರಕಟವಾದ ಮೇಲೆ ದಇರ ಬಗ್ಗೆ ಬೇಕಾದಷ್ಟು ಟೀಕೆಗಳು ಬಾರದೆ ಇರಲಿಲ್ಲ. ಗಾಂಧಿಯವರ ಆರ್ಥಿಕ ದೃಷ್ಟಿ ಇಂಥದು ಎಂದು ಅದನ್ನು ಖಚಿತವಾದ ಚೌಕಟ್ಟಿನೊಳಗೆ ಇಟ್ಟು ಪ್ರದರ್ಶಿಸುವುದು ಎಂಥವರಿಗೂ ಕಷ್ಟ.

ಗಾಂಧಿ ಒಣ ಸಿದ್ಧಾಂತಿಯಲ್ಲ. ಅವರೊಬ್ಬ ಮಹಾನ್ ಚಿಂತಕ. ಜೀವನದಲ್ಲಿ
ಗಾಂಧಿಯವರಿಗೆ ಅತೀವ ಶ್ರದ್ಧೆ. ಇಡೀ ಲೋಕವೇ ಅವರ ಪ್ರಯೋಗ ಮಂದಿರ,
ಅದರಲ್ಲಿ ಸುಪ್ತವಾಗಿಯೂ ವ್ಯಕ್ತವಾಗಿಯೂ ಸದಾ ತಳಮಳಿಸುತ್ತಿರುವ ಅಸಂಖ್ಯಾತ
ಬಲಗಳನ್ನು ಸೆಳವುಗಳನ್ನೂ ನಿರಂತರವಾಗಿ ನಿರುಕಿಸುತ್ತಿದ್ದ, ಅವನ್ನೆಲ್ಲ ತಮ್ಮ ಆಲೋಚ
ನೆಯ ಅಳವಿಗೆ ಒಳಪಡಿಸುತ್ತಿದ್ದ ಸತತ ವಿಕಸನಶೀಲ ವ್ಯಕ್ತಿತ್ವ ಗಾಂಧೀಜಿಯದು.
ಆರಂಭದಿಂದ ಅಂತ್ಯದವರೆಗೆ ಗಾಂಧೀಜಿ ಆಡಿದ ಮಾತು, ಬರೆದ ಬರಹ, ಮಾಡಿದ
ಕೆಲಸ ಇವನ್ನು ಅವಲೋಕಿಸಿದಾಗ ಅನೇಕ ವಿರೋಧಾಭಾಸಗಳು. ಕಂಡುಬರದಿರವು.
ಆದರೆ ಇವನ್ನು ಅಂದಂದಿನ ಪರಿಸರದ ಕುಂದಣದಲ್ಲಿಟ್ಟು ನೋಡಿದಾಗ, ಅವರ ಇಡೀ
ಚಿಂತನವನ್ನೇ ಸಿಂಹಾವಲೋಕನ ಕ್ರಮದಿಂದ ಪರಿಶೀಲಿಸಿದಾಗ, ಉದ್ದಕ್ಕೂ ಓತ
ಪ್ರೋತವಾಗಿ ಹರಿದು ಬಂದಿರುವ ಏಕಸೂತ್ರತೆಯೂ ಗೋಚರವಾಗದಿರದು. ಆದ್ದ
ರಿಂದ ಗಾಂಧೀ ಚಿಂತನದ ಪ್ರಸ್ತುತತೆಯನ್ನು ಪರೀಕ್ಷಿಸುವಾಗ ಈ ಸೂತ್ರವನ್ನು ಅದ್ಯ
ತನ ಸಂದರ್ಭಕ್ಕೆ ಅನುಸ್ಯೂತವಾಗಿ ಎಳೆದು ತಂದು, ಗಾಂಧೀ ಚಿಂತನದ ವಿಕಸನ ಶೀಲ
ದೃಷ್ಟಿಯಲ್ಲಿ ಯಾವುದು ಸುಸಂಬದ್ಧ ಯಾವುದು ಅಲ್ಲ ಎಂಬುದನ್ನು ನಿರ್ಧರಿಸಬೇಕಾಗು
ತ್ತದೆ. ಹಾಗೆ ಮಾಡದೆ ಹೋದಾಗ, ನಮ್ಮ ಹಿಂದಿನ ಎಲ್ಲ ಆಚಾರ್ಯರುಗಳ ವಿಚಾರ
ದಲ್ಲಿ ಅವರ ಪಟ್ಟಶಿಷ್ಯರುಗಳೆನಿಸಿಕೊಂಡವರೇ ಮಾಡಿದ ಅಪಚಾರವನ್ನು ಗಾಂಧಿಯವರ
ಬಗೆಗೂ ಮಾಡಿದಂತಾಗುತ್ತದೆ. ಗಾಂಧೀಚಿಂತನವನ್ನು ಅವರ ಅವಿಚಾರಿ ಶಿಷ್ಯರ
ಅಂಧಾಭಿಮಾನದ ಅಪ್ಪುಗೆಯಿಂದ ಪಾರುಮಾಡುವುದು ಅತ್ಯಗತ್ಯ. ಗಾಂಧೀ ಚಿಂತನವೇ
ಬೇರೆ, ಗಾಂಧೀವಾದವೇ ಬೇರೆ ಎಂಬುದನ್ನು ಮರೆಯಬಾರದು. ಮೊದಲನೆಯದು
ಜೀವಂತ, ಸತತಪರಿವರ್ತನ ಶೀಲ. ಎರಡನೆಯದು ಗ್ರಂಥಸ್ಥ. ಫಾಸಿಲೀಕೃತ. ಮೊದಲ
ನೆಯದು ವಿಚಾರ; ಎರಡನೆಯದು ಆಚಾರ.

ಗಾಂಧೀ ಚಿಂತನವನ್ನು ಕುರಿತಂತೆ ಇನ್ನೊಂದು ಅಂಶವನ್ನೂ ಇಲ್ಲಿ ಗುರುತಿಸುವುದು
ಅತ್ಯಾವಶ್ಯಕ. ಗಾಂಧೀ ದೃಷ್ಟಿಯಲ್ಲಿಯ ಶಾಶ್ವತ ಮೌಲ್ಯಗಳೇ ಬೇರೆ, ಈ ಮೌಲ್ಯ
ವ್ಯವಸ್ಥೆಯನ್ನು ಆಧರಿಸಿ ಆಚರಣೆಗೆ ಬಂದ ಪ್ರಕ್ರಿಯಾತ್ಮಕವಾದ ಸಾಂಸ್ಥಿಕ ಚೌಕಟ್ಟೇ
ಬೇರೆ. ಗಾಂಧೀ ಮೌಲ್ಯಗಳು ಬದಲಾಗುವುದಿಲ್ಲ. ಅವನ್ನು ಅನ್ವಯಿಸಿ ನಾವು
ಅಂದಂದಿಗೆ ತಕ್ಕಂತೆ ರೂಪಿಸಿಕೊಳ್ಳಬೇಕಾದ ವಿಧಿ ವಿಧಾನಗಳು ಬದಲಾಗುತ್ತಿರುವುದು
ಸಹಜ, ಅನೇಕ ವೇಳೆ ಅನಿವಾರ್ಯ. ಇದು ಗಾಂಧೀ ವಿಚಾರಕ್ಕೆ ಮಾತ್ರ ಅನ್ವಯಿ
ಸುವ ಮಾತಲ್ಲ, ನಮ್ಮ ಎಲ್ಲ ಮೌಲ್ಯವ್ಯವಸ್ಥೆಗಳಿಗೂ ಸಂಬಂಧಿಸಿದಂತೆ ಈ ಮಾತು
ನಿಜ. ಪ್ರಜಾಪ್ರಭುತ್ವ ಮೌಲ್ಯಗಳು ಸಾರ್ವಕಾಲಿಕ. ಆ ಮೌಲ್ಯಗಳ ಅನುಷ್ಠಾನದಲ್ಲಿ
ನಾವು ರೂಪಿಸಿರುವ ಸಂಸದೀಯ ಪದ್ಧತಿಯಲ್ಲಿ ಹಲವಾರು ಕುಂದುಗಳಿರಬಹುದು.
ಹೀಗೆಂದ ಮಾತ್ರಕ್ಕೆ ಪ್ರಜಾಪ್ರಭುತ್ವದ ಮೌಲ್ಯಗಳೇ ದೋಷಪೂರ್ಣವೆಂದು ತಳ್ಳಿ
ಹಾಕುವಂತಿಲ್ಲ. ನಮ್ಮ ಸಾಮಾಜಿಕ ಆರ್ಥಿಕ ವ್ಯವಸ್ಥೆಯನ್ನು ಕುರಿತಂತೆ ಕಾರ್ಲ್

ಮಾರ್ಕ್ಸ್‌ನ ಹೇಳಿಕೆಗಳು ಸಾರ್ವಕಾಲಿಕ. ಆದರೆ ಅವನ್ನು ಅನ್ವಯಿಸಿದಾಗ ಆಗಿರ ಬಹುದಾದ ಆಭಾಸಗಳಿಗೆ ಮೂಲ ಸಿದ್ಧಾಂತ ಹೊಣೆಯಾಗದು. ಗಾಂಧೀ ತತ್ವದ ಅನುಸರಣೆಯಲ್ಲಿ ಮಾಡಲಾಗಿರುವ ಪ್ರಯೋಗಗಳು ಸರ್ವಜನಮಾನ್ಯವಿರದಿರಬಹುದು, ಸಕಲ ದೋಷದೂರವಾಗಿರ ದಿರಬಹುದು. ಆದರೆ ಅವುಗಳಿಂದ ಮೂಲಭೂತ ಮೌಲ್ಯ ಗಳಿಗೇನೂ ಕುಂದುಂಟಾಗುವುದಿಲ್ಲ. ಗಾಂಧಿಯವರ ಮೂಲ ವಿಚಾರಗಳು ಬೀಜ ಸ್ವರೂಪಿಯಾದಂಥವು, ಅವನ್ನು ಅನುಸರಿಸಿ ನಡಸಿದ ಪ್ರಯೋಗಗಳು ಪ್ರಕ್ರಿಯಾತ್ಮಕ ವಾದವು, ತಾಂತ್ರಿಕ ಸ್ವರೂಪದವು. ಎಲ್ಲ ಮಾನವನಿರ್ಮಿತ ಸಂಸ್ಥೆಗಳಂತೆ, ವ್ಯವಸ್ಥೆ ಗಳಂತೆ ಇವು ಕೂಡ ಕಾಲದೇಶಗಳಿಗೆ ಸೀಮಿತ. ಕಾಲ ಬದಲಾದಂತೆ, ಪರಿಸ್ಥಿತಿಯಲ್ಲಿ ವ್ಯತ್ಯಾಸವಾದಂತೆ ಪ್ರಯೋಗದಲ್ಲೂ ವ್ಯತ್ಯಾಸ ಮಾಡುವುದು ಅನಿವಾರ್ಯವಷ್ಟೇ ಅಲ್ಲ, ಅವಶ್ಯ ಕೂಡ. ಆದರೆ ಮೂಲ ಸ್ರೋತ ಎಲ್ಲಿದೆ, ಅದರ ಸ್ವರೂಪವೇನು ಎಂಬುದನ್ನು ಮಾತ್ರ ಸದಾ ಗಮನದಲ್ಲಿಟ್ಟು, ಅದನ್ನು ವಿಕೃತಗೊಳಿಸದಿರುವ ಎಚ್ಚರಿಕೆ ವಹಿಸುವುದು ಮುಖ್ಯ. ವೇಗವಾಗಿ ಬದಲಾಗುತ್ತಿರುವ ವಿಶ್ವದಲ್ಲಿ ಯಾವುದೇ ನಿರ್ದಿಷ್ಟ ಆರ್ಥಿಕ ವಿಧಿ–ವಿಧಾನಗಳಾಗಲಿ ಕೇವಲ ತಾತ್ಕಾಲಿಕವೆಂಬುದನ್ನು ಮರೆಯುವಂತಿಲ್ಲ.

ಗಾಂಧೀಜಿ ಎಂದೊಡನೆ ನಮಗೆ ಚರಖಾ, ಖಾದಿ, ಗ್ರಾಮಕೈಗಾರಿಕೆ, ಗ್ರಾಮ ಸ್ವಾವಲಂಬನೆ ಇವು ನೆನಪಿಗೆ ಬರುತ್ತವೆ. ಗಾಂಧೀ ಶಿಷ್ಯರಾದ ವಿನೋಬಾ ಭಾವೆಯವರು ಪ್ರಚಾರಕ್ಕೆ ತಂದ ಭೂದಾನ, ಗ್ರಾಮದಾನ, ಸಂಪತ್ತಿದಾನ, ಜೀವನದಾನ ಮುಂತಾದವೂ ನೆನಪಾಗುತ್ತವೆ. ಗಾಂಧಿಯವರ ಅನುಯಾಯಿಗಳೆಂದು ಹೇಳಿಕೊಳ್ಳುವವರೇ ಆಳುತ್ತ ಬಂದಿರುವ ಭಾರತದಲ್ಲಿ ಗಾಂಧಿಯವರ ಈ ಒಂದೊಂದು ಕಾರ್ಯಕ್ರಮವೂ ವಿಫಲ ಗೊಂಡಿದೆಯೆಂದು ಹೇಳಿದರೆ ತಪ್ಪಾಗುವುದಿಲ್ಲ. ಹಾಗಾದರೆ ನೆಹರೂ–ಶಾಸ್ತ್ರಿ–ಇಂದಿರಾ–ದೇಸಾಯಿ ಸರಕಾರಗಳು ಗಾಂಧೀ ಪ್ರಣಾಲಿಯಿಂದ ದೂರ ಸರಿದಿವೆಯಲ್ಲವೆ ? ಗಾಂಧೀ ಚಿಂತನ ಅಪ್ರಸ್ತುತವಲ್ಲವೆ ?

ಆದರೆ ಎಲ್ಲಕ್ಕಿಂತ ಮೊದಲು ನಾವು ಗಾಂಧೀ ಚಿಂತನದ ಮೂಲಭೂತ ತತ್ತ್ವ ಗಳಿಗೂ ಅವುಗಳ ಅನುಷ್ಠಾನದ ಹಾದಿಯಲ್ಲಿ ಮಾಡಲಾದ ಪ್ರಯೋಗಗಳಿಗೂ ನಡು ವಣ ಸ್ಪಷ್ಟ ಗಡಿ ರೇಖೆಯನ್ನು ಗುರುತಿಸದಿರುವ ತಪ್ಪಿನಿಂದ ದೂರವಿರಬೇಕು. ಇದು ಗಾಂಧೀ ಚಿಂತನಕ್ಕೆ ಮಾತ್ರಅನ್ವಯಿಸುವ ಮಾತಲ್ಲ. ಮಾರ್ಕ್ಸನ ವಿಶ್ಲೇಷಣೆಯ ಪ್ರಕಾರ ಶ್ರಮಿಕವರ್ಗದ ಸರ್ವಾಧಿಕಾರ ಮೊಟ್ಟಮೊದಲಿಗೆ ಅಮೆರಿಕದಲ್ಲಿ ಸ್ಥಾಪಿತವಾಗಬೇಕಾ ಗಿತ್ತು. ಆದರೆ ಅದು ಮೊದಲು ಸಾಧಿತವಾದ್ದು ರಷ್ಯಾದಲ್ಲಿ. ಮಾರ್ಕ್ಸನ ಮೂಲ ಚಿಂತನಕ್ಕೂ ಬಲಿಷ್ಠವಾದ ಸಾಮ್ಯವಾದಿ ಸರಕಾರಕ್ಕೂ ದೂರ. ಆದರೆ ಕಮ್ಯೂನಿಸ್ಟ್ ರಾಜ್ಯ (ಸ್ಟೇಟ್) ಅತ್ಯಂತ ಬಲಿಷ್ಠ. ಅದು ಬಣಗಿ ಹೋಗುವ ಬದಲು ದಿನೇ ದಿನೇ ವರ್ಧಿಸುತ್ತದೆ. ಹೀಗೆಂದು ಮಾರ್ಕ್ಸ್‌ವಾದದಿಂದ ಸೋವಿಯತ್ ದೇಶ ದೂರ ಸರಿಯು ತ್ತಿದೆಯೆಂದರೆ ಅದರ ನಾಯಕರು ಆ ಮಾತನ್ನು ಒಪ್ಪಲಾರರು. ಬಂಡವಾಳ ವ್ಯವಸ್ಥೆ

ಅದನ್ನು ಸುತ್ತುವರಿದಿರುವಾಗ ಬಲಿಷ್ಠ ರಾಜ್ಯಾಡಳಿತ ಅನಿವಾರ್ಯವೆಂಬುದು ವ್ಯತ್ಯಸ್ತ ಪರಿಸ್ಥಿತಿಯಲ್ಲಿ ಸತ್ಯವೆಂದು ಅಪರವಾದ. ಗಾಂಧಿಯವರು ಚರಕವನ್ನು ಸ್ವಾವಲಂಬನೆಯ ಪ್ರತೀಕವಾಗಿ ಪ್ರತಿಪಾದಿಸಿದಾಗ ಅವರ ದೃಷ್ಟಿ ಆದಿನ ಬ್ರಿಟಿಷ್ ವಸಾಹತುಷಾಹಿಗೆ ಸೀಮಿತವಾಗಿತ್ತು. ಭಾರತದ ಜನಕೋಟಿಯನ್ನು ಬ್ರಿಟಿಷ್ ವಸಾಹತುವಾದಿಗಳ ಶೋಷಣೆಯಿಂದ ವಿಮೋಚನೆಗೊಳಿಸುವುದು ಅಂದು ಆಗತ್ಯವೆನಿಸಿತ್ತು. ಭಾರತ ಸ್ವತಂತ್ರವಾದಾಗ ಹೊಸ ಪರಿಸ್ಥಿತಿಯು ಸೃಷ್ಟಿಯಾಯಿತು. ವಿಶ್ವ ಪರಿಸರದಲ್ಲಿ ಭಾರತವನ್ನು ಗುರುತಿಸುವಾಗ ಅದರ ದಿಗಂತ ವಿಸ್ತರಿಸಿರುವುದನ್ನೂ,ಹೊಸ ಸನ್ನಿವೇಶದಲ್ಲಿ ಅದರ ಕೆಲವು ಅನಿವಾರ್ಯಗಳನ್ನೂ ಅರಿತುಕೊಳ್ಳುವುದು ಅಗತ್ಯ. ಹೀಗಾಗಿ ಚರಕದ ಸಂಕೇತವನ್ನು ಹೊಸದಾಗಿ ವ್ಯಾಖ್ಯಿಸುವುದು ಅಗತ್ಯವೆನಿಸದಿರದು.

ಗಾಂಧಿಯವರ ಪರಿಕಲ್ಪನೆಯ ಸ್ವರಾಜ್ಯದಲ್ಲಿ ಯಂತ್ರಕ್ಕೆ, ಯಂತ್ರಗಾರಿಕೆಗೆ ಅವಕಾಶವುಂಟೆ ? ಎಂಬುದು ಮುಖ್ಯವಾಗಿ ಪರಿಗಣಿಸಬೇಕಾದ ಪ್ರಶ್ನೆ. ತಾವು ಯಂತ್ರ ವಿರೋಧಿಯಲ್ಲವೆಂದು ಗಾಂಧೀಜಿ ಅನೇಕ ಸಲ ಹೇಳಿಕೊಂಡಿದ್ದಾರೆ. ಚರಕವೂ ಒಂದು ಯಂತ್ರ. ಈ ದೇಹವೂ ಯಂತ್ರವೇ. ತಾವು ವಿರೋಧಿಸುವುದು ಯಂತ್ರವನ್ನಲ್ಲ: ಯಂತ್ರದ ದಾಸನಾಗಿ ಮಾನವನ ಪರಿವರ್ತನೆಯಾಗುವುದನ್ನು, ಮಾನವ್ಯ ಮಸುಳಿಸುವುದನ್ನು. ಮಾನವನ ವ್ಯಕ್ತಿತ್ವದ ವಿಕಾಸಕ್ಕೆ ಮಾರಕವಾಗುವ ರೀತಿಯಲ್ಲಿ ಯಂತ್ರಗಾರಿಕೆಯ ಬೆಳವಣಿಗೆಯಾಗುವುದನ್ನು. ವ್ಯಕ್ತಿಯ ಕೈಯಿಂದ ಕೆಲಸವನ್ನು ಕಿತ್ತುಕೊಂಡು ಅವನನ್ನು ನಿಷ್ಕ್ರಿಯ ಜಡನನ್ನಾಗಿ ಮಾಡುವುದನ್ನು, ಶೋಷಣೆಯ ಸಾಧನವಾಗಿ ಯಂತ್ರವನ್ನು ಪರಿವರ್ತಿಸುವುದನ್ನು. ಪ್ರತಿಯೊಂದು ಹಳ್ಳಿಯೂ ವಿದ್ಯುದ್ದೀಕರಣಗೊಳ್ಳುವುದಾದಲ್ಲಿ ಹಳ್ಳಿಗರು ತಮ್ಮ ಉಪಕರಣಗಳನ್ನು ವಿದ್ಯುತ್ತಿನಿಂದ ನಡೆಸಲು ತಮ್ಮ ವಿರೋಧವೇನೂ ಇಲ್ಲವೆಂದು ಗಾಂಧೀಜಿಯವರು 1935ರಷ್ಟು ಹಿಂದೆಯೇ ಬರೆದಿದ್ದರು. ವ್ಯಕ್ತಿಯ ದುಡಿಮೆಯನ್ನುಳಿಸಿ, ಕೋಟ್ಯಂತರ ಜನರ ಭಾರವನ್ನು ಹಗುರಗೊಳಿಸುವ ಯಂತ್ರವನ್ನು ತಾವು ಸ್ವಾಗತಿಸುವುದಾಗಿ ಹೇಳಿದ್ದರು.

ಹಾಗಾದರೆ ನಮ್ಮ ಪಂಚವಾರ್ಷಿಕ ಯೋಜನೆಗಳಲ್ಲಿ ಬೃಹದ್ ಯಂತ್ರಾಗಾರಗಳಿಗೆ ವಿಶೇಷ ಪ್ರಾಮುಖ್ಯ ನೀಡಿರುವುದು ಗಾಂಧಿಯವರಿಗೆ ಒಪ್ಪಿಗೆಯಾಗುತ್ತಿತ್ತೆ ? -ಎಂಬ ಪ್ರಶ್ನೆಗೆ ಸರಳವಾದ ಉತ್ತರ ನೀಡುವುದಕ್ಕಾಗುವುದಿಲ್ಲ. ಭಾರತ ರೈತರ ನಾಡು ಎಂಬುದು ನಿಜ. ಹಳ್ಳಿಗರ ಹಿತವನ್ನು, ಕೃಷಿಯನ್ನು ದುರ್ಲಕ್ಷಿಸಿ ಕೈಗಾರಿಕೀಕರಣದ ಅಸಮತೋಲ ಬೆಳವಣಿಗೆ ಗಾಂಧೀಜಿಗೆ ಒಪ್ಪಿಗೆಯಾಗುತ್ತಿದ್ದಿರಲಾರದು. ಯಾವುದೇ ವ್ಯವಸ್ಥೆಯಿಂದಾಗಿ ಅತಿ ಕೇಂದ್ರೀಕರಣವೂ ವ್ಯಕ್ತಿಪ್ರಾಧಾನ್ಯದ ನಷ್ಟವೂ ಆಗುವುದಾದರೆ ಅದು ಗಾಂಧೀ ದೃಷ್ಟಿಗೆ ವಿರುದ್ಧವಾದ್ದು, ಪಾಶ್ಚಾತ್ಯರ 'ಸಮೂಹ ಸಂಸ್ಕೃತಿ'ಗೂ ಗಾಂಧೀ ದೃಷ್ಟಿಯ 'ಸಮಾಜ'ಕ್ಕೂ ದೂರ. ಸಮೂಹವೂ ಸಮಾಜವೂ ಪರಸ್ಪರ ವಿರುದ್ಧವಾದಂಥವು. ಸಮೂಹದಲ್ಲಿ ವ್ಯಕ್ತಿಗೆ ಸ್ಥಾನವಿಲ್ಲ. ಅವನು ಯಂತ್ರದ ತಿರುಪುಮೊಳೆಯಂತೆ, ಯಂತ್ರದ

ಚಕ್ರದ ಹಲ್ಲಿನಂತೆ. ಅವನು ಅಸ್ವತಂತ್ರ. ಪರತಂತ್ರಕರ್ತೃ, ಗಾಂಧಿಯವರ 'ಸಮಾಜ'ದಲ್ಲಿ ವ್ಯಕ್ತಿ ಕೇಂದ್ರ. ವ್ಯಕ್ತಿ ಹೇಗೋ ಹಾಗೆ ಸಮಾಜ. ವ್ಯಕ್ತಿಯ ಸ್ವರೂಪದಂತೆ ಸಮಾಜದ ನಾಡಿಯ ಮಿಡಿತ, ಇಂಥ ಸಮಾಜ ಶೋಷಣಾದೂರ.

ಗಾಂಧಿಯವರು ಕನಸು ಕಂಡ ಈ ಸಮಾಜದಲ್ಲಿ ಅಪರಿಗ್ರಹ. ಅಂತ್ಯೋದಯ' ಇವು ಮುಖ್ಯ ಪರಿಕಲ್ಪನೆಗಳು. ಅಪರಿಗ್ರಹವನ್ನು ಗಾಂಧೀಜಿ ಬೋಧಿಸಿದ್ದು ಶ್ರೀಮಂತ ರಿಗೇ ಹೊರತು ದರಿದ್ರನಾರಾಯಣರಿಗಲ್ಲ. ಇವರ ವಿಚಾರದಲ್ಲಿ ಅಪರಿಗ್ರಹದ ಮಾತೇ ಬರುವುದಿಲ್ಲ. ಅಪರಿಗ್ರಹದ ಮಾತು ಹೇಳಿ ಇವರನ್ನು ಶೋಷಿಸುವುದು ಪಾಪಕರ. ಹೀಗೆಂದು ಹೇಳಿ ಗಾಂಧೀ ಚಿಂತನವನ್ನು ತಿರೋಗಾಮಿಯೆಂದು ಹೇಳುವುದು ಸರಿ ಯೆನಿಸದು. ಯೋಜನೆಯ ಅಡಿಯಲ್ಲಿ ಅಪರಿಗ್ರಹದ ಪರಿಕಲ್ಪನೆಯನ್ನು, ವ್ಯಕ್ತಿಗಳ. ಸ್ವಯಮೇವ ಅನುಭೋಗನಿಯಂತ್ರಣ ಮಾಡಿಕೊಳ್ಳುವ ಅಗತ್ಯವನ್ನು ತರುವುದು ಅತ್ಯಗತ್ಯವಾಗಿತ್ತು. ಗಾಂಧೀನಿಷ್ಠವೆನ್ನುವ ಭಾರತ ಸರಕಾರ ಜಾರಿಗೆ ತಂದ ಯೋಜನೆಯು ಕೇಂದ್ರಬಿಂದುವಾಗಿ ಅಪರಿಗ್ರಹದ ಪರಿಕಲ್ಪನೆಯನ್ನು ಎಲ್ಲರ ಹೃದಯಗಳಲ್ಲೂ ನೆಟ್ಟಿ ಹಾಕಬೇಕಾಗಿತ್ತು. ಇದೊಂದು ಅತ್ಯಂತ ಮುಖ್ಯವಾದ ನೈತಿಕ-ಆರ್ಥಿಕ ಪರಿಕಲ್ಪನೆ. ಇಂದಿನ ಅಪಾರ ಹಣ ಸೃಷ್ಟಿ, ಅತಿಯಾದ ಬೇಡಿಕೆ. ಬೆಲೆಗಳ ಏರಿಕೆ–ಇವೆಲ್ಲಕ್ಕೂ ಅಪರಿ ಗ್ರಹದ ಪರಿಕಲ್ಪನೆ ಒಂದು ರಾಮಬಾಣವಾಗುತ್ತಿತ್ತು. ಯೋಜನೆಯಲ್ಲಿ ಗಾಂಧೀ ಸತ್ವವನ್ನು ತರಬೇಕಾಗಿದ್ದದ್ದು ಈ ರೀತಿಯಾಗಿ.

ಗಾಂಧಿಯವರು ಪ್ರತಿಪಾದಿಸಿದ ಧರ್ಮದರ್ಶಿತ್ವದ ನಿಜಸ್ವರೂಪವನ್ನು ಇಂದು ನಾವು ಮರೆತಿದ್ದೇವೆ. ಯೋಜನಾ ಯುಗಕ್ಕೆ ಇದೂ ಹೊಂದಿಕೊಳ್ಳುವುದಿಲ್ಲವೆಂಬುದು ನಮ್ಮ ಭಾವನೆ. ಗಾಂಧೀಜಿ ಬೋಧಿಸಿದ, ವಿಕಸನಶೀಲ ವ್ಯಕ್ತಿ ಕೇಂದ್ರಿತವಾದ ಸಮಾಜದಲ್ಲಿ ಮಾತ್ರವೇ ಶ್ರೀಮಂತರು ತಮ್ಮ ಸಂಪತ್ತಿನ ಧರ್ಮದರ್ಶಿಗಳಾಗಬಲ್ಲರು. ಗಾಂಧಿಯವರ ಕನಸಿನ ಈ ಸಮಾಜದಲ್ಲಿ 'ಶ್ರೀಮಂತ' ಎಂಬ ಪದದ ವ್ಯಾಖ್ಯೆ ಇಂದಿನದ ಕ್ಕಿಂತ ಭಿನ್ನವಾದದ್ದು. ಅಪರಿಗ್ರಹ. ಸರಳಜೀವನ. ಉನ್ನತ ಚಿಂತನ --ಇವಕ್ಕೆ ಹೊಂದಿ ಕೊಂಡಂತೆ ಮಾತ್ರವೇ 'ಶ್ರೀಮಂತ'ರ 'ಧರ್ಮದರ್ಶಿತ್ವ'ದ ಪರಿಕಲ್ಪನೆ ಚೈತನ್ಯ ಪೂರ್ಣವಾಗಬಲ್ಲುದು. ನೈತಿಕ ಮಟ್ಟದಲ್ಲಿ ಅಲ್ಲದಿದ್ದರೂ ಭೌತಿಕ ಮಟ್ಟದಲ್ಲಿ ಇದು ಸಮಾಜವಾದದ ಸಾಮುದಾಯಿಕ ಒಡೆತನಕ್ಕೆ ಸಾಟಿಯಾಗಬಲ್ಲುದು. ಬಂಡವಾಳವಾದಿ ವ್ಯವಸ್ಥೆಯಲ್ಲೂ ಉದ್ಯಮಪತಿಗಳು ನಿಜವಾಗಿ ತಮ್ಮ ಸಂಪತ್ತಿನ 'ಧರ್ಮದರ್ಶಿ' ಗಳಾಗಿಯೇ ಇರುವುದು ಅನಿವಾರ್ಯವಾಗುತ್ತದೆ. ಸಂಚಿತವಾಗುತ್ತಿರುವ ಲಾಭವನ್ನು ಅವರು ಪೋಲು ಮಾಡದೆ ಸಂಗ್ರಹಿಸಿ ಪುನರ್ವಿನಿಯೋಜಿಸುತ್ತಿದ್ದಾಗ (re-invest) ಮಾತ್ರವೇ ಈ ಸ್ಪರ್ಧಾತ್ಮಕ ಅರ್ಥವ್ಯವಸ್ಥೆಯಲ್ಲಿ ಅವರ ಉದ್ಯಮ ಸಂಸ್ಥೆ ಸಾಯದೆ ಉಳಿಯಬಲ್ಲುದು, ಬೆಳೆಯಬಲ್ಲುದು. ಉಳಿತಾಯ, ಬಂಡವಾಳ ನಿರ್ಮಾಣ, ಉದ್ಯಮ ದಲ್ಲಿ ಅದರ ಹೂಡಿಕೆ—ಇವೆಲ್ಲವೂ ಅಪರಿಗ್ರಹ ತತ್ವದ ಲೌಕಿಕ ಮುಖಗಳೇ. ಬಹು

ಸಂಖ್ಯಾತ ಜನರು ದಾರಿದ್ರ್ಯ ರೇಖೆಗಿಂತ ಕೆಳಗಿನ ಮಟ್ಟದಲ್ಲಿ ಬದುಕು ಸಾಗಿಸುತ್ತಿರುವಾಗ, ಯಾವುದೇ ವರ್ಗವಾಗಲಿ ದುಂದುಗಾರಿಕೆಯ, ಅಟ್ಟಹಾಸದ. ಡಬ್ಬುಡೌಲುಗಳ ಜೀವನ ನಡೆಸುವುದು ಮಹಾ ದ್ರೋಹ. ಹೀಗೆ ಅಂದಂದಿನ ಆರ್ಥಿಕ ಮಟ್ಟಕ್ಕೆ, ಬೆಳವಣಿಗೆಯ ಮಟ್ಟಕ್ಕೆ, ಅಭಿವೃದ್ಧಿಯ ಮಟ್ಟಕ್ಕೆ ಅನುಗುಣವಾಗಿ ಅಪರಿಗ್ರಹ ತತ್ತ್ವವನ್ನು ನಾವು ಅರ್ಥೈಸಿಕೊಳ್ಳುತ್ತಿರಬೇಕಾಗುತ್ತದೆ.

ಒಬ್ಬನಿಗೆ ಎಷ್ಟು ನೆಲಬೇಕು ಎನ್ನುವುದು ಇನ್ನೊಂದು ಪ್ರಶ್ನೆ. ಇದು ಕೂಡ ಅಪರಿಗ್ರಹದ ಇನ್ನೊಂದು ಮುಖ. ಇದೂ ಅಂದಂದಿನ ಆರ್ಥಿಕ ವಿಕಾಸದ ಮಟ್ಟವನ್ನೇ ಅವಲಂಬಿಸಿರುತ್ತದೆ. ಭೂದಾನ. ಗ್ರಾಮದಾನ ಇವೆಲ್ಲವೂ ಇಂದಿನ ಪರಿಸ್ಥಿತಿಯಲ್ಲಿ ಅತ್ಯಂತ ಪ್ರಧಾನವಾದಂಥವು. ಇಂದು ಪ್ರತಿಯೊಬ್ಬನೂ ಎರಡೋ ಮೂರೋ ಎಕರೆಗಳಿಗಿಂತ ಹೆಚ್ಚಿನ ನೆಲ ಹೊಂದಿರುವುದು ಪಾಪವೆನಿಸಬಹುದು. ಆದರೆ ಕೈಗಾರಿಕಾವಲಯ ವಿಸ್ತರಿಸಿದಾಗ. ಲಭ್ಯವಿರುವ ಶ್ರಮದ ಮೊತ್ತಕ್ಕಿಂತ ಹೆಚ್ಚು ಕೆಲಸ ಕಾಯ್ದು ಕುಳಿತಾಗ. ಒಬ್ಬೊಬ್ಬನಿಗೂ ಹೆಚ್ಚು ಹೆಚ್ಚು ನೆಲವಿದ್ದರೆ ಅದರಿಂದ ಯಾರಿಗೂ ಶೋಷಣೆಯಾಗದ ಪರಿಸ್ಥಿತಿ ಉದ್ಭವವಾದಾಗ, ಕೃಷಿ–ಕೈಗಾರಿಕೆಗಳ ಹೊಸಮಟ್ಟ ಸೃಷ್ಟಿಯಾಗಿ ಉಚ್ಚತರ ಸಮತೋಲ ಏರ್ಪಟ್ಟಾಗ. ವೈಯಕ್ತಿಕ ಒಡೆತನದ ನೆಲದ ಘಟಕ ವಿಸ್ತಾರವಾಗಬಹುದು. ಸ್ವಾವಲಂಬನೆಯ ವ್ಯಾಪ್ತಿ. ಉತ್ಪಾದನೆ ಘಟಕದ ಗಾತ್ರ ಇವು ಅಂದಂದಿನ ಆರ್ಥಿಕ ಬೆಳವಣಿಗೆಯ ಹಂತಕ್ಕೆ ಸೀಮಿತವಾಗಿರಬೇಕೇ ವಿನಃ. ಅದನ್ನು ಮೀರಿ ಇವು ಬೆಳೆಯಬಾರದೆಂಬುದು ಮುಖ್ಯವಾಗಿ ಗಮನಿಸಬೇಕಾದ ವಿಚಾರ. ಮೀರಿ ಬೆಳೆದಾಗಲೇ ಎಲ್ಲ ಬಗೆಯ ಅಸಮತೋಲಗಳೂ ಅನರ್ಥಕಾರಿಯಾದ ಕೇಂದ್ರೀಕರಣವೂ ಹಿಂಸಾಮೂಲವಾದ ಶೋಷಣೆಯೂ ಹುಟ್ಟಿಕೊಂಡಾವು.

ಯಾವುದೇ ವ್ಯವಸ್ಥೆಯಲ್ಲಿ ನಾವು ಮುಖ್ಯವಾಗಿ ಪರಿಗಣಿಸಬೇಕಾದದ್ದೆಂದರೆ ಗಾಂಧೀ ಚಿಂತನದ ಮೂಲಭೂತ ಪರಿಕಲ್ಪನೆಗಳಾದ ಅಪರಿಗ್ರಹ. ಧರ್ಮದರ್ಶಿತ್ವ. ಸ್ವಾವಲಂಬನೆ. ವಿಕೇಂದ್ರೀಕರಣ ಇವಕ್ಕೆ ಯಾವ ಸ್ಥಾನ ನೀಡಲಾಗಿದೆ ಎನ್ನುವುದು. ಈ ಮೂಲಭೂತ ಪರಿಕಲ್ಪನೆಗಳನ್ನು ಕೇಂದ್ರವಾಗಿ ಪರಿಗಣಿಸಿ, ಇವುಗಳ ಸುತ್ತ ನಾವು ಅಭಿವೃದ್ಧಿಸೌಧವನ್ನು ನಿರ್ಮಿಸುತ್ತಿದ್ದೇವೆಯೇ ಎಂಬುದು ಕೂಟಪ್ರಶ್ನೆ. ಈ ಪ್ರಶ್ನೆಗೆ ಇಂದು ನಮಗೆ ದೊರಕುವ ಉತ್ತರ ಇತ್ಯಾತ್ಮಕವಾದ್ದೋ. ನೇತ್ಯಾತ್ಮಕವಾದ್ದೋ ಎಂಬುದನ್ನು ಹೇಳಬೇಕಾಗಿಯೇ ಇಲ್ಲ. ಖಾದಿ ಉಡುಗೆ. ಗ್ರಾಮಕೈಗಾರಿಕೆಗೆ ಧನಸಹಾಯ– ಇಷ್ಟಕ್ಕೆ ಮಾತ್ರವೇ ಇಂದು ನಮ್ಮ ಸರಕಾರದ ಗಾಂಧೀಪ್ರೇಮ ಸೀಮಿತವಾಗಿದೆ. ಗಾಂಧೀ ಚಿಂತನ ಪ್ರಣಾಲಿ ಮತ್ತು ನಮ್ಮ ಆಡಳಿತಗಾರರಾಗಲಿ, ಯೋಜಕರಾಗಲಿ, ಅರ್ಥ ಶಾಸ್ತ್ರಜ್ಞರಾಗಲಿ ದೃಷ್ಟಿ ಹರಿಸಿಯೇ ಇಲ್ಲ.

ಪಥದರ್ಶನ

# ಗಾಂಧೀಜಿಯ ಸಿದ್ಧಾಂತ ಅದೆಷ್ಟು ಸಕಾಲಿಕ ?

**ಎ. ಎಲ್. ಶಿವರುದ್ರಪ್ಪ**

ಒಬ್ಬ ವ್ಯಕ್ತಿಯ ಇಲ್ಲವೇ ಒಂದು ನೂತನ ಸಿದ್ಧಾಂತದ ಯಶಸ್ಸಿಗೆ ಆ ವ್ಯಕ್ತಿ ಅಥವಾ ಆ ಸಿದ್ಧಾಂತ ಅದೆಷ್ಟು ಸಕಾಲಿಕವಾಗಿದ್ದಿತು ಎಂಬುದೂ ಕಾರಣವಾಗಬಲ್ಲದು. ಭೂಮಿಹದಗೊಂಡು ಮಳೆ ಬಿದ್ದಾಗ ಬಿತ್ತಿದ ಬೀಜ ಚೆನ್ನಾಗಿ ಬೆಳೆದು ಫಲಕೊಡಬಲ್ಲದು. ಕಾಲಪಕ್ವವಾಗಿದ್ದು ಹೊಸತತ್ವಗಳು ಮೂಡಿ ಬರಲು ಬೇಕಾದ ಪ್ರೇರಕ ಸನ್ನಿವೇಶ ಸೃಷ್ಟಿಯಾಗಿದ್ದಾಗ ಮಾನವ ಹೆಚ್ಚು ಸೃಜನಾತ್ಮಕನಾಗುತ್ತಾನೆ. ಅವನ ಕ್ರತುಶಕ್ತಿಗೆ ಪ್ರಚೋದನೆ ದೊರೆಯುತ್ತದೆ. ಅದರ ಫಲವಾಗಿಯೇ ಮಾನವ ಹೆಚ್ಚು ಹೆಚ್ಚು ಕ್ರಿಯಾಶೀಲನಾಗಿ ಬೆಳೆದು ಹೊಸ ಹೊಸ ತತ್ವಗಳನ್ನು ಸೃಷ್ಟಿಸಿ ಬೆಳೆಸಿಕೊಂಡು ಬಂದಿದ್ದಾನೆ. ಅದರಿಂದಾಗಿ ಅರಿವಿನ ವ್ಯಾಪ್ತಿ ಹಿಗ್ಗಿದೆ. ಜ್ಞಾನದ ದಿಗಂತ ವಿಸ್ತಾರಗೊಂಡಿದೆ.

ಇಂತಹ ಒಂದು ಹೊಸತತ್ವ ಸಾಧ್ಯವಾಗಬೇಕಾದರೆ ಮತ್ತು ಅದು ಪ್ರಯೋಗಾತ್ಮಕವಾಗಿ ಸಜೀವಗೊಳ್ಳಬೇಕಾದರೆ ಅದು ಪ್ರಬಲವಾದ ವ್ಯಕ್ತಿಯ ಮೂಲಕವೇ ಸಾಧ್ಯ. ಸಿದ್ಧಾಂತಕ್ಕೆ ಇಂಬುಗೊಡಬಲ್ಲ ಪ್ರಬಲವಾದ ವ್ಯಕ್ತಿಯಿಂದಾಗಿ ಅವ್ಯಕ್ತವಾದ ಒಂದು ತತ್ವ ಇಲ್ಲವೇ ಸಿದ್ಧಾಂತ ಸ್ಪಷ್ಟವಾದ ರೂಪ ತಳೆದು ಮೈಗೂಡಿಬರಲು ಸಾಧ್ಯವಾಗುತ್ತದೆ. ಹೀಗಾಗಿ ಸನ್ನಿವೇಶದ ಬೆಂಬಲ ಮತ್ತು ವ್ಯಕ್ತಿಯ ಕ್ರಿಯಾಶಕ್ತಿ ಈ ಎರಡರ ಮಿಲನವಾದಾಗ ವಿಶ್ವದ ಇತಿಹಾಸದಲ್ಲಿ ಒಂದು ನೂತನ ಘಟನೆ ಸಾಧ್ಯವಾಗುತ್ತದೆ. ಈ ಹಿನ್ನೆಲೆಯಲ್ಲಿ ಗಾಂಧೀಜಿಯ ಬದುಕನ್ನು ನೋಡಿದಾಗ ಅವರ ಬದುಕು ಮತ್ತ ಅವರ ಸಿದ್ಧಾಂತಗಳು ಅದೆಷ್ಟು ಸಕಾಲಿಕವಾಗಿದ್ದುವು ಮತ್ತು ಅವರ ತತ್ವಗಳ ಸೋಲು ಗೆಲುವುಗಳಿಗೆ ಹಾಗೂ ಅವರ ಸಾಧನೆ ಮತ್ತು ಸಿದ್ಧಿಯಲ್ಲಿ ಇವರ ಪಾತ್ರ ಎಷ್ಟು ಮತ್ತು ಅಂದಿನ ಪರಿಸರದ ಪಾತ್ರ ಎಷ್ಟು ಎಂಬುದು ನಮಗೆ ಮನವರಿಕೆಯಾಗುತ್ತದೆ. ಅದನ್ನು ಕುರಿತ ಸ್ಥೂಲಚಿಂತನೆ ಈ ಲೇಖನದ ಉದ್ದೇಶ.

ಗಾಂಧೀಜಿಯು ಬೋಧಿಸಿ ಸಾಧಿಸಿದ ಎಲ್ಲ ತತ್ವಗಳೂ ವಿನೂತನವಾದವುಗಳು ಎಂಬುದಾಗಲಿ ಅಥವಾ ಅವು ಕೇವಲ ಸನಾತನವಾದವುಗಳು ಎಂಬುದಾಗಲಿ ಹೇಳುವುದು ಅತಿಶಯೋಕ್ತಿಯೇ ಸರಿ ಗಾಂಧೀಜಿ ಪ್ರತಿಪಾದಿಸಿದ ಸತ್ಯ. ಅಹಿಂಸೆ, ಅಸ್ತೇಯ ಅಸಂಗ್ರಹ ಮುಂತಾದ ಮೂಲಭೂತ ಸಿದ್ಧಾಂತಗಳು ಭಾರತೀಯ ಸಂಸ್ಕೃತಿಗೆ ಹೊಸದೇನಲ್ಲ. ಮಾನವನ ಬದುಕಿನಲ್ಲಿ ಈ ತತ್ವಗಳ ಮಹತ್ವ ಮತ್ತು ಅವುಗಳ ಅನುಸಂಧಾನದ ಅವಶ್ಯಕತೆಯನ್ನು ಭಾರತೀಯರೇ ಅಲ್ಲದೆ ವಿಶ್ವದ ಅನೇಕ ಮಹನೀಯರು ಮನಗಂಡು

ಅವುಗಳ ಸಾಧನೆಯಲ್ಲಿ ತೊಡಗಿದ್ದುಂಟು. ಹಾಗೆಯೇ ಗಾಂಧೀಜಿ ತಮ್ಮ ರಾಜಕೀಯ ಹಾಗೂ ಸಾಮಾಜಿಕ ಬದುಕಿನಲ್ಲಿ ಮಾಡಿದ ಸಾಧನೆಗೆ ಬೇಕಾದ ಪ್ರೇರಕಶಕ್ತಿ ಮಾನವನ ಬದುಕಿನಲ್ಲಿ ಅವರಿಗಿಂತ ಮೊದಲೇ ಇದ್ದದ್ದೂ ನಿಜ. ಆದರೆ ಈ ಸಿದ್ಧಾಂತಗಳನ್ನು ಪುನರ್ಜೀವನಗೊಳಿಸುವಾಗ, ಗಾಂಧೀಜಿ ಅನುಸರಿಸಿದ ರೀತಿ ನೀತಿಗಳು ಅವರದೇ ಆದರೀತಿಯಲ್ಲಿದ್ದು, ಅವು ತುಂಬಾ ಹೊಸತಾಗಿಯೇ ಕಂಡುವು. ಗಾಂಧೀಜಿ ತಾವು ಸಾಧಿಸಿ ತೋರಿಸಿದ ಅಹಿಂಸೆ, ಸರಳ ಜೀವನ ಮತ್ತು ಸಮಾನತೆ ಇವು ಸುಲಭ ಸಾಧ್ಯವಲ್ಲದಿದ್ದರೂ ಅವುಗಳನ್ನೂ ನಿರಾಕರಿಸುವುದು ಯೋಗ್ಯ ಎಂದು ಯಾರೂ ಹೇಳುವಂತಿಲ್ಲ. ಹೀಗಾಗಿ ಗಾಂಧೀಜಿಯ ತತ್ವಗಳನ್ನು ಅರಿತವರು ಮತ್ತು ಮರೆತವರೂ, ಇವರಿಬ್ಬರೂ ಗಾಂಧೀಜಿಯ ಜೀವನ ಮತ್ತು ಅವರ ಸಿದ್ಧಾಂತದ ವೈಚಿತ್ರ್ಯವನ್ನು ಗಮನಿಸುವುದು ಅನಿವಾರ್ಯ.

ಆಸ್ತಿಕತೆಯೇ ತಮ್ಮ ಪರಮಧರ್ಮ ಎಂದು ನಂಬಿದ್ದ ಭಾರತೀಯರಿಗೆ ಗಾಂಧೀಜಿಯ ಸತ್ಯಾನ್ವೇಷಣೆ ಅಥವಾ ದೈವ ಸಾಕ್ಷಾತ್ಕಾರದ ಹಂಬಲ ಅಷ್ಟೇನು ಹೊಸದಾಗಿರಲಾರದು. ಆದರೆ ಇವರು ದೇವರನ್ನು ಹುಡುಕಲು ಗುಡಿಗೋಪುರಗಳಿಗಾಗಲಿ, ಕಾಡು ಮೇಡುಗಳಿಗಾಗಲಿ ಹೋಗದೆ ದೀನ ದಲಿತರ ನಡುವೆ ನಿಂತು ಗೊಂದಲಮಯವಾದ ರಾಜಕೀಯ, ಸಾಮಾಜಿಕ, ಆರ್ಥಿಕ ಸಮಸ್ಯೆಗಳಿಗೆಲ್ಲಾ ಪರಿಹಾರ ಹುಡುಕಲು ಹೊರಟಿದ್ದು ಒಂದು ರೀತಿಯಲ್ಲಿ ಹೊಸದಾಗಿಯೇ ಕಂಡಿತು. ಧರ್ಮದ ಹೆಸರಿನಲ್ಲಿ ನಡೆದು ಬಂದ ಅಂಧಶ್ರದ್ಧೆ, ಹಿಂಸೆ, ಅನಾಚಾರಗಳಿಂದ ಬೇಸತ್ತಿದ್ದ ಕೆಲವು ಜನರಿಗಾದರೂ ಗಾಂಧೀಜಿಯ ಈ ಧಾರ್ಮಿಕ ಬದುಕು ಪ್ರಿಯವೆನಿಸಿತು. "ದೀನದಲಿತರ ಶೋಷಣೆ, ಅಸ್ಪೃಶ್ಯತೆಯ ಆಚರಣೆ, ಸ್ತ್ರೀಪುರುಷರ ಅಸಮಾನತೆ, ಈ ಮುಂತಾದ ಅನಾಚಾರಗಳನ್ನು ಒಪ್ಪುವುದಾದರೆ, ಅಂತಹ ಧರ್ಮ ನನ್ನ ಧರ್ಮ ಅಲ್ಲ. ಅದೂ ಹಿಂದೂ ಧರ್ಮವೇ ಆಗಲಿ, ಯಾವ ಧರ್ಮವೇ ಆಗಲಿ ಅದು ನನ್ನ ಬದುಕಿಗೆ ಪ್ರೇರಕ ಶಕ್ತಿಯಾಗಲಾರದು." ಎಂಬ ಗಾಂಧೀಜಿಯ ಮಾತು ಪ್ರಾಮಾಣಿಕವಾಗಿ ಧರ್ಮಶ್ರದ್ಧೆಯುಳ್ಳವರೆಲ್ಲರ ಗಮನವನ್ನು ಸೆಳೆಯಲು ಶಕ್ತವಾಯಿತು. ಧಾರ್ಮಿಕ ಶ್ರದ್ಧೆ ಮತ್ತು ವೈಚಾರಿಕತೆ, ಈ ಎರಡನ್ನು ಜೊತೆ ಜೊತೆಯಾಗಿಯೇ ಸಾಧಿಸಬಹುದು ಎಂದು ನಂಬಿದವರಿಗೆ ಗಾಂಧೀಜಿ ಸರಿಯಾಗಿ ಕಂಡರು. ಆದರೆ ಕೇವಲ ವಿಚಾರವಾದಿಗಳಿಗೆ ಗಾಂಧೀಜಿಯ ಧಾರ್ಮಿಕ ಶ್ರದ್ಧೆ ಸನಾತನತೆಯತ್ತ ಅವರ ಒಲವು ಸರಿಬರದಿದ್ದರೂ ಅವರ ನೀತಿ ನಿಷ್ಠೆಯನ್ನು ಅಷ್ಟಾಗಿ ಅಲ್ಲಗಳೆಯಲಿಲ್ಲ.

ರಾಜಕೀಯವಾಗಿ ಸುಮಾರು ಎರಡು ಶತಮಾನಗಳಷ್ಟು ಕಾಲ ದಾಸ್ಯ ಸಂಕಲೆಗೆ ಸಿಕ್ಕಿದ್ದ ಭಾರತೀಯರಿಗೆ ಗಾಂಧೀಜಿಯ ಸ್ವಾತಂತ್ರ್ಯ ಸಂಗ್ರಾಮದ ಕಹಳೆ ನಿಜವಾಗಿಯೂ ಜಾಗೃತಗೊಳಿಸುವಂತಿದ್ದಿತು. ಆದರೆ ಅವರು ನೀತಿಗೆ ಕೊಟ್ಟ ಒತ್ತಿನಿಂದಾಗಿ ಅವರ ಸತ್ಯಾಗ್ರಹದ ಮಾರ್ಗ ತುಂಬಾ ಮಂದ ಗಾಮಿ ಎಂದುಕೊಂಡವರೂ ಉಂಟು.

ಆದರಿಂದಾಗಿಯೇ ಇವರ ನಿಷ್ಠಾವಂತ ಅನುಯಾಯಿಗಳು ಕೆಲವರು ಇವರಿಂದ ದೂರಸರಿದದ್ದು. ಬ್ರಿಟಿಷ್ ಸಾಮ್ರಾಜ್ಯ, ಮಹಾಯುದ್ಧಗಳ ದವಡೆಗೆ ಸಿಕ್ಕಿ ತತ್ತರಿಸುತ್ತಿರುವಾಗ ಅವರ ಆಶ್ರಿತ ರಾಷ್ಟ್ರವಾದ ಭಾರತದ ಪ್ರಜೆಗಳು ಬ್ರಿಟಿಷರ ಪರವಾಗಿ ಯುದ್ಧಕ್ಕೆ ನೆರವಾಗ ಬೇಕೆಂಬ ಗಾಂಧೀಜಿ ಸಲಹೆ, ತೀರ ಅಸಮಂಜಸವಾಗಿ ಕೆಲವರಿಗೆ ಕಂಡಿತು. ಗಾಂಧೀಜಿಯ ಈ ಧರ್ಮಸೂಕ್ಷ್ಮತೆಯನ್ನು ಸುಭಾಷ್‌ಚಂದ್ರ ಭೋಸರಂತಹವರೂ ಗುರುತಿಸಲಾರದಾದರು. ಬ್ರಿಟಿಷ್ ಸೈನ್ಯಕ್ಕೆ ಸೇನಾನಿಗಳನ್ನು ಸೇರಿಸುವ ಕೆಲಸಕ್ಕಾಗಿ ಗಾಂಧೀಜಿ ಪ್ರವಾಸ ಹೋದಾಗ, ಜನಸಾಮಾನ್ಯರೂ ಸಹ ಗಾಂಧೀಜಿಯೊಂದಿಗೆ ಸಹಕರಿಸಲಿಲ್ಲ. ಬ್ರಿಟಿಷ್ ಸಾಮ್ರಾಜ್ಯ ಕಷ್ಟದಲ್ಲಿರುವಾಗ, ಅದರ ದುರುಪಯೋಗ ಪಡೆದು ನಾವು ಸ್ವಾತಂತ್ರ್ಯಗಳಿಸುವುದು ಗಾಂಧೀಜಿಗೆ ಧರ್ಮಸಮ್ಮತವಾಗಲಿಲ್ಲ. "ವೈರಿಯ ಅಸಹಾಯಕತೆ ನಮಗೊಂದು ಸದವಕಾಶ" (Enemy's helplessness is our opportunity) ಎಂಬುದು ನಿಜವಾದ ವೀರನ ಲಕ್ಷಣವಲ್ಲ ಎಂಬುದು ಗಾಂಧೀಜಿಯ ಮತ. ಇವರ ಈ ಸಮಗಸಂಹಿತೆಯನ್ನು ಗುರುತಿಸಲು ಅನೇಕರಿಗೆ ಸಾಧ್ಯವಾಗಲಿಲ್ಲ.

ರಾಷ್ಟ್ರ ಇಬ್ಭಾಗವಾಗದ ಹೊರತು ಭಾರತದ ಸ್ವಾತಂತ್ರ್ಯ ಅಸಾಧ್ಯ ಎಂಬ ಒಂದು ಸ್ಥಿತಿ ಕೊನೆಗೆ ಬಂದೊದಗಿದಾಗ. ಗಾಂಧೀಜಿ ತಳೆದ ನಿಲುವು ಬಹು ವಿಶಿಷ್ಟವಾದದ್ದು. ಭಾರತವನ್ನು ವಿಭಜಿಸಿ ಪಾಕಿಸ್ತಾನ ಹಿಂದೂಸ್ಥಾನ ಎಂಬೆರಡು ರಾಷ್ಟ್ರಗಳನ್ನು ನಿರ್ಮಿಸುವುದು, ನನ್ನ ಶರೀರವನ್ನೇ ಎರಡು ತುಂಡುಮಾಡಿದಂತೆ ಎಂದರು ಗಾಂಧೀಜಿ. ರಾಷ್ಟ್ರದ ಸ್ವಾತಂತ್ರ್ಯವಿಲ್ಲದಿದ್ದರೂ ಬೇಡ, ಆದರೆ ಭಾರತವನ್ನು ವಿಭಾಜಿಸುವುದು ಕೂಡದು ಎಂಬುದು ಇವರ ನಿಲುವು. ಆದರೆ ಈ ನಿಲುವಿಗೆ ದೊರೆತ ಪುರಸ್ಕಾರ ಅದೆಷ್ಟೆಂಬುವುದಕ್ಕೆ ಅನಂತರ ನಡೆದ ಘಟನೆಗಳೇಸಾಕ್ಷಿ. ಆದರ ಫಲವಾಗಿ ನಡೆದ ರಕ್ತಪಾತ, ಸಾವುನೋವುಗಳ ಮುನ್ನೋಟ ಗಾಂಧೀಜಿಗಿತ್ತು ಎಂಬುದನ್ನು ಅವರನ್ನು ನಿರಾಕರಿಸಿದವರೂ ಮನಗಂಡರು. ಮಕ್ಕಳು ಕೂಡಿ ಬಾಳಬೇಕು ಎಂಬುದನ್ನು ಬಯಸುವವನೇ ನಿಜವಾದ ತಂದೆ, ಸೋದರರ ನಡುವಿನ ಅಂತಃಕಲಹದ ಬಿರುಕು ಬಿರಿದು ಕಂದರವಾಗಬಾರದು. ಅದನ್ನು ಬೇರೆಯವರು ದುರುಪಯೋಗಪಡಿಸಿಕೊಳ್ಳುತ್ತಾರೆಂಬುದು ಸಾಮಾನ್ಯರಿಗೂ ತಿಳಿಯುವ ವಿವೇಕ. ಈ ಒಂದು ಕಾರಣಕ್ಕಾಗಿ ಗಾಂಧೀಜಿ ಆಮರಣಾಂತ ಉಪವಾಸ ಮಾಡಿಯಾರೇನೋ ಎಂದು ಹೆದರಿದವರೂವುಂಟು. ಆದರೆ, ಹಾಗಾಗಲಿಲ್ಲ ಅಂತೂ, ರಾಷ್ಟ್ರದ ವಿಭಜನೆಯಂತಹ ಈ ಘಟನೆ ಗಾಂಧೀಜಿಯ ನೈತಿಕ ಸಿದ್ಧಾಂತಕ್ಕೊಂದು ಸವಾಲಾಗಿಯೇ ಉಳಿಯಿತು.

ಇನ್ನೂ, ಸಾಮಾಜಿಕವಾಗಿ ನೋಡುವುದಾದರೆ, ಹಿಂದೂಧರ್ಮಕ್ಕೆ, ಶಾಸ್ತ್ರಸಮ್ಮತವೋ ಅಲ್ಲವೋ, ಅಂತೂ, ಅಸ್ಪೃಶ್ಯತೆ, ಜಾತೀಯತೆ, ಸ್ತ್ರೀಯರ ಅನಾದರಣೆ, ಮತ್ತು ಧರ್ಮದ ಹೆಸರಿನಲ್ಲಿ ನಡೆದುಬಂದ ಅಂಧಶ್ರದ್ಧೆ ಇವು ಗಾಂಧೀ ಯುಗಕ್ಕಿಂತಲೂ

ಮೊದಲಿನಿಂದಲೂ ಅಂಟಿಬಂದಿದ್ದುವು. ಇವುಗಳ ವಿರುದ್ಧ ದಿಟ್ಟತನದ ಹೋರಾಟಕ್ಕೆ ಗಾಂಧೀಜಿ ತೊಡಗಿದರಲ್ಲದೆ ಸಮಾನಧರ್ಮವುಳ್ಳ ತನ್ನ ಅನುಯಾಯಿಗಳ ಒಂದು ತಂಡವನ್ನೇ ಸಿದ್ಧಗೊಳಿಸಿದರು. ಹಿಂದೂಧರ್ಮದ ಇಂತಹ ಆಚರಣೆಗಳ ವಿರುದ್ಧ, ಬುದ್ಧನಿಂದ ಮೊದಲುಗೊಂಡು ನಮ್ಮ ಸಮಕಾಲೀನ ಯುಗದವರೆಗೂ ಅನೇಕ ಸುಧಾರಕರು ಶ್ರಮಿಸಿದ್ದರು. ಅಷ್ಟಾದರೂ ಗಾಂಧೀಜಿ ಕಾಲಕ್ಕೆ ಈ ಆಚರಣೆಗಳು ಅಷ್ಟೇನು ಸಡಿಲಗೊಂಡಿದ್ದುವು ಎಂದು ಹೇಳುವಂತಿಲ್ಲ. ಹಾಗಾಗಿ, ಸಹಜವಾಗಿಯೇ ಗಾಂಧೀಜಿಯವರ ಗಮನ ಈ ಸಮಸ್ಯೆಗಳತ್ತ ತಿರುಗಿತು. ಅವರ ಸತ್ಯಪ್ರಿಯತೆ ಇಂತಹ ಅಸತ್ಯವನ್ನು ಒಪ್ಪಲು ಸಿದ್ಧವಿರಲಿಲ್ಲ. ಸನಾತನಿಗಳಿಗೆ ಅದೆಷ್ಟೋ ಅಪ್ರಿಯವೆನಿಸಿದರೂ ಇವುಗಳನ್ನು ಖಂಡಿಸುವುದರಲ್ಲಿ ಗಾಂಧೀಜಿ ಯಾರಿಗೂ ಹಿಂದೆ ಬೀಳಲಿಲ್ಲ. ಅಷ್ಟೇ ಅಲ್ಲದೆ, ಈ ದೋಷಗಳನ್ನು ಸುಧಾರಿಸಿ, ಸರಿಯಾದ ಹಿಂದೂ ಧರ್ಮ ಹೇಗಿರಬೇಕೆಂಬುದನ್ನು ತಾವು ಆಚರಿಸಿ ತೋರಿಸಲು ಹೊರಟರು. ಅಸ್ಪೃಶ್ಯತೆಯಂತಹ ಅನಾಚಾರಗಳು ಹಿಂದೂ ಧರ್ಮಕ್ಕೆ ಅಂಟಿರುವ ಒಂದು ಜಾಡ್ಯ. ಆದ್ದರಿಂದ ಈ ಧರ್ಮ ಆದಷ್ಟು ರೋಗಮುಕ್ತವಾಗಬೇಕೆಂದು ನಿಷ್ಠೆಯಿಂದ ಇವರು ಬಯಸಿದರು. ಅಂದು ಅವರು ಈ ದೆಸೆಯಲ್ಲಿ ಮೂಡಿಸಿದ ಜನಜಾಗೃತಿ ಇಂದು ನಾನಾರೂಪದಲ್ಲಿ ವಿಸ್ತೃತಗೊಂಡಿದೆ. ಗಾಂಧೀಜಿ ಬಯಸಿದ ಸುಧಾರಣೆ, ಕ್ಷಿಪ್ರಗತಿಯಲ್ಲಿ ಆಗದಿದ್ದ ಕಾರಣದಿಂದಲೇ ಈಗ ಶೋಷಿತ ವರ್ಗದಲ್ಲಿ ಮೂಡಿಬಂದ ಸಮಾನತೆಯ ತೃಷ್ಣೆ, ಸೇಡಿನತ್ತ ವಾಲುತ್ತಿದೆ. ಕಾಲ ಮೀರುವ ಮುನ್ನ ಬೇಗ ಎಚ್ಚರಗೊಂಡು ತನ್ನನ್ನು ತಾನು ಸುಧಾರಿಸಿಕೊಳ್ಳಬೇಕು ಎಂಬ ಗಾಂಧೀಜಿಯ ಹಿತನುಡಿ, ಹಿಂದೂ ಧರ್ಮಕ್ಕೆ ಈಗ ಚೆನ್ನಾಗಿ ಮನವರಿಕೆಯಾಗ ಬೇಕಾಗಿದೆ.

ಹಾಗೆಯೇ, ವಿಜ್ಞಾನದ ಬೆನ್ನುಹತ್ತಿ ಸ್ವಾರ್ಥ ಮತ್ತು ಶೋಷಣೆಗೆ ಅದು ಒಂದು ಸುಲಭ ಸಾಧನ ಎಂದು ಮನಗಂಡು, ಬೃಹತ್ ಕೈಗಾರಿಕೆಯೊಂದೇ ಮಾನವ ಕಲ್ಯಾಣಕ್ಕೆ ಇರುವ ಮಾರ್ಗ ಎಂದು ನಂಬಿದ ಆಧುನಿಕ ಜಗತ್ತಿಗೆ, ಗಾಂಧೀಜಿ ಸೂಚಿಸಿದ ಸರಳತೆ ಮತ್ತು ಸಂಯಮದ ಬದುಕು ಅಸಂಗತವೇನೋ ಎಂಬಂತೆ, ಮೊದಮೊದಲಿಗೆ ಕಾಣಿಸಿದ್ದುಂಟು. ವಿಜ್ಞಾನದ ನೆರವಿನಿಂದ, ನಿಸರ್ಗದ ನಿಯಮಗಳನ್ನೆಲ್ಲಾ ಗುರುತಿಸಿ ಅದನ್ನು ತನ್ನ ಸುಖ ಮತ್ತು ಭೋಗಕ್ಕೆ ಬಳಸಬಹುದು ಎಂದು ಬಯಸಿದ ಮಾನವ ಇಂದು ಸ್ವಾರ್ಥದ ದಾಹಕ್ಕೆ ದಾಸನಾಗಿ, ಸರ್ವನಾಶಕ್ಕೂ ಸಿದ್ಧವಿರುವಂತೆ ಕಾಣುತ್ತಿದೆ. ಐನ್‌ಸ್ಟೈನನಂತಹ ವಿಜ್ಞಾನಿದಾರ್ಶನಿಕರು, ಈ ಪ್ರಜ್ಞಾವಂತ ಮಾನವ ಎತ್ತ ಸಾಗುತ್ತಿದ್ದಾನೆ ಎಂದು ಬೆಚ್ಚಿ, ಇನ್ನಾದರೂ ದಾರಿತಪ್ಪಬೇಡಿ ಎಂದು ಮಾನವಕುಲಕ್ಕೆ ಎಚ್ಚರದ ನುಡಿಯನ್ನಾಡಿದ್ದಾರೆ. ಮಾನವ ನಿಸರ್ಗದಿಂದ ದೂರ ಸರಿದು, ನಿಸರ್ಗದ ನಿಯಮಕ್ಕೆ ವಿರುದ್ಧಗತಿಯಲ್ಲಿ ಈಜಲು ಹೊರಟರೆ, ಆಗ ಅದರ ದುಷ್ಪರಿಣಾಮದಿಂದ ಅವನು ತಪ್ಪಿಸಿಕೊಳ್ಳಲಾರ, ಎಂಬುದನ್ನು ಗಾಂಧೀಜಿ ಚೆನ್ನಾಗಿ ಮನಗಂಡಿದ್ದರು. ಇವನೊಬ್ಬ

ಪ್ರತಿಗಾಮಿ, ಪ್ರಗತಿ ವಿರೋಧಿ, ಎಂದೆಲ್ಲ ಜನ ಕರೆದರೂ ಅದೊಂದನ್ನೂ ಲಕ್ಷಿಸದೆ, ತಾವು ಕಂಡ ಸತ್ಯವನ್ನು ಮುಚ್ಚುಮರೆ ಇಲ್ಲದೆ ಗಾಂಧೀಜಿ ಪ್ರತಿಪಾದಿಸಿದರು. ಕಾಲ ಉರುಳಿದಂತೆಲ್ಲಾ ಈ ಪಿಚ್ಚರದ ನುಡಿ ನಮಗೆ ನಿಚ್ಚಳವಾಗುತ್ತಾ ಬರುತ್ತಿದೆ. ಹೀಗಾಗಿ ಗಾಂಧೀಜಿಯ ನಡೆ ನುಡಿಗಳು ಅವರು ಬದುಕಿದ ಕಾಲಕ್ಕೆ ಮಾತ್ರವೇ ಸಕಾಲಿಕವಾಗಿರ ಲಿಲ್ಲ, ಅವು ಎಲ್ಲ ಕಾಲಕ್ಕೂ ಅನುಕರಣೀಯವಾಗಿ ಕಾಣುತ್ತಿವೆ. ಗಾಂಧೀಜಿಯ ಸಿದ್ಧಾಂತದ ಉಪಯೋಗ ಇನ್ನು ಮುಗಿದು ಹೋಯಿತು, ಇನ್ನು ಮೇಲೆ ಅವು ಅಪ್ರ ಯೋಜಕ ಎನ್ನುವ ಕಾಲ ಬಂದದ್ದೇ ಆದರೆ ಆಗ, ಅದು ಮಾನವ ಕುಲಕ್ಕೆ ಬಂದೊದು ಗುವ ಒಂದು ದುರದೃಷ್ಟ. ಗಾಂಧೀಜಿಯ ಮೌಲ್ಯಗಳನ್ನು ಅದೆಷ್ಟು ಅಪೂರ್ಣ ವಾಗಿ ಆಚರಿಸಿದರೂ ಅಷ್ಟರ ಮಟ್ಟಿಗಾದರೂ ಅದರ ಲಾಭ ಮಾನವನಿಗೆ ದೊರೆಯು ತ್ತದೆ ಎಂಬುದಕ್ಕೆ ನಿದರ್ಶನಗಳೂ ನಮ್ಮ ಸುತ್ತ ಅನೇಕವಿವೆ. ಇದರ ಅರಿವು ನಮಗೆ ಇದ್ದರೂ ಸಹ ನಾವು ಮೈಮರೆಯುವುದಾದರೆ ಮುಂದಿನ ಜನಾಂಗ ಇಂದಿನ ಈ ಪರಂ ಪರೆಯನ್ನು ಕ್ಷಮಿಸಲಾರದು. ಗಾಂಧೀಜಿಯ ಸಿದ್ಧಾಂತ ಅದೆಷ್ಟು ಸಕಾಲಿಕ, ಎಂದು ಚಿಂತಿಸುವುದರ ಬದಲು, ಇಂದಿನ ಜನಾಂಗ ಆ ಸಿದ್ಧಾಂತಗಳಿಗೆ ಅದೆಷ್ಟು ಅನರ್ಹರು ಎಂದು ಚಿಂತಿಸುವ ಕಾಲ ಈಗ ನಮ್ಮ ಮುಂದಿದೆ.

ಪ್ರ ದ ರ್ಶ ನ

# ಗಾಂಧೀಜಿ ಮತ್ತು ದೇಶಭಾಷಾ ಮಾಧ್ಯಮ

**ಸಿ. ಪಿ. ಕೆ.**

ಸುಮಾರು ಮೂರು ದಶಕಗಳ ಹಿಂದೆ ಭರತಖಂಡಕ್ಕೆ ಸ್ವಾತಂತ್ರ್ಯ ಬಂತೆಂಬುದು ಎಲ್ಲರಿಗೂ ಗೊತ್ತಿರುವ ಸಂಗತಿ. ಆದರೆ ವಾಸ್ತವವಾಗಿ, ರಾಜಕೀಯ ಸ್ವಾತಂತ್ರ್ಯವಷ್ಟೇ ನಮಗೆ ಸಿಕ್ಕಿದ್ದು.(ಅದೂ ಈಗ ಸಂದೇಹಾಸ್ಪದ ಎಂಬುದು ನೇರ ಮಾತು) ರಾಷ್ಟ್ರಪಿತ ಮಹಾತ್ಮ ಗಾಂಧಿಯವರ ಗುರಿ ಕೇವಲ ರಾಜಕೀಯ ಸ್ವಾತಂತ್ರ್ಯವಾಗಿರಲಿಲ್ಲ: ಸಂಪೂರ್ಣ ಸ್ವಾತಂತ್ರ್ಯವಾಗಿತ್ತು : ಪರದೇಶದಿಂದ ಬಿಡುಗಡೆ ಮಾತ್ರವಲ್ಲ, ಪರಭಾಷೆಯಿಂದ ಬಿಡುಗಡೆ, ಪರ ಸಂಸ್ಕೃತಿಯಿಂದ ಬಿಡುಗಡೆ ಇತ್ಯಾದಿ. ತನ್ಮೂಲಕ ಸರ್ವೋದಯದ ಆದರ್ಶವನ್ನು ಗಾಂಧೀಜಿ ಸಾಧಿಸ ಬಯಸಿದರು. ಅವರ ಬದುಕೆಲ್ಲ ಸರ್ವೋದಯ ಸಾಕ್ಷಾತ್ಕಾರಕ್ಕೆ ಮುಡಿಪಾಗಿತ್ತು. ಆದರೆ ಅದು ಇಂದಿಗೆ ಹಳೆಯ ಕತೆ ಪುರಾಣ !

ಈ ದೇಶ ದಿನ ದಿನಕ್ಕೂ ಹೆಚ್ಚು ಹೆಚ್ಚು ಅಧೋಗತವಾಗುತ್ತಿರುವುದು ಯಾರಿಗೂ ಅಪರಿಚಿತವಾದ ಸಂಗತಿಯಲ್ಲ. ಈ ದುರವಸ್ಥೆಗೆ ಕಾರಣವಾದರೂ ಏನು ? ಜನತೆಯ ಅಜ್ಞಾನ, ಅಧಿಕಾರ ಸೂತ್ರ ಹಿಡಿದವರಲ್ಲಿ ದೂರಾಲೋಚನೆಯ ಅಭಾವ ಮತ್ತು ಮೌಢ್ಯ, ಸ್ವಾರ್ಥಪರತೆ ಮತ್ತು ಪಟ್ಟಭದ್ರ ಹಿತಾಸಕ್ತಿಗಳು. ರಾಷ್ಟ್ರಕ್ಕೆ ಸ್ವಾತಂತ್ರ್ಯ ಬಂದು ಮೂರು ದಶಕಗಳ ಮೇಲಾಯಿತು. ಗಾಂಧೀಜಿ ಕಂಡ ಸರ್ವೋದಯದ ಕನಸು ಇನ್ನೂ ನನಸಾಗಿಲ್ಲ ; ಸದ್ಯದಲ್ಲಿ ಆಗುವ ಲಕ್ಷಣಗಳೂ ಇಲ್ಲ. ನಿಜವಾದ ಪ್ರಜಾ ಪ್ರಭುತ್ವ ನಮ್ಮಲ್ಲಿನ್ನೂ ಬೇರೂರಿಲ್ಲ. ಈಗಿರತಕ್ಕದ್ದು ಅದರ ಆ ಭಾಸವಷ್ಟೇ ಈ ಪ್ರಗತಿ ಹೀನ ಸ್ಥಿತಿಗೂ ಭಾಷಾ ಮಾಧ್ಯಮದ ಸಮಸ್ಯೆಗೂ ನಿಕಟವಾದ ನಂಟು ಗಂಟುಗಳುಂಟು.

ಭಾಷಾ ಸಮಸ್ಯೆ ಮೇಲು ನೋಟಕ್ಕೆ ತೋರುವಷ್ಟು ಹಗುರವಾದುದಲ್ಲ: ಬದುಕಿನಲ್ಲಿ ಅದರ ಪಾತ್ರ ಮೂಲ ಭೂತವಾದುದು. ಒಬ್ಬ ವ್ಯಕ್ತಿಯ ಉಸಿರು ಬೇರೆಯಲ್ಲ, ಅವನ ಭಾಷೆ ಬೇರೆಯಲ್ಲ. ಯಾವುದೇ ಜನಾಂಗದ ಸಾರ ಸರ್ವಸ್ವವೂ ಅದರ ಮಾತೃ ಭಾಷೆಯಲ್ಲಿ ನಿಕ್ಷಿಪ್ತವಾಗಿರುತ್ತದೆ, ಆಯಾ ಭಾಷೆಯ ಮೂಲಕವೇ ಆಯಾ ಜನಸಮಷ್ಟಿಯ ಉದ್ಧಾರ, ವಿಕಾಸಗಳು ಸಾಧ್ಯ. ಜಗತ್ತಿನ ಜ್ಞಾನ ಭಂಡಾರವನ್ನು ಅವರವರ ಭಾಷೆಯ ಕೀಲಿಕೈ ಮಾತ್ರ ತೆರೆದು ತೋರಬಲ್ಲುದು. ಈ ದೃಷ್ಟಿಯಿಂದ ನೋಡಿದಾಗ ಭರತ ಖಂಡದ ಸರ್ವೋದಯ ಅಂತಿಮವಾಗಿ ದೇಶ ಭಾಷಾ ಮಾಧ್ಯಮವನ್ನು ಅವಲಂಬಿಸಿದೆಯೆಂಬ ಸತ್ಯ ಹೊಳೆಯದಿರದು.

ಬ್ರಿಟಿಷ್ ಆಳರಸರು ತಮ್ಮ ಆಡಳಿತ ಯಂತ್ರದ ಸುಗಮಚಾಲನೆಗಾಗಿ, ಕಾರ

ಕೂನರನ್ನು ತಯಾರಿಸುವ ಉದ್ದೇಶದಿಂದ ಇಂಗ್ಲಿಷ್ ಮಾಧ್ಯಮವನ್ನು ಭಾರತದಲ್ಲಿ
ಜಾರಿಗೆ ತಂದರು. ಅದರಿಂದ ಭಾರತೀಯರಿಗೆ ಪ್ರಯೋಜನಗಳೂ ಆದುದನ್ನು
ನಿರಾಕರಿಸುವಂತಿಲ್ಲ. ಆದರೆ ಬ್ರಿಟಿಷರು ಈ ದೇಶವನ್ನು ಬಿಟ್ಟು ಹೋದ ಮೇಲೂ
ಇಂಗ್ಲಿಷ್ ಮಾಧ್ಯಮ ರೂಢಮೂಲವಾಗಿ ಇಲ್ಲಿ ಉಳಿದುಕೊಂಡದ್ದೊಂದು ದೊಡ್ಡ
ವಿಪರ್ಯಾಸ. ಅಥವಾ ಇದರಲ್ಲಿ ಆಶ್ಚರ್ಯಪಡುವಂಥದೇನೂ ಇಲ್ಲವೆನ್ನೋಣವೆ ?
ಜನತೆಯನ್ನು ದಾಸ್ಯದಲ್ಲಿರಿಸುವ ಸಾಧನವಾಗಿ ಆಂಗ್ಲರು ತಮ್ಮ ಭಾಷೆಯನ್ನು ಹೇರಿ
ದರು. ಅಂತೆಯೇ, ಸ್ವಾತಂತ್ರ್ಯ ಪ್ರಾಪ್ತಿಯನಂತರ. ಜನತೆಯನ್ನು ಶೋಷಿಸಲು,
ತಮ್ಮ ಸ್ವಾರ್ಥವನ್ನು ಈಡೇರಿಸಿಕೊಳ್ಳಲು, ಅಧಿಕಾರವನ್ನು ನಿಷ್ಕಂಟಕ ಮಾಡಿಕೊಳ್ಳಲು
ಭಾರತೀಯ ಮುಂದಾಳುಗಳು ಮತ್ತು ಅಧಿಕಾರಿಗಳು ಇಂಗ್ಲೀಷ್ ಮಾಧ್ಯಮವನ್ನು
ಮುಂದುವರಿಸಿಕೊಂಡು ಬಂದಿದ್ದಾರೆ ಎಂದರೆ ತಪ್ಪಾಗಲಾರದು. ಜನ ಎಚ್ಚೆತ್ತು
ಕೊಂಡರೆ ತಮ್ಮ ಬೇಳೆ ಬೇಯುವುದಿಲ್ಲ ಎಂಬುದು ಈ ನಾಯಕರಿಗೆ ಗೊತ್ತು ! ಆದ್ದ
ರಿಂದಲೇ ಅವರು ಆಡಳಿತದಲ್ಲಾಗಲಿ ಶಿಕ್ಷಣದಲ್ಲಾಗಲಿ ದೇಶ ಭಾಷಾ ಮಾಧ್ಯಮಕ್ಕೆ
ಪಟ್ಟ ಕಟ್ಟಲು ಹಿಂಜರಿಯುತ್ತಾರೆ; ಮಾತ್ರವಲ್ಲ, ಸಾರ್ವತ್ರಿಕ ಶಿಕ್ಷಣವೂ ಅವರಿಗೆ
ಇಷ್ಟವಿಲ್ಲ. ಜನ ಅಜ್ಞಾನದಲ್ಲಿ ಮುಳುಗಿರಬೇಕು. ಆಗ ಮಾತ್ರ ತಮಗೆ ಸುಖ
ಎಂಬುದು ರಾಜಕೀಯಸ್ಥರ ಒಳ ನಿಲುವು. ಇನ್ನು ಜನ ಹಿತದ ಬಗ್ಗೆ ಕಳಕಳಿಯುಳ್ಳ
ವರಿಗೂ ಸಮಸ್ಯೆಯ ಸಮರ್ಪಕ ತಿಳಿವಳಿಕೆಯಿರುವುದಿಲ್ಲ. ಮಾಧ್ಯಮದ ಮಹತ್ವದ
ಪ್ರಜ್ಞೆಯಿರುವುದಿಲ್ಲ, ಅಂಥ ಪ್ರಜ್ಞೆಯಿರುವ ಅಲ್ಪ ಸಂಖ್ಯಾತರ ಬಾಯಾಗಲಿ ಕೈ
ಯಾಗಲಿ ನಡೆಯುವುದಿಲ್ಲ. ಇದು ನಮ್ಮ ನಾಡಿನ ದುರಂತ ಪರಿಸ್ಥಿತಿ. ಈ ದುರಂತ
ವನ್ನು ತೀವ್ರಗೊಳಿಸುವ ಸಂಗತಿಯೆಂದರೆ, ಸಾಮಾನ್ಯರಲ್ಲಿ ಇಂಗ್ಲಿಷ್ ಮಾಧ್ಯಮದ
ಬಗ್ಗೆ ಇರುವ ಮೋಹ ಮತ್ತು ಪ್ರತಿಷ್ಠೆಯ ಭಾವನೆ. ಇದು ಗುಲಾಮಗಿರಿಯ ಅವ
ಶೇಷ. ಇದನ್ನು ತೊಲಗಿಸುವ ಪ್ರಯತ್ನಗಳು ಸರಿಯಾಗಿ ನಡೆಯುತ್ತಿಲ್ಲ. ಸರ್ಕಾರ
ಅವಶ್ಯವಾಗಿ ಮಾಡಬೇಕಾದ ಕಾರ್ಯವಿದು,

ಭಾಷಾ ಮಾಧ್ಯಮವನ್ನು ಕುರಿತು ಜನತೆಯಲ್ಲಿ ಎಷ್ಟೋ ತಪ್ಪು ಕಲ್ಪನೆಗಳಿವೆ.
ಇಂಗ್ಲಿಷ್ ಭಾಷೆ ಅಂತರ ರಾಷ್ಟ್ರೀಯವಾದುದು, ಶ್ರೀಮಂತವಾದುದು, ಅದರ ವಿನಾ
ಜ್ಞಾನ ವಿಜ್ಞಾನಗಳಿಗೆ ಗತ್ಯಂತರವಿಲ್ಲ ಎಂದೆಲ್ಲ ನಂಬಿರುವವರು ಬಹಳ ಜನ. ಇಂಗ್ಲಿಷ್
ಅಂತರ ರಾಷ್ಟ್ರೀಯ ಎಂಬುದು ಬರಿಯ ಮಿಥ್ಯೆ. ರಷ್ಯ, ಜಪಾನ್, ಫ್ರಾನ್ಸ್‌ನಂತಹ
ದೇಶಗಳಲ್ಲಿ ಇಂಗ್ಲಿಷಿನ ಸುಳಿವೂ ಇಲ್ಲವಂತೆ. ತಮ್ಮ ತಮ್ಮ ಭಾಷೆಗಳನ್ನೇ ಮಾಧ್ಯಮ
ಮಾಡಿಕೊಂಡಿರುವ ರಷ್ಯ, ಜಪಾನ್‌ಗಳು ಜ್ಞಾನ ವಿಜ್ಞಾನ ಕ್ಷೇತ್ರಗಳಲ್ಲಿ ಸಾಧಿಸಿರುವ
ಪ್ರಗತಿಯೇನು ಸಾಮಾನ್ಯವೇ ? ನಮ್ಮಲ್ಲೇಕೆ ಇಂಗ್ಲಿಷ್ ಅನಿವಾರ್ಯವೆಂಬ ಭ್ರಮೆ ?
ಇಂಗ್ಲೀಷ್ ನಮಗೆ ಖಂಡಿತ ಬೇಕು : ಒಂದು ಭಾಷೆಯಾಗಿ ಸಾಹಿತ್ಯವಾಗಿ ; ಆದರೆ
ಮಾಧ್ಯಮವಾಗಿ ಅಲ್ಲ. ಕಡ್ಡಾಯವಾಗಿಯಂತೂ ಅದು ಇರಲೇ ಕೂಡದು. ಆಸಕ್ತಿ,

ಶಕ್ತಿ ಮತ್ತು ಅಗತ್ಯ ಇದ್ದವರು ಇಂಗ್ಲೀಷನ್ನು ಕಲಿಯಲಿ ; ಅದಕ್ಕೆ ಯಾವ ಅಡ್ಡಿಯೂ ಇರಕೂಡದು. ಆದರೆ ಎಲ್ಲರ ಮೇಲೂ ವಿವೇಚನಾರಹಿತವಾಗಿ, ಬಲತ್ಕಾರದಿಂದ ಇಂಗ್ಲಿಷನ್ನು ಹೇರಿ, ಅವರ ವಿನಾ ಮೋಕ್ಷವಿಲ್ಲವೆಂದು ಪ್ರಸಾರ ಮಾಡುವುದು ಅಕ್ಷಮ್ಯವಾದ ಅಪರಾಧವಾಗುತ್ತದೆ. ಸಾಮಾನ್ಯರ ಮೇಲೆ ಇಂಗ್ಲಿಷಿನ ಭಾರ ಹೇಗೆಂದರೆ, "ಕೂಸಿನ ತಲೆಯ ಮೇಲೆ ಬಿಜ್ಜೋಜಿಯನಿಟ್ಟವೋಲಸುಖಕರಂ !" (ನಿಜವಾಗಿಯೂ ಕೂಸುಗಳ ಮೇಲೆ ಶಿಶುವಿಹಾರ, ಪ್ರಾಥಮಿಕ ಶಾಲೆಗಳ ಹಂತದಲ್ಲೇ ಇಂಗ್ಲಿಷನ್ನು ಹೊರಿಸುವ ಕ್ರೌರ್ಯ ಬೇರೆ ಈಗ ಕಂಡು ಬರುತ್ತಿದೆ.)

ಇಂಗ್ಲಿಷ್ ಮಾಧ್ಯಮದ ಪರ ವಾದಿಸುವವರು ಪಾರಿಭಾಷಿಕ ಶಬ್ದಗಳ ತೊಡಕನ್ನೊಂದು ಘೋರ ಮಾಡಿ ತೋರಿಸುತ್ತಾರೆ. ವಾಸ್ತವವಾಗಿ ಇದು ಸಮಸ್ಯೆಯೇ ಅಲ್ಲ. ದೇಶ ಭಾಷೆಗಳಲ್ಲಿ ಪಾರಿಭಾಷಿಕ ಪದಕಗಳನ್ನು ಟಂಕಿಸಿಕೊಳ್ಳಬಹುದು. ಅನಿವಾರ್ಯವಾದ ಕಡೆ ಇಂಗ್ಲೀಷ್ ಪದಗಳನ್ನು ಬಳಸಿ ಕೊಳ್ಳಲು ಯಾವ ಅಭ್ಯಂತರವೂ ಇಲ್ಲ. (ಹಾಗೆ ನೋಡಿದರೆ ಇಂಗ್ಲೀಷ್ ಎನಿಸಿಕೊಳ್ಳುವ ಬಹುಪಾಲು ಪದಗಳು ಮೂಲತಃ ಇಂಗ್ಲಿಷ್ ಅಲ್ಲ). ನಾಮಪದ ಯಾವ ಭಾಷೆಯದಾದರೂ ಆಗಿರಲಿ, ಕ್ರಿಯಾಪದ ನಮ್ಮ ಭಾಷೆಯದಾಗಿರಬೇಕು. ಅಷ್ಟೆ. (ಇಲ್ಲವಾದರೆ ಪರಿಣಾಮ ನಿಷ್ಕ್ರಿಯತೆ !) ಮಾಧ್ಯಮದ ಪ್ರಶ್ನೆ ಬಹುತೇಕ ಕ್ರಿಯಾಪದಗಳಿಗೆ ಸಂಬಂಧಿಸಿದ್ದು ಎಂಬುದನ್ನು ಮನಗಾಣಬೇಕು ! ನಮ್ಮ ಭಾಷೆ ಇನ್ನೂ ಬೆಳೆದಿಲ್ಲ, ಮಾಧ್ಯಮವಾಗುವ ತಾಕತ್ತು ಅದಕಿನ್ನೂ ಸಿದ್ಧಿಸಿಲ್ಲ ಎಂಬುದು ಕೆಲವರು ಒಡ್ಡುವ ನೆಪ. ಇದು ಕೂಡ ಹುರುಳಿಲ್ಲದ್ದು. ಭಾಷೆಯನ್ನು ಬಳಸುತ್ತ ಹೋದಂತೆ ಅದು ಬೆಳೆಯುತ್ತದೆ, ಪಳಗುತ್ತದೆ. ನೀರಿಗಿಳಿದ ಹೊರತು ಈಜು ಬರುವುದು ಸಾಧ್ಯವಿಲ್ಲ ಎಂಬ 'ಕಾಮನ್ ಸೆನ್ಸ್' ಕೂಡ ಇರದಿದ್ದರೆ ಹೇಗೆ ?

ಜ್ಞಾನಾರ್ಜನೆಗೆ ಸ್ವಭಾಷಾ ಮಾಧ್ಯಮವೆ ಅತ್ಯುಚಿತವೂ ಅನುಕೂಲವು ಆದುದು ; ಪರಭಾಷೆಯಿಂದ ಹೆಚ್ಚು ಪ್ರಯೋಜನವಿಲ್ಲ, ಅದು ತ್ರಾಸಕರ. ಇಂಗ್ಲಿಷ್ ಮಾಧ್ಯಮವಂತೂ ಬಹಳ ದುಬಾರಿಯಾದ್ದು. ಮಾಧ್ಯಮವನ್ನು ವಶಪಡಿಸಿಕೊಳ್ಳುವುದಕ್ಕೇ ವಿದ್ಯಾರ್ಥಿಯ ಕಾಲವೆಲ್ಲ ವಿನಿಯೋಗವಾಗುತ್ತದೆ. ಅವನು ವಿಷಯವನ್ನು ಗ್ರಹಿಸುವುದು ಯಾವಾಗ ? ಸಿಪ್ಪೆ ಸುಲಿಯುವುದರಲ್ಲೆ ಹೊತ್ತೆಲ್ಲ ಹೋದರೆ, ತಿರುಳನ್ನು ಪಡೆದು ತಿನ್ನುವುದು ಯಾವಾಗ? "ಬಿರಣೆಯ ನೀಯುಲಲ್ಲದೆ ಅಟ್ಟುಣ್ಣತೆರಪಿಲ್ಲವೆನಗೆ!" ಎಂಬ ಬಸವವಾಣಿ ನೆನಪಾಗುತ್ತದೆ. ಮಾತೃಭಾಷೆಯ ಮೂಲಕ ವಿಷಯ ಗ್ರಹಣ ಸುಲಭವಾಗುತ್ತದೆ ಎಂಬುದರ ಬಗ್ಗೆ ಭಿನ್ನಾಭಿಪ್ರಾಯ ಹೇಗೆ ಸಾಧ್ಯ ? ಇಂಗ್ಲಿಷಿನ ಮೂಲಕ ಅಲ್ಪಸ್ವಲ್ಪ ವಿಷಯ ಗ್ರಹಿಕೆಯಾಗಲೂಬಹುದು ; ಆದರೆ ಆಲೋಚನೆ, ಅಭಿವ್ಯಕ್ತಿಗಳು ಇಂಗ್ಲಿಷಿನಲ್ಲಿ ಖಂಡಿತ ಶಕ್ಯವಿಲ್ಲ. ನಮ್ಮದಲ್ಲದ ಭಾಷೆಯೊಂದರಲ್ಲಿ ಸೃಜನಾತ್ಮಕ ಚಟುವಟಿಕೆ ಕೂಡ ಸುಕರವಲ್ಲ. ತೋರುದತ್, ಟಾಗೂರ್, ಸರೋಜಿನಿ ನಾಯ್ಡು ಮುಂತಾದವರು ಇಂಗ್ಲಿಷಿನಲ್ಲಿ ಬರದಿದ್ದಾರಷ್ಟೆ. ಆದರೆ ಅವರ ಕೃತಿಗಳು

ಇಂಗ್ಲಿಷ್ ಸಾಹಿತ್ಯ ಚರಿತ್ರೆಯಲ್ಲಿ ಯಾವಾಗಲೂ ದ್ವಿತೀಯ ದರ್ಜೆಯವೆಂದೇ ಪರಿಗಣಿತವಾಗುತ್ತವೆ. ಭಾರತೀಯ ಲೇಖಕರ ಇಂಗ್ಲಿಷ್ ಬರವಣಿಗೆಯನ್ನು ಕುರಿತು ಕೆ. ಎಂ ಪಣಿಕ್ಕರ ಆಡಿರುವ ಈ ಮಾತುಗಳನ್ನು ಲೆಕ್ಕಿಸಬಹುದು : "Indain intellectual effort has so far been judged by the work of Indian writers in English. Insignificant in number and not too original, and with but little distinctive quality, the poets. essayists and literateurs of Indo-Anglian literature, as it is called, cannot claim to represent either the modern Indian mind or to be considered the examples of India's creative capacity".*

ಆದ್ದರಿಂದ, ದೇಶಭಾಷಾ ಮಾಧ್ಯಮದ ಪ್ರಶ್ನೆ ಬರಿಯ ಅಭಿಮಾನದ ಪ್ರಶ್ನೆಯಲ್ಲ; ಅದು ಸೌಲಭ್ಯದ, ಶ್ರೇಯದ ಪ್ರಶ್ನೆ. ಇಲ್ಲಿ ಮುಖ್ಯವಾದುದು ಮಾತೃಭಾಷೆಯ ಆರಾಧನೆಯಷ್ಟೆ ಅಲ್ಲ : ತನ್ಮೂಲಕ ವ್ಯಕ್ತಿಯ ಮತ್ತು ಸಮಾಜದ ಕಲ್ಯಾಣ ಸಾಧನೆ. ಹೀಗಾಗಿ, ಇಂಗ್ಲಿಷ್ ಮಾಧ್ಯಮದ ವಕೀಲರ ವಾದಗಳೆಲ್ಲ ಬಹುಮಟ್ಟಿಗೆ ಕುಂಟು ಅಥವಾ ಕುರುಡು ಎಂಬುದು ತಾರ್ಕಿಕ ದೃಷ್ಟಿಗೆ ಸುಲಭಗೋಚರವಾಗುತ್ತದೆ.

ಇಂಗ್ಲಿಷ್ ಮಾಧ್ಯಮದ ಅಸಂಗತತೆ, ಅನಾಹುತಗಳನ್ನು ಕುರಿತು ಎಷ್ಟೋ ಮಂದಿ ಹಿರಿಯರು ವಿಷಾದಿಸಿದ್ದಾರೆ, ಎಚ್ಚರಿಸಿದ್ದಾರೆ. ಆದರೂ ಅದರಿಂದ ನಾಡಿನಲ್ಲಿ ವಿವೇಕ ಮೂಡಿಲ್ಲ. "ವಿನಾಶಕಾರಿಯಾದ ಪರಕೀಯ ಮಾಧ್ಯಮವೊಂದನ್ನು ದೇಶದ ತರುಣಜನಾಂಗದ ಮೇಲೆ ಹೊರಿಸಿದ್ದು ಪರಾಡಳಿತದ ಮಹಾ ಅನರ್ಥಗಳಲ್ಲಿ ಒಂದು" ಎಂದೂ "ಇಂದಿನ ಶಿಕ್ಷಣಪದ್ಧತಿ ಪಾಪದಲ್ಲಿ ಪೋಷಿತವಾಗಿದೆ" ಎಂದೂ "ನಮ್ಮ ಮಕ್ಕಳನ್ನು ಅದು ನಮ್ಮ ನೆಲದಲ್ಲೇ ಅಪರಿಚಿತರನ್ನಾಗಿ ಮಾಡಿದೆ. ನಾವು ಮತ್ತು ನಮ್ಮ ಮಕ್ಕಳು ನಮ್ಮ ಸ್ವಂತ ಪರಂಪರೆಯ ಮೇಲೆಯೆ ಮನೆ ಕಟ್ಟಬೇಕು" ಎಂದೂ ಗಾಂಧೀಜಿ ಉದ್ಗರಿಸಿದ್ದಾರೆ. "ನಲವತ್ತು ಕೋಟಿ ಭಾರತೀಯರಲ್ಲಿ ಕೇವಲ ನಲವತ್ತು* ಲಕ್ಷ ಜನರಿಗೆ ಇಂಗ್ಲಿಷಿನ ಸಂಪರ್ಕವಿದೆ. ಇವರ ಮೇಲೆ ಸರ್ಕಾರದ ಕಣ್ಣು" ಎಂದೂ "ವಿಜ್ಞಾನರಂಗದಲ್ಲಿ ಮುಖ್ಯವಾದುದು ಭಾಷೆಯಲ್ಲ, ಅಂಕಿ ಅಂಶಗಳು" ಎಂದೂ ಲೋಹಿಯಾ ಹೇಳಿದ್ದಾರೆ. ಇದು ಡಾ. ರಾಧಾಕೃಷ್ಣನ್ ಅವರ ಉಕ್ತಿ : "ಜ್ಞಾನವು ಆಸಕ್ತಿ ಶಕ್ತಿಗಳ ಸತತ ಚಿಲುಮೆ. ಆದರೆ ಅದರ ದಾರಿ ಸಂಕುಚಿತ, ಕಷ್ಟಕರ-ನಮ್ಮದಲ್ಲದ ಬೇರೊಂದು ಭಾಷೆ ನೀಡುವ ಅಪರಿಚಿತವೂ ಅಸ್ಪಷ್ಟವೂ ಆದ ಬೆಳಕಿನಲ್ಲಿ ಆ ದಾರಿ

---

* 'The Foundation of New India'. p. 124.

ಯನ್ನು ಕ್ರಮಿಸುವುದು ಸುಲಭವಲ್ಲ". ಬಂಕಿಮ ಚಂದ್ರರ ಕುಟುಕು ನುಡಿಯಿದು "ನಾವು ಎಷ್ಟೇ ಇಂಗ್ಲಿಷು ಓದಲಿ, ಆಡಲಿ, ಅದು ಸಿಂಪದ ಚರ್ಮವನ್ನು ಹೊದ್ದಂತೆಯೇ ಸರಿ"

ಈಗ, ಕನ್ನಡ ಮಾಧ್ಯಮದ ಬಗ್ಗೆ ಎರಡು ಮಾತು. ಕನ್ನಡ ಮಾಧ್ಯಮದ ಪರವಾಗಿ ಬರೆಯುವವರು, ಕೂಗು ಹಾಕುವವರು, ಚಳುವಳಿ ಮಾಡುವವರು ಹಲವರು. ಆದರೆ ನಿಜವಾಗಿಯೂ ಕನ್ನಡದ, ಕನ್ನಡಿಗರ ಏಳ್ಗೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಈ ಕೆಲಸ ಮಾಡುತ್ತಿರುವವರ ಸಂಖ್ಯೆ ಅತ್ಯಲ್ಪ : ನಾನಾ ಬಗೆಯ ರಾಜಕೀಯಕ್ಕಾಗಿ ಕನ್ನಡದ ಹೆಸರನ್ನು ಬಳಸಿಕೊಳ್ಳುತ್ತಿರುವವರ ಸಂಖ್ಯೆಯೇ ಅತ್ಯಧಿಕ. (ಇವರ ಸ್ವಾರ್ಥ, ಸ್ವಪ್ರಸಾರಗಳಿಗಂತೂ ಕನ್ನಡವೇ ಮಾಧ್ಯಮ !) ಇಂಥವರಿಂದ ಕನ್ನಡಕ್ಕೆ ಹೆಚ್ಚು ಉಪಯೋಗವಿಲ್ಲ ; ಹಾನಿಯೇ ಇದ್ದೀತು. ಕನ್ನಡದ ಬಗ್ಗೆ ದಿಟವಾದ ಆಸ್ಥೆಯಿರುವವರು, ಚಳುವಳಿ ಮಾಡುತ್ತೇವೆ ಎನ್ನುವವರು ಅವರಿವರನ್ನು ಟೀಕಿಸುವುದನ್ನು ಬಿಟ್ಟು ನೇರವಾಗಿ ವಿಧಾನ ಸೌಧಕ್ಕೆ ಹೋಗಿ, ಅಲ್ಲಿ ಚಳುವಳಿ ಹೂಡಬೇಕು. ಏಕೆಂದರೆ, ಕನ್ನಡ ಮಾಧ್ಯಮದ ಬಗ್ಗೆ ಸರ್ಕಾರ ಆಸಕ್ತಿ ವಹಿಸಿ ಕ್ರಮ ಕೈಗೊಳ್ಳದಿದ್ದರೆ. ಏನೂ ಆಗುವುದಿಲ್ಲ. ಪ್ರಾಥಮಿಕ ಶಾಲೆಗಳಲ್ಲಿ, ಕಾನ್ವೆಂಟುಗಳಲ್ಲಿ ಇಂಗ್ಲಿಷ್ ಮಾಧ್ಯಮವನ್ನು ಸರ್ಕಾರ ಏತಕ್ಕೆ ನಿಷೇಧಿಸಬಾರದು ? ನಿಷೇಧಿಸುವಂತೆ ಚಳುವಳಿಗಾರರು, ಕನ್ನಡದ ಗುತ್ತಿಗೆ ಹಿಡಿದಿರುವವರು ಏತಕ್ಕೆ ಸರ್ಕಾರದ ಮೇಲೆ ಒತ್ತಡ ತರಬಾರದು ? 'ಸರಕಾರವೆ ಅರೆ ಮನಸ್ಸಿನಿಂದ ವರ್ತಿಸುವಾಗ, ಜನತೆಯನ್ನು ದೂಷಿಸಿ ಏನು ಪ್ರಯೋಜನ ? ಕನ್ನಡದ ಮೇಲೆ ಅಭಿಮಾನ ಎಲ್ಲರಿಗೂ ಇರುತ್ತದೆ. ಆದರೆ ಅವರು ವ್ಯಾವಹಾರಿಕವಾಗಿಯೂ ಯೋಚಿಸುತ್ತಾರೆ. ಸರ್ಕಾರ ಎಲ್ಲ ಹಂತಗಳಲ್ಲೂ ಕನ್ನಡವನ್ನು ಜಾರಿಗೆ ತರದಿದ್ದರೆ, ನಾಳೆ ನಮ್ಮ ಮಕ್ಕಳ ಭವಿಷ್ಯವೇನು, ಅವರು ಕನ್ನಡ ಮಾಧ್ಯಮದಲ್ಲಿ ಕಲಿತರೆ ತೊಂದರೆಯಾಗುವುದಿಲ್ಲವೆ, ಎಲ್ಲ ಸ್ಥಾನಮಾನಗಳೂ ಇಂಗ್ಲಿಷ್ ಪರಿಣತರಾದವರ ಪಾಲಾಗುವುದಿಲ್ಲವೆ ಎಂಬ ಅವರ ಮಿಡುಕು ಸಹಜವಾದುದು; ತಮ್ಮ ಮಕ್ಕಳೂ ಇಂಗ್ಲಿಷ್ ಮಾಧ್ಯಮದಲ್ಲಿ ಕಲಿಯಲಿ ಎಂದು ಅವರು ಬಯಸುವುದೂ ಸ್ವಾಭಾವಿಕ. ಆದ್ದರಿಂದ, ಕನ್ನಡ ಮಾಧ್ಯಮದಲ್ಲಿ ಜ್ಞಾನ ಸಂಪಾದನೆ ಸುಲಭ ಎಂದು ಹೇಳಿದರೆ ಸಾಲದು. ಕನ್ನಡ ಮಾಧ್ಯಮವನ್ನು ಆಶ್ರಯಿಸಿದರೆ ವ್ಯಾವಹಾರಿಕವಾಗಿಯೂ ಲಾಭವಿದೆ ಎಂಬುದನ್ನು ಮನವರಿಕೆ ಮಾಡಿಕೊಡಬೇಕು. ಈ ಭರವಸೆ ಬರಬೇಕಾದ್ದು ಕನ್ನಡ ಚಳುವಳಿಗಾರರಿಂದಲ್ಲ, ಸರ್ಕಾರದಿಂದ. ಅದು ಭಾಷಾಧೋರಣೆಯನ್ನು ಸರಿಯಾಗಿ ರೂಪಿಸಿಕೊಂಡು ಕಾರ್ಯಗತ ಮಾಡಿ, ಜನತೆಯನ್ನು ನಂಬಿಸಬೇಕು. ಇಂಗ್ಲಿಷ್ ಕಲಿಯುವುದರಿಂದ ಅಥವಾ ಇಂಗ್ಲಿಷ್ ಮೂಲಕ ಕಲಿಯುವುದರಿಂದ ಏನೂ ಫಲವಿಲ್ಲ ಎಂಬುದು ಸೈದ್ಧಾಂತಿಕವಾಗಿ ಮಾತ್ರವಲ್ಲ, ವಸ್ತುತಃ ರುಜುವಾತಾಗುವಂಥ ಕಾಲ ಬರಬೇಕು. ಈ ಹೊಣೆ ಬಹುಮಟ್ಟಿಗೆ ಸರ್ಕಾರದ ಮೇಲಿದೆ.

ಪ್ರಜಾ ಪ್ರಭುತ್ವದಲ್ಲಿ ಪ್ರಜೆಯೇ ಪ್ರಭು ಎನ್ನುತ್ತೇವೆ. ಆದರೆ ಭಾರತದ ಈ ಪ್ರಭುವಿಗೆ ಐದು ವರ್ಷಕ್ಕೊಮ್ಮೆ ಓಟು ಕೊಡುವ ಅಧಿಕಾರದ ವಿನಾ ಮತ್ತಾವ ಅಧಿಕಾರವಿದೆ ? ಏನೂ ಇಲ್ಲ. ವೈಚಾರಿಕ ಜಾಗ್ರತಿ ಅವನಲ್ಲಿಲ್ಲದಿರುವುದೇ ಇದಕ್ಕೆ ಕಾರಣ ; ಈ ಅಭಾವವೇ ಸರ್ವಸಮಸ್ಯೆಗಳ ಮೂಲ. ವೈಚಾರಿಕ ಜಾಗ್ರತಿ ಎಲ್ಲೆಡೆ ಉಂಟಾಗಬೇಕಾದರೆ ಸರ್ಕಾರ ಸಾರ್ವತ್ರಿಕ ಶಿಕ್ಷಣವನ್ನು ಕಟ್ಟುನಿಟ್ಟಾಗಿ ಜಾರಿಗೆ ತರಬೇಕು ಮತ್ತು ಆಡಳಿತ, ಶಿಕ್ಷಣ ರಂಗಗಳಲ್ಲಿ ಮಾತೃ ಭಾಷೆಯನ್ನು ಮಾಧ್ಯಮವನ್ನಾಗಿ ಪ್ರತಿಷ್ಠಾಪಿಸಬೇಕು. ಈ ಪ್ರತಿಷ್ಠಾಪನೆಯಾಗುವ ತನಕ ಸ್ವಾತಂತ್ರ್ಯ, ಪ್ರಜಾಪ್ರಭುತ್ವ ಎಂಬ ಮಾತುಗಳಿಗೆ ಬೆಲೆಯಿಲ್ಲ. ದೇಶ ಭಾಷಾ ಮಾಧ್ಯಮ ಸರ್ವಾಂತರ್ಯಾಮಿ ಆಗುವ ತನಕ ನಮ್ಮ ಸಮಾಜದ ಪ್ರಗತಿಯ ಬಗ್ಗೆ ನಾವು ಆಶಾವಾದಿಗಳಾಗಿರುವುದು ಕಷ್ಟವೇ.

# ಗಾಂಧೀಜಿ ಮತ್ತು ವಿದ್ಯಾರ್ಥಿಗಳು

ಉ. ಕಾ. ಸುಬ್ಬರಾಯಾಚಾರ್

ಗಾಂಧೀಜಿ ಜನ್ಮತಾಳಿದ್ದು ಅಕ್ಟೋಬರ್ 2, 1869ರಂದು. ನುಡಿದಂತೆ ನಡೆಯಲು ಯತ್ನಿಸಿದ ಸತ್ಯ ಸಂಶೋಧಕರವರು. ಅವರ ಬದುಕು ಮಾನವ ಕಲ್ಯಾಣಕ್ಕಾಗಿ ಸಮರ್ಪಿತವಾಯಿತು. ಆದರ್ಶವನ್ನು ಕಾರ್ಯರೂಪಕ್ಕೆ ತರಲು ಯತ್ನಿಸಿದ ಅವರು ಭಾರತಕ್ಕೆ ಸ್ವಾತಂತ್ರ್ಯವನ್ನು ತಂದುಕೊಟ್ಟ ಮಹಾಶಿಲ್ಪಿ. ಅವರು ತಮ್ಮ ಭೌತಿಕ ಶರೀರವನ್ನು ತ್ಯಜಿಸಿದ್ದು 1948 ಜನವರಿ 30ರಂದು.

ಭಾರತದ ಶಿಕ್ಷಣ ಪದ್ಧತಿ ಇಂಗ್ಲೆಂಡಿನಿಂದ ಬಂದದ್ದು. ಅದರ ಮೂಲಾಂಶಗಳು ವಿದೇಶಿ. ಅದು ರಾಷ್ಟ್ರೀಯ ಶಿಕ್ಷಣವಾಗಲಿಲ್ಲ. ಶಿಕ್ಷಣಕ್ಕೂ ಜೀವನಕ್ಕೂ ಸಂಬಂಧವಿಲ್ಲದ ಗಂಡಾಂತರ ಉಂಟಾಯಿತು. ಅದರ ಫಲವಾಗಿ ನಿರುದ್ಯೋಗದ ಪೆಡಂಭೂತದ ಆವಿರ್ಭಾವವಾಗಿ, ಜನತೆಯ ಧೈರ್ಯವೇ ಕುಗ್ಗುವಂತಾಯಿತು. ಈ ವಿಚಾರವನ್ನು ಚೆನ್ನಾಗಿ ಅರ್ಥಮಾಡಿಕೊಂಡ ಗಾಂಧೀಜಿ, ವೃತ್ತಿಶಿಕ್ಷಣ ನೀಡಲು ಕರನೀಡಿದರು.

ವಿದ್ಯೆ, ಉತ್ತಮ ಗುಣಗಳನ್ನು ಅರಳಿಸಬೇಕು. ಶಿಕ್ಷಣದ ಗುರಿ ಚಾರಿತ್ರ್ಯ ನಿರ್ಮಾಣ. ವಿದ್ಯಾರ್ಥಿಗಳು ಸ್ವಾವಲಂಬಿಗಳೂ ಸ್ವಸಂಪೂರ್ಣರೂ ಆಗಬೇಕಾದರೆ, ಅವರಿಗೆ ಉತ್ತಮ ಔದ್ಯೋಗಿಕ ಶಿಕ್ಷಣ ಅವಶ್ಯಕ. ಬುದ್ಧಿ, ದೇಹ, ಮನಸ್ಸು– ಈ ಮೂರಕ್ಕೂ ಶಿಕ್ಷಣ ದೊರಕಬೇಕು. ದುಡಿಮೆಯಿಂದಲೇ ರಾಷ್ಟ್ರ ನಿರ್ಮಾಣ. ದುಡಿತವನ್ನು ಕೀಳೆಂದು ತಿಳಿದರೆ, ದೇಶದ ಅಧೋಗತಿಯಾಗುತ್ತದೆ. ವಿದ್ಯಾರ್ಜನೆಯ ಸಮಯದಲ್ಲಿ ಗರ್ವ, ಅಹಂಕಾರ, ಜಾತಿಮತಗಳ ವೈಷಮ್ಯಕ್ಕೆ ಅವಕಾಶವಿರಬಾರದು. ವಿದ್ಯಾರ್ಥಿಗಳು ತಮ್ಮ ಅವಶ್ಯಕತೆಗಳನ್ನು ಅನಾವಶ್ಯಕವಾಗಿ ಹೆಚ್ಚು ಮಾಡಿಕೊಳ್ಳಬಾರದು, ವಿದ್ಯಾರ್ಥಿಯ ಜೀವನ ಸಫಲವಾಗುವುದು ಕ್ರಮಬದ್ಧ ಜೀವನದಿಂದ. ಶೀಲವಿಲ್ಲದ ವಿದ್ಯೆ ಪರಿಮಳವಿಲ್ಲದ ಹೂವಿನಂತೆ ನಿಸ್ಸಾರ. ಶೀಲವೆಂಬುದು ಸಾಧನೆಯಿಂದ ಮೂಡುವ ಮನಃಪರಿಪಾಕ. ಶೀಲದಿಂದ ವ್ಯಕ್ತಿಗೂ ದೇಶಕ್ಕೂ ಹಿತ.

ವಿದ್ಯಾರ್ಥಿ ಜೀವನದಲ್ಲಿ ಸರಳತೆ ಮತ್ತು ಉದಾತ್ತ ಚಿಂತನೆಗಳಿರಬೇಕು. ಮಾನವರಲ್ಲಿ ಸುಪ್ತವಾಗಿರುವ ದೈವೀ ಶಕ್ತಿಯ ಸಾಕ್ಷಾತ್ಕಾರಕ್ಕೆ ಅಧ್ಯಾಪಕರು ಸೂಕ್ತ ಮಾರ್ಗದರ್ಶನ ಮಾಡಬೇಕು. ದೋಷಗಳನ್ನು ದೂರಮಾಡುತ್ತ ಪರಿಶುದ್ಧ ಜೀವನ ನಡೆಸುವುದೇ ವಿದ್ಯಾರ್ಥಿಗಳ ಆದರ್ಶ. ಅವರು ಪ್ರಜ್ಞಾವಂತರಾಗಲು ಸತ್ಯ, ಅಹಿಂಸೆ, ಬ್ರಹ್ಮಚರ್ಯ, ಅಸ್ವಾದ, ಅಸ್ತೇಯ, ಅಪರಿಗ್ರಹ, ಶಾರೀರಶ್ರಮ, ಸ್ವದೇಶಿ, ಅಭಯ, ನಮ್ರತೆ, ಪ್ರಾರ್ಥನೆ- ಇವುಗಳನ್ನು ಜೀವನದಲ್ಲಿ ಕಾರ್ಯರೂಪಕ್ಕೆ ತರಬೇಕು.

ಗಾಂಧೀಜಿಯವರಿಗೆ ಸತ್ಯವೇ ದೇವರು. ಸತ್ಯವೆಂದರೆ ಪರಮಾತ್ಮ. ವೈಚಾರಿಕ ದೃಷ್ಟಿಯನ್ನು ಬೆಳೆಸಿಕೊಂಡು, ಸತ್ಯವನ್ನು ವಿವೇಕದಿಂದ ಆಚರಿಸುವುದೇ ಸತ್ಕರ್ಮ ಸದಾಚಾರ. ಸತ್ಯವಿಚಾರ, ಸತ್ಯವಾಣಿ, ಸತ್ಕರ್ಮ—ಇವು ಮೂರೂ ಜೀವನದಲ್ಲಿ ಆವಶ್ಯಕ, ಎಲ್ಲಿ ದ್ವೇಷದ ಗಂಧವಿಲ್ಲವೋ ಅದೇ ಅಹಿಂಸೆ. ಅಹಿಂಸೆ. ಅಹಿಂಸೆಯ ಮುಂದೆ ವೈರವೂ ಕಾಪಟ್ಯವೂ ತಲೆ ಎತ್ತುವುದಿಲ್ಲ. ಸತ್ಯ ಅಹಿಂಸೆಗಳನ್ನು ಕಾರ್ಯರೂಪಕ್ಕೆ ತರಲು ಬ್ರಹ್ಮಚರ್ಯ ಸಾಧನ. ಆತ್ಮಸಾಕ್ಷಾತ್ಕಾರ ಮಾಡಿಕೊಳ್ಳಲು, ಇಂದ್ರಿಯಗಳನ್ನು ಮನಸ್ಸನ್ನು ಸಂಯಮಗೊಳಿಸುವುದೇ ಬ್ರಹ್ಮಚರ್ಯ. ಬ್ರಹ್ಮಚರ್ಯವೆಂದರೆ ಸರ್ವೇಂದ್ರಿಯಗಳ ಸಂಯಮ. ನಾಲಗೆಯ ಮೇಲಣ ಹಿಡಿತವೇ ಅಸ್ವಾದ. ಅನ್ಯರ ವಸ್ತುಗಳನ್ನು ಅಪೇಕ್ಷಿಸದಿರುವುದೇ ಅಸ್ತೇಯ. ನಮಗೆ ಆವಶ್ಯಕವಲ್ಲದ ವಸ್ತುಗಳನ್ನು ಅಪೇಕ್ಷಿಸದಿರುವುದೇ ಅಪರಿಗ್ರಹ, ಜಗತ್ತಿನ ಕ್ಷೇಮಕ್ಕೆ ದುಡಿಮೆ ಆವಶ್ಯಕ. ರಾಷ್ಟ್ರದ ಸಂಪತ್ತು ವರ್ಧಿಸುವುದು ಶಾರೀರಿಕ ಶ್ರಮದಿಂದ. ಧೈರ್ಯವೇ ಅಭಯ, ತನ್ನ ಸುತ್ತ ನಡೆಯುತ್ತಿರುವ ಅನ್ಯಾಯ, ಅಸತ್ಯ, ಅಧರ್ಮಗಳನ್ನು ಉದಾಸೀನವಾಗಿ ನೋಡದೆ, ಅವುಗಳನ್ನು ಖಂಡಿಸುವ ಧೈರ್ಯವಿರಬೇಕು. ದೈವೀ ಸಂಪತ್ತನ್ನು ಆರ್ಜಿಸಬೇಕಾದರೆ ನಿಷ್ಕಪಟ ಧೈರ್ಯ ಆವಶ್ಯಕ. ಅಹಂಕಾರ ದೂರವಾದಂತೆ ಜೀವನದಲ್ಲಿ ನಮ್ರತೆ ಅರಳುತ್ತದೆ. ಪ್ರಾರ್ಥನೆ ಎಂಬುದು, ವ್ಯಕ್ತಿಯನ್ನು ಪರಾತ್ಪರ ಶಕ್ತಿಯೊಡನೆ ಮಿಲನಗೊಳಿಸುವ ಸಾಧನೆ. ಪ್ರಾರ್ಥನೆಯಿಂದ ಮನಸ್ಸು ನಿರ್ಮಲವಾಗುತ್ತದೆ, ಶಾಂತಿಯ ಅವತರಣವಾಗುತ್ತದೆ, ದೃಷ್ಟಿ ಋಜುವಾಗುತ್ತದೆ,

ಗಾಂಧೀಜಿಯವರು ಬ್ರಹ್ಮಚರ್ಯ ಪರಿಪಾಲನೆಗೆ ಕೆಲವು ಸಲಹೆಗಳನ್ನ ನೀಡಿದ್ದಾರೆ :

(1) ಆಡಂಬರವಿಲ್ಲದ ಸರಳ ರೀತಿಯಲ್ಲಿ ಬದುಕುವುದನ್ನು ವಿದ್ಯಾರ್ಥಿಗಳು ಕಲಿಯಬೇಕು,

(2) ಮಸಾಲೆಯಿಂದ ಕೂಡಿದ ಆಹಾರಗಳನ್ನು ವರ್ಜಿಸಬೇಕು,

(3) ಸರಳ ಹಾಗೂ ಖಾರವಿಲ್ಲದ ಆಹಾರಗಳನ್ನು ಸೇವಿಸಬೇಕು.

(4) ಶರೀರ ಮತ್ತು ಮನಸ್ಸನ್ನು ಸತ್ಕರ್ಮದಲ್ಲಿ ತೊಡಗಿಸಬೇಕು.

(5) ಮನೋವಿಕಾರಕ್ಕೆ ಕಾರಣವಾಗುವ ಯಾವ ಕಾರ್ಯದಲ್ಲಿಯೂ ತೊಡಗಬಾರದು.

(6) ಪ್ರತಿದಿನ ಪ್ರಾತಃಕಾಲ ಪ್ರಾರ್ಥನೆ ಮಾಡುವ ಅಭ್ಯಾಸ ಮಾಡಬೇಕು.

ವಿದ್ಯಾರ್ಥಿಗಳಿಗೆ ವರ್ಣಾಶ್ರಮದ ವಿಚಾರವಾಗಿ ಖಚಿತವಾದ ಅಭಿಪ್ರಾಯವಿರಬೇಕು. ವರ್ಣವ್ಯವಸ್ಥೆ ಹುಟ್ಟಿನಿಂದಲ್ಲ. ಅದು ಗುಣಕರ್ಮಗಳಿಗೆ ಸೀಮಿತವಾದುದು. ಒಂದು ವರ್ಣ ಉತ್ತಮ, ಮತ್ತೊಂದು ವರ್ಣ ನೀಚ ಎಂದು ತಿಳಿದಾಗಲೆ ಅಧಃಪತನ. ಭಾರತೀಯ ಸಮಾಜದ ಅವನತಿಗೆ ವರ್ಣವ್ಯವಸ್ಥೆಯ ತಪ್ಪು ಕಲ್ಪನೆಯೇ ಕಾರಣ.

ಗಾಂಧೀಜಿ ಶಿಕ್ಷಕರನ್ನೂ ವಿದ್ಯಾರ್ಥಿಗಳನ್ನೂ ವಿದ್ಯಾರ್ಥಿನಿಲಯಗಳನ್ನೂ ಕುರಿತು ಹೇಳಿದ ನುಡಿಗಳನ್ನು ಎಲ್ಲರೂ ಎಲ್ಲ ಕಾಲದಲ್ಲಿಯೂ ಮನನ ಮಾಡುವುದಲ್ಲದೆ ಅವುಗಳನ್ನು ಕಾರ್ಯರೂಪಕ್ಕೆ ತರಲು ಯತ್ನಿಸಬೇಕು.

**ಶಿಕ್ಷಕರನ್ನು ಕುರಿತು :**

(1) ತಾವು ಕಲಿಸುವ ವಿಷಯಗಳಲ್ಲಿ ಶಿಕ್ಷಕರಿಗೆ ಪ್ರಭುತ್ವವಿರಬೇಕು. ಅವರು ಶೀಲವಂತರಾಗಿರಬೇಕು,

(2) ವಿಷಯಗಳನ್ನು ಬೋಧಿಸುವುದರ ಜೊತೆಗೆ ವಿದ್ಯಾರ್ಥಿಗಳ ಶೀಲವನ್ನು ರೂಪಿಸಲು ಶಿಕ್ಷಕರು ಬದ್ಧಕಂಕಣರಾಗಬೇಕು.

(3) ವಿದ್ಯಾರ್ಥಿಯ ಜೀವನವನ್ನು ರೂಪಿಸುವ ಹೊಣೆ ಶಿಕ್ಷಕರದು.

(4) ತಮ್ಮ ಜ್ಞಾನದ ಮಟ್ಟವನ್ನು ಉತ್ತಮ ಪಡಿಸಿಕೊಳ್ಳಲು ಶಿಕ್ಷಕರು ಸದಾ ಯತ್ನಿಸಬೇಕು.

(5) ವಿದ್ಯಾರ್ಥಿಗಳು ಪ್ರಶ್ನೆ ಕೇಳಲು ಅವಕಾಶ ಕಲ್ಪಿಸಿ. ಅವರ ಸಂಶಯಗಳನ್ನು ಶಿಕ್ಷಕರು ದೂರಮಾಡಬೇಕು.

**ವಿದ್ಯಾರ್ಥಿಗಳನ್ನು ಕುರಿತು :**

(1) ವಿದ್ಯೆಗೆ ವಿನಯವೇ ಭೂಷಣ.

(2) ವಿದ್ಯಾರ್ಥಿಗಳಿಗೆ ತಮ್ಮ ಗುರುಗಳಲ್ಲಿ ಗೌರವವಿರಬೇಕು.

(3) ವಿದ್ಯಾರ್ಥಿಗಳು ಎಚ್ಚರಿಕೆಯಿಂದಲೂ ಏಕಾಗ್ರತೆಯಿಂದಲೂ ಅಧ್ಯಯನ ಮಾಡಬೇಕು.

(4) ವಿದ್ಯಾರ್ಥಿಗಳ ಮಹಾಶತ್ರು ಸ್ವೇಚ್ಛಾಚಾರಿತನ.

(5) ವಿದ್ಯಾರ್ಥಿ ಜೀವನದಲ್ಲಿ ಮದ್ಯಪಾನಕ್ಕೆ. ಬೀಡಿ ಸಿಗರೇಟುಗಳ ಸೇವನೆಗೆ ಅವಕಾಶವೇ ಇರಬಾರದು.

**ವಿದ್ಯಾರ್ಥಿನಿಲಯಗಳನ್ನು ಕುರಿತು**

(1) ವಿದ್ಯಾರ್ಥಿನಿಲಯಗಳು ವಿದ್ಯಾರ್ಥಿಗಳ ವಾಸಕ್ಕಾಗಿಯೊ ಭೋಜನಕ್ಕಾಗಿಯೊ ಇರುವ ಗೃಹಗಳಲ್ಲ.

(2) ಪಾಠಶಾಲೆಗಳಿಗಿಂತ ವಿದ್ಯಾರ್ಥಿನಿಲಯಗಳ ಮಹತ್ತ್ವ ಹೆಚ್ಚಿನದು. ಅದು ಸುಸಂಸ್ಕೃತರ ನಿವಾಸ.

(3) ನಿಲಯಪಾಲಕರು ವಿದ್ಯಾರ್ಥಿಗಳ ಜೀವನದ ಮೇಲೆ ದೃಷ್ಟಿ ಇಟ್ಟು, ಅವರ ನಿಷ್ಠೆ ಶಿಸ್ತಿನ ಜೀವನದಲ್ಲಿ ಬೆಳೆಯುವಂತೆ ಮಾಡಬೇಕು.

(4) ವಿದ್ಯಾರ್ಥಿನಿಲಯಗಳಲ್ಲಿ ಸಾಧ್ಯವಾದ ಮಟ್ಟಿಗೆ ಆಳುಗಳನ್ನು ಇಡಬಾರದು. ವಿದ್ಯಾರ್ಥಿಗಳು ತಮ್ಮ ಕೆಲಸಗಳನ್ನು ತಾವೇ ಮಾಡಿಕೊಳ್ಳಬೇಕು.

(5) ಜನದೇಶಕ್ಕೆ ತಕ್ಕಂತೆ ವಿದ್ಯಾರ್ಥಿನಿಲಯಗಳಿರಬೇಕು,

(6) ವಿದ್ಯಾರ್ಥಿನಿಲಯಗಳು ಸರಳತೆ, ಮಿತವ್ಯಯ, ಸದಾಚಾರಗಳ ಕೇಂದ್ರಗಳಾಗಬೇಕು.

(7) ವಿದ್ಯಾರ್ಥಿಗಳು ವಿನಯ ಹೀನರೂ, ವೆಚ್ಚಬಡುಕರೂ, ಉಚ್ಛೃಂಖಲರೂ ಆದರೆ, ಅಂತಹ ವಿದ್ಯಾರ್ಥಿನಿಲಯಗಳು ಸಫಲವಾಗುವುದಿಲ್ಲ.

ವಿದ್ಯಾರ್ಥಿಗಳ ಹಿತಕ್ಕಾಗಿ ಇಂತಹ ಆದರ್ಶಗಳನ್ನು ಗಾಂಧೀಜಿ ರಾಷ್ಟ್ರದ ಮುಂದಿಟ್ಟರು. ಈ ಆದರ್ಶಗಳನ್ನು ನಮ್ಮ ರಾಷ್ಟ್ರದಲ್ಲಿ ಕಾರ್ಯರೂಪಕ್ಕೆ ತರಲು ಸಾಧ್ಯವಾಯಿತೆ ? ಗಾಂಧೀಜಿ ಜನ್ಮತಾಳಿದ ರಾಷ್ಟ್ರದಲ್ಲಿಯೆ ಗಾಂಧೀಜಿಯವರನ್ನು ಕೇಳುವವರಿಲ್ಲದ ಪರಿಸ್ಥಿತಿ ಏಕೆ ಬಂತು ? ಯುವಜನರಿಗೆ ಗಾಂಧೀಜಿ ಏಕೆ ಪ್ರಿಯವಾಗಲಿಲ್ಲ ?

ಮತಗಳನ್ನು ಪಡೆಯಲು ಹಣ ಚೆಲ್ಲಲು ಆರಂಭಿಸಿದಾಗಲೆ ನಮ್ಮ ರಾಷ್ಟ್ರದ ಅವನತಿಯ ಆರಂಭ. ಮದ್ಯಪಾನ ನಿರೋಧವನ್ನು ಒತ್ತಿ ಹೇಳಿದ ಗಾಂಧೀಜಿಯವರ ನುಡಿಯನ್ನೇ ರಾಜಕಾರಣಿಗಳು ಮರೆತರು. ಅವರ ತತ್ವಗಳಿಗೆ ಗೋರಿಯ ನಿರ್ಮಾಣವಾಯಿತು. ಇದರಿಂದಾಗಿ ಹಲವು ವಿದ್ಯಾರ್ಥಿಗಳೂ ಕುಡಿತದ ಚಟಕ್ಕೆ ಬಲಿಯಾಗುತ್ತಿದ್ದಾರೆ. ಕೆಲವರಿಗೆ ಅಕ್ಟೋಬರ್ ಎರಡನೆಯ ತಾರೀಖು ಗಾಂಧೀಜಿಯವರ ನೆನಪು. ಅವರ ಸಂದೇಶಗಳನ್ನು ಕಾರ್ಯರೂಪಕ್ಕೆ ತರಲು ರಾಜಕಾರಣಿಗಳೇ ನಿರುತ್ಸಾಹ ತೋರಿದರೆ, ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಮಾಡುವವರಾರು ? ಎಲ್ಲಿಯವರೆಗೆ ರಾಜಕೀಯದಲ್ಲಿ ಪಕ್ಷಾಂತರಗಳು ನಡೆಯುತ್ತವೆಯೋ ಎಲ್ಲಿಯವರೆಗೆ ಹಣಚೆಲ್ಲಿ ಮತಗಳನ್ನು ಪಡೆಯುತ್ತಾರೆಯೊ– ಅಲ್ಲಿಯವರೆಗೆ ಶಕ್ತಿಯುತ ಸರ್ಕಾರ ಅಸ್ತಿತ್ವಕ್ಕೆ ಬರುವುದು ಸಾಧ್ಯವಿಲ್ಲ. ಸಬಲ ಸರ್ಕಾರವಿಲ್ಲದಿದ್ದರೆ, ಭ್ರಷ್ಟಾಚಾರಗಳು ನಿಲ್ಲುವುದಿಲ್ಲ, ನಮ್ಮ ರಾಜಕೀಯ ಈ ದೋಷಗಳನ್ನು ದೂರ ಮಾಡಲು ನಮ್ಮ ಸಂವಿಧಾನವನ್ನು ಸೂಕ್ತ ರೀತಿಯಲ್ಲಿ ಮಾರ್ಪಡಿಸಬೇಕಾದ ಕಾಲ ಸನ್ನಿಹಿತವಾಗಿದೆ. ರಾಷ್ಟ್ರದಲ್ಲಿ ಶಿಸ್ತು, ನಿಯಮಗಳಿಲ್ಲದಿದ್ದರೆ ಗಾಂಧೀಜಿಯವರ ಆದರ್ಶಗಳನ್ನು ಕಾರ್ಯರೂಪಕ್ಕೆ ತರುವುದು ಸಾಧ್ಯವಿಲ್ಲ. ಗಾಂಧೀವಾದಿಗಳು ಸರ್ಕಾರದ ನಿರ್ಮಲೀಕರಣಕ್ಕಾಗಿ ಬದ್ಧಕಂಕಣರಾಗಿ ಸಕ್ರಿಯವಾಗಿ ಕೆಲಸ ಮಾಡಬೇಕಾಗಿದೆ. ಕೇವಲ ಗೋಷ್ಠಿಗಳಿಂದ, ಗಾಂಧೀಜಯಂತಿಗಳನ್ನು ಏರ್ಪಡಿಸುವುದರಿಂದ ಸರ್ಕಾರವನ್ನು ಎಚ್ಚರಿಸುವುದು ಕಷ್ಟ. ಕ್ಷಾತ್ರ ತೇಜಸ್ಸು ಗಾಂಧೀವಾದಿಗಳಲ್ಲಿ ಮೂಡಿ ಅವರು ಸಬಲ ಪಕ್ಷವಾಗಿ, ಸರ್ಕಾರದ ಮೇಲೆ ಪ್ರಭಾವ ಬೀರಲು ಸಮರ್ಥರಾಗಬೇಕು. ಆಗ ಅವರ ಮಾತಿಗೆ ಬೆಲೆ ಬರುತ್ತದೆ. ಗಾಂಧೀ ಶಾಂತಿ ಪ್ರತಿಷ್ಠಾನಗಳು ಇರುವೆಡೆಗಳಲ್ಲಿ ಒಂದೊಂದು ವಿದ್ಯಾರ್ಥಿನಿಲಯಗಳನ್ನಾದರೂ ತೆರೆದು, ಆದರ್ಶ ವಿದ್ಯಾರ್ಥಿಗಳ ನಿರ್ಮಾಣದಲ್ಲಿ ತೊಡಗಬೇಕಾದುದು ಆವಶ್ಯಕ. ಗಾಂಧೀವಾದಿಗಳ ದೃಷ್ಟಿ ಆದರ್ಶ ಭಾರತೀಯ ವಿದ್ಯಾರ್ಥಿಗಳ ನಿರ್ಮಾಣದತ್ತ ಹರಿದರೆ ಗಾಂಧೀಜಿಯವರಿಗೆ ನಿಜವಾದ ಗೌರವ ತೋರಿದಂತಾಗುತ್ತದೆ.

ಪಥದರ್ಶನ

# ಇಂದಿನ ಸಮಸ್ಯೆಗಳು—ಮೂಲ ಶಿಕ್ಷಣ

**ಎಚ್. ವಿ. ಶ್ರೀರಂಗರಾಜು**

"ನಾನು ದೇಶಕ್ಕೆ ಮಾಡಿರುವ ಸೇವೆಗಳಲ್ಲೆಲ್ಲಾ ಮೂಲಶಿಕ್ಷಣವೇ ಅತಿ ಮಹತ್ತರ ಸೇವೆಯೆಂದು ಭಾವಿಸುತ್ತೇನೆ"— ಹೀಗೆಂದು ಗಾಂಧೀಜಿಯವರು ತಮ್ಮ ಕೊನೆಯ ದಿನಗಳಲ್ಲಿ ಹೇಳುತ್ತಿದ್ದರು. ಈ ದೇಶದ ಸಾಮಾನ್ಯ ಜನರಲ್ಲಿ ರಾಷ್ಟ್ರಪ್ರಜ್ಞೆಯನ್ನು ಮೂಡಿಸಿ ಅವರನ್ನು ಆತ್ಮಾಭಿಮಾನಗಳನ್ನಾಗಿ ಮಾಡಿ ದೇಶಕ್ಕೆ ರಾಜಕೀಯ ಸ್ವಾತಂತ್ರ್ಯವನ್ನು ಪಡೆಯುವುದಕ್ಕೆ ಅವರ ಅದ್ವಿತೀಯ ಧುರೀಣತ್ವವೇ ಕಾರಣವಾಗಿದ್ದರೂ, ಭಾರತದ ರಾಜಕೀಯಕ್ಕೆ ಅವರು ನೀಡಿದ ಕೊಡುಗೆಗಿಂತ ಶಿಕ್ಷಣಕ್ಕೆ ತೋರಿಸಿದ ಮಾರ್ಗ ಮಹತ್ತರವಾದುದು. ಗಾಂಧೀಜಿಯವರು ಹೇಳುತ್ತಿದ್ದುದು ಕೇವಲ ಅವರ ವಿನಯವೆಂದು ಹೇಳುವಂತಿಲ್ಲ. ರಾಜಕೀಯ ಸ್ವಾತಂತ್ರ್ಯ ದೇಶದ ಬೆಳವಣಿಗೆಗೆ ಇದ್ದ ಒಂದು ದೊಡ್ಡ ಅಡ್ಡಿಯನ್ನು ನಿವಾರಿಸಿತು. ಆದರೆ ಅದು ದಷ್ಟಪುಷ್ಟವಾಗಿ ಬೆಳೆಯಬೇಕಾಗಿದ್ದರೆ ಸತ್ವಪೂರ್ಣವಾದ ಅಮೃತಪಾನೀಯ ಒಂದು ಬೇಕಾಗಿಯೇ ಇತ್ತು. ಅದೇ ಮೂಲಶಿಕ್ಷಣ.

ಮೂಲ ಶಿಕ್ಷಣವು ಅಂದು ಭಾರತದಲ್ಲಿದ್ದ ಕ್ಲಿಷ್ಟ ಸಮಸ್ಯೆಗಳ ಪರಿಹಾರಕ್ಕೆ ತಕ್ಕ ಪರಿಹಾರವನ್ನೊದಗಿಸಬಲ್ಲುದಾಗಿತ್ತು. ಆ ಸಮಸ್ಯೆಗಳಾದರೋ ಕೇವಲ ತಾತ್ಕಾಲಿಕ ಸಮಸ್ಯೆಗಳಾಗಿರಲಿಲ್ಲ. ಇಂದೂ ನಮ್ಮ ದೇಶವನ್ನು ಕಾಡಿಸುತ್ತಿವೆ. ಕಾಲಕಳೆದಂತೆ ಅವು ಶಮನವಾಗುವ ಬದಲು ಉಲ್ಬಣಿಸಿವೆ. ಆ ಮೂಲ ಸಮಸ್ಯೆಗಳೆಂದರೆ ಜನಗಳಲ್ಲಿರುವ ಅನೈಕಮತ್ಯ ಅಥವಾ ಸಮಾಜದ ಛಿದ್ರೀಕರಣ, ಕಾಯಕದಲ್ಲಿ ನಿರುತ್ಸಾಹ, ಸ್ವಾರ್ಥಪರತೆ ಮತ್ತು ಸಂಯಮಹೀನತೆ. ಈ ಮೂಲಭೂತ ಸಮಸ್ಯೆಗಳಿಗೆ ಮೂಲ ಶಿಕ್ಷಣ ಹೇಗೆ ಸಂಜೀವಿನಿಯಾಗುತ್ತದೆ ?

ಮೂಲಶಿಕ್ಷಣದ ಮುಖ್ಯಾಂಶಗಳೆಂದರೆ ಪ್ರಾದೇಶಿಕ ಭಾಷೆಯ ಪ್ರಾಮುಖ್ಯತೆ, ಉತ್ಪಾದನಕಾರ್ಯಕೇಂದ್ರ ಪಠ್ಯವಸ್ತು, ಸಾಮಾಜಿಕ ಜೀವನ ಮತ್ತು ಶೀಲ ಸಂವರ್ಧನೆ.

ಸ್ವಾತಂತ್ರ್ಯ ಬಂದ ಮೂವತ್ತು ವರ್ಷಗಳಾದರೂ ಇನ್ನೂ ನಮ್ಮ ಸಮಾಜದಲ್ಲಿ ಸಮಗ್ರತೆ ಉಂಟಾಗಿಲ್ಲ. ಭಾವೈಕ್ಯತೆ ಎನ್ನುವುದು ಇನ್ನೂ ದೂರದ ಕನಸಾಗಿಯೇ ಉಳಿದುಕೊಂಡಿದೆ. ಜಾತಿ, ಮತಗಳಲ್ಲಿ ಸಾಮರಸ್ಯ ಇನ್ನೂ ಉಂಟಾಗಿಲ್ಲ. ಜಾತಿವಿರಸ ಹಿಂದಿನಿಂದ ನಮಗೆ ಬಂದಿರುವ ಅನಿಷ್ಟ ಶನಿಯಾಗಿದ್ದರೆ, ಕೈಗಾರಿಕೀಕರಣ ಮತ್ತು ಆಧುನಿಕ ಕರಣದಿಂದ ನಮ್ಮಲ್ಲಿ ವರ್ಗ ಭೇದವೂ ಹೆಚ್ಚಾಗುತ್ತಿದೆ. ಅತಿ ಶ್ರೀಮಂತವರ್ಗ, ಮಧ್ಯಮವರ್ಗ, ಕೆಳಮಧ್ಯಮವರ್ಗ ಮತ್ತು ನಿಸ್ಸಹಾಯಕ ದರಿದ್ರವರ್ಗ ಇವುಗಳ

ಅಂತಿತರ ಹೆಚ್ಚಾಗುತ್ತಿದೆ. ಸುಮಾರು ಐವತ್ತು ವರ್ಷಗಳಹಿಂದೆ ಒಂದೇ ಜಾತಿಗೆ ಸೇರಿದ ಜನರಲ್ಲಿ ಪರಸ್ಪರ ಸಮಾನತಾ ಭಾವನೆಯನ್ನು ನೋಡಬಹುದಾಗಿತ್ತು. ಈಗ ಜಾತಿ ಜಾತಿಗಳಲ್ಲಿ ವರ್ಗಭೇದ ತಲೆ ಎತ್ತುತ್ತಿದೆ, ಬೆಳೆಯುತ್ತಿದೆ. ನಮ್ಮ ರಾಷ್ಟ್ರಕ್ಕೆ ಈ ಛಿದ್ರೀ ಕರಣ ಅತಿ ದೊಡ್ಡ ಅಪಾಯವಾಗಿದೆ. ಮೂಲ ಶಿಕ್ಷಣ ಪದ್ಧತಿಯಲ್ಲಿ ಎಲ್ಲ ವರ್ಗಗಳ ಎಲ್ಲ ಧರ್ಮಗಳ ಎಲ್ಲ ಭಾಷೆಗಳ ಮಕ್ಕಳು ಒಂದೇ ಕಡೆ ಸೇರುತ್ತಾರೆ, ಪ್ರಾರ್ಥನೆ ಮಾಡುತ್ತಾರೆ, ಆಡುತ್ತಾರೆ, ಪಾಠ ಕಲಿಯುತ್ತಾರೆ. ಎಲ್ಲಕ್ಕಿಂತ ಮುಖ್ಯವಾಗಿ ಆ ಮಕ್ಕಳು ಕಲಿಯುವುದು ಒಂದು ಭಾಷೆಯ ಅಂದರೆ ಪ್ರಾದೇಶಿಕ ಭಾಷೆಯ–ಮೂಲಕವೇ. ಹೀಗೆ ಈ ಮಕ್ಕಳ ಪುಟ್ಟ ಸಮಾಜದಲ್ಲಿ ಒಗ್ಗಟ್ಟು ಬೆಳೆಯಲು ಸಾಧ್ಯವಾಗುತ್ತಿದೆ. ಮಗು ತಾನು ಈ ವರ್ಗದವನು ಆ ಜಾತಿಯವನು ಈ ಭಾಷೆಯವನು ಎಂಬುದನ್ನು ಶಾಲೆ ಯಲ್ಲಿರುವಾಗ ಮರೆತಿರುತ್ತಾನೆ. ಆರೇಳು ವರ್ಷಗಳ ಇಂಥ ಶಾಲಾಜೀವನದಿಂದ ಮಗುವಿನಲ್ಲಿ ತಾನು ಸಮಾಜದ ಒಂದು ಅಂಗ, ಬೃಹತ್ ಸಮಾಜದಿಂದ ತಾನು ಬೇರೆ ಯಲ್ಲ ಎಂಬ ಭಾವನೆ ಬಲಿಯಲು ಸಾಧ್ಯವಾಗುತ್ತದೆ. ಈಗಿರುವ ವ್ಯವಸ್ಥೆಯಾದರೋ ಇದಕ್ಕೆ ತೀರಾ ವಿರುದ್ಧವಾದದ್ದು, ಬೇರೆ ಬೇರೆ ಭಾಷೆಗಳಿಗೆ ಬೇರೆ ಬೇರೆ ಶಾಲೆಗಳು. ಶ್ರೀಮಂತರ ಮತ್ತು ವಿದ್ಯಾವಂತರ ಮಕ್ಕಳು ಹೋಗುವ ಶಾಲೆಗಳೇ ಬೇರೆ. ಕಲ್ಲುಕುಟ ಕರ, ಗಾಡಿ ಹೊಡೆಯುವವರ, ಹೊಲದಲ್ಲಿ ದುಡಿಯುವವರ ಮಕ್ಕಳು ಹೋಗುವ ಶಾಲೆಗಳೇ ಬೇರೆ. ಮಕ್ಕಳಲ್ಲಿ "ನಾವೇ ಬೇರೆ, ಅವರೇ ಬೇರೆ" ಎಂಬ ಪ್ರತ್ಯೇಕತಾ ಭಾವನೆಯನ್ನು ಬೆಳಸಲು ಇದಕ್ಕಿಂತ ಪರಿಣಾಮಕಾರೀ ವ್ಯವಸ್ಥೆ ಬೇರೆ ಬೇಕಿಲ್ಲ "ನನ್ನ ಶಾಲೆಯಲ್ಲಿ ಒಬ್ಬ ಜಲಗಾರನ ಮಗನು ಒಬ್ಬ ಗೌವರ್ನರನ ಮಗನೂ ಪಕ್ಕಪಕ್ಕದಲ್ಲಿಯೇ ಕುಳಿತು ದೇಶಭಾಷೆಯ ಮೂಲಕವೇ ಕಲಿಯುತ್ತಾರೆ" ಎಂದು ಗಾಂಧೀಜಿ ಕನಸು ಕಾಣುತ್ತಿದ್ದರು. ಅವರನ್ನು ರಾಷ್ಟ್ರಪಿತ ಎಂದು ಒಪ್ಪಿಕೊಂಡಿರುವ ನಾವು ಅವರ ಕನಸನ್ನು ದಿನದಿನ ಹೇಗೆ ಚೂರುಚೂರು ಮಾಡುತ್ತಿದ್ದೇವೆ !

ಗಾಂಧೀಜಿಯವರಲ್ಲಿ ಮೂಲ ಶಿಕ್ಷಣತತ್ವ ಮೊಳೆಯುತ್ತಿದ್ದಾಗ ಈ ದೇಶದ ವಿದ್ಯಾವಂತ ಜನರಿಗೆ ದೈಹಿಕ ಶ್ರಮ ಎಂದರೆ ಏನೋ ತುಚ್ಛ ಭಾವನೆ ಇತ್ತು. ಯಾವು ದಾದರೂ ದುಡಿಮೆಯಲ್ಲಿ ತೊಡಗುವುದು ಹೀನವಾದುದು ಎಂಬ ಭಾವನೆ ಇತ್ತು. ಈಗ ಈ ಭಾವನೆ ಕಡಿಮೆಯಾಗಿದೆ, ನಿಜ, ಆದರೆ ನಾವು ಮಾಡಬೇಕಾದ ಕಾರ್ಯದಲ್ಲಿ ಉತ್ಸಾಹ ಆಸಕ್ತಿಗಳನ್ನು ಇನ್ನೂ ನಾವು ಬೆಳಸಿಕೊಂಡಿಲ್ಲ. ನಮ್ಮ ಜನ ಉದ್ಯೋಗ ಶೀಲರಾದರೆ ತಮ್ಮ ಪಾಲಿಗೆ ಒಂದು ಕೆಲಸವನ್ನು ಮನಸ್ಸಿಟ್ಟು ಮಾಡಿದರೆ ನಮ್ಮ ರಾಷ್ಟ್ರೀಯ ಸಂಪತ್ತು ಇನ್ನೂ ಎಷ್ಟೋಪಾಲು ಹೆಚ್ಚುತ್ತದೆ. ಮೂಲಶಿಕ್ಷಣ ಈಗ ನಮ್ಮಲ್ಲಿರುವ ಸೋಮಾರಿತನವನ್ನು ನಿವಾರಿಸಬಲ್ಲುದು. ದುಡಿಮೆಯಲ್ಲಿ ಗೌರವವನ್ನು ಬೆಳಸಿ ಮಕ್ಕಳನ್ನು ಉದ್ಯೋಗ ಶೀಲರನ್ನಾಗಿ ಮಾಡಬಲ್ಲುದು. ಮೂಲಶಿಕ್ಷಣದಲ್ಲಿ ಉತ್ಪಾದನ ಕಾರ್ಯಕ್ಕೆ ಪ್ರಮುಖಸ್ಥಾನವಿದೆ. ಯಾವುದಾದರೂ ಜೀವನಾವಶ್ಯಕ

ವಸ್ತುವನ್ನು ಉತ್ಪಾದಿಸುವ ಕಾರ್ಯ ಪಠ್ಯವಸ್ತುವಿನ ಕೇಂದ್ರವಾಗಿರುತ್ತದೆ. ಬೇರೆಲ್ಲ ವಿಷಯಗಳು — ಗಣಿತ, ವಿಜ್ಞಾನ, ಸಮಾಜಪಾಠಗಳು ಮುಂತಾದವು — ಈ ಕಾರ್ಯಕ್ಕೆ ಪೂರಕವಾಗಿರುತ್ತವೆ. ಇದರಿಂದ ಉತ್ಪಾದನಾ ಕಾರ್ಯದ ಮೂಲಕವೇ ಬೇರೆಲ್ಲ ವಿಷಯಗಳನ್ನು ಬೋಧಿಸಬೇಕಾಗುತ್ತದೆ. ಈ ಬೋಧನಾಕ್ರಮಕ್ಕೆ ಸಮವಾಯ ಪದ್ಧತಿ ಎಂದು ಹೆಸರು. ಈ ಕ್ರಮವನ್ನು ಶಾಲೆಗಳಲ್ಲಿ ಅನುಸರಿಸುವುದು ಕಷ್ಟ ಎಂದು ಅನೇಕರಿಗೆ ಮನವರಿಕೆಯಾಗಿದೆ. ಆದುದರಿಂದ ಇದು ಆಚರಣೆಗೆ ತರುವುದು ಕಷ್ಟ. ಆದರೂ ಉತ್ಪಾದನಾಕಾರ್ಯವನ್ನು ಒಂದು ಪ್ರಮುಖ ಶಾಲಾವಿಷಯವಾಗಿ ಇಟ್ಟುಕೊಳ್ಳುವುದರಲ್ಲಿ ಏನೇನೂ ತೊಂದರೆಯಿರುವುದಿಲ್ಲ. ಚಿಕ್ಕಂದಿನಿಂದ ಒಂದು ಕಸುಬಿನಲ್ಲಿ ತೊಡಗಿ ಅದರಲ್ಲಿ ಆಸಕ್ತಿಯನ್ನು ಬೆಳಸಿಕೊಂಡ ಮಗು ಮುಂದೆ ಉತ್ಸಾಹದಿಂದ ಕೆಲಸಮಾಡುವ ಅಭ್ಯಾಸವನ್ನು ಬೆಳಸಿಕೊಳ್ಳುತ್ತಾನೆ. ಕೆಲಸದಲ್ಲಿ ಆಸಕ್ತಿಯುನ್ನುಂಟು ಮಾಡುವಂತೆ ಮೂಲಶಿಕ್ಷಣ ಶಾಲೆಯಲ್ಲಿ ಬೋಧನೆಯಾಗುತ್ತದೆ. ಇಂಥವರು ದೊಡ್ಡವರಾದಾಗ ರಾಷ್ಟ್ರದ ಉತ್ಪನ್ನ ಹೆಚ್ಚಾಗುವುದರಲ್ಲಿ ಯಾವ ಸಂಶಯವೂ ಇರಲಾರದು.

ಮೂಲಶಿಕ್ಷಣದ ಮತ್ತೊಂದು ವೈಶಿಷ್ಟ್ಯವೆಂದರೆ ಅಲ್ಲಿಯ ಮಕ್ಕಳೂ ಬೋಧಕರೂ ಒಟ್ಟಾಗಿ ಕೆಲಸಮಾಡುವುದು. ಮೂಲಶಿಕ್ಷಣ ಶಾಲೆಗಳಲ್ಲಿ ಕರ್ಮಚಾರಿ ಎಂಬ ಬೇರೆ ವರ್ಗವಿರುವುದಿಲ್ಲ. ಶಾಲೆಯ ಎಲ್ಲ ಕೆಲಸಗಳನ್ನು. ಕಕ್ಕಸುತೊಳೆಯುವುದರಿಂದ ಹಿಡಿದು ಹೂವನ್ನು ತಂದು ದೇವರ ಪಠದ ಮುಂದೆ ಓರಣವಾಗಿ ಇಡುವವರೆಗೆ ಎಲ್ಲ ಕೆಲಸವನ್ನೂ ಮಕ್ಕಳು ಶಿಕ್ಷಕರ ಜೊತೆಗೆ ಸೇರಿ ಮಾಡುತ್ತಾರೆ. ಇದರಿಂದ ಸಹಕಾರ ಭಾವನೆಗಳು ಬೆಳೆಯಲು ಅನುಕೂಲವಾಗುತ್ತದೆ. ಜೊತೆಗೆ ಕಾಯಕವು ಸಮಾಜದ ಒಳಿತಿಗೆ ಅವಶ್ಯಕವೆಂಬ ನಂಬಿಕೆಯೂ ಅದರ ಬಗೆಗೆ ಗೌರವವೂ ಬೆಳೆಯುತ್ತವೆ.

ಗಾಂಧೀಜಿಯವರು ಚಾರಿತ್ರ್ಯ ಶಿಕ್ಷಣಕ್ಕೆ ಪ್ರಮುಖ ಸ್ಥಾನವನ್ನು ಕೊಡುತ್ತಿದ್ದರು. ಅವರಿಗೆ ಸಮಯದಲ್ಲಿ ವಿಶೇಷ ಗೌರವವಿತ್ತು. ಮೂಲಶಿಕ್ಷಣ ಶಾಲೆಯ ಕಾರ್ಯ ಚಟುವಟಿಕೆಗಳ ಸಂಯಮವನ್ನು ಪರೋಕ್ಷವಾಗಿ ಬೆಳೆಸುತ್ತವೆ. ಅಲ್ಲಿ ಆಗುವ ಕಸುಬಿನ ಶಿಕ್ಷಣ, ಸಾಮಾಜಿಕ ಜೀವನದ ಕಾರ್ಯವಿಧಾನಗಳು ಸಹಕಾರ ಭಾವನೆಗಳು ಬೆಳೆಯಲು ಸಹಾಯಕವಾಗುವುದರಿಂದ ಒಬ್ಬ ವಿದ್ಯಾರ್ಥಿ ಬೇರೆಯವರ ಮೇಲೆ ತನ್ನ ಭಾವನೆಗಳನ್ನಾಗಲೀ ತಾನು ಮಾಡಬೇಕಾದ ಕೆಲಸವನ್ನಾಗಲೀ ಹೇರಲು ಸಾಧ್ಯವಾಗುವುದಿಲ್ಲ. ತನ್ನಲ್ಲಿರುವ ಓರೆಕೋರೆಗಳನ್ನು ಸರಿಮಾಡಿಕೊಳ್ಳುವ ಅವಕಾಶ ಇಂಥ ಸನ್ನಿವೇಶದಲ್ಲಿ ಸಾಕಷ್ಟಿರುತ್ತದೆ.

ಒಟ್ಟಿನಲ್ಲಿ ಇಂದು ನಮ್ಮನ್ನು ಕಾಡುತ್ತಿರುವ ಭೇದ ಭಾವ. ಲಸಿಕೆ ಅತ್ಯಾಸ್ತಿಗಳನ್ನು ಪರಿಹರಿಸಿಕೊಳ್ಳಲು ಮೂಲಶಿಕ್ಷಣ ಒಂದು ಸಾಧನವಾಗಿದೆ. ಆದರೆ ಅದು ಒಂದು ಸಾಧನ ಮಾತ್ರ. ಈ ಸಾಧನದಿಂದ ಬೇಕಾದ ಗುರಿಯನ್ನು ಮುಟ್ಟಬೇಕಾದರೆ ಸಮಾಜದ ಹೊಣೆಯೂ ಸಾಕಷ್ಟಿರುತ್ತದೆ. ಒಳ್ಳೆಯ ಶಿಕ್ಷಣಪದ್ಧತಿ ಇದೆ. ಆದುದರಿಂದ ತಾವು ಹೇಗಿದ್ದರೇನು ಎನ್ನುವ ಮನೋಧರ್ಮ ಸಮಾಜದ ನಾಯಕರಿಗಿದ್ದರೆ, ಅದರಿಂದ ದೊರಕುವ ಫಲ ಅಷ್ಟಕ್ಕಷ್ಟೆ.

ಪಥದರ್ಶನ

# ಗ್ರಾಮಾಭ್ಯುದಯ ಮತ್ತು ಗಾಂಧೀಜಿ

ಪಿ. ಎಸ್. ಜವರಪ್ಪಗೌಡ

ವಿಶ್ವದ ಬೇರೆ ಬೇರೆ ರಾಷ್ಟ್ರಗಳ ಭೌಗೋಳಿಕ-ಸಾಂಸ್ಕೃತಿಕ–ಪಾರಂಪರಿಕ ವೈಶಿಷ್ಟ್ಯಗಳು ಬೇರೆ ಬೇರೆಯಾಗಿದ್ದು ಸಾಮಾಜಿಕ–ಆರ್ಥಿಕ–ರಾಜಕೀಯ–ಶೈಕ್ಷಣಿಕ ಪದ್ಧತಿಗಳು ವಿಭಿನ್ನವಾಗಿರುತ್ತವೆಯೆಂಬುದು ಸರ್ವವಿದಿತ. ಗಾಂಧೀಜಿಗೆ ಇದರ ಪರಿವೆ ಚೆನ್ನಾಗಿತ್ತು. ರಾಷ್ಟ್ರದ ಅಭಿವೃದ್ಧಿ ಈ ಮೂಲ ಗುಣಗಳ ಆಧಾರದ ಮೇಲೆಯೇ ನಿಂತಿದೆಯೆಂಬುದನ್ನು ಅವರು ಚೆನ್ನಾಗಿ ಮನಗಂಡಿದ್ದರು. ತನ್ನತನವನ್ನು ಕಳೆದುಕೊಂಡು ಅನ್ಯತನದ ಅನುಕರಣೆಯಿಂದಲೇ ಯಾವುದೇ ರಾಷ್ಟ್ರ ಅಭಿವೃದ್ಧಿಯನ್ನು ಸಾಧಿಸಲಾರದೆಂಬುದೂ ಅವರ ಭಾವನೆಯಾಗಿತ್ತು. ಆದರೆ ಪರಾನುಕರಣೆಯನ್ನು ಅವರು ತಿರಸ್ಕರಿಸಲಿಲ್ಲ. ಪ್ರತಿಯೊಂದು ರಾಷ್ಟ್ರವೂ ಕಾಲಕ್ಕೆ ತಕ್ಕಂತೆ ತನ್ನತನದಲ್ಲಿ ಹಿರಿದಾದುದನ್ನು ಉಳಿಸಿಕೊಂಡು, ಅನ್ಯರಲ್ಲಿ ಉತ್ತಮವಾದುದನ್ನು ಆರಿಸಿಕೊಂಡು ಎರಡನ್ನೂ ಸಮೀಕರಿಸಿ ಒಂದು ವಿನೂತನ ಹಾಗೂ ವಿಶಿಷ್ಟತಮ ಪದ್ಧತಿಯನ್ನು ಹೊಂದಿಸಿಕೊಂಡಾಗ ರಾಷ್ಟ್ರದೇಳಿಗೆ ಸಾಧ್ಯವಾಗುವುದು. ಹೊಸ ಚಿಗುರು ಹಳೆಯಬೇರು. ಇದ್ದಾಗಲೇ ಮರಕ್ಕೆ ಸೊಗಸು.

ಭಾರತದ ತನ್ನತನ ಯಾವುದು ? ಏಳು ಲಕ್ಷಕ್ಕೂ ಹೆಚ್ಚು ಹಳ್ಳಿಗಳಿಂದ ಕೂಡಿದ ಈ ದೇಶದ 80 ಪ್ರತಿಶತ ಭಾರತೀಯ ಪ್ರಜೆಗಳು ಹಳ್ಳಿಗರಾಗಿರುವ ಈ ರಾಷ್ಟ್ರದ ತನ್ನತನ 'ಗ್ರಾಮೀಣತನ ಅಥವಾ ಕೃಷಿಕತನ' ವಲ್ಲದೆ ಇನ್ನಾವುದಾಗಲು ಸಾಧ್ಯವಾದೀತು ?ಭಾರತದ ಅಂತರ್ಗುಣ ಇದರ ಹೊರತು ಬೇರಾವುದಿರಲು ಶಕ್ಯವಾದೀತು? ಗಾಂಧೀಜಿಯ ದೃಷ್ಟಿಯಲ್ಲಿಯೂ ಈ ಸತ್ಯ ಸ್ಪಷ್ಟವಾಗಿ ಗೋಚರವಾಗಿತ್ತು. ಅವರು 'ಗ್ರಾಮಾಭ್ಯುದಯವೇ ರಾಷ್ಟ್ರಾಭ್ಯುದಯ' ಎಂಬುದಾಗಿ ಭಾವಿಸಿದ್ದರು. 'ಭಾರತದ ಸಂಸ್ಕೃತಿ ಪಟ್ಟಣದ ಬಂಗಲೆಗಳಲ್ಲಿ ಹಳ್ಳಿಯ ಗುಡಿಸಲಲ್ಲಿದೆ' 'ನಾಗರಿಕರೆಂದು ಹೆಮ್ಮೆಪಡುವವರು ಒಂದು ದಿನ ಹಳ್ಳಿಯ ಕಡೆಗೆ ವಲಸೆ ಹೋಗಬೇಕಾದೀತು' ಎಂದು ಸಾರಿದ್ದರು ಗಾಂಧೀಜಿ.

ಹಳ್ಳಿಯಲ್ಲಿರುವ ಮುಖ್ಯ ಕಸುಬು ಕೃಷಿ, ವ್ಯವಸಾಯ. ಅದಕ್ಕೆ ಸಹಕಾರಿಯಾದ ಇತರ ಕುಶಲ ಕಲೆಗಳೂ ಅಲ್ಲಿವೆ. ಗ್ರಾಮಾಭ್ಯುದಯದ ವಿಚಾರ ಮಾಡುವಾಗ ಪ್ರಥಮತಃ ಕೃಷಿಕನ ಅಭ್ಯುದಯದ ಕುರಿತು ಚಿಂತಿಸುವುದು ಅಗತ್ಯ. ಬೇಸಾಯಗಾರನಿಗೆ ವರುಷದಲ್ಲಿ ನಾಲ್ಕೈದು ತಿಂಗಳ ಕಾಲ ಕೃಷಿ ಕೆಲಸವಿದೆ. ಉಳಿದ ಸಮಯ ಅವನೂ ಸೋಮಾರಿಯಾಗಿರುವುದೆ ? ನಾಲ್ಕೈದು ತಿಂಗಳ ದುಡಿಮೆಯ ಬೇಸಾಯ

ದಿಂದ ಅವನು ವರ್ಷಪಿಡೀ ಜೀವಿಸಬಲ್ಲನೇ ? ಇದನ್ನು ಯೋಚಿಸಬೇಕು. ಗಾಂಧೀಜಿ ಇದನ್ನೇ ಚೆನ್ನಾಗಿ ಪರ್ಯಾಲೋಚಿಸಿದ್ದರು.

ಗಾಂಧೀಜಿ ಒಬ್ಬ ಉತ್ತಮ ಆರ್ಥಿಕ ಚಿಂತಕನಂತೆ ಯೋಚಿಸಿದ್ದರು. ಹಳ್ಳಿಯಲ್ಲಿ ದೊರೆಯಬಹುದಾದ ಸಾಧನ ಸಾಮಗ್ರಿಗಳ ಕಡೆ ಅವರ ಗಮನ ಹರಿದಿತ್ತು. ಸುಲಭವಾಗಿ ಸಿಗಬಹುದಾದ ಸಾಧನ–ಸಾಮಗ್ರಿ ಹತ್ತಿ. ಮನುಷ್ಯನಿಗೆ ಅಗತ್ಯವಾದ ವಸ್ತುಗಳಲ್ಲಿ ಆಹಾರದ ಬಳಿಕದ್ದು ಉಡುಗೆ. ಆದ್ದರಿಂದ ಇದನ್ನೆ ಚಿಂತಿಸಿದ ಗಾಂಧೀಜಿ 'ಚರಕ' ವನ್ನು ಗ್ರಾಮಾಭ್ಯುದಯದ ಮುಖ್ಯ ಸೂತ್ರವನ್ನಾಗಿ ಅಂಗೀಕರಿಸಿದರು. ಬಿಡುವಿನ ಸದುಪಯೋಗ, ಆವಶ್ಯಕ ವಸ್ತುವಿನ ಉತ್ಪಾದನೆ ಇವರ ಮುಖ್ಯ ಉದ್ದೇಶ. ಯಾವ ಕೃಷಿಕನೂ ಕಚ್ಚಾ ವಸ್ತುವಿಗೆ ಪರದಾಟ ನಡೆಸದೆ ಸ್ವತಂತ್ರವಾಗಿ ಸಂಪಾದಿಸಿ ಕೊಳ್ಳಬಹುದಾದ ವಿಷಯಕ್ಕೆ ಇದೊಂದು ಮಾದರಿಯೆಂಬುದಾಗಿಯೇ ಗಾಂಧೀಜಿ ಕಂಡು ಕೊಂಡಿದ್ದರು. 'ಚರಕ' ವೆಂಬುದು ಆತ್ಮಾವಲಂಬನೆಯ ಸಂಕೇತವಾಗಿ ಅವರು ಉದ್ಘೋಷಿಸಿದ್ದರು.

ಹಳ್ಳಿಯಲ್ಲಿ ಸಾಧನ ಸಾಮಗ್ರಿಗಳಿಗೆ ಕೊರತೆಯಿಲ್ಲ. ಮನುಷ್ಯ ಶಕ್ತಿಗೆ ಕುಂದಿಲ್ಲ. ಅದನ್ನು ಅಳವಡಿಸಿಕೊಳ್ಳುವ ಪರಿಯನ್ನರಿತು ಹೊಂದಿಸುವುದು ಮಾತ್ರ ಅಗತ್ಯವೆನಿಸಿತು ಗಾಂಧೀಜಿಗೆ. ಹಾಗಾಗಿಯೇ ಅವರು ವೃತ್ತಿ ಆಧಾರಿತವಾದ ಶಿಕ್ಷಣವನ್ನು (ಮೂಲ ಶಿಕ್ಷಣ) ಚಿಂತಿಸಿದರು. ಅಕ್ಷರ ಜ್ಞಾನದ ಜತೆಯಲ್ಲಿ ಆರ್ಥಿಕ ಸ್ವಾವಲಂಬನೆಯನ್ನು ರೂಪಿಸುವ ಶಿಕ್ಷಣವು ದೇಶದ ಅಭ್ಯುದಯಕ್ಕೆ ಕಾರಣವೆಂದೂ ಸಾರಿದರು. ಅಜ್ಞಾನ ಬಡತನ ಶೋಷಣೆ ಮತೀಯ ಮೌಢ್ಯಗಳಿಂದ ವಿಮೋಚನೆ ದೊರೆಯಬೇಕಾದರೆ ಶಿಕ್ಷಣ ಅಗತ್ಯ, ಆದರೆ ಆ ಶಿಕ್ಷಣವೂ ಕೇವಲ ಭಾವನಾತ್ಮಕವಾಗಬಾರದು ಅಥವಾ ನಿರುದ್ಯೋಗವನ್ನು ಹೆಚ್ಚಿಸುವದಾಗಬಾರದು ಎಂಬುದಕ್ಕಾಗಿಯೇ ಮೂಲ ಶಿಕ್ಷಣವನ್ನವರು ರೂಪಿಸಿದರು. ಗೃಹ ಮತ್ತು ಗ್ರಾಮ ಕೈಗಾರಿಕೆಯ ಅಭಿವೃದ್ಧಿಯಿಂದ ಆಗಬೇಕಾದ ಗ್ರಾಮಾಭ್ಯುದಯ ಜೀವನ ಶಿಕ್ಷಣದಿಂದ ಸಾಧ್ಯವೆಂಬುದನ್ನು ಅವರು ಮನಗಂಡಿದ್ದರು.

'ಲೋಕ ಸೇವಕ ಸಂಘ' ಗಾಂಧೀಜಿ ಕಂಡುಕೊಂಡ ಮತ್ತೊಂದು ಗ್ರಾಮಾಭ್ಯುದಯಕ್ಕೆ ಸಾಧನ. ಗ್ರಾಮದ ಜನರಲ್ಲಿ ಉತ್ತಮ ಮುಂದಾಳುತ್ವವನ್ನುಂಟುಮಾಡಿ ನಿಜವಾದ ಪ್ರಜಾಪ್ರಭುತ್ವ ಮಾದರಿಯನ್ನು ನಿರ್ಮಿಸಿ ಎಲ್ಲರೂ ತಮ್ಮ ಹಕ್ಕು ಬಾಧ್ಯತೆಗಳನ್ನು ಸರಿಯಾದ ಅರ್ಥದಲ್ಲಿ ತಿಳಿದು ಕೊಳ್ಳುವಂತೆ ಮಾಡಿ ಅದರಂತೆ ವರ್ತಿಸಲು ಅವಕಾಶವನ್ನು ಕಲ್ಪಿಸಲು 'ಲೋಕ ಸೇವಕ ಸಂಘ' ವೊಂದು ಮಾರ್ಗ ಸೂಚಿ. ಪ್ರತಿಯೊಂದು ಗ್ರಾಮ ಘಟಕವೂ ಸ್ವಾವಲಂಬಿಯಾಗಿ ತನಗೆ ತಾನೇ ಪರಿಪೂರ್ಣವಾಗುವಂತೆ ಮಾಡುವುದೇ ಇದರ ಉದ್ದೇಶ. ಸ್ವಾತಂತ್ರ್ಯಕ್ಕೆ ಒಂದು ಅರ್ಥವನ್ನು ಕೊಡುವುದು ಇದರ ಮಹತ್ತರ ಕಾರ್ಯ.

ಹಳ್ಳಿಯ ಕೃಷಿಕ ಕೇವಲ ಅನ್ನವನ್ನು ಸೃಷ್ಟಿಸಿ ಅರೆಹೊಟ್ಟೆಯಲ್ಲಿ ಇರುವವನಾಗ ಬಾರದು. ಅವನು ತನಗೆ ಬೇಕಾದ ಸುಖ ಸೌಲಭ್ಯಗಳನ್ನು ತಾನೇ ಒದಗಿಸಿಕೊಂಡು ಸ್ವತಂತ್ರನಾಗಬೇಕು ; ಮಾತ್ರವಲ್ಲ ಸಮಗ್ರ ರಾಷ್ಟ್ರದ ರಾಜಕೀಯದಲ್ಲಿ–ಆರ್ಥಿಕ ವಿಚಾರ ದಲ್ಲಿ, ಸಾಮಾಜಿಕ ಪ್ರಗತಿಯಲ್ಲಿ ಸಂಪೂರ್ಣವಾಗಿ ಭಾಗಿಯಾಗಬೇಕು. ಮತಗಳ ಬೇಟೆಗೆ ಬರುವವರ ಆಮಿಷಗಳಿಗೆ ಬಲಿಯಾಗಿ ತಮ್ಮ ಹಕ್ಕುಗಳನ್ನು ಸರಿಯಾಗಿ ಉಪಯೋಗಿಸದ ಇಂದಿನ ಮೌಢ್ಯ ಅವನಲ್ಲಿ ಬೆಳೆಯಬಾರದು. ಕಾಗದದ ಓಟಿನ ಚೀಟಿಯಿಂದ ಪರಿವರ್ತನೆಯನ್ನು ತರುವ ಆಭಾಸವನ್ನು ಮಾಡದೆ ತಿಳಿವಿನ ಮೂಲಕ ಅದನ್ನು ತರುವ ದೃಢತೆಯನ್ನು ಅವನು ಪಡೆಯಬೇಕು ಎಂಬುದು ಗಾಂಧೀಜಿಯ ಆಕಾಂಕ್ಷೆಯಾಗಿತ್ತು. ಅದು ಲೋಕ ಸೇವಕ ಸಂಘದಿಂದ ಸಾಧ್ಯವಾಗಬಹುದೆಂದು ಅವರು ಆಶಿಸಿದ್ದರು. ರಾಷ್ಟ್ರ ಚಿಂತಕರಿಗೆ ಇದು ಸತ್ಯಸ್ಯ ಸತ್ಯವೆನ್ನುವುದಾಗಿ ಈಗ ಕಾಣುತ್ತಿದೆ. ಶ್ರೀ ಕುವೆಂಪುರವರು ಕಂಡ ಹಾಳೂರ ಚಿತ್ರ ಅವರೆಂದಂತೆ ಬದಲಾಗದೆ ಹೋದರೆ ದೇಶಕ್ಕೆ ಕ್ಷೇಮವಿಲ್ಲವೆಂಬುದೂ ಸ್ಪಷ್ಟ.

ಒಟ್ಟಿನಲ್ಲಿ ಹೇಳುವುದಾದರೆ ಗಾಂಧೀಜಿಯ ಚಿಂತನೆ ಗ್ರಾಮಾಭ್ಯುದಯದತ್ತಲೇ ಕೇಂದ್ರೀಕೃತವಾಗಿತ್ತು. ರಾಜಕೀಯ–ಆರ್ಥಿಕ–ಸಾಮಾಜಿಕ ಬೆಳವಣಿಗೆಗಳೆಲ್ಲ ಗ್ರಾಮಾ ಧಾರಿತವಾಗಿ ಸಾಗಿದರೇನೇ ರಾಷ್ಟ್ರಾಭ್ಯುದಯ ಎಂಬುದವರ ಸ್ಪಷ್ಟ ನಿಲುವಾಗಿತ್ತು. ಅದನ್ನು ಸರಿಯಾಗಿ ಅರ್ಥೈಸಲು ಸಾಧ್ಯವಾಗದ ಜನರಿಂದಲೇ ರಾಷ್ಟ್ರದ ಏಳಿಗೆ ಕುಂಠಿತ ವಾಗುತ್ತದೆ ಎಂಬುದು ದುರ್ದೈವದ ವಿಷಯ. ಗಾಂಧೀಜಿಯನ್ನು ನೆನೆಯುವವರು ಅರ್ಥೈಸುವವರು ಮೊದಲು ನಮ್ಮ ಹಳ್ಳಿಗಳನ್ನು ಅರಿಯಲಿ-ರಾಷ್ಟ್ರನಾಯಕರು ಇತ್ತ ಗಮನವೀಯಲಿ ಆಗಲೇ ಭಾರತವು ರಾಮರಾಜ್ಯವಾದೀತು.

ಪಥದರ್ಶನ

# ಮಹಾತ್ಮ ಗಾಂಧೀ ಮತ್ತು ಮಹಿಳೆ

**ಎಂ. ಬಿ. ರಾಜಾಮಣಿ**

**ಪೀಠಿಕೆ :-**

ಅನಾದಿ ಕಾಲದಿಂದಲೂ ಮಾನವಸಮಾಜದಲ್ಲಿ ಮಹಿಳೆಯನ್ನು ಅಲಂಕಾರಿಕ ವಸ್ತುವಾಗಿ ವೀಕ್ಷಿಸಿ, ವಿಚಾರಮಾಡಿ, ವಿವರಿಸುವ ಪ್ರವೃತ್ತಿಯು ಪ್ರಧಾನವಾಗಿದೆ. ಒಂದು ಸಮಾಜದಲ್ಲಿ ಮಹಿಳೆಗೆ ಕೊಡಲಾಗಿರುವ ಸ್ಥಾನಮಾನವು, ಅದರ ಸಾಮಾಜಿಕ, ಸಾಂಸ್ಕೃತಿಕ ಮತ್ತು ಆಧ್ಯಾತ್ಮಿಕ ಮಟ್ಟವನ್ನು ನಿರ್ದಿಷ್ಟವಾಗಿ ತೋರುವ ಸೂಚಿಯಾಗಿರುತ್ತದೆ.

ಭಾರತ ಸಮಾಜದಲ್ಲಿ ಮಹಿಳೆಯ ಸ್ಥಾನಮಾನದ ಬಗ್ಗೆ ವಿರೋಧೋಕ್ತಿಗಳನ್ನು ಕಾಣಬಹುದು. ಸಾಂಪ್ರದಾಯಿಕವಾಗಿ ಮಹಿಳೆಯನ್ನು 'ಶಕ್ತಿ' ಎಂಬುದಾಗಿ ಎಣಿಸಿ, ಅವಳನ್ನು ಶಕ್ತಿನೀಡುವ ತತ್ತ್ವ ಹಾಗೂ ಚೈತನ್ಯ ತುಂಬುವ ಸತ್ತ್ವ ಎಂಬುದಾಗಿ ಕರೆದು ಗೌರವಿಸಲಾಗಿದೆ. ಆದರೂ ಜನಸಾಮಾನ್ಯ ಭಾಷೆಯಲ್ಲಿ 'ಅಬಲೆ' ಎಂಬ ಶಬ್ದವನ್ನು ಮಹಿಳೆಗೆ ಸಮಾನಾರ್ಥಕ ಪದವಾಗಿ ಬಳಸಲಾಗಿದೆ. ವೇದಗಳ ಕಾಲದ ಇತಿಹಾಸದ ಪುಟಗಳ ಮೇಲೆ ಕಣ್ಣೋಡಿಸಿದರೆ, ಜೀವನದ ವಿವಿಧ ರಂಗಗಳಲ್ಲಿ ಅತ್ಯಂತ ಸ್ತುತ್ಯರ್ಹವಾಗಿದ್ದ ಸಾಧನೆಗಳನ್ನು ಗಳಿಸಿ ಹೆಮ್ಮೆಯಿಂದ ಕಂಗೊಳಿಸಿದ ಹಲವಾರು ಮಹಿಳೆಯರು ಗೋಚರಿಸುತ್ತಾರೆ. ಆದರೆ ಅವರುಗಳು ಅಪವಾದಗಳು. ಪ್ರಾಚೀನ ಯುಗದ ಅಂತ್ಯವು ಸಮೀಪಿಸಿದಂತೆ ಸ್ತ್ರೀಯ ಸ್ಥಾನಮಾನಗಳಲ್ಲಿ ಇನ್ನೂ ಹೆಚ್ಚಿನ ಅವನತಿ ಉಂಟಾಯಿತು. ಸಮಾಜವು ಶಿಶುವಿವಾಹ, ಸತೀಸಹಗಮನ ಮುಂತಾದ ದುಷ್ಟ ಪದ್ಧತಿಗಳಿಗೆ ಹೆಚ್ಚಿನ ಮಾನ್ಯತೆಯನ್ನು ನೀಡಿ, ಮಹಿಳೆಯನ್ನು ಗೃಹವಲ್ಲಿ ದುಡಿತದ ಗುಲಾಮಳನ್ನಾಗಿಸಿತು ; ಅವಳಿಗೆ ಶಿಕ್ಷಣ ಪಡೆಯಲು ಅವಕಾಶ ನೀಡದೆ, ಅವಳು ಅನಕ್ಷರಸ್ಥಳಾಗಿ, ಅಜ್ಞಾನಿಯಾಗಿ, ಪುರುಷನ ಅಡಿಯಾಳಾಗಿ ಕಾಲವನ್ನು ಕಳೆಯುವಂತೆ ಮಾಡಿತು ವಿಧವೆಗೆ ಮರುವಿವಾಹವನ್ನು ನಿಷೇಧಿಸಿ, ಅವಳ ಸ್ಥಿತಿ ಅತ್ಯಂತ ಶೋಚನೀಯವಾಗುವಂತೆ ಮಾಡಿತು. ಪುರುಷನು ತನ್ನ ಲೈಂಗಿಕ ದಾಹವನ್ನು ಅಡಗಿಸಿಕೊಳ್ಳಲು ಮಹಿಳೆಯನ್ನು ಒಂದು ಸಾಧನವಾಗಿ ಬಳಸಿಕೊಳ್ಳಲು ಹೆಚ್ಚಿನ ಅವಕಾಶ ಉಂಟಾಯಿತು. ಇದರಿಂದ ವೇಶ್ಯಾವೃತ್ತಿ ಎಂಬ ಅತ್ಯಂತ ಭಯಂಕರ ಕಾಯಿಲೆಯು ಸಮಾಜದಲ್ಲಿ ಪ್ರಬಲವಾಯಿತು. ಈ ಅನಿಷ್ಟ ಒಂದೇ ಸಾಲದೋ ಎಂಬಂತೆ, ಪವಿತ್ರ ದೇವಾಲಯಗಳ ಆಕರ್ಷಣೆ ಮತ್ತು ವರಮಾನವನ್ನು ಹೆಚ್ಚಿಸುವ ಉದ್ದೇಶದಿಂದ ಏನೂ ಅರಿಯದ ತರುಣಿಯರನ್ನು ಧರ್ಮದ ಹೆಸರಿನಲ್ಲಿ ದೇವಸ್ಥಾನ

ಗಳಲ್ಲಿ ಸೇವೆ ಮಾಡುವುದಕ್ಕಾಗಿ ನೇಮಿಸಿಕೊಂಡು, ಅವಳನ್ನು ವೇಶ್ಯೆಯನ್ನಾಗಿಸ ಲಾಗುತ್ತಿದ್ದಿತು. ಇದರ ಫಲವಾಗಿ ದೇವದಾಸಿ ಪದ್ಧತಿ ಎಂದು ಇನ್ನೊಂದು ಹೇಯ ಸಂಸ್ಥೆಯು ಪ್ರಬಲವಾಯಿತು. ಹೀಗೆ ಪ್ರಾಚೀನ ಭಾರತದಲ್ಲಿ ಮಹಿಳೆಯ ಸ್ಥಾನ ಮಾನಗಳಲ್ಲಿ ಬದಲಾವಣೆಯು ಹೊನಲು ಉದಾತ್ತ ಆದರ್ಶ, ಉತ್ತಮ ಭಾವನೆ ಹಾಗೂ ಆಚರಣೆಗಳ ಶಿಖರದಿಂದ ಅವನತಿ ಎಂಬ ಕೆಳಮಟ್ಟಕ್ಕೆ ಹರಿದು ಬಂದಿತು. ಸುದೀರ್ಘವಾಗಿದ್ದ ಮಧ್ಯಯುಗದಲ್ಲಿ ಮಹಿಳೆಯ ಪರಿಸ್ಥಿತಿ ಇನ್ನೂ ಹದಗೆಟ್ಟಿತು, ಅವಳು ಇನ್ನೂ ಹೆಚ್ಚು ಕಷ್ಟ-ಕೋಟಲೆಗಳಿಗೆ ಮತ್ತು ಅಮಾನುಷ ಪದ್ಧತಿಗಳಿಗೆ ತುತ್ತಾದಳು. ಆಧುನಿಕ ಯುಗದಲ್ಲಿ ಹೃದಯವಂತಿಕೆಯಿಂದ ಕೂಡಿದ್ದ ಹಾಗೂ ಅತ್ಯಂತ ಉದಾರ ಭಾವನೆಗಳನ್ನು ಬೆಳೆಸಿಕೊಂಡಿದ್ದ ಹಲವಾರು ಸುಪ್ರಸಿದ್ಧ ಮಹಾನ್ ವ್ಯಕ್ತಿಗಳು ಮಹಿಳೆಯ ವಿಮೋಚನೆಗಾಗಿ, ಉದ್ಧಾರಕ್ಕಾಗಿ ಕಂಕಣತೊಟ್ಟರು. ಅವರಲ್ಲಿ ಮುಖ್ಯರಾದವರು ಮಹಾತ್ಮ ಗಾಂಧಿಯವರು.

**ಗಾಂಧೀಜಿಯವರ ದೃಷ್ಟಿಯಲ್ಲಿ ಮಹಿಳೆ :—**

ಅಸಮಾನವಾಗಿದ್ದ ಸಾತ್ವಿಕ ಶಸ್ತ್ರಾಸ್ತ್ರಗಳಾಗಿದ್ದ ಸತ್ಯ, ಅಹಿಂಸೆ ಹಾಗೂ ಪ್ರೇಮ ಎಂಬ ಆಯುಧಗಳನ್ನು ಬಳಸಿ, ಜನ್ಮಭೂಮಿಯನ್ನು ಪರದಾಸ್ಯದ ಸಂಕೋಲೆಯಿಂದ ಮುಕ್ತಗೊಳಿಸುವ ಅತ್ಯಂತ ಪವಿತ್ರವಾಗಿದ್ದ ಮಹತ್ಕಾರ್ಯದಲ್ಲಿ ತೊಡಗಿ ಅನವರತ ದುಡಿಯುತ್ತಿದ್ದಾಗಲೂ, ಸದಾ ಗಾಂಧೀಜಿಯವರನ್ನು ಆಕರ್ಷಿಸಿ. ವಸ್ತುನಿಷ್ಠವಾಗಿ ವಿಚಾರಮಾಡಿ, ಸೂಕ್ತ ಪರಿಹಾರಗಳನ್ನು ಸೂಚಿಸುವಂತೆ ಪ್ರೇರೇಪಿಸಿದ ಅತ್ಯಂತ ಮುಖ್ಯ ವಿಷಯ ಮಹಿಳೆ ಮತ್ತು ಅವಳ ಸಮಸ್ಯೆಗಳು. ಅವರು ಭಾರತೀಯ ಮಹಿಳೆಯ ಮುಕ್ತಿ ಹಾಗೂ ಪ್ರಗತಿಗಾಗಿ ಮಾಡಿದ ಕಾರ್ಯಸಾಧನೆ ಅಪೂರ್ವ. ಇತ್ತೀಚಿನ ವರ್ಷಗಳಲ್ಲಿ ಮತ್ತಾವ ವ್ಯಕ್ತಿಯೂ ಮಹಿಳೆಯ ಉದ್ಧಾರಕ್ಕಾಗಿ ಇಷ್ಟೊಂದು ಪ್ರಯಾಸ ಪಡಲಿಲ್ಲ, ನಿಷ್ಠೆಯಿಂದ ಪ್ರಯತ್ನಿಸಿ ಫಲವನ್ನು ಪಡೆಯಲಿಲ್ಲ. ಗಾಂಧೀಜಿ ಮಹಿಳೆಯ ಶಕ್ತಿ–ಸಾಮರ್ಥ್ಯ, ಸಮಸ್ಯೆ ಮತ್ತು ಕೊರತೆಗಳನ್ನು ಚೆನ್ನಾಗಿ ಅರ್ಥಮಾಡಿಕೊಂಡಿದ್ದರು. ಕಾರಣ, ಸಾರ್ವಜನಿಕ ರಂಗವನ್ನೇ ತಮ್ಮ ಗೃಹವನ್ನಾಗಿಸಿ ಕೊಂಡಿದ್ದ, ಜಗತ್ತಿನ ಮಾನವರನ್ನೆಲ್ಲಾ ತಮ್ಮ ಕುಟುಂಬದ ಸದಸ್ಯರನ್ನಾಗಿ ಎಣಿಸಿ ಪ್ರೀತಿಸುತ್ತಿದ್ದ ಮತ್ತು ಎಲ್ಲರ ಕಣ್ಣೀರನ್ನು ಒರಸಿ, ರಾಮರಾಜ್ಯವನ್ನು ಸ್ಥಾಪಿಸ ಬೇಕೆಂದು ಕನಸು ಕಂಡು, ಆ ಕನಸನ್ನು ನನಸನ್ನಾಗಿ ಮಾಡಲು ಶ್ರಮಿಸುತ್ತಿದ್ದ ಗಾಂಧೀ ಜಿಯವರಿಗೆ ವಿವಿಧ ಬಗೆಯ ಮಹಿಳೆಯರ ಸಂಪರ್ಕ ಉಂಟಾದುದರಲ್ಲಿ ಆಶ್ಚರ್ಯವೇ ನಿಲ್ಲ. ಅವರ ವಿಶಾಲದೃಷ್ಟಿಯಲ್ಲಿ ಕೆಲವು ಮಹಿಳೆಯರು ಅವರಿಗೆ ಜನನಿ ಸಮಾನರು, ಕೆಲವರು ಅವರ ಅಕ್ಕ–ತಂಗಿಯರು, ಮತ್ತೆ ಕೆಲವರು ಸಹೋದ್ಯೋಗಿಗಳು, ಮತ್ತೆ ಹಲವರು ದತ್ತು ಪುತ್ರಿಯರೂ ಆಗಿದ್ದರು. ಸಂಕಟಗಳ ಸುಳಿಗೆ ಸಿಲುಕಿಕೊಂಡಿದ್ದವರು ಮತ್ತು ಪರಿಸ್ಥಿತಿಯ ಪ್ರಕೋಪದ ಪ್ರಯುಕ್ತ ಹೇಯವೃತ್ತಿಯನ್ನು ಅನುಸರಿಸಬೇಕಾಗಿ

ಬಂದು ಕಂಗೆಟ್ಟವರು, ಮಮತೆಯ ಮಾತೆಯ ಮಡಿಲನ್ನು ಅರಸಿ ಮಗುವು ಓಡಿ ಬರು ವಂತೆ, ಸ್ವಾಂತನಗಳಿಗಾಗಿ ಹಾಗೂ ಮಾರ್ಗದರ್ಶನಕ್ಕಾಗಿ ಗಾಂಧೀಜಿಯವರಲ್ಲಿಗೆ ಬರು ತ್ತಿದ್ದರು. ಪರ ರಾಷ್ಟ್ರಗಳಿಂದಲೂ ಸಹ ಹಲವು ಮಹಿಳೆಯರು ಬೌದ್ಧಿಕ ಚರ್ಚೆಗಳಿಗಾಗಿ ಅಥವಾ ಸಂದೇಹ ನಿವಾರಣೆಗಾಗಿ, ಅಥವಾ ಕುತೂಹಲ ತೃಪ್ತಿಗಾಗಿ ಗಾಂಧೀಜಿಯವ ರೊಂದಿಗೆ ಸಂಪರ್ಕವನ್ನು ಬೆಳಸಿಕೊಂಡಿದ್ದರು. ಈ ನಿರಂತರ ಸಂಪರ್ಕದ ಕಾರಣ, ಸ್ತ್ರೀ ಜಾತಿಯನ್ನು ಸರಿಯಾಗಿ ಅರ್ಥ ಮಾಡಿಕೊಳ್ಳುವುದು ಮತ್ತು ವಿಭಿನ್ನ ಹಂತಗಳಲ್ಲಿ ಹಾಗೂ ವಿಭಿನ್ನ ಪರಿಸ್ಥಿತಿಗಳಲ್ಲಿ ಸ್ತ್ರೀಯ ಸ್ವರೂಪವನ್ನು ತಿಳಿದುಕೊಳ್ಳುವುದು ವಸ್ತು ನಿಷ್ಠ ದೃಷ್ಟಿಯ ಗಾಂಧೀಜಿಯವರಿಗೆ ಸಾಧ್ಯವಾಯಿತು. ಆದ್ದರಿಂದ ಸ್ತ್ರೀಯ ಸಮಸ್ಯೆ ಗಳನ್ನು ಕುರಿತು ಅವರು ವಿಚಾರ ಮಾಡುತ್ತಿದ್ದ ರೀತಿ ಮತ್ತು ಈ ಸಮಸ್ಯೆಗಳನ್ನು ಪರಿಹರಿಸಲು ಹಾಗೂ ಜೀವನರಂಗದಲ್ಲಿ ಅವಳಿಗೆ ಇರಬೇಕಾಗಿದ್ದ ತಕ್ಕ ಸ್ಥಾನವನ್ನು ಪಡೆದುಕೊಡಲು ಅವರು ಅನುಸರಿಸಿದ ಕ್ರಮ ಅದ್ವಿತೀಯವಾಗಿದ್ದಿತು.

ಗಾಂಧೀಜಿಯವರಿಗೆ ಮಹಿಳೆಯ ಪ್ರತಿ ಅತ್ಯಂತ ಪೂಜನೀಯ ಭಾವವಿದ್ದಿತು, ಅವಳನ್ನು ಅವರು ಅತಿ ಪ್ರೀತ್ಯಾದರಗಳಿಂದ ಕಾಣುತ್ತಿದ್ದರು. ಅವರ ದೃಷ್ಟಿಯಲ್ಲಿ, ಮಹಿಳೆಯರು ಸ್ವಾರ್ಥತ್ಯಾಗದ ಸಾಕಾರ ಮೂರ್ತಿ, ಅಹಿಂಸೆಯ ಅವತಾರ, ಅಹಿಂಸೆ ಎಂದರೆ ಅಪರಿಮಿತ ಪ್ರೀತಿ–ಮಮತೆ, ಮತ್ತು ಪ್ರೀತಿ–ಮಮತೆ ಎಂದರೆ ಇನ್ನೊಬ್ಬರ ಒಳಿತಿಗಾಗಿ ಎಲ್ಲಾ ತರಹದ ಕಷ್ಟ-ಸಂಕಟಗಳನ್ನು ನಗುಮುಖದಿಂದ ಸ್ವಾಗತಿಸಿ, ಎದುರಿಸಿ ಅನುಭವಿಸುವ ಅಪಾರ ಶಕ್ತಿ–ಸಾಮರ್ಥ್ಯ. ಹೀಗೆ ಗಾಂಧೀಜಿಯವರು ಅಹಿಂಸೆ ಮತ್ತು ಪ್ರೇಮ ಎಂಬ ಪದಗಳಿಗೆ ಕೊಟ್ಟ ನೂತನ ವಿವರಣೆ. ಅವರು ಪರರಿಗಾಗಿ ಸಂಕ ಟಗಳನ್ನು ಸಹಿಸುವ ಈ ಅಪೂರ್ವ ಶಕ್ತಿ-ಸಾಮರ್ಥ್ಯವನ್ನು ಮಹಿಳೆಯಲ್ಲಿ ಕಂಡರು. ಅವರು ಮಗುವನ್ನು ತನ್ನ ಉದರದಲ್ಲಿ ಹೊತ್ತು, ಅಪಾರ ಯಾತನೆಗಳನ್ನು ಅನುಭವಿಸಿ ತಾಯಿಯಾಗಿ, ಆ ಕಂದನ ಒಳಿತಿಗಾಗಿ ತನ್ನ ಸುಖ-ಸಂತೋಷಗಳನ್ನೆಲ್ಲಾ ಬದಿಗಿಟ್ಟು, ಅದರ ಲಾಲನೆ-ಪಾಲನೆಯಲ್ಲಿ ಸ್ವರ್ಗ ಸುಖವನ್ನೇ ಕಾಣುವ, ಪರಮಾನಂದವನ್ನು ಅನು ಭವಿಸುವ ಮಾತೆಯಲ್ಲಿ ಈ ಶಕ್ತಿ-ಸಾಮರ್ಥ್ಯದ ಸಾಕಾರ ರೂಪವನ್ನು ನೋಡಿದರು.

ಈಡಿಲ್ಲದಂತಹ ಯಮಯಾತನೆಯಾದರೂ, ಈ ಸೃಷ್ಟಿಯ ಸಂತಸದಲ್ಲಿ ತನ್ನ ಮುದ್ದು ಮಗುವಿನ ನಿಷ್ಕಳಂಕ ಮುಖವನ್ನು ಕಂಡಂತೆ ಅವಳಿಗೆ ಈ ಯಾತನೆ ಮರೆತೂ ಹೋಗುತ್ತದೆ. ಆದ್ದರಿಂದ ಅವಳದು ದುರ್ಬಲ ಜಾತಿಯಲ್ಲ. ಗಾಂಧೀಜಿಯವರು 'ಅಬಲೆ' ಎಂಬ ಪದಕ್ಕೆ ಒಂದು ಹೊಸ ಅರ್ಥವನ್ನೇ ಕೊಟ್ಟರು. ಅವರ ಪ್ರಕಾರ, ಸ್ತ್ರೀಯು ಪರರನ್ನು ಹಿಂಸಿಸಿ, ನೋಯಿಸುವ ವಿಚಾರದಲ್ಲಿ ಅಬಲೆ, ಆದರೆ ಸ್ವಾರ್ಥ ತ್ಯಾಗ ಮಾಡುವುದರಲ್ಲಿ ಹಾಗೂ ಇತರರಿಗಾಗಿ ಸಂಕಟಗಳನ್ನು ಸಂತೋಷದಿಂದ ಸಹಿಸು ವುದರಲ್ಲಿ ಅತ್ಯಂತ ಬಲಶಾಲಿಯಾದವಳು. ಆದ್ದರಿಂದ ಗಾಂಧೀಜಿಯವರು ಮಾನವ ಕುಲದ ಎರಡು ಜಾತಿಗಳಲ್ಲಿ ಸ್ತ್ರೀ ಜಾತಿಯು ಅತ್ಯುತ್ತಮವಾದುದು, ಅದು ಉಜ್ವಲ

ವಾದುದು ಎಂಬುದಾಗಿ ಘೋಷಿಸಿದರು. ಮತ್ತು ಮಹಿಳೆಯು ಮಾನವಕುಲದ ಮಾತೆ, ಸೃಷ್ಟಿಕರ್ತೆ ಹಾಗೂ ಮೂಕ ಮುಂದಾಳು-ಪ್ರಮುಖ ಯಜಮಾನಿ ಎಂಬುದಾಗಿ ವರ್ಣಿಸಿದರು.

ಈ ಕಾರಣದಿಂದ ಪತಿಯಾದವನು ಪತ್ನಿಯ ಮೇಲೆ ಚಲಾಯಿಸುವ ಅಧಿಕಾರ ಅಸಾಧುವಾದುದು, ಅಸಮರ್ಥನೀಯವಾದುದು : ಪತ್ನಿಯು ಪತಿಯ ಲೈಂಗಿಕ ಲಾಲಸೆಗಳನ್ನು ತೃಪ್ತಿಪಡಿಸುವ ಸಾಧನ ಮಾತ್ರವಲ್ಲ, ಆದರೆ ಅವಳು ಸಮಾನವಾದ ಹಕ್ಕು-ಬಾಧ್ಯತೆಗಳನ್ನು ಹೊಂದಿರುವ ಮತ್ತು ಜೀವನ ಸಂಗ್ರಾಮದಲ್ಲಿ ಸರಿಸಮನಾಗಿ ಪಾಲ್ಗೊಳ್ಳುವ ನಿಜವಾದ ಬಾಳಸಂಗಾತಿಯಾಗಿದ್ದಾಳೆ ಎಂಬುದಾಗಿ ಗಾಂಧೀಜಿ ಒತ್ತಿ ಹೇಳಿದರು. ಪತಿ-ಪತ್ನಿಯರು ಪರಸ್ಪರ ಐಕ್ಯವಾಗಿ, ದ್ವಿಶರೀರವುಳ್ಳ ಒಂದೇ ಆತ್ಮವಾಗಿ ಬಾಳಬೇಕು : ಸುಖ-ಸಂತಸಯುಕ್ತ ವೈವಾಹಿಕ ಜೀವನದ ಗುಟ್ಟು ಅಡಗಿರುವುದು ಈ ತತ್ತ್ವದಲ್ಲೇ. ವಿಷಯಭೋಗ ಲಾಲಸೆಯನ್ನು ಸಂಪೂರ್ಣವಾಗಿ ನಾಶಪಡಿಸಿ, ಆತ್ಮ ಸಂಯಮವನ್ನು ಸಾಧಿಸುವುದೇ ಮಾನವ ಅಸ್ತಿತ್ವದ ನಿಜವಾದ ಧ್ಯೇಯ ಎಂಬುದು ಗಾಂಧೀಜಿಯವರ ಘೋಷಣೆ. ಆ ಗುರಿಗೆ ಅನುಗುಣವಾಗಿ ಅವರು ವಿವಾಹ ಎಂದರೆ ಶಿಸ್ತು-ಸಂಯಮಗಳ ಸಂಗಮ ಎಂಬುದಾಗಿ ನೂತನ ವ್ಯಾಖ್ಯೆಯೊಂದನ್ನು ನಿರೂಪಿಸಿದರು. ಒಂದು ಮದುವೆ ಆದರ್ಶ ವಿವಾಹವಾಗಬೇಕಾದರೆ ಅದರಲ್ಲಿ ಆಧ್ಯಾತ್ಮಿಕ ಪ್ರಗತಿ, ಸೇವೆ, ಕುಟುಂಬ ಕಲ್ಯಾಣದ ಪರಿಗಣನೆ, ಹಾಗೂ ಸಮಾಜ ಹಿತ, ಮತ್ತು ಪರಸ್ಪರ ಪ್ರೀತಿ ಎಂಬ ನಾಲ್ಕು ನಿಯಮಗಳಿರಬೇಕೆಂಬುದಾಗಿ ನಿಯಮಿಸಿದರು. ಪತಿ-ಪತ್ನಿಯರು ತಮ್ಮ ವೈವಾಹಿಕ ಜೀವನದಲ್ಲಿ ಲೈಂಗಿಕ ಲಾಲಸೆಗಳಿಗೆ ದಾಸರಾಗದೇ ಅತ್ಯಂತ ಮಧುರವಾಗಿರುವ ಆನಂದವನ್ನು ಅನುಭವಿಸಬಹುದು ಎಂಬುದನ್ನು ಅವರು ಸ್ಪಷ್ಟಪಡಿಸಿದರು. ಪತಿಯಾದವನು ಮಗುಬೇಕೆಂಬುದಾಗಿ ಇಚ್ಛಿಸಿದಾಗ ಮಾತ್ರ ತನ್ನ ಪತ್ನಿಯ ಸಂಗವನ್ನು ಬಯಸಬೇಕು ಎಂಬುದಾಗಿ ಎಚ್ಚರಿಸಿದರು. ಒಟ್ಟಿನಲ್ಲಿ, ಅವರು ಲೈಂಗಿಕ ಸಮಾನತೆಯನ್ನು ಎತ್ತಿ ಹಿಡಿದರು, ಅದಕ್ಕಿಂತ ಹೆಚ್ಚಾಗಿ, ಎಲ್ಲರು ಲೈಂಗಿಕ ಜೀವನವನ್ನು ಉತ್ತಮೀಕರಿಸಬೇಕೆಂದು ಬಯಸಿದರು.

ಆದರೆ ವಸ್ತುನಿಷ್ಠ ಸಾಮಾಜಿಕ ಚಿಂತಕರಾಗಿದ್ದ ಗಾಂಧೀಜಿಯವರು ಲೈಂಗಿಕ ಸಮಾನತೆ ಎಂದರೆ ಸ್ತ್ರೀ ಹಾಗೂ ಪುರುಷರು ಎಲ್ಲಾ ಅಂಶಗಳಲ್ಲಿ ಸಮಾನರು, ಆದ್ದರಿಂದ ಅವರು ಒಂದೇ ಬಗೆಯಾದ ವೃತ್ತಿಯನ್ನು ಕೈಗೊಳ್ಳಬಹುದು ಎಂದರ್ಥವಲ್ಲ ಎಂಬುದನ್ನು ಸ್ಪಷ್ಟವಾಗಿ ವಿವರಿಸಿದರು. ಅವರು ಸ್ತ್ರೀ-ಪುರುಷರಿಗಿರುವ ವಿಶಿಷ್ಟ ಭೇದಗಳನ್ನು ಎತ್ತಿತೋರಿ, ಮಹಿಳೆಯು ಗೃಹದ ರಾಣಿಯಾಗಿ ಕರ್ತವ್ಯಗಳನ್ನು ನಿರ್ವಹಿಸಿದಾಗ, ಅವಳ ವ್ಯಕ್ತಿತ್ವದ ಉತ್ತಮ ಭಾಗ ಸ್ಪಷ್ಟವಾಗಿ ಬೆಳಕಿಗೆ ಬರುತ್ತದೆ : ಅವಳ ವ್ಯಕ್ತಿತ್ವದ ಅತ್ಯುತ್ತಮ ಭಾಗವು ಬೆಳಗಿ, ಇತರರಿಗೆ ಬೆಳಕಾಗುವುದು ಸಾಧ್ಯವಾಗುವುದು ಅವಳು ಮನೆಯ ಒಡತಿಯಾಗಿ ಕಾರ್ಯಾಚರಣೆ ಮಾಡಿದಾಗ ಮಾತ್ರ ಎಂಬುದಾಗಿ ಒತ್ತಿ ಹೇಳಿದರು. ಒಟ್ಟಿನಲ್ಲಿ, ಅವಳು ಮಾತೆ,

ಹೀಗೆಂದ ಮಾತ್ರಕ್ಕೆ ಅವಳನ್ನು ಗೃಹದ ನಾಲ್ಕು ಗೋಡೆಗಳ ನಡುವೆ ಕೈದಿಯಾಗಿಡಬೇಕೆಂಬ ಅರ್ಥವಲ್ಲ, ಅವಳಿಗೇ ಸಹಜವಾಗಿರುವ ತಾಯಿತನ, ಗೃಹಕೃತ್ಯ ಕಲೆ ಹಾಗೂ ಶಾಂತಿಕಲಾ ಕ್ಷೇತ್ರಗಳಲ್ಲಿ ಅವಳ ವ್ಯಕ್ತಿತ್ವವು ಸರ್ವತೋಮುಖವಾದ ರೀತಿಯಲ್ಲಿ ಅರಳುವುದಕ್ಕೆ ಬೇಕಾಗಿರುವ ಆದ್ಯಂತ ಹಕ್ಕು ಹಾಗೂ ಅವಕಾಶಗಳನ್ನು ಅವಳಿಗೆ ಒದಗಿಸಿಕೊಡಬೇಕೆಂಬುದು ಮತ್ತು ಅವಳಲ್ಲಿ ಅಡಗಿಕೊಂಡಿರುವ ಶಕ್ತಿ-ಸಾಮರ್ಥ್ಯಗಳನ್ನು ಹೊರಗೆಳೆದು, ಪೂರ್ಣವಾಗಿ ಬೆಳಸಿ. ಪ್ರಕಾಶಿಸುವಂತೆ ಮಾಡುವಂತಹ ಶಿಕ್ಷಣವನ್ನು ಅವಳಿಗೆ ಒದಗಿಸಿಕೊಡಬೇಕಾದುದು ಸಮಾಜದ ಪ್ರಥಮ ಕರ್ತವ್ಯ ಎಂಬುದು ಗಾಂಧೀಜಿಯವರ ಅಭಿಪ್ರಾಯ.

**ಗಾಂಧೀಜಿ ಮತ್ತು ಮಹಿಳೆಯ ಸಮಸ್ಯೆಗಳು:--**

ಗಾಂಧೀಜಿಯವರಿಗೆ ಮಹಿಳೆ ಮತ್ತು ಅವಳ ಕಲ್ಯಾಣದ ಬಗ್ಗೆ ಎಷ್ಟು ಕಳಕಳಿ ಇದ್ದಿತ್ತೆಂದರೆ, ಅವರು ಅವಳ ಸ್ಥಾನ ಮಾನಗಳಲ್ಲಿ ಅವನತಿ ಉಂಟಾಗುವುದಕ್ಕೆ ಕಾರಣವಾಗಿದ್ದಂತಹ ಶಿಶುವಿವಾಹ, ವರದಕ್ಷಿಣೆ, ವಿಚ್ಛೇದ, ಸತಿಪದ್ಧತಿ, ವೇಶ್ಯಾವೃತ್ತಿ ಮುಂತಾದ ಸಮಸ್ಯೆಗಳನ್ನು ಕುರಿತು ದೀರ್ಘವಾಗಿ, ಆಳವಾಗಿ ವಿಚಾರ ಮಾಡಿ ತಕ್ಕ ಪರಿಹಾರಗಳನ್ನು ಸೂಚಿಸಲು ಪ್ರಾಮಾಣಿಕವಾಗಿ ಪ್ರಯತ್ನಿಸಿದರು. ಅವರು ಶಿಶುವಿವಾಹವು ಮಾರಕವಾದುದು. ಅನೀತಿಯುತವಾದುದು ಎಂಬುದಾಗಿ ವಾದಿಸಿ, ಅದು ವಿವಾಹವೇ ಅಲ್ಲ ಎಂಬುದಾಗಿ ತೀರ್ಮಾನಿಸಿದರು. ವಧುಶುಲ್ಕದ ದುರಾಸೆಗಾಗಿ ಪುಟ್ಟ ಬಾಲೆಯರನ್ನು ಜೀವನದ ಸಂಧ್ಯಾ ಕಾಲದಲ್ಲಿದ್ದ ವೃದ್ಧರಿಗೆ ವಿವಾಹ ಮಾಡಿಕೊಡುತ್ತಿದ್ದ ಜನ್ಮದಾತೃಗಳನ್ನು ಅವರು ಅತಿ ಕಟುವಾಗಿ ಟೀಕಿಸುತ್ತಿದ್ದರು. ಹಾಗೆಯೇ ಅವರು ಸಮಾಜದ ಪ್ರಗತಿ ಪಥದಲ್ಲಿ ಪ್ರತಿಬಂಧಕವಾಗಿರುವ ಹಾಗೂ ಸಮಾಜಕ್ಕೆ ಕಳಂಕ ಪ್ರಾಯವಾಗಿರುವ ವರದಕ್ಷಿಣ ಪದ್ಧತಿಯನ್ನು ಪೋಷಿಸಿಕೊಂಡು ಬಂದು ಮದುವೆಯಾಗಲು ಹುಡುಗಿಯರ ತಂದೆ-ತಾಯಿಯರಿಂದ ಅಪಾರ ಹಣವನ್ನು ವಸೂಲು ಮಾಡಿಕೊಂಡು, ಸ್ವಾಭಿಮಾನವನ್ನು ಕಳೆದುಕೊಂಡು, ತಮ್ಮನ್ನೇ ಮಾರಿಕೊಳ್ಳುತ್ತಿದ್ದ ಯುವಕರನ್ನು ತರಾಟೆಗೆ ತೆಗೆದುಕೊಂಡರು.

ವಾಸ್ತವವಾದಿಯಾಗಿದ್ದ ಗಾಂಧೀಜಿಯವರು ವೈವಾಹಿಕ ಜೀವನವು ಅಸಹನೀಯವಾಗಿದ್ದಾಗ ಮಾತ್ರ ವಿಚ್ಛೇದಕ್ಕೆ ಅವಕಾಶವಿರಬೇಕೆಂಬುದಾಗಿ ಹೇಳಿದರು. ಆದರೆ ನಿಜವಾದ ವೈವಾಹಿಕ ಜೀವನದಲ್ಲಿ ವಿಚ್ಛೇದ ಎಂಬುದಕ್ಕೆ ಸ್ಥಾನವೇ ಇಲ್ಲ ಎಂಬುದು ಅವರ ಮತ. ಸಮಾಜದಲ್ಲಿ ವಿಧವೆಯರನ್ನು ಕಾಣುತ್ತಿದ್ದ ರೀತಿ, ಅವರು ಅನುಭವಿಸುತ್ತಿದ್ದ ವೇದನೆ ಹಾಗೂ ಅಪಮಾನ ಗಾಂಧೀಜಿಯವರನ್ನು ಕಣ್ಣೀರು ಮಿಡಿಯುವಂತೆ ಮಾಡಿತು. ಅವರಿಗಾಗಿ ಅವರ ಹೃದಯ ಹಾರಗುತ್ತಿದ್ದಿತು. ವಿಧವೆಯರು ಕಣ್ಣೀರಿನಲ್ಲಿ ಕೈತೊಳೆಯುವಂತೆ ಮಾಡಿದ ಪದ್ಧತಿಗಳು ಅವರ ತೀಕ್ಷ್ಣ ಟೀಕೆಗಳಿಗೆ ಗುರಿಯಾದುವು. ಬಲವಾದ ಸಂಕಲ್ಪ ಶಕ್ತಿಯಿಂದ ಹಾಗೂ ಸ್ವ ಇಚ್ಛೆಯಿಂದ ವಿಧವೆಯಾಗಿ ಉಳಿದು ತ್ಯಾಗ



ಜೀವನವನ್ನು ನಡೆಸಲು ಬಯಸಿದ ಮಹಿಳೆಗೆ ಗಾಂಧೀಜಿಯವರು ಸಮಾಜ ಸೇವಾ ಕಾರ್ಯಕ್ಕೆ ತನ್ನ ಜೀವನವನ್ನು ಮುಡಿಪಾಗಿಟ್ಟು, ಅವಳು ಸಾರ್ಥಕತೆಯನ್ನು ಪಡೆಯು ವಂತೆ ಸಲಹೆ ಮಾಡಿದರು. ಆದರೆ ಪತಿಯನ್ನು ಕಳೆದುಕೊಂಡು ಮಹಿಳೆಯು ಇಚ್ಛೆ ಇಲ್ಲದಿದ್ದರೂ ವಿಧವೆಯಾಗಿಯೇ ತನ್ನ ಕಾಲಯಾಪನೆ ಮಾಡುವಂತೆ ಬಲಾತ್ಕರಿಸಿ, ಅವಳ ಮೇಲೆ ಅಸಹನೀಯವಾದ ನಿರ್ಬಂಧಗಳನ್ನು ಹೇರುವ ಪದ್ಧತಿಯನ್ನು ಅವರು ಬಲವಾಗಿ ಖಂಡಿಸಿದರು–ಮತ್ತು ತನ್ನ ಮೇಲೆ ಹತೋಟಿಯಿಟ್ಟುಕೊಳ್ಳಲು ಅಸಮರ್ಥ ಳಾದ ಮಹಿಳೆಯು ಪುನಃ ವಿವಾಹವಾಗಲು ಬಯಸಿದರೆ, ಅವಳಿಗೆ ಮರುಮದುವೆ ಮಾಡಿಕೊಳ್ಳಲು ವಿಧುರನಷ್ಟೇ ಹಕ್ಕಿದೆ ಎಂಬುದಾಗಿ ಒತ್ತಿ ಹೇಳಿದರು. ಇದು ನಿಜ ವಾಗಿ ವಿಶಾಲವಾದ ಗತಿಶೀಲ ದೃಷ್ಟಿ. ಪ್ರಾಪ್ತವಯಸ್ಕಳಾದ ವಿಧವೆಗಾಗಿ ಇಷ್ಟೊಂದು ಮರುಗಿದ ಅವರಿಗೆ ಏನೂ ಅರಿಯದ, ಮುಗ್ಧ, ನಿಷ್ಕಳಂಕ ಶಿಶುವಿಧವೆಯರನ್ನು ಕಂಡಾಗ ಆಗುತ್ತಿದ್ದ ಸಂಕಟ ವರ್ಣನಾತೀತ : ಅವರ ಕಣ್ಣುಗಳಿಂದ ಅಶ್ರು ಪ್ರವಾಹ ಮಾತ್ರವಲ್ಲ, ರಕ್ತವೇ ಬರುತ್ತಿದ್ದಿತು. ಯಾವ ತಪ್ಪು ಮಾಡದೆ ಈ ಶಿಕ್ಷೆಗೆ ಗುರಿ ಯಾಗಿದ್ದ ಈ ಹಸುಳೆಗಳನ್ನು ಕಂಡಾಗ ಅವರಿಗೆ ಆಗುತ್ತಿದ್ದ ನೋವು ಅಪಾರ ಮತ್ತು ಅವರನ್ನು ಈ ಕಷ್ಟಕ್ಕೆ ಗುರಿಪಡಿಸಿದ ಪದ್ಧತಿಯ ಮೇಲೆ ಅವರಿಗೆ ಉಂಟಾಗುತ್ತಿದ್ದ ಕೋಪ ಅಷ್ಟಿಷ್ಟಲ್ಲ. ಅವರು ಈ ಹಸುಳೆಯರು ವಿವಾಹಿತರು ಎಂಬುದನ್ನು ಒಪ್ಪಲೇ ಇಲ್ಲ. ಅವರದು ವಿವಾಹವೇ ಅಲ್ಲ ಎಂಬುದಾಗಿ ವಾದಿಸಿದರು. ಅವರು ಅಕ್ಷರಗಳನ್ನು ನೂತನವಾಗಿ ಪೋಣಿಸಿ, ಈ ಬಾಲವಿಧವೆಯರನ್ನು ಕನ್ನಿಕಾ ವಿಧವೆಯರು ಎಂಬುದಾಗಿ ನೂತನ ಹೆಸರನ್ನಿಟ್ಟು ಕರೆದರು. ಈ ಅನಿಷ್ಟಕ್ಕೆ ಅವರು ಸೂಚಿಸಿದ ಪರಿಹಾರ ಶಿಶು ವಿವಾಹ ಪದ್ಧತಿಯ ಆದ್ಯಂತ ನಿರ್ಮೂಲನೆ ಮತ್ತು ಈ ಕನ್ನಿಕಾ ವಿಧವೆಯರ ಮದುವೆ.

ಗಾಂಧೀಜಿಯವರು ಮೃತ್ಯುವಶನಾದ ಪತಿಯ ಮೃತಶರೀರದೊಡನೆ ಪತ್ನಿ ಯನ್ನು ಜೀವಂತವಾಗಿ ಸುಡುವ ಅತ್ಯಂತ ಅಮಾನುಷ ರೂಢಿಯಾಗಿದ್ದ ಸತೀಸಹಗಮನ ಪದ್ಧತಿ ಮತ್ತು ಪರಿಶುದ್ಧತೆಯ ಪರಾಕಾಷ್ಠೆಯಾಗಿದ್ದ ನಿಜವಾದ ಸತೀತ್ವಕ್ಕಿರುವ ಭೇದವನ್ನು ಸ್ಪಷ್ಟಪಡಿಸಿದರು. ಅವರು ರಾಕ್ಷಸೀ ಪದ್ಧತಿಯಾಗಿದ್ದ ಸತೀಸಹಗಮನ ವನ್ನು ಕಟುವಾಗಿ ಟೀಕಿಸಿದರು, ಸತೀತ್ವವನ್ನು ಎತ್ತಿ ಹಿಡಿಯಲು ಇದರಲ್ಲಿ ಅವರ ಸ್ವಂತಿಕೆ ಸ್ಪಷ್ಟವಾಗುತ್ತದೆ. • ಅವರು ವೇಶ್ಯಾವೃತ್ತಿ ಮತ್ತು ದೇವದಾಸಿ ಪದ್ಧತಿಯ ವಿರುದ್ಧ ಒಂದು ಧರ್ಮಯುದ್ಧವನ್ನೇ ಹೂಡಿದರು. ಪವಿತ್ರ ಮತಧರ್ಮದ ಮುಸುಕಿನಲ್ಲಿ ಮುಗ್ಧ ಹೆಣ್ಣು ಮಕ್ಕಳನ್ನು ವಿನಾಶಕರ ವೇಶ್ಯಾವೃತ್ತಿಯ ಮಡುವಿಗೆ ತಳ್ಳುವ ದುಷ್ಟ ಪದ್ಧತಿಯನ್ನು ಕಂಡರೆ ಅವರಿಗೆ ಅತ್ಯಂತ ಜುಗುಪ್ಸೆ ಉಂಟಾಗು ತ್ತಿದ್ದಿತು. ಅದನ್ನು ಅತಿ ಕಠಿಣವಾಗಿದ್ದ ಪದಗಳಿಂದ ಖಂಡಿಸಿದರು. ಸಮಾಜವು ತಾನು ಮಾಡಿದ ಈ ಗುರುತರ ಅಪರಾಧಕ್ಕಾಗಿ ಪಶ್ಚಾತ್ತಾಪ ಪಟ್ಟು, ಬಲಿಪಶು ಗಳಾಗಿದ್ದ ಈ ಮುಗ್ಧ ಮಹಿಳೆಯರಿಗೆ ಗೌರವಯುತ ಜೀವನೋಪಾಯವನ್ನು ಕಲ್ಪಿಸಿ

ಕೊಟ್ಟು, ಅವರಿಗೆ ಯಾವ ಕಳಂಕದ ಮಸಿಯನ್ನೂ ಬಳಿಯದೆ, ಅವರನ್ನು ಪ್ರೀತಿ–ವಿಶ್ವಾಸಗಳಿಂದ ಕಂಡು, ಅವರಲ್ಲಿ ಧೈರ್ಯ ಮತ್ತು ಆತ್ಮ ವಿಶ್ವಾಸವನ್ನು ಮೂಡಿಸಬೇಕು ಎಂಬುದಾಗಿ ಒತ್ತಿ ಹೇಳಿದರು. ಅವರು ಪರ್ದಾಪದ್ಧತಿಯ ಮೇಲೆ ದಾಳಿಯನ್ನೇ ನಡೆಸಿ, ನಿಜವಾದ ಪರ್ದಾ ಎಂದರೆ ಹೃದಯವನ್ನು ಪರಿಶುದ್ಧ ಗೊಳಿಸುವುದೇ ಹೊರತು, ಅವಕುಂಠನವನ್ನು ಧರಿಸಿಕೊಂಡಿದ್ದರೂ ಕಾಮಾಸಕ್ತ ವಿಚಾರಗಳನ್ನು ಕಲ್ಪಿಸಿ ಬೆಳಸಿಕೊಳ್ಳುವುದಲ್ಲ ಎಂಬುದಾಗಿ ಸ್ಪಷ್ಟವಾಗಿ ವಿವರಿಸಿದರು.

ಗಾಂಧೀಜಿಯವರು ಅಪಹೃತ ಮಹಿಳೆ, ಸ್ತ್ರೀಯನ್ನು ಅತಿ ಅಪಮಾನಕರವಾಗಿದ್ದ ರೀತಿಯಲ್ಲಿ ಪ್ರದರ್ಶಿಸಿ, ವರ್ಣಿಸಿ, ಅಗೌರವಿಸುತ್ತಿದ್ದ ಅಶ್ಲೀಲ ಜಾಹೀರಾತು ಹಾಗೂ ಹೊಲಸು ಸಾಹಿತ್ಯ, ಮತ್ತು ಹೆಣ್ಣು ಮಕ್ಕಳನ್ನು ಕೀಟಲೆ ಮಾಡಿ ಕಿರುಕುಳ ಕೊಡುವುದು ಮುಂತಾದ ಅಲಕ್ಷಿಸಲಾಗಿದ್ದ ಸಮಸ್ಯೆಗಳನ್ನು ಸಹ ಕುರಿತು ವಿಚಾರ ಮಾಡಿದರು ಎಂಬುದು ಗಮನಾರ್ಹವಾಗಿರುವ ವಿಷಯ. ಅನ್ಯಾಯವಾಗಿ ಅತ್ಯಾಚಾರಕ್ಕೆ ಒಳಗಾಗಿದ್ದ ಏನೂ ಅರಿಯದ ಮಹಿಳೆಯನ್ನು ಸಮಾಜವು ಪುನಃ ಸ್ವೀಕರಿಸಿ, ಅವಳಿಗೆ ಪ್ರೀತ್ಯಾದರಗಳನ್ನು ತೋರಿ, ಅವಳಿಗೆ ವಿವಾಹವನ್ನು ಮಾಡಬೇಕು ಮತ್ತು ನ್ಯಾಯ ಸಮ್ಮತವಾದ ವಿವಾಹ ವಿಧಿಯ ಪ್ರಕಾರ ಜನಿಸಿದ ಮಕ್ಕಳನ್ನು ಕಾಣುವ ತೆರದಲ್ಲೇ ಅವಳಿಗೆ ಹುಟ್ಟಿದ ಮಕ್ಕಳನ್ನು ಕಾಣಬೇಕು ಎಂಬುದಾಗಿ ವಿಧಿಸಿದರು. ಇದು ನಿಜಕ್ಕೂ ಅತ್ಯಂತ ಮಾನವೀಯವಾಗಿರುವ ಪರಿಹಾರ ಮತ್ತು ಈ ದೃಷ್ಟಿ ಸ್ವಇಚ್ಛೆ ಇಲ್ಲದೆ ಬಲಾತ್ಕಾರದಿಂದ ಅತ್ಯಾಚಾರಕ್ಕೆ ಗುರಿಯಾದ ಸನ್ಯಾಸಿನಿಯನ್ನು ಸಹಾನುಭೂತಿಯಿಂದ ಕಾಣಬೇಕೆಂದು ವಿಧಿಸಿದ ಉದಾರ ಜೈನ ನಿಯಮಾವಳಿಯನ್ನು ಜ್ಞಾಪಕಕ್ಕೆ ತರುತ್ತದೆ.

ಅವರು ವ್ಯಕ್ತಿಗಳಲ್ಲಿ ಅತಿ ಕೀಳುತರಹದ ಲೈಂಗಿಕ ಹಾಗೂ ಇತರ ಹೀನ ತೆರದ ಕಾಮೋದ್ರೇಕಗಳನ್ನು ಉಂಟುಮಾಡುವ ಉದ್ದೇಶದಿಂದ ಸ್ತ್ರೀಯನ್ನು ಅತ್ಯಂತ ಅಪಮಾನಕರ ಸಾಧನವಾಗಿ ಬಳಸುತ್ತಿದ್ದ ಅಶ್ಲೀಲ ಜಾಹೀರಾತು, ಪ್ರಕಟಣಾ ಚೀಟಿ ಹಾಗೂ ಸಾಹಿತ್ಯ ಕೃತಿಗಳನ್ನು ಅತ್ಯಂತ ಕಟುವಾಗಿ ಖಂಡಿಸಿದರು. ಸ್ತ್ರೀಯರೇ ಈ ಅನಿಷ್ಟದ ವಿರುದ್ಧ ಕತ್ತಿ ಹಿರಿದು ನಿಂತು ಹೋರಾಡಬೇಕು, ಅದೇ ಈ ಅತ್ಯಂತ ಅಪಾಯಕಾರಿ ಅನಿಷ್ಟಕ್ಕೆ ತಕ್ಕ ಮದ್ದು ಎಂಬುದಾಗಿ ಸಲಹೆ ಮಾಡಿದರು. ಹುಡುಗಿಯರನ್ನು ಚುಡಾಯಿಸಿ ಗೋಳು ಹೊಯ್ದುಕೊಳ್ಳುತ್ತಿದ್ದ ಯುವಕರನ್ನು ತಮ್ಮ ಅತಿ ತೀಕ್ಷ್ಣವಾಗಿದ್ದ ವಾಗ್ದಂಡನೆಗೆ ತುತ್ತಾಗಿಸಿ, ಈ ತೆರನಾಗಿದ್ದ ಅಪರಾಧಿಗಳ ಹೆಸರನ್ನೆಲ್ಲಾ ಪತ್ರಿಕೆಗಳಲ್ಲಿ ದಪ್ಪಕ್ಷರಗಳಲ್ಲಿ ಪ್ರಕಟಿಸಬೇಕು ಮತ್ತು ಅಧ್ಯಾಪಕರು ಹಾಗೂ ಜನ್ಮದಾತೃಗಳು ಈ ತರಹ ಅಡ್ಡದಾರಿ ಹಿಡಿಯಲು ಉದ್ಯುಕ್ತರಾಗುತ್ತಿರುವ ತರುಣರಿಗೆ ಸಮಯೋಚಿತ ಬುದ್ಧಿವಾದಗಳನ್ನು ಹೇಳಿ ಸರಿಯಾದ ಮಾರ್ಗಕ್ಕೆ ತರಬೇಕು ಎಂಬುದಾಗಿ ಸಲಹೆ ನೀಡಿದರು.

ಇಷ್ಟಾದರೂ, ಗಾಂಧೀಜಿಯವರು ಸಮಾಜದಲ್ಲಿ ತಾಂಡವವಾಡುತ್ತಿದ್ದ ಮಹಿಳೆಗೆ ಸಂಬಂಧಿಸಿದ ಸಮಸ್ಯೆಗಳಿಗೆ ಅವಳೂ ಸ್ವಲ್ಪ ಮಟ್ಟಿಗೆ ಜವಾಬ್ದಾರಳು ಎಂಬುದನ್ನು ಸ್ಪಷ್ಟವಾಗಿ ಎತ್ತಿ ತೋರಲು ಹಿಂಜರಿಯಲಿಲ್ಲ. ಅವರದು ವಸ್ತುನಿಷ್ಠ ದೃಷ್ಟಿ, ಪಕ್ಷಪಾತ ರಹಿತವಾದ ವಿಚಾರ ಸರಣಿಯಲ್ಲವೇ ! ಕೃತಕವಾಗಿದ್ದ ಆಧುನಿಕತೆಗೆ ಮತ್ತು ತಿರುಳಿಲ್ಲದ ನವನಾಗರಿಕತೆಯ ಥಳಥಳಿಕೆಗೆ ಮನಸೋತು ಅತ್ಯಂತ ಕೀಳು ತೆರದಲ್ಲಿ ಪುರುಷಜಾತಿಯನ್ನು ಆಕರ್ಷಿಸುವ ಉದ್ದೇಶದಿಂದ ಅಶ್ಲೀಲವಾಗಿ ಉಡುಪನ್ನು ಧರಿಸಿ, ಅತ್ಯಂತ ಹೀನವಾದ ರೀತಿಯಲ್ಲಿ ವರ್ತಿಸುವ ಮಹಿಳೆಯನ್ನು ಅವರು ತಮ್ಮ ಅತಿ ತೀಕ್ಷ್ಣ ವಿಮರ್ಶೆಗೆ ಒಳಪಡಿಸಲು ಹಿಂಜರಿಯುತ್ತಿರಲಿಲ್ಲ. ಆಧುನಿಕತೆಯ ಹೆಸರಿನಲ್ಲಿ ತನಗೆ ಸಹಜವಾಗಿರುವ ಅಮೂಲ್ಯ ಆಭರಣದಂತಿರುವ ಗಾಂಭೀರ್ಯ, ಲಜ್ಜೆ, ನಯ–ವಿನಯ ಹಾಗೂ ಪರಿಶುದ್ಧತೆಯನ್ನು ಕಿತ್ತೊಗೆದು, ತನ್ನ ಭವ್ಯ ಸಂಸ್ಕೃತಿಯ ಅತ್ಯುತ್ತಮ ಲಕ್ಷಣಗಳನ್ನು ಮೈಗೂಡಿಸಿಕೊಂಡು ಧ್ರುವತಾರೆಯಂತೆ ಬೆಳಗದೆ, ಅಪಮಾನಕರ ಚಿಹ್ನೆಯಾಗಿ ಬಾಳುವ ಮಹಿಳೆಯನ್ನು ಕಂಡರೆ ಅವರಿಗೆ ಬರುತ್ತಿದ್ದುದು ಕೆಂಡದಂತಹ ಕೋಪ. ಅವಳು ಎಲ್ಲರ ಗೌರವಾದರಗಳಿಗೆ ಪಾತ್ರಳಾಗುವ ರೀತಿಯಲ್ಲಿ ಉಡುಪನ್ನು ಧರಿಸಬೇಕು ಅಲಂಕರಿಸಿಕೊಳ್ಳಬೇಕು ಹಾಗೂ ವರ್ತಿಸಬೇಕು ಮತ್ತು ಪವಿತ್ರಮಯ ಭಾರತೀಯ ಸ್ತ್ರೀತ್ವದ ಪ್ರತಿಬಿಂಬವಾಗಬೇಕು, ಚಿನ್ನ–ಬೆಳ್ಳಿ ಆಭರಣಗಳನ್ನು ಹೇಗಾದರೂ ಪಡೆದು ಧರಿಸಿಕೊಳ್ಳಬೇಕೆಂಬ ಅತ್ಯಾಶೆಯನ್ನೂ ಸಹ ಬಿಡಬೇಕೆಂದರು. ಇದರಿಂದ ಅವರು ಮಹಿಳೆಯನ್ನೂ ಬಿಡಲಿಲ್ಲ ; ಅವಳಿಗೆ ಅವರ ಪಕ್ಷಪಾತರಹಿತವಾದ್ದೂ ವೈಚಾರಿಕ ಖಡ್ಗ ಪ್ರಹಾರದಿಂದ ತಪ್ಪಿಸಿ ಕೊಳ್ಳಲು ಸಾಧ್ಯ ವಾಗಲಿಲ್ಲ ; ಅವರು ತಮ್ಮ ವಸ್ತುನಿಷ್ಠ ವಿಚಾರ ದೀಪ್ತಿಯಲ್ಲಿ ಅವಳ ದೋಷಗಳನ್ನು ಕಂಡು, ಎತ್ತಿತೋರಿ, ತಿದ್ದಲು ಶ್ರಮಿಸಿದರು ಎಂಬುದು ಸ್ಪಷ್ಟವಾಗುತ್ತದೆ.

ಆದರೂ ಗಾಂಧೀಜಿಯವರು ಮಹಿಳೆಯ ವಿಚಾರದಲ್ಲಿ ಸ್ವಲ್ಪ ಪಕ್ಷಪಾತವನ್ನೇ ತೋರುತ್ತಿದ್ದರು ಎಂಬುದು ನಿಜ. ಇದಕ್ಕೆ ಕಾರಣ ಅವಳು ಸ್ತ್ರೀ ಎಂಬುದು ಮಾತ್ರ ವಲ್ಲ. ಆದರೆ ಅವಳು ಮೊದಲಿನಿಂದಲೂ ಸಂಕಟ ಸಹಿಸುತ್ತಿದ್ದ ಸಮುದಾಯದವಳು ಎಂಬ ಕಾರಣದಿಂದ ಅವಳ ಬಗ್ಗೆ ಅವರಿಗೆ ಅತೀವ ಅನುಕಂಪ ಹಾಗೂ ಅನುರಾಗ ವಿದ್ದಿತು. ಮೊಟ್ಟಮೊದಲು ಮಹಿಳೆಯಲ್ಲಿ ಅಡಗಿರುವ ಶಕ್ತಿ–ಸಾಮರ್ಥ್ಯಗಳನ್ನು ಬಹಿರಂಗಪಡಿಸಿ, ಅವಳು ಅಹಿಂಸಾತ್ಮಕಸಮರದಲ್ಲಿ ಭಾಗವಹಿಸಲು ಸರ್ವ ವಿಧದಲ್ಲೂ ಅರ್ಹಳು ಎಂಬುದಾಗಿ ಘೋಷಿಸಿವರು. ಸ್ತ್ರೀಯ ನಿಜವಾದ ಸ್ವಾತಂತ್ರ್ಯ ಹಾಗೂ ಅವಳ ಸ್ಥಾನಮಾನಗಳ ಸುಧಾರಣೆಯು ರಾಜಕೀಯ ಸ್ವಾತಂತ್ರ್ಯಕ್ಕೆ ಮುನ್ನಣೆಯಾಗ ಬೇಕು ಎಂಬುದು ಅವರ ದೃಢ ಅಭಿಪ್ರಾಯವಾಗಿದ್ದಿತು. ಮಹಿಳೆ ಮತ್ತು ಅವಳ ಕಲ್ಯಾಣವು ಅವರ ಸಮಗ್ರ ಜೀವನ ದೃಷ್ಟಿಯ ಅವಿಭಾಜ್ಯ ಅಂಗವಾಗಿದ್ದಿತು. ಆದ್ದರಿಂದ ಸ್ತ್ರೀಯ ಸ್ಥಾನಮಾನ ಉತ್ತಮವಾಗದೇ, ಸಮಾಜದ ಪ್ರಗತಿಯನ್ನು ಸಾಧಿಸುವುದು ಅಸಾಧ್ಯ

ಎಂಬುದು ಅವರ ಬಲವಾದ ನಂಬಿಕೆಯಾಗಿದ್ದಿತು. ಆದರೂ ಅವರು ಅಸ್ಪೃಶ್ಯತಾ ನಿವಾರಣೆಗಾಗಿ ಕೈಗೊಂಡಂತೆ, ಮಹಿಳೆಗಾಗಿ ಒಂದು ಚಳವಳಿಯನ್ನು ಆರಂಭಿಸಲಿಲ್ಲ, ಅಥವಾ ಅವಳ ಹಿತಸಾಧನೆಗಾಗಿ ಒಂದು ಸುವ್ಯವಸ್ಥಿತ ಸಂಸ್ಥೆಯನ್ನು ಸ್ಥಾಪಿಸಲಿಲ್ಲ. ಅವಳ ವಿಮೋಚನೆಗೆ, ಉದ್ಧಾರಕ್ಕೆ ಅವರು ತಮ್ಮದೇ ಆಗಿದ್ದ ಕ್ರಮವೊಂದನ್ನು ಅನುಸರಿಸಿದರು. ಅವರು ಮಹಿಳೆಯರನ್ನು ಆತ್ಮೀಯವಾಗಿ ಕಂಡು, ಹತ್ತಿರ ಕರೆದು, ಅವರಲ್ಲಿ ಉತ್ಸಾಹವನ್ನು ತುಂಬುತ್ತಿದ್ದರು. ಒಂದು ಆದರ್ಶವನ್ನು ಅವರ ಮುಂದಿಟ್ಟು ಸ್ಫೂರ್ತಿಯನ್ನು ನೀಡುತ್ತಿದ್ದರು, ಅವರಿಗೆ ಗುರುತರವಾಗಿದ್ದ ಕರ್ತವ್ಯಗಳನ್ನು ವಹಿಸಿಕೊಡುತ್ತಿದ್ದರು ಮತ್ತು ತಮ್ಮ ಕಾಲುಗಳ ಮೇಲೆ ನಿಲ್ಲುವಂತೆ ಹಾಗೂ ಆತ್ಮವಿಶ್ವಾಸದಿಂದ ಮುಂದುವರಿದು ಸಮಾಜದಲ್ಲಿ ತಮಗೆ ನ್ಯಾಯವಾಗಿ ಇರಬೇಕಾಗಿದ್ದ ಸ್ಥಾನವನ್ನು ತಾವೇ ಕಂಡುಕೊಂಡು ಅಲಂಕರಿಸುವಂತೆ ಪ್ರೋತ್ಸಾಹಿಸುತ್ತಿದ್ದರು. ಮಹಿಳೆಯರು ತಮ್ಮಲ್ಲಿದ್ದ ಶಕ್ತಿ–ಸಾಮರ್ಥ್ಯಗಳನ್ನು ಗುರುತಿಸಿ ಅರ್ಥಮಾಡಿಕೊಳ್ಳಲು ಮತ್ತು ಒಂದು ನೂತನ ಸಮಾಜವನ್ನು ಕಟ್ಟುವ ಪವಿತ್ರ ಕಾರ್ಯದಲ್ಲಿ ತಾವುಗಳು ಪೂರ್ಣವಾಗಿ ರಚನಾತ್ಮಕವಾಗಿ ಭಾಗವಹಿಸಬೇಕಾದುದು ಎಷ್ಟು ಅವಶ್ಯಕ ಎಂಬುದನ್ನು ಅರಿಯಲು ಅವರಿಗೆ ಸರ್ವವಿಧದಲ್ಲೂ ಸಹಾಯಮಾಡುತ್ತಿದ್ದರು. ಆದ್ದರಿಂದ ಅವರ ಮಾರ್ಗದರ್ಶನದ ಬೆಳಕಿನಲ್ಲಿ ಮಹಿಳೆಯರು ತನ್ನ ನಂಬಿಕೆಯನ್ನು ಬೆಳಸಿಕೊಂಡು, ರಾಷ್ಟ್ರೀಯ ಕಾರ್ಯಕ್ರಮಗಳಲ್ಲಿ ಅತ್ಯುತ್ಸಾಹದಿಂದ ಭಾಗವಹಿಸಿದರು. ಭಾರತದ ಗ್ರಾಮ, ನಗರ ಹಾಗೂ ಮೂಲೆ-ಮೂಲೆಗಳಲ್ಲಿ ಎಲ್ಲಾ ತರಹದ ಕರ್ತವ್ಯಗಳನ್ನು ಅಚ್ಚುಕಟ್ಟಾಗಿ ನಿರ್ವಹಿಸಿದರು. ರಾಷ್ಟ್ರೀಯ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಅಪೂರ್ವವಾಗಿದ್ದ ಅಹಿಂಸಾತ್ಮಕ ಆಯುಧಗಳನ್ನು ಬಳಸಿ ಎಲ್ಲರು ಬೆಚ್ಚಿ ಬೀಳುವ ರೀತಿಯಲ್ಲಿ ಕಾದಾಡಿದರು ಮತ್ತು ಸಮಾಜ ಕಲ್ಯಾಣ ಕಾರ್ಯಗಳನ್ನು ಸಮರ್ಪಕವಾಗಿ ನಿರ್ವಹಿಸಿದರು. ಸ್ತ್ರೀಯರು ತಮ್ಮ ಪ್ರಗತಿಪಥದಲ್ಲಿ ಮುಳ್ಳಿನೋಪಾದಿಯಲ್ಲಿದ್ದ ಅಸಂಬದ್ಧ ನಿಷೇಧಗಳನ್ನು ವಿರೋಧಿಸಲು, ಎದುರಿಸಲು ಶಕ್ತರಾದರು. ಭಾರತದಲ್ಲಿ ಮೊದಲಿನಿಂದಲೂ ಸ್ತ್ರೀ ಸಮಾನತೆ ಹಾಗೂ ಸ್ವಾತಂತ್ರ್ಯವನ್ನು ಎತ್ತಿ ಹಿಡಿದಿದ್ದರೂ, ಅನಂತರ ಹಾದು ಬಂದ ವರ್ಷಗಳಲ್ಲಿ ವಿಚಾರ ಹೀನ ಸಾಮಾಜಿಕ ಸಂಪ್ರದಾಯಗಳು, ಮಹಿಳೆಯ ಜೀವನದ ಎಲ್ಲಾ ರಂಗಗಳಲ್ಲಿ ಪೂರ್ತಿಯಾಗಿ ಭಾಗವಹಿಸದಂತೆ ಅಡ್ಡಿಪಡಿಸಿದುವು.

ಗಾಂಧಿಜೀಯವರು ಸಂಪ್ರದಾಯವು ಮಹಿಳೆಯ ಮೇಲೆ ಹೇರಿದ ಸಾಮಾಜಿಕ ಸಂಕೋಲೆಗಳಿಂದ ಅವಳನ್ನು ಮುಕ್ತಗೊಳಿಸಲು ಸಹಾಯಮಾಡಿದರು. ಸ್ತ್ರೀಯಲ್ಲಿ ತನ್ನ ವ್ಯಕ್ತಿತ್ವದ ಹಿರಿಮೆಯ ಬಗ್ಗೆ ಮೂಡಿದ ಜಾಗೃತಿಯು ಗಾಂಧೀಜಿ ಉಂಟುಮಾಡಿದ ಕ್ರಾಂತಿಕಾರಕ ಪರಿವರ್ತನೆ ಎಂಬುದಾಗಿ ಧಾರಾಳವಾಗಿ ಹೇಳಬಹುದು. ಮಹಿಳೆಯ ಸ್ಥಾನಮಾನದಲ್ಲಿ ಉಂಟಾದ ಸುಧಾರಣೆ, ಅವಳಲ್ಲಿ ಮೂಡಿ ದೃಢವಾಗಿ ನಿಂತ ಆತ್ಮವಿಶ್ವಾಸ ಹಾಗೂ ಆತ್ಮಾಭಿಮಾನ, ಅವಳ ಹೆಚ್ಚಿದ ಹಕ್ಕು–ಬಾಧ್ಯತೆಗಳು ಇತ್ಯಾದಿಗಳು,

ಮಹಿಳೆ ಹಾಗೂ ಅವಳ ಸಮಸ್ಯೆಗಳನ್ನು ಕುರಿತು ಗಾಂಧೀಜಿಯವರು ಮಾಡಿದ ವಿನೂತನ ವಿಚಾರಕ್ರಮದ ಫಲವಾಗಿದ್ದುವು. ಮಹಿಳೆಗೆ ಸವಾಲಾಗಿ ನಿಂತು ತೊಂದರೆ ಕೊಡುತ್ತಿದ್ದ ಪ್ರತಿ ಸಮಸ್ಯೆ, ಅನುಮಾನ ಹಾಗೂ ಕಷ್ಟಕ್ಕೆ ಒಂದು ಉಚಿತ ಉತ್ತರ ವನ್ನು ಒಂದು ಪರಿಣಾಮಕಾರಿ ಪರಿಹಾರವನ್ನು ಒಂದು ಸಮರ್ಪಕ ಮಾರ್ಗದರ್ಶನ ವನ್ನು ಒದಗಿಸಿ ಕೊಡುತ್ತಿದ್ದರು. ಎಲ್ಲಕ್ಕಿಂತ ಹೆಚ್ಚಾಗಿ, ಅವರು ಭಾರತದ ಪವಿತ್ರ ನಾರೀರತ್ನರಾಗಿದ್ದ ಸೀತಾ, ಸಾವಿತ್ರಿ ದ್ರೌಪದಿಯರಂತೆ, ಅವಳೂ ಸಹ ದಿಟ್ಟತನ, ಧೈರ್ಯ, ಆತ್ಮಾಭಿಮಾನ, ಚಿತ್ತಸ್ಥೈರ್ಯ ಹಾಗೂ ಆತ್ಮ ಸಂಯಮದಿಂದ ಕೂಡಿರುವ ಪರಿಶುದ್ಧ, ಉತ್ತಮಸ್ತ್ರೀಯಾಗಬೇಕೆಂಬ ಆದರ್ಶವನ್ನು ಅವಳ ಮುಂದಿಟ್ಟರು. ಮತ್ತ್ಯಾವ ಸಾಧನೆಗಾಗಿ ಅಲ್ಲದಿದ್ದರೂ, ಮಹಿಳೆಯ ಉದ್ಧಾರಕ್ಕಾಗಿ ಕೈಗೊಂಡ ಪ್ರಶಂಸಾರ್ಹ ಕಾರ್ಯಸಾಧನೆಗಾಗಿ, ನಿಶ್ಚಯವಾಗಿ ಗಾಂಧೀಜಿಯವರಿಗೆ 'ರಾಷ್ಟ್ರಪಿತ' ನೆಂಬ ಬಿರುದು ಸರ್ವ ವಿಧದಲ್ಲೂ ಸಮರ್ಪಕವಾಗಿದೆ.

ಸ್ವತಂತ್ರ ಭಾರತ ಸಮಾಜದಲ್ಲಿ ತನ್ನ ವ್ಯಕ್ತಿತ್ವವನ್ನು ಬೆಳಸಿಕೊಳ್ಳಲು ಮಹಿಳೆಗೆ ಸರ್ವ ಅವಕಾಶಗಳನ್ನೂ ನೀಡಲಾಗಿದೆ. ಸಂವಿಧಾನ ಲೈಂಗಿಕ ಸಮಾನತೆಯನ್ನು ಎತ್ತಿ ಹಿಡಿದಿದೆ. ಅವಳ ಸ್ಥಾನಮಾನಗಳನ್ನು ಉತ್ತಮ ಪಡಿಸುವುದಕ್ಕಾಗಿ ಅನೇಕ ಕಾನೂನುಗಳು ಜಾರಿಗೆ ಬಂದಿವೆ. ಸರ್ಕಾರವು ಮಹಿಳೆಯ ಕಲ್ಯಾಣಕ್ಕಾಗಿ ಅನೇಕ ಕಾರ್ಯಕ್ರಮಗಳನ್ನು ಕೈಗೊಂಡಿದೆ. ಮಹಿಳೆ ಹಾಗೂ ಮಕ್ಕಳ ಹಿತಸಾಧನೆಗಾಗಿಯೇ ಒಂದು ಇಲಾಖೆಯನ್ನು ತೆರೆಯಲಾಗಿದೆ. ಕರ್ಣಾಟಕದಲ್ಲಿ ಉದ್ಯೋಗಸ್ಥ ಮಹಿಳೆ ಯರಿಗಾಗಿ ಊಟವಸತಿ ಮನೆಗಳನ್ನು ನಿರ್ಮಿಸುವುದಕ್ಕೆ ಹೆಚ್ಚಿನ ಸಹಾಯಧನವನ್ನು[1] ನೀಡಲಾಗುತ್ತಿದೆ. ಸಮಾರು ೨೮೫೦ ಮಹಿಳಾ ಮಂಡಳಿಗಳನ್ನು ತೆರೆಯಲಾಗಿದೆ[2], ಸ್ತ್ರೀ ಶಿಕ್ಷಣಕ್ಕೆ ಹೆಚ್ಚಿನ ಪ್ರೋತ್ಸಾಹವನ್ನು ನೀಡಲಾಗುತ್ತಿದೆ ಮತ್ತು ಅನೇಕ ಮಹಿಳೆಯರು ರಾಜಕೀಯ, ಸಮಾಜಕಲ್ಯಾಣ, ಪೊಲೀಸ್ ಸೇವಾ ಇಲಾಖೆ,ಪತ್ರಿಕೋದ್ಯಮ, ಕಾನೂನು, ವಿಜ್ಞಾನ, ಶಿಕ್ಷಣ, ಆರ್ಥಿಕ ವ್ಯವಸ್ಥೆ, ವ್ಯಾಪಾರ, ವಿವಿಧ ಕೈಗಾರಿಕೆ, ವೈದ್ಯಕೀಯ ರಂಗ ಇತ್ಯಾದಿ ಕ್ಷೇತ್ರಗಳಲ್ಲಿ ಮಾತ್ರವಲ್ಲದೆ, ಇಷ್ಟುದಿನಗಳು ಪುರುಷನಿಗೇ ಮೀಸಲಾಗಿದ್ದ ರಂಗಗಳಲ್ಲೂ ಸಹ ಪದಾರ್ಪಣೆ ಮಾಡಿ ದಕ್ಷತೆಯಿಂದ ಕಾರ್ಯಗಳನ್ನು ನಿರ್ವಹಿಸುತ್ತಿದ್ದಾರೆ. ಹೀಗೆ ಸ್ತ್ರೀಯ ಸ್ಥಾನಮಾನಗಳಲ್ಲಿ ಗಮನಾರ್ಹವಾದ ಸುಧಾರಣೆ ಗಳಾಗಿವೆ, ಸಮಾಜದಲ್ಲಿ ಅವಳ ಸ್ಥಾನ ಉತ್ತಮಗೊಂಡಿದೆ.

ಆದರೂ ನಮ್ಮ ಸಮಾಜದಲ್ಲಿ ಸ್ತ್ರೀಸ್ಥಾನಕ್ಕೆ ಸಂಬಂಧಿಸಿದಂತೆ ಒಂದು ವಿರೋಧಾ ಭಾಸ ಕಂಡುಬರುತ್ತಿದೆ. ಒಂದುಕಡೆ ಕೆಲವು ಸ್ತ್ರೀಯರು ವೈದ್ಯರಾಗಿ, ಶಿಕ್ಷಕಿಯರಾಗಿ, ಇಲಾಖಾ ಮುಖ್ಯಸ್ಥರಾಗಿ, ನೃತ್ಯಪಟುಗಳಾಗಿ, ನಟಿಯರಾಗಿ, ಸಮಾಜಕಲ್ಯಾಣ ಕಾರ್ಯ

---

1. Hand book of Social Welfare Statistics, 1976, Tables 13.1, 13 2, pp. 223, 224
2. Ibid: , Table 13 3 p. 225

ಕರ್ತೆಯರಾಗಿ, ಮಂತ್ರಿಗಳಾಗಿ, ಲೋಕಸಭಾ–ರಾಜ್ಯಸಭಾ ಸದಸ್ಯರಾಗಿ, ಕಾರ್ಯ ಗಳನ್ನು ನಿರ್ವಹಿಸಿ ಮೆಚ್ಚಿಗೆ ಗಳಿಸುತ್ತಿದ್ದರೆ, ಮತ್ತೊಂದು ಕಡೆ ಅನೇಕ ಮಹಿಳೆಯರು ಮುಖ್ಯವಾಗಿ ಗ್ರಾಮವಾಸಿಗಳಾಗಿರುವ ಸ್ತ್ರೀಯರು ಮತ್ತು ಹರಿಜನ–ಗಿರಿಜನ ಸ್ತ್ರೀಯರು ಅನಕ್ಷರಸ್ಥರಾಗಿ[1], ಪುರುಷರ ಆಡಿಯಾಳಾಗಿ ಜೀವನವನ್ನು ನಡೆಸುತ್ತಿದ್ದಾರೆ. ಉದ್ಯೋಗ ಕ್ಷೇತ್ರದಲ್ಲೂ ಸಹ ಸ್ತ್ರೀಯರನ್ನು ನೇಮಿಸುವ ವಿಚಾರದಲ್ಲಿ ಭೇದವನ್ನು ತೋರಿಸಲಾಗು ತ್ತಿದೆ. ಗೃಹ ಕೈಗಾರಿಕೆ ಹಾಗೂ ಮನೆಯ ಹೊರಗಿನ ಕೈಗಾರಿಕಾ ಕ್ಷೇತ್ರಗಳಲ್ಲೂ ಸಹ ಮಹಿಳೆ ಹೆಚ್ಚಿನ ಶಾರೀರಿಕ ದುಡಿಮೆಯನ್ನು ಮಾಡಬೇಕು, ಕಡಿಮೆ ವೇತನವನ್ನು ಪಡೆಯ ಬೇಕು, ಕೃಷಿ, ಪಶುಸಂಗೋಪನೆ, ಗಣಿಕೆಲಸ, ವಿವಿಧ ವಸ್ತು ತಯಾರಿಕೆ, ಕಟ್ಟಡ ನಿರ್ಮಾಣಕಾರ್ಯ, ವ್ಯಾಪಾರ, ಮುಂತಾಗಿ ವಿವಿಧ ಉದ್ಯೋಗ ರಂಗಗಳಲ್ಲಿ ಭಾಗ ವಹಿಸುತ್ತಿರುವ ಸ್ತ್ರೀಯರ ಸಂಖ್ಯೆ ಅಷ್ಟೇನು ಪ್ರೋತ್ಸಾಹದಾಯಕವಾಗಿಲ್ಲ[2]. ಸ್ತ್ರೀ ಕೈಗೊಳ್ಳಬಹುದಾದ ಉದ್ಯೋಗಗಳ ವ್ಯಾಪ್ತಿ ಸೀಮಿತ ಮತ್ತು ಉದ್ಯೋಗಸ್ಥ ಮಹಿಳೆಯ ಸ್ಥಾನ ಅಷ್ಟೇನು ಉತ್ತಮವಾಗಿಲ್ಲ. ಮುಖ್ಯವಾಗಿ ಮಧ್ಯಮವರ್ಗಕ್ಕೆ ಸೇರಿದ ಉದ್ಯೋಗಸ್ಥ ಸ್ತ್ರೀಯ ಪರಿಸ್ಥಿತಿಯು ಸಹಾನುಭೂತಿಗೆ ಅರ್ಹವಾಗಿದೆ. ಕಾರಣ ಅವಳು ಮನೆಯ ಹೊರಗಡೆ ದುಡಿದು ಸಂಪಾದಿಸಿ, ಪತಿಯೊಡನೆ ಸರಿಸಮವಾಗಿ ಕುಟುಂಬದ ಆರ್ಥಿಕ ಹೊಣೆಯನ್ನು ಹೊತ್ತುಕೊಂಡರೂ ಮನೆಯೊಳಗೂ ಎಲ್ಲಾ ಗೃಹಕೃತ್ಯಗಳನ್ನು ಅವಳೇ ಮಾಡಬೇಕು. ಕೇವಲ ಹಣ ಸಂಪಾದಿಸುವುದು ಮಾತ್ರ ತನ್ನ ಕೆಲಸ ಎಂದು ಎಣಿಸಿಕೊಂಡಿರುವ ಪತಿಯು ತನ್ನ ಪತ್ನಿಯೂ ಸಹ ತನ್ನಂತೆ ಹೊರಗೆ ದುಡಿದು ಸಂಪಾದಿಸುವವಳು ಎಂಬುದನ್ನು ಸುಲಭದಲ್ಲಿ ಮರೆತು ಎಲ್ಲಾ ಮನೆಕೆಲಸಗಳನ್ನು ಮಾಡಬೇಕು, ತನ್ನ ಎಲ್ಲಾ ಆವಶ್ಯಕತೆಗಳನ್ನು ಪೂರೈಯಿಸಬೇಕು, ತನ್ನ ಸೇವೆಯನ್ನು ಮಾಡಬೇಕು, ಮಕ್ಕಳನ್ನು ನೋಡಿಕೊಳ್ಳಬೇಕು ಎಂದು ಎದುರು ನೋಡುತ್ತಾನೆ. ಆದರೆ ತಾನು ಮಾತ್ರ ಚೆನ್ನಾಗಿ ವಿಶ್ರಾಂತಿ ತೆಗೆದುಕೊಳ್ಳುತ್ತಾನೆ. ಇದರಿಂದ ಗೃಹದ ಒಳಗೆ ಹಾಗೂ ಹೊರಗೆ ದುಡಿಯುವ ಯಂತ್ರವಾದ ಉದ್ಯೋಗಸ್ಥ ಸ್ತ್ರೀ ಅತಿ ಆಯಾಸ ಗೊಂಡು, ದಕ್ಷವಾದ ರೀತಿಯಲ್ಲಿ ಕಾರ್ಯಗಳನ್ನು ನಿರ್ವಹಿಸಲು ಅಶಕ್ತಳಾಗುತ್ತಿದ್ದಾಳೆ. ಇದಕ್ಕೆ ಅವಳು ಸ್ವಲ್ಪಮಟ್ಟಿಗೆ ಕಾರಣಳು ಎಂಬುದನ್ನು ಒಪ್ಪಬೇಕಾಗುತ್ತದೆ. ಹಲ ವಾರು ಸ್ತ್ರೀಯರು ಗೃಹಕೃತ್ಯಗಳನ್ನು ತಮ್ಮ ಪತಿಯರು ಮಾಡಿದರೆ ಸಹಿಸರು. ಅವರು ಗೃಹಕೃತ್ಯ ತಮ್ಮ ಸಾಂಪ್ರದಾಯಿಕ ಕರ್ತವ್ಯ ಎಂಬ ಭಾವನೆಯನ್ನು ಬೆಳಸಿಕೊಂಡಿರು ವುದೇ ಇದಕ್ಕೆ ಕಾರಣ.

————

1. Asok Mitra—The Status of Women-Literacy and Employment, 1979, Tables 4, 7, 8
2. Ibid :, Table 14

ಇಷ್ಟು ಮಾತ್ರವಲ್ಲದೆ, ಗಾಂಧೀಜಿಯವರು ಖಂಡಿಸಿದ ಅನೇಕ ಮಹಿಳಾ ಸಮಸ್ಯೆಗಳು ಇಂದೂ ಪ್ರಬಲವಾಗಿವೆ, ನಮ್ಮ ಕೆಲವು ಗ್ರಾಮಗಳಲ್ಲಿ ಅಪ್ರಾಪ್ತವಯಸ್ಕ ಹೆಣ್ಣುಮಕ್ಕಳಿಗೆ ಮದುವೆ ಮಾಡಲಾಗುತ್ತಿದೆ; ಗ್ರಾಮ ಹಾಗೂ ನಗರಗಳಲ್ಲಿ ವರದಕ್ಷಿಣೆಯ ಪಿಡುಗು ಇನ್ನೂ ಜೀವಂತವಾಗಿದೆ. ವೇಶ್ಯಾ ವೃತ್ತಿ ಪ್ರಮುಖವಾಗಿದೆ, ಕರ್ನಾಟಕದ ಹಲವು ಭಾಗಗಳಲ್ಲಿ ದೇವದಾಸಿ ಪದ್ಧತಿಯೂ ಇಂದೂ ಜಾರಿಯಲ್ಲಿದೆ; ಪರ್ದಾ ಪದ್ಧತಿ ಇಂದೂ ಪ್ರಚಲಿತವಾಗಿದೆ. ಇಂದೂ ಸ್ತ್ರೀಯರು ಸುಶಿಕ್ಷಿತರೂ ಸಹ ಪ್ರಮುಖ ಸಾಮಾಜಿಕ ಸಮಸ್ಯೆಗಳನ್ನು ಕುರಿತು ವಿಚಾರಮಾಡಿ, ತಕ್ಕ ಪರಿಹಾರಗಳನ್ನು ಕಂಡುಹಿಡಿಯುವುದರಲ್ಲಿ ಹೆಚ್ಚಿನ ಆಸಕ್ತಿಯನ್ನು ವಹಿಸುತ್ತಿಲ್ಲ. ಅನೇಕ ತರುಣಿಯರು ಇಂದು ನವನಾಗರಿಕತೆಯ ಕೃತಕ ಥಳುಕಿಗೆ ಮಾರುಹೋಗಿ, ಪಾಶ್ಚಾತ್ಯ ಜೀವನ ರೀತಿಯನ್ನು ಅನುಸರಿಸುವುದರಲ್ಲಿ ಹೆಚ್ಚಿನ ಆಸಕ್ತಿಯನ್ನು ವಹಿಸುತ್ತಾ, ತಮ್ಮ ಭವ್ಯ ಸಾಂಸ್ಕೃತಿಕ ಪರಂಪರೆಯನ್ನು ಮರೆಯುತ್ತಿದ್ದಾರೆ. ಸ್ತ್ರೀಯರನ್ನು ಅತ್ಯಂತ ಕೀಳುತರದಲ್ಲಿ ಪ್ರದರ್ಶಿಸಿ, ವರ್ಣಿಸುವ ಅಶ್ಲೀಲ ಜಾಹೀರಾತು, ಪ್ರಕಟಣಾಚೀಟಿ, ಸಾಹಿತ್ಯ ಪ್ರಬಲವಾಗುತ್ತಿವೆ, ಮಾನಭಂಗದ ಪ್ರಕರಣಗಳೂ ಸಾಕಷ್ಟಿವೆ.

ಅದ್ದರಿಂದ ಇಂದೂ ಜೀವನದ ಎಲ್ಲಾ ಕ್ಷೇತ್ರಗಳಲ್ಲಿ ಸ್ತ್ರೀಸ್ಥಾನಮಾನಗಳಲ್ಲಿ ಗಮನಾರ್ಹವಾಗಿರುವ ಸುಧಾರಣೆಗಳು ಕಂಡುಬಂದಿದ್ದರೂ. ಸಮಾಜದ ಎಲ್ಲಾ ಸ್ತರಗಳಿಗೆ ಸೇರಿರುವ ಸ್ತ್ರೀಯರೆಲ್ಲರ ಪರಿಸ್ಥಿತಿ ಇನ್ನೂ ಸುಧಾರಿಸಬೇಕಾಗಿದೆ. ಗಾಂಧೀಜಿಯವರು ಮಹಿಳೆಯು ಸಮಾಜದಲ್ಲಿ ಯಾವ ಉತ್ತಮ ಸ್ಥಾನವನ್ನು ಅಲಂಕರಿಸಬೇಕೆಂದು ಬಯಸಿದ್ದರೊ ಅದೂ ಇನ್ನೂ ಕನಸಾಗಿ ಉಳಿದಿದೆ. ಈ ದಿಸೆಯಲ್ಲಿ ಇನ್ನೂ ಬಹುದೂರವನ್ನು ಅತಿಕ್ರಮಿಸಬೇಕಾಗಿದೆ. ಇಂದೂ ಸ್ತ್ರೀಗೆ ಸಮಾಜದಲ್ಲಿ ಸಮಾನವಾದ ಸ್ಥಾನವಿದ್ದರೂ, ಅವಳಿಗೆ ಪೂರ್ವ ವೇದಕಾಲದಲ್ಲಿದ್ದ ಆ ಅತ್ಯಂತ ಗೌರವಯುತ ಪೂಜನೀಯ ಸ್ಥಾನವನ್ನು ಅವಳು ಇನ್ನು ಪಡೆಯಬೇಕಾಗಿದೆ. ಗಾಂಧೀಜಿಯವರು ಅವಳ ಮುಂದಿಟ್ಟ ಆದರ್ಶವನ್ನು ಸಾಧಿಸಲು ಅವಳೂ ಇನ್ನೂ ಹೆಚ್ಚಿಗೆ ಶ್ರಮಿಸಬೇಕಾಗಿದೆ.

ಪಥದರ್ಶನ

# "ಜಿ. ವಿ. ನಾ ನುಡಿಯುತ್ತಾರೆ...." ಸಂದರ್ಶನ ಒಂದು

**ಎಲ್. ನಾರಾಯಣ್, ಕೆ. ಆರ್ ಕಮಲೇಶ್**

ಗಾಂಧೀಜಿಯವರದು ಬಹುರೂಪ ವ್ಯಕ್ತಿತ್ವ. ಹಲವು ಹತ್ತು ಮುಖಗಳಲ್ಲಿ ಹಲವರು ಗಾಂಧೀಜಿಯವರನ್ನು ಕಂಡಿದ್ದಾರೆ. ಕೆಲವರಿಗೆ ಗಾಂಧಿ ಒಬ್ಬ ದೇಶಭಕ್ತ, ಕೆಲವರಿಗೆ ಒಬ್ಬ ಶ್ರೇಷ್ಠ ತತ್ವಜ್ಞಾನಿ; ಕೆಲವರಿಗೆ ಗಾಂಧಿ ಒಬ್ಬ ದಾರ್ಶನಿಕನಾದರೆ, ಕೆಲವರಿಗೆ ಅವರು ಬರೀ ಗೊಡ್ಡು. ಮತ್ತೆ ಕೆಲವರಿಗೆ ಗಾಂಧಿ ಒಬ್ಬ ಉತ್ತಮ ಮಾನವ ಜೀವಿ. ಹೀಗೆ ಅನೇಕ ಗುಣಗಳನ್ನು ನಾವು ಎಲ್ಲ ಜನರಲ್ಲೂ ಕಾಣಬಹುದಾದರೂ. ಅವು ಔನ್ನತ್ಯದಲ್ಲಿದ್ದಾಗ ಮಾತ್ರ ಇತರರಿಗೆ ಸ್ಪಷ್ಟವಾಗಿ ಗೋಚರವಾಗುತ್ತವೆ. ಈ ಔನ್ನತ್ಯ ಎಲ್ಲರಲ್ಲೂ ಕಾಣಬರುವುದಿಲ್ಲ: ಅದು ರೂಢಿಸಿ ಬೆಳಸಿಕೊಂಡವರಿಗೆ ಮಾತ್ರ ಸಾಧ್ಯ. ಈ ದೃಷ್ಟಿಯಿಂದ ಒಬ್ಬ ಅರಿಸ್ಟಾಟಲ್, ಒಬ್ಬ ಮಾರ್ಕ್ಸ್. ಒಬ್ಬ ಷೇಕ್ಸ್ ಪಿಯರ್, ಒಬ್ಬ ಬರ್ನಾರ್ಡ್‌ಷಾ, ಒಬ್ಬ ನೆಹರೂ ಅಂಥವರಲ್ಲಿ ಮಾತ್ರ ಬೆಳವಣಿಗೆ ಯನ್ನು ಗುರುತಿಸಬಹುದು.

ಜಿ ವಿ ನಾ ಅವರ ವ್ಯಕ್ತಿತ್ವವನ್ನು ಈ ದೃಷ್ಟಿಯಲ್ಲಿ ಅಳೆದಾಗ ಅವರಲ್ಲಿ ಈ ಬೆಳವಣಿಗೆಯು ಅಂಥ ವಿಶೇಷ ಮಟ್ಟದಲ್ಲಿ ಕಾಣದೆ ಹೋದರೂ. ಗುರುತಿಸಲಾರದಂಥ ದೇನಲ್ಲವೆಂಬುದಕ್ಕೆ ಈ ಗ್ರಂಥದ ಲೇಖನಗಳೇ ಸಾಕ್ಷಿ. ಜಿ ವಿ ನಾ ಸಹ ಸಾಹಿತಿಯಾಗಿ, ವಿಚಾರವಾದಿಯಾಗಿ, ದೇಶಭಕ್ತರಾಗಿ, ಆದರ್ಶ ಅಧ್ಯಾಪಕರಾಗಿ, ಶ್ರೇಷ್ಠ ಸಮಾಜ ಸೇವಕರಾಗಿ, ಮಿಗಿಲಾಗಿ ಒಬ್ಬ ಸಹೃದಯಿಯಾಗಿ ತಮ್ಮ ವ್ಯಕ್ತಿತ್ವವನ್ನು ಮೆರೆದಿದ್ದಾರೆ. ಸ್ಪಷ್ಟ ಹೇಳುವುದಾದರೆ ಅವರೊಬ್ಬ ತತ್ವ ಜೀವಿ, ಎಂದರೆ ತತ್ವವನ್ನು ಹೇಳುತ್ತಾ ಜೀವಿಸಿದವರೆಂದಲ್ಲ ಒಂದು ತತ್ವಕ್ಕಾಗಿ ಬಾಳಿ ಬದುಕಿದವರು. ಒಂದು ಮಾರ್ಗದಲ್ಲಿ ನಡೆದು ಒಂದು ಆದರ್ಶವನ್ನು ಸಾಧಿಸಿದವರು ಆ ತತ್ವವೇ ಗಾಂಧೀತತ್ವ. ಆ ಮಾರ್ಗವೇ ಗಾಂಧೀ ಮಾರ್ಗ, ಅದೇ ಗಾಂಧೀ ಆದರ್ಶ.

ಈ ದೃಷ್ಟಿಯನ್ನು ಗಮನದಲ್ಲಿರಿಸಿಕೊಂಡೇ. ಜಿವಿನಾ ಅವರನ್ನು ಸಂದರ್ಶಿಸಿದುದು. ನಮ್ಮ ಪ್ರಶ್ನೆಗಳಿಗೆ ಅವರಿಂದ ವಿಚಾರ ಪೂರಿತ ಪ್ರತಿಕ್ರಿಯೆಗಳು ಹೊರ ಬಂದಿವೆ. ಸಂದರ್ಶನವನ್ನು ಗ್ರಂಥದ ಸ್ಥಳಾವಕಾಶಕ್ಕೆ ಹೊಂದಿಕೊಳ್ಳುವಂತೆ ಮಧ್ಯಂತರದ ವಾಗ್ವಾದಗಳನ್ನು ತ್ಯಜಿಸಿ ಬರೇ ಪ್ರಶ್ನೋತ್ತರಗಳ ಮೂಲಕ ನಿರೂಪಿಸಲಾಗಿದೆ. ನಮ್ಮ ಪ್ರಶ್ನೆಗಳನ್ನು ಅದಕ್ಕೆ ಅವರ ಉತ್ತರಗಳನ್ನು ಇಲ್ಲಿ ಕೊಡಲಾಗಿದೆ.

ಪ್ರಶ್ನೆ– ಸ್ವಾತಂತ್ರ್ಯ ಪೂರ್ವದಲ್ಲಿದ್ದ ಹೋರಾಟದ ಮನೋಭಾವ ಇಂದಿನ ಯುವಕರಲ್ಲಿ ಕಾಣದಿರಲು ಪ್ರಾಮಾಣಿಕ ನಾಯಕತ್ವದ ಕೊರತೆ ಕಾರಣವೆಂದು ತಮಗನಿಸುತ್ತದೆಯೇ ?

ಉತ್ತರ:- ಭಾರತದಲ್ಲಿ ನಡೆದ ಸ್ವಾತಂತ್ರ್ಯ ಹೋರಾಟ ವಿಶಿಷ್ಟ ಸ್ವರೂಪದ್ದು ಮಹಾತ್ಮ ಗಾಂಧಿಯವರ ಅದ್ವಿತೀಯ ನಾಯಕತ್ವದಲ್ಲಿ. ಅದು ಕೇವಲ ರಾಜಕೀಯ ಸ್ವಾತಂತ್ರ್ಯ ಹೋರಾಟವಲ್ಲ. ವಿಶಾಲದೃಷ್ಟಿಯಲ್ಲಿ ಸಮಗ್ರ ಮನುಜಕುಲದ, ಪ್ರತಿ ರಾಷ್ಟ್ರದ, ಪ್ರತಿ ವ್ಯಕ್ತಿಯ. ಮಾನದ ಹಕ್ಕುಗಳಿಗಾಗಿ ಹೋರಾಟ. ಹಕ್ಕುಗಳೊಂದೇ ಅಲ್ಲ, ಕರ್ತವ್ಯ ಕರ್ಮಕ್ಕಾಗಿ ನಡೆದ ಹೋರಾಟ.

ನಮಗೆ ರಾಜಕೀಯ ಸ್ವಾತಂತ್ರ್ಯ ಬರುವ ಮುನ್ನ ಜನಾಂಗದಲ್ಲಿ 'ಹೋರಾಟ ಮನೋಭಾವ'—ಎಂದರೆ, ಅದು ಕೇವಲ ಹೋರಾಟಕ್ಕಾಗಿ ಅಲ್ಲ; ಅದರ ಹಿಂದೆ ಕೆಲವು ಮೌಲ್ಯಗಳು ಚೇತನದಾಯಕವಾಗಿದ್ದವು. ಅವು ತ್ಯಾಗ, ಸೇವೆಗಳು. ಹೋರಾಟ ಉದಾತ್ತಕಾರಣಗಳಿಗಾಗಿ ಆಗಿದ್ದು. ಅದರ ಮುಂಚೂಣಿಯಲ್ಲಿ ಸ್ವದೇಶ ಪ್ರೇಮ ಅಡ ಗಿತ್ತು. ನಾಯಕತ್ವ ಎಲ್ಲ ಮಟ್ಟಗಳಲ್ಲಿಯೂ ಇದೇ ಮನೋಭಾವದಿಂದ ಕೂಡಿತ್ತು. ಕಾರ್ಯಕರ್ತನೂ ಬಹುಮಟ್ಟಿಗೆ ಇದರಿಂದ ಸ್ಫೂರ್ತಿಗೊಂಡಿದ್ದ. ಮಹಾತ್ಮಗಾಂಧಿ ಯವರು ಹಾಗಿರಲಿ, ಜವಾಹರಲಾಲ್‌ನೆಹರೂ, ಸರದಾರ್ ವಲ್ಲಭಭಾಯಿ ಪಟೇಲ್, ರಾಜೇಂದ್ರಪ್ರಸಾದ್, ರಾಜಾಜಿ, ಸುಭಾಷ್‌ಚಂದ್ರಬೋಸ್ ಇವರೆಲ್ಲ ಯುವ ಜನಾಂಗದ ಕಣ್ಮುಂದೆ ಮೇಲ್ಪಂಕ್ತಿಯಾಗಿದ್ದರು. 'ಯದ್ಯದಾಚರತಿ ಶ್ರೇಷ್ಠಃ' ಎಂಬ ಉಕ್ತಿಗೆ ಅನು ಗುಣವಾಗಿ ಇತರರು, ಸಾಮಾನ್ಯರೂ ವರ್ತಿಸುತ್ತಿದ್ದರು.

ನಮ್ಮ ಸ್ವಾತಂತ್ರ್ಯ ಹೋರಾಟ ಮುಗಿದ ಮೇಲೆ ಕೇವಲ ರಾಜಕೀಯ ಅಧಿಕಾರದ ಹುಚ್ಚು ಹಿಡಿಯಿತು. ಅಧಿಕಾರ ಯಾವಾಗಲೂ ಭ್ರಷ್ಟಾಚಾರಕ್ಕೆ ಕಾರಣವಾಗುತ್ತದೆ. ನಿರಂಕುಶ ಅಧಿಕಾರವಂತೂ ನಿರಂಕುಶ ಭ್ರಷ್ಟಾಚಾರಕ್ಕೆ ಕಾರಣವಾಗುತ್ತದೆ.

ಇಂದು ನಾವು ಸ್ವತಂತ್ರರೇ ? ಪ್ರತಿಯೊಂದು ತಲೆ ಒಂದು ಓಟು ಎಂಬ ಅರ್ಥ ದಲ್ಲಿ. ಪರಕೀಯರು ನಮ್ಮಿಂದ ದೂರವಾದರು. ನಮ್ಮ ಭವಿಷ್ಯವನ್ನು ನಾವೇ ರೂಪಿಸಿ ಕೊಳ್ಳುವವರು ಎಂಬ ಒಂದು ಅರ್ಥದಲ್ಲಿ ನಾವು ಸ್ವತಂತ್ರರೇ. ಆದರೆ ನಿಜವಾದ ಅರ್ಥ ದಲ್ಲಿ ನಾವು ಸ್ವದೇಶದಲ್ಲಿ ಪರಕೀಯರೇ. ಹಲವಾರು ಆಸೆ. ಆಮಿಷ, ಧೂರ್ತತನ, ಹುಚ್ಚು ಧೀರತನ (FOOL HARDINESS) ಅಪ-ಮೌಲ್ಯಗಳು, ಅಂದಗೆಟ್ಟ ನಡತೆ, ನೆರೆಭಾವರಾಹಿತ್ಯ ಇವುಗಳಿಗೆ ಇನ್ನೂ ನೂರಾರು ಅಗೋಚರ ಅಂಶ ಗಳಿಗೆ ಅಧೀನರೇ!

ಇವೆಲ್ಲ ಹೋಗಿ, ಸಾತ್ವಿಕ ಹೋರಾಟಕ್ಕೆ ಯುವಜನ ಒಗ್ಗೂಡಲು ಸಿದ್ಧವಾಗ ಬೇಕಾದರೆ ಶುದ್ಧ ಸ್ಫಟಿಕ ನಾಯಕತ್ವ ಬರಬೇಕು; ಬಂದೇ ಬರುತ್ತದೆ. ಇಂದಲ್ಲ ನಾಳೆ.

ಯುವಜನ ಕನಸುಕಾಣುವ ಜನ, ಸಾಹಸಿಗಳು. ಅವರ ಮುಂದೆ ಯಾವುದನ್ನು ನಾಯಕರೆನ್ನುವವರು ಇಡುತ್ತಾರೋ ಅವೇ ಹಿಡಿದುಕೊಳ್ಳುತ್ತವೆ. ಅವರು ಜನಾಂಗದ ಸತ್ವ. WE ARE THE SALT OF THE EARTH ಎಂದಂತೆ. ಅವರೇ ಸತ್ವ ಹೀನರಾದರೆ ಯುವ ಜನಾಂಗವು ಸತ್ವಹೀನವಾಗುವುದರಲ್ಲಿ ಅಚ್ಚರಿಯೇನು?

ರಾಷ್ಟ್ರದ ದೀರ್ಘ ಇತಿಹಾಸದಲ್ಲಿ ಕಂಡುಬರುವ ಹಲವಾರು ಕಾಲ ಖಂಡಗಳಂತೆ ಇದೊಂದು ಕೃಷ್ಣಪಕ್ಷ; ಶುಕ್ಲಪಕ್ಷ ಬಾರದೆ ಇದ್ದೀತೇ? ಯಾವುದೋ ಕಾರಣ ನಿದ್ದೆಯಿಂದ ಎಚ್ಚರಗೊಳಿಸೀತು. ಯುವಶಕ್ತಿ ಪ್ರಚಂಡಶಕ್ತಿಯಾಗಿ ಪ್ರಳಯ ತಾಂಡವವಾದೀತು. ಇದರಿಂದ ಹೊಸ ಮನ್ವಂತರ ರಚನೆಯಾಗಲು ಕಹಳೆ ಊದಿ ನಾಂದಿ ಹಾಡೀತು.

ಪ್ರಶ್ನೆ– ಭ್ರಷ್ಟಾಚಾರ, ಸ್ವಜನ ಪಕ್ಷಪಾತ, ದುರಾಡಳಿತ, ಅಪ್ರಮಾಣಿಕತೆ, ಅಸತ್ಯ ಮುಂತಾದುವುಗಳ ಬೆಳವಣಿಗೆಗೆ ಗಾಂಧೀನಂತರದ ಅವರ ಅನುಯಾಯಿಗಳ ನಿಷ್ಕ್ರಿಯಾ ಪ್ರವೃತ್ತಿ ಕಾರಣವೇ ?

ಉತ್ತರ:– ಈ ಪ್ರಶ್ನೆಯಲ್ಲಿ ಎರಡು ಭಾಗಗಳಿವೆ. (1) ಆಡಳಿತದವಿಚಾರ(2) ಗಾಂಧೀ ನಂತರದ ಅವರ ಅನುಯಾಯಿಗಳ ನಿಷ್ಕ್ರಿಯಾಪ್ರವೃತ್ತಿ ಇವುಗಳಲ್ಲಿ ಒಂದೊಂದನ್ನು ವಿಶ್ಲೇಷಿಸಲು ಬಯಸುತ್ತೇನೆ.

(೧) ಇವು ಆಡಳಿತ ಯಾರ ಹಸ್ತದಲ್ಲಿ ಬರುತ್ತದೋ ಅವರನ್ನು ಅವಲಂಬಿಸುತ್ತದೆ. ಒಂದು ದೃಷ್ಟಿಯಲ್ಲಿ ಆಡಳಿತ ವ್ಯವಸ್ಥೆಯಲ್ಲಿ ಶಿಥಿಲತೆ ಬಂದಾಗ; ವ್ಯಕ್ತಿಯ ಚಾರಿತ್ರ್ಯಹೀನಸ್ಥಿತಿ ಬಂದಾಗ ಅನಿವಾರ್ಯ ಪರಿಣಾಮ. ಇದು ಚರಿತ್ರೆಯಲ್ಲಿ ರಾಜ್ಯಗಳ ಅವನತಿಗೆ, ಚಕ್ರಾಧಿಪತ್ಯಗಳ ನಾಶಕ್ಕೆ ಕಾರಣ. ಪ್ರಾಚೀನ ಗ್ರೀಕರು, ರೋಮನರು ಎಲ್ಲ ಯಾವರೀತಿ "ಕಾಲಾಯತಸ್ಮೈ:" ಆದರು ಅಂತೆಯೇ ಎಲ್ಲ ಜನಾಂಗಗಳಿಗೂ. ಆಡಳಿದ ಶಕ್ತಿ ಬಹಳ. ಅವನತಿಯೂ ಬಹಳ. ಎರಡೂ ಅದನ್ನು ನಡೆಸುವವರ ಕೈಲಿದೆ. ಎಂದರೆ ಅಂತರ್ಗತ; ಒಂದು ಆಡಳಿತ ವ್ಯವಸ್ಥೆಯಲ್ಲಿ ಏಳು–ಬೀಳುಗಳು ಅವರಲ್ಲಿಯೇ ಹುಟ್ಟುತ್ತವೆ. ನೀವು ಪಟ್ಟಿ ಮಾಡಿರುವ ವರ್ತನೆಗಳು ವ್ಯವಸ್ಥೆಗೇ ಶೂಲವಾಗುತ್ತವೆ.

(೨) ಗಾಧೀ ನಂತರದ ಅವರ ಅನುಯಾಯಿಗಳು ಎಂದರೆ ಯಾರು ? ಒಬ್ಬ ನಾಯಕನಿಗೆ ಅನೇಕ ದೃಷ್ಟಿಗಳಿಂದ ಅನುಯಾಯಿಗಳು, ಹಿಂಬಾಲಕರು ಆಗುತ್ತಾರೆ. ಕೆಲವರಿಗೆ ಗಾಂಧೀ ರಾಜಕೀಯ ಹಿಡಿಸಿತು. ಕೆಲವರಿಗೆ ಅವರ ಸಾಮಾಜಿಕ ನ್ಯಾಯದ ಅಂಶಗಳು ಹಿಡಿಸಿದುವು. ಕೆಲವರಿಗೆ ಅವರ ಮಾನವೀಯತೆ ಹಿಡಿಸಿತು. ಕೆಲವರಿಗೆ ಅವರ ಆಧ್ಯಾತ್ಮಭಾವ. ದೈವನಿಷ್ಠೆ, ಸತ್ಯನಿಷ್ಠೆ ಹಿಡಿಸಿತು. ಕೆಲವರಿಗೆ ಅವರ ಆರ್ಥಿಕನೀತಿ. ನೀತಿ ತತ್ವ ಹಿಡಿಸಿತು; ಅವರೆಲ್ಲ ಅನುಯಾಯಿಗಳೇ ಆದರು. ಆದರೆ ಯಾರು ನಿಜವಾದ ಅನುಯಾಯಿ? ಒಬ್ಬೊಬ್ಬರು ಒಂದೊಂದು ಅಂಶಕ್ಕೆ ಮಾರುಹೋಗಿ ಅವರ ಹಿಂಬಾಲಕರಾದರು. ಇದನ್ನು ಮರೆಯಬಾರದು. ಗಾಂಧೀಜಿ ಒಮ್ಮೆ ಹೇಳಿದರು "ನಾನೊಂದು ಮಠಕಟ್ಟಿ ಹೋಗಬೇಕೆಂದಿಲ್ಲ. ನಾನು ನಂಬಿದ ತತ್ವಗಳನ್ನು ನಾನು ಅನುಸರಿಸಿದರೆ ಸಾಕು",

ಈ ದೃಷ್ಟಿಯಿಂದ ನೋಡಿದಾಗ. ಯಾರು ಯಾರು ಯಾವುದಕ್ಕೆ ಆಕರ್ಷಿತರಾದರೋ ಅದಕ್ಕೆ ತಕ್ಕಂತೆ ನಡೆದರು ಎನ್ನೋಣ. ಅದೇ ಗಾಂಧೀ ಅನಂತರದ

ಅನುಯಾಯಿಗಳ ಕ್ರಿಯೆ ಅಥವಾ ನಿಷ್ಕ್ರಿಯೆ. ಅದರಂತೆ ಎಸಗದಿದ್ದರೆ ಅವರ ಪರಿಮಿತಿ ನಿಷ್ಫಲತೆ, ಅಷ್ಟೆ. ಅವರ ಕ್ರಿಯೆ, ನಿಷ್ಕ್ರಿಯೆಗಳು ಅವರನ್ನೇ ಅವಲಂಬಿಸಿವೆ. ಕ್ರಿಯೆಯಿಂದಲೂ ಪರಿಣಾಮ ಆಗುತ್ತದೆ. ನಿಷ್ಕ್ರಿಯೆಯಿಂದಲೂ ಪರಿಣಾಮ ಆಗುತ್ತದೆ. ಎರಡರಿಂದಲೂ ಸಾಪೇಕ್ಷವಾದ ಈ ಜಗತ್ತಿನಲ್ಲಿ ಒಳಿತೂ ಆದೀತು, ಕೆಡುಕೂ ಆದೀತು,

ವಿನೋಬಾ, ಜೆ. ಪಿ. ರಾಜಾಜಿ ಮುಂತಾದ ಅನೇಕರು ಆಡಳಿತಗಾರರೊಂದಿಗೆ ರಾಜಿ ಮಾಡಿಕೊಂಡಿದ್ದರಿಂದ ನಿಷ್ಕ್ರಿಯೆಯಾಯಿತು ಎನ್ನುತೀರಾ ನೀವು. ಇದಕ್ಕೆ ಉತ್ತರ ಹೀಗಿದೆ. ಬದುಕೆಲ್ಲ ಹೋರಾಟ ತಿಕ್ಕಾಟ, ಘರ್ಷಣೆ ಆಗಲಾರದು. ಹೋರಾಟವಿದ್ದರೂ ಅದು ಒಂದೇ ಪ್ರಮಾಣದಲ್ಲಿ ಇರಲಾರದು ಸಮುದ್ರದ ಅಲೆಗಳನ್ನು ಭಾವಿಸಿಕೊಳ್ಳಿ. ಸಾಮಾನ್ಯ ಕಾಲದಲ್ಲಿ ಸಣ್ಣ ಅಲೆ ಇದ್ದರೆ ಪರ್ವ ಕಾಲಗಳಲ್ಲಿ ಪ್ರಚಂಡ ಅಲೆ ಪರ್ವತಾಕಾರವಾಗಿ ಎದ್ದೀತು. ಅಂತೆಯೇ ಇದು.

ವಿನೋಬಾ, ಜಗತ್ತು ಕಂಡು ಕೇಳರಿಯದ 'ಭೂಕ್ರಾಂತಿ'ಯನ್ನು ಕಾಲು ಶತಮಾನ ನಡೆಸಿ, ಗಾಂಧೀಜಿಯ ಅಹಿಂಸೆಯನ್ನು ಸಮಾಜದಲ್ಲಿ ಸ್ಥಾಪಿಸಲೆತ್ನಿಸಿ ಆರ್ಥಿಕ ಸಮತೆಯನ್ನು ತರಲು ಸೌಮ್ಯಾತಿಸೌಮ್ಯ ಸತ್ಯಾಗ್ರಹ ನಡೆಸಿದರು. ರಾಷ್ಟ್ರದಲ್ಲಿ ಹೊಸ ಅಧ್ಯಾಯವನ್ನೇ ರಚಿಸಿದರು. ಇದು ನಿಷ್ಕ್ರಿಯೆಯೇ ?

ಜೆ. ಪಿ. ಜನಶಕ್ತಿಯನ್ನು ಎಚ್ಚರಗೊಳಿಸಿ ಚುನಾವಣೆಯ ಮೂಲಕ ಹೊಸ ಆಡಳಿತ ವ್ಯವಸ್ಥೆಯನ್ನೇ ಸ್ಥಾಪಿಸಲು ಪ್ರಚಂಡ ಕಾರ್ಯ ಮಾಡಲಿಲ್ಲವೇ ? ಇದು ನಿಷ್ಕ್ರಿಯೆಯೇ ?

ರಾಜಾಜಿ ಹೊಸದೊಂದು ರಾಜಕೀಯ ಪಕ್ಷವನ್ನೇ ಸ್ಥಾಪಿಸಲಿಲ್ಲವೇ ?

ಇವೆಲ್ಲ ಪ್ರತ್ಯಕ್ಷ ಗೋಚರ ಭೌತ ಸ್ವರೂಪದ ಪರಿಣಾಮ ಮಾಡದಿದ್ದರೂ ರಾಷ್ಟ್ರದ ಸುಪ್ತ ಚೇತನದಲ್ಲಿ ಕ್ರಿಯೆಯ ಲಕ್ಷಣಗಳು.

ಇದರ ಜತೆಗೆ ಅಹಿಂಸಕ ಕ್ರಾಂತಿಯಂತೂ ಒಮ್ಮೆಗೇ ಆಗುವಂಥದಲ್ಲ. ಅದಕ್ಕೆ ಮೂರು ಲಕ್ಷಣಗಳು, ಪರಿಸರ ಪರಿವರ್ತನೆ, ಮೌಲ್ಯ ಪರಿವರ್ತನೆ, ಎಲ್ಲಕ್ಕಿಂತ ಹೆಚ್ಚಾಗಿ ಹೃದಯ ಪರಿವರ್ತನೆ. ಜಗತ್ತಿನ ಯಾವ ಹೋರಾಟದಲ್ಲೂ ಕಂಡುಬರದ ಅಂಶಗಳನ್ನು ಗಾಂಧೀ ತೋರಿಸಿದ್ದಾರೆ. ಅವರು ಅದರ ಪೂರ್ಣಸ್ವರೂಪವನ್ನು ಜಗತ್ತಿಗೆ ತೋರಿಸಲು ಬದುಕಲಿಲ್ಲ. ಇದು ರಾಷ್ಟ್ರದ ದುರ್ದೈವ. ಯಾರನ್ನೂ ಹಳಿದು ಪ್ರಯೋಜನವಿಲ್ಲ. ಅವರವರಿಗೆ ಹೃದಯ ಮೆಚ್ಚಿದಂತೆ ಬದುಕಲೆತ್ನಿಸಬೇಕು; ಸಮಾಜವನ್ನು ತನ್ನ ಜತೆಗೆ ಒಪ್ಪಿಸಿಕೊಂಡು ಸಾಗಲು ಯತ್ನಿಸಬೇಕು.

ಪ್ರಶ್ನೆ– ಇಡೀ ದೇಶಕ್ಕೆ ಹೊಂದುವಂತಹ ಶಿಕ್ಷಣ ವ್ಯವಸ್ಥೆ ರೂಪಿಸಲು ಸಾಧ್ಯವೇ ?

ಉತ್ತರ :– ಈಗ ಹೊಸದೊಂದು ವಿಷಯ ಪ್ರಸ್ತಾಪಿಸಿದ್ದೀರಿ. ಅದಕ್ಕೆ ನನ್ನ ಉತ್ತರ ಹೀಗಿದೆ :

ಇಡಿಯ ದೇಶಕ್ಕೆ ಹೊಂದುವಂತಹ ಶಿಕ್ಷಣ ವ್ಯವಸ್ಥೆ ರೂಪಿಸಲು ಸಾಧ್ಯವೇ ? ಎಂದಿದ್ದೀರಿ. ಶಿಕ್ಷಣ ಎಂದರೆ ಪದ್ಧತಿಯಲ್ಲ. ವ್ಯವಸ್ಥೆ ಎಂದರೂ ಜೀವನಕ್ಕೆ, ಅದರ ಉತ್ಕರ್ಷಕ್ಕೆ ಅನುವಾಗುವ ವ್ಯವಸ್ಥೆ. ಇದು ಕಾಲ ಕಾಲಕ್ಕೆ ಬದಲಾಗುವುದರಿಂದ ಒಂದು ಪದ್ಧತಿ ಆಗಬಾರದು. ಪದ್ಧತಿ ಪೆಡಸಾದೀತು. ವ್ಯವಸ್ಥೆಯಲ್ಲಿ ಕೆಲವು ಮೂಲ ಭೂತ ಅಂಶಗಳು ಅಡಗಿದ್ದು ಅವು ಜೀವನದ ಪರಿಸರಕ್ಕೆ ತಕ್ಕಂತೆ ಇರಬೇಕು. ವ್ಯವಸ್ಥೆ ಬದಲಾದರೂ ತಳಹದಿ ಬದಲಾಗಬಾರದು. ವ್ಯವಸ್ಥೆ ಅಗತ್ಯತೆಗಳಿಗೆ ಬದಲಾಗುವುದು ಬಾಹ್ಯ ಆಕಾರದಲ್ಲಿ ಮಾತ್ರ.

ಈ ದಿಕ್ಕಿನಿಂದ ನೋಡಿದರೆ ನನಗೆ ಹೀಗೆ ಅನಿಸುತ್ತದೆ.

(೧) ಜೀವನೋಪಯುಕ್ತ ಕೆಲಸದಲ್ಲಿ ತರಬೇತಿ.

(೨) 'ವ್ಯಕ್ತಿ' ಎಂದರೆ ಯಾರು ಎಂಬ ಬಗೆಗೆ ಸ್ವಲ್ಪವಾದರೂ ಪರಿಚಯ.

(೩) ತನ್ನ ಮಾತೃಭಾಷೆಯಲ್ಲದೆ ಇನ್ನೊಂದು ಭಾಷೆಯ ಪರಿಚಯ.

(೪) ಚಾರಿತ್ರ್ಯ ನಿರ್ಮಾಣ.

ಒಟ್ಟಿನಲ್ಲಿ ಕಡಿಮೆ ವೆಚ್ಚದಲ್ಲಿ ಆಗುವಂತಿರಬೇಕು ; ಭಾರವೆಂದು ಪರಿಗಣಿಸ ಬಾರದು.

ಈ ಅಂಶಗಳನ್ನೊಳಗೊಂಡ ಶಿಕ್ಷಣ ವ್ಯವಸ್ಥೆಯನ್ನು ಗಾಂಧೀಜಿ 'ಜೀವನ ಶಿಕ್ಷಣ', 'ಮೂಲ ಶಿಕ್ಷಣ', 'ನಯೀ ತಾಲೀಂ' ಎಂದಿದ್ದರು. ಅದು 'ನಿತ್ಯ ನೂತನ ಶಿಕ್ಷಣ'.

ನಮ್ಮ ಸಮಾಜ, ಪಟ್ಟಣ ಮತ್ತು ಹಳ್ಳಿ ಎಂಬ ಸಿಡಿತಕ್ಕೆ ಗುರಿಯಾಗಿ ಹಳ್ಳಿ ಹಾಳು ಸುರಿದು, ಪಟ್ಟಣಗಳು ಅಪರಾಧದ ಕೂಪಗಳಾಗಿ, ಹಣದ ಬೆಂಬತ್ತಿ ಎತ್ತಲೋ ಓಡುವಂತಿದೆ, ಕುರುಡಾಗಿ.

ವಿಜ್ಞಾನವೂ, ತಂತ್ರಜ್ಞಾನವೂ ಕೆಲವರ ಸ್ವತ್ತಾಗದೆ ಸಾರ್ವತ್ರಿಕವಾಗುವಂತಿರ ಬೇಕು. ಹಳ್ಳಿಯಲ್ಲೇ ಆಗಲಿ, ಪಟ್ಟಣದಲ್ಲೇ ಆಗಲಿ ಎಲ್ಲರಿಗೂ ಸುಲಭವಾಗಿ ಲಭ್ಯ ವಾಗುವಂತಹ ತಂತ್ರಜ್ಞಾನವಾಗಬೇಕು.

ಶಿಕ್ಷಣ ಅಲ್ಲಲ್ಲಿನ ಜೀವನದ ಆವಶ್ಯಕತೆಗೆ ತಕ್ಕಂತಿರಬೇಕು. ವಿಜ್ಞಾನ ಭೌತ ವಸ್ತುಗಳ ಗುಣ ಸ್ವರೂಪ ಲಕ್ಷಣಗಳ ಬಗೆಗೆ ವಿಚಾರಯುತ ಜ್ಞಾನ. ತಂತ್ರಜ್ಞಾನ ವೆಂದರೆ ಅವುಗಳನ್ನು ಮಾನವ ಸುಖ-ಸಮೃದ್ಧಿಗಾಗಿ ಸರ್ವರೂ ಉಪಯೋಗಿಸಿಕೊಳ್ಳು ವಂತಿರಬೇಕು.

ಇದು ಹೇಗಿರಬೇಕೆಂಬುದರ ಬಗೆಗೆ ಹೇಳುವ ಅಳವು ನನಗಿಲ್ಲ. ತಜ್ಞರು ಗೊತ್ತುಪಡಿಸಬೇಕಾದ ವಿಷಯ. ಇದೆಲ್ಲ ಸರಿಯೋ ತಪ್ಪೋ ? ಅಂತೂ ನನಗೆ ಗೋಚರಿಸುವ ವಿಚಾರ.

ಇಂಥ ವ್ಯವಸ್ಥೆ ದೇಶಕ್ಕೆಲ್ಲಾ ಅನ್ವಯಿಸಲಾರದೇ ? ಜೀವನದ ಬದಲು ಹಣದ ದಾಸ್ಯಕ್ಕೆ ಗುರಿಯಾಗುವ ಸ್ಥಿತಿಯೇ ಬೇರೆ. ಅದು ಎಂದಿದ್ದರು ಅಪಾಯಕರ,

ಪ್ರಶ್ನೆ- ಗಾಂಧೀಜಿ ಅವರ 'ಗ್ರಾಮ ಸ್ವರಾಜ್ಯ'ಕ್ಕೆ ಅವಶ್ಯಕವಾಗಿರುವ 'ಲೋಕ ಸೇವಕ ಸಂಘ' ಕಾರ್ಯಕ್ರಮಗಳೇನು ?

ಉತ್ತರ :- ಗ್ರಾಮ ಸ್ವರಾಜ್ಯವಾಗಲಿ, ಲೋಕಸೇವಕ ಸಂಘವಾಗಲೀ ಗಾಂಧೀಜಿಯವರ ಅಭಿಪ್ರಾಯಗಳೇ. ಇದನ್ನು ವಿನೋಬಾ, ಜೆ.ಪಿ. ಪುಷ್ಟಿಗೊಳಿಸಿದ್ದಾರೆ ; ಸ್ಪಷ್ಟ ಸ್ವರೂಪ ಕೊಟ್ಟಿದ್ದಾರೆ. ನನ್ನ ಅಭಿಪ್ರಾಯವೆನ್ನುವುದು ಪ್ರತ್ಯೇಕವಾಗಿ ಯಾವುದೂ ಇಲ್ಲ.

(1) ಗ್ರಾಮ ಸ್ವರಾಜ್ಯ-ಗ್ರಾಮದ ಜನ ಸಮುದಾಯದಿಂದ ಗ್ರಾಮಕ್ಕಾಗಿ, ಗ್ರಾಮಸ್ಥರಿಂದಲೇ ಎಲ್ಲ ಆಡಳಿತ ; ಹೇಗೆ ಡಿಲ್ಲಿಯಲ್ಲಿ ಭಾರತಕ್ಕೆ ಸರ್ವ ಅಧಿಕಾರ ಕೇಂದ್ರೀಕೃತವಾಗಿದೆಯೋ ಅಂತೆ ಗ್ರಾಮದಲ್ಲೇ ಸಾರ್ವಭೌಮ ಅಧಿಕಾರವಿರಬೇಕು. ಗ್ರಾಮದ ಜನ ಅವರ ಸಮಸ್ತ ಆಗು-ಹೋಗುಗಳನ್ನು ನಡೆಸಿಕೊಳ್ಳುವ ಸಾಮರ್ಥ್ಯ ಹೊಂದಿರಬೇಕು. ತಾಲ್ಲೂಕು, ಜಿಲ್ಲೆ, ಪ್ರಾಂತ, ರಾಷ್ಟ್ರ ಮುಂತಾದ ಘಟಕಗಳು ಗ್ರಾಮಕ್ಕೆ ಆವಶ್ಯಕವಾದ ಸಲಹೆ, ಮೇಲ್ವಿಚಾರಣೆ ನಡೆಸಬೇಕು. ಒಟ್ಟಿನಲ್ಲಿ ವಿಕೇಂದ್ರಿತ ಸ್ವಾವಲಂಬನೆಗೆ ಗ್ರಾಮದ ವ್ಯವಸ್ಥೆಯಾಗಬೇಕು ; ಸ್ವಯಂ ಆಡಳಿತವಾಗಬೇಕು ಇದಕ್ಕೆ ಈಗಿರುವ ಗ್ರಾಮ ವ್ಯವಸ್ಥೆ ಬದಲಾಗಿ ಸಮಗ್ರಗ್ರಾಮದಾನದ ಮೇಲೆ ಆಧಾರಿತವಾಗಬೇಕೆಂಬುದು ವಿನೋಬಾ ಆದೇಶ.

(2) ಲೋಕ ಸೇವಕ ಸಂಘವಂತೂ ಗಾಂಧೀಯವರ ಅಂತಿಮ ಉಯಿಲಿನಲ್ಲಿ ಬಂದ ವಿಚಾರ. ಭಾರತ ರಾಷ್ಟ್ರೀಯ ಕಾಂಗ್ರೆಸ್ ಈ ಸಂಸ್ಥೆಯಾಗಿ ವಿಕಸಿತವಾಗ ಬೇಕೆಂದು ಅವರ ಇಚ್ಛೆಯಾಗಿತ್ತು. ಆಡಳಿತಗಾರರನ್ನೂ, ಜನತೆಯನ್ನೂ ಸನ್ನಿಯಂತ್ರಣ ದಲ್ಲಿ ಇಟ್ಟುಕೊಳ್ಳುವ ಮೂರನೆಯ ಶಕ್ತಿಯಾಗ ಬೇಕಾಗಿತ್ತು. ಅಹಿಂಸಕ ನೈತಿಕ ಶಕ್ತಿ ಯಾಗ ಬೇಕಾಗಿತ್ತು. ಲೋಕಸೇವಕ ಅವರ ಕಲ್ಪನೆಯ 'ಸತ್ಯಾಗ್ರಹಿ'ಯೇ ಆಗಬೇಕು.

ಪ್ರಶ್ನೆ- ಗಾಂಧೀವಾದವು ಇಂದಿನ ಜನಾಂಗದ ಅಭಿಪ್ರಾಯದಲ್ಲಿ ಗೊಡ್ಡುವಾದ ವೆನಿಸಿರಲು ಕಾರಣವೇನು ? ಇಂದಿನ ಮನೋಭಾವಕ್ಕೆ ಹೊಂದುವಂತೆ ಅದನ್ನು ಪುನರ್ ವಿಮರ್ಶಿಸಿ ಪ್ರಚಾರ ಮಾಡಲು ಸಾಧ್ಯವೆನಿಸುತ್ತದೆಯೆ?

ಉತ್ತರ :- ನಿಮ್ಮ ಪ್ರಶ್ನೆ ವಿಚಿತ್ರವೆನಿಸುತ್ತದೆ. ನೀವು ಹೇಳುವಂತೆ ಗಾಂಧೀವಾದ ವೆಂಬುದಿದ್ದರೆ ಅದಕ್ಕೆ ವಾದ, ಪ್ರತಿವಾದಗಳಿವೆ. ಗಾಂಧಿಯೇ ಹೇಳಿದರು :- ''ಗಾಂಧೀ ವಾದ ವೆಂಬುದಿಲ್ಲ''. ಹೀಗಿರುವಾಗ ಅದನ್ನು ವಾದದ ಗೊಂದಲದಲ್ಲಿ ಸಿಕ್ಕಿಸುವುದೇಕೆ? ಗಾಂಧೀ ಮಾರ್ಗ, ಗಾಂಧೀ ವಿಚಾರವೆಂಬುದಿದೆ, ಗಾಂಧೀ ಕಾರ್ಯಕ್ರಮವೆಂಬುದಿದೆ. ನಾವು ಕಾರ್ಯಕ್ರಮವನ್ನು ಒಪ್ಪದಿರಬಹುದು. ವಿಚಾರಕ್ಕೆ ಅನುಗುಣವಾದ ಕಾರ್ಯ ಕ್ರಮವಿರುವಾಗ ಅದು 'ಗೊಡ್ಡು' ಹೇಗೆ ಆದೀತು. ಇದೊಂದು ಪೂರ್ವಗ್ರಹ, ಕಾರ್ಯಕ್ರಮವನ್ನು ಪ್ರಯೋಗ ಪರೀಕ್ಷೆ ಮಾಡದೆ ಕೇವಲ ಊಹೆಯಿಂದ ಹೇಳುವುದು ಸರಿಯೇ ? ''ಒಲ್ಲದ ಗಂಡನಿಗೆ ಮೊಸರಲ್ಲಿ ಕಲ್ಲು ಸಿಕ್ಕಂತೆ''. ಮೊದಲು ಮನಸ್ಸು ಮಾಡಿ, ಪ್ರಾಮಾಣಿಕವಾಗಿ ಕಾರ್ಯರಂಗಕ್ಕಿಳಿದು ಹೇಳಿದ ಮಾತಿಗೆ ಪೂರ್ಣ ಬೆಲೆ

ಯುಂಟು. ಮೊದಲು ಸಾಮ್ಯವಾದಿಯಾಗಿದ್ದು ಗಾಂಧಿಯನ್ನೂ ಬಿಡದೆ ಟೀಕಿಸಿದ್ದ ಜೆ. ಪಿ. ಕೊನೆಗೆ ಅವರ ಮಾರ್ಗಕ್ಕೆ ಶರಣಾಗಲಿಲ್ಲವೇ ? ಅವರು ಉದ್ಘೋಷಿಸಿದ 'ಸಂಪೂರ್ಣಕ್ರಾಂತಿ' ಮರಳಿ ಗಾಂಧೀ ಮಾರ್ಗಕ್ಕೆ ಎಂಬುದು 'ಗೊಡ್ಡೋ', ಫಲ ದಾಯಕವೋ ನೀವೇ ವಿಚಾರಮಾಡಿ.

ಯಾವುದನ್ನೂ ಪೂರ್ಣ ವಿಮರ್ಶಿಸದೆ ಸ್ವೀಕರಿಸಬಾರದು. ಪ್ರಚಾರಕ್ಕಂತೂ ಇಳಿಯಬಾರದು. ಇಂದಿನ ಯುಗದಲ್ಲಿ ಯಾವುದೋ ಮೋಹಕ್ಕೊಳಗಾದ ಅರ್ಜುನರು ನಾವು. ಅಂಥವನಿಗೆ ಭಗವಂತ ಹೇಳಿದ "ಚೆನ್ನಾಗಿ ವಿಮರ್ಶಿಸು. ಅನಂತರ ಅಂತರಂಗ ಒಪ್ಪಿದಂತೆ ಮಾಡು." ಗಾಂಧಿಯೂ ಹೇಳಿದ್ದರು "ಪೂರ್ಣವಾಗಿ ವಿಮರ್ಶಿಸಿ ಒಪ್ಪಿಗೆ ಯಾದರೆ ಅನುಸರಿಸಿ, ಇಲ್ಲವಾದರೆ ಪೂರ್ಣವಾಗಿ ನನ್ನನ್ನು ವಿರೋಧಿಸಿ."

ಇನ್ನೊಂದು ಮಾತು. ವಾಚಾ ಪ್ರಚಾರಕ್ಕಿಂತ ಕೃತಿಯೇ ಹೆಚ್ಚು ಸಮರ್ಥ. ಕೃತಿಯೇ ವಿಚಾರದ ಹೊಳಪನ್ನು ಈಚೆಗೆ ತರಬೇಕು. ಪ್ರಚಾರಕ ತಾನು ಪ್ರಚಾರಕ ನೆಂಬುದನ್ನು ಮರೆಯಬೇಕು. ಕೃತಿಯಲ್ಲಿ ನಿಮಗ್ನನಾಗಿ ತನಗೆ ಸರಿ ಎನಿಸಿರುವುದನ್ನು ಮಾಡಬೇಕು. ಕರ್ಮದಿಂದ ವಿಚಾರ, ವಿಚಾರದಿಂದ ಮತ್ತೆ ಕರ್ಮ–ಹೀಗೆ ಮುಂದೆ ಮುಂದೆ ಸಾಗಬೇಕು. ಹಾಗಾದರೆ ಮಾತ್ರ ಯಾವ ವಿಚಾರವೂ ಸಾಕಾರ ಪಡೆದೀತು.

ಗಾಂಧೀವಾದ ಇಲ್ಲವೆಂಬುದನ್ನು ಆಗಲೇ ಹೇಳಿದೇನೆ. ಇರುವುದು ಗಾಂಧೀ ಮಾರ್ಗ, ಇದು ಸತ್ಯವನ್ನು ಆಶ್ರಯಿಸಿದ ಮಾರ್ಗ. ಹಿಂಸೆಯಿಂದ ದೂರವಿರಿ, ಪ್ರೇಮ ಬೆಳಸಿ ಎಂಬ ಮಾರ್ಗ. ಶೋಷಣೆಯನ್ನು ಕಾಯೇನವಾಚಾಮನಸಾ ವಿಸರ್ಜಿಸಿ, ವ್ಯಕ್ತಿಗತವಾಗಿ ಸಾಂಘಿಕರಾಗಿ, ವರ್ಗಭೇದ ಬೇಡಿ, ಸಮಾಜದಲ್ಲಿ ಸಮರಸತೆ ತನ್ನಿ, ನಿಮ್ಮಂತೆ ಪರರನ್ನು ನೋಡಿ ಎಂಬುದು ಸ್ಥೂಲವಾಗಿ ಗಾಂಧೀಮಾರ್ಗ. ಇದರಲ್ಲಿ ಲೋಪವೇನು ? ದೋಷವೇನು ? ತಿದ್ದುವುದೇನಿದೆ ? ಈ ಧ್ಯೇಯಗಳಿಗೆ ಅನುಗುಣ ವಾದ ಕಾರ್ಯಕ್ರಮವಿದೆ. ಇದು ಲೋಪ–ದೋಷವೇ ?

ಒಟ್ಟಿನಲ್ಲಿ ಹೇಳುವುದೆಂದರೆ, ನಮ್ಮ ಶರೀರ, ಮನಸ್ಸು, ಬುದ್ಧಿ ನಮ್ಮ ಸ್ವಾಧೀನ ದಲ್ಲಿಲ್ಲ. ಅದು ಪರಾಧೀನ, ನಾವು ಪರಕೀಯಕ್ಕೆ ಭ್ರಮೆಗೊಂಡಿದ್ದೇವೆ. ಸ್ವಧರ್ಮ ಮರೆತಿದ್ದೇವೆ. ಪರಧರ್ಮಕ್ಕೆ ಮಾರು ಹೋಗಿದ್ದೇವೆ, ಬಾಹ್ಯ ಹೊಳಪಿನ ಪಶ್ಚಿಮ ನಮ್ಮನ್ನು ವಶಪಡಿಸಿಕೊಂಡಿದೆ.

ಸತ್ಯ ಎಲ್ಲಿಂದ ಬಂದರೂ ಸ್ವಾಗತಿಸಬೇಕು. "ಆ ನೋ ಭದ್ರಾಃ ಋತವೋ ಯಂತು ವಿಶ್ವತಃ" ದಿವ್ಯ ಭಾವನೆಗಳು ಜಗತ್ತಿನ ಮೂಲೆ ಮೂಲೆಗಳಿಂದಲೂ ಬರಲಿ ಎಂದರು ನಮ್ಮ ಹಿರಿಯರು.

ನಮ್ಮ ಮನೆ ಸುತ್ತ ಎಂಥ ಗಾಳಿ ಬೀಸಿದರೂ ನಾವು ಆ ಗಾಳಿಯಲ್ಲಿ ನಮ್ಮ ನೆಲ ಬಿಡದಿರುವ ಧೃತಿ ಬರಲಿ. ನಮ್ಮತನ ಉಳಿಯಲಿ.

ಗಾಂಧೀಜಿಯ ಮಾತು ಎಷ್ಟು ಬೋಧಪ್ರದವಾಗಿದೆ : "ನನ್ನ ಮನೆ ಸುತ್ತ ಗೋಡೆಗಳನ್ನು ನಿರ್ಮಿಸಿ ಕಿಟಕಿಗಳನ್ನು ಮುಚ್ಚಿ ಬಿಡಲು ನಾನು ಇಚ್ಛಿಸುವುದಿಲ್ಲ. ಎಲ್ಲ ದೇಶಗಳ ಸಂಸ್ಕೃತಿಗಳೂ ಅನಿರ್ಬಂಧಿತವಾಗಿ ನನ್ನ ಮನೆ ಸುತ್ತ ಬೀಸಲು ಅಪೇಕ್ಷಿಸುತ್ತೇನೆ. ಆದರೆ ಯಾವುದರಿಂದಲೂ ನಾನು ನಿಂತ ನೆಲೆ ಇಲ್ಲದಂತಾಗಲು ಒಪ್ಪುವುದಿಲ್ಲ."

ಪ್ರಶ್ನೆ– ಗಾಂಧೀಜಿಯವರ "ಸರ್ವೋದಯ" ಕಲ್ಪನೆ ಇಂದಿನ ಪ್ರಪಂಚಕ್ಕೆ ಭರವಸೆ ಮೂಡಿಸಬಲ್ಲದಾಗಿದೆಯೇ ?

ಉತ್ತರ:– ಗಾಂಧೀಜಿಯವರ ಮೂಲ ವಿಚಾರ 'ಸರ್ವೋದಯ' ವಿಚಾರ. ನೀವು ಅದನ್ನೇ ಪ್ರಶ್ನಿಸಿದ್ದೀರಿ. 'ಇದು ಪ್ರಪಂಚಕ್ಕೆ ಭರವಸೆ ಮೂಡಿಸಬಲ್ಲದಾಗಿದೆಯೇ' ಎಂದಿದ್ದೀರಿ.

ಇದಕ್ಕೆ ನಾನು ಉತ್ತರ ಹೇಳುವುದಕ್ಕಿಂತಲೂ ಅಮೆರಿಕದ ನೀಗ್ರೋ ನಾಯಕ ದಿವಂಗತ ಮಾರ್ಟಿನ್ ಲೂಥರ್ ಕಿಂಗ್ ಅವರ ಮಾತನ್ನು ಉದ್ಧರಿಸಲು ಅಪೇಕ್ಷಿಸುವೆ. ಆತ ಅಹಿಂಸೆಯ ಪರಮ–ಶಕ್ತಿಯನ್ನು ನಂಬಿದವನು. ಸತ್ಯಾಗ್ರಹವೆಸಗೆ ನೀಗ್ರೋಗಳಿಗೆ ಮಾನವ ಹಕ್ಕುಗಳನ್ನು ಗಳಿಸಿಕೊಟ್ಟವನು. ಆತ ಹೇಳಿದ : "ಜಗತ್ತಿನ ಮುಂದೆ ಭಾರಿ ಸವಾಲಿದೆ. ಆ ಸವಾಲು "ಸರ್ವೋದಯವೋ ಸರ್ವನಾಶವೋ".

ಮನುಜಕುಲ ಇಂದು ಹಿಂಸಾಚಾರದ ಪರಮಾವಧಿ ಮುಟ್ಟಿದೆ. ಮಾನವನ ವಿಚಾರ, ವಿವೇಕದಲ್ಲಿ ಪರಿಣಮಿಸದಿದ್ದರೆ, ಪ್ರೇಮ–ಸಹಜ ಬಾಳ್ವೆಗಳಲ್ಲಿ ಪರಿಣಮಿಸದಿದ್ದರೆ ಸರ್ವನಾಶವಲ್ಲದೆ ಮತ್ತೇನು. ಪರಮಾಣು ಬಾಂಬಿನ ಸಿಡಿಮದ್ದು ನಾಗರಿಕತೆಯನ್ನೇ ಆಹುತಿ ತೆಗೆದುಕೊಂಡೀತು !

ಸರ್ವೋದಯದ ಕ್ಷೀಣಧ್ವನಿ ಮಾನವನ ಹೃದಯಾಂತರಾಳದಲ್ಲಿ ಕೇಳಿಬರುವ 'ಒಳದನಿ'. ಅದು ಎಲ್ಲೆಲ್ಲಿಯೂ ಕೇಳಿಬಂದರೆ, ಜನಾಂಗಗಳ ಉದ್ಧಾರವಾಗದೆ ? ನೆಹರು ಒಮ್ಮೆ ಹೇಳಿದರು "ಸರ್ವೋದಯ ಉಚ್ಚರಿಸಲೂ ನಾವು ಅಶಕ್ತರು."

ಸರ್ವತ್ರ ಸುಖಿನಃ ಸಂತು
ಸರ್ವೇ ಸಂತು ನಿರಾಮಯಾಃ
ಸರ್ವೇ ಭದ್ರಾಣಿ ಪಶ್ಯಂತು
ಮಾಕಶ್ಚಿತ್ ದುಃಖ ಭಾಗ್ಭವೇತ್

(ಎಲ್ಲರಿಗೂ ಸುಖ ಬರಲಿ. ಯಾರಿಗೂ ಕ್ಲೇಶಬೇಡ. ಎಲ್ಲ ಮಂಗಳವಾಗಲಿ. ಯಾರಿಗೂ ದುಃಖ ಬರದಿರಲಿ)

ಈ ಬಗೆಯ ಚಿಂತನೆ, ವರ್ತನೆ ಜಗತ್ತಿಗೆ ಭರವಸೆ ನೀಡಲಾರದೇ ? ಈ ವಿಚಾರ ಕುಲಧನ ನಮ್ಮ ಪೀಳಿಗೆಗೆ ದಕ್ಕದೇ ? ಜಗತ್ತು ಕಾತರದಿಂದ ಭಾರತದ ಕಡೆ ನೋಡುತ್ತಿದೆ. ನಾವು ಯೋಗ್ಯ ಸಂತಾನವಾಗೋಣ.

ಈ ಉತ್ತರಗಳೇ ಸಾಕು, ಜಿವಿನಾ ಅವರ ವ್ಯಕ್ತಿತ್ವ ಪರಿಚಯಕ್ಕೆ. ಒಂದು ವಿಚಾರ ವೆಂದರೆ ಒಂದು ನಿರ್ದಿಷ್ಟ ತತ್ವದಲ್ಲಿ ಅವರ ವ್ಯಕ್ತಿತ್ವ ರೂಪುಗೊಂಡಿರುವುದರಿಂದ ಅವರ ವಿಚಾರಲಹರಿ ಒಂದು ಚೌಕಟ್ಟಿನಲ್ಲಿದೆ–ಈ ದಿಸೆಯಲ್ಲಿ ಅವರ ಉತ್ತರಗಳೆಲ್ಲವೂ ಒಂದು ಸಾತ್ವಿಕ ಹೋರಾಟದ ಮೆರುಗನ್ನು ಪಡೆದಿವೆ. ಅವರ ಪ್ರತಿಕ್ರಿಯೆಯಲ್ಲಿ ಇಂದಿನ ಪ್ರಕ್ಷುಬ್ಧ ಪರಿಸ್ಥಿತಿಗಳ ಬಗ್ಗೆ ಗಮನಾರ್ಹ ಗೌಣತೆಯಿದ್ದು ಭವಿಷ್ಯದ ಬಗ್ಗೆ ಅಚಲವಾದ ಆಶಾವಾದ ಇದೆ.

ಈ ಪ್ರತಿಕ್ರಿಯೆ ಇಂದಿನವರಿಗೆ ಸ್ವಲ್ಪ 'ರಿಜಿಡ್' ಅನ್ನಿಸಬಹುದು. ಕೆಲವೊಮ್ಮೆ ದ್ವಂದ್ವವೂ ಕಾಣಬಹುದು. ಪ್ರಶ್ನೆಗಳಿಗೆ ಅದರಿಂದ ನಿರೀಕ್ಷಿತ, ಪರಿಪೂರ್ಣ, ಸಮಾಧಾನಕರ ಉತ್ತರಗಳು ದೊರೆತಿಲ್ಲ ಎನ್ನಿಸಬಹುದು. ಆದರೆ ಜಿವಿನಾ ಇಲ್ಲಿ ಏನು ಹೇಳಬೇಕಿತ್ತು ಎನ್ನುವುದಕ್ಕಿಂತ ಏನು ಹೇಳಿದ್ದಾರೆ ಎಂಬುದು ಮುಖ್ಯ. ಅವರ ವಿಚಾರಲಹರಿ ವಿಶಾಲವಾಗಿದೆ, ದೂರ ದೃಷ್ಟಿಯಿಂದ ಕೂಡಿದೆ, ಅನುಭವದ ಭಾರದಿಂದ ಜಗ್ಗಿದೆ. ಪಾಂಡಿತ್ಯ ಪೂರ್ಣವಾಗಿದೆ.

# ಜಿ. ವಿ. ನಾ. ಜೀವನದ ಮುಖ್ಯ ಘಟನೆಗಳು

೨ ಮೇ ೧೯೧೨. ಜನನ

೧೬೨೭. ಹಿಂದುಸ್ತಾನಿ ಸೇವಾದಳ ಸ್ವಯಂ ಸೇವಕ

೧೯೩೭. ತನಕ ರಾಷ್ಟ್ರೀಯ ಕಾಂಗ್ರೆಸ್ ಕಾರ್ಯಕರ್ತ

೧೯೩೮. ಶ್ರೀ ಎಸ್. ಕರಿಯಪ್ಪನವರ ಜತೆಸೇರಿ ಕನಕಪುರದಲ್ಲಿ 'ರೂರಲ್ ಎಜುಕೇಶನ್ ಸೊಸೈಟಿ' ಸ್ಥಾಪನೆ

೧೯೪೩. ಚಿಕ್ಕನಾಯಕನಹಳ್ಳಿಯಲ್ಲಿ 'ದೇಶೀಯ ವಿದ್ಯಾಪೀಠ' ಸ್ಥಾಪನೆ.

೧೯೫೪. ಮಾಯಸಂದ್ರದಲ್ಲಿ 'ಸರ್ವೋದಯ ಶಿಕ್ಷಣ ಸಮಿತಿ' ಸ್ಥಾಪನೆ.

೧೯೫೩ – ೫೪ 'ಗಾಂಧಿ ವಿಚಾರ ಪರಿಷದ್' ವಾರ್ಧಾದಲ್ಲಿ ಸಂಶೋಧನ ಕಾರ್ಯ.

೧೯೫೪. 'ಸ್ಟೇಟ್ ಬೇಸಿಕ್ ಅಡ್ವೈಸರಿ ಕಮಿಟಿ'ಯ ಸದಸ್ಯನಾಗಿ ಸರಕಾರದಿಂದ ನಾಮಕರಣ.

೧೯೫೬. (ಅಕ್ಟೋಬರ) ರಾಷ್ಟ್ರೀಯ ಕಾಂಗ್ರೆಸ್ ಸೇವಾದಳ ಶಿಬಿರ ವ್ಯವಸ್ಥೆ–ಮಾಯಸಂದ್ರದಲ್ಲಿ

೧೯೬೯. ರಾಜ್ಯಮಟ್ಟದ ಗಾಂಧಿ ಶತಮಾನೋತ್ಸವ ಸಮಿತಿ ಸದಸ್ಯತ್ವ.

೧೯೭೨, ತುಮಕೂರು ಜಿಲ್ಲಾ ಸಾಹಿತ್ಯ ಪರಿಷತ್ತಿನಿಂದ ಸನ್ಮಾನ (ರಾಜ್ಯೋತ್ಸವ ಸಂದರ್ಭದಲ್ಲಿ)

೧೯೭೨. ಚಿಕ್ಕನಾಯಕನಹಳ್ಳಿ ತಾಲ್ಲೂಕು ಕುಪ್ಪೂರು ಮಠದಿಂದ ಸನ್ಮಾನ

೧೯೭೭. ಚಿಕ್ಕನಾಯಕನಹಳ್ಳಿ ಸಾರ್ವಜನಕರಿಂದ ಸನ್ಮಾನ

೧೯೭೯. ಭಾರತಸೇವಾದಳದಿಂದ ಗೌರವ – ರಾಜ್ಯಮಟ್ಟದ ರ್‍ಯಾಲಿ ರಾಯಚೂರು–ಅಲ್ಲಿ

೧೯೮೦. ತುಮಕೂರು ಜಿಲ್ಲಾ ದ್ವಿತೀಯ ಸಾಹಿತ್ಯ ಸಮ್ಮೇಳನದಲ್ಲಿ ಸನ್ಮಾನ

## ಜಿ. ವಿ. ನಾ. ಕೃತಿಗಳು

### ಅನುವಾದಗಳು

1. ಸತೀ ಕಸ್ತೂರಿ ಬಾ.
2. ಗಾಂಧೀಸೂತ್ರಗಳು

3. ಗಾಂಧೀ ರಾಜ್ಯಾಂಗ
4. ಕಾಂಗ್ರೆಸ್ಸಿಗರಿಗೆ ರಚನಾತ್ಮಕ ಕಾರ್ಯಕ್ರಮ
5. ಧರ್ಮ-ನೀತಿ
6. ಸವರಾಜ ಧರ್ಮ
7. ಸತ್ಯಾಗ್ರಹ
8. ಮಹಿಳೆಯರು
9. ಗಾಂಧೀಜಿ ಪತ್ರಗಳು ೨, ೩.

**ಸ್ವತಂತ್ರ ಕೃತಿಗಳು.**

1. ಶರಣರಸಂಗ
2. ಗೀತಾಪತ್ರಗಳು
3. ಹಿಂದೂಧರ್ಮ
4. ಸಾಧನಪಥ
5. ಗಾಂಧೀಜಿಯವರ ಸರ್ವಧರ್ಮ ಸಮನ್ವಯ
6. ಗಾಂಧೀ ಸಾಹಿತ್ಯ
7. ಸಂತ ವಿನೋಬಾ
8. ವಿನೋಬಾ-ಅವರ ಜೀವನ ಮತ್ತು ದರ್ಶನ ✓
9. ಭಗವದ್ಗೀತಾ-ಒಂದು ಪ್ರಸ್ತಾವನೆ
10. ನಾರಾಯಣ ಗುರು
11. ಮಹಾತ್ಮಗಾಂಧಿ
12. ಗೋಪಾಲಕೃಷ್ಣಗೋಖಲೆ
13. ಥಕ್ಕರ್‌ಬಾಪಾ
14. ಎನ್. ಎಸ್. ಹರ್ಡೀಕರ್
15. ಜಯಪ್ರಕಾಶನಾರಾಯಣ

1. Floral offerings
2. Narayana Guru
3. Mahathma Gandhi
4. Ramana Maharshi

**ಮೈಸೂರು ವಿಶ್ವವಿದ್ಯಾಲಯದ ವತಿಯಿಂದ**

1. ರಾಜ್ಯಶಾಸ್ತ್ರಸಾರ (ಅನುವಾದ)
2. ಭಾರತೀಯ ಇತಿಹಾಸ ಸಮೀಕ್ಷೆ (ಅನುವಾದ)
3. ತೆಂಡೂಲ್ಕರವರ 'ಮಹಾತ್ಮ ಗಾಂಧಿ' (ಅನುವಾದ) ೧, ೩, ೫.

